ರಾಬರ್ಟ್ ಸಿವೆಲ್

# ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ




ಕನ್ನಡಕ್ಕೆ : ಡಾ. ಸದಾನಂದ ಕನವಳ್ಳಿ

# ಮರೆತು ಹೋಗಿರುವ ಸಾಮ್ರಾಜ್ಯ
# ವಿಜಯನಗರ



ಮೂಲ : ರಾಬರ್ಟ್ ಸಿವೆಲ್

ಕನ್ನಡಕ್ಕೆ : ಡಾ. ಸದಾನಂದ ಕನವಳ್ಳಿ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ

MARETHU HOGIRUVA SAMRAJYA VIJAYANAGARA
(A Forgotten Empire-Robert Sewell) Translated by Dr. Sadananda Kanavalli, Director ; Prasaranga, Karanataka University, Dharwad 580 003; Published by Prasaranga, Kannda University; Hampi 583 211, Karnataka S. India.

Demy Octevo Pages : viii + 442

First Published : 1992



ಮುಖಪುಟ ವಿನ್ಯಾಸ : ಮಹ್ಮದ್ ತಾಹಿರ್ ಯಾದಗಿರ್

**ಬೆಲೆ :** ಸಾಮಾನ್ಯ ಪ್ರತಿ : ರೂ. ೮೦.೦೦
ಗ್ರಂಥಾಲಯ ಪ್ರತಿ : ರೂ. ೧೨೦.೦೦

ಪ್ರಕಾಶಕರು
**ಚ. ಶ್ರೀನಿವಾಸರಾಜು**
ನಿರ್ದೇಶಕ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೧೧



**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೬೨೭೬೪೫

# ನಿವೇದನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿ ಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದ ಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೊಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯ ವನ್ನು ಹುಟ್ಟಿಸುವದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಶಾಸ್ತ್ರ-ಕಲೆ, ಅಭಿಜಾತ--ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ–ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿ ಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿ ಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣ ವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನೆಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವ ವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯ ವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅವೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥಮಾಡಿ

ಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ. ನಮ್ಮ ಪ್ರಸಾರಾಂಗ ಇದಕ್ಕಿಂತ ವಿಶಾಲವಾದ, ಹೆಚ್ಚು ಪರಿಣಾಮಕಾರಿಯಾದ ಪರಿಪ್ರೇಕ್ಷ್ಯವನ್ನು ಕಟ್ಟುವದರಲ್ಲಿ ತೊಡಗಿದೆ. ಪ್ರಸಾರಾಂಗದ ಪ್ರಕಟನೆಗಳಿಗೆ ಇಂಥ ಒಂದು ಸಾರ್ಥಕವಾಗಬಲ್ಲ ಉದ್ದೇಶವಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಒಂದು ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಈ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆಯೆಂದರೂ ತಪ್ಪಿಲ್ಲ. ಈ ದೃಷ್ಟಿಯಿಂದ ಈ ವರ್ಷ ಕೆಲವು ಪುಸ್ತಕಗಳನ್ನು ನಾವು ಪ್ರಕಟಿಸುತ್ತಿದ್ದೇವೆ.

ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ ಇದು ರಾಬರ್ಟ್ ಸಿವೆಲ್‌ನ 'ಎ ಫರ್‌ಗಾಟನ್ ಎಂಪಯರ್' ಕೃತಿಯ ಅನುವಾದವಾಗಿದೆ. ವಿಜಯನಗರ ಸಾಮ್ರಾಜ್ಯದ ಇತಿಹಾಸದ ಬಗೆಗೆ ಸಿವೆಲ್ಲನದು ತುಂಬ ಪ್ರಸಿದ್ಧವಾದ ಪುಸ್ತಕವಾಗಿದೆ. ೧೭ ಅಧ್ಯಾಯಗಳಲ್ಲಿ ೧೩೩೬ ರಿಂದ ೧೬೧೬ರ ವರೆಗಿನ ವಿಜಯ ನಗರ ಇತಿಹಾಸ ಡೊಮಿಂಗೊ ಪಾಯಸ್‌ನ ದಾಖಲೆಗಳ ಇಂಗ್ಲಿಷ್ ಅನುವಾದ ಮತ್ತು ೨೦ ಅಧ್ಯಾಯಗಳಷ್ಟು ದೀರ್ಘವಾದ ಫೆರ್ನಾವೊ ನೂನಿಝ್‌ನ ಕಡತಗಳ ಅನುವಾದಗಳಲ್ಲದೆ ಮೂರು ಅನುಬಂಧಗಳೂ ಸೇರಿವೆ. ಕಾವ್ಯಮಯ ಭಾಷೆಯಲ್ಲಿ ವಿಜಯನಗರ ಚರಿತ್ರೆಯನ್ನು ಆ ಕಾಲದ ಪ್ರವಾಸಿಗರ ದಾಖಲೆಗಳನ್ನು ಅನುಸರಿಸಿ ಸಿವೆಲ್ ಪುನರ್ ರೂಪಿಸಿದ್ದಾನೆ. ಕನ್ನಡ ಆಸಕ್ತ ಓದುಗರಿಗೆ ಮತ್ತು ಚರಿತ್ರೆಯ ವಿದ್ಯಾರ್ಥಿಗಳಿಗೆ ಡಾ. ಸದಾನಂದ ಕನವಳ್ಳಿಯವರ ಕನ್ನಡದ ಅನುವಾದ ತುಂಬ ಉಪಯುಕ್ತವಾಗಿದೆ. ಈ ಮಹತ್ವದ ಕೃತಿಯನ್ನು ಕನ್ನಡದಲ್ಲಿ ಪ್ರಕಟಿಸಲು ಅನುವಾದ ಮಾಡಿಕೊಟ್ಟದ್ದಕ್ಕಾಗಿ ಡಾ. ಸದಾನಂದ ಕನವಳ್ಳಿಯವರಿಗೆ ನಮ್ಮ ಕೃತಜ್ಞತೆಯನ್ನು ಸೂಚಿಸುತ್ತೇವೆ.

ಕುಲಪತಿ
ಕನ್ನಡ ವಿಶ್ವವಿದ್ಯಾಲಯ
ಹಂಪಿ ೫೮೩ ೨೧೧

—ಚಂದ್ರಶೇಖರ ಕಂಬಾರ

## ವಿಷಯ ಸೂಚಿಕೆ

## ಅಧ್ಯಾಯ ೧

# ಪೀಠಿಕೆ

**ಪೂರ್ವಭಾವಿ ಟಿಪ್ಪಣಿಗಳು–ಮಾಹಿತಿಯ ಮೂಲ–ಕ್ರಿ.ಶ. ೧೩೩೬ರ ವರೆಗಿನ ದಕ್ಷಿಣ ಭಾರತದ ಇತಿಹಾಸದ ಚಿತ್ರಣ–ಮುಹಮ್ಮದೀಯ ವಿಜಯದ ವಿರುದ್ಧ ಒಂದು ಹಿಂದೂ ಭದ್ರಕೋಟೆ–ನೂನಿಜ್ ನೀಡಿದ ಆರಂಭಕಾಲ, ತಪ್ಪು–ದಿಲ್ಲಿಯ ಟೊಗಾವ್ ಮಾಮೀದ್ ಅಥವಾ ಮುಹಮ್ಮದ ತಘಲಕ್–ಅವನ ಜೀವನ ಮತ್ತು ಸ್ವಭಾವ.**

ಕ್ರಿ.ಶ. ೧೩೩೬ರಲ್ಲಿ ಇಂಗ್ಲೆಂಡಿನ ಮೂರನೆಯ ಎಡ್ವರ್ಡ್‌ನ ಆಳ್ವಿಕೆಯ ಕಾಲದಲ್ಲಿ, ಭಾರತದಲ್ಲೊಂದು ಘಟನೆ ಜರುಗಿತು. ಅದು ತತ್‌ಕ್ಷಣ ಇಡೀ ದಕ್ಷಿಣದ ರಾಜಕೀಯ ಸ್ಥಿತಿಯನ್ನು ಬದಲಿಸಿತು. ಆ ದಿನಾಂಕದೊಂದಿಗೆ ಆ ಪ್ರದೇಶದ ಪ್ರಾಚೀನ ಇತಿಹಾಸದ ಸಂಪುಟ ಕೊನೆಗೊಂಡು ಆಧುನಿಕ ಇತಿಹಾಸ ಆರಂಭ ವಾಯಿತು. ಅದೊಂದು ಹಳತಿನಿಂದ ಹೊಸತಿಗೆ ತಿರುಗುವ ಸಂಕ್ರಮಣ ಯುಗ.

ವಿಜಯನಗರ ನಗರ ಹಾಗೂ ರಾಜ್ಯದ ಸಂಸ್ಥಾಪನೆಯೆ ಆ ಘಟನೆ. ಕ್ರಿ.ಶ. ೧೩೩೬ಕ್ಕೂ ಮುಂಚೆ ದಕ್ಷಿಣ ಭಾರತವೆಲ್ಲ ಪ್ರಾಚೀನ ಹಿಂದೂ ರಾಜ್ಯಗಳ ಅಧೀನ ದಲ್ಲಿದ್ದಿತು. ಈ ರಾಜ್ಯಗಳು ಎಷ್ಟು ಪ್ರಾಚೀನವಾದವುಗಳೆಂದರೆ ಅವುಗಳ ಆದಿಯನ್ನು ಎಂದೂ ಕಂಡುಹಿಡಿಯಲಾಗಲಿಲ್ಲ. ಆದರೆ ಹದಿನಾರು ಶತಮಾನಗಳ ಹಿಂದೆ ಶಿಲೆಯಲ್ಲಿ ಕೆತ್ತಲಾದ ಶಾಸನಗಳಲ್ಲಿ ಆ ರಾಜ್ಯಗಳನ್ನು ಉಲ್ಲೇಖಿಸಲಾಗಿದೆ; ಮದುರೆಯ ಪಾಂಡ್ಯರು, ತಂಜಾವೂರಿನ ಚೋಳರು ಮತ್ತು ಇನ್ನಿತರರು. ವಿಜಯನಗರ ಅಸ್ತಿತ್ವಕ್ಕೆ ಬಂದಾಗ ಭೂತಕಾಲಕ್ಕೆ ಮಂಗಳ ಹಾಡಲಾಯಿತು. ಮತ್ತು ಹೊಸ ರಾಜ್ಯದ ದೊರೆಗಳು ದಕ್ಖನ ಮತ್ತು ಸಿಲೋನಗಳ ಮಧ್ಯೆ ಹಬ್ಬಿರುವ ನಾಡಿಗೆ ಅಧಿಪತಿ ಗಳಾದರು.

ಇದರಲ್ಲಿ ಪವಾಡವೇನಿಲ್ಲ. ಇದು ಮುಹಮ್ಮದೀಯರು ಭಾರತವನ್ನು ಗೆಲ್ಲಲು ಸತತವಾಗಿ ಮಾಡಿದ ಪ್ರಯತ್ನಗಳ ಪರಿಣಾಮವಾಗಿತ್ತು. ಈ ಭೀಕರ ದಾಳಿಕಾರರು ಕೃಷ್ಣಾ ನದಿ ತಲುಪಿದಾಗ ದಕ್ಷಿಣದಲ್ಲಿದ್ದ ಹಿಂದೂಗಳು ಭಯಭೀತರಾಗಿ ಒಂದುಗೂಡಿ ರಕ್ಷಣೆಯ ಆಶಾಕಿರಣವಾಗಿದ್ದ ಹೊಸ ಲಾಂಛನದಡಿ ಅವಸರವಸರವಾಗಿ ಸೇರಿದರು. ಅವಸಾನವಾಗಿದ್ದ ಹಳೆಯ ರಾಜ್ಯಗಳು ಪೂರ್ತಿ ನಾಮಾವಶೇಷವಾದವು. ವಿಜಯ

ನಗರದ ಹೋರಾಡುವ ರಾಜರು ಎರಡೂವರೆ ಶತಮಾನಗಳವರೆಗೆ ದಕ್ಷಿಣದ ರಕ್ಷಕರಾದರು.

ಹೀಗಿದ್ದಾಗ್ಯೂ ಇಂದು ಭಾರತದಲ್ಲಿ ಈ ರಾಜ್ಯದ ಅಸ್ತಿತ್ವವನ್ನು ಕೂಡ ನೆನೆಯುಲಾಗುತ್ತಿಲ್ಲ. ರಾಜ್ಯದ ಉತ್ತರದ ಗಡಿತೀರದಲ್ಲಿ ನೆಲೆಗೊಳಿಸಲಾದ ಮತ್ತು "ವಿಜಯನಗರ" ಎಂಬ ಹೆಮ್ಮೆಯ ಹೆಸರು ಪಡೆದು ಒಂದು ಕಾಲಕ್ಕೆ ಭವ್ಯವಾಗಿದ್ದ ಈ ರಾಜ್ಯದ ರಾಜಧಾನಿ ಸಂಪೂರ್ಣವಾಗಿ ಇಲ್ಲದಂತಾಗಿದೆ. ಒಂದು ಕಾಲಕ್ಕೆ ಮಂದಿರಗಳು ಇಲ್ಲವೆ ಅರಮನೆಗಳಾಗಿದ್ದ ಕಟ್ಟಡಗಳಲ್ಲಿ ಕೆಲವು ಮಾತ್ರ ಹಾಗೂ ಅದರ ರಕ್ಷಣೆಯಾಗಿದ್ದ ಬೃಹತ್ ಗೋಡೆಗಳ ದೀರ್ಘ ಸಾಲುಗಳು ಭಗ್ನಾವಶೇಷಗಳಾಗಿ ಅಲ್ಲಲ್ಲಿ ಬಿದ್ದುಕೊಂಡಿವೆ. ಅದರ ಹೆಸರು ಕೂಡ ಜನರ ಮನಸ್ಸಿನಿಂದ ಮತ್ತು ಸ್ಮರಣೆಯಿಂದ ಹಾರಿಹೋಗಿದೆ. ಮತ್ತು ಅದರ ನಿವೇಶನವನ್ನು ಗುರುತಿಸುವ ಅವಶೇಷಗಳು ಹಂಪಿಯ ಚಿಕ್ಕ ಗ್ರಾಮದ ಬಳಿ ಬಿದ್ದಿರುವ ಭಗ್ನಾವಶೇಷಗಳೆಂದೆ ಹೆಸರಾಗಿವೆ.

ಆದರೂ ಸಹ, ಅದರ ರಾಜರು ತಮ್ಮ ಕಾಲದಲ್ಲಿ ಆಸ್ಟ್ರಿಯಾಕ್ಕಿಂತಲೂ ಬಹು ದೊಡ್ಡ ಸಾಮ್ರಾಜ್ಯದ ಭಾಗ್ಯವನ್ನು ನಿರ್ಧರಿಸಿದರು. ಮತ್ತು ಆ ನಗರ ಆಕಾರದಲ್ಲೂ ಸಮೃದ್ಧಿಯಲ್ಲೂ ಅದ್ಭುತವಾಗಿತ್ತೆಂದು–ಅದರ ಶ್ರೀಮಂತಿಕೆ ಮತ್ತು ಭವ್ಯತೆಯನ್ನು ಯಾವುದೆ ಪಾಶ್ಚಾತ್ಯ ರಾಜಧಾನಿಯೂ ಹೋಲುವಂತಿರಲಿಲ್ಲ—ಹದಿನೈದನೆಯ ಮತ್ತು ಹದಿನಾರನೆಯ ಶತಮಾನಗಳ ಐರೋಪ್ಯ ಪ್ರವಾಸಿಗರ ಪರಂಪರೆಯೆ ವರ್ಣಿಸಿದೆ. ಪಶ್ಚಿಮ ಕರಾವಳಿಯಲ್ಲಿ ಜರುಗಿದ ಪೋರ್ಚುಗೀಜರ ಬಹುತೇಕ ಎಲ್ಲ ಯುದ್ಧಗಳೂ ಅದರ ಕಡಲು ವ್ಯಾಪಾರವನ್ನು ಪಡೆದುಕೊಳ್ಳುವ ಉದ್ದೇಶ ಹೊಂದಿದ್ದವೆಂಬುದು ಹಾಗೂ ಆ ಸಾಮ್ರಾಜ್ಯ ೧೫೬೫ರಲ್ಲಿ ಅವನತಿ ಹೊಂದಿದಾಗ ಅದರೊಂದಿಗೇ ಪೋರ್ಚುಗೀಜ ಗೋವಾದ ಸಮೃದ್ಧಿಯೂ ಪುನಃ ಏಳದಂತೆ ಮಣ್ಣುಪಾಲಾಯಿತೆಂಬುದು ಅದರ ಮಹತ್ವವನ್ನು ತೋರುತ್ತದೆ.

ವಿಜಯನಗರದ ರಾಜರು ಪ್ರಭುತ್ವ ಹೊಂದಿದ ವಿಶಾಲ ಪ್ರದೇಶದಲ್ಲಿ ಒಂದ ನ್ನೊಂದು ಹಿಂಬಾಲಿಸಿದ ಘಟನೆಗಳ ಬಗೆಗೆ ನಮಗೆ ಗೊತ್ತಿರುವುದು ತೀರ ಸ್ವಲ್ಪ. ಅದು ಕೂಡ ಐರೋಪ್ಯ ಪ್ರವಾಸಿಗರ ಚದುರಿದ ಹೇಳಿಕೆಗಳು ಮತ್ತು ಅವರ ಲೇಖನ ಗಳಲ್ಲಿ ಬರುವ ಭಾರತದ ನಿವಾಸಿಗಳ ರಾಜಕಾರಣದ ಬಗೆಗಿನ ಆಕಸ್ಮಿಕ ಉಲ್ಲೇಖ ಗಳಿಂದ ಇದುವರೆಗೆ ಕಂಡುಕೊಂಡುದು. ಇದೊಂದು ಆಂಶಿಕ ಮೂಲವಾದರೆ ಬ್ಯಾರೋಸ್, ಕೌಟೊ ಮತ್ತು ಕೊರಿಯಾ ಮುಂತಾದ ಜಾಗರೂಕ ಮಧ್ಯಯುಗದ ಇತಿಹಾಸಕಾರರು ಸಂಕಲಿಸಿದ ಸಾರಾಂಶಗಳು ಇನ್ನೊಂದು ಆಂಶಿಕ ಮೂಲ ಇವರುಗಳು ಒಂದು ಮಿತಿಯವರೆಗೆ ದೇಶದ ಸಾಮಾನ್ಯ ಸ್ಥಿತಿಗತಿಗಳಲ್ಲಿ ಆಸಕ್ತರಾಗಿ ದ್ದರೂ ಸಹ ಐರೋಪ್ಯ ಓದುಗರ ತಿಳುವಳಿಕೆಗೋಸ್ಕರ ಐರೋಪ್ಯ ವಸಾಹತುಗಾರರ

ಚಟುವಟಿಕೆಗಳಿಗೆ ಮಾತ್ರ ತಮ್ಮನ್ನು ಸೀಮಿತಗೊಳಿಸಿಕೊಂಡರು. ಇನ್ನೊಂದು ಆಂಶಿಕ ಮೂಲವೆಂದರೆ ಹೆಚ್ಚಾಗಿ ತಮ್ಮ ರಾಜರ ಅಸಂತುಷ್ಟಿಯ ಭಯದಿಂದ ಬರೆದ ಆ ಕಾಲದ ಕೆಲವು ಮಹಮ್ಮದೀಯ ಲೇಖಕರ ದಿನಚರಿಗಳು. ಮತ್ತೊಂದು ಆಂಶಿಕ ಮೂಲವೆಂದರೆ ಗುಡಿಗಳಿಗೆ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಭೂದತ್ತಿಗಳನ್ನು ದಾಖಲಿಸುವ ಹಿಂದೂ ಶಾಸನಗಳು. ಈ ದಸ್ತೈವಜುಗಳನ್ನು ಸರಕಾರಿ ಕಾಗದಪತ್ರಗಳೆಂದು ನೋಡಿದಾಗ ಅವು ಕೆಲವು ಹೆಸರುಗಳು ಮತ್ತು ತೇದಿಗಳನ್ನುಳಿದು ಬೇರೆ ಏನನ್ನೂ ನೀಡುವುದಿಲ್ಲ. ಈ ಗ್ರಂಥದ ಕೊನೆಯಲ್ಲಿ ಅನುವಾದಿಸಿ ಮುದ್ರಿಸಲಾಗಿರುವ ಎರಡು ದಿನಚರಿಗಳು ಹದಿನಾರನೆಯ ಶತಮಾನದ ಆದಿಭಾಗದಲ್ಲಿ ವಿಜಯನಗರ ನಗರದ ಸ್ಥಿತಿಗತಿಯ ಮೇಲೆ ಮತ್ತು ತದನಂತರದ ರಾಜವಂಶಗಳ ಇತಿಹಾಸದ ಮೇಲೆ ಬೆಳಕು ಚೆಲ್ಲುವುದನ್ನು ಕಾಣಬಹುದು. ಇದಲ್ಲದೆ, ಈ ದಿನಚರಿಗಳಿಗೆ ಪೀಠಿಕೆಯಾಗಿ ಲಭ್ಯವಿದ್ದ ಎಲ್ಲ ವಿಷಯವನ್ನು ಉಲ್ಲೇಖಿತವಾಗಿರುವ ವಿವಿಧ ಪರಿಣತರಿಂದ ಸಂಗ್ರಹಿಸ ಲೆತ್ನಿಸಿರುವೆ. ಇನ್ನು ಮುಂದೆ ರಚಿತವಾಗಬಹುದಾದ ವಿಜಯನಗರ ಸಾಮ್ರಾಜ್ಯದ ಕ್ರಮಬದ್ಧ ಇತಿಹಾಸಕ್ಕೆ ಅಡಿಪಾಯವಾಗುವ ರೀತಿಯಲ್ಲಿ ಅವುಗಳನ್ನು ಸಂಯೋಜಿಸ ಲೆತ್ನಿಸಿರುವೆ. ಇದರ ಪರಿಣಾಮ ಅಸ್ತವ್ಯಸ್ತ, ಅಪಕ್ವ ಮತ್ತು ನೀರಸವಾಗಿರಬಹುದು, ಆದರೆ ಇದೊಂದು ಪ್ರಥಮ ಪ್ರಯತ್ನವೆಂದು ನೆನೆದರೆ ಸಾಕು. ಅನತಿ ಕಾಲದಲ್ಲಿ ಶುಷ್ಕ ಅಸ್ತಿಗಳಲ್ಲಿ ಜೀವ ತುಂಬಬಲ್ಲ ಪ್ರತಿಭಾವಂತ ಲೇಖಕನೊಬ್ಬ ದಕ್ಷಿಣ ಭಾರತದ ಸಂಪೂರ್ಣ ಇತಿಹಾಸವನ್ನು ಬರೆಯುವನೆಂಬ ಬಗೆಗೆ ನನಗೆ ಸಂದೇಹವಿಲ್ಲ. ಆದರೆ, ಆದುವರೆಗೆ ಅಸ್ತಿಗಳನ್ನೇ ಸಂಗ್ರಹಿಸಿ ಜೋಡಿಸದೆ ಗತ್ಯಂತರವಿಲ್ಲ. ಅಸ್ತಿ ಪಂಜರದ ಮುಖ್ಯ ಭಾಗಗಳನ್ನಾದರೂ ಜೋಡಿಸುವುದು ನನ್ನ ಕಾಯಕವಾಗಿದೆ.

ವಿವರಗಳಿಗೆ ಹೋಗುವ ಮುನ್ನ ನಾವು ಹದಿನಾಲ್ಕನೆಯ ಶತಮಾನದ ಪೂರ್ವಾರ್ಧದಲ್ಲಿ ಭಾರತದ ರಾಜಕೀಯ ಸ್ಥಿತಿಯನ್ನು ಸಂಕ್ಷಿಪ್ತವಾಗಿ ಅವಲೋಕಿಸಬೇಕು. ಅಲ್ಲಿಯವರೆಗೆ ದ್ವೀಪಕಲ್ಪವನ್ನು ಅನೇಕ ಬೇರೆ ಬೇರೆ ಹಿಂದೂ ರಾಜ್ಯಗಳು ವಶಪಡಿಸಿಕೊಂಡಿದ್ದವು—ಮದುರೆಯಲ್ಲಿ ಪಾಂಡ್ಯರವು ಮತ್ತು ತಂಜಾವೂರಿನಲ್ಲಿ ಚೋಳರವು ಇವುಗಳಲ್ಲಿ ಮುಖ್ಯವಾದವುಗಳು—ಎಂಬುದನ್ನು ನೆನಪಿಡಬೇಕು.

ಕ್ರಿ.ಶ. ೧೦೦೧ರಲ್ಲಿ ಭಾರತ ಘಜನಿ ಮಹಮ್ಮದನ ಘನ ನೇತೃತ್ವದಲ್ಲಿ ವಾಯುವ್ಯ ಗಡಿಯಿಂದ ಪ್ರಥಮ ಮಹಮ್ಮದೀಯ ದಾಳಿಯನ್ನು ಕಂಡಿತು. ಅವನು ಮೊದಲು ಪಂಜಾಬದ ಬಯಲುಗಳ ಮೇಲೆ, ನಂತರ ಮುಲ್ತಾನಿನ ಮೇಲೆ, ತದನಂತರ ಇತರ ಪ್ರದೇಶಗಳ ಮೇಲೆ ದಾಳಿಯಿಟ್ಟನು. ವರ್ಷವರ್ಷವೂ ಅವನು ಮುನ್ನುಗ್ಗಿದ ಮತ್ತು ಪುನಃ ಹಿಂದೆ ಸರಿದ. ೧೦೨೧ರಲ್ಲಿ ಅವನು ಕಲಿಂಗದಲ್ಲಿದ್ದ, ೧೦೨೪ರಲ್ಲಿ ಕಾಠಿಯಾವಾಡದಲ್ಲಿ. ಆದರೆ, ಅವನು ಈ ದೇಶದಲ್ಲಿ ತನ್ನ ನೆಲೆಯನ್ನು ಸ್ಥಿರಗೊಳಿಸಲಿಲ್ಲ. ಅವನ ದಂಡಯಾತ್ರೆಗಳು ದೌಡುಗಳಾಗಿದ್ದವೇ ಹೊರತು ಬೇರೇನೂ ಅಲ್ಲ.

ಆದರೆ, ಇತರ ದಾಳಿಗಳು ಒಂದರ ಹಿಂದೊಂದು ಶೀಘ್ರವಾಗಿ ಹಿಂಬಾಲಿಸಿದವು. ಎರಡು ಶತಮಾನಗಳ ನಂತರ ಮಹಮ್ಮದೀಯರು ದಿಲ್ಲಿಯಲ್ಲಿ ಗಟ್ಟಿಯಾಗಿ ಮತ್ತು ಶಾಶ್ವತವಾಗಿ ನೆಲೆಯೂರಿದರು. ಯುದ್ಧದ ಮೇಲೆ ಯುದ್ಧ ಜರುಗಿದವು. ಅಂದಿನಿಂದ ಉತ್ತರ ಭಾರತ ನೆಮ್ಮದಿ ಕಳೆದುಕೊಂಡಿತು. ಹದಿಮೂರನೆಯ ಶತಮಾನದ ಕೊನೆಗೆ ಮಹಮ್ಮದೀಯರು ದಕ್ಖನದತ್ತ ದಕ್ಷಿಣಕ್ಕೆ ನುಗ್ಗಹತ್ತಿದರು. ೧೨೯೪ರಲ್ಲಿ ದಿಲ್ಲಿಯ ರಾಜನ ಸೋದರಳಿಯನಾದ ಅಲ್ಲಾವುದ್ದೀನ್ ಖಿಲ್ಜಿ ದೇವಗಿರಿಯನ್ನು ವಶಪಡಿಸಿಕೊಂಡ. ನಾಲ್ಕು ವರ್ಷಾನಂತರ ಗುಜರಾತದ ಮೇಲೆ ಆಕ್ರಮಣವಾಯಿತು. ೧೩೦೩ರಲ್ಲಿ ವಾರಂಗಲ್ಲನ್ನು ಅಡಗಿಸಲೆತ್ನಿಸಲಾಯಿತು. ೧೩೦೭ರಲ್ಲಿ ದೇವಗಿರಿಗೆ ಇನ್ನೊಂದು ದಂಡಯಾತ್ರೆ ಬಂದಿತು. ೧೩೦೯ರಲ್ಲಿ ಪ್ರಖ್ಯಾತ ದಂಡನಾಯಕ ಮಲ್ಲಿಕ ಕಾಫರ ವಿಪುಲ ಸೈನ್ಯದೊಂದಿಗೆ ದಕ್ಖನದೊಳಗೆ ನುಗ್ಗಿ ವಾರಂಗಲ್ಲನ್ನು ವಶಪಡಿಸಿಕೊಂಡ. ದ್ವಾರಸಮುದ್ರದಲ್ಲಿನ ಹೊಯ್ಸಳ ಬಲ್ಲಾಳರ ಹಳೆಯ ರಾಜಧಾನಿಯನ್ನು ೧೩೧೦ರಲ್ಲಿ ವಶಪಡಿಸಿಕೊಳ್ಳಲಾಯಿತು ಮತ್ತು ಮಲ್ಲಿಕ ಕಾಫರ ಮಲಬಾರ ಕರಾವಳಿಗೆ ನಡೆದ. ಅಲ್ಲಿ ಮಸೀದಿಯನ್ನು ಕಟ್ಟಿಸಿದ ಮೇಲೆ ಅಪರಿಮಿತ ಕೊಳ್ಳೆಯೊಂದಿಗೆ ತನ್ನ ಒಡೆಯನೆಡೆಗೆ ವಾಪಸಾದ. ೧೩೧೮ರಲ್ಲಿ ಪುನಃ ಯುದ್ಧ ಜರುಗಿತು. ಆರು ವರ್ಷಗಳ ನಂತರ ದಿಲ್ಲಿಯ ಮುಬಾರಕ ದೇವಗಿರಿಗೆ ಸಾಗಿದ, ಅದರ ನತದೃಷ್ಟ ರಾಜನಾದ ಹರಿಪಾಲದೇವನನ್ನು ಅಮಾನುಷವಾಗಿ ಸಜೀವ ಚರ್ಮ ಸುಲಿಸಿ ಅವನ ತಲೆಯನ್ನು ಅವನದೇ ನಗರದ ಪ್ರವೇಶದ್ವಾರದ ಮೇಲೆ ನೆಟ್ಟ. ೧೩೨೩ರಲ್ಲಿ ವಾರಂಗಲ್ಲು ಬಿತ್ತು.

ಹೀಗೆ, ನಮ್ಮ ಇತಿಹಾಸ ಆರಂಭವಾಗುವ ಸುಮಾರು ೧೩೩೦ರ ಕಾಲಕ್ಕೆ ವಿಂಧ್ಯದವರೆಗಿನ ಉತ್ತರ ಭಾರತವೆಲ್ಲ ಮುಸ್ಲಿಮ ಆಳ್ವಿಕೆಯಡಿ ಭದ್ರವಾಗಿ ಸ್ಥಾಪಿತವಾಗಿತ್ತು. ಆ ಧರ್ಮದ ಅನುಯಾಯಿಗಳು ದಕ್ಖನವನ್ನು ದಾಟಿದ್ದರು ಹಾಗೂ ದಕ್ಷಿಣವನ್ನು ಅದೇ ಗತಿಯ ಭಯ ಕಾಡುತ್ತಿತ್ತು. ಕೃಷ್ಣಾನದಿಯ ದಕ್ಷಿಣಕ್ಕಿದ್ದ ಎಲ್ಲ ಪ್ರದೇಶವೂ ಹಿಂದೂ ಆಳ್ವಿಕೆಯಲ್ಲಿತ್ತಾದರೂ ಉತ್ತರದಿಂದ ಶೀಘ್ರ ಗತಿಯಲ್ಲಿ ಮುನ್ನುಗ್ಗುತ್ತಿದ್ದ ಭಯಂಕರ ಧಾಳಿಗಳಿಂದಾಗಿ ಹಳೆಯ ರಾಜವಂಶಗಳ ಅಧಿಪತ್ಯದ ಬೇರುಗಳೆ ಅಲ್ಲಾಡಿದವು. ೧೩೨೫ರಲ್ಲಿ ಮಹಮ್ಮದ್ ತಘಲಕ್‌ನ ದಿಲ್ಲಿ ಸಿಂಹಾಸನಾರೋಹಣದೊಂದಿಗೆ ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿತು. ಅವನ ಅಸಾಮಾನ್ಯ ನಡವಳಿಕೆಯ ಬಗೆಗಿನ ಆಶ್ಚರ್ಯಕಾರಕ ಕತೆಗಳು ದ್ವೀಪಕಲ್ಪದ ನಿವಾಸಿಗಳಿಗೆಲ್ಲ ಹರಡಿದವು. ಅವನ ಅಸಹಿಷ್ಣುತೆ, ಮಹತ್ವಾಕಾಂಕ್ಷೆ ಮತ್ತು ಕ್ರೌರ್ಯಗಳಿಗೆ ಸೀಮೆಯೆಂಬುದೇ ಇರಲಿಲ್ಲ.

ಆದುದರಿಂದ, ಎಲ್ಲವೂ ಒಂದು ಬಗೆಯ ಅನಿವಾರ್ಯ ಕೊನೆಯತ್ತ ಸಾಗಿದಂತೆ ತೋರಿತು—ಹಿಂದೂ ಪ್ರಾಂತಗಳ ಅಳಿವು, ಅವುಗಳ ಹಳೆಯ ರಾಜಮನೆತನಗಳ

ವಿನಾಶ, ಅವರ ಧರ್ಮಗಳ, ಗುಡಿಗಳ, ಪಟ್ಟಣಗಳ ನಾಶ. ದಕ್ಷಿಣದ ನಿವಾಸಿಗಳಿಗೆ ಪ್ರಿಯವಾಗಿದ್ದುದೆಲ್ಲ ತತ್ತರಿಸಿ ಬೀಳುವಂತೆ ತೋರಿತು.

ಹಠಾತ್ತನೆ, ಕ್ರಿ.ಶ. ೧೩೪೪ರ ಸುಮಾರಿಗೆ ವಿದೇಶಿ ದಾಳಿಯ ಈ ತೆರೆಗೆ ತಡೆ ಒಡ್ಡಲಾಯಿತು. ಮೊದಮೊದಲು ಅಲ್ಲಲ್ಲಿ ಅಡ್ಡಿ, ನಿಲ್ಲಿಕೆ, ಆ ಮೇಲೆ ಪ್ರತಿರೋಧದ ಭದ್ರ ಗೋಡೆ. ಅಂದಿನಿಂದ ೨೫೦ ವರ್ಷಗಳವರೆಗೆ ದಕ್ಷಿಣ ಭಾರತವನ್ನು ಕಾಪಾಡಲಾಯಿತು.

ಮೂರು ಚಿಕ್ಕ ಹಿಂದೂ ರಾಜ್ಯಗಳ ಒಕ್ಕೂಟದಿಂದ ಈ ತಡೆಯುಂಟಾಯಿತು. ಅವುಗಳಲ್ಲೆರಡು ಈಗಾಗಲೆ ಸೋಲಿಸಲ್ಪಟ್ಟಿದ್ದ ವಾರಂಗಲ್ ಮತ್ತು ದ್ವಾರಸಮುದ್ರ. ಸೋಲು ಅನುಭವಿಸಿದ್ದರಿಂದ ಅವು ಬಹುಶಃ ಅತಿ ವಿಶ್ವಾಸ ಹೊಂದಿರಲಿಲ್ಲ. ಮೂರನೆಯದು ಆನೆಗುಂದಿಯ ಚಿಕ್ಕ ಪಾಳೆಯಪಟ್ಟು. ವಿಜಯನಗರವೆಂಬ ಬೃಹತ್ ಸಾಮ್ರಾಜ್ಯವಾಗಿ ಬೆಳೆದಿದ್ದ ಆನೆಗುಂದಿ ಭದ್ರ ಗೋಡೆಯಾಗಿ ಪರಿಣಮಿಸಿತು. ಈ ವಂಶದ ರಾಜರಿಗೆ ದಕ್ಷಿಣದ ರಾಜ್ಯಗಳೂ ಅಧೀನವಾದವು.

ಭಾರತದ ಭೂಪಟದ ಮೇಲೆ ಮುಂಬಯಿಯಿಂದ ಮದ್ರಾಸಿನವರೆಗೆ ಒಂದು ನೇರ ರೇಖೆ ಎಳೆದುದಾದರೆ ಸುಮಾರು ಮಧ್ಯ ದೂರದಲ್ಲಿ ತುಂಗಭದ್ರಾ ನದಿ ಸಿಕ್ಕುತ್ತದೆ. ಮೈಸೂರಿನಿಂದ ಉತ್ತರಕ್ಕೆ ಹರಿಯುವ ಎರಡು ನದಿಗಳು ಕೂಡಿ ಆಗಿರುವ ಅದು ಉತ್ತರಕ್ಕೆ ಮತ್ತು ಪೂರ್ವಕ್ಕೆ ವಿಶಾಲವಾದ ಆವರ್ತವಾಗಿ ಹರಿಯುತ್ತ ಕರ್ನೂಲಿನಿಂದ ಅನತಿ ದೂರದಲ್ಲಿ ಕೃಷ್ಣೆಯನ್ನು ಸೇರುತ್ತವೆ. ತನ್ನ ಮಾರ್ಗಮಧ್ಯದಲ್ಲಿ ತುಂಗಭದ್ರಾ, ಬಳ್ಳಾರಿಯ ವಾಯುವ್ಯದಲ್ಲಿ ಸುಮಾರು ನಲವತ್ತು ಮೈಲು ದೂರವಿರುವ ಹಾಗೂ ಧಾರವಾಡದಿಂದ ಬಳ್ಳಾರಿಗಿರುವ ರೈಲು ಮಾರ್ಗದ ಉತ್ತರಕ್ಕಿರುವ ದುರ್ಗಮ ಗುಡ್ಡಗಾಡು ಪ್ರದೇಶವನ್ನು ಭೇದಿಸುತ್ತದೆ. ಈ ಪ್ರದೇಶದಲ್ಲಿ. ನದಿಯ ಉತ್ತರ ತೀರದ ಮೇಲೆ ಆನೆಗುಂದಿ ಎಂಬ ಕೋಟೆಗಳಿಂದ ಸುತ್ತುವರಿದ ಪಟ್ಟಣ ಸುಮಾರು ೧೩೩೦ರಲ್ಲಿ ಅಸ್ತಿತ್ವದಲ್ಲಿತ್ತು. ಅದನ್ನೇ ನಮ್ಮ ಚರಿತ್ರಕಾರರು ನಾಗುಂಡಿಮ್ ಎಂದು ಕರೆದರು. ಅದು ಸಮೀಪದಲ್ಲಿದ್ದ ಚಿಕ್ಕ ರಾಜ್ಯದ ದೊರೆಗಳ ಮನೆತನದ ವಾಸಸ್ಥಾನವಾಗಿತ್ತು. ಅವರು ಮುಂಚಿನ ವರ್ಷಗಳಲ್ಲಿ ಆ ಪ್ರದೇಶವನ್ನಾವರಿಸಿದ ಬೆಣಚುಗಲ್ಲಿನ ಉತ್ತುಂಗ ಗುಡ್ಡಗಳ ಪ್ರಯೋಜನ ಪಡೆದು ನದಿಯನ್ನು ನೆಲೆಯಾಗಿಸಿಕೊಂಡು ದುರ್ಗವನ್ನು ಕಟ್ಟಿದ್ದರು. ಅನೇಕ ಮೈಲುಗಳವರೆಗೆ ಎಲ್ಲಿಯೂ ದಾಟಲಸಾಧ್ಯವಾದ ನದಿ ವರ್ಷದ ಎಲ್ಲ ಋತುಗಳಲ್ಲಿಯೂ ತುಂಬಿ ಹರಿಯುತ್ತಿತ್ತು. ಮತ್ತು ನೆರೆಗಾಲದಲ್ಲಿ ತನ್ನ ಸುತ್ತುವರಿದ ಹಾಸಿನಲ್ಲಿ ಹಲವಾರು ಸ್ಥಳಗಳಲ್ಲಿ ಗಂಡಾಂತರಕಾರಿ ಜಲಪಾತಗಳುಳ್ಳ, ಪ್ರಕ್ಷುಬ್ಧವಾಗಿ ನುಗ್ಗುವ ರಭಸ ಪ್ರವಾಹಗಳನ್ನು ನಿರ್ಮಿಸಿತು. ಆನೆಗುಂದಿ ದೊರೆಗಳ ಬಗೆಗೆ ನಮಗೆ ಬಹಳ ಗೊತ್ತಿಲ್ಲ. ಆದರೆ, ಅವರು ಬಹುಶಃ ಹೊಯ್ಸಳ ಬಲ್ಲಾಳರ ಸಾಮಂತ

ರಾಗಿದ್ದರು. ಕ್ರಿ.ಶ. ೧೩೫೦ಕ್ಕಿಂತ ಏಳು ಶತಮಾನ ಹಿಂದಿನಿಂದಲೂ ಅವರು ರಾಜಮನೆತನದವರಾಗಿ ಅಸ್ತಿತ್ವ ಪಡೆದಿದ್ದರೆಂದು ಫಿರಿಸ್ತಾ ಸಾರುತ್ತಾನೆ.[2]

ವಿಜಯನಗರದ ರಾಜರು ನಂತರ ವ್ಯಾಪಕವಾಗಿದ್ದ ಬಲವನ್ನು ಮೊದಲು ಹೇಗೆ ಪಡೆಯಲಾರಂಭಿಸಿದರು ಎಂಬುದರ ಬಗೆಗೆ ನೂನಿಜ್‌ನ ದಿನಚರಿ ನಿಶ್ಚಿತ ವೃತ್ತಾಂತ ನೀಡುತ್ತದೆ. ಈ ವೃತ್ತಾಂತ ಎಲ್ಲ ವಿವರಗಳಲ್ಲಿ ಖಚಿತವಾಗಿರಬಹುದು, ಇರಲಿಕ್ಕಿಲ್ಲ. ಆದರೆ, ಅದು ಆ ಕಾಲದ ಶಾಸನ ಹಾಗೂ ಇತರ ದಾಖಲೆಗಳೊಂದಿಗೆ ಸರಿಸುಮಾರಾಗಿ ಹೊಂದಿಕೊಳ್ಳುತ್ತದೆ. ಅವನ ಪ್ರಕಾರ, ದಿಲ್ಲಿಯ ಮಹಮ್ಮದ ತಘಲಕ್ ಗುಜರಾತನ್ನು ಅಡಗಿಸಿ ದಕ್ಖನ್ ಬಾಲಾಘಾಟ ಅಥವಾ ಪಶ್ಚಿಮ ಘಟ್ಟಗಳ ಮೇಲಿನ ಎತ್ತರ ಪ್ರದೇಶಗಳ ಮುಖಾಂತರ ದಕ್ಷಿಣದತ್ತ ಸಾಗಿದನು. ಮತ್ತು ೧೩೩೭[3]ಕ್ಕಿಂತ ಸ್ವಲ್ಪ ಮುಂಚೆ ಆನೆಗುಂದಿ ಪಟ್ಟಣ ಮತ್ತು ದುರ್ಗವನ್ನು ವಶಪಡಿಸಿಕೊಂಡನು. ಅದರ ದೊರೆ ಹಾಗೂ ಅವನ ಕುಟುಂಬದ ಎಲ್ಲ ಸದಸ್ಯರನ್ನೂ ಕೊಲ್ಲಲಾಯಿತು. ಈ ಪ್ರದೇಶವನ್ನು ಪ್ರತಿನಿಧಿಯ ದ್ವಾರಾ ಆಳುವ ವಿಫಲ ಪ್ರಯತ್ನದ ನಂತರ ಮಹಮ್ಮದ ಅದರ ಮಾಜಿ ಮಂತ್ರಿಯನ್ನೇ ರಾಜ್ಯದ ದೊರೆಯ ಘನತೆಗೇರಿಸಿದ. ಅವನೇ ನೂನಿಜ್ ದೇವರಾವ್ ಎಂದು ಕರೆಯುವ ದೇವರಾಯ ಅಥವಾ ಒಂದನೆಯ ಹರಿಹರದೇವ ಹೊಸ ದೊರೆ ಆನೆಗುಂದಿಯ ಎದುರುಗಡೆಯಿರುವ ದಕ್ಷಿಣ ನದೀತೀರದ ಮೇಲೆ ವಿಜಯನಗರ ನಗರವನ್ನು ಸ್ಥಾಪಿಸಿದನು. ಮತ್ತು ಅದನ್ನು ತನ್ನ ವಾಸಸ್ಥಾನವನ್ನಾಗಿಸಿಕೊಂಡನು. ಇದರಲ್ಲಿ ಅವನಿಗೆ ಸಹಾಯ ನೀಡಿದ ಶ್ರೇಷ್ಠ ಧರ್ಮಗುರು ಮಾಧವನ ಅಭಿಪ್ರಾಯದಲ್ಲಿ, ತನ್ನ ಮತ್ತು ಸದಾ ಕೊಳ್ಳೆ ಹೊಡೆಯುವ ಮುಸ್ಲಿಮರ ಮಧ್ಯೆ ನದಿಯನ್ನು ಇರಿಸುವುದು ತನ್ನನ್ನು ಮತ್ತು ತನ್ನ ಜನರನ್ನು ಮೊದಲಿಗಿಂತ ಅಧಿಕ ಭದ್ರತೆಯ ಸ್ಥಿತಿಯನ್ನು ನೆಲೆಸುವುದೆ ಆಗಿತ್ತು. ಅವನ ನಂತರ "ಬುಕಾರಾವ್ ಎಂದು ಕರೆಯಲ್ಪಡುವ" (ಬುಕ್ಕ)ವನು ಪಟ್ಟಕ್ಕೆ ಬಂದ ಅವನು ಮೂವತ್ತೇಳು ವರ್ಷ ಆಳಿದನು. ಅವನ ಮಗ "ಪುರಿಯೋರೆ ದೇವ್" (ಎರಡನೆಯ ಹರಿಹರದೇವ)ನೆ ಮುಂದಿನ ರಾಜ.

ಈ ಕತೆಯ ಕೆಲ ಭಾಗವಾದರೂ ಸರಿಯಾಗಿದೆ ಎಂದು ಇತರ ಮೂಲಗಳಿಂದ ತಿಳಿದುಬರುತ್ತದೆ. ಮೊದಲನೆಯ ಹರಿಹರ ಮತ್ತು ಬುಕ್ಕ ಮೊದಲ ರಾಜ ರಾಗಿದ್ದರು ಮತ್ತು ಸಹೋದರರಾಗಿದ್ದರು. ಮೂರನೆಯ ರಾಜನಾದ ಎರಡನೆಯ ಹರಿಹರ ನಿಶ್ಚಿತವಾಗಿಯೂ ಬುಕ್ಕನ ಮಗನಾಗಿದ್ದನು.

ಆರಂಭದ ರಾಜರ ಯಶಸ್ಸು ಅದ್ಭುತವಾಗಿತ್ತು. ೧೩೩೩ ರಿಂದ ೧೩೪೨ರ ವರೆಗೆ ಭಾರತದಲ್ಲಿದ್ದ ಇಬ್ನ್ ಬತೂತಾ ತನ್ನ ಕಾಲದಲ್ಲಿ ಸಹ ಪಶ್ಚಿಮ ಕರಾವಳಿಯಲ್ಲಿದ್ದ ಮಹಮ್ಮದೀಯ ದೊರೆ ಒಂದನೆಯ ಹರಿಹರನ ಅಧೀನನಾಗಿದ್ದನೆಂದು ಹೇಳುತ್ತಾನೆ. ಹರಿಯಪ್ಪ ಎಂಬ ಅವನ ಇನ್ನೊಂದು ರೂಪಾಂತರದ ಮೇಲಿಂದ ಇಬ್ನ್ ಬತೂತಾ

ಅವನನ್ನು "ಹರಾಇಬ್" ಅಥವಾ "ಹರಿಬ್" ಎಂದು ಕರೆಯುತ್ತಾನೆ. ಒಂದು ನೂರು ವರ್ಷ ಬಳಿಕ ಪರ್ಶಿಯಾದ ರಾಯಭಾರಿಯಾದ ಅಬ್ದುಲ್ ರಜ್ಜಾಕ್ ವಿಜಯನಗರದ ರಾಜ ಸಮುದ್ರದಿಂದ ಸಮುದ್ರದವರೆಗೆ, ದಕ್ಷನದಿಂದ ಕನ್ಯಾಕುಮಾರಿವರೆಗೆ ಇಡಿ ದಕ್ಷಿಣ ಭಾರತದ ಪ್ರಭುವಾಗಿದ್ದನೆಂದು ಹೇಳುತ್ತಾನೆ : "ಸೆರೆಂಡಿಬ್ (ಸಿಲೋನ)ದ ಸರಹದ್ದಿನಿಂದ ಕಲಬರ್ಗಾ ದೇಶದ ತುದಿಯುವರೆಗೆ....ಅವನ ಸೈನ್ಯ ಸಂಖ್ಯೆಯಲ್ಲಿ ಹನ್ನೊಂದು ಲಕ್ಷ ಇತ್ತು" ಅರ್ಥಾತ್ ೧,೧೦೦,೦೦೦. ಫಿರಿಸ್ತಾನೆ[4] ಪ್ರಕಾರ, ಕ್ರಿ.ಶ. ೧೩೭೮ರಷ್ಟು ಹಿಂದೆಯೆ ವಿಜಯನಗರದ ರಾಯ ದಕ್ಷನದ ಬಹಮನಿ ರಾಜನಿಗಿಂತ "ಬಲ, ಸಂಪತ್ತು ಮತ್ತು ಪ್ರದೇಶದ ವ್ಯಾಪ್ತಿಯಲ್ಲಿ" ಬಹಳ ಶ್ರೇಷ್ಠನಾಗಿದ್ದನು.

ಹಳೆಯ ದಕ್ಷಿಣ ರಾಜ್ಯಗಳು (ನಮಗೆ ಮಾರ್ಗದರ್ಶನ ನೀಡಲು ಅವುಗಳ ಇತಿಹಾಸ ಲಭ್ಯವಿಲ್ಲ) ಹೊಸ ಅರಸೊತ್ತಿಗೆಯ ಆಳ್ವಿಕೆಗೆ ಶಾಂತಿಯುತವಾಗಿ ಅಧೀನವಾಗಿದ್ದವೆಂದು ಸಾಮಾನ್ಯವಾಗಿ ತೋರುತ್ತದೆ. ಭಯಭೀತಗೊಳಿಸುವ ವಿದೇಶಿಯರನ್ನು ದೇಶದ ಹೊರಗೆ ಇಡಬಹುದಾದರೆ ಅಧೀನವಾಗಿರಲು ಅವು ಸಂತೋಷಿಸುವಂತಿತ್ತು. ಹೀಗೆ, ಶೀಘ್ರವಾಗಿ ಚಿಕ್ಕ ಪ್ರದೇಶ, ರಾಜ್ಯವಾಗಿ ಬೆಳೆಯಿತು, ರಾಜ್ಯ ಸಾಮ್ರಾಜ್ಯವಾಗುವವರೆಗೆ ವಿಸ್ತರಿಸಿತು. ಮಹಮ್ಮದೀಯರ ಯಾದವೀ ಯುದ್ಧ ಮತ್ತು ಪರಸ್ಪರ ಕಚ್ಚಾಟ ಹರಿಹರ ಮತ್ತು ಬುಕ್ಕರ ಸಾಹಸಕ್ಕೆ ಸಹಾಯಕವಾದವು. ಮಹಮ್ಮದ ತಘಲಕನ ದಬ್ಬಾಳಿಕೆ ಮತ್ತು ಅತಿರೇಕಗಳಿಂದ ಬೇಸತ್ತ ದಕ್ಖನ್ ೧೩೪೭ರಲ್ಲಿ ಬಂಡೆದ್ದಿತು ಮತ್ತು ಬಹಮನಿಗಳ ಸ್ವತಂತ್ರ ರಾಜ್ಯ ಕೆಲ ಕಾಲ ಭದ್ರವಾಗಿ ಸ್ಥಾಪಿತವಾಯಿತು.

ನೂನಿಜ್‌ನ ವೃತ್ತಾಂತ ಕೆಳಗಿನ ವಾಕ್ಯದೊಂದಿಗೆ ಆರಂಭಿಸುತ್ತದೆ :

"ಹನ್ನೆರಡುನೂರಾ ಮೂವತ್ತನೆಯ ವರ್ಷದಲ್ಲಿ ಭಾರತದ ಈ ಪ್ರದೇಶಗಳನ್ನು ಹಿಂದೆಂದಿಗಿಂತಲೂ ದೊಡ್ಡ ರಾಜ ಆಳಿದನು. ಈತನೆ ದಿಲಿಯ[5] ರಾಜ. ಈತ ಶಸ್ತ್ರಾಸ್ತ್ರ ಹಾಗೂ ಸೈನಿಕರ ಬಲದಿಂದ ಅನೇಕ ವರ್ಷಗಳವರೆಗೆ ಕ್ಯಾಂಬೆ ವಿರುದ್ಧ ಯುದ್ಧ ಮಾಡಿದ. ಕ್ಯಾಂಬೆಯ[6] ಭಾಗವಾಗಿದ್ದ ಗುಜರಾತ ಪ್ರದೇಶವನ್ನು ಆ ಅವಧಿಯಲ್ಲಿ ವಶಪಡಿಸಿಕೊಳ್ಳುತ್ತ, ನಾಶಪಡಿಸುತ್ತ ಕೊನೆಗೆ ಅದರ ಅಧಿಪತಿಯಾದನು".

ಇದಾದ ನಂತರ ದಿಲ್ಲಿಯ ರಾಜ ಬಾಲಾಘಾಟ ಮಾರ್ಗವಾಗಿ ವಿಜಯನಗರದ ಮೇಲೆ ಏರಿಹೋದನು.

ಈಗಾಗಲೆ ತೋರ್ಪಡಿಸಿರುವಂತೆ ಈ ಕಾಲ ಒಂದು ಶತಮಾನ ಶೀರ ಮುಂಚಿತವಾಗಿದೆ. ಉಲ್ಲೇಖಿಸಲಾದ ರಾಜನನ್ನು ಕೆಳಗಿನ ಟಿಪ್ಪಣಿ (ಅವನ ವೃತ್ತಾಂತದ ಐತಿಹಾಸಿಕ ಭಾಗವನ್ನು ಮುಕ್ತಾಯಗೊಳಿಸುವ ೨೦ನೆಯ ಅಧ್ಯಾಯದ

ಕೊನೆಯಲ್ಲಿ ನೂನಿಜ್ ಬರೆದಿಟ್ಟಿರುವ)ಯಲ್ಲಿ ತೆಗಾಜ ಮ್ಯಾಮೀದ್" ಎಂದು ಕರೆಯಲಾದಂತೆ ತೋರುತ್ತದೆ :

"ದಿಲ್ಲಿಯ ಈ ರಾಜ "ತೆಗಾಜ ಮ್ಯಾಮೀದ್" ಎಂದು ಕರೆಯಲಾದ ಮುಹಮ್ಮದೀಯನೆಂದು ಹೇಳಲಾಗುತ್ತದೆ. ಹಿಂದೂಗಳು ಅವನನ್ನು ಸಂತನೆಂದು ಪರಿಭಾವಿಸುತ್ತಾರೆ. ಒಮ್ಮೆ ದೇವರಿಗೆ ಪ್ರಾರ್ಥನೆ ಸಲ್ಲಿಸುವಾಗ ನಾಲ್ಕು ತೋಳುಗಳು ಮತ್ತು ನಾಲ್ಕು ಕೈಗಳು ಬಂದವೆಂದೂ ಪ್ರತಿ ಸಲ ಪ್ರಾರ್ಥಿಸುವಾಗ ಸ್ವರ್ಗದಿಂದ ಗುಲಾಬಿ ಹೂಗಳು ಉದುರಿದವೆಂದೂ ಅವರು ಹೇಳುತ್ತಾರೆ. ಅವನು ದೊಡ್ಡ ವಿಜಯಿಯಾಗಿದ್ದನು, ಅವನು ಈ ಭೂಮಂಡಲದ ವಿಶಾಲ ಭಾಗವನ್ನು ತನ್ನ ರಾಜ್ಯದಲ್ಲಿ ಅಧೀನಗೊಳಿಸಿದ್ದನು, ಅವನು....(ಮೂಲಕೃತಿಯಲ್ಲಿ ಖಾಲಿಯಿದೆ) ರಾಜರನ್ನು ಅಂಕೆಯಲ್ಲಿಟ್ಟುಕೊಂಡನು ಮತ್ತು ಕೊಂದನು ಮತ್ತು ಚರ್ಮ ಸುಲಿಸಿದನು ಮತ್ತು ಅವರ ಚರ್ಮಗಳನ್ನು ತನ್ನೊಂದಿಗೆ ಒಯ್ದನು ; ಇದರಿಂದಾಗಿ ತನ್ನ ಹೆಸರಲ್ಲದೆ ಅವನಿಗೆ ಅಡ್ಡ ಹೆಸರೊಂದು ಲಭಿಸಿತು....ಅದರ ಅರ್ಥ 'ರಾಜರ ಚರ್ಮಗಳ....ಪ್ರಭು' ; ಅವನು ಅನೇಕ ಜನರ ದೊರೆಯಾಗಿದ್ದ."

"ತನ್ನ ಲೆಕ್ಕಾಚಾರದಂತೆ ತನಗೆ ಸಲ್ಲಬೇಕಾದ ಇಪ್ಪತ್ತಾಲ್ಕರ[7] ಬದಲು ಹದಿನೆಂಟು ಅಕ್ಷರಗಳನ್ನು (ವರ್ಣಮಾಲೆಯಿಂದ. ಅವನ ಹೆಸರಿಗೆ ?) (ನೀಡಿದ್ದುದಕ್ಕಾಗಿ ?) ಅವನು ಹೇಗೆ ಕೋಪಾವಿಷ್ಟನಾದನೆಂದು ವಿವರಿಸುವ ಕತೆಯೊಂದಿದೆ. ಅವನು ಮಾಡಿದ ಕಾರ್ಯಗಳನ್ನು ಕುರಿತು ವಿಚಿತ್ರವಾದ ಕತೆಗಳಿವೆ. ಉದಾಹರಣೆಗೆ, ಒಂದು ದಿನ ಬೆಳಗ್ಗೆ ಮುಚ್ಚಿದ ಕಿಡಕಿಯ ಹಿಂದೆ ನಿಂತು ಬಟ್ಟೆ ಧರಿಸುವಾಗ ಒಂದು ಸೂರ್ಯಕಿರಣ ಅವನ ಕಣ್ಣಲ್ಲಿ ಪ್ರವೇಶಿಸಿತು. ತಾನು ಬಟ್ಟೆ ಧರಿಸುವಾಗ ತನ್ನ ಕೋಣೆಯಲ್ಲಿ ಪ್ರವೇಶಿಸುವ ಧೈರ್ಯ ಮಾಡಿದವನು ಯಾವನಾದರೂ ಇರಲಿ ಅವನನ್ನು ಕೊಲ್ಲುವ ಇಲ್ಲವೆ ಸೋಲಿಸುವವರೆಗೆ ತಾನು ವಿಶ್ರಮಿಸಲಾರೆನೆಂದು ಕರೆ ನೀಡಿದ. ಅದಕ್ಕಾಗಿ ಸೈನ್ಯ ಸಿದ್ಧಗೊಳಿಸಿದ. ಅವನ ಸರದಾರರು ಹಾಗೆ ಮಾಡಿದುದು ಸೂರ್ಯನೆಂದೂ, ಅದಿಲ್ಲದೆ ತಾವು ಬದುಕಲಾರೆವೆಂದೂ, ಅದು ಸ್ವರ್ಗೀಯ ವಸ್ತುವೆಂದೂ, ಅದು ಆಕಾಶದಲ್ಲಿರುತ್ತದೆಂದೂ ಮತ್ತು ಅವನು ಅದಕ್ಕೆ ಯಾವ ಅಪಾಯವನ್ನೂ ಮಾಡಲಾರನೆಂದೂ ತಿಳಿಸಿ ಹೇಳಿದರೂ ಅವನನ್ನು ಆ ಉದ್ದೇಶದಿಂದ ತಡೆಯಲಾಗಲಿಲ್ಲ. ಇದಾವುದನ್ನೂ ಲೆಕ್ಕಿಸದೆ ಅವನು ತನ್ನ ಸೈನ್ಯ ಸಿದ್ಧಗೊಳಿಸಿದ, ತಾನು ವೈರಿಯನ್ನು ಹುಡುಕಿಕೊಂಡು ಹೋಗಲೇಬೇಕೆಂದು ಸಾರಿದ, ಸಾಗುತ್ತಿದ್ದಂತೆಯೆ ಮಾರ್ಗದಲ್ಲಿ ಸೈನ್ಯಕ್ಕೆ ಜನರನ್ನು ಭರ್ತಿ ಮಾಡಿಕೊಂಡ. ಎಷ್ಟರ ಮಟ್ಟಿಗೆಂದರೆ, ಅದರಿಂದ ಎಷ್ಟು ಧೂಳು ಎದ್ದಿತೆಂದರೆ ಸೂರ್ಯ ಕಾಣದಂತಾದ. ಕಾಣದಂತಾದಾಗ ಅದು ಏನಿತ್ತೆಂದು ಪುನಃ ವಿಚಾರಿಸಿದ. ತಾನು ಅರಸಿಬಂದ ವೈರಿಯನ್ನು ಹೊಡೆದೋಡಿಸಿದ್ದರಿಂದ ಈಗ ಇನ್ನು ಕಾಯ

ಬೇಕಾದ ಅಗತ್ಯವಿಲ್ಲ ಮತ್ತು ಮನೆಗೆ ಹಿಂತಿರುಗಬಹುದು ಎಂದು ಅವನ ದಳಪತಿಗಳು ಹೇಳಿದರು. ಇದರಿಂದ ತೃಪ್ತನಾದ ರಾಜ ತನ್ನ ವೈರಿ ಓಡಿಹೋದುದರಿಂದ ತನಗೆ ಸಮಾಧಾನವಾಗಿದೆಯೆಂದು ಹೇಳುತ್ತ ತಾನು ಸೂರ್ಯನನ್ನು ಹುಡುಕಿಕೊಂಡು ಬಂದ ರಸ್ತೆಯಿಂದಲೆ ಮರಳಿದ."

"ಅವನ ಬಗೆಗೆ ಹೇಳಲಾದ ಇತರ ಅತಿರೇಕಗಳು ಅವನನ್ನು ದೊಡ್ಡ ದೊರೆಯನ್ನಾಗಿಸುತ್ತವೆ. ಉದಾಹರಣೆಗೆ, ಚಾರಮಾಂಡೆಲ್ ಪ್ರದೇಶದಲ್ಲಿರುವಾಗ ಸಮುದ್ರದೊಳಗೆ ಕೆಲವು ಹರದಾರಿ ದೂರದಲ್ಲಿ ಒಂದು ಬಹಳ ದೊಡ್ಡ ದ್ವೀಪವಿದೆ, ಅದರ ಭೂಮಿ ಸುವರ್ಣದ್ದು, ಅದರ ಮನೆಗಳ ಕಲ್ಲುಗಳು ಹಾಗೂ ಭೂಮಿಯಿಂದ ಅಗಿದು ತೆಗೆದವುಗಳು ಮಾಣಿಕ್ಯ ಮತ್ತು ವಜ್ರಗಳಾಗಿವೆ ; ಆ ದ್ವೀಪದಲ್ಲಿ ಒಂದು ದೇವಾಲಯವಿದೆ, ಅಲ್ಲಿ ಸಂಗೀತ ಮತ್ತು ನೃತ್ಯ ಒದಗಿಸಲು ಸ್ವರ್ಗದಿಂದ ದೇವದೂತರು ಬರುತ್ತಾರೆ ಎಂದು ಮುಂತಾಗಿ ಅವನಿಗೆ ಹೇಳಲಾಯಿತು. ಆ ಭೂಮಿಯ ಒಡೆಯನಾಗುವ ಆಸೆಯುಳ್ಳವನಾಗಿ ಅವನು ಅಲ್ಲಿಗೆ ಹೋಗಲು ನಿರ್ಧರಿಸಿದ. ಆದರೆ ಹಡಗುಗಳಲ್ಲಿಲ್ಲ. ಏಕೆಂದರೆ, ಅವನಲ್ಲಿ ಇಷ್ಟೊಂದು ಜನರಿಗೆ ಸಾಕಾಗುವಷ್ಟು ಹಡಗುಗಳಿರಲಿಲ್ಲ. ಆದುದರಿಂದ, ಅವನು ಬಂಡಿಗಳಲ್ಲಿ ಹೇರಿಕೊಂಡು ಬಂದು ವಿಪುಲ ಕಲ್ಲುಗಳನ್ನೂ ಮಣ್ಣನ್ನೂ ಸಮುದ್ರದೊಳಗೆ ಎಸೆಯಿಸಲಾರಂಭಿಸಿದ. ಅದರಿಂದ ಅದು ತುಂಬಿ ತಾನು ಆ ದ್ವೀಪ ತಲುಪಬಹುದೆಂದು ಉದ್ದೇಶಿಸಿದ್ದ. ಇದನ್ನು ಕೈಗೆತ್ತಿಕೊಂಡು ಎಷ್ಟೊಂದು ಪರಿಶ್ರಮವಹಿಸಿ ಕಾರ್ಯ ಮಾಡಿದನೆಂದರೆ ಹನ್ನೆರಡು ಅಥವಾ ಹದಿನೈದು ಹರದಾರಿ ದೂರವಿರುವ ಸಿಲ್ಲಾಂ ದ್ವೀಪಕ್ಕೆ ಒಡ್ಡುದಾರಿ ಮೂಲಕ ನಡೆದ[8] ಈ ಒಡ್ಡುದಾರಿಯನ್ನು ಕಾಲಕ್ರಮೇಣ ಸಮುದ್ರ ನುಂಗಿತು ಮತ್ತು ಅದರ ಅವಶೇಷಗಳು ಈಗ ಚಿಲ್ಲಾಂದ ಮಡುಗಳಾಗಿ ಮಾರ್ಪಟ್ಟಿವೆ. ಅವನ ದಂಡನಾಯಕ ಮೆಲಿಂಕ್ವೆನಿಬಿ[9] ಇಂಥ ಅಸಾಧ್ಯ ಕಾರ್ಯಕ್ಕಾಗಿ ಎಷ್ಟೊಂದು ಶ್ರಮ ವ್ಯರ್ಥಗೊಳಿಸಲಾಗುತ್ತದೆಂಬುದನ್ನು ನೋಡಿ ಚಾರಮಾಂಡೆಲ್ ಬಂದರಿನಲ್ಲಿ ಎರಡು ಹಡಗುಗಳನ್ನು ಸಿದ್ಧಗೊಳಿಸಿ ಅವುಗಳನ್ನು ಬಂಗಾರ ಮತ್ತು ಬೆಲೆಯುಳ್ಳ ಹರಳುಗಳಿಂದ ತುಂಬಿದ, ಮತ್ತು ಆ ದ್ವೀಪದ ರಾಜನ ಹೆಸರಿನಲ್ಲಿ ಕಳಿಸಲಾದ ರಾಯಭಾರವೆನ್ನುವಂತೆ ಕೆಲವು ಕಾಗದ ಪತ್ರಗಳನ್ನು ಕಳ್ಳರುಜು ಮಾಡಿ ತಯಾರಿಸಿದ, ಅವುಗಳಲ್ಲಿ ವಿಧೇಯತೆ ವ್ಯಕ್ತಪಡಿಸಿದ್ದ ಆ ದ್ವೀಪದ ರಾಜ ಕಾಣಿಕೆಗಳನ್ನೂ ಕಳುಹಿಸಿದ್ದ. ಇದಾದ ತರುವಾಯ ರಾಜ ತನ್ನ ಒಡ್ಡುದಾರಿ ನಿರ್ಮಾಣವನ್ನು ಮುಂದುವರಿಸಲಿಲ್ಲ."

"ಈ ಕೆಲಸದ ಸ್ಮರಣಾರ್ಥವಾಗಿ ಅವನು ಒಂದು ದೊಡ್ಡ ದೇವಾಲಯ ನಿರ್ಮಿಸಿದ. ಅದು ಇನ್ನೂ ಅಲ್ಲಿ ಇದೆ. ಅದು ದೊಡ್ಡ ಯಾತ್ರಾಸ್ಥಳವಾಗಿದೆ."

"ಮಾನ್ಯರಾದ ನಿಮಗೆ ಮುಂದೆ ಎಂದಾದರೂ ನಾನು ತೊಂದರೆ ಕೊಡ ಬಯಸುವ ಇಂಥ ಎರಡು ಸಾವಿರ ಕತೆಗಳಿವೆ ; ದೇವರು ನನಗೆ ಆಯುಷ್ಯ ನೀಡಿದ್ದಾದರೆ, ಇದಕ್ಕಿಂತ ಉತ್ತಮವಾದವುಗಳನ್ನೂ ನಿಮಗೆ ಹೇಳುವೆ. ನಾನು ಮಾನ್ಯರಾದ[10] ನಿಮ್ಮ ಕೈಗಳಿಗೆ ಮುತ್ತಿಡುವೆ."

೧೩೨೫ ರಿಂದ ೧೩೫೧ರವರೆಗೆ ಆಳಿದ ದಿಲ್ಲಿಯ ಮುಹಮ್ಮದ ತುಘಲಕ್‌ನಿಗೇ ಈ ವೃತ್ತಾಂತ ಸೇರಿದ್ದೆಂದು ನಿರ್ಧಾರಕವಾಗಿ ಸ್ಥಿರಪಡಿಸಲು ಆ ರಾಜನ ವಿದಿತ ಸ್ವಭಾವ ಹಾಗೂ ಅವನ ಆಳ್ವಿಕೆಯ ಘಟನೆಗಳನ್ನು ಅವಲೋಕಿಸುವ ಅಗತ್ಯವಿದೆ.

ತನ್ನ "ಕೆಗಾಬ ಮ್ಯಾಮ್ಮಿತ್" ಗುಜರಾತವನ್ನು ಗೆದ್ದನೆಂದೂ, ಬಂಗಾಲದೊಂದಿಗೆ ಯುದ್ಧನಿರತನಾಗಿದ್ದನೆಂದೂ, ಶೇಖ್ ಇಸ್ಮಾಯಿಲ್ ಅರ್ಥಾತ್ ಪರ್ಶಿಯಾದ[11] ಗಡಗಳಲ್ಲಿನ ತುರ್ಕಮನ್‌ರೊಂದಿಗೆ ತೊಂದರೆಯಲ್ಲಿದ್ದನೆಂದೂ ನೂನಿಜ್ ಹೇಳುತ್ತಾನೆ. ಇವುಗಳನ್ನು ಈಗ ಪ್ರತಿಲೋಮ ಕ್ರಮದಲ್ಲಿ ನೋಡೋಣ ಮುಹಮ್ಮದ ತಘಲಕ್‌ನ ಆಳ್ವಿಕೆಯ ಆರಂಭದಲ್ಲಿಯೆ ಮೊಘಲರ ಬೃಹತ್ ದಂಡುಗಳು ಪಂಜಾಬದ ಮೇಲೆ ದಾಳಿಯಿಟ್ಟವು ಮತ್ತು ಹೆಚ್ಚು ಕಡಿಮೆ ಅವಿರೋಧವಾಗಿ ದಿಲ್ಲಿಗೆ ಸಾಗಿದವು. ಅಲ್ಲಿನ ರಾಜ ದೊಡ್ಡ ಮೊತ್ತದ ಹಣ ಕೊಟ್ಟು ಕಾಟ ತಪ್ಪಿಸಿಕೊಂಡ. ಆಮೇಲೆ ಬಂಗಾಲದ ಬಗೆಗೆ. ಅವನ ಆಳ್ವಿಕೆಗೆ ಮುಂಚೆ ಆ ಪ್ರಾಂತ ಅಧೀನ ಪಡಿಸಲ್ಪಟ್ಟಿತ್ತು, ತೊಂದರೆ ಕೊಟ್ಟಿತ್ತು ಮತ್ತು ಪುನಃ ಅಡಗಿಸಲ್ಪಟ್ಟಿತ್ತು. ಅವನ ಆಳ್ವಿಕೆಯಲ್ಲಿ ಘಿಯಾಸುದ್ದೀನ ಬಹಾದುರ "ಬದಾ" (ಬಡಾ) ಎಂಬ ದಿಲ್ಲಿಯ ರಾಜ ಪ್ರತಿನಿಧಿಯ ಉಕ್ಕಿನ ಕೈಯಿಂದ ಅದು ಸದೆಬಡಿಯಲ್ಪಟ್ಟಿತ್ತು. ಅವನು ಅಲ್ಪಾವಧಿಯಲ್ಲಿಯೆ ತನ್ನನ್ನು ಸ್ವತಂತ್ರನಾಗಿಸಿಕೊಳ್ಳಲು ಹವಣಿಸಿದ. ಬಹಾದುರಶಾಹ ಎಂದು ತನ್ನನ್ನು ಕರೆದುಕೊಂಡ ಅವನು ತನ್ನದೆ ನಾಣ್ಯಪದ್ಧತಿಯನ್ನೂ ಹೊರಡಿಸಿದ. ೧೩೨೭ (ಹಿಜರಿ ಶಕೆ ೭೨೮)ರಲ್ಲಿ ಅವನ ನಾಣ್ಯಗಳ ಮೇಲಿನ ಅಲೇಖ್ಯಗಳು ದಿಲ್ಲಿಯ ಮೇಲೆ ಅವನ ಪ್ರಭುತ್ವವನ್ನು ಅಂಗೀಕರಿಸುತ್ತವೆ ಮತ್ತು ಎರಡು ವರ್ಷಗಳ ನಂತರ ಅವುಗಳು ಅವನನ್ನು ಬಂಗಾಲದ ಸ್ವತಂತ್ರ ರಾಜನೆಂದು ವರ್ಣಿಸುತ್ತವೆ.[12] ೧೩೩೩ ರಲ್ಲಿ ಮುಹಮ್ಮದ ಬಂಗಾಲಕ್ಕಾಗಿ ತನ್ನದೆ ನಾಣ್ಯಪದ್ಧತಿ ಹೊರಡಿಸಿದ ಮತ್ತು ಬಂಡುಕೋರನ ವಿರುದ್ಧ ಸಾಗಿದ. ಅವನು ಅವನನ್ನು ಸೋಲಿಸಿದ, ಸೆರೆಹಿಡಿದ, ಸಜೀವವಾಗಿ ಚರ್ಮ ಸುಲಿಸಿದ, ಒಣ ಹುಲ್ಲಿನಿಂದ ಅದನ್ನು ತುಂಬಿಸಿದ, ಮಹತ್ವಾಕಾಂಕ್ಷಿ ಮಂಡಲಾಧಿಪತಿಗಳಿಗೆ ಎಚ್ಚರಿಕೆಯಾಗಲೆಂಬಂತೆ ತನ್ನ ಸಾಮ್ರಾಜ್ಯದ ಪ್ರಾಂತಗಳುದ್ದಕ್ಕೂ ಅದನ್ನು ಮೆರೆಸಲು ಆಜ್ಞಾಪಿಸಿದ. ಗುಜರಾತ ಕುರಿತಂತೆ ನೂನಿಜ್ ಒಂದು ಚಿಕ್ಕ ತಪ್ಪು ಮಾಡಿದ್ದಾನೆ. ಮುಹಮ್ಮದ್ ತಘಲಕ್ ಅಲ್ಲಿಗೆ ಹೋದುದೇನೊ ನಿಜ, ಆದರೆ ೧೩೪೭ರಲ್ಲಿ ಮಾತ್ರ. ಅವನು ಮಾಡಿದ್ದೇನೆಂದರೆ ದಕ್ಖನದ ಸ್ವಾಧೀನ. ಫಿರಿಸ್ತಾ ಅವನ ವಿಜಯಗಳಲ್ಲಿ ದ್ವಾರಸಮುದ್ರ, ಮಲಬಾರ,

ಆನೆಗುಂದಿ (ಅದನ್ನು "ಕಂಪಿಲಾ" ಎಂದು ಏಕೆ ಕರೆದ ಎಂಬುದರ ಕಾರಣವನ್ನು ಈ ಕೂಡಲೆ ವಿಶದೀಕರಿಸಲಾಗುವುದು), ವಾರಂಗಲ್ ಇತ್ಯಾದಿಗಳನ್ನು ಹೆಸರಿಸುತ್ತಾನೆ. ಮತ್ತು ಈ ಊರುಗಳು "ದಿಲ್ಲಿಯ ನೆರೆ ಹೊರೆಯ ಹಳ್ಳಿಗಳಷ್ಟೇ ಪರಿಣಾಮಕಾರಿಯಾಗಿ ಅವನ ಸಾಮ್ರಾಜ್ಯದಲ್ಲಿ ಸೇರ್ಪಡಿಸಲ್ಪಟ್ಟವು."[13] ಅವನು ಗುಜರಾತನ್ನೂ ಭದ್ರವಾಗಿ ಹಿಡಿದುಕೊಂಡ. ಆದುದರಿಂದ, ಈ ವಿಷಯದಲ್ಲಿ ನೂನಿಜ್‌ನನ್ನು ತಿದ್ದಲು ಪ್ರಯತ್ನಿಸಿ "ತಗಾಜ ಮ್ಯಾಮೀದ್" ಗುಜರಾತದ ಬದಲು ದಕ್ಷನದ ಮೇಲೆ ಯುದ್ಧ ಮಾಡಿದನು ಮತ್ತು ನಂತರ ಆನೆಗುಂದಿ (ಇದನ್ನು ಆಗಿನ್ನೂ ಸ್ಥಾಪಿಸಲ್ಪಟ್ಟಿರದ "ವಿಜಯನಗರ" ಎಂದು ತಪ್ಪಾಗಿ ಕರೆಯಲಾಗಿದೆ)ಯ ವಿರುದ್ಧ ಸಾಗಿದನು ಎಂದು ಹೇಳಿದರೆ ಬಹುಶಃ ಸತ್ಯಕ್ಕೆ ದೂರವಾಗಲಾರದು. ಇಲ್ಲಿಯವರೆಗೆ "ತಗಾಜ ಮ್ಯಾಮೀದ್"ನ ಇತಿಹಾಸ ಮಹಮ್ಮದ ತಘಲಕ್‌ನ ಇತಿಹಾಸವೇ ಆಗಿದೆ.

ಈಗ ಅವನ ಬಗೆಗೆ ಹೇಳಲಾದ ಅಸಾಧಾರಣ ಕತೆಗಳತ್ತ ತಿರುಗುವಾ. ಮಹಮ್ಮದನನ್ನು ಆ ಯುಗದ ಅದ್ಭುತವೆಂದು ಸಮಕಾಲೀನ ಲೇಖಕರು ವರ್ಣಿಸಿರುವರು. ವಿಶೇಷತಃ ಕಲೆಗಳಲ್ಲಿ ಪಂಡಿತರಾದವರಿಗೆ ಅವನು ಬಹಳ ಉದಾರಿಯಾಗಿದ್ದ. ಅವನು ರೋಗಿಗಳಿಗೆ ಆಸ್ಪತ್ರೆಗಳನ್ನೂ ವಿಧವೆಯರು ಮತ್ತು ತಬ್ಬಲಿಗಳಿಗೆ ಧರ್ಮಶಾಲೆಗಳನ್ನೂ ನಿರ್ಮಿಸಿದನು. ಅವನು ತನ್ನ ಕಾಲದ ಅತಿ ಶ್ರೇಷ್ಠ ವಾಗ್ನಿಪುಣ ಮತ್ತು ಸುಶಿಕ್ಷಿತ ದೊರೆಯಾಗಿದ್ದ. ವೈದ್ಯಶಾಸ್ತ್ರ, ತರ್ಕಶಾಸ್ತ್ರ, ಖಗೋಲಶಾಸ್ತ್ರ ಮತ್ತು ಗಣಿತ ಮೊದಲಾದ ವಿಜ್ಞಾನಗಳಲ್ಲಿ ಪಾರಂಗತನಾಗಿದ್ದ. ಗ್ರೀಕರ ತತ್ವಜ್ಞಾನಗಳನ್ನು ಮತ್ತು ಆಧ್ಯಾತ್ಮವನ್ನು ಅಭ್ಯಸಿಸಿದ್ದ ಮತ್ತು ಧಾರ್ಮಿಕ ಆಚರಣೆಗಳಲ್ಲಿ ಕಟ್ಟುನಿಟ್ಟಿನವನಾಗಿದ್ದ.

ಯಾರಿಂದ ಈ ಮೇಲಿನ ಸಾರಾಂಶ ತೆಗೆದುಕೊಳ್ಳಲಾಗಿದೆಯೊ ಆ ಫೆರಿಸ್ತಾ ಹೇಳುವುದೇನೆಂದರೆ : "ಆದರೆ ಇವೆಲ್ಲ ಪ್ರಶಂಸಾರ್ಹ ಗುಣಗಳಿದ್ದಾಗ್ಯೂ ಅವನು ಸಂಪೂರ್ಣವಾಗಿ ದಯಾಶೂನ್ಯ ಅಥವಾ ತನ್ನ ಜನರಿಗಾಗಿ ಸಹಾನುಭೂತಿ ಶೂನ್ಯ ಆಗಿದ್ದನು. ಅವನು ನೀಡುತ್ತಿದ್ದ ಶಿಕ್ಷೆಗಳು ಕಠಿಣ ಮತ್ತು ಕ್ರೂರ ಮಾತ್ರವಲ್ಲದೆ ಅನೇಕ ಬಾರಿ ಅನ್ಯಾಯದವುಗಳೂ ಆಗಿದ್ದವು. ಭಗವಂತನ ಸಂತತಿಯ ರಕ್ತ ಹರಿಸಲು ಅವನು ಎಳ್ಳಷ್ಟೂ ಹಿಂದುಮುಂದೆ ನೋಡುತ್ತಿರಲಿಲ್ಲ. ಅವನನ್ನು ಆ ಭಯಂಕರ ಅತಿರೇಕಕ್ಕೆ ಸಾಗುವಂತೆ ಉದ್ವೇಗಗೊಳಿಸುವ ಏನಾದರೂ ಸಂಭವಿಸಿದಾಗ ಮಾನವ ಕುಲವನ್ನೆ ನಿರ್ನಾಮಗೊಳಿಸುವುದು ಅವನ ಉದ್ದೇಶವಾಗಿತ್ತೆಂಬ ಭಾವನೆ ಮೂಡುತ್ತಿತ್ತು. ತನ್ನ ಸುತ್ತಲಿನ ಒಬ್ಬ ಅಥವಾ ಹೆಚ್ಚು ಪಂಡಿತರು ಮತ್ತು ಧಾರ್ಮಿಕ ಪುರುಷರು ಅಥವಾ ಅವನ ಚಾಕರಿ ಮಾಡುತ್ತಿದ್ದ ಕೆಲವು ಕಾರ್ಯದರ್ಶಿಗಳನ್ನು ಕೊಲ್ಲದೆ ಯಾವ ವಾರವೂ ಗತಿಸುತ್ತಿರಲಿಲ್ಲ.

ಕಿಂಚಿತ್ ವಿರೋಧ ಕೂಡ ಅವನನ್ನು ಹೆಚ್ಚು ಕಡಿಮೆ ಮತಿವಿಕಲ ರೋಷಾವೇಶಕ್ಕೆ ನೂಕುತ್ತಿತ್ತು. ಮತ್ತು ಇಂಥ ಉದ್ರಿಕ್ತ ಸನ್ನಿವೇಶಗಳಲ್ಲಿ ಅವನು ತನ್ನ ಸ್ವಾಭಾವಿಕ ಕ್ರೌರ್ಯಕ್ಕೆ ಸಂಪೂರ್ಣ ಅವಕಾಶ ಒದಗಿಸುತ್ತಿದ್ದ. ಅವನ ಇಡಿ ಜೀವನ ಕಪೋಲಕಲ್ಪಿತ ಯೋಜನೆಗಳು ಮತ್ತು ಅವುಗಳನ್ನು ಸಾಧಿಸುವ ಅಷ್ಟೇ ಅತಾರ್ಕಿಕ ಉಪಾಯಗಳಲ್ಲಿಯೆ ಕಳೆಯಿತು. ಅವನು ತನ್ನ ಸರದಾರರಿಗೆ ವಿಪುಲ ಧನ ವಿತರಿಸುವುದರೊಂದಿಗೆ ಆರಂಭಿಸಿದನು. ಹೀಗೆ, ಒಂದೇ ದಿನ ೫೦೦,೦೦೦ ಪೌಂಡುಗಳನ್ನು ಖರ್ಚು ಮಾಡಿದನೆಂದು ಹೇಳಲಾಗುತ್ತಿದೆ. ದಾಳಿಯಿಟ್ಟ ಮೊಘಲರನ್ನು ತನ್ನ ಸೈನ್ಯ ಬಲದಿಂದ ಹಿಮ್ಮೆಟ್ಟಿಸುವ ಬದಲು ಭಾರಿ ಹಣ ನೀಡಿ ಕಾಟ ತಪ್ಪಿಸಿಕೊಳ್ಳುತ್ತಿದ್ದ. ಇದಾದ ಸ್ವಲ್ಪ ಕಾಲದಲ್ಲಿಯೆ ಪರ್ಶಿಯಾವನ್ನು ಗೆಲ್ಲಲೋಸುಗ ದೊಡ್ಡ ಸೈನ್ಯ ಅಣಿಗೊಳಿಸಿದ. ಫಿರಿಸ್ತಾನ ಅಭಿಪ್ರಾಯದಲ್ಲಿ, ಅವನ ಅಶ್ವದಳದಲ್ಲಿ ೩೭೦,೦೦೦ ಯೋಧರಿದ್ದರು. ಸಂಬಳ ದೊರೆಯದ ಸೈನಿಕರು ಚದುರಿದರು ಮತ್ತು ದೇಶವನ್ನು ಕೊಳ್ಳೆ ಹೊಡೆದರು. ಆಮೇಲೆ ಚೀನವನ್ನು ಗೆಲ್ಲಲು ನಿರ್ಧರಿಸಿ ೧೦೦,೦೦೦ ಸೈನಿಕರನ್ನು ಹಿಮಾಲಯದಲ್ಲಿ ಕಳಿಸಿದ. ಅಲ್ಲಿ ಸುಮಾರಾಗಿ ಎಲ್ಲರೂ ದುರವಸ್ಥೆಯಲ್ಲಿ ಮೃತರಾದರು. ಉಳಿದುಳಿದವರು ಹತಾಶರಾಗಿ ಹಿಂತಿರುಗಿದಾಗ ದೊರೆ ಅವರನ್ನು ಕೊಲ್ಲಿಸಿದ. ಸಂಪತ್ತಿಗೆ ದಾರಿಯೆಂದು ತನ್ನ ನಾಡಿನಲ್ಲಿ ಬೆಲೆಗುಂದಿದ ಹಣ ಚಲಾವಣೆಯನ್ನು ಜಾರಿಗೊಳಿಸಿದ. ಸುವರ್ಣ ನಾಣ್ಯಗಳ ಬದಲು ತಾಮ್ರದ ಬಿಲ್ಲೆಗಳನ್ನು ಹೊರಡಿಸಿದ. ತತ್ಫಲವಾಗಿ ವಿಶ್ವಾಸ ಪೂರ್ತಿ ನಷ್ಟವಾಗಿ ವ್ಯಾಪಾರ ಸ್ಥಗಿತಗೊಂಡಿತು. ಈ ಉಪಾಯ ಬೊಕ್ಕಸವನ್ನು ಭರಿಸಲು ವಿಫಲವಾಗಲು ಅವನು ಅಸಹನೀಯ ಕರಗಳಿಂದ ಬೇಸಾಯವನ್ನು ನಾಶಮಾಡಿದ. ರೈತರು ತಮ್ಮ ಹೊಲಗಳನ್ನು ತ್ಯಜಿಸಿ ದರೋಡೆಯನ್ನೆ ವೃತ್ತಿಯನ್ನಾಗಿ ಮಾಡಿಕೊಂಡರು. ಪ್ರಾಂತಗಳೆ ನಿರ್ಜನವಾದವು. ಬದುಕಿ ಉಳಿದವರು ಕಡು ಬಡತನ ಹಾಗೂ ಸಂಕಟದಲ್ಲಿ ಜೀವಿಸುತ್ತಿದ್ದಾರೆ. ಏಕೆಂದರೆ, ಅವರಲ್ಲಿದ್ದುದನ್ನೆಲ್ಲ ದೋಚಲಾಗಿತ್ತು. ಮಹಮ್ಮದ ಕ್ರಿಮಿಕೀಟಗಳೋಪಾದಿಯಲ್ಲಿ ಬಣಗಳನ್ನೆ ಇಡಿಯಾಗಿ ನಾಶಮಾಡಿದ. ಪೀಡನೆಗೊಳಗಾದ ಪ್ರಾಂತವೊಂದರ ನಿವಾಸಿಗಳು ಅವನ ಉಪಾಧಿಕಾರಿಗಳ ಬೇಡಿಕೆಗಳನ್ನು ಪೂರೈಸಲು ನಿರಾಕರಿಸಿದಾಗ ಸಿಟ್ಟಿನಿಂದ ಉರಿಯುತ್ತ ಬೇಟೆಗೆಂಬಂತೆ ತನ್ನ ಸೈನ್ಯ ಹೊರಬೀಳಲು ಆಜ್ಞಾಪಿಸಿದ. ಆ ನಾಡಿನ ವ್ಯಾಪಕ ಪ್ರದೇಶವನ್ನು ಸುತ್ತುವರಿದ, ವೃತ್ತವನ್ನು ಮಧ್ಯ ಬಿಂದುವಿನತ್ತ ಒತ್ತುಗೂಡಿಸಿದ ಮತ್ತು ಅದರೊಳಗೆ ಸಿಕ್ಕ ಪ್ರತಿ ಮನುಷ್ಯ ಪ್ರಾಣಿಯನ್ನೂ ಕೊಂದುಹಾಕಿದ. ಈ ವಿನೋದವನ್ನು ಒಂದು ಸಲಕ್ಕಿಂತ ಹೆಚ್ಚು ಪುನರಾವೃತ್ತಿಗೊಳಿಸಲಾಯಿತು. ನಂತರದ ಒಂದು ಸಂದರ್ಭದಲ್ಲಿ ಪುರಾತನ ಹಿಂದೂ ನಗರವಾದ ಕನೌಜದ[14] ನಿವಾಸಿಗಳೆಲ್ಲರ ಸಾಮೂಹಿಕ ಸಂಹಾರಕ್ಕೆ ಆಜ್ಞೆಯಿತ್ತ. ಈ ಭೀಕರತೆಗಳು ಸಹಜವಾಗಿಯೂ ಕ್ಷಾಮಕ್ಕೆ ಎಡೆಮಾಡಿಕೊಟ್ಟವು, ಮತ್ತು ಹಿಂದೂಗಳ ಸಂಕಷ್ಟಗಳು ಹೇಳತೀರದವುಗಳಾಗಿದ್ದವು. ದೇವಗಿರಿಯಿಂದ

ಮರಳಿದ ಒಂದು ಸಂದರ್ಭದಲ್ಲಿ ಕಳಚಿ ಬಿದ್ದ ತನ್ನ ಹಲ್ಲೊಂದನ್ನು ಹೂಳಿಸಿ ಅದರ ಮೇಲೆ ಭವ್ಯ ಗೋರಿ ಕಟ್ಟಿಸಿದ. ಅದು ಭಿರ್‌ನಲ್ಲಿ ಇಂದಿಗೂ ಇದೆ.

ಆದರೆ ಅವನ ಅಮಾನುಷ ವಿಕ್ಷಿಪ್ತತೆಗಳಲ್ಲಿಯೆ ಅತ್ಯಂತ ಜನಜನಿತವಾದು ದೆಂದರೆ ದಿಲ್ಲಿ ಮಹಾನಗರದ ನಿವಾಸಿಗಳನ್ನು ಅವನು ನಡೆಸಿಕೊಂಡ ರೀತಿ. ಮಹಮ್ಮದ ತನ್ನ ರಾಜಧಾನಿಯನ್ನು ದೇವಗಿರಿಗೆ ಸ್ಥಳಾಂತರಿಸಲು ನಿರ್ಧರಿಸಿದ. ಅದರ ಹೆಸರನ್ನೂ ದೌಲತಾಬಾದ ಎಂದು ಬದಲಾಯಿಸಿದ. ಎರಡೂ ಸ್ಥಳಗಳು ಆರುನೂರು ಮೈಲು ದೂರ ಇವೆ. ರಾಜ ದಿಲ್ಲಿಯ ನಿವಾಸಿಗಳೆಲ್ಲ ಕೂಡಲೆ ದೇವಗಿರಿಗೆ ಹೊರಡಬೇಕೆಂಬ ಸಾಮಾನ್ಯ ಆಜ್ಞೆ ನೀಡಿದ ಮತ್ತು ಆಜ್ಞೆ ಹೊರಡಿಸುವ ಮುನ್ನ ಇಡಿ ರಸ್ತೆಗುಂಟ ಪೂರ್ಣ ಬೆಳೆದ ಮರಗಳನ್ನು ನೆಟ್ಟಿದ್ದ. ಅವುಗಳನ್ನು ಆ ಉದ್ದೇಶಕ್ಕಾಗಿ ಬೇರೆ ಕಡೆಗಳಿಂದ ಕಿತ್ತು ತಂದು ನೆಡಲಾಗಿತ್ತು. ನತದೃಷ್ಟ ಜನರಿಗೆ ಆಜ್ಞೆ ಪಾಲಿಸದೆ ಗತ್ಯಂತರವಿಲ್ಲ. ಮಹಿಳೆಯರು, ಮಕ್ಕಳು ಮತ್ತು ವೃದ್ಧರು ಸೇರಿದಂತೆ ಸಹಸ್ರಾರು ಜನ ದಾರಿಯಲ್ಲಿಯೆ ಮೃತಪಟ್ಟರು. ಇದರಿಂದುಂಟಾದ ಭಯಾನಕ ದೃಶ್ಯಗಳ ಪ್ರತ್ಯಕ್ಷದರ್ಶಿಯಾಗಿದ್ದ ಇಬ್ನ್ ಬತೂತಾ ಕೆಳಗಿನ ವರ್ಣನೆ ಯನ್ನು ಬಿಟ್ಟು ಹೋಗಿದ್ದಾನೆ :

"ಸುಲ್ತಾನನು ಎಲ್ಲ ನಿವಾಸಿಗಳೂ ಆ ಸ್ಥಳ (ದಿಲ್ಲಿ) ವನ್ನು ಬಿಡುವಂತೆ ಆಜ್ಞಾಪಿಸಿದ. ಮತ್ತು ಸ್ವಲ್ಪ ವಿಳಂಬ ಕಂಡು ಬಂದಾಗ, ನಗರದ ನಿವಾಸಿ ಯಾವನೆ ಆಗಿರಲಿ ಅದರ ಯಾವುದೆ ಮನೆ ಅಥವಾ ಓಣಿಯಲ್ಲಿ ಕಂಡರೆ ಯೋಗ್ಯ ಶಿಕ್ಷೆ ವಿಧಿಸ ಲಾಗುವುದೆಂದು ಘೋಷಿಸಿದ. ಇದರಿಂದಾಗಿ ಅವರೆಲ್ಲ ಹೊರ ಬಿದ್ದರು. ಆದರೆ ಅವನ ಸೇವಕರು ಒಂದು ಮನೆಯಲ್ಲಿ ಒಬ್ಬ ಕುರುಡನನ್ನು, ಇನ್ನೊಂದರಲ್ಲಿ ಹಾಸಿಗೆ ಹಿಡಿದವ ನನ್ನು ಹುಡುಕಿ ತರಲಾಗಿ ಸಾಮ್ರಾಟನು ಹಾಸಿಗೆ ಹಿಡಿದವನನ್ನು ದಂಡುಕವಣೆಯಿಂದ ಬೀಸಿ ಎಸೆಯುವಂತೆಯೂ ಮತ್ತು ಕುರುಡನನ್ನು ಕಾಲು ಹಿಡಿದು ದೌಲತಾಬಾದಿಗೆ ಎಳೆದೊಯ್ಯುವಂತೆಯೂ ಆಜ್ಞೆಯಿತ್ತ. ಅವನನ್ನು ಹತ್ತು ದಿನಗಳವರೆಗೆ ಹಾಗೆ ಎಳೆದೊಯ್ಯಲಾಯಿತು. ಆದರೆ ಅವನ ಅವಯವಗಳು ದಾರಿಯುದ್ದಕ್ಕೂ ಕಳಚಿಬಿದ್ದು ಉದ್ದೇಶಿತ ಸ್ಥಳಕ್ಕೆ ಅವನ ಒಂದೇ ಒಂದು ಕಾಲನ್ನು ತಂದು ಅದರೊಳಕ್ಕೆ ಎಸೆಯ ಲಾಯಿತು. ಏಕೆಂದರೆ, ಅವರು ಅವನನ್ನು ಆ ಸ್ಥಳಕ್ಕೆ ಒಯ್ಯಬೇಕೆಂದೆ ಆಜ್ಞೆ ಯಾಗಿತ್ತು. ನಾನು ದಿಲ್ಲಿ ಪ್ರವೇಶಿಸಿದಾಗ ಅದು ಹೆಚ್ಚುಕಡಿಮೆ ಮರುಭೂಮಿ ಯಾಗಿತ್ತು."[15]

ಅನತಿ ಕಾಲದ ತರುವಾಯ ಬೇರೆ ಬೇರೆ ಜಿಲ್ಲೆಗಳ ಜನರನ್ನು ದಿಲ್ಲಿಗೆ ಹೋಗಿ ವಾಸಿಸುವಂತೆ ಆಜ್ಞಾಪಿಸಿದುದು ಮಹಮ್ಮದನ ಹುಚ್ಚಾಟದ ನಿರಂಕುಶಪ್ರಭುತ್ವಕ್ಕೆ ಅನುಗುಣವಾದುದೆ ಆಗಿತ್ತು. ಜನರೇನೊ ಹಾಗೆ ಪ್ರಯತ್ನಿಸಿದರಾದರೂ ಯಶ ದೊರೆಯಲಿಲ್ಲ. ಪಾಳುಬಿದ್ದ ಮಧ್ಯಂತರದಲ್ಲಿ ರಾಜನು ತನ್ನ ಅರಮನೆಯ

ಮಾಳಿಗೆಯೇರಿ ನಗರ ಖಾಲಿ ಹಾಗೂ ಬೆಂಕಿ ಅಥವಾ ಹೊಗೆ ಇಲ್ಲದಂತಾಗಿರುವುದನ್ನು ನೋಡಿ "ಈಗ ನನ್ನ ಹೃದಯ ಸಮಾಧಾನಗೊಂಡಿದೆ ಮತ್ತು ನನ್ನ ಭಾವನೆಗಳು ತೃಪ್ತಿಗೊಂಡಿವೆ" ಎಂದು ಉದ್ಗರಿಸಿದನೆಂದು ಇಬ್ನ್ ಬಟೂಟಾ ಹೇಳುತ್ತಾನೆ.

ಇಬ್ನ್ ಬಟೂಟಾ ಈ ರಾಜನ ಆಸ್ಥಾನದ ಸದಸ್ಯನಾಗಿದ್ದ ಮತ್ತು ನ್ಯಾಯವಾದ ತೀರ್ಮಾನಕ್ಕೆ ಬರಲು ಅಗತ್ಯವಾದ ಎಲ್ಲ ಅವಕಾಶ ಅವನಿಗಿತ್ತು. ಅವನು ರಾಜನ ಗುಣಗಳನ್ನು ಹೀಗೆ ಸಂಗ್ರಹಿಸಿ ಹೇಳುತ್ತಾನೆ :

"ಮುಹಮ್ಮದನು ಎಲ್ಲರಿಗಿಂತ ಹೆಚ್ಚಾಗಿ ಕಾಣಿಕೆ ನೀಡಲು ಮತ್ತು ರಕ್ತ ಚೆಲ್ಲಲು ಇಷ್ಟಪಡುತ್ತಾನೆ. ಅವನ ದ್ವಾರದಲ್ಲಿ ಯಾವನೊಬ್ಬ ಫಕೀರ ಶ್ರೀಮಂತನಾದುದನ್ನಾಗಲಿ ಅಥವಾ ಯಾವನೊಬ್ಬ ಕೊಲ್ಲಲ್ಪಟ್ಟುದನ್ನಾಗಲಿ ಯಾವಾಗಲೂ ಕಾಣಬಹುದು. ಅವನ ಔದಾರ್ಯ ಹಾಗೂ ಶೌರ್ಯದ ಗುಣಸ್ವಭಾವಗಳು ಮತ್ತು ಅಪರಾಧಿಗಳ ಬಗೆಗೆ ಅವನ ಕ್ರೌರ್ಯ ಮತ್ತು ಹಿಂಸೆಗಳ ಉದಾಹರಣೆಗಳು ಲೋಕವಿಖ್ಯಾತವಾಗಿವೆ. ತದ್ವಿರುದ್ಧವಾಗಿ ಅವನು ಅತ್ಯಂತ ವಿನಯಶೀಲ ಮತ್ತು ಧರ್ಮಭೀರು ಕೂಡ ಆಗಿರುವನು; ಅವನ ದರಬಾರಿನಲ್ಲಿ ಧಾರ್ಮಿಕ ನೇಮಗಳು ಆಚರಿಸಲ್ಪಡುತ್ತವೆ; ಅವನು ಪ್ರಾರ್ಥನೆಗೆ ಸಂಬಂಧಿಸಿದ ಎಲ್ಲದರ ಬಗೆಗೂ ಅದರ ಲೋಪ ತರುವ ಶಿಕ್ಷೆಯ ಬಗೆಗೂ ಅತ್ಯಂತ ಕಠೋರನಾಗಿದ್ದನು....ಅವನ ಎಲ್ಲಕ್ಕಿಂತ ಎದ್ದು ಕಾಣುವ ಗುಣ ಔದಾರ್ಯ....ಅವನ ಅರಮನೆಯ ದ್ವಾರದಲ್ಲಿ ಕೊಲ್ಲಲ್ಪಟ್ಟ ಯಾವನದಾದರೂ ಹೆಣ ಕಾಣದಿದ್ದುದೆ ವಿರಳ. ಮನುಷ್ಯರನ್ನು ಕೊಂದು ಅವರ ದೇಹಗಳನ್ನು ಅಲ್ಲಿಯೆ ಬಿಸುಟಿದುದನ್ನು ನಾನು ಹಲವಾರು ಸಲ ಕಂಡಿದ್ದೇನೆ. ಒಂದು ದಿನ ನಾನು ಅವನ ಅರಮನೆಗೆ ನಡೆದೆ ಮತ್ತು ನನ್ನ ಕುದುರೆ ಬೆಚ್ಚಿತು. ನನ್ನ ಮುಂದೆ ನೆಲದ ಮೇಲೆ ಒಂದು ರಾಶಿ ಬಿದ್ದಿರುವುದನ್ನು ಕಂಡೆ, ಮತ್ತು ಅದು ಏನೆಂದು ಕೇಳಲಾಗಿ ಅದು ಮೂರು ತುಂಡುಗಳಾಗಿ ಕತ್ತರಿಸಿದ ಮನುಷ್ಯನೊಬ್ಬನ ದಡ ಎಂದು ನನ್ನ ಸಂಗಾತಿ ಹೇಳಿದ....ಪ್ರತಿ ದಿನ ನೂರಾರು ಜನರನ್ನು ಸರಪಳಿಯಲ್ಲಿ ಬಂಧಿಸಿ ಅವನ ಓಲಗಕ್ಕೆ ತರಲಾಗುತ್ತಿತ್ತು. ಅವರ ಕೈಗಳನ್ನು ಕುತ್ತಿಗೆಗೆ ಬಿಗಿಯಲಾಗುತ್ತಿತ್ತು ಮತ್ತು ಅವರ ಕಾಲುಗಳನ್ನು ಕೂಡಿಸಿ ಕಟ್ಟಿರುತ್ತಿತ್ತು. ಕೆಲವರನ್ನು ಕೊಂದರೆ ಮಿಕ್ಕವರನ್ನು ಚಿತ್ರಹಿಂಸೆಗೆ ಗುರಿಪಡಿಸಲಾಗುತ್ತಿತ್ತು ಇಲ್ಲವೆ ಚೆನ್ನಾಗಿ ಬಡಿಯಲಾಗುತ್ತಿತ್ತು".[16]

ದಯೆ, ಔದಾರ್ಯ, ಧಾರ್ಮಿಕ ಉತ್ಕಟತೆಯೊಂದಿಗೆ ಅಂಕೆಯಿಲ್ಲದ ರಕ್ತ ಪಿಪಾಸೆ ಮತ್ತು ಜೀವ ತೆಗೆಯುವ ಸ್ಪಷ್ಟಗೋಚರ ಬಯಕೆ ಮುಂತಾದ ಪರಸ್ಪರ ವಿರೋಧಿ ಗುಣಗಳುಳ್ಳ ವ್ಯಕ್ತಿ ಹಿಂದೂ ಆದರ್ಶಗಳಿಗೆ ತದ್ವಿರುದ್ಧವಾದ ಮತ್ತು ಅತ್ಯಂತ ವಿಕೃತವಾದ ಸ್ವಭಾವವನ್ನು ಪಡೆದಿರುತ್ತಾನೆ. ಹೀಗಾಗಿ, ಅವನನ್ನು ಅತಿಮಾನವ, ರಾಕ್ಷಸ, ಸೈತಾನನ ಹೃದಯವಿದ್ದ ಸಂತ ಅಥವಾ ಸಂತನ ಹೃದಯವಿದ್ದ ಪಿಶಾಚಿ ಎಂದು ಅವಶ್ಯಕವಾಗಿಯೆ ಪರಿಗಣಿಸಬೇಕಾಗುತ್ತದೆ. ಆದುದರಿಂದ,

ಮುಹಮ್ಮದನ ಮರಣದ ಶತಮಾನಗಳ ನಂತರವೂ ಅವನ ನೆನಪಿನ ಸುತ್ತ ಪೌರ್ವಾತ್ಯ ಕಲ್ಪನೆ ಹೆಣೆಯುಬಲ್ಲ ಎಲ್ಲ ವಿಚಿತ್ರ ಕತೆಗಳೂ ಕುತೂಹಲಕಾರಕ ದಂತಕತೆಗಳೂ ಸುತ್ತಿಕೊಂಡವು. ಪುರಾತನ ಚರಿತ್ರಕಾರರು ಅವನ ಹೆಸರು ಉಲ್ಲೇಖಿಸಿದಾಗಲೆಲ್ಲ ಯಾವಾಗಲೂ ಅದರೊಂದಿಗೆ ಒಂದು ಅಸಾಧಾರಣ ಕತೆ ಜೋಡಿಸಿಯೆ ಹೇಳುತ್ತಾರೆ.

ಆದುದರಿಂದ, ನೂನಿಜ್ ಮುಖ್ಯಾಂಶಗಳಲ್ಲಿ ನಿಖರವಾಗಿದ್ದರೂ ತನ್ನ ಆರಂಭ ವಾಕ್ಯದಲ್ಲಿ ಒಂದು ಶತಮಾನ ಹಿಂದೆ ಇದ್ದಾನೆ. ಅವನ "ತಗಾಜ ಮ್ಯಾಮೀದ್" ಮುಹಮ್ಮದ ತಘಲಕ್ ಅಲ್ಲದೆ ಬೇರಿನ್ನಾರೂ ಇರಲು ಸಾಧ್ಯವಿಲ್ಲ.

ಇನ್ನು ಮುಂದೆ ಹೀಗೆಯೆ ಭಾವಿಸಲಾಗುವುದು.[17]

---

1 ಪರಂಪರೆಯನುಸಾರ, ಒಯ್ಯಲಾದ ಸಂಪತ್ತು ಅತ್ಯದ್ಭುತವಾಗಿತ್ತು. ಪರಿಶಿಷ್ಟ ಬ ನೋಡಿರಿ.

2 ಆನೆಗುಂದಿಯ ಮೇಲ್ಕೋಟೆಯ ಗುಡ್ಡಗಳಲ್ಲಿ ಮತ್ತು ಕಡಿದಾದ ಬಂಡೆಗಳಲ್ಲಿ ಹದಿನಾಲ್ಕನೆಯ ಶತಮಾನಕ್ಕಿಂತ ಬಹು ಪ್ರಾಚೀನ ದಿನಾಂಕದ ಅವಶೇಷಗಳು ದೊರೆಯುುವ ಅಧಿಕ ಸಾಧ್ಯತೆಯುಂಟು. ಇದುವರೆಗೆ ಈಗಿನ ಹೈದರಾಬಾದ ಪ್ರದೇಶಗಳಲ್ಲಿರುವ ಆ ಪ್ರದೇಶದ ವೈಜ್ಞಾನಿಕ ಪರೀಕ್ಷಣೆಯನ್ನು ಮಾಡದಿರುವುದು ವಿಷಾದನೀಯ. ನದಿಯ ಉತ್ತರಕ್ಕೆ ಯಾವುದೇ ಶೋಧನೆಯನ್ನು ಮಾಡದಿರಲು ವಿರಾಮದ ಅಭಾವ ಕಾರಣವಾಯಿತು. ಆದರೆ, ವಿಜಯನಗರದ ದಕ್ಷಿಣ ಭಾಗದ ಎತ್ತರದಿಂದ ನಾನು ಎದುರಿಗಿರುವ ಗುಡ್ಡಗಳ ಮೇಲೆ ಗೋಚರಿಸುವ ಕೋಟೆಗಳ ಉದ್ದ ಸಾಲುಗಳನ್ನು ಹಲವಾರು ಬಾರಿ ಆಶೆಗಣ್ಣುಗಳಿಂದ ನೋಡಿದ್ದೇನೆ. ಕೋಟೆಗಳ ಬಾಹ್ಯತಮ ಸಾಲು ಸುತ್ತುವರಿದ ಎಲ್ಲ ಪ್ರದೇಶವನ್ನು ತೋರಿಸುವ ಮತ್ತು ಕೋಟೆಯ ಮುಂಗಟ್ಟಡ ಹಾಗೂ ಹೊರಗೇರಿಗಳನ್ನು ಒಳಗೊಂಡ, ವಿಜಯನಗರ ಹಾಗೂ ಅದರ ನೆರೆಹೊರೆಯ ಸಮಗ್ರ ಭೂಪಟವನ್ನು ಮದ್ರಾಸ ಸರಕಾರ ಅನತಿ ಕಾಲದಲ್ಲಿ ನಮ್ಮ ವಶದಲ್ಲಿ ಇಡುವದೆಂದು ಆಶಿಸೋಣ.

3 ನೂನಿಜ್ ಕಾಲವನ್ನು ೧೨೩೦ ಎಂದು ತಪ್ಪಾಗಿ ನೀಡುತ್ತಾನೆ. ಆ ತಪ್ಪಿನ ಬಗೆಗೆ ಮುಂದೆ ಹೇಳಲಾಗುವುದು.

4 ಸ್ಕಾಟ್ ೧, ೪೫, ೪೬

5 ದಿಲ್ಲಿ

6 ಪೋರ್ಚುಗೀಜ ಇತಿಹಾಸಕಾರರು ಅನೇಕ ಸಲ "ಕ್ಯಾಂಬೆ" ಎನ್ನುವುದು ಪ್ರದೇಶದ ಹೆಸರೆಂದು ಮತ್ತು ಗುಜರಾತ ಅವರ ಆಶ್ರಿತ ರಾಜ್ಯವೆಂದು ತಪ್ಪಾಗಿ ಗ್ರಹಿಸಿದರು.

7 ಈ ಪ್ರಕಾರ, ಇದರ ಅರ್ಥ ಅಸ್ಪಷ್ಟವಾಗಿದೆ.

8 ಸ್ಪಷ್ಟಗೋಚರವಾಗಿರುವಂತೆ ಇಲ್ಲಿ ಮುಹಮ್ಮದ ತಘಲಕ್‌ನ ಸಾಹಸದ ಕತೆಗಳು ಮತ್ತು ಬಹಳ ಪ್ರಾಚೀನ ರಾಮನ ಸೇತುವೆ ಮತ್ತು ಅವನ ವಾನರ ಸೇನೆಯ ಪುರಾಣ ಕತೆಗಳ ಮಧ್ಯೆ ಗಲಿಬಿಲಿ ಇದೆ.

9 ಮಲಿಕ್ ಸಾಯಿಬ್ (ಕೆಳಗಿನ ದಿನಚರಿ ನೋಡಿರಿ, ಪು. ೨೯೬, ೨೯೭)

10 "ಮಾನ್ಯರಾದ" ಎಂದರೆ ಬಹುಶಃ ಇತಿಹಾಸಕಾರ ಬ್ಯಾರೊಸ್ (ಮುನ್ನುಡಿ ನೋಡಿರಿ).

11 ಪರ್ಶಿಯಾದಲ್ಲಿ ಶೇಖ್ ಇಸ್ಮಾಯಿಲ್‌ನ ಅಧಿಪತ್ಯ ಹದಿನಾರನೆಯ ಶತಮಾನದ ಆದಿಭಾಗದಿಂದ ಆರಂಭಿಸುತ್ತದೆ. ೧೫೧೪ರಲ್ಲಿ ಭಾರತದಲ್ಲಿದ್ದ ಹಾಗೂ ೧೫೧೬ರಲ್ಲಿ ಬರೆದ ಡುಆರ್ಟ್ ಬರ್ಬೋಸಾ ಅವನನ್ನು ತನ್ನ ಸಮಕಾಲೀನನೆಂದು ಉಲ್ಲೇಖಿಸುತ್ತಾನೆ. ಅವನು ಆ ಸಮಯಕ್ಕೆ ಪೂರ್ವ ಪರ್ಶಿಯಾವನ್ನು ಅಧೀನಪಡಿಸಿಕೊಂಡಿದ್ದ ಮತ್ತು ಶಿಯಾ ಧರ್ಮವನ್ನು ಸ್ಥಾಪಿಸಿದ. ಬರ್ಬೋಸಾ ಹೀಗೆ ಬರೆಯುತ್ತಾನೆ : "ಅವನು ಮುಸ್ಲಿಮ್ ಹಾಗೂ ತರುಣ", ಮತ್ತು ಅವನು ರಾಜಕುಲದವನಲ್ಲವೆಂದು ಹೇಳುತ್ತಾನೆ (ಹ್ಯಾಕ್ಲುಟ್ ಆವೃತ್ತಿ, ಪು. ೩೮). ಹೀಗೆ ನೂನಿಜ್ ಅಸಂಗತಿಯ ತಪ್ಪು ಮಾಡಿದನು, ಆದರೆ ಅವನು ತನಗೆ ಗೊತ್ತಿದ್ದ ಪರ್ಶಿಯಾವನ್ನು ವರ್ಣಿಸುತ್ತಾನೆ.

12 ಎಡ್ವರ್ಡ್ ಥಾಮಸ್ ಬರೆದ "ಕ್ರಾನಿಕಲ್ ಆಫ್ ದ ಪಠಾನ್ ಕಿಂಗ್ಸ್ ಆಫ್ ದೆಹ್ಲಿ", ಪು. ೨೮೦

13 ಫಿರಿಸ್ತಾ (ಬ್ರಿಗ್ಸ್, ೧,೪೧೩).

14 ಎಲ್ಫಿನ್‌ಸ್ಟನ್, "ಹಿಸ್ಟರಿ ಆಫ್ ಇಂಡಿಯಾ", ೨, ೬೨-

15 ಲೀ ಯ ಅನುವಾದ, ಪು. ೧೪೪

16 ಸರ್. ಎಚ್. ಈಲಿಯಟ್‌ನ "ಹಿಸ್ಟರಿ ಆಫ್ ಇಂಡಿಯಾ, ೪, ಪು ೨೧೫.

17 ಕೃಷ್ಣದೇವರಾಯ (ಕ್ರಿಸ್ನರಾವ್)ನ ಹಿಂದೆ ಆಗಿಹೋದ ನೂನಿಜ್ ಹೇಳಿದ ಎಲ್ಲ ವಿಜಯನಗರದ ರಾಜರ ಆಳ್ವಿಕೆಯ ವರ್ಷಗಳನ್ನು ಕೂಡಿಸಿದರೂ ಬೇರೀಜು ೧೬೮ (ಸೆನೊರ್ ಲೊಪ್ಸ್, ಪೀಠಿಕೆ, ಪು ixx) ಆಗುತ್ತದೆ, ಕೃಷ್ಣದೇವರಾಯನ ಆಳಿಕೆಯ ಆರಂಭವರ್ಷ ಕ್ರಿ. ಶ. ೧೫೦೯-೧೦ ಎಂದು ಗೊತ್ತಾಗಿದೆ, ಅದರಿಂದ ದಿನಚರಿಯನ್ವಯ "ದೇ ಹೊರಾವ್" ಎಂಬ ವ್ಯಕ್ತಿಯಿಂದ ಸಾಮ್ರಾಜ್ಯದ ಸ್ಥಾಪನೆ ಕ್ರಿ. ಶ. ೧೩೩೯-೪೦ರಲ್ಲಿ ಆಯಿತೆಂದು ತಿಳಿಯುತ್ತದೆ. ಇದು ನಿಖರವಲ್ಲ. ಆದರೆ, "೧೨೩೦" ಒಂದು ಶತಮಾನ ತೀರ ಮುಂಚಿತವಾದುದೆಂದು ಸಿದ್ಧಪಡಿಸಲು ಆದು ಸಹಾಯಕವಾಗುತ್ತದೆ.

೦

ಅಧ್ಯಾಯ ೨

# ಸಾಮ್ರಾಜ್ಯದ ಮೂಲ (ಕ್ರಿ.ಶ. ೧೩೩೬)

**ಮುಹಮ್ಮದನಿಂದ ಕಂಪ್ಲಿ ಮತ್ತು ಆನೆಗುಂದಿಗಳ ಸ್ವಾಧೀನ–ಅವನ ಸೋದರಳಿಯ ಬಹಾಉದ್ದೀನನ ಮರಣ–ಮಲಿಕ್ ನಾಯಿಬ್ ಆನೆಗುಂದಿಯ ಮಂಡಲಾಧಿಪತಿಯಾಗಿ ನೇಮಕ–ಗಲಭೆ–ಆನೆಗುಂದಿಯ ರಾಜನಾಗಿ ಹರಿಹರ ದೇವನ ಏರಿಕೆ–ಮಾಧವಾಚಾರ್ಯ ವಿದ್ಯಾರಣ್ಯ–ವಿಜಯನಗರ ನಗರದ ಸ್ಥಾಪನೆ–ಹೊಸ ರಾಜ್ಯದ ಬಗೆಗಿನ ವದಂತಿಗಳು.**

ಈಗಾಗಲೆ ಹೇಳಿರುವಂತೆ ವಿಜಯನಗರ ನಗರ ೧೩೩೬ರಲ್ಲಿ ಸ್ಥಾಪಿಸಲ್ಪಟ್ಟಿತೆಂದು ಸಾಮಾನ್ಯವಾಗಿ ಗ್ರಹಿಸಲಾಗುತ್ತದೆ. ಆ ತೇದಿ ಸತ್ಯಕ್ಕಿಂತ ಬಹಳ ದೂರ ವಿಲ್ಲೆಂಬುದನ್ನು ಎರಡು ಸಂಗತಿಗಳಿಂದ ಅರಿಯಬಹುದು. ಮೊದಲಿಗೆ, ಪ್ರಪ್ರಥಮ ನಿಜವಾದ ಇಬ್ನ್ ಬತೂತಾನ[1] "ಹರಾಇಬ್" ಅಂದರೆ ಮೊದಲನೆಯ ಹರಿಹರ ಅಥವಾ ಹರಿಯಪ್ಪನ ಶಾಸನವೊಂದು ಲಭ್ಯವಿದೆ. ಅದರ ಕಾಲ ಕ್ರಿ.ಶ. ೧೩೪೦. ಎರಡನೆಯದಾಗಿ, ಆ ಲೇಖಕ ನೀಡಿದ ಮುಹಮ್ಮದ ತಘಲಕ್‌ನ ದಕ್ಷಿಣಾಭಿಮುಖಿ ದಂಡಯಾತ್ರೆ, ನೂನಿಜ್ ದಿನಚರಿಯ ಆರಂಭಕ್ಕೆ ಕೊಟ್ಟಿರುವ ಕತೆಯೊಂದಿಗೆ ಎಲ್ಲ ಅಂಶಗಳಲ್ಲೂ ಸರಿಹೊಂದುತ್ತದೆ. ಈ ದಂಡಯಾತ್ರೆ ೧೩೩೪ರಲ್ಲಿ ಜರುಗಿತು.[2]

ಏಕೆಂದರೆ, ವಿಜಯನಗರದ ಸ್ಥಾಪನೆಗೆ ಕಾರಣವಾದ ಅದಕ್ಕಿಂತ ಹಿಂದಿನ ಘಟನೆಗಳನ್ನು ಕುರಿತು ಬತೂತಾನ ಕಥನ ಹಾಗೂ ನೂನಿಜ್‌ನ ಪರಂಪರಾಗತ ವೃತ್ತಾಂತಗಳನ್ನು ಹೋಲಿಸಿ ನೋಡಿದರೆ ಅವೆರಡೂ ಒಂದೇ ಘಟನೆಗೆ ಸಂಬಂಧಿಸಿದವು ಎಂಬುದರ ಬಗೆಗೆ ಸಂದೇಹ ಉಳಿಯದು. ಇಬ್ನ್ ಬತೂತಾನ[3] ಪ್ರಕಾರ ಸುಲ್ತಾನ ಮುಹಮ್ಮದ ದಕ್ಷಿಣಕ್ಕೆ ದಂಡೆತ್ತಿ ಹೋದುದು ಅವನು ಬಂಡುಖೋರ ಸೋದರಳಿಯ ಬಹಾಉದ್ದೀನ ಘುಶ್ತಾಸ್ಪನ ವಿರುದ್ಧ. ಅವನು ಪರ್ವತ ಮಧ್ಯದಲ್ಲಿ ಪ್ರಬಲ ನೆಲೆ ಸ್ಥಾಪಿಸಿಕೊಂಡಿದ್ದ ಕಂಬಿಲದ, ಅಥವಾ ಫಿರಿಸ್ತಾ ಕರೆಯುವಂತೆ ಕಂಪಿಲದ, ರಾಯನ ಆಶ್ರಯಕ್ಕೆ ಓಡಿದ್ದ. "ರಾಯ" ಎಂಬ ಪದವಿ ನಿಸ್ಸಂಶಯವಾಗಿಯೂ ಕನ್ನಡ ನಾಡನ್ನು ಸೂಚಿಸುತ್ತದೆ ಅಲ್ಲಿ "ರಾಯ" ಎಂಬ ರೂಪವನ್ನು "ರಾಜ" ಎಂಬ ಪದಕ್ಕೆ ಬಳಸಲಾಗುತ್ತಿದೆ. ಅಲ್ಲದೆ, ವಿಜಯನಗರ ಅರಸರ ಪೂರ್ವಜರ ದುರ್ಗವಾಗಿದ್ದ ಆನೆಗುಂದಿಯಿಂದ ಎಂಟು ಮೈಲು ಪೂರ್ವಕ್ಕಿರುವ ಕೋಟೆಯುಳ್ಳ ಹಳೆಯ ಪಟ್ಟಣವಾದ ಕಂಪ್ಲಿಯ ಕಂಬಿಲ ಅಥವಾ ಕಂಪಿಲ ಎಂಬುದನ್ನು ಗುರುತಿಸ

ಬಹುದು. ಪ್ರತ್ಯಕ್ಷವಾಗಿ "ಪರ್ವತಗಳ ಮಧ್ಯ"ದಲ್ಲಿರದಿದ್ದರೂ ಸಹ ಕಂಪ್ಲಿಯ ಬೆನ್ನಿಗೆ ಕಲ್ಲಿನ ಗುಡ್ಡಗಳ ರಾಶಿಯಿದೆ. ಅದರ ಮಧ್ಯದಲ್ಲಿಯೆ ತರುವಾಯದಲ್ಲಿ ಆ ಮಹಾ ನಗರವನ್ನು ನೆಲೆಗೊಳಿಸಲಾಯಿತು. ಸುಲ್ತಾನನು ದಾಳಿ ಮಾಡಿದಾಗ "ರಾಯ" ಕಂಪ್ಲಿ ಬಿಟ್ಟು ಆನೆಗುಂದಿಯ ಎತ್ತರದ ಕೋಟೆಗಳಲ್ಲಿ ರಕ್ಷಣೆ ಪಡೆಯುತ್ತಿದ್ದನೆಂದು ಬಗೆಯುವುದು ತೀರ ಸಹಜ, ಮೊದಲಿನ ಸ್ಥಾನಕ್ಕಿಂತ ಅಲ್ಲಿ ತನ್ನನ್ನು ಯಶಸ್ವಿಯಾಗಿ ರಕ್ಷಿಸಿಕೊಳ್ಳಲು ಹೆಚ್ಚಿನ ಅವಕಾಶವಿತ್ತು. ಇಬ್ಬರು ಚರಿತ್ರಕಾರರು ನೀಡಿದ ಹೆಸರುಗಳಲ್ಲಿನ ವ್ಯತ್ಯಾಸಕ್ಕೆ ಇದು ಕಾರಣವಿರಬಹುದು. ರಾಯ ತನ್ನ ಅತಿಥಿಯನ್ನು ಸುರಕ್ಷಿತವಾಗಿ ತನ್ನ ನೆರೆಯ ರಾಜನಲ್ಲಿಗೆ—ಬಹುಶಃ ಆಗ ತಾನೂರಿನಲ್ಲಿದ್ದ ಮೈಸೂರಿನ ದ್ವಾರ ಸಮುದ್ರದ ರಾಜ ಹೊಯ್ಸಳ ಬಲ್ಲಾಳನಲ್ಲಿಗೆ—ಕಳಿಸಿಕೊಟ್ಟನೆಂದು ಇಬ್ನ್ ಬತೂತಾ ಹೇಳುತ್ತ ಮುಂದುವರಿಯುತ್ತಾನೆ. ಅವನು ದೊಡ್ಡದಾದ ಅಗ್ನಿಯನ್ನು ಹೊತ್ತಿಸಿದ. ಅದರಲ್ಲಿ ಅವನ ಹೆಂಡತಿಯರು, ಸರದಾರರ, ಮಂತ್ರಿಗಳ, ಪ್ರಮುಖರ ಹೆಂಡತಿಯರು ಪ್ರವೇಶಿಸಿ ಅಸುನೀಗಿದರು. ನಂತರ ಅವನು ತನ್ನ ಅನುಯಾಯಿಗಳೊಂದೊಡಗೂಡಿ ದಾಳಿಗಾರರನ್ನು ಎದುರಿಸಲು ಹೊರಟು ಕೊಲ್ಲಲ್ಪಟ್ಟನು. ಪಟ್ಟಣವನ್ನು ವಶಪಡಿಸಿಕೊಳ್ಳಲಾಯಿತು, ಮತ್ತು "ರಾಯನ ಹನ್ನೊಂದು ಪುತ್ರರನ್ನು ಸೆರೆಯಾಳಾಗಿಸಿ ಸುಲ್ತಾನನಲ್ಲಿಗೆ ಒಯ್ಯಲಾಯಿತು. ಅವನು ಅವರನ್ನೆಲ್ಲ ಮುಸಲ್ಮಾನರನ್ನಾಗಿ ಮಾಡಿದನು." ಪಟ್ಟಣದ ಪತನದ ತರುವಾಯ ಸುಲ್ತಾನನು "ಅವರ ತಂದೆಯ ವರ್ತನೆಯನ್ನು ಮೆಚ್ಚಿಕೊಂಡಷ್ಟೇ ಅವರ ಉನ್ನತ ಜನ್ಮದ ಕಾರಣದಿಂದಾಗಿಯೂ ರಾಜನ ಪುತ್ರರೊಂದಿಗೆ ಗೌರವದಿಂದ ನಡೆದುಕೊಂಡ" ; ಮತ್ತು ಇವರಲ್ಲೊಬ್ಬನೊಂದಿಗೆ ತನಗೆ ನಿಕಟ ಪರಿಚಯವಾಯಿತೆಂದೂ ಬೂತೂತಾ ಹೇಳುತ್ತಾನೆ.— "ನಾವು ಸಂಗಾತಿಗಳು ಮತ್ತು ಗೆಳೆಯರಾಗಿದ್ದೆವು."

ಈ ಕಥನ ಮತ್ತು ನೂನಿಜ್ ನೀಡಿರುವ ಪರಂಪರಾಗತ ಹಿಂದೂ ವೃತ್ತಾಂತದ ಮಧ್ಯೆ ಎರಡು ಮುಖ್ಯವಾದ ಅಂಶಗಳಲ್ಲಿ ಮಾತ್ರ ವ್ಯತ್ಯಾಸವಿದೆ. ಇವುಗಳಲ್ಲೊಂದು ಸುಲ್ತಾನನ ದಾಳಿಯ ಕಾರಣಕ್ಕೆ ಸಂಬಂಧಿಸಿದುದು. ಹಿಂದೂಗಳ ಪ್ರಕಾರ ಗೆಲ್ಲುವ ಲೋಭದಿಂದ ದಾಳಿಯನ್ನು ಕೈಕೊಳ್ಳಲಾಯಿತು. ಮಹಮ್ಮದೀಯ ಕಥೆಯ ಪ್ರಕಾರ ಅದು ಬಂಡುಖೋರನ ವಿರುದ್ಧ ಮಾಡಿದ ದಂಡಯಾತ್ರೆಯಾಗಿತ್ತು. ಎರಡನೆಯದಾಗಿ, ರಾಜವಂಶದವರಾರೂ ಪಾರಾಗಲಿಲ್ಲವೆಂದು ಹಿಂದೂಗಳು ಸಾರಿದರೆ ಇಬ್ನ್ ಬತೂತಾ ಹನ್ನೊಂದು ಪುತ್ರರು ಬದುಕುಳಿದುದನ್ನು ಸ್ಪಷ್ಟವಾಗಿ ಹೇಳುತ್ತಾನೆ ಮತ್ತು ತನ್ನ ಮಾತನ್ನು ನಿರ್ವಿವಾದವಾಗಿ ಸಿದ್ಧಪಡಿಸುತ್ತಾನೆ. ತೇದಿಗಳ ಮೇಳವಿಕೆಯಿಂದಾಗಿ ಅವು ಎರಡು ಪ್ರತ್ಯೇಕ ಘಟನೆಗಳಿಗೆ ಸಂಬಂಧಿಸಿವೆಯೆಂದು ನಂಬಲಸಾಧ್ಯವಾದರೂ ಆ ವ್ಯತ್ಯಾಸ ಎರಡೂ ವೃತ್ತಾಂತಗಳ ಸಾಮಾನ್ಯ ಹೋಲಿಕೆಯನ್ನು ಕಲುಷಿತಗೊಳಿಸುವುದಿಲ್ಲ. ಹನ್ನೊಂದು ಮಕ್ಕಳು ಇಸ್ಲಾಮದ

ಅನುಯಾಯಿಗಳಾದುದರಿಂದ ಸಂಪ್ರದಾಯನಿಷ್ಠ ಹಿಂದೂಗಳ ವೃತ್ತಾಂತದಿಂದ ಅವರನ್ನು ಅಳಿಸಿಹಾಕಲಾಯಿತೆಂದು ಊಹಿಸಬಹುದು.

ಇಬ್ನ್ ಬತೂತಾನ ಪ್ರಕಾರ, ಕೋಟೆಯ ಸ್ವಾಧೀನಾನಂತರ ಸುಲ್ತಾನನು ಬಹಾಉದ್ದೀನನನ್ನು ದಕ್ಷಿಣದ ಕಡೆಗೆ ಬೆನ್ನಟ್ಟುತ್ತ ಅವನಿಗೆ ಆಶ್ರಯವಿತ್ತಿದ್ದ ರಾಜನ ನಗರದ ಹತ್ತಿರ ಬಂದನು. ಆ ರಾಜ ತನ್ನ ಅತಿಥಿಯನ್ನು ನಿರಂಕುಶ ಪ್ರಭುವಿನ ಕೋಮಲ ಕರುಣೆಗೆ ಬಿಟ್ಟುಕೊಟ್ಟ. ನಿರಂಕುಶಪ್ರಭು ಅವನನ್ನು ಪೈಶಾಚಿಕ ಕ್ರೌರ್ಯದ ಮರಣಕ್ಕೆ ಗುರಿಪಡಿಸಿದ.

"ಸುಲ್ತಾನನು ಸೆರೆಯಾಳನ್ನು ಅವನ ಸಂಬಂಧಿಕರಾದ ಸ್ತ್ರೀಯರಲ್ಲಿಗೆ ತೆಗೆದುಕೊಂಡು ಹೋಗುವಂತೆ ಆಜ್ಞಾಪಿಸಿದ. ಅವರು ಅವನನ್ನು ಅವಮಾನಗೊಳಿಸಿದರು ಮತ್ತು ಅವನ ಮೇಲೆ ಉಗಿದರು. ನಂತರ ಜೀವಂತವಾಗಿ ಅವನ ಚರ್ಮ ಸುಲಿಯಲು ಆಜ್ಞಾಪಿಸಿದ. ಅವನ ಚರ್ಮ ಅಲ್ಲಲ್ಲಿ ಹರಿದು ಹೋಗಿದ್ದುದರಿಂದ ಅವನ ಮಾಂಸವನ್ನು ಅನ್ನದೊಂದಿಗೆ ಬೇಯಿಸಲಾಯಿತು. ಕೆಲವು ಭಾಗವನ್ನು ತನ್ನ ಮಕ್ಕಳು ಮತ್ತು ಹೆಂಡತಿಗೆ ಕಳಿಸಲಾಯಿತು, ಮತ್ತು ಮಿಕ್ಕುದನ್ನು ದೊಡ್ಡ ಪಾತ್ರೆಯಲ್ಲಿಟ್ಟು, ಆನೆಗಳಿಗೆ ತಿನ್ನಲು ಇಡಲಾಯಿತು. ಆದರೆ ಅವು ಅದನ್ನು ಮುಟ್ಟಲಿಲ್ಲ. ಸುಲ್ತಾನನು ಬಹಾದುರ ಬರಾನ[4] ಅವಶೇಷಗಳೊಂದಿಗೆ ಇಡಲು ಮತ್ತು ದೇಶದ ತುಂಬ ಪ್ರದರ್ಶಿಸಲು ಅವನ ಚರ್ಮವನ್ನು ಒಣ ಹುಲ್ಲಿನಿಂದ ತುಂಬಿ ಸಜ್ಜುಗೊಳಿಸುವಂತೆ ಆಜ್ಞೆಯಿತ್ತ."

ನೂನಿಜ್ ನೀಡಿದ ಕತೆಯನ್ನು ಸಂಕ್ಷಿಪ್ತವಾಗಿ ಮುಂದುವರಿಸೋಣ. ೧೩೩೪ರಲ್ಲಿ ಆನೆಗುಂದಿಯ ಸ್ವಾಧೀನದ ತರುವಾಯ ಸುಲ್ತಾನನು ಮಲಿಕ್ ನಾಯಿಬ್ (ಅವನನ್ನು ನೂನಿಜ್ ತನ್ನ ಎರಡನೆಯ ಅಧ್ಯಾಯದಲ್ಲಿ ಎನಿಬಿಕ್ವಿಮೆಲಿ ಎಂದೂ ಮೂರನೆಯ ಅಧ್ಯಾಯದಲ್ಲಿ ಮಿಲೀಕ್ ನಬಿ,ಮೆಲಿಕ್ವಿನಿಬಿ ಹಾಗೂ ಮೆಲಿನೆಬಿಕ್ವಿ ಎಂದೂ ಕರೆದಿದ್ದಾನೆ)ನನ್ನು ಸ್ಥಳೀಯ ಮಂಡಲಾಧಿಪತಿಯಾಗಿ ನಿಯಮಿಸಿ ಉತ್ತರಕ್ಕೆ ಮರಳಿದ. ಆ ನಾಡು ದುರಾಕ್ರಮಿಗಳ ವಿರುದ್ಧ ಬಂಡೆದ್ದಿತು. ಸ್ವಲ್ಪ ಕಾಲದ ನಂತರ ಸುಲ್ತಾನನು ಆ ಪಾಳೆಯಪಟ್ಟನ್ನು ಹಿಂದೂಗಳಿಗೆ ತಿರುಗಿ ಒಪ್ಪಿಸಿದ. ಆದರೆ, ಮೊದಲಿನ ಪ್ರಧಾನಿ ದೇವರಾಯ (ನೂನಿಜ್ ಇವನನ್ನು ದೇವ್‌ರಾವ್ ಅಥವಾ ಡೇಹೊರಾವ್ ಎಂದು ಕರೆಯುತ್ತಾನೆ) ನನ್ನು ರಾಯಮಟಕ್ಕೆ ಏರಿಸುವ ಮೂಲಕ ಹೊಸ ಉಪಕ್ರಮ ಹಾಕಿದ. ತನ್ನ ಆಳ್ವಿಕೆಯಲ್ಲಿ ಈ ಪ್ರಧಾನಿ ಒಂದು ದಿನ ನದಿಯ ದಕ್ಷಿಣಕ್ಕಿರುವ ಗುಡ್ಡಗಳಲ್ಲಿ ಬೇಟೆಯಾಡುತ್ತಿದ್ದಾಗ ಒಂದು ಮೊಲ ನಾಯಿಗಳಿಂದ ದೂರ ಓಡಿಹೋಗುವ ಬದಲು ಅವುಗಳೆಡೆಗೆ ಧಾವಿಸಿ ಅವುಗಳನ್ನು ಕಚ್ಚಿತು.[5] ಈ ಚಮತ್ಕಾರದಿಂದ ಅಚ್ಚರಿಗೊಂಡ ರಾಜ ವಿಚಾರಮಗ್ನನಾಗಿ ಮನೆಗೆ ಮರಳು

ತ್ತಿದ್ದಾಗ ನದಿತೀರದಲ್ಲಿ ಋಷಿ ಮಾಧವಾಚಾರ್ಯರನ್ನು ಭೆಟ್ಟಿಯಾದ. ಅವರಿಗೆ ವಿದ್ಯಾರಣ್ಯ ಅರ್ಥಾತ್ "ವಿದ್ಯೆಯ ಅರಣ್ಯ" ಎಂಬ ಅಭಿದಾನವಿತ್ತೆಂಬುದು ಇತರ ಮೂಲಗಳಿಂದ ವಿದಿತವಾಗುತ್ತದೆ. ಅವರು ಆ ಸ್ಥಳದಲ್ಲಿ ನಗರವೊಂದನ್ನು ಸ್ಥಾಪಿಸುವಂತೆ ರಾಜನಿಗೆ ಉಪದೇಶಿಸಿದರು. "ರಾಜ ಹಾಗೆಯೆ ಮಾಡಿದ, ಮತ್ತು ಅಂದಿನಿಂದಲೆ ಮನೆಗಳನ್ನು ನಿರ್ಮಿಸಲುದ್ಯುಕ್ತನಾದ ಮತ್ತು ಅವನು ನಗರದ ಸುತ್ತ ಕೋಟೆ ಕಟ್ಟಿದ. ಅದಾದ ಮೇಲೆ ಅವನು ನಾಗುಂಡಿಮ್ ಬಿಟ್ಟ ಮತ್ತು ಬೇಗನೆ ಹೊಸ ನಗರವನ್ನು ಜನರಿಂದ ತುಂಬಿಸಿದ. ಮತ್ತು ಅವನು ಅದಕ್ಕೆ ವಿದ್ಯಾಜುನ ಎಂದು ಹೆಸರಿಟ್ಟ. ಏಕೆಂದರೆ ಅವನಿಗೆ ಅದನ್ನು ಕಟ್ಟಿಸಲು ಹೇಳಿದ ಸನ್ಯಾಸಿ ತನ್ನನ್ನು ಹಾಗೆಯೆ ಕರೆದುಕೊಂಡಿದ್ದ".[6]

ಹೀಗೆ, ಮುಂದೆ ಭವ್ಯವಾಗಿ ಬೆಳೆದ ಮತ್ತು ಸುವಿಖ್ಯಾತವಾದ ಆ ಶ್ರೇಷ್ಟ ನಗರ ಕ್ರಿ.ಶ. ೧೩೩೬ರಲ್ಲಿ ಅಥವಾ ಆ ಸುಮಾರಿಗೆ ಹುಟ್ಟಿಕೊಂಡಿತು.

ಋಷಿಯ ಗೌರವಕ್ಕಾಗಿ ವಿಜಯನಗರ ನಗರದಲ್ಲಿ ರಾಜ ಭವ್ಯವಾದ ದೇವಾಲಯ ಕಟ್ಟಿಸಿದನೆಂದೂ ದಿನಚರಿ ಮುಂದುವರಿದು ಹೇಳುತ್ತದೆ. ಹಂಪಿ ಅಥವಾ ಹಂಪೆಯ ದೇವಾಲಯವೆಂದು ಪರಿಚಿತವಿರುವ, ಇನ್ನೂ ಬಳಕೆಯಲ್ಲಿರುವ, ತನ್ನ ಸುತ್ತ ಗುಂಪುಗೂಡಿದ ಚಿಕ್ಕ ಗ್ರಾಮವುಳ್ಳ, ನದಿಗೆ ಸಮೀಪವಿರುವ ದೊಡ್ಡ ದೇವಾಲಯವೇ ಇದು ಎಂದು ನಾನು ಗ್ರಹಿಸುತ್ತೇನೆ. ಅದರ ಮೇಲಿನ ಬಂಡೆಗಳ ಮೇಲೆ, ಆಧುನಿಕ ಜೈನ ದೇವಾಲಯಗಳ ಗೊಂಚಲಿಗೆ ಹೊಂದಿಕೊಂಡು ಒಂದು ಚಿಕ್ಕ ದೇವಾಲಯ ಗೋಚರಿಸುತ್ತದೆ. ಅದರ ಮಾಳಿಗೆ ಹಾಗೂ ಗೋಡೆಗಳನ್ನೆಲ್ಲ ಪೂರ್ತಿಯಾಗಿ ಕಲ್ಲಿನಿಂದಲೆ ಕಟ್ಟಲಾಗಿದೆ. ಗುಡ್ಡಗಳ ಇಡಿ ವೃತ್ತದಲ್ಲಿನ ಯಾವುದೆ ಕಟ್ಟಡಕ್ಕಿಂತ ಅದು ಬಹಳ ಪುರಾತನವಾದುದೆಂದು ಈ ಚಿಕ್ಕ ಅವಶೇಷದ ಸುತ್ತಲಿರುವುದೆಲ್ಲವೂ ಸಿದ್ಧಪಡಿಸುತ್ತದೆ. ಆದರೆ, ಅದರ ಖಚಿತ ಕಾಲ ಸಂದೇಹಾಸ್ಪದ. ಅದು ಕ್ರಿ.ಶ. ಏಳನೆಯ ಶತಮಾನದ ಇಮಾರತಿನಂತೆ ಕಾಣುತ್ತದೆ. ಮದ್ರಾಸ ಆರ್ಕ್ಯಾಲಜಿಕಲ್ ಸರ್ವೆಯ ಸುಪರಿಂಟೆಂಡೆಂಟ್‌ರಾದ ಮಿಸ್ಟರ್ ರೀ೧೮೮೬ರಲ್ಲಿ ಮದ್ರಾಸ ಕ್ರಿಶ್ಚನ್ ಕಾಲೇಜ ಮ್ಯಾಗಜಿನ್‌ನಲ್ಲಿ ಒಂದು ಲೇಖನ ಬರೆದರು. ಅದರ ನಿರ್ಮಾಣದಲ್ಲಿ ಗಚ್ಚಿನ ಬಳಕೆ, ಹಾಗಿರದಿದ್ದರೆ ಆ ತರಹದ ವಾಸ್ತುಶಿಲ್ಪ ಎಷ್ಟು ಪುರಾತನವೆನ್ನಬಹುದಿತ್ತೊ ಅಷ್ಟು ಪುರಾತನವಾಗಿದೆ ಎಂಬ ಬಗೆಗೆ ಸಂದೇಹ ಕಲ್ಪಿಸುತ್ತದೆಂದು ಆ ಲೇಖನದಲ್ಲಿ ಹೇಳಲಾಗಿದೆ. ಆದಾಗ್ಯೂ, ದೇವಾಲಯವನ್ನು ಅನೇಕ ಸನ್ಯಾಸಿಗಳು ಅನುಕ್ರಮವಾಗಿ ಬಳಸಿಕೊಂಡಿರಬಹುದು. ಅವರಲ್ಲಿ ಮಹಾ ಗುರು ಮಾಧವ ಕೊನೆಯವನಾಗಿರಬಹುದು. ನಾನು ಆ ಬಂಡೆಯ ಮೇಲೆ ನಿಂತು ಅಲ್ಲಿಂದ ಗೋಚರಿಸುವ ನಗರದ ಎಲ್ಲ ಮಹಾ ಅವಶೇಷಗಳಾದ ಅರಮನೆಗಳು ಮತ್ತು ದೇವಾಲಯಗಳು, ಮೂರ್ತಿಗಳು ಮತ್ತು ಗೋಪುರಗಳು ಮತ್ತು ಗೋಡೆಗಳು

ಅಸ್ತಿತ್ವದಿಂದ ಮರೆಯಾಗಿವೆಯೆಂದು ಕಲ್ಪಿಸಿಕೊಂಡರೆ ನಮ್ಮ ಸುತ್ತಲೂ ಉನ್ಮತ್ತ ಮನಸ್ಥಿತಿಯ ಪ್ರಕೃತಿಯನ್ನು ಬಿಟ್ಟು ಬೇರೇನೂ ಕಾಣಸಿಗದು. ಎಲ್ಲೆಲ್ಲೂ ಕಾಣುವುದು ಉರುಳಿಬಿದ್ದ ಬೆಣಚುಬಂಡೆಗಳಿಂದಲೆ ನಿರ್ಮಾಣಗೊಂಡ, ಆದರೆ ಬುಡನೆಲದ ಮೇಲೆಲ್ಲ ಹುಲ್ಲು ಮರಗಳಿಂದ ಕೂಡಿದ, ಉನ್ನತ ಗುಡ್ಡಗಳು. ಆಚೆಗಿರುವ ಅಧಿಕ ಜನನಿಬಿಡ ನಾಡಿನಿಂದ ನದಿ ಪ್ರತ್ಯೇಕಿಸಿದ ಇಂಥ ಏಕಾಂತ ಸ್ಥಳದಲ್ಲಿ ಆನೆಗುಂದಿಯ ರಾಜರು ವಾಸಿಸುತ್ತಿದ್ದರು. ವೈಭವ ಮತ್ತು ಸೌಂದರ್ಯದ ದೃಶ್ಯಗಳ ಮಧ್ಯೆ ಏಕಾಂತದಲ್ಲಿ ಮತ್ತು ಪ್ರತ್ಯೇಕವಾಗಿ ಇರಲಿಚ್ಛಿಸುತ್ತಿದ್ದ ಪೂರ್ವಕಾಲದ ಋಷಿಗಳು ತಮ್ಮ ನಿವಾಸಕ್ಕಾಗಿ ಆರಿಸಬಹುದಾಗಿದ್ದುದೂ ಇಂಥದನ್ನೇ.

ಈ ಸನ್ಯಾಸಿ ನಿಜವಾಗಿಯೂ ಮಹಾನ್ ಮಾಧವನಾಗಿದ್ದನೊ ಅಥವಾ ವಿಚಾರಗಳ ಗೋಜಲಿನಿಂದಾಗಿ ಇನ್ನೊಬ್ಬ ಕಡಿಮೆ ಖ್ಯಾತಿಯ ಸನ್ಯಾಸಿಗೆ ಅವನ ಹೆಸರನ್ನು ಆರೋಪಿಸಲಾಗಿದೆಯೊ ಎಂಬುದನ್ನು ತಿಳಿದುಕೊಳ್ಳುವ ಸಾಧ್ಯತೆಯಿಲ್ಲ. ಆದರೆ ಆ ಕಾಲದಲ್ಲಿ ಅವನು ಇದ್ದ ಬಗೆಗೆ ವಿಜಯನಗರದ ಹುಟ್ಟಿಗೆ ಸಂಬಂಧಿಸಿದ ಪ್ರತಿಯೊಂದು ವಾಡಿಕೆಯೂ ಪ್ರಮಾಣೀಕರಿಸುತ್ತದೆ. ಮಾಧವಾಚಾರ್ಯ ಶೃಂಗೇರಿಯಲ್ಲಿಯ ಪೂರ್ಣವಾಗಿ ವಾಸಿಸಿದನೆಂದು ಕೆಲವರು ಹೇಳುತ್ತಾರೆ.

ವಿಜಯನಗರ ಸಾಮ್ರಾಜ್ಯದ ಮತ್ತು ನಗರದ ಹುಟ್ಟು ಕುರಿತಂತೆ ಇನ್ನೂ ಅನೇಕ ವಾಡಿಕೆಗಳುಂಟು.

ಒಂದು ಹೀಗಿದೆ : ಬುಕ್ಕ ಮತ್ತು ಹರಿಹರ ಎಂಬಿಬ್ಬರು ಸಹೋದರರು ಮಹಮ್ಮದೀಯರು ೧೩೨೩ರಲ್ಲಿ ವಾರಂಗಲ್ಲನ್ನು ನಾಶಪಡಿಸುತ್ತಿದ್ದ ಕಾಲದಲ್ಲಿ ಆ ರಾಜನ ಸೇವೆಯಲ್ಲಿದ್ದರು, ಆನೆಗುಂದಿಯ ನೆರೆಯಲ್ಲಿರುವ ಗುಡ್ಡಗಾಡು ಪ್ರದೇಶಕ್ಕೆ ಚಿಕ್ಕ ಅಶ್ವದಳದೊಂದಿಗೆ ಪಾರಾದರು, ಬ್ರಾಹ್ಮಣ ಮಾಧವ ಅಥವಾ ಮಾಧವಾಚಾರ್ಯ ವಿದ್ಯಾರಣ್ಯ ಪಲಾಯನದಲ್ಲಿ ಅವರ ಜೊತೆಗಿದ್ದ, ಮತ್ತು ಯಾವುವೊ ಉಲ್ಲೇಖಿಸದ ಸಾಧನಗಳಿಂದ ಆ ಪ್ರದೇಶದ ದೊರೆಗಳಾದರು, ನಂತರ ವಿಜಯನಗರ ನಗರವನ್ನು ಸಂಸ್ಥಾಪಿಸಿದರು.[7]

ಇನ್ನೊಂದು ಕತೆ ಹೀಗಿದೆ : ಅವರೀರ್ವರೂ ಸಹೋದರರು ೧೩೦೯ರಲ್ಲಿ ಅದರ ಪ್ರಥಮ ಸ್ವಾಧೀನಾನಂತರ ವಾರಂಗಲ್ಲಿನ ಮಹಮ್ಮದೀಯ ಮಂಡಲಾಧಿಪತಿಯ ಸೇವೆಯಲ್ಲಿ ಅಧಿಕಾರಿಗಳಾಗಿದ್ದರು. ೧೩೧೦ರಲ್ಲಿ ಮಲಿಕ್ ಕಾಫರನ ನೇತೃತ್ವದಲ್ಲಿ ಹೊಯ್ಸಳ ಬಲ್ಲಾಳ ದೊರೆಯ ವಿರುದ್ಧ ಕಳಿಸಲಾದ ದಂಡಯಾತ್ರೆಯಲ್ಲಿ ಅವರನ್ನು ಕಳಿಸಲಾಯಿತು. ದಂಡಯಾತ್ರೆಯಿಂದಾಗಿ ಹಿಂದೂ ರಾಜಧಾನಿಯಾಗಿದ್ದ ದ್ವಾರ ಸಮುದ್ರ ಸ್ವಾಧೀನವಾಯಿತು. ಆದರೆ ಆ ಸಹೋದರರಿದ್ದ ಸೈನ್ಯದ ತುಕಡಿ ಸೋಲನುಭವಿಸಿತು ಮತ್ತು ಅವರು ಆನೆಗುಂದಿಯ ಸಮೀಪದ ಪರ್ವತ ಪ್ರದೇಶಕ್ಕೆ ಓಡಿಹೋದರು. ಅಲ್ಲಿ ನಿಸ್ಸಂಗ ಜೀವನ ಸಾಗಿಸುತ್ತಿದ್ದ ಪೂಜ್ಯ ಮಾಧವನ ದರ್ಶನ

ಪಡೆದರು ಮತ್ತು ಅವನ ನೆರವಿನಿಂದ ರಾಜ್ಯವನ್ನು ಮತ್ತು ರಾಜಧಾನಿಯನ್ನು ಸಂಸ್ಥಾಪಿಸಿದರು.

ಇದರ ಭಿನ್ನ ಪಾಠವೊಂದು ಅವರಿಬ್ಬರು ಸಹೋದರರು ಯಾವುದೊ ಕಾರಣಕ್ಕಾಗಿ ವಾರಂಗಲ್ಲಿನಿಂದ ನೇರವಾಗಿ ಆನೆಗುಂದಿಗೆ ಓಡಿದರು ಎಂದು ಹೇಳುತ್ತದೆ. ಈ ಕಥನ ಹಿಂದೂಗಳಾಗಿ ಅವರ ಗೌರವ ಹೆಚ್ಚಿಸುತ್ತದೆ. ತಮ್ಮ ವಿಜೇತರ ಕೆಳಗೆ ಮೊದಲು ಸೇವೆ ಸ್ವೀಕರಿಸುವುದು ಅನಿವಾರ್ಯವಾಗಿದ್ದರೂ ಸಹ ಕೊನೆಗೆ ಅವರ ದೇಶಾಭಿಮಾನ ವಿಜೃಂಭಿಸಿತು, ಮತ್ತು ಅವರು ತಮ್ಮ ಧರ್ಮಬಾಂಧವರೊಂದಿಗೆ ಅದೃಷ್ಟ ಪರೀಕ್ಷೆಗಾಗಿ ಇಜಿಪ್ತದ ಬೋಗಜೀವನ ತ್ಯಜಿಸಿದರು.

ಸನ್ಯಾಸಿ ಮಾಧವನ ಗುಪ್ತನಿಧಿಯ ಶೋಧದ ನಂತರ ನಗರವನ್ನು ಸಂಸ್ಥಾಪಿಸಿದನೆಂದೂ ಅದನ್ನು ತಾನೆ ಆಳಿದನೆಂದೂ ಮತ್ತು ತನ್ನ ಮರಣಾನಂತರ ಅದನ್ನು ಒಂದು ಕುರುಬ ಮನೆತನಕ್ಕೆ ಬಿಟ್ಟು ಹೋದನೆಂದೂ ಅವರೆ ಪ್ರಥಮ ಕ್ರಮಬದ್ಧ ರಾಜವಂಶವನ್ನು ಸ್ಥಾಪಿಸಿದರೆಂದೂ ನಾಲ್ಕನೆಯ ಕತೆಯೊಂದು ದೃಢವಾಗಿ ಹೇಳುತ್ತದೆ.

೧೨೩೦ ಎಂದು ಅದರ ಕಾಲವನ್ನು ನಿರ್ಧರಿಸುವ ಕೌಟೊ[8] ಹೇಳಿದ ಐದನೆಯ ಕತೆ ಹೀಗಿದೆ : ಪರ್ವತಗಳಲ್ಲಿ ಮಾಧವ ಸನ್ಯಾಸಿ ಜೀವನ ನಡೆಸುತ್ತಿದ್ದಾಗ ಬುಕ್ಕನೆಂಬ ಬಡಕುರುಬ ತಂದುಕೊಡುತ್ತಿದ್ದ ಊಟಗಳೇ ಅವನ ಆಧಾರವಾಗಿದ್ದವು, "ಮತ್ತು ಒಂದು ದಿನ ಬ್ರಾಹ್ಮಣನು 'ನೀನು ಇಡೀ ಹಿಂದುಸ್ತಾನದ ರಾಜ ಮತ್ತು ಸಾಮ್ರಾಟನಾಗುವಿ' ಎಂದು ಅವನಿಗೆ ಹೇಳಿದ. ಉಳಿದ ಕುರುಬರಿಗೆ ಇದು ತಿಳಿದು ಈ ಕುರುಬನನ್ನು ಭಕ್ತಿಯಿಂದ ಕಾಣತೊಡಗಿದರು. ಮತ್ತು ಅವನನ್ನು ತಮ್ಮ ಮುಖ್ಯಸ್ಥನನ್ನಾಗಿ ಮಾಡಿಕೊಂಡರು ; ಅವನು "ರಾಜ" ಎಂಬ ಹೆಸರು ಸಂಪಾದಿಸಿದ ಮತ್ತು ಕ್ಯಾನರಾ, ತಳಿಗರು, ಕಾಂಗ್ವಿವರಾವ್, ನೆಗಪತಾಬ, ತನ್ನದೇ ಬಡಗರು ಹೀಗೆ ಐದು ನೆರೆಯುವರನ್ನು ಗೆಲ್ಲಲು ತೊಡಗಿದನು ಮತ್ತು ಕೊನೆಗೆ ಎಲ್ಲರ ಪ್ರಭುವಾದನು ಮತ್ತು ತನ್ನನ್ನು ಬೊಕಾರಾವ್ ಎಂದು ಕರೆದುಕೊಂಡನು." ದಿಲ್ಲಿಯ ರಾಜ ಅವನ ಮೇಲೆ ಧಾಳಿಯಿಟ್ಟ, ಆದರೆ ಸೋತು ಹಿಂತಿರುಗಿದ. ಆ ಕಾರಣದಿಂದ ಬುಕ್ಕ ಒಂದು ನಗರವನ್ನು ಸಂಸ್ಥಾಪಿಸಿದ "ಮತ್ತು ಅದನ್ನು ವಿಸಜನಗರ (ನಾವದನ್ನು ಅಪಭ್ರಂಶವಾಗಿ ಬಿಸ್ನಗ ಎಂದು ಕರೆಯುತ್ತೇವೆ) ಎಂದು ಕರೆದ. ನಾವು ಆ ರಾಜ್ಯವನ್ನೆಲ್ಲ ಆ ಹೆಸರಿನಿಂದ ಕರೆಯುತ್ತೇವೆ, ಆದರೆ ನಾಡಿಗರು ಯಾವಾಗಲೂ ಅದನ್ನು 'ಕ್ಯಾನರಾದ ರಾಜ್ಯ' ಎಂದೇ ಕರೆಯುತ್ತಾರೆ." ಕೌಟೊನ ವೃತ್ತಾಂತ ಹಲವು ಕತೆಗಳ ಮಿಶ್ರಣವಾಗಿ ತೋರುತ್ತದೆ. ಅವನ ತಪ್ಪು ತೇದಿ ಅವನು ನೂನಿಜ್‌ನ ಮೂಲ ದಿನಚರಿಯ ಅಥವಾ ಬ್ಯಾರೊಸ್ ಪ್ರಕಟಿಸಿದ ಅವರ ಸಾರಾಂಶದ ಮೇಲೆ ಭಾಗಶಃ ಅವಲಂಬಿಸಿದುದನ್ನು ತೋರಿಸುತ್ತದೆ. ಕತೆಯ ಮಿಕ್ಕ ಭಾಗ ಹಿಂದೂ ರಮ್ಯ ಕತೆಯ ಛಾಯೆ

ಪಡೆದಿದೆಯೆ ವಿನಹ ಐತಿಹಾಸಿಕ ನಿಖರತೆ ಹೊಂದಿಲ್ಲ. ಅವನು ದಿಲ್ಲಿಯ ರಾಜನ ಆಕ್ರಮಣದ ವಾಡಿಕೆಯನ್ನು ಮತ್ತು ನಂತರ ಅವನ ಮರಳುವಿಕೆಯನ್ನು ಇಟ್ಟು ಕೊಳ್ಳುತ್ತಾನೆ.

ಬುಕ್ಕ ಮತ್ತು ಹರಿಹರ ಹೊಯ್ಸಳ ಬಲ್ಲಾಳರ ಮಾಂಡಲಿಕರಾಗಿದ್ದಿರಬಹು ದೆಂದು ಇನ್ನೊಬ್ಬ ಪರಿಣತ ಸೂಚಿಸುತ್ತಾನೆ.

೧೪೭೦ರಲ್ಲಿ ಭಾರತದಲ್ಲಿದ್ದ ರಷ್ಯದ ಪ್ರವಾಸಿ ನಿಕಿಟಿನ್ "ಬಿಚೆನೆಘರ"ದಲ್ಲಿ ವಾಸಿಸುತ್ತಿದ್ದ "ಹಿಂದೂ ಸುಲ್ತಾನ ಕದಮ್" ಎಂದು ಉಲ್ಲೇಖಿಸುವುದನ್ನು ನೋಡಿದರೆ ಅವರು ಬನವಾಸಿಯ ಕದಂಬರ ಪುರಾತನ ರಾಜಮನೆತನಕ್ಕೆ ಸೇರಿದವ ರೆಂಬ ವಿಚಾರದತ್ತ ಒಲವು ತೋರುವಂತಿದೆ.

ಮಹಾನ್ ರಾಜ್ಯದ ಹುಟ್ಟಿನ ಬಗೆಗೆ ಪರಿಗಣಿಸಲು ಮತ್ತು ನಮಗೆ ಬೇಕಾದು ದನ್ನು ಆಯ್ಕೆ ಮಾಡಿಕೊಳ್ಳಲು ಕತೆಗಳ ಮತ್ತು ವಾಡಿಕೆಗಳ ಕಂತೆಯೆ ಲಭ್ಯವಿದೆ. ಇನ್ನೂ ಅನೇಕ ಕತೆಗಳೂ ಉಂಟು. ಬಹುಶಃ ಅತ್ಯಂತ ಯುಕ್ತಾಯುಕ್ತ ವೃತ್ತಾಂತ ವೆಂದರೆ ಹಿಂದೂಗಳ ಸಾಮಾನ್ಯ ಒಲವಿನ ದಂತಕತೆಗಳಿಂದ ಆಯ್ದುಕೊಂಡು ಅದನ್ನು ಐತಿಹಾಸಿಕ ಸಂಗತಿಗಳ ನಿಶ್ಚಿತತೆಯೊಂದಿಗೆ ಸಂಯೋಜಿಸಿದ್ದದು. ಈ ದೃಷ್ಟಿಯಿಂದ ನಾವು ಸದ್ಯಕ್ಕೆ ಭಾವಿಸಬಹುದಾದುದೇನೆಂದರೆ ಅವರಿಬ್ಬರೂ ಸಹೋದರರು ಕುರುಬ ಜಾತಿಯ ಹಿಂದೂಗಳಾಗಿದ್ದರು, ಗಾಢ ಧಾರ್ಮಿಕ ಭಾವನೆಯುಳ್ಳವರಾಗಿದ್ದರು, ವಾರಂಗಲ್ಲಿನ ರಾಜನ ಭಂಡಾರದಲ್ಲಿ ಸೇವೆಗೈಯುತ್ತಿದ್ದರು, ಅದು ೧೩೨೩ರಲ್ಲಿ ಲೂಟಿ ಯಾಗಿ ವಿನಾಶ ಹೊಂದಿದಾಗ ಅಲ್ಲಿಂದ ಕಾಲು ಕಿತ್ತರು ಮತ್ತು ಆನೆಗುಂದಿಯ ಚಿಕ್ಕ ರಾಜನಲ್ಲಿ ಸೇವೆ ಕೈಕೊಂಡರು. ಅವರು ಮತ್ತು ಅವರ ದೊರೆಗಳು ಸೂರೆ ಮಾಡುತ್ತಿದ್ದ ಮುಸ್ಲಿಮರ ನಡತೆಯಿಂದ ಭಯ ಹಾಗೂ ಜಿಗುಪ್ಸೆಪಟ್ಟು ತಮ್ಮ ದೇಶಕ್ಕಾಗಿ ಮತ್ತು ತಮ್ಮ ಧರ್ಮಕ್ಕಾಗಿ ಪಣತೊಟ್ಟರು. ಸಹೋದರರು ಆನೆಗುಂದಿಯಲ್ಲಿ ಅನುಕ್ರಮ ವಾಗಿ ಅಮಾತ್ಯ ಮತ್ತು ಭಂಡಾರಿ ಹುದ್ದೆಗಳಿಗೆ ಏರಿದರು. ದಿಲ್ಲಿಯ ಮಹಮ್ಮದನ ಸೋದರಳಿಯ ಬಹಾಉದ್ದೀನನಿಗೆ ರಾಜ ಆಶ್ರಯವಿತ್ತುದರಿಂದ ೧೩೩೪ರಲ್ಲಿ ಸುಲ್ತಾನ ದಾಳಿಯಿಟ್ಟ. ಬತೂತಾ ಹೇಳಿರುವಂತೆ ಆನೆಗುಂದಿ ಪತನಗೊಂಡಿತು, ಮತ್ತು ಆ ರಾಜ್ಯವನ್ನಾಳಲು ಮಲಿಕ್‌ನನ್ನು ತನ್ನ ಪ್ರತಿನಿಧಿಯಾಗಿ ಹಿಂದೆ ಬಿಟ್ಟು ಸುಲ್ತಾನ ಮರಳಿದ. ಜನರು ತನಗಿಂತ ಬಲಶಾಲಿಯಾಗಿರುವುದನ್ನು ಮಲಿಕ್ ಕಂಡು ಕೊಂಡ. ಕೊನೆಗೆ ಸುಲ್ತಾನ ರಾಜ್ಯವನ್ನು ಹಿಂದೂಗಳಿಗೆ ತಿರುಗಿಕೊಟ್ಟ. ಮೊದಲು ಅಮಾತ್ಯ ಮತ್ತು ಭಂಡಾರಿ ಇಬ್ಬರೂ ಸಹೋದರರನ್ನು ಅನುಕ್ರಮವಾಗಿ ರಾಜ ಮತ್ತು ಅಮಾತ್ಯ ಪದವಿಗೇರಿಸಿದ. ಇವರೇ ಒಂದನೆಯ ಹರಿಹರ ("ಹುಕ್ಕ") ಮತ್ತು ಒಂದನೆಯ ಬುಕ್ಕ.

## ಪ್ರಥಮ ವಿಜಯನಗರ ರಾಜವಂಶ

(ಎಪಿಗ್ರಾಫಿಯಾ ಇಂಡಿಕಾ (೩, ಪು. ೩೬)ದಲ್ಲಿ ಕೊಟ್ಟಿರುವಂತೆ ಈ ರಾಜಮನೆತನದ ವಂಶಾವಳಿ ಕೆಳಗಿನಂತಿದೆ. ಇದುವರೆಗೂ ತೃಪ್ತಿಕರವಾಗಿ ಪರಿಶೀಲಿಸಲಾಗಿರದ ಶಾಸನಗಳು ಇಲ್ಲಿ ನೀಡಿರುವ ಪಟ್ಟಿಗೆ ಹೊಸದನ್ನು ಸೇರಿಸಬಹುದು)



1 ಟ್ಯಾಂಜಿಯರ್ಸ್ ಬತೂತಾನ ಜನ್ಮಸ್ಥಳವಾಗಿತ್ತು. ಅವನ ಹೆಸರು ಶೇಖ್ ಅಬು ಅಬ್ದುಲ್ಲಾ ಎಂದಿತ್ತು. ಅವನು ಸಿಂಧೂ ಪ್ರಾಂತದಲ್ಲಿ ಮುಹರಮ್‌ದ ದಿನವಾದ ಹಿಜರಿ ಶಕೆ ೭೩೪ (ಸಪ್ಟಂಬರ ೧೨, ೧೩೩೩ ಕ್ರಿ.ಶ.)ರಂದು ಬಂದ. ಅವನು ೧೩೪೨ರ ವರೆಗೆ ಭಾರತದಲ್ಲಿ ವಾಸಿಸಿದ್ದನೆಂದು ತೋರುತ್ತದೆ.

2 ಡೆಫ್ರೆಮರಿ ಮತ್ತು ಸ್ಯಾಂಗ್ವಿನೆಲೆ ಫ್ರೆಂಚಿಗೆ ಅನುವಾದಿಸಿದ (ಸಂಪುಟ ೩. ಪು. ೩೧೮-೩೨೦) ಇಬ್ನ್ ಬತೂತಾನ ಪ್ರಯಾಣಗಳಲ್ಲಿ ಈ ವೃತಾಂತ ಕೊಡಲಾಗಿದೆ. ಸರ್ ಹೆನ್ರಿ ಎಲಿಯಟ್‌ನ "ಹಿಸ್ಟರಿ ಆಫ್ ಇಂಡಿಯಾ" (ಸಂಪುಟ ೩, ಪು. ೬೧೫-೬೧೬) ಸಹ ನೋಡಿರಿ.

3 ಫಿರಿಸ್ತಾನ ವೃತ್ತಾಂತ ಕೊಂಚ ಭಿನ್ನವಾಗಿದೆ ಮತ್ತು ಅವನು ಕಾಲವನ್ನು ಹಿ.ಶ. ೭೩೯ ಅಥವಾ ಜುಲೈ ೨೦, ೧೩೩೮ ರಿಂದ ಜುಲೈ ೯, ೧೩೩೯ರವರೆಗೆ ಕೊಡುತ್ತಾನೆ. ಆದರೆ ಇಬ್ನ್ ಬತೂತಾನ ಕಥನ ಅತ್ಯಧಿಕ ನಂಬಲರ್ಹವೆಂದು ನಾನು ಪರಿಗಣಿಸುತ್ತೇನೆ. ಏಕೆಂದರೆ, ಅವನು ಸ್ವಂತ ಅನುಭವದಿಂದ ಬರೆದ. ಫಿರಿಸ್ತಾನಾದರೊ ಎರಡೂವರೆ ಶತಮಾನಗಳ ನಂತರ ತನ್ನ ಕತೆಯನ್ನು ಸಂಕಲಿಸಿದ.

4 ಇವನು ಮೇಲೆ ಉಲ್ಲೇಖಿಸಿದ ಬಂಗಾಲದ ಘಿಯಾಸುದ್ದೀನ ಬಹಾದುರ ಬರಾ.

5 ಈ ಕತೆಯನ್ನು ದಕ್ಷಿಣ ಭಾರತದ ಬಹುತೇಕ ಎಲ್ಲ ರಾಜ್ಯ, ಪಾಳೆಯ ಪಟ್ಟು, ದೊಡ್ಡ ಜಮೀನುದಾರಿಗಳ ಹುಟ್ಟಿನ ಬಗೆಗೂ ಹೇಳಲಾಗುತ್ತದೆ. ಸಾಮಾನ್ಯ ಭಿನ್ನ ಪಾಠವೆಂದರೆ ಗುಪ್ತನಿಧಿಯ ಶೋಧ.

6 ಈ ಮೂಲವನ್ನು ಪದೇ ಪದೇ ಕೊಡಲಾಗುತ್ತಿದ್ದರೂ ಅದು ತಪ್ಪಾದುದು ಎಂಬ ಬಗೆಗೆ ಸಂದೇಹವಿಲ್ಲ ಎಂದು ನನಗೆ ತೋರುತ್ತದೆ ಮತ್ತು ಹೆಸರು "ವಿಜಯನಗರ" ವಾಗಿತ್ತು, "ವಿದ್ಯಾನಗರ" ಅಲ್ಲ. "ವಿದ್ಯಾಜುನ" ಸ್ಪಷ್ಟವಾಗಿಯೆ "ವಿದ್ಯಾರ್ಜುನ" ಪದವನ್ನು ಪ್ರತೀಕಿಸುತ್ತದೆ.

7 ಬುಕನಾನ್ ("ಮೈಸೂರ" ಇತ್ಯಾದಿ, ೩,೧೧೦) ೧೮೦೧ರಲ್ಲಿ ಮೈಸೂರಿನಲ್ಲಿರುವ ಬೈದೂರಿಗೆ ಭೇಟಿ ಇತ್ತಾಗ ರಾಮಪ್ಪ ವಾರ್ಮಿಕ ಎಂಬಾತನೊಬ್ಬ ತನ್ನಲ್ಲಿದ್ದ "ವಿದಿದ್ರಾಯಣ ಸಿಕ್ಕ" ಎಂಬ ಸಂಸ್ಕೃತ ಗ್ರಂಥವನ್ನು ತೋರಿಸಿದನು. ವಿಜಯನಗರದ ಸಂಸ್ಥಾಪಕರು ವಾರಂಗಲ್ಲಿನ ಪ್ರತಾಪರುದ್ರನ ಭಂಡಾರದ ರಕ್ಷಣಾಧಿಕಾರಿಗಳಾಗಿದ್ದ ಹುಕ್ಕ ಮತ್ತು ಬುಕ್ಕರೆಂದು ಆದರಲ್ಲಿ ಹೇಳಲಾಗಿದೆ. ಈ ತರುಣರು ಶೃಂಗೇರಿಯ ಮಠಾಧಿಪತಿಯಾಗಿದ್ದ ಗುರುವರ್ಯ ವಿದ್ಯಾರಣ್ಯರಲ್ಲಿಗೆ ಬಂದರು. ವಿದ್ಯಾರಣ್ಯರು ಅವರಿಗಾಗಿ ವಿಜಯನಗರ ನಗರವನ್ನು ಸಂಸ್ಥಾಪಿಸಿದರು. ಇದು ಆದುದು ೧೩೩೬ರಲ್ಲಿ, ಮತ್ತು ಹುಕ್ಕನನ್ನು ರಾಜನನ್ನಾಗಿ ಮಾಡಲಾಯಿತು. ಆದರೆ ಈ ಕತೆ ಬಹು ಮುಖ್ಯವಾದ ಅಂಶವನ್ನು ಪೂರ್ತಿಯಾಗಿ ಕೈಬಿಟ್ಟಿದೆ. ವಶಪಡಿಸಿಕೊಂಡ ರಾಜಧಾನಿ ಮತ್ತು ಸೋತ ರಾಜ್ಯದಿಂದ ಓಡಿಬಂದ ಇಬ್ಬರು ಸಹೋದರರು ಹೊಸ ನಾಡಿನಲ್ಲಿ ಮಹಾ ನಗರವೊಂದನ್ನು ಹಾಗೂ ಪರಮಾಧಿಪತ್ಯವನ್ನು ಒಮ್ಮೆಲೆ ಅದು ಹೇಗೆ ಸಂಸ್ಥಾಪಿಸಲು ಶಕ್ಯರಾದರು ?

8 ಡೆಕಡಾ Vi.I.V.C. 4

9 "ಇಂಡಿಯಾ ಇನ್ ದ ಫಿಫ್ಟೀಂಥ್ ಸೆಂಚರಿ," ಹ್ಯಾಕ್ಲುಟ್ ಆವೃತ್ತಿ, ಪು. ೨೯.

### ಅಧ್ಯಾಯ ೩

# ಪ್ರಥಮ ರಾಜರು (ಕ್ರಿ.ಶ.೧೩೩೬ ರಿಂದ ೧೩೭೯)

ಪ್ರದೇಶದ ಶೀಘ್ರ ಸ್ವಾಧೀನ–ಒಂದನೆಯ ಹರಿಹರನ ಆಳ್ವಿಕೆ–ಮುಹಮ್ಮದೀಯ ಆಕ್ರಮಣಕ್ಕೆ ತಡೆ–ಒಂದನೆಯ ಬುಕ್ಕನ ಆಳ್ವಿಕೆ–ಕಂಪ ಮತ್ತು ಸಂಗಮ ?–ಬಾಹಮನಿ ರಾಜ್ಯದ ಸ್ಥಾಪನೆ, ೧೩೪೭–ವಾರಂಗಲ್ಲಿನ ನಾಗದೇವನ ಮರಣ–ವಿಜಯನಗರದ ಪ್ರಥಮ ದೊಡ್ಡ ಯುದ್ಧ–ಮುಹಮ್ಮದ ಬಾಹಮನಿಯಿಂದ ಹತ್ಯೆ–ಅದೋನಿಯ ಯುದ್ಧ, ೧೩೬೬–ಬುಕ್ಕನ ಪಲಾಯನ–ಮುಜಾಹಿದನ ಯುದ್ಧ–೧೩೭೫–ಅವನಿಂದ ಮುಬಾರ ಕರಾವಳಿಗೆ ಭೇಟಿ–ವಿಜಯನಗರದ ಮುತ್ತಿಗೆ–ರಾಜ್ಯ ವಿಸ್ತರಣೆ–ಮುಜಾಹಿದನ ಮರಣ, ೧೩೭೮.

೧೩೩೬ರ ಸುಮಾರಿಗೆ ಸ್ಥಾಪಿತವಾದ ವಿಜಯನಗರ ನಗರ ಬಹುಬೇಗ ಮಹತ್ವದಲ್ಲಿ ಬೆಳೆಯಿತು ಮತ್ತು ಬಹಿಷ್ಕೃತರ, ನಿರಾಶ್ರಿತರ ಮತ್ತು ಮುಂದೆ ಚಾಚುತ್ತಿದ್ದ ಮುಹಮ್ಮದೀಯರಿಂದ ತಮ್ಮ ಭದ್ರ ನೆಲೆಗಳಿಂದ ಹೊರತಳ್ಳಲ್ಪಟ್ಟ ಹಿಂದೂ ಹೋರಾಳುಗಳ ಆಶ್ರಯವಾಯಿತು.

ವಿಜಯನಗರದ ಪ್ರಥಮ ಆಳ್ವಿಕೆಗಾರರಾದರೂ ತಮ್ಮನ್ನು ರಾಜರೆಂದು ಕರೆದುಕೊಳ್ಳುವ ದಾರ್ಷ್ಟ್ಯ ತೋರಲಿಲ್ಲ. ಅವರ ಮೊದಲ ಶಾಸನಗಳ ಮೂಲಪಾಠಗಳನ್ನು ರಚಿಸಿದ ಬ್ರಾಹ್ಮಣರು ಕೂಡ ಹಾಗೆ ಕರೆಯಲಿಲ್ಲ. ನಾನು ಒಂದನೆಯ ಹರಿಹರ ಮತ್ತು ಒಂದನೆಯ ಬುಕ್ಕರನ್ನು ಪಾಳೆಯಗಾರರೆಂದು ಕರೆದಿರುವುದು ಇದೇ ಕಾರಣಕ್ಕಾಗಿ. ಹರಿಹರನಿಗೆ ಸಂಬಂಧಿಸಿದ ೧೩೪೦ರ ಶಾಸನ ಅವನನ್ನು ಹರಿಹರ ಒಡೆಯ" ಎಂದು ಕರೆಯುತ್ತದೆ. ಅದು "ಹರಿಹರ" ಎಂಬ ಹೆಸರಿಗಿಂತ ಕಡಿಮೆ ಗೌರವಾನ್ವಿತವಾಗಿದೆ. ಎರಡನೆಯದು ಅವನಿಗೆ ಮುಖಂಡ ಪದವಿಗೆ ಮಾತ್ರ ಹಕ್ಕು ನೀಡುತ್ತದೆ. ಅದೂ ಅಲ್ಲದೆ, ಅವನಿಗೆ ನೀಡಲಾದ ಸಂಸ್ಕೃತ ಬಿರುದು "ಮಹಾಮಂಡಲೇಶ್ವರ"ವನ್ನು "ಮಹಾಪ್ರಭು" ಎಂದು ಅನುವಾದಿಸಬಹುದೆ ವಿನಹ ರಾಜನೆಂದಲ್ಲ. ೧೩೫೩ ಎಂದು ಕಾಲ ನಿರ್ಣಯಿತವಾಗಿರುವ ಎರಡು ಶಾಸನಗಳಲ್ಲಿ[1] ಅವನ ಉತ್ತರಾಧಿಕಾರಿ ಬುಕ್ಕನದೂ ಇದೇ ಸ್ಥಿತಿಯಿದೆ. ೧೩೪೦ರಲ್ಲಿ ಆಗಲೆ ಹರಿಹರನ ಸ್ವಾಧೀನದಲ್ಲಿ ವಿಶಾಲ ಪ್ರದೇಶಗಳಿದ್ದವೆಂದು ಹೇಳಲಾಗುತ್ತದೆ. ಅವನು ಮುಹಮ್ಮದ ತಘಲಕ್ ವಶಪಡಿಸಿಕೊಂಡಿದ್ದ ಮಲಪ್ರಭಾ ನದಿಯ ಉತ್ತರಕ್ಕಿರುವ ಕಲಾದಗಿ ಜಿಲ್ಲೆಯಷ್ಟು ದೂರ ಉತ್ತರದ ಗ್ರಾಮಗಳ ಅಂಗೀಕೃತ ಅಧಿಪತಿಯಾಗಿದ್ದನು. ಇದು

ಒಣ ಬಡಾಯಿಯಾಗಿರಲಿಲ್ಲವೆಂಬುದನ್ನು ಆ ವರ್ಷ ಬದಾಮಿಯಲ್ಲಿ ಕಟ್ಟಿದ ಕೋಟೆಗೆ ಹರಿಹರನ ಅನುಮತಿ ಪಡೆಯಲಾಗಿತ್ತೆಂಬ ಸಂಗತಿಯಿಂದ ತಿಳಿದುಬರುತ್ತದೆ.

ವಿಜಯನಗರದ ಪ್ರಥಮ ಮುಖ್ಯಸ್ಥ ಹೀಗೆ ಸದ್ದಿಲ್ಲದೆ ಮತ್ತು ಬಹುಶಃ ಶಾಂತಿಯಿಂದ ಬಹಳ ಪ್ರಭಾವ ಮತ್ತು ವ್ಯಾಪಕ ಅಧೀನ ರಾಜ್ಯಗಳನ್ನು ಸಂಪಾದಿಸುತ್ತಿದ್ದವನ್ನು ನೋಡುತ್ತೇವೆ. ಇವುಗಳು ಎಷ್ಟು ಶೀಘ್ರವಾಗಿ ಬೆಳೆದವೆಂದರೆ ಬುಕ್ಕನ ಉತ್ತರಾಧಿಕಾರಿಯಾದ ಎರಡನೆಯ ಹರಿಹರ ತನ್ನನ್ನು ರಾಜಾಧಿರಾಜ, "ರಾಜರ ರಾಜ" ಅರ್ಥಾತ್ ಸಾಮ್ರಾಟ ಎಂದು ಕರೆದುಕೊಂಡ.

ಪ್ರಥಮ ರಾಜ ಹರಿಹರ ಅಥವಾ ನೂನಿಜ್ "ದೆಹೊರಾವ್" ಎಂದು ಕರೆಯುವ ದೇವರಾಯನತ್ತ ಹೊರಳೋಣ. ನಮ್ಮ ದಿನಚರಿಯ ಪ್ರಕಾರ, ಅವನು ಏಳು ವರ್ಷ ಆಳಿದ, "ಮತ್ತು ಆ ಅವಧಿಯಲ್ಲಿ ಸಂಪೂರ್ಣ ಶಾಂತಿ ಸ್ಥಿತಿಯಲ್ಲಿ ಬಿಟ್ಟುಹೋದ ತನ್ನ ರಾಜ್ಯವನ್ನು ಶಾಂತಗೊಳಿಸುವದನ್ನುಳಿದು ಇನ್ನೇನೂ ಮಾಡಲಿಲ್ಲ". ಹಾಗಿದ್ದರೆ, ಅವನ ಮರಣ ೧೩೪೩ನೆಯ ವರ್ಷದ ಸುಮಾರಿಗೆ ಸಂಭವಿಸಿರಬಹುದು. ಅವನು ತನ್ನ ಸಂರಕ್ಷಕನಾದ ಬ್ರಾಹ್ಮಣ ಸನ್ಯಾಸಿಯ ಗೌರವಾರ್ಥ ಒಂದು ದೇವಾಲಯ ಕಟ್ಟಿಸಿದನೆಂದು ನೂನಿಜ್ ಹೇಳುತ್ತಾನೆ. ಹಂಪಿಯಲ್ಲಿ ನದಿಯ ಸಮೀಪವಿರುವ ದೊಡ್ಡ ದೇವಾಲಯವೆ ಇದಾಗಿದೆ. ಅದು ಇಂದಿಗೂ ಸುಸ್ಥಿತಿಯಲ್ಲಿದೆ ಮತ್ತು ರಾಜಧಾನಿಯಲ್ಲಿ ಕಟ್ಟಲಾದ ಬೃಹತ್ ಮಂದಿರಗಳಲ್ಲಿ ಇವತ್ತಿಗೂ ಪೂಜೆ ನಡೆಯುತ್ತಿರುವುದು ಇದೊಂದರಲ್ಲಿಯೆ. ಉಳಿದವುಗಳನ್ನು ೧೫೬೫ರಲ್ಲಿ ಮಹಮ್ಮದೀಯರು ಕರುಣೆಯಿಲ್ಲದೆ ಒಡೆದು ಹಾಕಿದರು ಮತ್ತು ಧ್ವಂಸಗೊಳಿಸಿದರು. ಈ ಮೊದಲು ಹೇಳಿದಂತೆ ಪ್ರವಾಸಿ ಇಬ್ನ್ ಬತೂತಾ ೧೩೪೨ರಲ್ಲಿ ಅಥವಾ ಆ ಸುಮಾರಿಗೆ "ಹರಾಇಬ್"ಅಥವಾ "ಹರಿಬ್" ಎಂಬ ಹೆಸರಿನಲ್ಲಿ ಈ ರಾಜನನ್ನು ಉಲ್ಲೇಖಿಸುತ್ತಾನೆ. ನೂನಿಜ್‌ನ ವೃತ್ತಾಂತವೂ ಈ ವಾಡಿಕೆಗಳೊಂದಿಗೆ ಸರಿಹೊಂದುತ್ತದೆ. ಇವುಗಳು ಹೇಳುವಂತೆ ಒಂದನೆಯ ಹರಿಹರ ತನ್ನ ಆಳಿಕೆಯ ಏಳು ವರ್ಷಗಳಲ್ಲಿ ಶಾಂತಿಯಿದ್ದುದು ನಿಜವಿದ್ದರೆ ಅವನ ಮರಣ ೧೩೪೪ಕ್ಕೆ[1] ಮುಂಚೆ ಸಂಭವಿಸಿರಬೇಕು. ಏಕೆಂದರೆ, ಇತರ ಮೂಲಗಳಿಂದ ತಿಳಿದುಬರುವಂತೆ, ಆ ವರ್ಷ ವಾರಂಗಲ್ಲಿನ ಪ್ರತಾಪರುದ್ರನ ಮಗ ಕೃಷ್ಣ ವಿಜಯನಗರದಲ್ಲಿ ಆಶ್ರಯ ಪಡೆದ. ಅದರ ರಾಜ ಮತ್ತು ದ್ವಾರಸಮುದ್ರದ ಬದುಕುಳಿದ ಬಲ್ಲಾಳ ರಾಜಪುತ್ರರಿಂದೊಡಗೂಡಿ ಮಹಮ್ಮದೀಯರನ್ನು ಹಿಂದಕ್ಕಟ್ಟಿದ, ಕೆಲ ಕಾಲ ದಕ್ಷಿಣದ ದಕ್ಖನ್ ನಾಡನ್ನು ಪಾರುಮಾಡಿದ. ಇದು ವಿಂಧ್ಯದ ದಕ್ಷಿಣದಲ್ಲಿ ದಿಲ್ಲಿಯ ಪ್ರಭುತ್ವವನ್ನು ಕಿತ್ತೆಸೆಯಲು ದಾರಿಯಾಯಿತು. ಆದ್ದರಿಂದ ಕ್ರಿ.ಶ. ೧೩೪೩ರಲ್ಲಿ ಅಥವಾ ಆ ಸುಮಾರಿಗೆ ಗತಿಸಿದನೆಂದು ನಾನು ಗ್ರಹಿಸುತ್ತೇನೆ.

ಅವನು ಶಾಂತಿಯಿಂದ ಆಳಿದ ಬಗೆಗಾದರೊ ನನಗೆ ಗೊತ್ತಿರುವುದು ಅದಕ್ಕೆ ವಿರುದ್ಧವಾದ ಒಂದು ಹೇಳಿಕೆ ಮಾತ್ರ. ೧೩೫೭ರಲ್ಲಿ ದತ್ತಿಯೊಂದನ್ನು ದಾಖಲಿಸುವ ಎರಡನೆಯ ಸಂಗಮನ ಶಾಸನವೊಂದು ಒಂದನೆಯ ಹರಿಹರ "ಸುಲ್ತಾನನನ್ನು ಸೋಲಿಸಿದ" ಎಂದು ಉಲ್ಲೇಖಿಸುತ್ತದೆ. ಆದರೆ ಇದು ಬಹುಶಃ ಮಹಮ್ಮದ ತಘಲಕ್ ಈ ಪ್ರಾಂತದ ಮೇಲಿನ ತನ್ನ ಹಿಡಿತವನ್ನು ಬಿಟ್ಟುಕೊಡಬೇಕಾಯಿತೆಂಬ ಸಂಗತಿಯನ್ನು ಉಲ್ಲೇಖಿಸುತ್ತದೆ.

ಮುಂದಿನ ರಾಜ ಹರಿಹರನ ತಮ್ಮ ಒಂದನೆಯ ಬುಕ್ಕ (ಬುಕಾರಾವ್). ನೂನಿಜ್‌ನ ಪ್ರಕಾರ ಅವನು ಮೂವತ್ತೇಳು ವರ್ಷ ರಾಜ್ಯವಾಳಿದನು. ಮತ್ತು ಆ ಅವಧಿಯಲ್ಲಿ ಒರಿಸಾ (ಒರಿಯ)ವೂ ಸೇರಿದಂತೆ ದಕ್ಷಿಣದ ಎಲ್ಲ ರಾಜ್ಯಗಳನ್ನೂ ಗೆದ್ದುಕೊಂಡ. ಶಸ್ತ್ರಾಸ್ತ್ರಬಲದಿಂದ ಗೆಲ್ಲುವುದಕ್ಕೆ ಹೆಚ್ಚು ಮಹತ್ವ ನೀಡದೆ ಹೆಚ್ಚೂ ಕಡಿಮೆ ಎಲ್ಲ ದಕ್ಷಿಣ ಭಾರತ ಅವನ ಪ್ರಭುತ್ವ ಒಪ್ಪಿಕೊಂಡಿತು. ಇಸ್ಲಾಮ ಧರ್ಮದ ಅಸಹ್ಯ ಅನುಯಾಯಿಗಳ ಕ್ರೂರ ದಬ್ಬಾಳಿಕೆಗಿಂತ ಮೇಲಾದ ಹಿಂದೂ ಪ್ರಾಬಲ್ಯವನ್ನು ನಿರಂತರವಾಗಿ ಸ್ಥಾಪಿಸುವ ಕಾತರತೆಯೆ ಇದಕ್ಕೆ ಪ್ರೇರಣೆಯಾಗಿರಬೇಕು.[2] ಈ ದಿನಚರಿಯ ಪ್ರಕಾರ ಒಂದನೆಯ ಬುಕ್ಕ(ನಾವು ಅವನನ್ನು ಹೀಗೆಯೆ ಕರೆಯಬೇಕು)ನ ಮರಣ ಕ್ರಿ.ಶ. ೧೩೮೦ರ ಸುಮಾರಿಗೆ ಸಂಭವಿಸಿತು. ೧೩೫೪ ರಿಂದ ೧೩೭೧ರ ಕಾಲಾವಧಿಯನ್ನು ಆವರಿಸುತ್ತವೆಂದು ಅವನ ಆಳಿಕೆಯ ಶಾಸನಗಳ ಬಗೆಗೆ ಡಾ.ಹುಲ್ಟ್‌ಜ್‌ಶ್[3] ಹೇಳಿದರೆ ಅವನ ಉತ್ತರಾಧಿಕಾರಿಯಾದ ಎರಡನೆಯ ಹರಿಹರನ ಪ್ರಥಮ ಶಾಸನದ ಕಾಲ ೧೩೭೯. ಹಾಗೆ ನಾವು ಒಂದನೆಯ ಬುಕ್ಕ ೧೩೭೯ರ ವರೆಗೆ ಆಳಿದನೆಂದು ಭಾವಿಸಿದರೆ ಒಂದನೆಯ ಬುಕ್ಕ ಮೂವತ್ತೇಳು ವರ್ಷವಲ್ಲದಿದ್ದರೂ ಮೂವತ್ತಾರು ವರ್ಷ ಕ್ರಿ.೧೩೪೩ ರಿಂದ ೧೩೭೯ ಆಳಿದುದು ನಿಜವೆಂಬ ಮಟ್ಟಿಗೆ ದಿನಚರಿ ನಿಸ್ಸಂಶಯವಾಗಿರುವುದು ಕಂಡುಬರುತ್ತದೆ.

ಆದರೆ, ಇಷ್ಟರಲ್ಲಿ ತಾಮ್ರಪಟಗಳ ಮೇಲಿರುವ ಶಾಸನದಿಂದ ನಮಗೆ ಇನ್ನೊಂದು ಕತೆ ಲಭಿಸುತ್ತದೆ. ಆ ಶಾಸನವನ್ನು ನೆಲ್ಲೋರಿನ[5] ಕಲೆಕ್ಟರರ ಕಚೇರಿಯಲ್ಲಿ ಕಾಯ್ದಿಡಲಾಗಿದೆ. ಅದನ್ನು ಶ್ರೀ ಎಚ್.ಕೃಷ್ಣಮೂರ್ತಿ ಜಾಗರೂಕತೆಯಿಂದ ಸಂಪಾದಿಸಿದ್ದಾರೆ. ಇದರ ಪ್ರಕಾರ, ನಿಸ್ಸಂದೇಹವಾಗಿಯೂ ಯುದ್ಧಾತುರನಾಗಿದ್ದ ಬುಕ್ಕ ಸಿಂಹಾಸನವನ್ನು ಆಕ್ರಮಿಸಿಕೊಂಡನೆಂದು ತೋರುತ್ತದೆ. ಸಂಗಮ ಎಂದು ಹೆಸರಿದ್ದ ಒಂದನೆಯ ಹರಿಹರನ ತಂದೆಗೆ ಐವರು ಪುತ್ರರಿದ್ದರೆಂದು ಅದು ದೃಢವಾಗಿ ಹೇಳುತ್ತದೆ. ಹರಿಹರನೆ ಎಲ್ಲಕ್ಕೂ ಹಿರಿಯನು, ಕಂಪ ನಡುವಿನವನು, ಬುಕ್ಕ ಮೂರನೆಯವನು. ಹರಿಹರನ ನಂತರ ಯಾರು ಅಧಿಕಾರಕ್ಕೆ ಬರುವರೆಂಬುದನ್ನು ನಾವು ತಿಳಿಯಬಯಸುತ್ತೇವೆ. ೧೩೫೪ ಎಂದು ಕಾಲನಿರ್ಣಯಿತವಾದ ಬುಕ್ಕನ ಶಾಸನವೊಂದಿದೆ ಹಾಗೂ ೧೩೫೭ ಎಂದು ನಿರ್ಣಯಿತವಾದ ಈ ನೆಲ್ಲೋರು ಶಾಸನವೂ ಇದೆ. ಎರಡನೆಯದು

ಪೂರ್ವ ಕರಾವಳಿಯ ಹತ್ತಿರದ ಬಲು ದೂರದ ನಾಡಿನದಾಗಿದೆ. ಕಂಪ ಹರಿಹರನ ನಂತರ ಅಧಿಕಾರಕ್ಕೆ ಬಂದನು, ಕಂಪನ ಮಗ ಎರಡನೆಯ ಸಂಗಮ ತನ್ನ ತಂದೆಯ ನಂತರ ಅಧಿಕಾರಕ್ಕೆ ಬಂದನು, ಮೇ ೩, ಕ್ರಿ.ಶ.೧೩೫೬ಕ್ಕೆ ಸರಿಹೊಂದುವ ದಿನಾಂಕದಂದು ಬ್ರಾಹ್ಮಣರಿಗೆ ನೆಲ್ಲೋರು ಜಿಲ್ಲೆಯ ಗ್ರಾಮವೊಂದನ್ನು ದಾನ ಮಾಡಿದ ಎಂದು ಈ ಶಾಸನ ಹೇಳುತ್ತದೆ. ಈ ದಾನಕ್ಕಿಂತ ಸರಿಯಾಗಿ ಒಂದು ವರ್ಷ ಮುಂಚೆ ಸಂಗಮ ತನ್ನ ತಂದೆ ಕಂಪನ ನಂತರ ಅಧಿಕಾರಕ್ಕೆ ಬಂದನೆಂದು ಇದು ಸೂಚಿಸುತ್ತದೆ. ಹೀಗೆ, ಕಂಪ ೧೩೪೩ ರಿಂದ ೧೩೫೫ರ ವರೆಗೆ ರಾಜನಾಗಿದ್ದನೆಂದು ಅದು ಸಮರ್ಥಿಸುತ್ತದೆ. ಇದರ ಬಗೆಗೆ ನಮಗೆ ಇದಕ್ಕೂ ಹೆಚ್ಚು ತಿಳಿಯದು. ಅಸ್ತಿತ್ವದಲ್ಲಿದೆಯೆಂದು ಗೊತ್ತಿರುವ ಇನ್ನೊಂದು ದಾಖಲೆ ಮಾತ್ರ ಉಂಟು. ಅದನ್ನು ಕಂಪನ ಇಲ್ಲವೆ ಸಂಗಮನ ಆಳಿಕೆಯಲ್ಲಿ ರಚಿಸಲಾಯಿತು. ಇದನ್ನು ಉಲ್ಲೇಖಿಸುವ ಶ್ರೀ ಕೃಷ್ಣಶಾಸ್ತ್ರಿ "ಮಾಧವೀಯ ಧಾತುವೃತ್ತಿ"ಯ ಮುದ್ರಾಂಕಿತದ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ. ಅದರ ಪ್ರಕಾರ, ಅದರ ಕರ್ತೃವಾದ ಸಾಯಣಾಚಾರ್ಯ ಮಹಾನ್ ಮಾಧವಾಚಾರ್ಯನ ಒಡಹುಟ್ಟಿದ ತಮ್ಮನಾಗಿದ್ದಂತೆಯೆ ಕಂಪನ ಮಗ ಸಂಗಮ ರಾಜನ ಪ್ರಧಾನಿಯೂ ಆಗಿದ್ದ. ಸಾಧ್ಯವಿರುವ ಒಂದೇ ಊಹೆಯೆಂದರೆ ಹರಿಹರನ ನಂತರ ಉತ್ತರಾಧಿಕಾರದ ಬಗೆಗೆ ಜಗಳವಿತ್ತು, ಹೇಗೊ ಮಾಡಿ ಬುಕ್ಕ ಮೇಲುಗೈ ಸಾಧಿಸಿ ಕೊನೆಯ ಪಕ್ಷ ೧೩೫೪ ರಷ್ಟು ಬೇಗನೆ ತಾನೆ ರಾಜನೆಂದು ಘೋಷಿಸಿಕೊಂಡ, ಹರಿಹರನ ನಂತರ ತಕ್ಷಣ ಅಧಿಕಾರಕ್ಕೆ ಬಂದನೆಂದು ಆ ಮೇಲೆ ಸಾಧಿಸಿದ. ಪ್ರಭುವಿನ ಮರಣಾನಂತರ ಬಹುತರ ಎಲ್ಲ ಸಂದರ್ಭಗಳಲ್ಲೂ ರಾಜ್ಯವು ಕಚ್ಚಾಟದಿಂದ ಜರ್ಜರಿತವಾಗಿತ್ತು, ಒಬ್ಬನಿಲ್ಲದಿದ್ದರೆ ಇನ್ನೊಬ್ಬನು ತನ್ನನ್ನು ರಾಜ್ಯದ ಮುಖ್ಯಸ್ಥನನ್ನಾಗಿಸಲೋಸುಗ ವರ್ಷವರ್ಷವೂ ಆಳುವ ಮನೆತನದ ಸದಸ್ಯರು ಹಿಂಸೆ ಮತ್ತು ಹತ್ಯೆಗೆ ಗುರಿಯಾಗುತ್ತಿದ್ದರು ಎಂಬುದನ್ನು ಇನ್ನೂ ಮುಂದೆ ನೋಡಬಹುದು.

ಆದುದರಿಂದ, ಒಂದನೆಯ ಬುಕ್ಕನ ಆಳಿಕೆ ೧೩೪೩ರಿಂದ ೧೩೭೯ರವರೆಗೆ ಬಾಳಿತು ಎಂಬ ಗ್ರಹಿಕೆಯಿಂದ ಕೃಷ್ಣೆಯ ಉತ್ತರದಲ್ಲಿ ಈಗ ಅತ್ಯಂತ ಪ್ರಭಾವ ಹೊಂದಿದ್ದ ಇಸ್ಲಾಮದ ಅನುಯಾಯಿಗಳೊಂದಿಗೆ ಈ ರಾಜನ ಸಂಬಂಧಗಳೇನೆಂಬುದನ್ನು ತಿಳಿದುಕೊಳ್ಳಲು ನಾವು ಫಿರಿಸ್ತಾನ ಕಡೆಗೆ ತಿರುಗಬೇಕು.

ಕಂಡುಬರುವಂತೆ, ಅವನ ಆರೋಹಣದ ತಕ್ಷಣ ಮೇಲೆ ಉಲ್ಲೇಖಿಸಿದ ಯಶಸ್ವಿ ದಂಡಯಾತ್ರೆ ಜರುಗಿತು. ಅದರಲ್ಲಿ ಭಿನ್ನ ರಾಜ್ಯಗಳ ಹಿಂದೂಗಳ ಒಕ್ಕೂಟ ದಾಳಿಗಾರರನ್ನು ಹಿಮ್ಮೆಟ್ಟಿಸಿತು. ಏನು ಸಂಭವಿಸಿತೆಂಬುದರ ಬಗೆಗೆ ಫಿರಿಸ್ತಾನ ವೃತ್ತಾಂತ ಇಲ್ಲಿದೆ.[6] ಅವನು ಮೇ ೨೬, ಕ್ರಿ.ಶ. ೧೩೪೩ರಿಂದ ಮೇ ೧೫, ೧೩೪೪ರ ವರೆಗೆ ಬಾಳಿದ ಹಿಜರಿ ಶಕೆ ೭೪೪ನ್ನು ಕುರಿತು ಹೇಳುತ್ತಾನೆ, ಮತ್ತು ವಾರಂಗಲ್ಲಿನ ರುದ್ರದೇವನ ಮಗ ಕೃಷ್ಣನಾಯಕ ಬಲ್ಲಾಳದೇವನಲ್ಲಿಗೆ ಗುಪ್ತವಾಗಿ

ಹೋಗಿ ದಕ್ಷಿಣದಿಂದ ಮಹಮ್ಮದೀಯರನ್ನು ಹೊರದೂಡುವ ಉದ್ದೇಶಕ್ಕಾಗಿ ಹಿಂದೂಗಳ ಒಕ್ಕೂಟ ಸೇರುವಂತೆ ಆಗ್ರಹಪಡಿಸಿದನೆಂದು ಹೇಳುತ್ತಾನೆ. ಬಲ್ಲಾಳ ರಾಜ ಸಮ್ಮತಿಸಿದ ಮತ್ತು ಎಲ್ಲ ಸಿದ್ಧತೆಗಳು ಮುಕ್ತಾಯವಾದಾಗ ತೆಲಿಂಗಾಣದ ಹಿಂದೂಗಳನ್ನೆಲ್ಲ ಹುರಿಗೊಳಿಸಿ ಅವರ ನೇತೃತ್ವ ತಾನೆ ವಹಿಸುವುದಾಗಿ ಭರವಸೆಯಿತ್ತ.

ಬಲ್ಲಾಳದೇವ ಆಗ ವಿಜಯನಗರ ನಗರವನ್ನು ಕಟ್ಟಿದ, ಸೈನ್ಯ ಅಣಿಗೊಳಿಸಿದ, ಮತ್ತು ಯುದ್ಧ ಆರಂಭವಾಯಿತು. ಆಗ ಮಹಮ್ಮದೀಯರ ಕೈಯಲ್ಲಿದ್ದ ವಾರಂಗಲ್ಲನ್ನು ಅಡಗಿಸಲಾಯಿತು, ಮತ್ತು ಅದರ ಮಂಡಲಾಧಿಪತಿ ಇಮಾದ್ ಉಲ್ ಮುಲ್ಕ್ ದೌಲತಾಬಾದಿಗೆ ಅರ್ಥಾತ್ ದೇವಗಿರಿಗೆ ಹಿಂದೆ ಸರಿದ. ಆ ಮೇಲೆ ಇಬ್ಬರೂ ಮುಖ್ಯಸ್ಥರು ಮಲಬಾರ ಮತ್ತು ಕ್ಯಾನರಾ ನಾಡುಗಳ ರಾಜರನ್ನು ತಮ್ಮ ಜೊತೆಗೂಡುವಂತೆ ಮನವೊಲಿಸಿದರು ಮತ್ತು ಸಂಯುಕ್ತ ಸೈನ್ಯಗಳು ಇಡೀ ದಕ್ಷಿಣವನ್ನು ವಶಪಡಿಸಿಕೊಂಡವು ಮತ್ತು ಅಲ್ಲಿನ ಮಹಮ್ಮದೀಯರನ್ನು ಹೊರ ದೂಡಿದವು. "ಇದರಿಂದ ಕೆಲವೇ ತಿಂಗಳಿನಲ್ಲಿ ದೌಲತಾಬಾದ ಒಂದನ್ನುಳಿದು ಮಹಮ್ಮದ ತಘಲಕ್‌ಸಿಗೆ ಆ ಭಾಗದಲ್ಲಿ ಯಾವ ಅಧೀನ ರಾಜ್ಯಗಳೂ ಉಳಿಯಲಿಲ್ಲ."

ಇದುವರೆಗೆ ಮಹಮ್ಮದೀಯ ಚರಿತ್ರಕಾರರನ್ನು ನೋಡಿದುದಾಯಿತು. ಹಿಂದೂಗಳ ಈ ಯಶಸ್ಸು ತಾತ್ಕಾಲಿಕ ಮಾತ್ರವಾಗಿತ್ತೆಂದು ಗಮನಿಸುವುದು ಅವಶ್ಯಕವಾಗಿದೆ. ಏಕೆಂದರೆ, ಇನ್ನೂ ಅವರ ಶತ್ರುಗಳು ದಕ್ಷಿಣದಲ್ಲಿ ಹಿಂಡು ಹಿಂಡಾಗಿ ಬರುತ್ತಿದ್ದರು ಮತ್ತು ಈ ಕದನ ಮುಗಿದ ಕೂಡಲೆ ಹಿಂದೂಗಳು ಪ್ರಕ್ಷುಬ್ಧ ನಾಡನ್ನು ತಾತ್ಕಾಲಿಕ ಅರಾಜಕತೆಗೆ ಬಲಿಯಾಗಲು ಬಿಟ್ಟು ಕೃಷ್ಣೆಯ ದಕ್ಷಿಣಕ್ಕೆ ಮರಳಿ ಹೋದಂತೆ ತೋರುತ್ತದೆ. ಇದು ತೀರ ಅಲ್ಪಾವಧಿಯದಾಗಿತ್ತು. ಏಕೆಂದರೆ, ಆ ಭಾಗದಲ್ಲಿ ದಿಲ್ಲಿಯ ಸುಲ್ತಾನನ ಪ್ರಾಬಲ್ಯ ಪೂರ್ತಿ ನಾಶಗೊಂಡಿತ್ತಾದರೂ ಮೂರು ವರ್ಷ ತರುವಾಯ ಅಂದರೆ ಫಿರಿಸ್ತಾನ ಪ್ರಕಾರ ಶುಕ್ರವಾರ ಆಗಸ್ಟ ೩ ಕ್ರಿ.ಶ. ೧೩೪೭ ರೊಂದಿಗೆ ಸರಿಹೊಂದುವ ಶುಕ್ರವಾರ ೨೪ನೆಯ ರಬಿ ಅಲ್ ಆಖಿರ್ ಹಿಜರಿ ಶಕೆ ೭೪೮ ರಂದು ಅಲಾಉದ್ದೀನ ಬಾಹ್ಮನಿ ಕಲಬುರ್ಗಾದಲ್ಲಿ ದಕ್ಷಿಣದ ಪ್ರಭುವೆಂದು ಅಭಿಷಿಕ್ತನಾದ. ಇದು ೧೮೦ ವರ್ಷ ಕಾಲ ಬಾಳಿದ ಹೊಸ ರಾಜವಂಶವೊಂದನ್ನು ಸ್ಥಾಪಿಸಿತು.

ಇದಾದ ಕೆಲವು ವರ್ಷಗಳ ನಂತರ ಕರ್ನಾಟಿಕ್ ನಾಡಿನ ಮೇಲೆ ಅಲಾಉದ್ದೀನ ಯಶಸ್ವಿ ದಾಳಿ ಮಾಡಿದ ; ಸೈನ್ಯ ಸ್ವಲ್ಪ ಕೊಳ್ಳೆಯೊಂದಿಗೆ ಮರಳಿತಾದರೂ ಅವನು ನಿರ್ಣಾಯಕ ವಿಜಯ ಸಾಧಿಸಿದನೆಂದು ಫಿರಿಸ್ತಾ ಒಪ್ಪುವುದಿಲ್ಲ. ಆದರೂ ಹೊಸ ಸುಲ್ತಾನನು "ಅದೋನಿ ಕೋಟೆಯ ನೆರೆ"ಯಾಗಿದ್ದ ತುಂಗಭದ್ರಾ ನದಿಯ ದಕ್ಷಿಣದಷ್ಟು ದೂರದವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದನೆಂದು ಅವನು

ಸಮರ್ಥಿಸುತ್ತಾನೆ. ಅಲಾಉದ್ದೀನ ಅರವತ್ತೇಳನೆಯ ವಯಸ್ಸಿನಲ್ಲಿ ರವಿವಾರ, ಫೆಬ್ರುವರಿ ೨ ಕ್ರಿ.ಶ. ೧೩೫೮[8] ರಂದು ತೀರಿಕೊಂಡ, ಮತ್ತು ಮಹಮ್ಮದ ಶಾಹ ಪಟ್ಟಕ್ಕೆ ಬಂದ. ವಿಜಯನಗರದ ರಾಯ ಅಲಾಉದ್ದೀನನಿಗೆ ಬೆಲೆ ಕಟ್ಟಲು ಬಾರದ ಮಾಣಿಕ್ಯವನ್ನು ಕಾಣಿಕೆಯಾಗಿ ಕೊಟ್ಟಿದ್ದ, ಬೆಲೆಯುಳ್ಳ ಹರಳುಗಳಿಂದ ಮಾಡಿದ ಸ್ವರ್ಗಪಕ್ಷಿಯ ಮಧ್ಯದಲ್ಲಿ ಅದನ್ನು ಜೋಡಿಸಿ ಸುಲ್ತಾನ ತನ್ನ ಸಿಂಹಾಸನದ ವಿತಾನದಲ್ಲಿರಿಸಿದನು. ಆದರೆ, ಇದನ್ನು ಮಾಡಿದ್ದು ಮಹಮ್ಮದನೆಂದೂ ಮಾಣಿಕ್ಯವನ್ನು ಅವನ ರಾಜಛತ್ರದ ಮೇಲೆ ಇರಿಸಲಾಯಿತೆಂದೂ ಕೆಲವರು ಹೇಳುತ್ತಾರೆ.

ಮಹಮ್ಮದನ ಆಳಿಕೆಯ ಪ್ರಥಮದಲ್ಲಿಯೆ ವಿಜಯನಗರ ಹಾಗೂ ವಾರಂಗಲ್ಲಿನ ಹಿಂದೂಗಳಿಂದ ಬಾಹಮನಿ ಸುಲ್ತಾನರ ಬಂಗಾರ ಹಾಗೂ ಬೆಳ್ಳಿಯ ನಾಣ್ಯಗಳನ್ನು ದೊಡ್ಡ ಪ್ರಮಾಣದಲ್ಲಿ ಕರಗಿಸಲಾಗುತ್ತಿತ್ತು. ಮತ್ತು ಅನೇಕ ವರ್ತಕರನ್ನು ಕೊಲ್ಲಲಾಯಿತು. ಅದೇ ಕಾಲಕ್ಕೆ ಒಂದನೆಯ ಬುಕ್ಕ ವಾರಂಗಲ್ಲಿನ ತನ್ನ ಮಿತ್ರನ ಬೆಂಬಲದೊಂದಿಗೆ ಕೆಲವು ಪ್ರದೇಶಗಳ ವಾಪಸಾತಿಯನ್ನು ಬೇಡಿದನು[9] ಮತ್ತು ಸುಲ್ತಾನನು ಯುದ್ಧಕ್ಕೆ ಸಿದ್ಧನಾಗಿರದ್ದರಿಂದ "ಒಂದೂವರೆ ವರ್ಷ ಕಾಲ ತನ್ನ ದರಬಾರಿನಲ್ಲಿ ರಾಯರ ರಾಯಭಾರಿಗಳನ್ನು ಇಟ್ಟುಕೊಂಡನು ಮತ್ತು ತನ್ನವರನ್ನು ಬೀಜನಗರಕ್ಕೆ ಶತ್ರುಗಳನ್ನು ವಿನೋದಪಡಿಸಲೋಸುಗ ಕಳಿಸಿದನು." ಕೊನೆಗೆ ಯುದ್ಧ ಮಾಡುವುದೆಂದು ನಿರ್ಧರಿಸಿದ. ಮತ್ತು ಹಿಂದೂಗಳ ಮೇಲೆ ಅಲೆಯಾದ ಪ್ರತಿಬೇಡಿಕೆಗಳನ್ನು ಮಾಡಿದ. ಬುಕ್ಕ ವಾರಂಗಲ್ಲಿನ ಸೈನ್ಯದೊಂದಿಗೆ ತನ್ನದನ್ನೂ ಸೇರಿಸಿದ. ಮಹಮ್ಮದ ವಾರಂಗಲ್ಲಿನ ಮೇಲೆ ಯುದ್ಧ ಹೂಡಿ ರಾಜಧಾನಿಯವರೆಗೂ ಆ ನಾಡನ್ನು ಕೊಳ್ಳೆ ಹೊಡೆದ ಮತ್ತು ವಿಪುಲ ನಷ್ಟಪರಿಹಾರಧನ ಪಡೆದುಕೊಂಡೇ ಮರಳಿದ. ಇನ್ನೂ ಹೆಚ್ಚಿನ ದಾಳಿಯನ್ನು ಆಗ ಆರಂಭಿಸಲಾಗಲಿಲ್ಲವೆಂದು ಫಿರಿಸ್ತಾ ಹೇಳುತ್ತಾನೆ. ಆದುದರಿಂದ, ಮಹಮ್ಮದೀಯರು ತಮಗೆ ದೊರೆತ ಪ್ರಯೋಜನದ ಲಾಭ ಪಡೆಯಲಿಲ್ಲವೆಂದು ನಾವು ಭಾವಿಸಬೇಕಾಗುತ್ತದೆ. ವಾರಂಗಲ್ಲನ್ನು ಬಹುಕಾಲ ಶಾಂತಿಯಿಂದ ಇರಲು ಬಿಡಲಿಲ್ಲ, ಮತ್ತು ವಿಜಯನಗರದ ಬುಕ್ಕನ ಆಳಿಕೆಯ ಘಟನೆಗಳಿಗೆ ಮರಳುವ ಮುನ್ನ ವಾರಂಗಲ್ಲಿನ ತದನಂತರದ ಇತಿಹಾಸದ ಕಡೆಗೆ ಕಣ್ಣು ಹಾಯಿಸುವುದೊಳಿತು.

ಕೆಲ ಸಮಯದ ನಂತರ, ವಾರಂಗಲ್ಲಿನ ರಾಜ ಮಾಡಿದ ಅಥವಾ ಮಾಡಿದನೆಂದು ಹೇಳಲಾಗುವ ಅವಮಾನದಿಂದ ಕೋಪಗೊಂಡು ಮಹಮ್ಮದ ಫಿರಿಸ್ತಾ ಬರೆದಿರುವಂತೆ "ವೆಲ್ಲನ್ ಪಟ್ಟನ್" ಅಥವಾ ಬರಹಾನ್-ಇ-ಮಾಸರ್‌ನ ಕರ್ತೃವಿನ ಪ್ರಕಾರ "ಫಿಲಮ್‌ಪಾಟನ್" ನಗರದತ್ತ ಭರದಿಂದ ಸಾಗಿದ. ಅವನು ಅದನ್ನು ವಶಪಡಿಸಿಕೊಂಡ, ನಿವಾಸಿಗಳನ್ನು ದಯೆಯಿಲ್ಲದೆ ಕೊಂದುಹಾಕಿದ ಮತ್ತು

ನತದೃಷ್ಟ ವಿನಾಯಕ ದೇವನನ್ನು[10] ಸೆರೆಹಿಡಿದ ಸುಲ್ತಾನನು ದುರ್ಗದ ಮುಂದೆ ಕಟ್ಟಿಗೆಯ ರಾಶಿಗೆ ಉರಿ ಹಚ್ಚಲು ಆಜ್ಞಾಪಿಸಿದ ಮತ್ತು ನಾಗದೇವನನ್ನು ಯಾತ್ರೆ (ಕವಣೆಯಂತ್ರ)ದಲ್ಲಿರಿಸಿ ಗೋಡೆಗಳಿಂದ ಜ್ವಾಲೆಗಳಲ್ಲಿ ಅವನನ್ನು ಎಸೆಸಿದ. ಅದೇ ಜ್ವಾಲೆಗಳಲ್ಲಿ ಅವನು ಸುಟ್ಟುಹೋದ." ಕೆಲವು ದಿನಗಳ ವಿಶ್ರಾಂತಿಯ ನಂತರ ಸುಲ್ತಾನ ಹಿಂತಿರುಗಿದ. ಆದರೆ, ಹಿಂದೂಗಳ ದೊಡ್ಡ ದೊಡ್ಡ ಪಡೆಗಳು ಅವನನ್ನು ಬೆನ್ನಟ್ಟಿ, ಪೀಡಿಸಿ ಸಂಪೂರ್ಣವಾಗಿ ಪಲಾಯನಗೊಳಿಸಿದವು. ೧೫೦೦ ಮಂದಿ ಮಾತ್ರ ಕಲಬರ್ಗಾಕ್ಕೆ ಮರಳಿದರು, ಮತ್ತು ಸುಲ್ತಾನನಿಗೂ ತೋಳಿನ ಮೇಲೆ ತೀವ್ರ ಗಾಯವಾಗಿತ್ತು.

ಇದರ ಬೆನ್ನು ಹಿಂದೆಯೆ ವಿಜಯನಗರದ ಬುಕ್ಕ ಮತ್ತು ವಾರಂಗಲ್ಲಿನ ರಾಜ ದಿಲ್ಲಿಯ ಸುಲ್ತಾನನಿಗೆ ಸಂಯುಕ್ತ ರಾಯಭಾರ ಕಳಿಸಿದರು. ಆ ದೊರೆ ದಕ್ಷಿಣದಲ್ಲಿ ಕಳೆದುಕೊಂಡಿದ್ದ ಬಲವನ್ನು ಮರಳಿ ಪಡೆಯಲೋಸುಗ ದಕ್ಷಿಣದತ್ತ ಸೇನೆಯನ್ನು ಕಳಿಸುವುದಾದರೆ ಅವರು ಅವನೊಂದಿಗೆ ಸಂಯೋಗ ನೀಡುವುದಾಗಿ ರಾಯಭಾರದಲ್ಲಿ ಹೇಳಲಾಗಿತ್ತು ; "ಆದರೆ ಅವರಿಗೆ ಸಹಾಯ ಮಾಡಲಾರದಷ್ಟು ಗೃಹಕ್ಷೋಭೆಗಳಲ್ಲಿ ಸಿಲುಕಿಕೊಂಡಿದ್ದ ಫಿರೋಜ ಶಾಹ ಅವರ ನಿವೇದನೆಯ ಕಡೆಗೆ ಲಕ್ಷ್ಯ ಕೊಡಲಿಲ್ಲ." ಹೀಗೆ ಉತ್ತೇಜಿತನಾಗಿ ಮುಹಮ್ಮದ ಹೊಸ ಸೈನ್ಯಗಳನ್ನು ಕೂಡಿಸಿದ ಮತ್ತು ಅವುಗಳನ್ನು ವಾರಂಗಲ್ಲು ಮತ್ತು ಗೋಲ್ಕೊಂಡಗಳ ವಿರುದ್ಧ ಎರಡು ತುಕಡಿಗಳಲ್ಲಿ ಕಳಿಸಿಕೊಟ್ಟ ದಂಡಯಾತ್ರೆ ಸಫಲವಾಗಿ ರಾಜ ಶರಣಾಗತನಾದ, ಸುಲ್ತಾನ ಶಾಂತಿಯ ಬೆಲೆಯಾಗಿ ಗೋಲ್ಕೊಂಡವನ್ನು, ಅತುಲ ಸಂಪತ್ತನ್ನು ಮತ್ತು ಭವ್ಯ ಸಿಂಹಾಸನ ವೊಂದನ್ನು ಪಡೆದ. ಬಹು ಬೆಲೆಯ ಅಮೂಲ್ಯ ಹರಳುಗಳಿಂದ ಜೋಡಿಸಲಾದ ಮತ್ತು ತರುವಾಯದ ರಾಜರಿಂದ ಇನ್ನೂ ಶ್ರೀಮಂತಗೊಳಿಸಲಾದ ಸಿಂಹಾಸನದ ಬೆಲೆ ನಾಲ್ಕು ದಶಲಕ್ಷ ಪೌಂಡುಗಳೆಂದು ಅಂದಾಜು ಮಾಡಲಾಗಿತ್ತು.[11] ಕೊನೆಗೆ ವಾರಂಗಲ್ಲು ಕ್ರಿ.ಶ. ೧೪೨೪ರಲ್ಲಿ ಪತನವಾಯಿತು ಮತ್ತು ಬಾಹಮನಿ ರಾಜ್ಯಕ್ಕೆ ಸೇರಿಸಿಕೊಳ್ಳಲಾಯಿತು. ಹೀಗೆ, ಪೂರ್ವ ಕರಾವಳಿಯ ನೆರೆಹೊರೆಯನ್ನುಳಿದು ಕೃಷ್ಣಾ ನದಿಯುದ್ದದವರೆಗೂ ಮುಹಮ್ಮದೀಯರು ಚಾಚಿದಂತಾಯಿತು.

ಈಗ ಬುಕ್ಕನ ಆಳಿಕೆಯ ಪ್ರಮುಖ ಘಟನೆಗಳನ್ನು ಮತ್ತು ವಿಜಯನಗರದ ಆಗುಹೋಗುಗಳನ್ನು ನೋಡೋಣ. ೧೩೬೫ನೆಯ ವರ್ಷದ ಸುಮಾರಿಗೆ ಕತೆಯಲ್ಲಿನ ಆಸಕ್ತಿ ಗಾಢವಾಗುತ್ತದೆ. ಎರಡು ಶತಮಾನಗಳವರೆಗೆ ನಾವು ಹೆಚ್ಚು ಕಷ್ಟವಿಲ್ಲದೆ ಆ ಹಿಂದೂ ರಾಜ್ಯದ ಅದೃಷ್ಟವನ್ನು ಅನುಸರಿಸಬಹುದು.

ಕ್ರಿ.ಶ. ೧೩೬೬ರ[12] ಆದಿಯಲ್ಲಿ ಸುಲ್ತಾನನು ವಿಜಯನಗರದ ವಿರುದ್ಧ ತನ್ನ ಪ್ರಥಮ ಕ್ರಮಬದ್ಧ ದಂಡಯಾತ್ರೆ ಆರಂಭಿಸಿದನು. ಭೋಜನೋತ್ತರ ಮೋಜುಗಾಟದಿಂದ ಮೊದಲುಗೊಂಡು ಅದು ಎಷ್ಟೊಂದು ಕಗ್ಗೊಲೆಯ ನಂತರ

ಮುಕ್ತಾಯವಾಯಿತೆಂದರೆ ಹಿಂದೂ ಪಕ್ಷ ಒಂದರಲ್ಲಿಯೆ ಅರ್ಧ ದಶಲಕ್ಷ ಜನ ಸಾವಿಗೀಡಾದರೆಂದು ಫಿರಿಸ್ತಾ ಲೆಕ್ಕಾಚಾರ ಮಾಡುತ್ತಾನೆ. ಸುಲ್ತಾನ ಮುಹಮ್ಮದನ ಮುದ್ರಾಧಿಕಾರಿಯಾಗಿದ್ದ ಬೀದರಿನ ಮುಲ್ಲಾ ದಾಊದನೆಂಬ ಪ್ರತ್ಯಕ್ಷದರ್ಶಿ ಆ ಕತೆಯನ್ನು ಹೇಳಿರುವನು.

"ಒಂದು ಸಂಜೆ, ಆನಂದವನದ ವಸಂತ ಮುಹಮ್ಮದ ಶಾಹನ ಗಲ್ಲವನ್ನು ಸಂತೋಷದ ಗುಲಾಬಿ ಛಾಯೆಯಿಂದ ತುಂಬಿದಾಗ ರಾಜರನ್ನು. ಸಂತೋಷ ಸಮಾರಂಭ ಮತ್ತು ಸಂಗೀತಗಳನ್ನು ಪ್ರಶಂಸಿಸುವ ಅಮೀರ ಖುಸ್ರೂನ ಎರಡು ಗೀತೆಗಳನ್ನು ಸಂಗೀತಗಾರರ ವೃಂದ ಹಾಡಿತು. ಸುಲ್ತಾನನ ಸಂತೋಷಕ್ಕೆ ಪಾರವಿರಲಿಲ್ಲ, ಮತ್ತು ಅವನು ಬೀಜನಗರದ ಬೊಕ್ಕಸದ ಮೇಲೆ ಬಕ್ಷೀಸಿನ ಹುಂಡಿಯೊಂದನ್ನು ಆ ಮುನ್ನೂರು ಕಲಾಕಾರರಿಗೆ ಕೊಡಬೇಕೆಂದು ಮಾಲಿಕ್ ಸೈಫ್ ಅದ್ ದಿಎನ್‌ನಿಗೆ ಆಜ್ಞಾಪಿಸಿದ. ಆ ಆಜ್ಞೆ ಸುರೆಯ ಪರಿಣಾಮವೆಂದರಿತಿದ್ದ ಪ್ರಧಾನಿ ಅವನ ಚಿತ್ತ ಸಮಾಧಾನಗೊಳಿಸಲೋಸುಗ ಅದನ್ನು ಬರೆದನಾದರೂ ರವಾನಿಸಲಿಲ್ಲ. ಮುಹಮ್ಮದ ಶಾಹನಾದರೊ ಅವನ ಇಂಗಿತವನ್ನು ಅರಿತ. ಮರುದಿನ ಹುಂಡಿಯನ್ನು ರಾಯನಿಗೆ ಕಳಿಸಲಾಗಿದೆಯೊ ಹೇಗೆಂದು ವಿಚಾರಿಸಿದ. ಇಲ್ಲವೆಂದು ಉತ್ತರಿಸಲಾಗಿ "ಅರ್ಥವಿಲ್ಲದ ಶಬ್ದ ನನ್ನ ಬಾಯಿಂದ ಹೊರ ಬೀಳಬಹುದೆಂದು ನೀನು ಭಾವಿಸಿರುವಿಯಾ ? ನಾನು ಆ ಆಜ್ಞೆಯನ್ನು ನಿಶೆಯಲ್ಲಿ ನೀಡಲಿಲ್ಲ, ಗಂಭೀರ ಆಲೋಚನೆಯಿಂದ ನೀಡಿರುವೆ" ಎಂದು ಉದ್ಗರಿಸಿದ. ಇದನ್ನು ಕೇಳಿ ಮಾಲಿಕ್ ಸೈಫ್ ಅದ್ ದಿಎನ್ ಹುಂಡಿಗೆ ರಾಜಮುದ್ರೆ ಒತ್ತಿ ವಿಶೇಷ ದೂತನ ಮೂಲಕ ವಿಜಯನಗರದ ರಾಯನೆಡೆಗೆ ಕಳಿಸಿದನು. ಬಿಂಕದ ಹಾಗೂ ತನ್ನ ಸ್ವಾತಂತ್ರ್ಯದ ಬಗೆಗೆ ಅಭಿಮಾನವುಳ್ಳ ರಾಯನು ಆ ಹುಂಡಿ ತಂದವನನ್ನು ಕತ್ತೆಯ ಮೇಲೆ ಕುಳ್ಳಿರಿಸಿ ಬೀಜನಗರದ ಎಲ್ಲ ಭಾಗಗಳಲ್ಲಿಯೂ ಮೆರೆಸಿ ಎಲ್ಲ ತಿರಸ್ಕಾರ, ಧಿಕ್ಕಾರಗಳ ಲಕ್ಷಣಗಳೊಂದಿಗೆ ವಾಪಸು ಕಳುಹಿಸಿದ. ತನ್ನ ಸೈನ್ಯವನ್ನು ಕೂಡಿಸಲೂ ತುರ್ತು ಆಜ್ಞೆ ನೀಡಿದ ಮತ್ತು ಭಾಮನೀ ಮನೆತನದ ಪ್ರದೇಶಗಳ ಮೇಲೆ ದಾಳಿಯಿಡಲು ಸಿದ್ಧತೆ ಮಾಡಿಕೊಂಡ. ಈ ಹೇತುವಿನಿಂದ ಅವನು ಮೂವತ್ತು ಸಾವಿರ ಕುದುರೆ, ಮೂರು ಸಾವಿರ ಆನೆ, ಮತ್ತು ಒಂದು ನೂರು ಸಾವಿರ ಕಾಲಾಳುಗಳೊಂದಿಗೆ ಊದ್ನೀ[14] ಕೋಟೆಯ ಸಮೀಪಕ್ಕೆ ಸಾಗಿದ ; ಅಲ್ಲಿಂದ ನಿಜವಾದ ಭಕ್ತರ (ಮುಹಮ್ಮದೀಯರ) ನಾಡನ್ನು ನಾಶಪಡಿಸಲು ಮತ್ತು ಬೆಂಗಾಡಾಗಿಸಲು ಸೈನ್ಯದ ತುಕಡಿಗಳನ್ನು ರವಾನಿಸಿದ."

ಮಳೆಗಾಲವಾಗಿದ್ದರೂ ಸಹ ರಾಯ ರಾಯಚೂರು ದೋಆಬ ಅರ್ಥಾತ್ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ಸಂಗಮದ ಪಶ್ಚಿಮಕ್ಕಿರುವ ತ್ರಿಕೋಣಾ

ಕೃತಿಯು ವಿಶಾಲ ಪ್ರದೇಶದಲ್ಲಿ ಮಹತ್ವದ ಪಟ್ಟಣವಾಗಿರುವ ಮುದಕಲ್‌ಗೆ ಮುನ್ನುಗ್ಗಿದ. ಮುಂದಿನ ೨೦೦ ವರ್ಷಗಳವರೆಗೆ ಸಂತತ ಯುದ್ಧದ ಸ್ಥಳವಾದ ಆ ಪ್ರದೇಶ ಎಂದಿಗೂ ಹಿಂದೂ, ಮತ್ತು ಮುಸ್ಲಿಮರ ನಡುವೆ ವಾದಗ್ರಸ್ತ ಭೂಮಿಯಾಗಿದೆ. ಮುದಕಲ್ ಅನ್ನು ವಶಪಡಿಸಿಕೊಳ್ಳಲಾಯಿತು. ಪುರುಷರು, ಸ್ತ್ರೀಯರು, ಮಕ್ಕಳು ಸೇರಿದಂತೆ ಎಲ್ಲ ನಿವಾಸಿಗಳನ್ನೂ ಖಡ್ಗಕ್ಕೆ ನೀಡಲಾಯಿತು. ಒಬ್ಬನೇ ಒಬ್ಬ ಪಾರಾದ ಮತ್ತು ಕಲಬರ್ಗಾಕ್ಕೆ ಸುದ್ದಿ ಒಯ್ದ....

"ಅದನ್ನು ಕೇಳಿ ಮುಹಮ್ಮದ ಶಾಹ ದುಃಖ ಹಾಗೂ ಕೋಪಪರವಶನಾಗಿ ನತದೃಷ್ಟ ಓಲೆಕಾರನನ್ನು ತಕ್ಷಣ ಕೊಲ್ಲುವಂತೆ ಆಜ್ಞಾಪಿಸಿದ; ಇಷ್ಟೊಂದು ಧೀರ ಸಂಗಾತಿಗಳ ಹತ್ಯೆಯನ್ನು ಕಂಡೂ ಬದುಕುಳಿದ ದುರಾತ್ಮನ ನೋಟವನ್ನು ತಾನು ಸಹಿಸಲಾರೆ ಎಂದು ಉದ್ಗರಿಸಿದ."

ಅದೇ ದಿನ—ಅಂದರೆ, ಜನವರಿ ೧೪ ರಿಂದ ಫೆಬ್ರುವರಿ ೧೩, ಕ್ರಿ.ಶ. ೧೩೬೬ರ ವರೆಗೆ ಇದ್ದ ಜಮಾದ್-ಉಲ್-ಅವ್ವಲ್ ತಿಂಗಳಲ್ಲಿ, ಹಿ.ಶ. ೭೬೭ರ ಒಂದು ದಿನ—ಸುಲ್ತಾನ ಗಂಭೀರ ಪ್ರಮಾಣ ಮಾಡಿ ದಕ್ಷಿಣದತ್ತ ನಡೆದ—"(ಪ್ರಮಾಣ) ಏನೆಂದರೆ ನಿಜ ಭಕ್ತರ ಕೊಲೆಯ ಪರಿಹಾರವಾಗಿ ಒಂದು ನೂರು ಸಾವಿರ ಕಾಫಿರರನ್ನು ಕೊಲ್ಲುವವರೆಗೆ ತನ್ನ ಪವಿತ್ರ ಯುದ್ಧದ ಖಡ್ಗವನ್ನು ಒರೆಯಲ್ಲಿ ಸೇರಿಸಲಾರೆ, ಹತ್ಯೆಯನ್ನೂ ನಿಲ್ಲಿಸಲಾರೆ. ಕಿಸ್ಟ್ನಾದ ತೀರ ತಲುಪಲಾಗಿ, ಶತ್ರುಸಮ್ಮುಖದಲ್ಲಿ ಆ ನದಿಯನ್ನು ದಾಟಿ ದೇವರ ಅನುಗ್ರಹದಿಂದ ಅವರ ಸೈನ್ಯವನ್ನು ಹೊಡೆದೋಡಿಸಿ ಅವರನ್ನು ಕೊಂದವರ ರಕ್ತದಿಂದ ಮುದಕಲ್ ಹುತಾತ್ಮರ ಆತ್ಮಗಳನ್ನು ತಣಿಸುವ ತನಕ ತಾನು ಊಟ ಅಥವಾ ನಿದ್ದೆ ಮಾಡುವುದು ನ್ಯಾಯ ಸಮ್ಮತವಲ್ಲ ಎಂದು ತನ್ನನ್ನು ಸೃಷ್ಟಿಸಿದ ಹಾಗೂ ರಾಜಪದವಿಗೆ ಏರಿಸಿದ ದೈವದಾಣೆಯಾಗಿ ಪ್ರತಿಜ್ಞೆಗೈದ. ಆ ಮೇಲೆ ಅವನು ತನ್ನ ಮಗ ಮುಜಾಹಿದ ಶಾಹನನ್ನು ತನ್ನ ಉತ್ತರಾಧಿಕಾರಿಯೆಂದೂ ಮಾಲಿಕ್ ಸೈಫ್ ಅದ್ ದಿಎನ್‌ನನ್ನು ರಾಜ್ಯದ ರಾಜಪ್ರತಿನಿಧಿಯೆಂದೂ ನಿಯಮಿಸಿದನು. ಇಪ್ಪತ್ತನ್ನು ಹೊರತುಪಡಿಸಿ ತನ್ನೆಲ್ಲ ಆನೆಗಳನ್ನು ಯುವರಾಜನಿಗೆ ಬಿಟ್ಟುಕೊಟ್ಟು ಅವನಿಗೆ ಉಪದೇಶ ನೀಡಿ ಕಲಬರ್ಗಾಕ್ಕೆ ಕಳಿಸಿಕೊಟ್ಟ. ನಂತರ ಅವನು ತಡಮಾಡದೆ ಆಯ್ದ ಒಂಬತ್ತು ಸಾವಿರ ಅಶ್ವದಳದೊಂದಿಗೆ ನದಿ ದಾಟಿದ. ಬೀಜನಗರದ ರಾಯ ತನ್ನಲ್ಲಿ ಬೃಹತ್ ಸೈನ್ಯ ವಿದ್ದರೂ ಎಷ್ಟೊಂದು ಗಾಬರಿಯಾದನೆಂದರೆ[15] ಮರುದಿನ ಬೆಳಿಗ್ಗೆ ಸೂಕ್ತ ಕಂಡಂತೆ ಶತ್ರುವನ್ನು ಎದುರಿಸುವ ಇಲ್ಲವೆ ಹಿಂದೆ ಸರಿಯುವ ಉದ್ದೇಶದಿಂದ ತನ್ನ ಎಲ್ಲ ಸಂಪತ್ತು, ಬೆಲೆಯುಳ್ಳ ಸಾಮಾನು ಮತ್ತು ಆನೆಗಳನ್ನು ರಾಜಧಾನಿಯ ಕಡೆಗೆ ಕಳಿಸಿಕೊಟ್ಟ. ಆ ರಾತ್ರಿ ಬಿರುಗಾಳಿಯಿಂದ ಕೂಡಿದುದಾಗಿದ್ದರಿಂದಲೂ ಭಾರಿ ಮಳೆ ಬೀಳುತ್ತಿದ್ದುದರಿಂದಲೂ ಆನೆಗಳು ಮತ್ತು ಇತರ ಹೊರೆ ಹೊರುವ

ಪ್ರಾಣಿಗಳು ಪದೇ ಪದೇ ಕೆಸರಿನಲ್ಲಿ[16] ಸಿಲುಕಿಕೊಂಡವು. ಮತ್ತು ಶಿಬಿರದಿಂದ ನಾಲ್ಕು ಮೈಲಿಗಿಂತ ಹೆಚ್ಚು ದೂರ ಕ್ರಮಿಸಲಿಲ್ಲ. ರಾತ್ರಿ ಮಹಮ್ಮದ ಶಾಹ ಶತ್ರುಗಳ ಚಲನೆಯ ಬಗೆಗೆ ಕೇಳಿದ ಮತ್ತು ತಕ್ಷಣ ತನ್ನ ಶಿಬಿರವನ್ನು ಇದ್ದಂತೆಯೆ ಬಿಟ್ಟು ಅವರತ್ತ ನಡೆದ. ನಸುಕಿನಲ್ಲಿ ಅವನು ರಾಯನ ಶಿಬಿರ ತಲುಪಿದ. ಕಾಳಗದ ಕರೆ ನೀಡುತ್ತಲೆ ಎಷ್ಟೊಂದು ಗೊಂದಲ ಉಂಟಾಯಿತೆಂದರೆ ಕಾಫಿರರು ಎಲ್ಲವನ್ನೂ ಹಿಂದೆ ಬಿಟ್ಟು ಅತ್ಯಂತ ಲಗುಬಗೆಯಿಂದ ಊದ್ನೀ ಕೋಟೆಯತ್ತ ಓಡಿದರು. ಮಹಮ್ಮದ ಶಾಹ ಅವರ ವ್ಯಾಪಾರಸ್ಥಳ ಹಾಗೂ ಸಾಮಾನು ಸರಂಜಾಮಿನ ಶಿಬಿರವನ್ನು ಪ್ರವೇಶಿಸಿದ ಮತ್ತು ಯಾವ ಭೇದಭಾವ ತೋರದೆ ಎಲ್ಲರನ್ನೂ ಕೊಂದ; ಮತ್ತು ಎಪ್ಪತ್ತು ಸಾವಿರ ಪುರುಷರು, ಸ್ತ್ರೀಯರು ಮತ್ತು ಮಕ್ಕಳು ಕೊಲೆಯಾದರೆಂದು ಹೇಳಲಾಗುತ್ತದೆ."

ಮಹಮ್ಮದ ಆ ವರ್ಷ ಬೇಸಿಗೆ ಕಾಲವನ್ನೂ ಮಳೆಗಾಲದ ಆದಿಭಾಗವನ್ನೂ ಮುದಕಲ್ಲಿನ ಹತ್ತಿರ ಕಳೆದ. ಹೆಚ್ಚುವರಿ ಸೈನ್ಯದಿಂದ ಬಲಗೊಂಡು ಅದೋನಿಯ ವಿರುದ್ಧ ನಡೆದ -"ಊದ್ನೀಯ ಅಧಿಪತ್ಯವನ್ನು ತನ್ನ ಸಹೋದರಿಯ ಮಗನಿಗೆ ವಹಿಸಿಕೊಟ್ಟು ಬೀಜನಗರದ ರಾಯ ತನ್ನದೇ ಪ್ರದೇಶದಲ್ಲಿ, ಅದೋನಿಯ ಬಯಲುಗಳಲ್ಲಿ, ತುಮೆದ್ರ (ತುಂಗಭದ್ರಾ)ದ ದಡಗಳ ಮೇಲೆ ಸೈನಿಕ ಠಾಣೆ ಹೂಡಿದ್ದ. ಅಲ್ಲಿ ಅವನು ದೊಡ್ಡ ಸೈನ್ಯವನ್ನು ಜಮಾಯಿಸಿದ್ದ ಮತ್ತು ಆನೆಗಳನ್ನು ಹಾಗೂ ಬೀಜನಗರದಿಂದ ಸಾಮ್ರಾಜ್ಯದ ಎಲ್ಲ ಭವ್ಯ ಲಾಂಛನಗಳನ್ನು ತಂದಿದ್ದ"[17].

ಸುಲ್ತಾನನಲ್ಲಿ ಫಿರಂಗಿಪಡೆ[18] ಇತ್ತು ಮತ್ತು ಅವನು ಅನತಿ ಕಾಲದಲ್ಲಿ ತುಂಗಭದ್ರಾ ದಾಟಿದ, "ಮತ್ತು ಬೀಜನಗರದ ಪ್ರಾಂತಗಳನ್ನು ಪ್ರವೇಶಿಸಿದ. ಅವುಗಳ ಮೇಲೆ ಮುಹಮ್ಮದೀಯ ಸಾರ್ವಭೌಮನು ಖುದ್ದಾಗಿ ದಾಳಿ ಇಟ್ಟುದು ಇದೇ ಮೊದಲು." ಫಿರಿಸ್ತಾನ ಈ ಹೇಳಿಕೆ ಐತಿಹಾಸಿಕವಾಗಿ ಸರಿಹೊಂದುತ್ತದೆ. ಏಕೆಂದರೆ, ಆನೆಗುಂದಿಯ ಮೇಲೆ ದಿಲ್ಲಿ ಸುಲ್ತಾನನ ಆಕ್ರಮಣ ಆ ನದಿಯ ಉತ್ತರ ದಡದಲ್ಲಿ ಜರುಗಿತು.

ಕತೆ ಮುಂದುವರಿಸುವ ಮುನ್ನ ಫಿರಿಸ್ತಾ ವಿಜಯನಗರದ ರಾಜನನ್ನು "ಕಿಶನ್ ರಾಯ್", ಬೇರೆ ರೀತಿಯಲ್ಲಿ ಹೇಳುವುದಾದರೆ ಕೃಷ್ಣರಾಯ, ಎಂದು ಕರೆಯುತ್ತಾನೆ ಎನ್ನುವುದನ್ನು ಗಮನಿಸಬೇಕು. ಆದರೆ, ಅವನ ಹೆಸರು ಬುಕ್ಕ ಎಂದಿದ್ದುದು ನಿಸ್ಸಂದೇಹವಾದುದು. ಆ ಚರಿತ್ರಕಾರ ಈ ಘಟನೆಗಳು ಜರುಗಿದ ಇನ್ನೂರು ವರ್ಷದ ಬಳಿಕ ತನ್ನ ಮಾಹಿತಿ ಸಂಗ್ರಹಿಸಿದನು ಮತ್ತು ತಾನು ಬರೆಯುತ್ತಿರುವ ಹಿಂದೂ ರಾಜರ ಹೆಸರುಗಳನ್ನು ತಪ್ಪಾಗಿ ಕರೆದನು.

ಅಂದಹಾಗೆ, ಮಹಮ್ಮದ ತುಂಗಭದ್ರಾ ದಾಟಿದ. ಅವನ ಮತ್ತು ಅದೋನಿಯ ದೊಡ್ಡ ಕೋಟೆಯ ಮಧ್ಯೆ ಕೇವಲ ಇಪ್ಪತ್ತೈದು ಮೈಲು ಅಂತರವಿತ್ತು.

ಅದು ನದಿಯಿಂದ ಸುಮಾರು ಅಷ್ಟೇ ದೂರದಲ್ಲಿನ ಕಡಿದಾದ ಗುಡ್ಡಗಳ ಸಾಲಿನಲ್ಲಿ ನಿಂತಿದೆ. ತನ್ನ ಗತಿಯ ಈ ಭಾಗದಲ್ಲಿ ತುಂಗಭದ್ರಾ ಪಶ್ಚಿಮದಿಂದ ಉತ್ತರಕ್ಕೆ ಕಾಲು ವೃತ್ತದ ಚಾಪವನ್ನು ರಚಿಸಿತ್ತೆಂದೂ ಅದೋನಿ ಅದರ ಮಧ್ಯದಲ್ಲಿದ್ದು ಅದರ ತ್ರಿಜ್ಯ ಸ್ಥೂಲವಾಗಿ ಸುಮಾರು ಇಪ್ಪತ್ತೈದು ಮೈಲು ಉದ್ದವಿದೆಯೆಂದೂ ಭಾವಿಸ ಬಹುದು. ಎತ್ತರವಲ್ಲದ ದಡಗಳುಳ್ಳ, ಕಲ್ಲು ಹಾಸಿಗೆಯಲ್ಲಿ ಮಲಗಿರುವ ನದಿ ವರ್ಷದ ಬಹುತೇಕ ಋತುಗಳಲ್ಲಿ ದಾಟಬಹುದಾದುದಾಗಿದೆ. ಈ ದಂಡಯಾತ್ರೆಯ ಸ್ಥಳಗಳನ್ನು ಖಚಿತವಾಗಿ ಗುರುತಿಸುವುದು ಕಷ್ಟಕರ. ಆದರೆ, ನಾನು ಸಾಮಾನ್ಯ ವಾಗಿ ಹೀಗೆ ಗ್ರಹಿಸುತ್ತೇನೆ : ಮುಹಮ್ಮದೀಯರು ಅದೋನಿಯನ್ನು ಅಡಗಿಸುವ ಗುರಿ ಹೊಂದಿದ್ದುದನ್ನು ಕಂಡು ಬುಕ್ಕ ಈ ಚಲನೆಯನ್ನು ನಡುದಾರಿಯಲ್ಲಿ ಅಡ್ಡಗಟ್ಟಲೋಸುಗ ಬಲು ದೊಡ್ಡ ಸೈನ್ಯದೊಂದಿಗೆ ಸಾಗಿ ಅಪಾಯಕ್ಕೆ ಗುರಿ ಯಾಗಿದ್ದ ಕೋಟೆಯಲ್ಲಿ ತುಂಗಭದ್ರೆಯ ದಕ್ಷಿಣ ದಡದ ಮೇಲೆ ಬಂದು ನಿಂತ. ಸುಲ್ತಾನನು ಈಗಿನ ಸಿರಗುಪ್ಪಾ ಪಟ್ಟಣದ ಹತ್ತಿರದಲ್ಲೆಲ್ಲೋ ದಾಟಿದನು. ಮತ್ತು ಆಗ ನಡೆದ ಯುದ್ಧ ಬಯಲು ಹತ್ತಿಭೂಮಿಗಳಲ್ಲಿ, ಬಹುಶಃ ಕವುತಾಲ (ಯುದ್ಧೋಪಕರಣಗಳ ಇಲಾಖೆಯ ನಕಾಶದಲ್ಲಿ "ಕೌತಾಳ")ದಲ್ಲಿ ಸಂಭವಿಸಿತು.

**ಫಿರಿಸ್ತಾನ ವೃತ್ತಾಂತ ಇಲ್ಲಿದೆ[19] :**

"ರಾಯ ಕಿಶನ್ ರಾಯ್ (ಅಂದರೆ ಬುಕ್ಕ) (ಮುಹಮ್ಮದ ದಾಟಿದ) ಸುದ್ದಿ ತಿಳಿದು ತನ್ನ ದರಬಾರದ ಎಲ್ಲ ಪ್ರಥಮ ಮನ್ನೆಯರ ಸಭೆ ಕರೆದು ಮುಸಲ್ಮಾನರನ್ನು ಎದುರಿಸುವ ಅತ್ಯುತ್ತಮ ರೀತಿಯ ಬಗೆಗೆ ವಿಚಾರವಿಮರ್ಶೆ ಮಾಡಿದ. ರಾಯನ ಸೋದರ ಸಂಬಂಧಿಯೂ ಅವನ ಸೈನ್ಯಗಳ ದಂಡನಾಯಕನೂ ಆಗಿದ್ದ ಹೋಜೆಮಲ್[20] ನಿಗೆ ಯುದ್ಧದ ನಿರ್ವಹಣೆ ವಹಿಸಿಕೊಡಬೇಕೆಂದು ಒಪ್ಪಲಾಯಿತು. ದುರಭಿಮಾನ ತುಂಬಿ ತುಳುಕುತ್ತಿದ್ದ ಹೋಜೆಮಲ್ ಅಧಿಪತ್ಯ ವಹಿಸಿಕೊಂಡ ಕೂಡಲೆ ಮುಸಲ್ಮಾನರ ರಾಜನನ್ನು ಜೀವಂತ ಸೆರೆಯಾಳನ್ನಾಗಿ ರಾಯನ ಸನ್ನಿಧಿಗೆ ತರಬೇಕೊ ಅಥವಾ ತನ್ನ ಭರ್ಜಿಯ ಮೇಲೆ ಚುಚ್ಚಿದ ಅವನ ಶಿರವನ್ನು ಅರ್ಪಿಸಬೇಕೊ ಎಂದು ರಾಯನನ್ನು ಕೇಳಿದ. ಯಾವುದೆ ಸನ್ನಿವೇಶದಲ್ಲಿ ಜೀವಂತ ಶತ್ರು ಅಹಿತಕಾರಿಯಾದು ದರಿಂದ ಅವನನ್ನು ಸೆರೆಹಿಡಿದ ತಕ್ಷಣ ಕೊಲ್ಲುವುದೆ ವಿಹಿತನೆಂದು ಕಿಶನ್‌ರಾಯ್ ಉತ್ತರಿಸಿದನು. ಹೋಜೆಮಲ್ ತನ್ನ ನಿರ್ಗಮನಾಜ್ಞೆ ಪಡೆದು ಮುಹಮ್ಮದ ಶಾನನ್ನು ಎದುರಿಸಲು ನಲವತ್ತು ಸಾವಿರ ಕುದುರೆ ಮತ್ತು ಐದುನೂರು ಸಾವಿರ ಕಾಲಾಳು ಗಳೊಂದಿಗೆ ನಡೆದ. ಅವರನ್ನು ಹೊರಹಾಕಲು ಉತ್ಸಾಹ ತುಂಬಲೋಸುಗ ಅವನು ತನ್ನ ಸೈನಿಕರಿಗೆ ಮುಹಮ್ಮದೀಯರನ್ನು ಕೊಲ್ಲುವುದರಿಂದ ಬರುವ ಪುಣ್ಯ ಕುರಿತು ದಿನಾಲು ಪ್ರವಚನ ನೀಡುವಂತೆ ಬ್ರಾಹ್ಮಣರಿಗೆ ಅಜ್ಞೆಯಿತ್ತ. ನಿಜಭಕ್ತರು ಎಸಗಿದ ಗೋಹತ್ಯೆ[21]

ಪವಿತ್ರ ವಿಗ್ರಹಗಳಿಗೆ ಅವಮಾನ ಮತ್ತು ದೇವಾಲಯಗಳ ಧ್ವಂಸವನ್ನು ಬಣ್ಣಿಸುವಂತೆ ಅವರಿಗೆ ಆಜ್ಞೆಯಿತ್ತ.

"ಶತ್ರು ತನ್ನ ಶಿಬಿರದಿಂದ ಹದಿನೈದು ತಾಸ್[22]ದೊಳಗೆ ಬಂದಾಗ ತನ್ನ ಹದಿನೈದು ಸಾವಿರ ಕುದುರೆ ಮತ್ತು ಐವತ್ತು ಸಾವಿರ ಕಾಲಾಳುಗಳ ಸೈನ್ಯವನ್ನು ಜಮಾಯಿಸಲು ತನ್ನ ದಂಡನಾಯಕ ಖಾನ (ಮಹಮ್ಮದನಿಗೆ ಆಜ್ಞೆಯಿತ್ತ. ಹತ್ತು ಸಾವಿರ ಕುದುರೆ ಮತ್ತು ಮೂವತ್ತು ಸಾವಿರ ಕಾಲಾಳುಗಳನ್ನು ಅವನು ಖಾನ) ಮಹಮ್ಮದನ ನೇತೃತ್ವದಲ್ಲಿ ಮುಂದೆ ಕಳಿಸಿಕೊಟ್ಟ.

"ಝಿಲ್‌ಕಾದ್‌ನ ೧೪ನೆಯ ದಿನದಂದು (ಹಿ.ಶ. ೭೬೭ ಅಥವಾ ಗುರುವಾರ ಜುಲೈ ೨೩, ಕ್ರಿ.ಶ. ೧೩೬೬) ಬೆಳಕು ಕತ್ತಲೆಗಳ ಸೈನ್ಯಗಳು ಒಂದನ್ನೊಂದು ಎದುರಿಸಿದವು. ನಸುಕಿನಿಂದ ಮಧ್ಯಾಹ್ನದ ನಾಲ್ಕರವರೆಗೆ ಸಮುದ್ರದ ತೆರೆಗಳಂತೆ ಅವು ಘೋರ ಕದನ ಮುಂದುವರಿಸಿದವು. ಮತ್ತು ಎರಡೂ ಬದಿಗಳಲ್ಲಿ ಬಹುಸಂಖ್ಯೆಯ ಸಾವುಗಳಾದವು. ಖಾನ ಮಹಮ್ಮದನ ವ್ಯೂಹದ ಬಲ ಮತ್ತು ಎಡ ಪಾರ್ಶ್ವಗಳ ಅಧಿಪತ್ಯ ಹೊಂದಿದ್ದ ಮೂಸೆ ಖಾನ ಮತ್ತು ಈಸೆಖಾನ ಹುತಾತ್ಮ ಗಿರಿಯ ಶರಬತ್ತನ್ನು ಕುಡಿದರು, ಮತ್ತು ಅವರ ಸೈನಿಕರು ಚದುರಿದರು ; ಈ ದುರ್ದೈವ ಇಸ್ಲಾಮದ ಸೈನ್ಯಕ್ಕೆ ಬಹುಮಟ್ಟಿಗೆ ಆಘಾತವನ್ನು ನೀಡಿತು. ಈ ಹೊತ್ತಿಗೆ ಮಹಮ್ಮದ ಶಾ ಮೂರು ಸಾವಿರ ಹೊಸ ಕುದುರೆಗಳೊಂದಿಗೆ ಬಂದ. ಇದು ಖಾನ ಮಹಮ್ಮದನ ಮತ್ತು ಅವನ ಸೈನಿಕರ ಉತ್ಸಾಹವನ್ನು ಪುನಶ್ಚೇತನ ಗೊಳಿಸಿತು. ಅವರು ಒಟ್ಟುಗೂಡಿದರು ಮತ್ತು ಅವನನ್ನು ಕೂಡಿಕೊಂಡರು. ಫಿರಂಗಿಯೊಂದಿಗೆ ಮುಂದುವರಿಯುತ್ತಿದ್ದ ಮುಕ್ರಿಬ್ ಖಾನ ನಿರ್ವಹಣೆಯಲ್ಲಿ ಹಿಂದೆ ಬೀಳದೆ ಶತ್ರುಗಳ ಅಶ್ವದಳ ಮತ್ತು ಕಾಲ್ದಳಗಳನ್ನು ಚಲ್ಲಾಪಿಲ್ಲಿಗೊಳಿಸಿದ. ಆಕ್ರಮಣ ಮಾಡಲು ಮತ್ತು ಹೊಡೆದೋಡಿಸಲು ಅವನು ಅನುಮತಿ ಕೇಳಿದ. ಇದನ್ನು ನೋಡಿ ಖಾನ ಮಹಮ್ಮದ ಅವನ ಬೆಂಬಲಕ್ಕೆ ಕೆಲವು ಸರದಾರರನ್ನು ಕೊಟ್ಟು ಮುನ್ನುಗ್ಗಲು ಅವನಿಗೆ ಅನುಮತಿಯಿತ್ತ. ಅವನು ಎಷ್ಟು ಶೀಘ್ರವಾಗಿ ಮುನ್ನಡೆದನೆಂದರೆ ಕಾಫಿರರಿಗೆ ಸಿಡಿಮದ್ದ(ಅಂದರೆ ಫಿರಂಗಿ)ನ್ನು ಬಳಸಲು ಸಮಯವೆ ಸಿಗದಂತಾಗಿ ಕತ್ತಿ ಕಠಾರಿಗಳಂತಹ ಗಿಡ್ಡ ಆಯುಧ ಬಳಸಬೇಕಾಯಿತು. ಈ ಹೊತ್ತಿಗೆ ಖಾಸ ಮಹಮ್ಮದನಿಗೆ ಸೇರಿದ ಶೇರ ಶಿಕಾರ[23] ಎಂಬ ಆನೆ ಮಾಹುತನ ಮಾರ್ಗದರ್ಶನ ಧಿಕ್ಕರಿಸಿ ಶತ್ರುಗಳ ಪಂಕ್ತಿಯ ಮಧ್ಯದಲ್ಲಿ ನುಗ್ಗಿತು. ಅಲ್ಲಿ ಅದನ್ನು ಹೋಜೆಮಲ್ಲನ ಆನೆಗಳು ತಡೆದವು ಮತ್ತು ಅದರ ಮಾಹುತ ಕೊಲ್ಲಲ್ಪಟ್ಟ. ಖಾನ ಮಹಮ್ಮದ ಐದುನೂರು ಕುದುರೆಗಳೊಂದಿಗೆ ಹಿಂಬಾಲಿಸಿದ ಮತ್ತು ಆನೆ ಮದವೇರಿ ಶತ್ರುವಿನ ಮೇಲೆ ಏರಿಹೋಗಿ ಅವರ ಪಂಕ್ತಿಗಳಲ್ಲಿ ಗೊಂದಲ ಉಂಟು ಮಾಡಿತು. ಪ್ರಾಣಾಂತಿಕ ಗಾಯ ಹೊಂದಿದ ಹೋಜೆಮಲ್ ಓಡಿದ ಮತ್ತು ಅವನ ಅನುಯಾಯಿಗಳು ಪ್ರತಿರೋಧ ಒಡ್ಡಲಿಲ್ಲ. ತಮ್ಮ ಮಧ್ಯಭಾಗ ಒಡೆದು

ಹೋದುದನ್ನು ಕಂಡು ಕಾಫಿರರು ಎಲ್ಲ ದಿಕ್ಕುಗಳಿಗೆ ಓಡಿದರು. ನಿಜಭಕ್ತರ ಕತ್ತಿಗಳು ಹತ್ಯೆಯಿಂದ ಇನ್ನೂ ಒರೆಗಳಲ್ಲಿ ಸೇರಿರಲಿಲ್ಲ. ಆಗ ರಾಜಛತ್ರ ಕಂಡಿತು. ಸುಲ್ತಾನನು ಕಾಫಿರರ ಹತ್ಯೆಯನ್ನು ಪುನರಾರಂಭಿಸಲು ಆಜ್ಞೆಯಿತ್ತ. ಅದನ್ನು ಎಷ್ಟೊಂದು ಕಟ್ಟುನಿಟ್ಟಿನಿಂದ ಪಾಲಿಸಲಾಯಿತೆಂದರೆ ಬಸುರಿ ಹೆಂಗಸರು ಮತ್ತು ಮೊಲೆ ಕುಡಿಯುವ ಕೂಸುಗಳು ಸಹ ಖಡ್ಗದಿಂದ ಪಾರಾಗಲಿಲ್ಲ.

"ಮಹಮುದ ಶಾ ರಣರಂಗದಲ್ಲಿ ಒಂದು ವಾರ ನಿಂತ, ಮತ್ತು ತನ್ನ ವಿಜಯದ ವೃತ್ತಾಂತವನ್ನು ತನ್ನ ಪ್ರಾಂತಗಳಿಗೆ ರವಾನಿಸಿದ. ಕೊಲೆಯ ಪ್ರತಿಜ್ಞೆಯ ಅನುಷ್ಠಾನ ದಲ್ಲಿ ಅವನು ಈಗ ಕಿಶನ್‌ರಾಯ್‌ನ ಶಿಬಿರದತ್ತ ನಡೆದ. ಕಿಶನ್‌ರಾಯ್ ತನ್ನಲ್ಲಿ ವಿಪುಲ ಸೈನ್ಯವಿದ್ದರೂ ಸಹ ಎದುರಿಸಲು ಶಕ್ತನಾಗದೆ ಆಶ್ರಯಕ್ಕಾಗಿ ಕಾಡು ಬೆಟ್ಟಗಳಿಗೆ ಓಡಿದ, ತನ್ನ ಮಾರ್ಗದಲ್ಲಿ ಬಂದ ಎಲ್ಲರನ್ನೂ ತಾರತಮ್ಯವಿಲ್ಲದೆ ಕೊಂದುಹಾಕುತ್ತ ಸುಲ್ತಾನನು ಮೂರು ತಿಂಗಳವರೆಗೆ ಅವನನ್ನು ಸ್ಥಳದಿಂದ ಸ್ಥಳಕ್ಕೆ ಬೆನ್ನಟ್ಟಿದ. ಕೊನೆಗೆ ಕಿಶನ್ ರಾಯ್ ತನ್ನ ರಾಜಧಾನಿ ಬೀಜನಗರದ ಹಾದಿ ಹಿಡಿದ. ಬೆನ್ನು ಹತ್ತಿದ ಸುಲ್ತಾನ ಬೇಗನೆ ತನ್ನ ಸೈನ್ಯದೊಂದಿಗೆ ನಗರದ ಹತ್ತಿರ ಬಂದನು."

ಸಂಕ್ಷಿಪ್ತವಾಗಿ ಹೇಳುವುದಾದರೆ, ಸುಲ್ತಾನನು ವಿಜಯನಗರಕ್ಕೆ ಒಂದು ತಿಂಗಳ ವ್ಯರ್ಥವಾಗಿ ಮುತ್ತಿಗೆ ಹಾಕಿದ. ಬಳಿಕ ತುಂಗಭದ್ರಾಗುಂಟ ಹಿಂದೆ ಸರಿದ. ಆಗ ನಗರದ ಹಿಂದೂಗಳ ತಂಡಗಳು ಅವನನ್ನು ಹೆಜ್ಜೆಹೆಜ್ಜೆಗೆ ಸತಾಯಿಸಿದವು. ಅವನು ಕೊನೆಗೆ ಬಯಲು ನೆಲದಲ್ಲಿ ತಳವೂರಿದ ಮತ್ತು ರಾಜನೂ ಅನತಿ ದೂರದಲ್ಲಿ ಶಿಬಿರ ಸ್ಥಾಪಿಸಿದ. ಶತ್ರುವನ್ನು ಹೊರಗೆ ಎಳೆಯುವ ಮತ್ತು ಅತಿವಿಶ್ವಾಸದಿಂದ ಸರಿಯಾದ ಮುಂಜಾಗ್ರತೆಗಳನ್ನು, ಅಲಕ್ಷಿಸುವಂತೆ ಮಾಡುವುದೆ ಮಹಮ್ಮದನ ಹಿನ್ನಡೆಯ ಉದ್ದೇಶವಾಗಿತ್ತು. ಯುಕ್ತಿ ಫಲಿಸಿತು. ಮುಹಮ್ಮದೀಯರು ಏಕಾಏಕಿಯ ಮತ್ತು ಅನಿರೀಕ್ಷಿತವಾದ ರಾತ್ರಿ ಆಕ್ರಮಣ ಮಾಡಿದರು. ಮದ್ಯಪಾನ ಹಾಗೂ ನೃತ್ಯಗಾರ್ತಿಯರ ತಂಡ ಒದಗಿಸಿದ್ದ ಮನೋಲ್ಲಾಸದಲ್ಲಿ ತೊಡಗಿದ್ದ ಬುಕ್ಕ (ಮೊದಲು ಕರೆದ "ಕಿಶನ್") ಜಾಗರೂಕನಾಗಿರಲಿಲ್ಲ. ಹತ್ಯೆ ಭಯಾನಕವಾಗಿತ್ತು. ರಾಯ ವಿಜಯನಗರಕ್ಕೆ ಓಡಿದ. ಅವನ ಹತ್ತು ಸಾವಿರ ಯೋಧರು ಕೊಲೆಯಾದರು:- "ಆದರೆ ಇದರಿಂದ ಸುಲ್ತಾನನ ಕೋಪಾಗ್ನಿ ಶಮನಗೊಳ್ಳಲಿಲ್ಲ. ಬೀಜನಗರದ ಸುತ್ತಲಿನ ಪ್ರತಿ ಊರಿನ ನಿವಾಸಿಗಳನ್ನು ಕರುಣೆಯಿಲ್ಲದೆ ಕೊಲ್ಲುವಂತೆ ಆಜ್ಞೆಯಿತ್ತ".

ಆಗ ಬುಕ್ಕ ಶಾಂತಿಗಾಗಿ ಪ್ರಯತ್ನಿಸಿದ, ಆದರೆ ಸುಲ್ತಾನ ನಿರಾಕರಿಸಿದ.

"ಈ ಸಮಯಕ್ಕೆ ಪ್ರೀತಿಪಾತ್ರನೊಬ್ಬ ತಾನು ಪ್ರತಿಜ್ಞೆಗೈದುದು ಒಂದು ನೂರು ಸಾವಿರ ಹಿಂದೂಗಳನ್ನು ಮಾತ್ರ ಸಂಹರಿಸಲು, ಇಡಿ ಕುಲವನ್ನು ನಾಶಮಾಡಲು ಅಲ್ಲ ಎಂದು ಸುಲ್ತಾನನಿಗೆ ಹೇಳಿದನು. ತನ್ನ ಪ್ರತಿಜ್ಞೆಯ ಇಮ್ಮಡಿಸಂಖ್ಯೆಯ ಜನ ಸಂಹರಿಸ

ಲ್ಪಟ್ಟಿರಬಹುದಾದರೂ ರಾಯ ಶರಣಾಗತನಾಗುವವರೆಗೆ ಮತ್ತು ಸಂಗೀತಗಾರರನ್ನು ತೃಪ್ತಿಪಡಿಸುವವರೆಗೆ ತಾನು ಅವನನ್ನು ಕ್ಷಮಿಸುವುದಿಲ್ಲ ಹಾಗೂ ಅವನ ಪ್ರಜೆಗಳನ್ನು ಉಳಿಸುವುದಿಲ್ಲ ಎಂದು ಸುಲ್ತಾನ ಉತ್ತರಿಸಿದ. ಸಂಪೂರ್ಣ ಅಧಿಕಾರವುಳ್ಳ ರಾಯ ಭಾರಿಗಳು ಇದಕ್ಕೆ ಒಪ್ಪಿದರು ಮತ್ತು ಆ ಹಣವನ್ನು ತಕ್ಷಣ ಸಂದಾಯ ಮಾಡ ಲಾಯಿತು. ಆಗ "ನಾನು ಆಜ್ಞಾಪಿಸಿದ್ದನ್ನು ಕಾರ್ಯಗತ ಮಾಡಿಸಿದ ದೇವರು ದೊಡ್ಡವನು. ಕಾಲದ ಪುಟಗಳಲ್ಲಿ ನನ್ನ ಬಗೆಗೆ ಲಘು ಶಬ್ದ ದಾಖಲಾಗುವುದನ್ನು ನಾನು ಇಷ್ಟಪಡುವುದಿಲ್ಲ" ಎಂದು ಮಹಮ್ಮದ ಶಾ ಹೇಳಿದ.

ಅಮಾಯಕರು, ಅದರಲ್ಲೂ ಅಸಹಾಯಕ ಸ್ತ್ರೀಯರು ಮತ್ತು ಮಕ್ಕಳು ತಪ್ಪಿತಸ್ಥರಿಂದಾಗಿ ಕಷ್ಟ ಅನುಭವಿಸಬೇಕೆಂದು ಯಾವ ಧರ್ಮವೂ ವಿಧಿಸುವುದಿಲ್ಲ ಎಂದು ಆಗ ರಾಯಭಾರಿಗಳು ನಿವೇದಿಸಿದರು :—

"ಕಿಶನ್ ರಾಯ್ ತಪ್ಪಿತಸ್ಥನಾಗಿದ್ದರೆ ಬಡವರು ಮತ್ತು ನಿರ್ಭಾಗಿಗಳು ಅವನ ಅಪರಾಧಗಳಲ್ಲಿ ಪಾಲುದಾರರಾಗಿರಲಿಲ್ಲ. ದೈವಾಜ್ಞೆ ಹಾಗೆ ಆಜ್ಞಾಪಿಸಿತ್ತು ಮತ್ತು ಅದನ್ನು ಬದಲಿಸಲು ಅವನಿಗೆ ಶಕ್ಯವಿಲ್ಲ ಎಂದು ಮಹಮ್ಮದ ಶಾ ಉತ್ತರಿಸಿದ."

ಎರಡೂ ರಾಜ್ಯಗಳು ನೆರೆಹೊರೆಯವರಾದುದರಿಂದ ಪರಸ್ಪರ ಸಂಬಂಧಗಳನ್ನು ಕಹಿಗೊಳಿಸುವ ಅನಾವಶ್ಯಕ ಕ್ರೌರ್ಯವನ್ನು ತಪ್ಪಿಸುವುದು ನಿಜಕ್ಕೂ ಒಳ್ಳೆಯದೆಂದು ರಾಯಭಾರಿಗಳು ಕೊನೆಗೆ ಆಗ್ರಹಪಡಿಸಿದರು; ಈ ವಾದ ಪರಿಣಾಮ ಬೀರಿತು.

"ಮಹಮ್ಮದ ಶಾ ಅವರ ವಿಚಾರಗಳಿಂದ ಪ್ರಭಾವಿತನಾದ, ಮತ್ತು ಇನ್ನು ಮುಂದೆ ವಿಜಯದ ನಂತರ ಒಬ್ಬ ಶತ್ರುವನ್ನೂ ಕೊಲ್ಲುವುದಿಲ್ಲವೆಂದೂ ತನ್ನ ಉತ್ತರಾಧಿಕಾರಿಗಳನ್ನು ಅದೇ ಕರುಣೆ ಆಚರಿಸುವಂತೆ ಬದ್ಧರನ್ನಾಗಿಸುವುದಾಗಿಯೂ ಪ್ರತಿಜ್ಞೆಗೈದ."

ಕೆಲವು ವರ್ಷಗಳಂತೂ ವಚನ ಪಾಲಿಸಲಾಯಿತು. ಆದರೆ ತರುವಾಯದ ಕಾಲದ ಪ್ರಭುಗಳು ಸಗಟುಸಂಹಾರ ಕೈಗೊಂಡುದನ್ನು ನಾವು ಓದುತ್ತೇವೆ. ಮಹಮ್ಮದನಾದರೊ ೫೦೦,೦೦೦ ಹಿಂದೂಗಳನ್ನು ಕೊಲೆಗೈದನು ಮತ್ತು ಕರ್ನಾಟಕದ ಜಿಲ್ಲೆಗಳನ್ನು ಎಷ್ಟೊಂದು ಹಾಳುಮಾಡಿದನೆಂದರೆ ಹಲವಾರು ದಶಕ ಗಳವರೆಗೆ ಅವುಗಳು ತಮ್ಮ ಸ್ವಾಭಾವಿಕ ಜನಸಂಖ್ಯೆಯನ್ನು ಮರಳಿ ಪಡೆಯಲಿಲ್ಲ ಎಂದು ಹೇಳಲು ಫಿರಿಸ್ತಾ ಹಿಗ್ಗುತ್ತಾನೆ.

ಹೀಗೆ, ಯುದ್ಧ ಕೊನೆಗೊಂಡಿತು ಮತ್ತು ಕೆಲವು ವರ್ಷ ವಿಜಯನಗರ ಮತ್ತು ಕಲಬುರ್ಗಾಗಳ ಮಧ್ಯೆ ಶಾಂತಿ ಏರ್ಪಟ್ಟಿತ್ತು.

ಮಹಮ್ಮದ ಶಾ ೨೧ ನೆಯ ಏಪ್ರಿಲ್, ಕ್ರಿ.ಶ. ೧೩೭೫ ೨೪ ರಂದು ತೀರಿ ಕೊಂಡ, ಮತ್ತು ಆಗ ಹತ್ತೊಂಬತ್ತು ವರ್ಷದವನಿದ್ದ ಅವನ ಮಗ ಮುಜಾಹಿದ್

ಪಟ್ಟಕ್ಕೆ ಬಂದ. "ಕಿಸ್ನಾ ಮತ್ತು ತುಮೆದ್ರಾ (ತುಂಗಭದ್ರಾ) ನದಿಗಳ ನಡುವಣ ಕೆಲವು ಕೋಟೆಗಳು ಮತ್ತು ಜಿಲ್ಲೆಗಳು ತಮ್ಮಿಬ್ಬರ ಸಂಯುಕ್ತ ವಶದಲ್ಲಿರುವುದು ಸದಾ ಕಚ್ಚಾಟಕ್ಕೆ ಆಸ್ಪದವಾಗುತ್ತಿದೆಯಾದುದರಿಂದ ಇನ್ನು ಮುಂದೆ ತಾನು (ರಾಯು) ತನ್ನ ಗಡಿಗಳನ್ನು ತುಮೆದ್ರಾಕ್ಕೆ ಸೀಮಿತಗೊಳಿಸಬೇಕೆಂದು ಮತ್ತು 'ಬೀಕಾಪುರ' ಕೋಟೆ ಹಾಗೂ ಇನ್ನು ಕೆಲವು ಊರುಗಳೊಂದಿಗೆ ಪೂರ್ವ ಬದಿಗಿರುವ ಎಲ್ಲವನ್ನೂ ತನಗೆ (ಮುಜಾಹಿದ) ಬಿಟ್ಟುಕೊಡಬೇಕೆಂದು" ಮುಜಾಹಿದ ತನ್ನ ಆರೋಹಣವಾದ ಅನತಿ ಕಾಲದಲ್ಲಿ ಬುಕ್ಕರಾಯ (ಫಿರಿಸ್ತಾ ಇನ್ನೂ "ಕಿಶನ್ ರಾಯ್" ಎಂದು ಕರೆಯುವ)ನಿಗೆ ಬರೆದ. ಈ "ಬೀಕಾಪುರ" ಎಂದರೆ ಧಾರವಾಡದ ದಕ್ಷಿಣ ಕ್ಕಿರುವ ಬಂಕಾಪುರದ ಮಹತ್ವದ ಕೋಟೆ. ಅದು ವಿಜಯನಗರದಿಂದ ಸಮುದ್ರ ಕ್ಕಿರುವ ನೇರ ಮಾರ್ಗದಲ್ಲಿ ಇದ್ದುದರಿಂದ ಮತ್ತು ಅದು ತನ್ನ ವಶಕ್ಕೆ ಬಂದರೆ ಹಿಂದೂ ವ್ಯಾಪಾರ ಸ್ಥಗಿತವಾಗುವುದರಿಂದ ದಖನಿ ಪ್ರಭು ಅದರ ಮೇಲೆ ಯಾವಾಗಲೂ ಕಾಕದೃಷ್ಟಿ ಇಟ್ಟಿದ್ದ.

ರಾಯಚೂರು ಮತ್ತು ಮುದಕಲ್ ಎಂದೆಂದೂ ಆನೆಗುಂದಿ ಮನೆತನಕ್ಕೆ ಸೇರಿದ್ದರಿಂದ ಸುಲ್ತಾನನು ಇಡಿ ದೋಆಬ ತೆರವು ಮಾಡಬೇಕೆಂಬ ಪ್ರತಿಬೇಡಿಕೆ ಯೊಂದಿಗೆ ರಾಯ ಉತ್ತರ ಕಳಿಸಿದ. ಕೃಷ್ಣಾ ನದಿಯು ನಿಜವಾದ ಗಡಿಯೆಂದು ಬುಕ್ಕ ಘೋಷಿಸಿದ ಮತ್ತು ಸುಲ್ತಾನ ಮಹಮ್ಮದ ಸೆರೆಹಿಡಿದೊಯ್ದಿದ್ದ ಆನೆಗಳನ್ನು ಮರಳಿ ಕೊಡಬೇಕೆಂದು ಕೇಳಿದ.

ಯುದ್ಧ ಸಾರುವುದೆ ಸುಲ್ತಾನನ ಉತ್ತರವಾಗಿತ್ತು. ಅವನು ಸ್ವತಃ ಹೊರಟ, ಎರಡೂ ನದಿಗಳನ್ನು ದಾಟಿದ ಮತ್ತು ಅದೋನಿಯ ಮುಂದೆ ಬಂದಿಳಿದ. ರಾಯ ತುಂಗಭದ್ರಾ ದಡದ ಮೇಲೆ ಬಿಡಾರ ಹೂಡಿರುವುದನ್ನು ಕೇಳಿ ಅವನು ಒಂದು ಸೈನ್ಯ ಪಡೆಯನ್ನು ಕೋಟೆಗೆ ಮುತ್ತಿಗೆ ಹಾಕಲು ಬಿಟ್ಟು ಇನ್ನೊಂದನ್ನು ವಿಜಯನಗರ ದೆಡೆಗೆ ರವಾನಿಸಿದ ಮತ್ತು ತಾನು ಖುದ್ದಾಗಿ ನದಿಯತ್ತ ಬಹುಶಃ ವಾಯವ್ಯ ದಿಕ್ಕಿನಲ್ಲಿ, "ನಿಧಾನ ಗತಿಯಲ್ಲಿ ಮತ್ತು ಬಹಳ ಎಚ್ಚರಿಕೆಯಿಂದ" ಸಾಗಿದ. ಮೊದಲು ಆಕ್ರಮಣ ಎದುರಿಸಲು ಸಿದ್ಧನಾಗಿದ್ದ ಹಿಂದೂ ರಾಜ ಅದೇಕೊ[25] ಎದೆಗುಂದಿ ರಾಜಧಾನಿಯ ದಕ್ಷಿಣಕ್ಕಿರುವ ಸಂಡೂರಿನ ಗುಡ್ಡಗಳಿಗೆ ಹಿಂದೆ ಸರಿದ.

ಆಗ ಇನ್ನೂ ನಲವತ್ತು ವರ್ಷವಾಗಿದ್ದ ಆದರೆ ಸ್ಪಷ್ಟವಾಗಿ ವರ್ಷವರ್ಷವೂ ವೈಭವದಲ್ಲಿ ಬೆಳೆಯುತ್ತಿದ್ದ ಹೊಸ ನಗರದಲ್ಲಿ ಈ ಭಾಗದ ನಿವಾಸಿಗಳು ತಳೆದ ಆಸಕ್ತಿಯನ್ನು ಫಿರಿಸ್ತಾ ಇಲ್ಲಿ ಶ್ಲಾಘಿಸಿದ್ದಾನೆ.

"ನಗರದ ಸೌಂದರ್ಯದ ಬಗೆಗೆ ಬಹಳ ಹೊಗಳಿಕೆ ಕೇಳಿದ್ದ ಮುಜಾಹಿದ ಬೀಜನಗರಕ್ಕೆ ನಡೆದ; ಆದರೆ, ಸದ್ಯ ಮುತ್ತಿಗೆ ಹಾಕಲು ಅದು ತೀರ ಸುಭದ್ರ

ವಾಗಿದೆಯೆಂದು ಭಾವಿಸಿ ಅವನು ಶತ್ರುವನ್ನು ಹುಡುಕುತ್ತ ರಣರಂಗದಲ್ಲಿ ಸುತ್ತಾಡಿದ."

ಅದರ ಮೇಲೆ ಪೂರ್ಣ ವಿಶ್ವಾಸವಿಡಲಾಗದ ಆದರೆ ಸಾಮಾನ್ಯ ವಾಡಿಕೆಗಳನ್ನು ಪ್ರತಿಧ್ವನಿಸುವ ಉದ್ಧೃತ ಭಾಗವೊಂದು ಇಲ್ಲಿದೆ. ಅದರ ಇಂಗಿತವೇನೆಂದರೆ ಸುಲ್ತಾನನ ಮುನ್ನಡೆ ನೋಡಿ ರಾಯ

"ಕಾಡು ಮತ್ತು ಗುಡ್ಡಗಳನ್ನು ಹಾಯ್ದು ಸೀತ್‌ಬಂದರ್ ರಾಮೇಸ್ಸರದತ್ತ ಓಡಿದ. ಈ ಮೊದಲು ಪ್ರವೇಶಿಸಲಾರದಂತಿದ್ದ ಅರಣ್ಯಗಳನ್ನು ಕತ್ತರಿಸಿ ತನ್ನ ಅಶ್ವ ದಳಕ್ಕೆ ದಾರಿ ಮಾಡಿಕೊಳ್ಳುತ್ತ ಸುಲ್ತಾನನು ಅವನನ್ನು ಬೆನ್ನಟ್ಟಿದ. ಈ ರೀತಿ ರಾಯ ಆರು ತಿಂಗಳವರೆಗೆ ಸ್ಥಳದಿಂದ ಸ್ಥಳಕ್ಕೆ ಅಲೆದ, ಆದರೆ ಕಾಡುಗಳಿಂದ ಹೊರಗೆ ಬರುವ ಧೈರ್ಯ ತೋರಲಿಲ್ಲ. ಸುಲ್ತಾನನ ಪ್ರೀತಿಪಾತ್ರರು ಈ ಹುಡುಕಾಟ ಪ್ರಯೋಜನವಿಲ್ಲದ್ದು ಮತ್ತು ತಮ್ಮ ಸೈನ್ಯಕ್ಕೆ ವಿನಾಶಕಾರಿಯಾದುದು ಎಂದು ನಿವೇದಿಸಿ ದುದು ವ್ಯರ್ಥವಾಯಿತು. ಅವನು ಬಿಡಲಿಲ್ಲ. ಕೊನೆಗೆ ಅವನ ಸುದೈವ ತೆರೆಯಿತು. ಕಿಶನ್ ರಾಯ್ ಮತ್ತು ಅವನ ಪರಿವಾರದವರ ಆರೋಗ್ಯ ಕಾಡಿನ ಕೆಟ್ಟ ಹವೆಯಿಂದ ಹದಗೆಟ್ಟಿತು. ಮತ್ತು ಕಾಡು ಬಿಡಲು ಅವರ ವೈದ್ಯರು ಎಚ್ಚರಿಕೆ ನೀಡಿದರು... ಅನಿವಾರ್ಯವಾಗಿ ಗುಪ್ತ ದಾರಿಗಳ ಮೂಲಕ ಅವನು ತನ್ನ ರಾಜಧಾನಿ ಬೀಜ ನಗರಕ್ಕೆ ಹಿಂತಿರುಗಿದ. ಸುಲ್ತಾನನು ಅವನ ಹಿಂದೆ ಸೈನ್ಯದ ತುಕಡಿಯೊಂದನ್ನು ಕಳಿಸಿ ತಾನು ಮಾತ್ರ ಅಮೀರ್ ಅಲ್ ಆಮ್ರಾ ಬಹಾದುರ ಖಾನ ಮತ್ತು ಐದು ಸಾವಿರ ಸೈನಿಕರೊಂದಿಗೆ ಸೀತ್ ಬಂದಾ ರಾಮೇಸ್ಸರ್‌ದ ದೃಶ್ಯ ಆಹ್ಲಾದಿಸಲೋಸುಗ ನಡೆದ.

"ಈ ಜಾಗದಲ್ಲಿ ಸುಲ್ತಾನ ಅಲ್ಲಾ ಆದ್ ದಿಎನ್ ಖಿಲ್ಜಿಯ ಅಧಿಕಾರಿಗಳು ಕಟ್ಟಿಸಿದ್ದ ಮಸೀದಿಯನ್ನು ಸುಲ್ತಾನನು ದುರಸ್ತಿಗೊಳಿಸಿದ. ವಿಗ್ರಹಾರಾಧಕರ ಅನೇಕ ದೇವಾಲಯಗಳನ್ನು ಒಡೆದು ಮತ್ತು ಆ ಪ್ರದೇಶವನ್ನು ಹಾಳುಗೆಡವಿ ಅವನು ಅತ್ಯಂತ ತ್ವರಿತವಾಗಿ ಬೀಜನಗರಕ್ಕೆ ನಡೆದ."

ಮಲಿಕ್ ಕಾಫರ್ ೧೩೧೧ರಲ್ಲಿ ಸಮುದ್ರ ತೀರದ ಮೇಲೆ ಒಂದು ಮಸೀದಿ ಯನ್ನು ಕಟ್ಟಿದನೆಂದು ಘೋಷಿತವಾಗಿರುವುದು ನಿಜ, ಆದರೆ ಸಿಲೋನ ದ್ವೀಪದ ಎದುರುಗಡೆ ಪೂರ್ವ ಕರಾವಳಿಯ ಮೇಲೆ ಹಾಗೂ ಭಾರತದ ತೀರ ದಕ್ಷಿಣ ತುದಿ ಯಲ್ಲಿ ಇರುವ ರಾಮೇಶ್ವರಮ್‌ನಲ್ಲಿ ಅಲ್ಲ ಎಂಬುದು ಸ್ಪಷ್ಟವಾಗಿದೆ. ಅಲ್ಲದೆ, ಕ್ರಿ.ಶ. ಹದಿನಾರನೆಯ ಶತಮಾನದಲ್ಲಿ ಒಬ್ಬ ಮಹಮ್ಮದೀಯ ಪ್ರಭು ಇಂಥ ಕೈ ಎಣಿಕೆಯ ಸೈನಿಕರೊಂದಿಗೆ ದಕ್ಷಿಣದಲ್ಲಿ ಇಷ್ಟು ದೂರ ಬಂದಿದ್ದನೆಂಬುದು ತೀರ ಅಸಂಭವವೆನಿಸು ತ್ತದೆ. ಅವರನ್ನು ಅಸಂಖ್ಯಾತ ಹಿಂದೂಗಳು ಹೆಜ್ಜೆ ಹೆಜ್ಜೆಗೆ ಪೀಡಿಸುತ್ತಿದ್ದರು. ಮಹಮ್ಮದೀಯನನ್ನು ಕಂಡ ಮಾತ್ರಕ್ಕೆ ನಿಜಕ್ಕೂ ನಡುಗುತ್ತಿದ್ದರೂ ಸಹ ಅವರು

೫೦೦೦ ಸೈನಿಕರನ್ನು ೧೦೦೦ ಮೈಲುಗಳ ಗುಡ್ಡಗಾಡಿನಲ್ಲಿ ಶಾಂತಿಯಿಂದ ಹಾಯ್ದು ಹೋಗಲು ಬಿಡುತ್ತಿದ್ದಿಲ್ಲವೆಂಬುದಂತೂ ಖರೆ ; ಏಕೆಂದರೆ ರಾಮೇಶ್ವರ ವಿಜಯನಗರ ದಿಂದ ಪೂರ್ತಿ ೫೦೦ ಮೈಲು ಇದೆ. ಮಲಿಕ್ ಕಾಫರನ ದಂಡಯಾತ್ರೆ ಮೈಸೂರಿ ನಲ್ಲಿರುವ ದ್ವಾರಸಮುದ್ರದ ಬಲ್ಲಾಳ ರಾಜನನ್ನು ಅವನು ಗೆದ್ದ ಮೇಲೆ ಜರುಗಿತೆಂದು ಹೇಳಲಾಗಿದೆ. ಆಗ ಅವನು ಮಸೀದೆ ಕಟ್ಟಿಸಿದುದು ಮಲಬಾರದ ಸಮುದ್ರ ತೀರ ದಲ್ಲಿ. ಆದುದರಿಂದ, ರಾಮೇಶ್ವರದ ಸನಿಹದಲ್ಲಿ ಎಲ್ಲೂ ಅಲ್ಲ. ಕರ್ನಲ್ ಬ್ರಿಗ್ಜ್[26] ಈ ಅಡಚಣೆಯನ್ನು ಗಮನಿಸಿದ್ದಾನೆ ಮತ್ತು ಉಲ್ಲೇಖಿತ ಸ್ಥಳ ಗೋವಾದ ದಕ್ಷಿಣಕ್ಕೆ, ಪಶ್ಚಿಮ ತೀರದಲ್ಲಿರುವ ಸದಾಶಿವಗಡ ಆಗಿರಬೇಕೆಂದು ಭಾವಿಸುತ್ತಾನೆ. "ಆ ಸ್ಥಳ ವನ್ನು....ನಮ್ಮ ನಕಾಶ[27]ಗಳಲ್ಲಿ ರಾಮುಸ್ ಭೂಶಿರ ಎಂದು ಕರೆಯಲಾಗಿದೆ" ಎಂದು ಬೇರೆ ಸೇರಿಸುತ್ತಾನೆ.

ವಿಜಯನಗರಕ್ಕೆ ಎರಡು ರಸ್ತೆಗಳಿವೆ ಎಂದು ಫಿರಿಸ್ತಾ ಹೇಳುತ್ತಾನೆ.

"ಒಂದು ಸೈನ್ಯಗಳ ಸಾಗಣೆಗೆ ಯೋಗ್ಯವಾದುದು, ಇನ್ನೊಂದು ಅಸ್ತಾದುದು ಮತ್ತು ಕಠಿಣವಾದುದು. ಮೊದಲಿನದುದ್ದಕ್ಕೂ ಹೊಂಚುಸ್ಥಳಗಳಿದ್ದುದರಿಂದ ಅವನು ಎರಡನೆಯದನ್ನು ಆಯ್ದುಕೊಂಡು ಅದರ ಮೂಲಕ ಆಯ್ದ ಸೈನ್ಯ ಪಡೆಯೊಂದಿಗೆ ಮುನ್ನಡೆದ ಮತ್ತು ಒಮ್ಮೆಲೆ ನಗರದ ಹೊರಗೇರಿಗಳಲ್ಲಿ ಪ್ರಕಟವಾದ." ಮುಜಾಹಿದ ಮಲಬಾರ ಕರಾವಳಿಯಿಂದ ಮೇಲಕ್ಕೆ ಬಂದಿದ್ದರೆ ಇವೆರಡರಲ್ಲಿ ಮೊದಲನೆಯದು ಪಯಣಿಗರು ಅನುಸರಿಸಿದ ರೂಢಿಯ ಮಾರ್ಗವಾಗಿರಬಹುದು. ಅದು ಏರಿಳಿತಗಳಿಂದ ಕೂಡಿದ ಬಯಲು ಸೀಮೆಯಲ್ಲಿ ಹಾಯ್ದು ಹೋಗುತ್ತದೆ. ಇದನ್ನು ಬಿಟ್ಟು ಸುಲ್ತಾನನು ತನ್ನ ಬಲಗಡೆಗೆ ಪಾರ್ಶ್ವ ಚಲನೆಯಿಂದ ಸಂಡೂರ ಗುಡ್ಡಗಳ ಕಡೆಗೆ ತಿರುಗಿ ಸಂಡೂರ ಕಣಿವೆ ಇಲ್ಲವೆ ಸಂಡೂರ ಗುಡ್ಡಗಳು ಮತ್ತು ವಿಜಯನಗರ ನಗರ ವನ್ನು ಸುತ್ತುಗಟ್ಟುವ ಗುಡ್ಡಗಳ ನಡುವೆ ಇರುವ ಹಾಗೂ ಬಳ್ಳಾರಿಯಿಂದ ವಿಜಯನಗರಕ್ಕೆ ಈಗ ಹೋಗುತ್ತಿರುವ ಮುಖ್ಯ ರಸ್ತೆಯುಳ್ಳ ಕಣಿವೆಗುಂಟ ಬಂದಿರ ಬಹುದು.

"ಕಿಶನ್ ರಾಯ್ ಅವನ ಧೈರ್ಯ ನೋಡಿ ಚಕಿತನಾದ, ಮತ್ತು ಬೀದಿ ಗಳನ್ನು ಸಂರಕ್ಷಿಸಲು ಅಸಂಖ್ಯಾತ ಜನರನ್ನು ಕಳಿಸಿದ. ಸುಲ್ತಾನನು ಅವರನ್ನು ಹಿಮ್ಮೆಟ್ಟಿಸುತ್ತ ಮುಂದುವರಿದು ನೀರಿನ ಭಾಗವೊಂದರ ದಂಡೆಯನ್ನು ಹಿಡಿದು ಕೊಂಡ. ಅವನನ್ನು ಕಿಶನ್ ರಾಯ್ ವಾಸವಾಗಿದ್ದ ದುರ್ಗದಿಂದ ಇದು ಮಾತ್ರ ಪ್ರತ್ಯೇಕಿಸಿತ್ತು. ಇದರ ಸಮೀಪ ಒಂದು ತಿಟ್ಟಿನ ಮೇಲೆ ಮಣಿಗಳನ್ನು ಜೋಡಿಸಿದ ಬಂಗಾರದ ಮತ್ತು ಬೆಳ್ಳಿಯ ತಗಡುಗಳನ್ನು ಹೊದಿಸಿದ ದೇವಾಲಯವಿತ್ತು. ಹಿಂದೂ ಗಳು ಬಲು ಭಕ್ತಿಯಿಂದ ಕಾಣುತ್ತಿದ್ದ ಇದನ್ನು ನಾಡ ಭಾಷೆಯಲ್ಲಿ ಪುತ್ತುಕ ಎಂದು ಕರೆಯುತ್ತಿದ್ದರು. ಅದನ್ನು ನಾಶಪಡಿಸುವುದು ತನ್ನ ಧಾರ್ಮಿಕ ಕರ್ತವ್ಯವೆಂದು

ಭಾವಿಸಿ ಸುಲ್ತಾನನು ಗುಡ್ಡ ಏರಿದ ಮತ್ತು ದೇವಾಲಯವನ್ನು ನೆಲಸಮಗೊಳಿಸಿ ಅಮೂಲ್ಯ ಧಾತುಗಳನ್ನು ಮತ್ತು ಮಾಣಿಕ್ಯಗಳನ್ನು ಸ್ವಾಧೀನಪಡಿಸಿಕೊಂಡ.

ಉಲ್ಲೇಖಿತವಾಗಿರುವ ಈ ನೀರಿನ ಭಾಗ ಕಮಲಾಪುರದಲ್ಲಿ ಕಣ್ಣಿಗೆ ಕಟ್ಟುವ ಸರೋವರವಾಗಿರಬಹುದು ; ಆದರೆ ಮುಜಾಹಿದ ನಾಶ ಮಾಡಿದ ದೇವಾಲಯ ವಾವುದು ? ಚರಿತ್ರಕಾರ ಎರಡು ಶತಮಾನ ಗತಿಸಿದ ತರುವಾಯ ವಾಡಿಕೆಯನ್ನಾ ಧರಿಸಿ ಬರೆದನೆನ್ನುವುದನ್ನು ಗಮನಿಸಿದಾಗ ಅದನ್ನು ಊಹಿಸುವುದು ನಿಷ್ಪ್ರಯೋಜಕ. ಗುಡ್ಡಗಳ ಮೇಲೆ ಆಯ್ದುಕೊಳ್ಳಬಹುದಾದ ಅನೇಕ ದೇವಾಲಯಗಳು ಮತ್ತು ಹಲವಾರು ನೀರಿನ ಭಾಗಗಳಿವೆ. ಕತೆಯ ಅತ್ಯಂತ ವಿಲಕ್ಷಣ ಅಂಶವೆಂದರೆ ಸುಲ್ತಾನನು ಬಾಹ್ಯ ಕೋಟೆಗಳ ಸುತ್ತುಗಳನ್ನು ಭೇದಿಸುವಲ್ಲಿ ಮತ್ತು ತನ್ನನ್ನು ಅಂತರ್ದುರ್ಗ ಅಥವಾ ಅರಮನೆ ಆವರಣದಿಂದ ಮಾತ್ರ ಪ್ರತ್ಯೇಕಿಸಿದ ಜಾಗವನ್ನು ತಲುಪುವಲ್ಲಿ ಅದು ಹೇಗೆ ಯಶಸ್ವಿಯಾದ ಎಂಬುದನ್ನು ಹೇಳದಿರುವುದು. ಕ್ರಿ.ಶ. ೧೪೪೩ರಲ್ಲಿ ಅಬ್ದುರ್ ರಜಾಕ್ ಏಳು ಸುತ್ತುಗಳನ್ನು ನೋಡಿದನೆಂಬುದನ್ನು ಸ್ಮರಿಸಿಕೊಂಡಾಗ್ಯೂ ಬುಕ್ಕರಾಯನ ಕಾಲದಲ್ಲಿ ಎಷ್ಟು ಸುತ್ತು ಇದ್ದವೆಂಬುದು ಖಚಿತವಿಲ್ಲ.

ಈ ಜಾಗದಲ್ಲಿ ಮುಜಾಹಿದನ ಮೇಲೆ ಏರಿ ಬರಲಾಯಿತು ಮತ್ತು ಅವನು ಸ್ವಲ್ಪದರಲ್ಲಿಯೆ ತನ್ನ ಪ್ರಾಣ ಉಳಿಸಿಕೊಂಡ.

"ತಮ್ಮ ಆರಾಧ್ಯವಸ್ತು ನಾಶವಾದುದನ್ನು ನೋಡಿದಾಗ ವಿಗ್ರಹಾರಾಧಕರು ಆಕಾಶ ಕಳಚಿ ಬೀಳುವಂತಹ ಚೀತ್ಕಾರ ರೋದನಗಳನ್ನೆಬ್ಬಿಸಿದರು. ಕಿಶನ್ ರಾಯ್ ತಮ್ಮ ನೇತೃತ್ವ ವಹಿಸುವಂತೆ ಅವರು ಅವನನ್ನು ಒತ್ತಾಯಪಡಿಸಿದರು. ಮತ್ತು ನಿರ್ಧಾರದಿಂದ ಆಶ್ಚರ್ಯಕಾರಕ ಸಂಖ್ಯೆಯಲ್ಲಿ ಮುಂದುವರಿದರು. ಇದನ್ನು ಕಂಡು ಸುಲ್ತಾನ ತನ್ನ ವ್ಯೂಹ ರಚಿಸಿದ. ಅವನು ತನ್ನ ಛತ್ರವನ್ನು ಬದಿಗಿಟ್ಟ ಮತ್ತು ಕಾಫಿರರ ಚಲನವಲನಗಳನ್ನು ಮತ್ತು ಸಂಖ್ಯೆಯನ್ನು ನಿರೀಕ್ಷಿಸಲು ತನ್ನ ಆಯುಧ ಪಾಣಿಗಳಲ್ಲೊಬ್ಬನಾದ ಮ್ಹಾಮೂದ ಎಂಬ ಅಫಘಾನನೊಡಗೂಡಿ ಒಂದು ಸಣ್ಣ ತೊರೆಯನ್ನು ದಾಟಿದ. ಸುಲ್ತಾನನು ಹತ್ತುತ್ತಿದ್ದ ಕುದುರೆಯಿಂದ ಅವನನ್ನು ಗುರುತಿಸಿದ ಒಬ್ಬ ಹಿಂದೂ ತನ್ನ ದೇವರು ಮತ್ತು ದೇಶಗಳ ನಾಶದ ಸೇಡು ತೀರಿಸಿ ಕೊಂಡು ತನಗೆ ಅಜರಾಮರ ಕೀರ್ತಿ ಸಂಪಾದಿಸಿಕೊಳ್ಳಲು ನಿರ್ಧರಿಸಿದ. ಅವನು ಕಣ್ಣು ತಪ್ಪಿಸಿ ಕಣಿವೆ ಕಂದರಗಳ ಮೂಲಕ ಹೊಳೆಯ ದಂಡೆಗುಂಟ ಸಾಗಿ ಬಯಲು ತಲುಪಿದ್ದನು. ಅವನು ಪೂರ್ಣ ವೇಗದಲ್ಲಿ ಸುಲ್ತಾನನ ಮೇಲೆ ಏರಿಬರುತ್ತಿರುವಾಗ ಒಂದು ಶುಭಗಳಿಗೆಯಲ್ಲಿ ಅವನನ್ನು ಕಂಡ ಮ್ಹಾಮೂದ ಅಫಘಾನನಿಗೆ ಸಂಜ್ಞೆ ಮಾಡಿದ. ಅವನು ತಡಮಾಡದೆ ಹಿಂದೂನ ಮೇಲೆ ರಭಸದಿಂದ ದಾಳಿ ಮಾಡಿದ. ಮ್ಹಾಮೂದನ ಕುದುರೆ ಹಿಂಗಾಲ ಮೇಲೆ ನಿಂತುದರ ಫಲವಾಗಿ ಅವನು ನೆಲಕ್ಕುರು ಳಿದ. ಸಂಪೂರ್ಣ ಮೇಲುಗೈ ಪಡೆದಿದ್ದ. ಅವನ ವೈರಿ ಅವನನ್ನು ಕೊಲ್ಲುತ್ತಿದ್ದ

ಸಮಯಕ್ಕೆ ಸುಲ್ತಾನ ಮುಜಾಹಿದ ಶಾ ಮಿಂಚಿನ ವೇಗದಲ್ಲಿ ಮುಂದೆ ಬಂದ. ಹಿಂದೂ ತನ್ನ ಗುರಿಯನ್ನು ಬದಲಿಸಿ ಸುಲ್ತಾನನ ಮೇಲೆ ಬಲವಾದ ಪೆಟ್ಟು ಹಾಕಿದ. ಅದೇ ಕ್ಷಣ ಹಾಕಿದ ವಿಜಯದ ಕೇಕೆಯಿಂದ ಅವನ ಪೆಟ್ಟು ಪರಿಣಾಮಕಾರಿಯಾಯಿತೆಂದು ಪ್ರೇಕ್ಷಕರು ನಂಬುವಂತಾಯಿತು. ಸುದೈವವಶಾತ್ ಉಕ್ಕಿನ ಶಿರಸ್ತ್ರಾಣ ಸುಲ್ತಾನನ ತಲೆಯನ್ನು ಉಳಿಸಿತು. ಅವನು ಈಗ ವೈರಿಗೆ ಎಂಥ ಘಾಯ ಮಾಡಿದನೆಂದರೆ ಅವನು ಭುಜದಿಂದ ಹೊಕ್ಕಳವರೆಗೆ ಇಬ್ಭಾಗವಾಗಿ ಕುದುರೆಯಿಂದ ಉರುಳಿ ಸತ್ತುಬಿದ್ದ.[28] ಅದಾದ ನಂತರ ಸುಲ್ತಾನ ವ್ಯಾಘ್ರಮೂದನನ್ನು ಪುನಃ ಕುದುರೆಯೇರಿಸಿ ಹೊಳೆಯಾಚೆಗಿದ್ದ ತನ್ನ ಸೈನ್ಯ ಸೇರಿಕೊಂಡ."

ಯುದ್ಧ ಸುರುವಾಯಿತು. ಅವರಲ್ಲಿ ಹಿಂದೂಗಳು ಸೋತರು. ಆದರೆ, ದಾಳಿ ಮಾಡಿದ ಸೈನ್ಯ ಇನ್ನೂ ಆಯಾಸದಿಂದ ಚೇತರಿಸಿಕೊಂಡಿರಲಿಲ್ಲ. ಆಗ ರಾಯನ ಸಹೋದರ[29] "ತನ್ನ ರಾಜ್ಯದಿಂದ ಇಪ್ಪತ್ತು ಸಾವಿರ ಅಶ್ವದಳ ಮತ್ತು ಅಪಾರ ಕಾಲ್ದಳದಿಂದೊಡಗೂಡಿದ ಹೊಸ ಬಲದೊಂದಿಗೆ ನಗರಕ್ಕೆ ಬಂದಿಳಿದ".[30] ಆಗ ಯುದ್ಧ ಘೋರವಾಯಿತು. ಯುದ್ಧಮಧ್ಯದಲ್ಲಿ ಸುಲ್ತಾನನ ಕಕ್ಕ ದಾಊದ್ ಖಾನ್[31] ತನ್ನ ಪ್ರಭುವಿನ ಸುರಕ್ಷಿತತೆಯ ಬಗೆಗೆ ಕಾತರವುಳ್ಳವನಾಗಿ ತನ್ನ "ಧುನ್ನ ಸೊದ್ರ"[32]ದಲ್ಲಿನ ಠಾಣ್ಯ ಬಿಟ್ಟುಬಂದು ಯುದ್ಧದಲ್ಲಿ ತೊಡಗಿ ಶ್ರೇಷ್ಠ ಶೌರ್ಯದಿಂದ ಕಾದಿದ. ಮಹಮ್ಮದೀಯರು ಪುನಃ ಜಯಶಾಲಿಗಳಾದರು; ಆದರೆ, ಶತ್ರು ದಾಊದ್ ಖಾನನ ಚಲನೆಯ ಪ್ರಯೋಜನ ಪಡೆದು ಬಿಟ್ಟುಹೋದ ಠಾಣ್ಯವನ್ನು ವಶಪಡಿಸಿಕೊಂಡಿದ್ದರು. ಹಾಗೆ ಮಾಡುವ ಮೂಲಕ ಸುಲ್ತಾನನು ಹಿಂದಕ್ಕೆ ಹೋಗುವ ಮಾರ್ಗಕ್ಕೆ ಗಂಭೀರ ಅಪಾಯ ಒಡ್ಡಿದ್ದರು. ಆದುದರಿಂದ, ಅವನು ರಣರಂಗ ಬಿಟ್ಟು ಕುಶಲ ವ್ಯೂಹಯೋಜನೆಯಿಂದ ತನ್ನೆಲ್ಲ ಸೈನ್ಯ ಗುಡ್ಡಗಳಿಂದ ಸುರಕ್ಷಿತವಾಗಿ ಪಾರಾಗುವಂತೆ ಮಾಡಿದ. ಬಹುಮಟ್ಟಿಗೆ ಸ್ತ್ರೀಯರಿಂದಲೆ ಕೂಡಿದ ಅರವತ್ತರಿಂದ ಎಪ್ಪತ್ತು ಸಾವಿರ ಸೆರೆಯಾಳುಗಳೊಂದಿಗೆ ಅವನು ವಿಜಯನಗರದಿಂದ ಹಿಂದೆ ಸರಿದು ಅದೋನಿಯ ಮುಂದೆ ಬಂದು ಕುಳಿತನು; ಆದರೆ ಒಂಬತ್ತು ತಿಂಗಳು ಮುತ್ತಿಗೆ ಹಾಕಿದ ನಂತರ ಪ್ರಯತ್ನವನ್ನು ಕೈಬಿಡಲಾಯಿತು. ಮತ್ತು ಸುಲ್ತಾನ ತನ್ನ ಪ್ರದೇಶಗಳಿಗೆ ಮರಳಿದ. ದಂಡಯಾತ್ರೆ ಮುಕ್ತಾಯವಾದುದು ಹೀಗೆ.

ಈ ಕಾಲದ (ಸು.ಕ್ರಿ.ಶ. ೧೩೭೮) ವಿಜಯನಗರ ರಾಜ್ಯದ ಸಂಕ್ಷಿಪ್ತ ವರ್ಣನೆಯನ್ನು ಫಿರಿಸ್ತಾ ನೀಡುತ್ತಾನೆ. ಅದರಿಂದ ಕೆಳಗಿನ ಉದ್ಧರಣೆಗಳನ್ನು ತೆಗೆದುಕೊಳ್ಳಲಾಗಿದೆ.

"ಬಹಮನೀ ಮನೆತನದ ರಾಜರು ಮೇಲ್ಮಟ್ಟದ ಕಲಿತನದಿಂದಲೆ ತಮ್ಮ ಸ್ಥಾನಮಾನ ಉಳಿಸಿಕೊಂಡರು. ಏಕೆಂದರೆ, ಬಲದಲ್ಲಿ, ಸಂಪತ್ತಿನಲ್ಲಿ ಮತ್ತು ಪ್ರದೇಶದ ವ್ಯಾಪ್ತಿಯಲ್ಲಿ ಬೀಜನಗರದ ರಾಯರು ಅವರಿಗಿಂತ ಬಹಳ ಮೇಲಾಗಿದ್ದರು."

ತರುವಾಯದ ವರ್ಷಗಳಲ್ಲಿ ನಿಶ್ಚಯವಾಗಿಯೂ ಆದಂತೆ ಈ ಕಾಲದಲ್ಲೂ ಇಡಿ ದಕ್ಷಿಣ ಭಾರತ ರಾಯನ ಅಧಿಪತ್ಯಕ್ಕೆ ಒಳಪಟ್ಟಿತ್ತೆಂದು ಅವನು ಸೂಚಿಸುತ್ತಾನೆ.

"ಗೋವಾದ ಬಂದರ,[33] ಮಳಗಾಂವದ ಕೋಟೆ[34].... ಬೀಜನಗರದ ರಾಯನಿಗೆ ಸೇರಿದವುಗಳಾಗಿದ್ದವು. ಮತ್ತು ತುಲ್‌ಘಾಟ್‌ನ[35] ಅನೇಕ ಜಿಲ್ಲೆಗಳೂ ಅವನ ಸ್ವಾಧೀನದಲ್ಲಿದ್ದವು. ಅವನ ಪ್ರದೇಶ ಚೆನ್ನಾಗಿ ಜನರಿಂದ ತುಂಬಿತ್ತು. ಮತ್ತು ಅವನ ಪ್ರಜೆಗಳು ಅವನ ಅಧಿಕಾರಕ್ಕೆ ವಿಧೇಯರಾಗಿದ್ದರು. ಮಲಬಾರ, ಸಿಲೋನ, ಮತ್ತು ಇತರ ದ್ವೀಪಗಳ ರಾಯರು ಅವನ ದರಬಾರಿನಲ್ಲಿ ರಾಯಭಾರಿಗಳನ್ನು ಇಟ್ಟಿದ್ದರು. ಮತ್ತು ಪ್ರತಿ ವರ್ಷ ಕಾಣಿಕೆ ಸಲ್ಲಿಸುತ್ತಿದ್ದರು."[36]

ನಾವು ಒಂದು ಗಳಿಗೆ ಸುಲ್ತಾನನ ಕಕ್ಕ ಮತ್ತು ವಿಜಯನಗರದ ಮುಂದೆ ಅವನ ವರ್ತನೆಯ ಕಡೆಗೆ ಹೊರಳೋಣ. ಅವನು ಸದುದ್ದೇಶಭರಿತನಾಗಿ ರಾಜನನ್ನು ರಕ್ಷಿಸಲೋಸುಗ ತನ್ನ ಠಾಣ್ಯವನ್ನು ಬಿಟ್ಟುಬಂದಿದ್ದನಷ್ಟೆ.

"ದಾಊದ್ ಖಾನನ ಪತಾಕೆ ನೋಡಿ ಸುಲ್ತಾನನ ಕೋಪ ಉಕ್ಕಿತು. ಆದರೆ, ನಿಜಭಕ್ತರ ಪತಾಕೆಗಳ ಮೇಲೆ ವಿಜಯದ ಗಾಳಿ ಹಾರಾಡುವವರೆಗೆ ತನ್ನ ಅಸಂತೋಷವನ್ನು ತಡೆದಿಟ್ಟಿದ್ದ. ನಂತರ ಅವನು ದಾಊದ್ ಖಾನನನ್ನು ತನ್ನೆದುರು ಕರೆದು, ಶತ್ರು (ಅದನ್ನು) ಸ್ವಾಧೀನಪಡಿಸಿಕೊಂಡಿದ್ದರೆ ಒಬ್ಬ ಮುಸಲ್ಮಾನನೂ ನಗರದಿಂದ ಪಾರಾಗುತ್ತಿರಲಿಲ್ಲ, ಅಷ್ಟು ಮಹತ್ವದ ಠಾಣ್ಯವನ್ನು ಬಿಟ್ಟುಬಂದುದಕ್ಕೆ ತೀವ್ರ ಛೀಮಾರಿ ಹಾಕಿದ."

ಈ ನಡವಳಿಕೆಯಿಂದುಂಟಾದ ಅಸಮಾಧಾನವನ್ನು ದಾಊದ ಜೋಪಾನ ವಾಗಿರಿಸಿಕೊಂಡ ಮತ್ತು ಮನಸ್ನೊಡೆದ ಇತರ ಸರದಾರರೊಂದಿಗೆ ಕೂಡಿಕೊಂಡು ಸುಲ್ತಾನನ ಕೊಲೆಗೆ ಗುಪ್ತವಾಗಿ ಹೊಂಚುಹಾಕಿದ. ಸಂಚುಗಾರರು ಮುಜಾಹಿದ ಅದೋನಿಯಿಂದ ಕಲಬುರ್ಗಾದ ಹಾದಿ ಹಿಡಿಯುವವರೆಗೆ ಕಾಯ್ದರು. ಆಗ ಒಂದು ರಾತ್ರಿ, ಶುಕ್ರವಾರ, ಏಪ್ರಿಲ್ ೧೬, ಕ್ರಿ.ಶ. ೧೩೭೮[37]ರಂದು ಸುಲ್ತಾನ ತನ್ನ ಡೇರೆಯಲ್ಲಿ ಮಲಗಿದ್ದಾಗ ದಾಊದ ಇನ್ನೂ ಮೂವರೊಂದಿಗೆ ಒಳನುಗ್ಗಿ ಅವನನ್ನು ಇರಿದ. ಕಾದಾಟವಾಯಿತು, ಆದರೆ ನತದೃಷ್ಟ ದೊರೆ ಖಡ್ಗದ ಏಟಿನಿಂದಾಗಿ ಅಸು ನೀಗಿದ.[38] ಮುಜಾಹಿದನಿಗೆ ಮಕ್ಕಳಿರದ್ದರಿಂದ ತಾನೇ ಹತ್ತಿರದ ಸಂಬಂಧಿ ಯಾದುದರಿಂದ ತಾನೆ ಸುಲ್ತಾನನೆಂದು ದಾಊದ ಕೂಡಲೆ ಘೋಷಿಸಿದ. ಹಾಗೆ ಮಾನ್ಯ ಮಾಡಲ್ಪಟ್ಟು ಕಲಬುರ್ಗಾಕ್ಕೆ ನಡೆದ. ಅಲ್ಲಿ ಅವನನ್ನು (ರಾಜನೆಂದು ಅಧಿಕೃತವಾಗಿ) ಘೋಷಿಸಲಾಯಿತು.

ತನ್ನ ಸೋದರನ ಮಗನ ಕೊಲೆಯಿಂದ ದಾಊದನಿಗಾದ ಪ್ರಯೋಜನ ಶೂನ್ಯ. ಏಕೆಂದರೆ, ನಾಡು ಒಮ್ಮೆಲೆ ಎರಡು ವಿರೋಧಿ ಪಂಗಡಗಳಲ್ಲಿ ಇಬ್ಭಾಗ

ವಾಯಿತು. ಮತ್ತು ಮೇ ೨೧, ಕ್ರಿ.ಶ. ೧೩೭೮ರಲ್ಲಿ[39], ತನ್ನ ಆಳಿಕೆಯ ಒಂದೇ ತಿಂಗಳ ನಂತರ, ರಾಜಧಾನಿಯಲ್ಲಿನ ದೊಡ್ಡ ಮಸೀದಿಯಲ್ಲಿ ಪ್ರಾರ್ಥನೆ ಸಲ್ಲಿಸುತ್ತಿದ್ದಾಗ ಕೊಲೆಗಾರನ ಕೊಲೆಗೀಡಾದ. ಏತನ್ಮಧ್ಯೆ, ಬುಕ್ಕರಾಯ ದೋಆಬ ವಶಪಡಿಸಿಕೊಂಡ, ಕೃಷ್ಣಾ ನದಿಯವರೆಗೂ ಮುಂದುವರಿದ, ಮತ್ತು ರಾಯಚೂರು ಕೋಟೆಗೆ ಮುತ್ತಿಗೆ ಹಾಕಿದ.

ಕಚ್ಚಾಟ ತಪ್ಪಿಸಲೋಸುಗ ದಾಊದನ ಮಗ ಎಂಟು ವರ್ಷದವನಿದ್ದಾಗಲೆ ಮುಜಾಹಿದನ ಸೋದರಿ ರೂಹ್ ಪರವರ್ ಆಗಾ ಅವನ ಕಣ್ಣು ಕೀಳಿಸಿದ್ದರಿಂದ ದಾಊದನ ನಂತರ ಅಲಾಉದ್ದೀನನ ಕಡೆಯ ಮಗ ಒಂದನೆಯ ಮಹಮ್ಮದ[40] ಪಟ್ಟಕ್ಕೆ ಬಂದ. ಮಹಮ್ಮದ ಸ್ಪಷ್ಟವಾಗಿ ಎಲ್ಲ ಪಕ್ಷಗಳಿಗೂ ಬೇಕಾದವನಾಗಿದ್ದ. ಏಕೆಂದರೆ, ರಾಯ ಕೂಡ ರಾಯಚೂರ ಮುತ್ತಿಗೆಯನ್ನು ತೆಗೆದನು ಮತ್ತು ಅವನಿಗೆ ಮಹಮ್ಮದ ಶಾಹ ವಸೂಲು ಮಾಡುತ್ತಿದ್ದ ಕಪ್ಪ ಕೊಡಲು ಒಪ್ಪಿದ. ಫಿರಿಸ್ತಾನಂತೂ ಹೀಗೆ ಹೇಳುತ್ತಾನೆ. ಮತ್ತು ಸರಿಸುಮಾರು ಇಪ್ಪತ್ತು ವರ್ಷಗಳ ಅವನ ಆಳಿಕೆಯಲ್ಲಿ ಒಳಗೂ ಹೊರಗೂ ಶಾಂತಿ ಸಮಾಧಾನ ನೆಲೆಸಿದ್ದವು. ೨೦ನೆಯ ಎಪ್ರಿಲ್, ಕ್ರಿ.ಶ. ೧೩೯೭[41]ರಂದು ಅವನು ತೀರಿಕೊಂಡ.

ವಿಜಯನಗರದ ಒಂದನೆಯ ಬುಕ್ಕನ ಮರಣ ಸ್ಪಷ್ಟವಾಗಿ ತೋರುವಂತೆ, ನೀಡಲಾದ ಕಾರಣಗಳಿಗಾಗಿ, ಕ್ರಿ.ಶ. ೧೩೭೯ರ ಸುಮಾರಿಗೆ ಸಂಭವಿಸಿತೆಂದು ನಿರ್ಧರಿಸಬೇಕಾಗುತ್ತದೆ.

---

1 ಜರ್ನಲ್ ಬಾಂಬೆ ಶಾಖೆ, ಆರ್.ಎ.ಎಸ್., xii ೩೩೮, ೩೪೦

2 ಡಾ. ಹುಲ್ಟ್ಜ್‌ಶ್ ಪ್ರಕಟಿಸಿರುವ "ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್" (ಸಂ. ೧, ಪು. ೧೬೭)ದಲ್ಲಿ ಕಾಲ ನಿರ್ಧಾರಿತವಾಗಿಲ್ಲದ ಒಂದು ಶಾಸನವಿದೆ. ಅನಂತಪುರ ಜಿಲ್ಲೆಯ ಗುತ್ತಿ ಅಥವಾ ಗೂತಿ ಎಂಬ ಯಾರೂ ಕಾಲಿಟ್ಟರದ ಕೋಟೆ ಇರುವ ಉನ್ನತ ಗುಡ್ಡದ ತುದಿಯಿಂದ ಬಹಳ ದೂರವಿರುವ ಬಂಡೆಯ ಮೇಲೆ ಆ ಶಾಸನವಿದೆ. ಅದರ ಪ್ರಕಾರ ಆ ಭದ್ರ ಕೋಟೆ ಬುಕ್ಕರಾಜನಿಗೆ ಸೇರಿದ್ದು. ಆ ಸ್ಥಳ ವಿಜಯನಗರದ ಪೂರ್ವಕ್ಕೆ ಎಪ್ಪತ್ತೇಳು ಮೈಲು ಇದೆ.

3 ಎಪಿ. ಇಂ., ೩, ೩೬.

4 ೧೩೬೮-೬೯ (ಶಕೆ ೧೨೯೦, ಕೀಲಾರ ವರ್ಷ)ದ ಶಾಸನವೊಂದು ಮಾಧವಾಚಾರ್ಯ ವಿದ್ಯಾರಣ್ಯರು ಇನ್ನೂ ಬದುಕಿದ್ದಂತೆ ಉಲ್ಲೇಖಿಸುತ್ತದೆ. ಇಂಡಿಯನ್ ಆ್ಯಂಟಿಕ್ವಿಟೀಜ್, iv, ೨೦೬.

5 ನನ್ನ "ಆ್ಯಂಟಿಕ್ವಿಟೀಜ್ ಆಫ್ ಮದ್ರಾಸ್" ನೋಡಿರಿ, ii, ೮, ನಂ. ೫೪, ಹುಲ್ಟ್ಜ್‌ಶ್‌ನ ಎಪಿಗ್ರಾಫಿಯಾ ಇಂಡಿಕಾ, iii, ೨೧.

6 ಬ್ರಿಗ್ಸ್, i, ೪೨೭.

7 ಇದು ತನ್ನಷ್ಟಕ್ಕೆ ತಾನೆ ಅಸಂಗತವಾಗಿದೆ ಮತ್ತು ತಪ್ಪೆಂದು ಸ್ವಯಂಸಿದ್ಧಗೊಳಿಸುತ್ತದೆ. ಇಷ್ಟು ಕ್ಷಿಪ್ರ. ಕಾಲದಲ್ಲಿ ನಗರ ಕಟ್ಟುವುದು ಸಾಧ್ಯವಿಲ್ಲೆಂಬುದು ಸುಸ್ಪಷ್ಟ. ಮತ್ತು ಮೇಲಾಗಿ, ರಾಜನು ಈ ರೀತಿಯಲ್ಲಿ ಉದ್ಯುಕ್ತನಾಗುವುದು ಸಮಯದ ಸಂಪೂರ್ಣ ನಷ್ಟವಾಗುತ್ತಿತ್ತು. ಆ ಕಾಲದ ಸುಮಾರಿಗೆ ಆ ನಗರ ಕಟ್ಟಲ್ಪಟ್ಟದುದುಕ್ಕೆ ಕಾರಣ ಕೊಡಲೋಸುಗ ಬಹುಶಃ ಆ ವಾಕ್ಯವನ್ನು ಸೇರಿಸಲಾಗಿದೆ.

8 ಒಂದನೆಯ ರಬಿ-ಉಲ್-ಅವ್ವಲ್ ಹಿಜರಿ ಶಕೆ ೭೯೯ ಎಂದು ಫಿರಿಸ್ತಾ ಹೇಳುತ್ತಾನೆ; ಬರ್ಹಾನ್-ಇ-ಮಾಸಿರ್ ಪ್ರಕಾರ ಹಿಜರಿ ಶಕೆ ೭೬೧ (ಕ್ರಿ.ಶ. ೧೩೫೯-೬೦). ಎರಡನೆಯುದರ ಕರ್ತೃ, ಅಲ್ಲಾಉದ್ದೀನ್ ಹದಿಮೂರು ವರ್ಷ ಹತ್ತು ತಿಂಗಳು ಇಪ್ಪತ್ತೇಳು ದಿನ ಆಳಿದನೆಂದು ಹೇಳುತ್ತಾನೆ. ಇದರಿಂದ ಅವನ ಮರಣದ ದಿನಾಂಕ ರಬಿ-ಉಲ್-ಅವ್ವಲ್‌ನ ೨೩ನೆಯ ದಿನ ಹಿಜರಿ ಶಕೆ ೭೬೨ ಅರ್ಥಾತ್ ಜನವರಿ ೩೧, ಕ್ರಿ.ಶ. ೧೩೬೧ ಎಂದಾಗುತ್ತದೆ. ಆದುದರಿಂದ ಅವನು ಬಹಳ ಕರಾರುವಾಕ್ಕಾಗಿರುವಂತೆ ತೋರುವುದಿಲ್ಲ. ಫಿರಿಸ್ತಾ ಅವನ ಆಳಿಕೆಯ ಅವಧಿಯನ್ನು ಶಬ್ದಗಳಲ್ಲಿ "ಹನ್ನೊಂದು ವರ್ಷ ಎರಡು ತಿಂಗಳು ಏಳು ದಿನ" ಎಂದು ಹೇಳುತ್ತಾನೆ.

9 ಈ ಕಾಲದ ಸುಮಾರಿಗೆ ಬುಕ್ಕನ ಸೈನ್ಯಗಳ ಮುಂದಾಳಾಗಿದ್ದವನ ಹೆಸರು ನಾಡೆಗೊಂಟ ಸಾಯ್ಯಣನ ಮಗ ನಾಡಗೊಂಟ ಮಲ್ಲಿನಾಥ ಎಂದಿತ್ತೆಂದು ಶ್ರೀ ರೈಸ್ ಪ್ರಕಟಿಸಿದ ಕೆಲವು ಶಾಸನಗಳು ಹೇಳುತ್ತವೆ. ಇವುಗಳ ಕಾಲ ಕ್ರಿ.ಶ. ೧೩೫೫-೫೬ ಮತ್ತು ೧೩೫೬-೫೭.

10 ಸ್ಕಾಟ್‌ನ ಅನುವಾದದಲ್ಲಿ (i, ೧೯) "ನಾಗದೇವ್" ಎಂದು ಕರೆಯಲಾಗಿದೆ.

11 ಬ್ರಿಗ್ಸ್, ii, ೩೦೭.

12 ಫಿರಿಸ್ತಾನಲ್ಲಿ ಇಲ್ಲಿ ತೇದಿಗಳ ಗೋಜಲು ಇದೆ. ಆದರೆ ಅವನು ಮುಹಮ್ಮದ ಹೊರಹೊರಟ ತಿಂಗಳು ಮತ್ತು ವರ್ಷವನ್ನು ನಿರ್ಧರಿಸುತ್ತಾನೆ, ಮತ್ತು ನಾವು ಅದನ್ನು ಸದ್ಯಕ್ಕೆ ಒಪ್ಪಬಹುದು. ವಿಜಯನಗರದ ವಿರುದ್ಧ ಯುದ್ಧ ವಾರಂಗಲ್ಲಿನ ವಿರುದ್ಧ ದಂಡಯಾತ್ರೆಗಿಂತ ಮೊದಲು ನಡೆಯಿತೆಂದು ಬರಹಾನ್-ಇ-ಮಾಸಿರ್ ಸೂಚಿಸುತ್ತದೆ. ಫಿರಿಸ್ತಾ ನಿಶ್ಚಯವಾಗಿ ಅದನ್ನು "ವೆಲ್ಲನ್‌ಪಟ್ಟನ್" ಪ್ರಸಂಗದ ನಂತರದ್ದೆಂದು ನಿರ್ಧರಿಸುತ್ತಾನೆ.

13 ಫಿರಿಸ್ತಾ (ಸ್ಕಾಟ್, i. ೨೩)

14 ಈಗ ಕರೆಯಲಾಗಿರುವಂತೆ ಆದೋನಿ, ಆದರೆ, ಸರಿಯಾಗಿ ಬರೆಯಬೇಕೆಂದರೆ ಆಧವಾನಿ, ಮದ್ರಾಸ ಮತ್ತು ಬಾಂಬೆ ನಡುವಿನ ರೈಲು ಮಾರ್ಗದಲ್ಲಿ ಮತ್ತು ತುಂಗಭದ್ರಾ ನದಿಯಿಂದ ಕೆಲವು ಮೈಲು ದಕ್ಷಿಣಕ್ಕೆ ಇರುವ ಈ ಉತ್ತಮ ಪರ್ವತ ಕೋಟೆ ವ್ಯಾಪಕ ಗೋಡೆಗಳ ಸಾಲುಳ್ಳದ್ದಾಗಿದೆ.

15 ಫಿರಿಸ್ತಾನ ವೃತ್ತಾಂತ ಅವಶ್ಯಕವಾಗಿಯೆ ಮುಸಲ್ಮಾನರ ಬಗೆಗಿನ ಪಕ್ಷಪಾತದ ಛಾಯೆಯಿಂದ ಕೂಡಿದುದು ಮತ್ತು ಕ್ರಿ.ಶ. ಹದಿಮೂರು ಅಥವಾ ಹದಿನೇಳನೆಯ

ಶತಮಾನದವರೆಗೆ ಸಂಕಲಿತವಾಗಲಿಲ್ಲ ಎಂಬುದನ್ನು ಮರೆಯುವಂತಿಲ್ಲ. "ಕಾಫಿರ"ರೆಂದರೆ ಹಿಂದೂಗಳು ಮತ್ತು "ನಿಜಭಕ್ತ"ರೆಂದರೆ ಪ್ರವಾದಿ ಮಹಮ್ಮದನ ಅನುಯಾಯಿಗಳು.

16 ಪ್ರಸ್ತುತ ಪ್ರದೇಶ ಸಾಮಾನ್ಯವಾಗಿ ಮೇಲೆ ಗರಸಿನ ಮೇಲೆ ದಪ್ಪವಾದ ರೇವುಮಣ್ಣಿನ ಪೂರೈಕೆಯಿಂದ ರಚಿತವಾದ ಬಯಲುಸೀಮೆ. ಅದನ್ನು "ಕಪ್ಪು ಹತ್ತಿ ಭೂಮಿ" ಎಂದು ಕರೆಯಲಾಗುತ್ತದೆ. ಜೋರು ಮಳೆಯಾದ ನಂತರ ಕೆಲವು ದಿನಗಳವರೆಗೆ ವಸ್ತುತಃ ಅದು ಸಂಚಾರಯೋಗ್ಯವಲ್ಲ.

17 ಕಳೆದ ಬಾರಿ ಉದ್ಧರಿಸಿದ ಫಿರಿಸ್ತಾನ ಅಭಿವ್ಯಕ್ತಿ ಗಮನಿಸಲು ಯೋಗ್ಯವಾಗಿದೆ. ಏಕೆಂದರೆ, ಅವನ ಕಾಲದ ವಾಡಿಕೆಯಂತೆ ಕ್ರಿ.ಶ. ೧೪೬೬ರಷ್ಟೊತ್ತಿಗೆ ವಿಜಯನಗರದ ರಾಯ ದೊಡ್ಡ ಮತ್ತು ಮಹತ್ವದ ಸಾರ್ವಭೌಮನಾಗಿದ್ದನೆಂದು ಅದು ಸೂಚಿಸುತ್ತದೆ.

18 ಇಷ್ಟು ಹಳೆಯ ಕಾಲದಲ್ಲಿ ಸೈನ್ಯಗಳು ಫಿರಂಗಿ ಪಡೆಯುವುದು ಅಸಾಧ್ಯವೆಂದು ಬ್ರಿಗ್ಸ್ ಹಡೆಯುತ್ತಾನೆ.

19 ಸ್ಕಾಟ್‌ನ ಅವೃತ್ತಿ, i, ೨೮

20 ಬ್ರಿಗ್ಸ್ ಭೋಜಮಲ್ಲ ಎಂದು ಹೇಳುತ್ತಾನೆ. ಅವನು ಮೇಲೆ ಹೇಳಿದ ಮಲ್ಲಯ್ಯ ಅಥವಾ ಮಲ್ಲಿನಾಥ ಆಗಿರಬಹುದು. (ಪು. ೪೧, ಟಿಪ್ಪಣಿ)

21 ಹಿಂದೂಗಳಿಗೆ ಪವಿತ್ರ ಪ್ರಾಣಿಗಳು.

22 ಸುಮಾರು ೪೫ ಮೈಲುಗಳು.

23 ಹುಲಿ ಬೇಟೆಗಾರ

24 ೧೯ನೆಯ ರಬಿಉಲ್ಲಾವ್ವದ ಹಿ.ಶ. ೮೮೬ (ಫಿರಿಸ್ತಾ), ಬರಹಾನ್-ಇ-ಮಾಸಿರ್ ಹಿ.ಶ. ೮೮೫ ಎಂದು ಹೇಳುತ್ತದೆ.

25 ಬುಕ್ಕನ ಪುಕ್ಕಲುತನ ಪುಷ್ಟೀಕರಿಸಲು ರವಷ್ಟೂ ಸಾಕಾಗದ ಕತೆಯೊಂದನ್ನು ಫಿರಿಸ್ತಾ ಹೇಳುತ್ತಾನೆ. ದಂಡು ಸಾಗುತ್ತಿರುವಾಗ ಒಂದು ದಿನ ಬಹಳ ಕ್ರೂರವಾದ ನರಭಕ್ಷಕ ಹುಲಿಯನ್ನು ಬೆನ್ನಟ್ಟಿ ಹೋದ. ಮತ್ತು ಒಂದೇ ಒಂದು ಬಾಣದಿಂದ ಅದರ ಹೃದಯ ಛೇದಿಸಿದ. "ವಿಗ್ರಹಾರಾಧಕರು ಈ ಸಾಹಸವನ್ನು ಕೇಳಿ ಭೀತರಾದರು". ಸದ್ಯಕ್ಕಂತೂ ಆದೋನಿ ಮತ್ತು ವಿಜಯನಗರಗಳ ಮಧ್ಯದ ಪ್ರಾಂತದಲ್ಲಿ ವಿಪುಲ ಸಂಖ್ಯೆಯಲ್ಲಿ ಚಿರತೆಗಳಿರುವವಾದರೂ ಹುಲಿಗಳಂತೂ ಇಲ್ಲ.

26 ಫಿರಿಸ್ತಾ, ii, ೪೩೨.

27 ಮಿಸ್ಟರ್ ಡ್ಯಾನ್ವರ್ಸ್ ಕ್ರಿ.ಶ. ೧೮೯೪ರಲ್ಲಿ ಪ್ರಕಟಿಸಿದ ಫ್ರೆಂಚ್ ನಕಾಶ (ಪೋರ್ಚುಗೀಜ್ ಇನ್ ಇಂಡಿಯಾ" ಒಂದನೆಯ ಸಂಪುಟದ ಕೊನೆ) ಈ ಸ್ಥಳದಲ್ಲಿ "C. de Romes" ಎಂದು ತೋರಿಸುತ್ತದೆ. ಆದರೆ ಯುದ್ಧೋಪಕರಣ ಇಲಾಖೆಯ ಆಧುನಿಕ ನಕಾಶಗಳಲ್ಲಿ ಅಲ್ಲಿ ಸುತ್ತಮುತ್ತಲು ಆ ಹೆಸರಿನ ಸ್ಥಳವಿಲ್ಲ.

28 ಆಗಿನ್ನೂ ಸುಮಾರು ಇಪ್ಪತ್ತು ವರ್ಷದವನು ಮಾತ್ರವಿದ್ದ ಮುಜಾಹಿದನನ್ನು ಹೇಳಿಕೊಳ್ಳುವಂತಹ ಬಲಶಾಲಿ ಎಂದು ಫಿರಿಸ್ತಾ ಈ ಮೊದಲು ವರ್ಣಿಸಿರುವುದನ್ನು ಗಮನಿಸಬೇಕು. ಹದಿನಾಲ್ಕನೆಯ ವರ್ಷದಲ್ಲಿ ಕುಸ್ತಿಪಂದ್ಯದಲ್ಲಿ ತನ್ನ ಪ್ರತಿಸ್ಪರ್ಧಿಯ ಕುತ್ತಿಗೆ ಮುರಿದಿದ್ದನೆಂದು ಅವನು ಹೇಳುತ್ತಾನೆ.

29 ಬಹುಶಃ ಮಾರಪ್ಪ ಅಥವಾ ಮುದ್ದಪ್ಪ.

30 ರಾಜ್ಯ ಪ್ರಾಂತಗಳಲ್ಲಿ ವಿಭಜಿತವಾಗಿತ್ತೆಂಬುದನ್ನು ಕಾಣಬಹುದು. ಅವುಗಳನ್ನು ಯಾವುದೆ ಕ್ಷಣಕ್ಕೆ ಸಿದ್ಧವಾಗಿರುವ ದೊಡ್ಡ ಸೈನ್ಯಗಳನ್ನು ಸಾಕಬೇಕೆಂಬ ಕರಾರಿನ ನ್ವಯ ಮನ್ನೆಯರು ಆಳುತ್ತಿದ್ದರು.

31 ದಾಊದ ಮುಜಾಹಿದನ ತಂದೆಯ ಸೋದರನ ಮಗನಾಗಿದ್ದನೆಂದು ಕೆಲವು ಪರಿಣತರು ಹೇಳುತ್ತಾರೆ.

32 ನನಗೆನಿಸಿದಂತೆ "ಧುನ್ನ ಸೊದ್ರ" ಒಂದು ಸರೋವರ ಅಥವಾ ಕೆರೆ. ಅದು ವಿಜಯನಗರ ಗುಡ್ಡಗಳ ಪೂರ್ವ ಅಂಚಿನ ಮೇಲೆ, ಒಂದು ಉನ್ನತ ಗುಡ್ಡದ ಬುಡದ ಸಮೀಪದಲ್ಲಿ ಇದೆ. ಈ ಗುಡ್ಡವನ್ನು ತ್ರಿಕೋಣಮಿತಿಯ ಮೋಜಣಿ ಇಲಾಖೆಯ ತಾಲೂಕು ನಕ್ಷೆಯಲ್ಲಿ (ಬಹುಶಃ) ಧರ್ಮ ಸಮುದ್ರಮ್ ಬದಲು "ಧನ್ನಸುಂದ್ರಮ್" ಎಂದು ಕರೆದಿದ್ದಾರೆ. ಈ ಗುಡ್ಡದ ನೆತ್ತಿಯ ಮೇಲೆ ಒಂದು ದೊಡ್ಡ ತ್ರಿಕೋಣಮಿತೀಯ ಮೋಜಣಿ ಸ್ತಂಭವಿದೆ. ಗುಡ್ಡ ೫೦೦ ಅಡಿ ಎತ್ತರ ವಿದ್ದು ಕಣವಿ ತಿಮ್ಮಾಪುರಮ್ ಹಳ್ಳಿಯ ಹದ್ದಿನಲ್ಲಿ ಇದೆ. ವಾಯುವ್ಯದಲ್ಲಿ ದಾಳಿ ಗಾರರಿಗೆ ತೆರೆದಿದ್ದ ಏಕಮೇವ ಪಾಸಾತಿ ಮಾರ್ಗವನ್ನು ಮುಚ್ಚಲು ರಾಜಧಾನಿ ಯಿಂದ ಹೊರಟ ಸೈನ್ಯ ಗುಡ್ಡಗಳನ್ನು ಸುತ್ತುತ್ತ ಬಂದು ಪ್ರಯತ್ನಿಸಬಹುದಾದ ಮಾರ್ಗದ ಮೇಲೆ ದೂರ ನೋಟವುಳ್ಳ ಈ ಠಾಣೆ ಮಹಮ್ಮದೀಯ ಸೈನ್ಯದ ದೃಷ್ಟಿಯಿಂದ ಹೊಂದಿದ ಮಹತ್ವವನ್ನು ಉತ್ಪ್ರೇಕ್ಷಿಸಲಾಗದು.

33 ಸೆನ್ಹೊರ್ ಲೊಪ್ಸ್ ತಾನು ಇತ್ತೀಚೆಗೆ ಲಿಸ್ಬನ್‌ನಲ್ಲಿರುವ ಕೊರ್ ದ ಟೊಂಬೊ ಪತ್ರಾಗಾರದಲ್ಲಿ (ಕಾರ್ಪೊ ಕ್ರಾನೊಲಾಜಿಕೊ, ಭಾಗ iii, ಕಟ್ಟು ೧೧, ನಂ. ೧೯೭) ತಾಮ್ರಪಟ ದತ್ತಿಯ ಪ್ರತಿಯನ್ನು ಕಂಡುದಾಗಿ ಹೇಳುತ್ತಾನೆ. ಅದನ್ನು ಸಾರ್ವ ಭೌಮ, ವಿಜಯನಗರದ ರಾಜ 'ವೀರ ಹರಿಹರನ' ಹೆಸರಿನಲ್ಲಿ ಕ್ರಿ.ಶ. ೧೩೯೧ರಲ್ಲಿ ಗೋವಾದ ದೊರೆ ಹೊರಡಿಸಿದ್ದಾನೆ. ಇವನು "ಎರಡನೆಯ ವೀರ ಹರಿಹರ". ಅದನ್ನು ಕ್ರಿ.ಶ. ೧೫೩೩ರಲ್ಲಿ ನಕಲು ಮಾಡಿಕೊಂಡು ಪೋರ್ತುಗೀಜಿಗೆ ಅನುವಾದಿಸ ಲಾಯಿತು.

34 ಬಹುಶಃ ಬೆಳಗಾಂವಿ

35 ಮಲಬಾರ ಕಡಲದಂಡೆಯಲ್ಲಿರುವ ತುಳುಘಾಟ ಅಥವಾ ತುಳುನಾಡು.

36 ಕೆಳಗೆ ಪುಟ ೩೦೩ರಲ್ಲಿರುವ ನೂನಿಜ್‌ನ ದಿನಚರಿಯಲ್ಲಿನ (ಉದ್ಧೃತ) ಭಾಗದೊಂದಿಗೆ ಹೋಲಿಸಿರಿ. ಅಲ್ಲಿ ಅವನು ಕೆಲವು ವರ್ಷಗಳ ನಂತರದ ಕಾಲದ ಬಗೆಗೆ ಬರೆಯುತ್ತ "ಕೌಲ್ಲೊಂಬ (ಕ್ವಿಲಾನ್) ಮತ್ತು ಸಿಲೋನ ಮತ್ತು ಪ್ಯಾಲಿಎಕೇಟ್ (ಪುಲಿಕಟ್)

ಮತ್ತು ಪೆಗು ಮತ್ತು ತಾನಸರಿ (ತೆನಾಸರಿಮ್) ಮತ್ತು ಇನ್ನೂ ಅನೇಕ ದ್ವೀಪಗಳ ರಾಜರು ಅವನಿಗೆ (ರಾಯನಿಗೆ) ಕಪ್ಪ ಕೊಡುತ್ತಾರೆ" ಎಂದು ಹೇಳುತ್ತಾನೆ.

37 ೧೭ನೆಯ ಝಿಲ್-ಹಿಜ್ಜಾ, ಹಿ.ಶ. ೭೭೯.

38 ಮೆಡೊಜ್ ಟೇಲರ್ ತನ್ನ 'ಹಿಸ್ಟರಿ ಅಫ್ ಇಂಡಿಯಾ'ದಲ್ಲಿ (ಪು. ೧೬೩) ಹೀಗೆ ಹೇಳುತ್ತಾನೆ : "ಒಮ್ಮೆ ತನ್ನ ವಿಜಯನಗರ ಆಕ್ರಮಣದ ಸಮಯದಲ್ಲಿ ಮುಜಾಹಿದ ಕೋಟೆಗಳ ಎರಡನೆಯ ಸುತ್ತನ್ನೂ ಭೇದಿಸಿದ. ಅಲ್ಲೊಂದು ವಾನರದೇವತೆ ಹನುಮಾನನ ಪ್ರಖ್ಯಾತ ವಿಗ್ರಹವಿತ್ತು. ಅದನ್ನು ರಕ್ಷಿಸಲೆತ್ನಿಸಿದ ಬ್ರಾಹ್ಮಣರನ್ನು ಚದುರಿಸಿ ವಿಗ್ರಹದ ಮುಖದ ಮೇಲೆ ಪೆಟ್ಟುಹಾಕಿ ಅದನ್ನು ವಿರೂಪಗೊಳಿಸಿದ. "ವಿಗ್ರಹದಡಿಯಲ್ಲಿ ಬಿದ್ದಿದ್ದ ಮರಣೋನ್ಮುಖ ಬ್ರಾಹ್ಮಣ ರಾಜನಿಗೆ ಶಾಪ ಹಾಕಿದ. 'ಈ ಕೃತಿಗಾಗಿ ನೀನು ನಿನ್ನ ರಾಜ್ಯ ತಲುಪುವ ಮುನ್ನ ಸಾಯುವಿ' ಎಂದು ಹೇಳಿದ. ಈ ಭವಿಷ್ಯ ಅಕ್ಷರಶಃ ನಿಜವಾಯಿತು. ಬೆಣಚು ಗಲ್ಲಿನ ದೊಡ್ಡ ಬಂಡೆಯಲ್ಲಿ ಕೆತ್ತಲಾಗಿದ್ದ ವಿಗ್ರಹ ಇನ್ನೂ ಇದ್ದು ರಾಜನ ಭಂಜನೆಯ ಕುರುಹುಗಳನ್ನು ತೋರ್ಪಡಿಸುತ್ತದೆ". ಚರಿತ್ರಕಾರನು ಯಾವ ವಿಗ್ರಹವನ್ನು ಉಲ್ಲೇಖಿಸುತ್ತಾನೆಂಬುದನ್ನು ನಾನರಿಯೆ. ಕೋಟೆಯ ಎರಡನೆಯ ಸುತ್ತಿನಲ್ಲಿ ಹನುಮಂತನ ಹಲವಾರು ವಿಗ್ರಹಗಳಿವೆ. ಎರಡು ಮಾಳವಂತ ರಘುನಾಥಸ್ವಾಮಿ ದೇವಸ್ಥಾನದ ದಕ್ಷಿಣಕ್ಕೆ ಇವೆ.

39 ೨೧ನೆಯ ಮುಹರ್ರಮ್, ಹಿ.ಶ. ೭೮೦

40 ಹೆಸರನ್ನು ಸಾಮಾನ್ಯವಾಗಿ ಮಹಮ್ಮದ್ ಎಂದೇ ಕೊಡಲಾಗಿದೆ. ಫಿರಿಸ್ತಾನೂ ಹಾಗೆಯೆ ಹೆಸರಿಸುತ್ತಾನೆ. ಆದರೆ ಡಾ. ಕಾಡ್ರಿಂಗ್ಟನ್ (ನುಮಿಸ್ಮ್ಯಾಟಿಕ್ ಕ್ರಾನಿಕಲ್, ಮೂರನೆಯ ಸರಣಿ, ಸಂ. xviii, ಪು. ೨೬೧) ಈ ಸುಲ್ತಾನನ ಎಲ್ಲ ನಾಣ್ಯಗಳ ಮೇಲೆ ಹೆಸರು 'ಮುಹಮ್ಮದ್' ಎಂದಿದೆ, 'ಮಹಮ್ಮದ್' ಎಂದಲ್ಲ ಎಂದು ಗಮನ ಸೆಳೆಯುತ್ತಾನೆ. ಇದನ್ನು ಬರಹಾನ್-ಇ-ಮಾಸಿರ್ ಮತ್ತು ಇನ್ನೂ ಎರಡು ಆಧಾರಗಳು (ಮೇಜರ್ ಕಿಂಗ್, ಇಂಡಿಯನ್ ಆ್ಯಂಟಿಕ್ವಿಟಿಜ್, ಜುಲೈ ೧೮೯೯, ಪು. ೧೮೩ ಟಿಪ್ಪಣಿ ೩೯) ದೃಢಪಡಿಸುತ್ತದೆ. ಗೋಜಲು ನೀಡುವ ಫಿರಿಸ್ತಾ ನೀಡುವ ಹೆಸರಿಗೇ ಅಂಟಿಕೊಳ್ಳುವುದು ಉತ್ತಮವೆಂದು ನನಗನ್ನಿಸುತ್ತದೆ.

41 ೨೧ನೆಯ ರಜಬ್ ಹಿ.ಶ. ೭೯೯. ಬರಹಾನ್-ಇ-ಮಾಸಿರ್ ಪ್ರಕಾರ ೨೬ನೆಯದು.

○

## ಅಧ್ಯಾಯ ೪

# ಸಾಮ್ರಾಜ್ಯದ ಬೆಳವಣಿಗೆ (ಕ್ರಿ.ಶ.೧೩೭೯ ರಿಂದ ೧೪೪೬)

**ಎರಡನೆಯ ಹರಿಹರ-ಕಲಬರ್ಗಾದ ಫಿರೋಜ ಶಾಹ-ಹೊಸ ಯುದ್ಧಗಳು-೧೪೪೩ರಲ್ಲಿ ರಾಜನ ಕೊಲೆ-ಎರಡನೆಯ ಬುಕ್ಕ.**

ಒಂದನೆಯ ಬುಕ್ಕನ ಹೆಂಡತಿ ಗೌರಿ, ಜನನ ನೀಡಿದ ಮಗ ಎರಡನೆಯ ಹರಿಹರ ಅವನ ನಂತರ ಪಟ್ಟಕ್ಕೆ ಬಂದ. ನೂನಿಜ್ "ಪುರಿಯೋರಿ ದೇವರಾವ್" ಎಂದು ಹೊಸ ರಾಜನನ್ನು ಕರೆಯುತ್ತಾನೆ. ಮತ್ತು "ಪುರಿಯೋರಿ" "ಹರಿಹರ"ದ ಸ್ಥೂಲ ಪೋರ್ತುಗೀಜ ರೂಪಾಂತರವೆಂದು ಕಾಣುತ್ತದೆ ; ಹ ಮತ್ತು ಪ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಒಂದೇ ಉಚ್ಚಾರವನ್ನು ಹೊಂದಿವೆ. ಶಾಸನಗಳ[1] ಪ್ರಕಾರ ಎರಡನೆಯ ಹರಿಹರ ಕನಿಷ್ಠ ಪಕ್ಷ ಇಪ್ಪತ್ತು ವರ್ಷ ಆಳಿದ ಮತ್ತು ಅವನು ಮಹಾ ರಾಜಾಧಿರಾಜ ಎಂಬ ಸಾಮ್ರಾಜ್ಯಶಾಹಿ ಬಿರುದುಗಳನ್ನು ಕೊಟ್ಟುಕೊಂಡ ಪ್ರಥಮ ರಾಜ. ಅವನು ದೇವಾಲಯಗಳಿಗೆ ಅನೇಕ ದತ್ತಿಗಳನ್ನು ನೀಡಿದ ಮತ್ತು ಎಲ್ಲ ದಕ್ಷಿಣ ಭಾರತದ ಮೇಲೆ ತನ್ನ ರಾಜವಂಶದ ಪಾರಮ್ಯವನ್ನು ಗಟ್ಟಿಗೊಳಿಸಿದ. ಎರಡನೆಯ ಸಂಗಮರಾಜನ ಪ್ರಧಾನಿಯಾಗಿದ್ದ ಮಾಧವಾಚಾರ್ಯರ ಸೋದರ ಸಾಯಣ ಇವನ ಪ್ರಧಾನಿಯೂ ಆಗಿದ್ದಂತೆ ತೋರುತ್ತದೆ.[2] ಕ್ರಿ.ಶ. ೧೩೭೯ ಮತ್ತು ೧೩೮೨ರ ಎರಡು ಶಾಸನಗಳಲ್ಲಿ ಮುದ್ದನನ್ನು ರಾಜನ ದಂಡನಾಯಕನೆಂದು ಹೆಸರಿಸಲಾಗಿದೆ. ಅವನ ಇನ್ನೊಬ್ಬ ದಂಡನಾಯಕನನ್ನು ಇರುಗ ಎಂದು ಕರೆಯ ಲಾಗಿದೆ. ಅವನು ಎರಡನೆಯ ಬುಕ್ಕನ ಪ್ರಧಾನಿ ಚೈಚನ ಮಗನಾಗಿದ್ದನು. ವಿಜಯನಗರದಲ್ಲಿ ಕಮಲಾಪುರದ ಸಮೀಪವಿರುವ ಜೈನ ಮಂದಿರದ ಕಂಬದ ಮೇಲೆ ಕ್ರಿ.ಶ. ೧೩೮೫ ತೇದಿ ಹೊಂದಿದ ಶಾಸನವೊಂದರಲ್ಲಿ ಅವನ ಹೆಸರು ಕಾಣಸಿಗುತ್ತದೆ. ಧಾರ್ಮಿಕ ವಿಷಯಗಳಲ್ಲಿ ಅವನು ಸಹಿಷ್ಣುವಾಗಿದ್ದುದು ಇದರಿಂದ ಸಿದ್ಧಪಡುತ್ತದೆ. ಅವನ ಆಳಿಕೆಯಲ್ಲಿ ಗುಂಡ ಎಂಬ ಇನ್ನೊಬ್ಬ ದಂಡನಾಯಕನೂ ಇದ್ದಂತೆ ತೋರು ತ್ತದೆ. ಆದರೆ, ಅವನ ಕಾಲದ ಬಗೆಗೆ ನಿಶ್ಚಿತತೆ ಇಲ್ಲ.[3] ಇನ್ನೊಂದು ಶಾಸನದ[4] ಪ್ರಕಾರ ರಾಜಾ ಹರಿಹರ ತನ್ನ ಆಳಿಕೆಯ ಆದಿಭಾಗದಲ್ಲಿಯೆ ಮಹಮ್ಮದೀಯರನ್ನು ಗೋವಾದಿಂದ ಹೊರದಬ್ಬಿದ ; ಮತ್ತು ಸದ್ಯಕ್ಕೆ ಗೊತ್ತಿದ್ದಂತೆ[5] ಅವನ ಆಳಿಕೆಯ ಕೊನೆಯ ಶಾಸನ, ಒಚ್ಚಣ್ಣ ಉದ್ವೆಯಾರ್ ಎಂಬವನೊಬ್ಬ ಆ ಊರಿನ ಮಂಡಲಾಧಿ ಪತಿಯಾಗಿದ್ದನೆಂದು ಉಲ್ಲೇಖಿಸುತ್ತದೆ.

ಮಲ್ಲಾದೇವಿ ಅಥವಾ ಮಲ್ಲಾಂಬಿಕಾ ರಾಜನ ಹೆಂಡತಿ ಅಥವಾ ಮುಖ್ಯ ಹೆಂಡಂದಿರಲ್ಲಿ ಒಬ್ಬಳಾಗಿದ್ದಳು. ಅವನ ಆಳಿಕೆಯ ಶಾಸನಗಳು ಮೈಸೂರು, ಧಾರವಾಡ, ಕಾಂಜೀವರಮ್, ಚಿಂಗಲ್‌ಪೇಟ್, ಮತ್ತು ತ್ರಿಚನಾಪೊಲಿಗಳಲ್ಲಿ[6] ದೊರೆಯುತ್ತವೆ ಎಂಬ ಸಂಗತಿ ಅವನ ಪ್ರಭುತ್ವದ ವ್ಯಾಪ್ತಿಯನ್ನು ತೋರಿಸುತ್ತದೆ. ಅವನು ವಿರೂಪಾಕ್ಷನ ರೂಪದಲ್ಲಿನ ಶಿವನ ಆರಾಧಕನಾಗಿದ್ದ. ಆದರೆ, ಇತರ ಧರ್ಮಗಳ ಬಗೆಗೆ ಅದ್ವಿತೀಯ ಸಹಿಷ್ಣುವಾಗಿದ್ದ. ಶಾಸನಗಳು ನೀಡುವ ಆಳಿಕೆಯ ಕೊನೆಯ ಪ್ರತ್ಯಕ್ಷ ತೇದಿ ಅಕ್ಟೋಬರ ೧೫, ಕ್ರಿ.ಶ. ೧೩೯೯.[7]

ದಿವಂಗತ ಸುಲ್ತಾನ ಮಹಮ್ಮದನ ಹಿರಿಯ ಮಗ ಹದಿನೇಳು ವರ್ಷದ ಘಿಯಾಸುದ್ದೀನ ಕಲಬರ್ಗಾದ ಸಿಂಹಾಸನಕ್ಕೆ ತನ್ನ ತಂದೆಯ ತರುವಾಯ ಬಂದ. ಆದರೆ, ಕೇವಲ ಒಂದು ತಿಂಗಳು ಇಪ್ಪತ್ತು ದಿನಗಳ ಆಳಿಕೆಯ ನಂತರ ಜೂನ ೧೪, ೧೩೯೭[8]ರಂದು ಮನರಂಜನೆಯಲ್ಲಿ ತೊಡಗಿದ್ದಾಗ ಮಹತ್ವಾಕಾಂಕ್ಷಿ ಗುಲಾಮನೊಬ್ಬ ಮೋಸದಿಂದ ಅವನ ಕಣ್ಣು ತೆಗೆದ. ಅವನ ತಮ್ಮ ಶಮಸುದ್ದೀನನನ್ನು ಸಿಂಹಾಸನದ ಮೇಲೆ ಕೂಡಿಸಲಾಯಿತು. ಆದರೆ ಐದು ತಿಂಗಳ ಆಳಿಕೆಯ ನಂತರ ಅಕ್ಕ ದಿವಂಗತ ಸುಲ್ತಾನ ದಾಊದನ ಮಗ ಫಿರೂಜ ಅವನನ್ನು ಕಣ್ಣು ಕೀಳಿಸಿ ಪದಚ್ಯುತ ಗೊಳಿಸಿದ. ಫಿರೂಜ ನಿಜವಾಗಿಯೂ ಹುಟ್ಟಿನಿಂದ ಹಿರಿಯ ಶಾಖೆಯವನಾಗಿದ್ದ. ಮತ್ತು ನವಂಬರ ೧೫, ಕ್ರಿ.ಶ. ೧೩೯೭[9]ರಂದು ಸಿಂಹಾಸನವೇರಿದ ಅವನು ತನ್ನ ವಂಶಾವಳಿಯ ಅತ್ಯಂತ ಪ್ರಖ್ಯಾತ ರಾಜರಲ್ಲೊಬ್ಬನಾದ. ಕ್ರಿ.ಶ. ೧೪೧೯ರಲ್ಲಿ 'ಮುದುಕ'ನಾಗಿದ್ದನೆಂದು ಫಿರಿಸ್ತಾ ಹೇಳುವುದನ್ನು ನೋಡಿದರೆ ಅವನು ಪಟ್ಟವೇರಿದಾಗ ವಯಸ್ಸಾದವನಾಗಿರಬೇಕು.

ಇದುವರೆಗೆ ಕಂಡುಹಿಡಿದ ಎರಡನೆಯ ಹರಿಹರನ ಕೊನೆಯ ಶಾಸನದ ತೇದಿ, ಮೇಲೆ ಹೇಳಿರುವಂತೆ ಅಕ್ಟೋಬರ ೧೫, ಕ್ರಿ.ಶ. ೧೩೯೯. ಅವನ ಹಿರಿಯ ಮಗ ಎರಡನೆಯ ಬುಕ್ಕನ ಎರಡು ಶಾಸನಗಳು ಲಭ್ಯವಿವೆ. ಅವೆರಡರ ಕಾಲವನ್ನು ೧೪೦೬[10] ಎಂದು ನಿರ್ಧರಿಸಲಾಗಿದೆ. ಮತ್ತು ಕನಿಷ್ಠ ಪಕ್ಷ ಕ್ರಿ.ಶ. ೧೪೧೨ರವರೆಗೆ ಆಳಿದವನೂ ಅವನ ಉತ್ತರಾಧಿಕಾರಿಯೂ ಎರಡನೆಯ ಬುಕ್ಕನ ಸಹೋದರನೂ ಆಗಿದ್ದ ಒಂದನೆಯ ದೇವರಾಯನ ಹಲವು ಶಾಸನಗಳು ಲಭ್ಯವಿವೆ.

ವಿಜಯನಗರದ ಪ್ರಥಮ ರಾಜ ಒಂದನೆಯ ಹರಿಹರ ಮುದುಕ (ನೂನಿಜ್ 'ಬಹಳ ಮುದುಕ' ಎನ್ನುತ್ತಾನೆ) ನಾಗಿದ್ದನೆಂಬುದನ್ನು ನೆನಪಿಡಬೇಕು. ಅವನು ಏಳು ವರ್ಷ ಆಳಿದ. ನೂನಿಜ್‌ನ ಪ್ರಕಾರ, ಅವನ ಉತ್ತರಾಧಿಕಾರಿ, ಸಹೋದರ ಬುಕ್ಕ ಮೂವತ್ತೇಳು ವರ್ಷ ಆಳಿದ. ಮತ್ತು ಆದುದರಿಂದ ಒಂದನೆಯ ಹರಿಹರನ ಆಯುಷ್ಯ ತೀರ ದೀರ್ಘವಾಗಿತ್ತೆಂದು ಭಾವಿಸದಿರುವುದೆ ವಿಹಿತ. ಇದು ಹೇಗೂ ಇರಲಿ, ಒಂದನೆಯ ಬುಕ್ಕನ ಮಗನಾದ ಶಾಂತಿಪ್ರಿಯ ಎರಡನೆಯ ಹರಿಹರ ಪಟ್ಟಕ್ಕೆ

ಬಂದಾಗ ಅವನ ತಂದೆ ಬಹಳ ದೀರ್ಘ ವಯಸ್ಸಿನಲ್ಲಿ ತೀರಿಕೊಂಡಿರಬೇಕೆಂದು ತೋರುತ್ತದೆ. ಮತ್ತು ಅವನಾದರೂ ಖಂಡಿತವಾಗಿಯೂ ತರುಣನಾಗಿರಲಿಲ್ಲ. ಮೇಲೆ ಹೇಳಿದಂತೆ ಅವನು ಏನಿಲ್ಲೆಂದರೂ ಇಪ್ಪತ್ತು ವರ್ಷ ಆಳಿದ ಮತ್ತು ತನ್ನ ಆಳಿಕೆಯ ಕೊನೆಗೆ (ಕ್ರಿ. ಶ. ೧೩೯೯ರಲ್ಲಿ) ಅವನು ಬಹಳ ಮುದುಕನಾಗಿದ್ದನೆಂದು ಭಾವಿಸುವುದನ್ನು ಸಮರ್ಥಿಸಬಹುದು. ಇದನ್ನು ಅನುಲಕ್ಷಿಸಿ, ನವಂಬರ ಕ್ರಿ. ಶ. ೧೩೯೭ ರಲ್ಲಿ ಅವನ ಆರೋಹಣದಿಂದ ಆರಂಭಿಸುವ ಫಿರೂಜಶಾಹ ಬಾಹಮನಿಯ ಆಳಿಕೆ ಕುರಿತ ಫಿರಿಸ್ತಾನ ವೃತ್ತಾಂತದ ಕಡೆ ತಿರುಗೋಣ.

ಅವನು ಹೀಗೆ ಹೇಳುತ್ತಾನೆ : ಹಿಜರಿ ವರ್ಷ ೮೦೧ (ಹದಿಮೂರನೆಯ ಸಪ್ಟಂಬರ ೧೩೯೮ ರಿಂದ ಮೂರನೆಯ ಸಪ್ಟೆಂಬರ ೧೩೯೯ರವರೆಗೆ)ರಲ್ಲಿ, ಶಿಂಗಳು ಕೊಟ್ಟಿಲ್ಲ, "ಬೀಜನಗರದ ದೇವಲ್‌ರಾಯ್ ಮುದಕಲ್ ಮತ್ತು ರಾಯಿಚೋರ್ (ರಾಯಚೂರು) ಕೋಟೆಗಳನ್ನು ಆಡಗಿಸಲೋಸುಗ ಮೂವತ್ತು ಸಾವಿರ ಅಶ್ವಗಳು ಮತ್ತು ವಿಪುಲ ಕಾಲ್ದಳದೊಂದಿಗೆ ನದಿಗಳ ಮಧ್ಯದ ರಾಜಪ್ರದೇಶಗಳ ಮೇಲೆ ದಾಳಿ ಮಾಡಿದ." ದಂಡಯಾತ್ರೆ ಹಿಜರಿ ೮೦೧ರ ಕೊನೆಗಿಂತ ಕೆಲವು ತಿಂಗಳು ಮುಂಚೆ, ಮುಕ್ತಾಯವಾಯಿತೆಂದು ನಂತರದ—ಉದ್ಧೃತ ಭಾಗದಲ್ಲಿ ಹೇಳಲಾಗಿದೆ. ಆದುದರಿಂದ, ಸೈನ್ಯ ಹಾಯ್ದು ಹೋಗಬೇಕಿದ್ದ ಹತ್ತಿಯ ಬಯಲುಗಳನ್ನು ದಾಟುವಂತಿರುವ ಕ್ರಿ.ಶ. ೧೩೯೮ರ ಚಳಿಗಾಲದ ಆರಂಭಕ್ಕೆ, ಬಹುಶಃ ಡಿಸೆಂಬರ ನಂತರ, ಹಿಂದೂ ಸೈನ್ಯದ ಪ್ರಥಮ ಚಲನೆ ನಡೆದಿರಬೇಕು. ತೀರ ಮುದುಕನಾಗಿದ್ದ ಸದಾ ಶಾಂತಿಪ್ರಿಯನಾಗಿದ್ದ ರಾಜಾ ಎರಡನೆಯ ಹರಿಹರ ಕಾರಣವಿಲ್ಲದೆ ಇದ್ದಕ್ಕಿದ್ದಂತೆ ಯುದ್ಧ ಹೂಡಿದನು ಮತ್ತು ತಾನೇ ಸ್ವತಃ ಸೈನ್ಯಗಳನ್ನು ರಣರಂಗದೊಳಕ್ಕೆ ನಡೆಸಿಕೊಂಡು ಬಂದ ಎಂದು ಭಾವಿಸಲು ಬರುವಂತಿಲ್ಲ. ದಾಳಿ ಅವನ ಮಗ ಅವನ ಅನುಮತಿ ಪಡೆದು ದಿಟ್ಟವಾಗಿ ನುಗ್ಗಿದ್ದರ ಪರಿಣಾಮವಾಗಿತ್ತೆಂಬುದು ಹೆಚ್ಚು ಸೂಕ್ತವಾಗುತ್ತದೆ. ಇದಕ್ಕೂ ಪೂರ್ವದಲ್ಲಿ ಇಪ್ಪತ್ತು ವರ್ಷಗಳ ವರೆಗೆ ಅವಿಚ್ಛಿನ್ನ ಶಾಂತಿ ಇತ್ತೆಂಬುದನ್ನು ಮಹಮ್ಮದೀಯ ಇತಿಹಾಸಕಾರರು ಒಪ್ಪುತ್ತಾರೆ.

ಆದುದರಿಂದ, ನೂನಿಜ್‌ನ ದಿನಚರಿಗಳು, ಫಿರಿಸ್ತಾನ ಬರಹಗಳು ಮತ್ತು ಲಭ್ಯವಿರುವ ಶಾಸನಗಳು ಎಲ್ಲ ಏಕಾಭಿಪ್ರಾಯ ಹೊಂದಿವೆಯೆಂದು ಮತ್ತು ಎರಡನೆಯ ಹರಿಹರನ ಮರಣ ಕ್ರಿ. ಶ. ೧೩೯೯ರ ಕೊನೆಯಲ್ಲಿ ಸಂಭವಿಸಿತೆಂದು ನಿರ್ಧರಿಸಬಹುದೆಂದು ತೋರುತ್ತದೆ. ಅವನ ಆಳಿಕೆಯ ಘಟನೆಗಳ ಬಗೆಗೆ ಹೆಚ್ಚು ಹೇಳಲಾಗದು.

ಹೊಸ ರಾಜನಾದ ಅವನ ಜೇಷ್ಠ ಪುತ್ರ ಎರಡನೆಯ ಬುಕ್ಕ ಮಧ್ಯವಯಸ್ಕನಾಗಿರಬೇಕು. ಏಕೆಂದರೆ, ಅವನಿಗೆ ತಾನು ಪಟ್ಟಕ್ಕೆ ಬರುವ ಪೂರ್ವದಲ್ಲಿ ತನ್ನೊಂದಿಗೆ ರಣರಂಗ ನೋಡಿಕೊಳ್ಳುವಷ್ಟು ವಯಸ್ಸಿನ ಮಗನಿದ್ದನು.

"ಈ ರಾಜ ("ಪುರಿಯೋರೆ") ನಿಗೆ ಒಬ್ಬ ಮಗನಿದ್ದ, ಅವನು ತಂದೆಯ ಮರಣಾನಂತರ ರಾಜ್ಯದ ಉತ್ತರಾಧಿಕಾರ ಪಡೆದ, ಅವನ ಹೆಸರು ಅಜರಾವ್ ಎಂದಿತ್ತು; ಅವನು ಆಳಿದ ನಲವತ್ತುಮೂರು ವರ್ಷಗಳುದ್ದಕ್ಕೂ ಅವನು ಮುಹಮ್ಮದೀಯರೊಂದಿಗೆ ಯುದ್ಧದಲ್ಲಿದ್ದ."

ಎರಡನೆಯ ಹರಿಹರನ ಉತ್ತರಾಧಿಕಾರಿಯನ್ನು ನೂನಿಜ್ ಅಜರಾವ್ ಎಂದು ಏಕೆ ಕರೆಯುತ್ತಾನೆ ಎಂಬುದರ ಬಗೆಗಾಗಲಿ ಅವನ ಆಳಿಕೆ ನಲವತ್ತುಮೂರು ವರ್ಷಗಳೆಂದು ಹೇಳುವುದರ ಬಗೆಗಾಗಲಿ ಸ್ಪಷ್ಟೀಕರಣ ನೀಡಲು ನನಗೆ ಸಾಧ್ಯವಿಲ್ಲ. ನಮ್ಮ ಚರಿತ್ರಕಾರರು ನೀಡಿದ ಅಜರಾವ್‌ನ ಉತ್ತರಾಧಿಕಾರಿಗಳ ಹೆಸರು ಮತ್ತು ಆಳಿಕೆಯ ಕಾಲಾವಧಿಗಳು ನೂನಿಜ್, 'ಅಜರಾವ್' ಎಂದರೆ ಎರಡನೆಯ ಬುಕ್ಕ ಮತ್ತು ಅವನ ಉತ್ತರಾಧಿಕಾರಿ ಒಂದನೆಯ ದೇವರಾಯ ಎಂಬೆರಡು ರಾಜರೆಂದು ಭಾವಿಸುತ್ತಾನೆಂಬುದನ್ನು ಸಿದ್ಧಪಡಿಸುತ್ತವೆ; ಅವರ ಆಳಿಕೆಯ ಒಟ್ಟು ಅವಧಿ ಹದಿನಾಲ್ಕು ವರ್ಷ, ನಲವತ್ತುಮೂರು ಅಲ್ಲ.

ಎರಡನೆಯ ಹರಿಹರನ ಉತ್ತರಾಧಿಕಾರಿ ಹೊಸ ಗೋಡೆಗಳು ಮತ್ತು ಗೋಪುರಗಳನ್ನು ಕಟ್ಟಿ ಅದರ ವ್ಯಾಪ್ತಿಯನ್ನು ವಿಸ್ತರಿಸಿ ಮತ್ತು ಕೋಟೆಗಳಿಗೆ ಇನ್ನೂ ಹೆಚ್ಚು ಸುತ್ತುಗಳನ್ನು ಕಟ್ಟಿಸಿ ವಿಜಯನಗರ ಪಟ್ಟಣವನ್ನು ಬಹಳ ಅಭಿವೃದ್ಧಿಪಡಿಸಿದನೆಂದು ನೂನಿಜ್ ಹೇಳುತ್ತಾನೆ. ಆದರೆ ಅವನು ಮಾಡಿದ ಮಹತ್ವದ ಕೆಲಸವೆಂದರೆ ತುಂಗಭದ್ರಾ ನದಿಯಲ್ಲಿ ಒಂದು ದೊಡ್ಡ ಒಡ್ಡಿನ ಹಾಗೂ ನದಿಯಿಂದ ಪಟ್ಟಣದವರೆಗೆ ಹದಿನೈದು ಮೈಲು ಉದ್ದ ಮೇಲುಕಾಲುವೆಯ ನಿರ್ಮಾಣ. ಹಳೆಯ ಪಟ್ಟಣದ ಬಹು ಪ್ರದೇಶವನ್ನು ಆವರಿಸಿರುವ ಹೊಲಗಳಿಗೆ ಈಗಲೂ ನೀರು ಪೂರೈಕೆ ಮಾಡುವ ಕಾಲುವೆ ಇದೇ ಆಗಿದ್ದರೆ, ಅದೊಂದು ಅಸಾಧಾರಣವಾದ ಕಾರ್ಯ. ಹಲವು ಮೈಲುಗಳವರೆಗೆ ಗುಡ್ಡಗಳಡಿಯ ಗಟ್ಟಿ ಬಂಡೆಯಲ್ಲಿ ಈ ಕಾಲುವೆಯನ್ನು ಕೊರೆಯಲಾಗಿದೆ. ಮತ್ತು ಇದು ಭಾರತದಲ್ಲಿಯೆ ಅತ್ಯಂತ ಗಮನಾರ್ಹ ನೀರಾವರಿ ಕಾರ್ಯಗಳಲ್ಲೊಂದು. ಮುಹಮ್ಮದೀಯರ ವಿರುದ್ಧ ದಂಡಯಾತ್ರೆಗಳಲ್ಲದೆ ಅವನು "ಗೋವಾ, ಚೌಲ್, ಮತ್ತು ದಾಬುಲ್" ಗಳನ್ನು ವಶಪಡಿಸಿಕೊಂಡ, ಮತ್ತು ದ್ವೀಪಕಲ್ಪದ ಕೋರೊಮಂಡಲ ಬದಿಯನ್ನು ತನ್ನ ಆಳಿಕೆಗೆ ನಿಷ್ಠೆ ಮತ್ತು ವಿಧೇಯತೆ ತೋರುವಂತೆ ಅಂಕೆಯಲ್ಲಿಟ್ಟುಕೊಂಡ ಎನ್ನುವುದನ್ನು ಹೊರತುಪಡಿಸಿ ಅವನು ತೊಡಗಿದ ಯುದ್ಧಗಳ ವಿವರಗಳನ್ನು ಕೊಡಲಾಗಿಲ್ಲ.

ಎರಡನೆಯ ಬುಕ್ಕ ಮತ್ತು ಒಂದನೆಯ ದೇವರಾಯರ ಕಲಾಪಗಳ ಬಗೆಗೆ ನೂನಿಜ್‌ನಿಗಿಂತ ಫಿರಿಸ್ತಾನಿಂದ ನಮಗೆ ಎಷ್ಟೋ ಹೆಚ್ಚು ತಿಳಿಯುತ್ತದೆ. ಆ

ಕಾಲಾವಧಿಯ ಮೇಲೆ ಹೆಚ್ಚು ಬೆಳಕು ಚಲ್ಲುವ ಬರಹಗಳನ್ನು ಬರೆದಿರುವ ಫಿರಿಸ್ತಾನಿಂದ ವಿಪುಲವಾಗಿ ಉದ್ಧರಿಸಲು ನಾನು ಕ್ಷಮೆ ಯಾಚಿಸಬೇಕಿಲ್ಲ.

ಬುಕ್ಕನ ಪ್ರಥಮ ಯುದ್ಧ ಈ ಮೊದಲು ಉಲ್ಲೇಖಿಸಿದ ದಾಳಿಯೊಂದಿಗೆ ಆರಂಭವಾಯಿತು. ಮೇಲೆಯೆ ತೋರುವಂತೆ ಅದು ಕ್ರಿ.ಶ.೧೩೬೬ರ ಡಿಸೆಂಬರ್ ತಿಂಗಳ ಸುಮಾರಿಗೆ (ಅದಕ್ಕೂ ಮೊದಲು ಎನ್ನುವುದಕ್ಕಿಂತ ನಂತರವೇ) ಅವನ ತಂದೆ ಹರಿಹರನ ಆಳಿಕೆಯಲ್ಲಿ ನಡೆಯಿತು. ಆ ಪ್ರದೇಶದ ವಿಶಾಲ ಹತ್ತಿಬಯಲುಗಳು ಸುದೀರ್ಘ ಒಣ ಹವಾಮಾನದಲ್ಲಿ ಮಾತ್ರ ದಾಟುವಂತಿರುತ್ತವೆ; ಮತ್ತು ಮಳೆ ಬೀಳುವ ಸಂಭವವಿರುವಾಗ ಯುವರಾಜ ಮುಂದುವರಿಯುವ ಕಷ್ಟ ತೆಗೆದು ಕೊಳ್ಳುತ್ತಿರಲಿಲ್ಲ. ಬುಕ್ಕನ ಮಗ ತಂದೆಯ ಜತೆಗೆ ನಡೆದ ಮತ್ತು ದೋಆಬ ಪ್ರದೇಶ ಹಾಗೂ ವಿಶೇಷತಃ ಬಹಮನಿ ಸುಲ್ತಾನನ ವಶದಲ್ಲಿದ್ದ ಮುದಕಲ್ ಮತ್ತು ರಾಯಚೂರ ಕೋಟೆಗಳು ಉದ್ದಿಷ್ಟ ಸ್ಥಾನಗಳಾಗಿದ್ದವು. ಸುಲ್ತಾನ ಫಿರೋಜ ಅವನನ್ನು ಎದುರಿಸಲು ಬಂದ. ದಾರಿಯಲ್ಲಿ ಹಿಂದೂ "ಮುಖ್ಯಸ್ಥ ಅಥವಾ ಜಮೀನು ದಾರ ಮತ್ತು ಅವನ ಸದಾ ತಂಟೆಕೋರ ಮತ್ತು ಹಟಮಾರಿಗಳಾಗಿದ್ದ ಏಳೆಂಟು ಸಾವಿರ ಅನುಯಾಯಿಗಳನ್ನು" ಸಂಹರಿಸಿದನು. ರಾಯ ವಾದಗ್ರಸ್ತ ಪ್ರದೇಶದ ಉತ್ತರ ಸರಹದ್ದಿಗೆ ಮುಂದುವರಿದನು ಮತ್ತು ಮುಹಮ್ಮದೀಯರ ದಾರಿ ಕಟ್ಟಲು ದೊಡ್ಡ ಸೈನ್ಯಪಡೆಗಳನ್ನು ನಿಲ್ಲಿಸಿ ಕೃಷ್ಣಾ ನದಿಯ ದಡದಲ್ಲಿ ಬಿಡಾರ ಹೂಡಿದ.

"ನದಿಯ ಹತ್ತಿರ ಬಂದು ಸುಲ್ತಾನ ಫಿರೋಜ ಶಾ[11] ತನ್ನ ಮುಖ್ಯಾಧಿಕಾರಿಗ ಳೊಂದಿಗೆ ಸಮರ ಸಮಾಲೋಚನೆ ನಡೆಸಿದ, ಆದರೆ ತನಗೆ ಸರಿಯೆನಿಸಿದ ಯಾವ ಸಲಹೆಯೂ ಬರಲಿಲ್ಲ.

"ಸುಲ್ತಾನನು ಏನು ಮಾಡಬೇಕೆಂದು ತನ್ನ ಮನಸ್ಸಿನಲ್ಲಿಯೆ ಲೆಕ್ಕ ಹಾಕು ತ್ತಿದ್ದಾಗ ಕೌಜಿ ಸಿರೌಜ ಅವನ ವ್ಯಾಕುಲತೆ ಕಂಡು, ಸುಲ್ತಾನ ಅನುಮತಿಸಿದರೆ ಆ ಉದ್ದೇಶಕ್ಕಾಗಿಯೆ ಆಯ್ಕೆ ಮಾಡಲಾದ ಕೆಲವು ಸ್ನೇಹಿತರೊಂದಿಗೆ ನದಿ ದಾಟಿ ಹೋಗಿ ಹೇಗೆ ಹೆಚ್ಚು ಅನುಕೂಲವೊ ಹಾಗೆ ದೇವಲ್‌ರಾಯ್ ಅಥವಾ ಅವನ ಮಗನನ್ನು ಕೊಲ್ಲುವುದಾಗಿ ಮಾತು ಕೊಟ್ಟ....

"ಸುಲ್ತಾನನು ಈ ಕ್ರಮವನ್ನು ಅನುಮೋದಿಸಲಾಗಿ ಚರ್ಮದಿಂದ ಆವೃತ ವಾದ ನೂರಾರು ಅಡ್ಡಪಟ್ಟೆಗಳು[12] ಸೈನಿಕರನ್ನು ದಾಟಿಸಲು ಶೀಘ್ರ ಸಿದ್ಧಗೊಂಡವು. ಧಾರ್ಮಿಕ ಬಿಕ್ಷುಗಳಂತೆ ವೇಷ ಮರೆಸಿಕೊಂಡ ತನ್ನ ಏಳು ಸ್ನೇಹಿತರೊಂದಿಗೆ ಕೌಜಿ ಸಿರೌಜ ರಾಯನ ಬಿಡಾರಕ್ಕೆ ಹೊರಟ ಮತ್ತು ನೃತ್ಯ ಮಾಡುವ ಹುಡುಗಿ ಯರು[13] ವಾಸಿಸುವ ಸ್ಥಳಕ್ಕೆ ಹೋದ. ಇಲ್ಲಿ ಕೌಜಿ ಒಬ್ಬ ವೇಶ್ಯೆಗೆ ಮರುಳಾದಂತೆ ನಟಿಸಿದ ಮತ್ತು ತನ್ನ ಮನಸ್ಥಿತಿಯ ಸಮರ್ಥನೆಗಾಗಿ ಸಾವಿರಾರು ವೈಪರೀತ್ಯಗಳನ್ನು ಮಾಡಿದ. ಆ ಹುಡುಗಿ ಸಂಜೆಗೆ ತನ್ನ ಅತ್ಯಂತ ಬೆಲೆಯುಳ್ಳ ಆಭರಣಗಳೊಂದಿಗೆ ಅಲಂಕರಿಸಿಕೊಂಡು ಹೊರಹೊರಡಲು ಸಿದ್ಧವಾದಳು. ಆಗ ಕೌಜಿ ಅತ್ಯಂತ ಪ್ರೀತಿ

ಮಾಡುವ ಮತ್ತು ಹುಚ್ಚು ಹಿಡಿಯುವ ಪ್ರೇಮಿಯಂತೆ ಅವಳ ಪಾದಗಳಲ್ಲಿ ಬಿದ್ದು ತನ್ನನ್ನು ಬಿಟ್ಟುಹೋಗಬಾರದೆಂದೂ ಇಲ್ಲವೆ ಆವಳೊಂದಿಗೆ ತನ್ನನ್ನೂ ಬರಗೊಡಬೇಕೆಂದು ಮತ್ತು ಅನುಪಸ್ಥಿತಿಯಿಂದ ತನ್ನ ಹೃದಯವನ್ನು ಒಡೆಯಬಾರದೆಂದೂ ಬಿನ್ನವಿಸಿದ. ಇದಾದ ಮೇಲೆ ಆ ಸ್ತ್ರೀ ತಾನು ರಾಯನ ಮಗನ ಮನರಂಜನೆಯಲ್ಲಿ ಪಾಲ್ಗೊಳ್ಳುವಂತೆ ಆಜ್ಞೆಯಾಗಿರುವುದರಿಂದ ಅದನ್ನು ಪಾಲಿಸದಿರುವಂತಿಲ್ಲವೆಂದೂ ಅಲ್ಲಿ ಸಂಗೀತದವರು ಮತ್ತು ನೃತ್ಯದವರನ್ನು ಮಾತ್ರ ಒಳಗೆ ಬಿಡಲಾಗುವುದೆಂದೂ ಅವನಿಗೆ ತಿಳಿಸಿದಳು. ಅದಕ್ಕೆ ಉತ್ತರವಾಗಿ ತಾನೂ ಅವಳು ನುಡಿಸುವ ವಾದ್ಯವನ್ನೆ ನುಡಿಸುವುದಾಗಿಯೂ ಮತ್ತು ರಾಯನ ಮಗನನ್ನು ಅತಿ ಸಂತೋಷಗೊಳಿಸಬಲ್ಲ ಇನ್ನೂ ಕೆಲವು ಕುಶಲತೆಗಳೂ ತನ್ನಲ್ಲಿವೆ ಎಂದು ಕೌಜಿ ಹೇಳಿದ. ಅವನು ತಮಾಷೆ ಮಾಡುತ್ತಿದ್ದಾನೆಂದು ಭಾವಿಸಿ ಅವಳು ಅವನಿಗೆ ತಿರಸ್ಕಾರದಿಂದ ತನ್ನ ಮಂಡಲ[14] ನೀಡಿ ನುಡಿಸಲು ಹೇಳಿದನು ಎಷ್ಟೊಂದು ಪರಿಣತಿಯಿಂದ ನುಡಿಸಿದನೆಂದರೆ ಅವಳು ಹಿಗ್ಗಿದಳು ಮತ್ತು ಅವನು ಜೊತೆಗೆ ಬಂದರೆ ತನಗೆ ಇತರ ಸಂಗಾತಿಗಳಿಗಿಂತ ಹೆಚ್ಚುಗಾರಿಕೆ ಲಭಿಸುವುದಲ್ಲದೆ ರಾಯನ ಮಗನ ಕೃಪೆ ಲಭಿಸುವಂತಾಗುವುದು ಎಂದು ಹೇಳಿದಳು. ಅದರಂತೆಯೆ ಅವನು ತನ್ನ ಸಂಗಡಿಗರೊಂದಿಗೆ ಯುವಕ ರಾಯನ ಡೇರೆಗೆ ಆ ಹುಡುಗಿಯೊಂದಿಗೆ ಹೊರಟ.

"ಡೆಕ್ಕನದ ಪದ್ಧತಿಯಂತೆ ಲೂಲಿಗಳ[15] ಮತ್ತು ನಾಚವಾಲಿಯರ ಅನೇಕ ತಂಡಗಳು ಒಂದೇ ಕಾಲಕ್ಕೆ ಪ್ರದರ್ಶನ ನೀಡಲು ಅಪ್ಪಣೆ ಕೊಡಲಾಯಿತು ಮತ್ತು ಅವರು ಮುಗಿಸಿದ ನಂತರ ರಾಯನ ಮಗ ಅಭಿನಯಕಾರರನ್ನು ಮತ್ತು ಮೂಕನಾಟಕ ನಟರನ್ನು ಕರೆದ. ಆ ನಾಚವಾಲಿ ಈಗ ಕೌಜಿ ಮತ್ತು ಅವನ ಸಂಗಡಿಗರಲ್ಲೊಬ್ಬ ತಮ್ಮ ಚಮತ್ಕಾರಗಳನ್ನು ಪ್ರದರ್ಶಿಸಲು ಅಪ್ಪಣೆ ಕೋರಿದಳು. ಸ್ತ್ರೀಯರ ವೇಷ ಧರಿಸಿ ಅವರು ಪ್ರಣಯ ದೃಷ್ಟಿ ಬೀರುತ್ತ ಮುಗುಳ್ನಗುತ್ತ ಪ್ರವೇಶಿಸಿದರು. ಮತ್ತು ಮಂಡಲವಾದನದಲ್ಲಿ,ನಾಚ ಮಾಡುವುದರಲ್ಲಿ ಮತ್ತು ಅಣಕದಲ್ಲಿ ಎಷ್ಟೊಂದು ಚೆನ್ನಾಗಿ ಮೂಕಾಭಿನೇತ್ರರ ಅನುಕರಣ ಮಾಡಿದರೆಂದರೆ ರಾಯನ ಮಗ ಅವರ ಅಭಿನಯಕ್ಕೆ ಮರುಳಾಗಿದ್ದ. ಕೊನೆಗೆ ಅವರು ತಲಾ ಒಂದು ಚೂರಿ ಹೊರ ತೆಗೆದರು ಮತ್ತು ಡೆಕ್ಕನದ ನಾಚಗಾರರಂತೆ ಸ್ವಲ್ಪ ಸಮಯದವರೆಗೆ ಅವುಗಳನ್ನು ತಿರುಗಿಸುತ್ತ ಮುಂದುವರಿಯುವಲ್ಲಿ ಮತ್ತು ಸುತ್ತ ತಿರುಗುವಲ್ಲಿ ಸಾವಿರಾರು ವಿಲಕ್ಷಣ ಭಂಗಿಗಳನ್ನು ಪ್ರದರ್ಶಿಸಿದರು. ಕಡೆಯಲ್ಲಿ ರಾಯನ ಮಗನ ಮೇಲೆ ಒಮ್ಮೆಲೆ ಧಾವಿಸಿ ಅವನ ಎದೆಯಲ್ಲಿ ಎರಡೂ ಚೂರಿಗಳನ್ನು ತಿವಿದರು. ನಂತರ ಅವನ ಸಂಗಡಿಗರ ಮೇಲೆ ಆಕ್ರಮಣ ಮಾಡಿದರು. ಡೇರೆಯ ಹೊರಗಡೆ ಕಾಯ್ದಿದ್ದ ಅವರ ಇನ್ನುಳಿದ ಗೆಳೆಯರು ಕೂಗನ್ನು ಕೇಳಿ ಪರದೆಯನ್ನು ಹರಿದು ನೇರವಾಗಲು ಒಳಬಂದರು. ಬಹಳ ಅಮಲಿನಲ್ಲಿದ್ದ ಅನೇಕ ಸಂಗಾತಿಗಳನ್ನು ಸುಲಭವಾಗಿ ಕೊಲ್ಲಲಾಯಿತು.

ಕೌಜಿ ತನ್ನ ಸಂಗಡಿಗರೊಂದಿಗೆ ಎಲ್ಲ ದೀಪಗಳನ್ನು ಆರಿಸಿದ ಮತ್ತು ಬಿರುಕುಗಳ ಮೂಲಕ ಹೊರಗೆ ಪಾರಾಗಿ ನೆರವಿನಲ್ಲಿ ಸೇರಿಕೊಂಡರು. ಬೇಗನೆ ಕೂಗು ಡೇರೆಯ ಸುತ್ತ ಎಲ್ಲೆಲ್ಲೂ ಹಬ್ಬಿತು. ಬಹಳ ಗೊಂದಲ ಉಂಟಾಯಿತು ಮತ್ತು ನಾನಾ ವರದಿಗಳು ಮತ್ತು ಕೂಗುಗಳು ಹರಡಿದವು. ಸುಲ್ತಾನ ನದಿ ದಾಟಿ ಬಂದು ಶಿಬಿರದ ಮೇಲೆ ಹಠಾತ್ತನೆ ಆಕ್ರಮಣ ಮಾಡಿದನೆಂದು ಕೆಲವರು ಹೇಳಿದರೆ ಅವನ ದಂಡ ನಾಯಕರಲ್ಲೊಬ್ಬ ಹನ್ನೆರಡು ಸಾವಿರ ಯೋಧರನ್ನೂ ಕಟ್ಟಿಕೊಂಡು ಬಂದು ರಾಯ ಮತ್ತು ಅವನ ಮಗನ ರುಂಡ ಕತ್ತರಿಸಿದನೆಂದು ಇನ್ನು ಕೆಲವರು ಹೇಳಿದರು. ರಾತ್ರಿ ಅಸಾಮಾನ್ಯವಾಗಿ ಕತ್ತಲಾಗಿತ್ತು ಶಿಬಿರ ಸುಮಾರು ಹತ್ತು ಮೈಲು ಹಬ್ಬಿತ್ತು. ಹಾಗಾಗಿ ಪರಿಸ್ಥಿತಿ ಬೇರೆ ಬೇರೆ ರೀತಿ ವರದಿಯಾಗಿತ್ತು. ಮತ್ತು ಕೂಗಿನ ನಿಜವಾದ ಕಾರಣ ತಿಳಿಯದೆ ಬೇರೆ ಬೇರೆ ದಂಡನಾಯಕರು ಶಸ್ತ್ರಸಜ್ಜಿತರಾಗಿ ತಮ್ಮ ತಮ್ಮ ಠಾಣೆಗಳಲ್ಲಿಯೇ ಕಾದು ನಿಲ್ಲುವಲ್ಲಿ ತೃಪ್ತರಾದರು. ಏತನ್ಮಧ್ಯೆ, ಸುಲ್ತಾನನ ಸುಮಾರು ನಾಲ್ಕು ಸಾವಿರ ಸೈನಿಕರು ಅದಕ್ಕಾಗಿಯೇ ಸಿದ್ಧಪಡಿಸಲಾಗಿದ್ದ ದೋಣಿ ಮತ್ತು ತೆಪ್ಪಗಳಲ್ಲಿ ನದಿಯನ್ನು ದಾಟಿದರು. ದಾರಿಯನ್ನು ತಡೆಗಟ್ಟಲು ನಿಲ್ಲಿಸಿದ್ದ ಶತ್ರುಗಳ ಕಾಲ್ದಳ ಶಿಬಿರದಲ್ಲಿ ಎದ್ದ ಕೂಗು ಮತ್ತು ಸುಲ್ತಾನನ ಸೈನ್ಯದ ಬರುವಿಕೆ ಯಿಂದ ಭೀತರಾಗಿ ಆಕ್ರಮಣ ಮಾಡುವ ವರೆಗೆ ಕಾಯದೆ ಗೊಂದಲಗೆಟ್ಟು ಓಡಿದರು. ಮುಂಜಾವಿಗೆ ಪೂರ್ವದಲ್ಲಿ ಫಿರೋಜ ಶಾ ತನ್ನ ಇಡಿ ಸೈನ್ಯದೊಂದಿಗೆ ನದಿಯನ್ನು ದಾಟಿದ ಮತ್ತು ಬೆಳಗಾಗುತ್ತಲೆ ಶತ್ರುಶಿಬಿರದ ಮೇಲೆ ಉಗ್ರ ಆಕ್ರಮಣ ಮಾಡಿದ. ಮಗನ ಮರಣದಿಂದ ದುಃಖಿತನಾಗಿದ್ದ ಮತ್ತು ಆಕ್ರಮಣಕಾರರ ಧೈರ್ಯದಿಂದ ಅತಿ ಗಾಬರಿಯಾಗಿದ್ದ ದೇವಲ ರಾಯ ದುರ್ಬಲ ಪ್ರತಿರೋಧ ಮಾತ್ರ ಒಡ್ಡಿದ. ಸೂರ್ಯೋದಯಕ್ಕೆ ಮುನ್ನವೆ ತನ್ನ ಮಗನ ಶವ ತೆಗೆದುಕೊಂಡು ತನ್ನ ಸೈನ್ಯ ದೊಂದಿಗೆ ಕಾಲುಕಿತ್ತ, ಸುಲ್ತಾನನಿಗೆ ಶಿಬಿರದಲ್ಲಿ ವಿಪುಲ ಲೂಟಿ ಸಿಕ್ಕಿತು ಮತ್ತು ಅವನನ್ನು ಬೀಜನಗರದ ನೆರೆಯ ವರೆಗೆ ಬೆನ್ನಟ್ಟಿದ. ಎಲ್ಲವೂ ಸುಲ್ತಾನನಿಗೆ ಅನುಕೂಲಕರವಾದ ಘಟನೆಗಳು ದಾರಿಯಲ್ಲಿ ಜರುಗಿದವು, ರಸ್ತೆಗಳು ಸಂಹರಿಸಲ್ಪಟ್ಟ ಹಿಂದೂಗಳ ದೇಹಗಳಿಂದ ತುಂಬಿಹೋಗಿದ್ದವು."

ಬುಕ್ಕ ಸುರಕ್ಷಿತವಾಗಿ ವಿಜಯನಗರ ತಲುಪಿದ ಮತ್ತು ಅದರ ಕೋಟೆಗಳ ಹಿಂದೆ ಆಶ್ರಯ ಪಡೆದ. ಸುಲ್ತಾನ "ಖಾನಖಾನ" ಎಂಬ ಬಿರುದಿನಿಂದ ತಾನೇ ಗೌರವಿಸಿದ್ದ ತನ್ನ ಸಹೋದರ ಅಹ್ಮದ(ನಂತರ ಸುಲ್ತಾನನಾದವ)ನನ್ನು ಪಟ್ಟಣದ ದಕ್ಷಿಣಕ್ಕಿದ್ದ ಶ್ರೀಮಂತ ಜಿಲ್ಲೆಗಳನ್ನು ಕೊಳ್ಳೆ ಹೊಡೆಯಲು ಕಳಿಸಿದ. ಅಹ್ಮದ ತನಗೆ ಸಿಕ್ಕ ಆಜ್ಞೆಯನ್ನು ಪೂರೈಸಿ ಅಸಂಖ್ಯ ಸೆರೆಯಾಳುಗಳೊಂದಿಗೆ ಮರಳಿದ ಮತ್ತು ಅವರಲ್ಲಿ ಅನೇಕ ಬ್ರಾಹ್ಮಣರಿದ್ದರು. ನಗರದಲ್ಲಿದ್ದ ಅವರ ಸಂಬಂಧಿಕರು ಮುಪ್ಪಿನ ರಾಯ (ಇನ್ನೂ ಬದುಕಿದ್ದ ಎರಡನೆಯ ಹರಿಹರ)ನನ್ನು ಬಿಡುಗಡೆ ಹಣ

ನೀಡುವಂತೆ ಬೇಡಿಕೊಂಡನು. ಮತ್ತು ಬಹಳ ಸಂಧಾನದ ನಂತರ ಸುಲ್ತಾನ "ಹತ್ತು ಲಕ್ಷ ಊನಗಳನ್ನು"[16] ಸ್ವೀಕರಿಸಿದ ಮತ್ತು ಒಪ್ಪಂದ ಮಾಡಿಕೊಳ್ಳಲು ಒಪ್ಪಿದ.

ಹಿಜರಿ ಶಕೆ ೮೦೧ರ ಕೊನೆಗಿಂತ ಕೆಲವು ತಿಂಗಳು ಮುಂಚೆ ಅಂದರೆ ೩ನೆಯ ಸಪ್ಟಂಬರ, ಕ್ರಿ.ಶ. ೧೩೯೯ಕ್ಕಿಂತ ಕೆಲವು ತಿಂಗಳು ಮುಂಚೆ ಮಾಡಿಕೊಳ್ಳಲಾದ ಈ ಒಪ್ಪಂದದ ಪ್ರಕಾರ ಎರಡೂ ರಾಜ್ಯಗಳ ಗಡಿಗಳು ಯುದ್ಧಕ್ಕಿಂತ ಪೂರ್ವದಲ್ಲಿದ್ದಂತೆಯೆ ಇರಬೇಕು ಮತ್ತು ಪ್ರತಿಯೊಂದು ಪಕ್ಷವೂ ಇನ್ನೊಂದರ ಪ್ರಜೆಗಳನ್ನು ಹಿಂಸಿಸಕೂಡದು. ನಿಜವಾದ ಗಡಿ ಯಾವಾಗಲೂ ವ್ಯಾಜ್ಯದ ವಿಷಯವೆ ಆಗಿತ್ತಾದುದರಿಂದ ದಂಡಯಾತ್ರೆಯಿಂದ ಸುಲ್ತಾನನಿಗೆ ಗಣನೀಯವಾದ ಪ್ರಯೋಜನವಾದಂತೆ ತೋರುವುದಿಲ್ಲ. ಮೇಲೆ ಹೇಳಿದ ತೇದಿಯನ್ನು ನಾನು ಫಿರಿಸ್ತಾನಿಂದ ತೆಗೆದುಕೊಂಡಿರುವೆ :—"ಈ ದಂಡಯಾತ್ರೆಯ ಮುಕ್ತಾಯದ ಮತ್ತು ೮೦೨ ವರ್ಷದ ಆರಂಭದ ನಂತರ ಕೆಲವು ತಿಂಗಳಲ್ಲಿ ಸುಲ್ತಾನ ನರಸಿಂಗನನ್ನು ಶಿಕ್ಷಿಸಲು ನಡೆದ" ಅವನು ಬೇರರ್‌ದ ಗಡಿಗಳಲ್ಲಿ ಗಲಾಟೆ ಎಬ್ಬಿಸಿದ ಮುಖ್ಯಸ್ಥನಾಗಿದ್ದ.

ಬರಹಾನ್–ಇ–ಮಾಸಿರ್ ಈ ಯುದ್ಧದ ಬಗೆಗೆ ಅತ್ಯಂತ ಸಂಕ್ಷಿಪ್ತವಾಗಿ ಪ್ರಸ್ತಾಪಿಸುತ್ತ ದಾಟುತ್ತದೆ. ಸುಲ್ತಾನ ಅದನ್ನು ಆರಂಭಿಸಿದ, ಆದರ ಮುಕ್ತಾಯಕ್ಕೆ ದೊಡ್ಡ ನಷ್ಟ ಪರಿಹಾರ ಧನ ಮತ್ತು ವಾರ್ಷಿಕ ಕಪ್ಪ ಸಂದಾಯದ ವಚನ ಸ್ವೀಕರಿಸಿದ ಎಂದು ಅದು ಹೇಳುತ್ತದೆ. ಅದು ಕೊಟ್ಟ ತೇದಿ ತದ್ರೂಪವಾಗಿದೆ.

ಈ ಯುದ್ಧದ ಅನತಿ ಕಾಲ ನಂತರ, ಆದರೆ ಅಕ್ಟೋಬರ ೧೫, ಕ್ರಿ.ಶ. ೧೩೯೯ಕ್ಕಿಂತ ಮುಂಚೆ ಖಂಡಿತವಾಗಿಯೂ ಅಲ್ಲ, ಎರಡನೆಯ ಹರಿಹರ ತೀರಿಕೊಂಡ, ಮತ್ತು ಅವನ ಮಗ ಬುಕ್ಕ ಉತ್ತರಾಧಿಕಾರಿಯಾದ.

ಬುಕ್ಕನ ಆಳಿಕೆಯ ಘಟನೆಗಳ ಬಗೆಗೆ ತಿಳಿದುಕೊಳ್ಳಲು ಸಹಾಯಕವಾಗುವಂತೆ ನಮಗೆ ಏನೂ ಲಭ್ಯವಿಲ್ಲ. ಆದರೆ, ಕೆಲಮಟ್ಟಿಗೆ ಗುಜರಾತ, ಮಾಳವಾ, ಮತ್ತು ಖಾನದೇಶಗಳ ಚಿತಾವಣೆಯಿಂದಾಗಿ ಅವನು ಫಿರೋಜ ಶಾಹನಿಗೆ ಕಪ್ಪ ಕೊಡುವುದನ್ನು ನಿಲ್ಲಿಸಿದ ಎಂದು ಫಿರಿಸ್ತಾ ಹೇಳುತ್ತಾನೆ. ಹಿಜರಿ ೮೦೮ರಲ್ಲಿ (ಕ್ರಿ.ಶ. ಜೂನ್ ೧೪೦೫ರಿಂದ ೧೪೦೬) ನಾಲ್ಕು ವರ್ಷಗಳ ಕಪ್ಪ ಬಾಕಿಯಿತ್ತು. ಆದರೆ ಸುಲ್ತಾನ ಅದನ್ನು ಗಮನಿಸದೆ ಹೆಚ್ಚು ಅನುಕೂಲಕರ ಸಮಯಕ್ಕಾಗಿ ಕಾಯ್ದ.

ಬುಕ್ಕನ ನಂತರ ವಿಜಯನಗರದ ಸಿಂಹಾಸನಕ್ಕೆ ಅವನ ಸಹೋದರ ಒಂದನೆಯ ದೇವರಾಯ ಬಂದ. ಅವನ ಪಟ್ಟಾಭಿಷೇಕದ ದಿನವನ್ನು ಮೈಸೂರಿನ ಹಾಸನದಲ್ಲಿರುವ ಶಾಸನವೊಂದು ನವೆಂಬರ ೫, ೧೪೦೬ ಎಂದು ನಿರ್ಧರಿಸಲ್ಪಡುತ್ತದೆ.[17] ಸದ್ಯ ಗೊತ್ತಿರುವ ಬುಕ್ಕರಾಯನ ಕೊನೆಯ ಶಾಸನ ಆ ವರ್ಷದ ಏಪ್ರಿಲ್ ೩೦ಕ್ಕೆ

**ತಾಳಿ ಹೊಂದುವ–ಹಿಂದೂ ಗಣನೆಯಲ್ಲಿ ೧೩೨೮ನೆಯ ಶಕ (ಮುಕ್ತಾಯದ) ವರ್ಷದ ಆದರ ಪರಿವರ್ತಿ ವರ್ಷದ ಹೆಸರು 'ವ್ಯಾಯ'[18] ವೈಶಾಖ ತಿಂಗಳಿನ ಪೂರ್ವಾರ್ಧ...... ದಿನಾಂಕವನ್ನು ಧರಿಸಿದೆ.**

---

1 ರೈಸ್‌ನ "ಮೈಸೂರ್ ಇನ್‌ಸ್ಕ್ರಿಪ್ಷನ್ಸ್", ಪು. ೫೫, (ಕ್ರಿ.ಶ. ೧೮೭೯) ನೋಡಿರಿ ; ಜರ್ನಲ್ ಬಾಂಬೆ ಬ್ರಾಂಚ್ ರಾಯಲ್ ಏಷಿಯಾಟಿಕ್ ಸೊಸಾಯಿಟಿ, xii, ೩೮೦ (ಕ್ರಿ.ಶ. ೧೮೭೯)

2 ಮೇಲಿನದನ್ನು, ಅದರ ಪು. ೨೮ ನೋಡಿರಿ. ಸಾಯಣ ಕ್ರಿ.ಶ. ೧೩೮೭ರಲ್ಲಿ ತೀರಿ ಕೊಂಡನೆಂದು ಪ್ರೊ. ಆಫ್ರೆಖ್ಟ್ ನಂಬುತ್ತಾನೆ.

3 "ಮೈಸೂರ್ ಇನ್‌ಸ್ಕ್ರಿಪ್ಷನ್ಸ್" ಪು. ೨೨೬.

4 ಜರ್ನಲ್ ಬಾಂಬೆ ಬ್ರಾಂಚ್ ರಾಯಲ್ ಏಶಿಯಾಟಿಕ್ ಸೊಸಾಯಿಟಿ, ix, ೨೨೭.

5 ಇದರಲ್ಲಿ ರಾಜನನ್ನು 'ಮಹಾಮಂಡಲೇಶ್ವರ', ವೀರ ಉದೈಯಾರ್‌ನ ಮಗ, ನಾಲ್ಕು ಸಾಗರಗಳ ಪ್ರಭು ಎಂದು ಕರೆಯಲಾಗಿದೆ.

6 ಎಪಿಗ್ರಾಫಿಯಾ ಇಂಡಿಕಾ, iii, ಪು. ೧೧೫-೧೧೬.

7 ಅದೇ, ಪು. ೧೧೯

8 ೧೭ನೆಯ ರಮಜಾನ, ಹಿ.ಶ. ೭೯೯ (ಫಿರಿಸ್ತಾ)

9 ೨೩ನೆಯ ಸಫರ, ಹಿ.ಶ. ೮೦೦ (ಫಿರಿಸ್ತಾ)

10 ಎಪಿಗ್ರಾಫಿಯಾ ಇಂಡಿಕಾ, iii, ೩೬, ಟಿಪ್ಪಣಿ ೩

11 ಫಿರಿಸ್ತಾ (ಸ್ಕಾಟ್, ಪು. ೭೬)

12 ನನಗನಿಸಿದಂತೆ ಅವು ಬುಟ್ಟಿಹರಗೋಲುಗಳು. ಅವು ಇವತ್ತಿಗೂ ಬಳಕೆಯಲ್ಲಿರುವಂತೆ ಹದಿನಾರನೆಯ ಶತಮಾನದಲ್ಲಿ ಈ ನದಿಗಳ ಮೇಲೆ ಬಳಸಲ್ಪಡುತ್ತಿದ್ದವೆಂದು ಪ್ಯಾಸ್‌ನ ಗ್ರಂಥಪಾಠಗಳಲ್ಲಿ (ಮುಂದೆ ಪು. ೨೫೯) ವರ್ಣಿಸಲಾಗಿದೆ. ಅವು ಆಕಾರದಲ್ಲಿ ದುಂಡಗಿರುತ್ತವೆ, ಮತ್ತು ಬಿದಿರು ಸೀಳಿ ಒಂದರೊಳೊಂದು ಹೆಣೆದು ಅದರ ಹೊರಮೈ ಪೂರ್ತಿ ಚರ್ಮದಿಂದ ಆವೃತ್ತವಾಗಿರುತ್ತವೆ. ಈ ಹರಗೋಲುಗಳ ಬಗೆಗೆ ಬರೆಯುತ್ತ ಕರ್ನಲ್ ಬ್ರಿಗ್ಸ್ (ಫಿರಿಸ್ತಾ, ii, ೩೭೧) ಒಂದು ಅಡಿಟಿಪ್ಪಣಿಯಲ್ಲಿ ಹೀಗೆ ಹೇಳುತ್ತಾನೆ. "ಒಂದು ಬ್ರಿಟಿಷ್ ಸೈನ್ಯದ ಪಡೆ ೧೮೧೨ದಲ್ಲಿ ಈ ಹರಗೋಲುಗಳಲ್ಲಿ ತನ್ನ ಫಿರಂಗಿಗಳನ್ನು ವಾಹನಗಳಿಂದ ಇಳಿಸದೆ ತುಂಗಭದ್ರಾ ದಾಟಿಸಿತು."

13 ಈ ಸ್ತ್ರೀಯರು ಯಾವಾಗಲೂ ರಾಯನ ಸೈನ್ಯಗಳ ಜೊತೆಗೆ ಹೋಗುತ್ತಿದ್ದರು. ೧೫೨೦ರಲ್ಲಿ ರಾಯಚೂರಿನಲ್ಲಿನ ಹಿಂದೂ ಶಿಬಿರದಲ್ಲಿ ಇವರು ವಿಪುಲ ಸಂಖ್ಯೆಯಲ್ಲಿ ಇದ್ದರೆಂದು ನೂನಿಜ್ ಹೇಳುತ್ತಾನೆ.

14 ತಂತುವಾದ್ಯ

15 ಸಾರ್ವಜನಿಕರೆದುರು ಹಾಡಲು ಕುಣಿಯಲು ತರಬೇತಿ ಪಡೆದ ಯುವಕರು.

16 ಸುಮಾರು ೪೦,೦೦೦ ಪೌಂಡುಗಳೆಂದು ಬೆಲೆ ಕಟ್ಟಿದ (ಸ್ಕಾಟ್, ಫಿರಿಸ್ತಾ, ಪು. ೭೯ ಟಿಪ್ಪಣಿ)

17 'ಮೈಸೂರ್ ಇನ್‌ಸ್ಕ್ರಿಪ್ಷನ್ಸ್', ರೈಸ್, ಪು. ೨೭೯, ನಂ. ೧೫೦, ಇಂಡಿಯನ್ ಆ್ಯಂಟಿಕ್ವಿಟಿಜ್, XXIV, ಪು. ೨೦೪, ನಂ. ೪೦೪ ಮತ್ತು ಟಿಪ್ಪಣಿಯಲ್ಲಿ ಪ್ರೊಫೆಸರ್ ಕೀಲ್‌ಹಾರ್ನ್.

18 "ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್", i, ೮೨ (ಡಾ. ಹುಲ್ಟ್ಜ್)

o

## ಅಧ್ಯಾಯ ೫

# ಒಂದನೆಯ ದೇವರಾಯ (ಕ್ರಿ.ಶ. ೧೪೦೬ ರಿಂದ ೧೪೧೯)

**ಪ್ರಣಯಾಸಕ್ತ ದೊರೆ ಒಂದನೆಯ ದೇವರಾಯ–ರೈತನ ಸುಂದರ ಮಗಳು–ರಾಜನ ಹುಚ್ಚು ಸಾಹಸ-ನಗರಕ್ಕೆ ಅಪಾಯ–ಮಹಮ್ಮದೀಯ ರಾಜನೊಂದಿಗೆ ಹಿಂದೂ ರಾಜಕುಮಾರಿಯ ವಿವಾಹ–ಫಿರೂಜ ಶಾಹನ ಕೋಪ–ಪರ್ತಾಲಳ ವಿವಾಹ–ರಾಜಾವಿಜಯ–ಎರಡನೆಯ ದೇವರಾಯನ ಸಿಂಹಾಸನಾರೋಹಣದ ಸಂಭವನೀಯ ತೇದಿ.**

ಕ್ರಿ.ಶ. ೧೪೦೬ರ ಕೊನೆಗೆ ಜರುಗಿರಬಹುದಾದ ಒಂದು ಘಟನೆಯ ಬಗೆಗೆ ಫಿರಿಸ್ತಾ ಹೇಳುತ್ತಾನೆ. ಅದರಲ್ಲಿ ಪ್ರಧಾನ ಪಾತ್ರಧಾರಿ ವಿಜಯನಗರದ ರಾಜನಾಗಿದ್ದ. ಈ ರಾಜನು ಎರಡನೆಯ ಬುಕ್ಕನ ಉತ್ತರಾಧಿಕಾರಿಯೂ ಅವನ ತಮ್ಮನೂ ಆಗಿದ್ದ ಒಂದನೆಯ ದೇವರಾಯನಾಗಿರಬೇಕೆಂದು ನಾನು ಭಾವಿಸುತ್ತೇನೆ. ಮುದಕಲ್ ರೈತನೊಬ್ಬನ ಸುಂದರಿಯಾದ ಮಗಳನ್ನು ತಾನು ಪಡೆಯಲೋಸುಗ ರಾಯನು ಕೈಕೊಂಡ ಹುಚ್ಚುಸಾಹಸಕ್ಕೆ ಈ ಕಥೆ ಸಂಬಂಧಿಸಿದೆ. ಅವಳನ್ನು ಪಡೆಯುವ ಅವನ ಇಚ್ಛೆ ಯಾವ ಮಟ್ಟ ತಲುಪಿತೆಂದರೆ ಆ ಹುಡುಗಿಯನ್ನು ವಶಪಡಿಸಿಕೊಂಡು ತನ್ನ ಅಂತಃಪುರಕ್ಕೆ ಸೇರಿಸಿಕೊಳ್ಳುವ ಏಕಮಾತ್ರ ಉದ್ದೇಶದಿಂದ ತುಂಗಭದ್ರಾದ ಉತ್ತರಕ್ಕಿರುವ ಪ್ರದೇಶದಲ್ಲಿ ದಂಡಯಾತ್ರೆ ಕೈಕೊಂಡ. ಎರಡನೆಯ ಬುಕ್ಕ, ಪಟ್ಟಕ್ಕೆ ಬಂದಾಗ ಮಧ್ಯವಯಸ್ಕನಾಗಿದ್ದನೆಂದು ಭಾವಿಸಲು ಕಾರಣಗಳನ್ನು ಈಗಾಗಲೆ ನೀಡಿದ್ದೇನೆ ಮತ್ತು ಈ ಬಿಸಿರಕ್ತದ ದೊರೆ ತನ್ನ ಆಳಿಕೆಯನ್ನು ಕ್ರಿ.ಶ. ೧೪೦೬ರಲ್ಲಿ ಆರಂಭಿಸಿದ ಅವನ ತಮ್ಮನೆಂದು ಎಣಿಸುವುದು ಅಸಮಂಜಸವಲ್ಲ. ಅದು ಮಹತ್ವದ ಪರಿಣಾಮ ಬೀರಿದುದರಿಂದ ಅವನ ಹುಚ್ಚುಸಾಹಸವನ್ನು ಫಿರಿಸ್ತಾ ಹೇಳಿರುವಂತೆ ಪೂರ್ತಿಯಾಗಿ ಹೇಳಬೇಕು.

"ಮುದಕಲ್ ಪಟ್ಟಣದಲ್ಲಿ ಒಬ್ಬ ರೈತನಿದ್ದ. ಅವನು ಎಷ್ಟೊಂದು ಉತ್ಕೃಷ್ಟ ಸೌಂದರ್ಯವತಿ ಮಗಳನ್ನು ಪಡೆದು ಕೃತಕೃತ್ಯನಾಗಿದ್ದನೆಂದರೆ ಅವಳನ್ನು ಪರಿಪೂರ್ಣಳನ್ನಾಗಿ ನಿರ್ಮಿಸಲು ಸೃಷ್ಟಿಕರ್ತ ತನ್ನೆಲ್ಲ ಶಕ್ತಿಗಳನ್ನು ಒಟ್ಟುಗೂಡಿಸಿದಂತಿತ್ತು."

ಈ ಮನೋಹರ ವ್ಯಕ್ತಿ ಒಬ್ಬ ಬ್ರಾಹ್ಮಣನಿಂದ ಶಿಕ್ಷಣ ಪಡೆದಿದ್ದಳು. ಅವಳು ರಾಜಮನೆತನದ ಅಪೇಕ್ಷಣೀಯ ಸದಸ್ಯಳಾಗಿ ಪರಿಣಮಿಸಬಹುದೆಂದು ಭಾವಿಸುವಷ್ಟು ಮಟ್ಟಿಗೆ ಅವನು ಅವಳ ಬಗೆಗೆ ಅಭಿಮಾನ ತಾಳಿದ್ದ.

"ಅವನು ಬೀಜನಗರಕ್ಕೆ ಹೊರಟ, ಮತ್ತು ರಾಯನಿಗೆ ಪರಿಚಯಿಸಲಾಗಿ ತರುಣಿಯ ರೂಪ ಮತ್ತು ಗುಣಗಳ ಎಂಥ ಗುಣಗಾನ ಮಾಡಿದನೆಂದರೆ ಅವಳನ್ನು ಪಡೆಯುವ ಬಯಕೆ ರಾಯನನ್ನು ದಹಿಸತೊಡಗಿತು. ಮತ್ತು ಅವಳನ್ನು ತಂದೆ ತಾಯಿಗಳಿಂದ ತನ್ನ ಹೆಂಡತಿಯಾಗಿ ತಂದುಕೊಡಲು ಬ್ರಾಹ್ಮಣನನ್ನು ವಿನಂತಿಸಿದ. ಬ್ರಾಹ್ಮಣನು ಅಕ್ಕರೆಯಿಂದ ಇಷ್ಟಪಟ್ಟುದೂ ಇದೇ ಆಗಿತ್ತು ಮತ್ತು ಅವನನ್ನು ತೃಪ್ತಿಗೊಳಿಸಲು ತಕ್ಷಣ ಒಪ್ಪಿಕೊಂಡ; ಅದಾದ ಮೇಲೆ ತಂದೆ ತಾಯಿಗಳಿಗೆ ಅನುಗ್ರಹಗಳನ್ನು ಮತ್ತು ಅವರ ಸುಂದರ ಮಗಳಿಗೆ ರಾಣಿ ಪದವಿಯನ್ನು ನೀಡುವ ದೊಡ್ಡ ವಚನವಿತ್ತು ರಾಯ ಅವನನ್ನು ಬೆಲೆಯುಳ್ಳ ಕಾಣಿಕೆಗಳೊಂದಿಗೆ ಕಳುಹಿದ. ಬ್ರಾಹ್ಮಣ ವಿಲಂಬ ಮಾಡದೆ ಪಯಣ ಬೆಳೆಸಿದ, ರೈತನ ಮನೆಗೆ ಬರುತ್ತಲೆ ಅವರು ತಮ್ಮ ಮಗಳೊಂದಿಗೆ ಬೀಜನಗರಕ್ಕೆ ಬರಬೇಕೆಂಬ ರಾಯನ ಆಜ್ಞೆಯನ್ನು ಅವನಿಗೆ ಮತ್ತು ಅವನ ಹೆಂಡತಿಗೆ ತಿಳಿಸಿದ. ಇಂಥ ಅನಿರೀಕ್ಷಿತ ಅದೃಷ್ಟದಿಂದ ಹಿಗ್ಗಿದ ತಂದೆ ತಾಯಿಗಳು ತರುಣಿಯನ್ನು ಕರೆದು, ರಾಯನ ಬೆಲೆಯುಳ್ಳ ಕಾಣಿಕೆಗಳನ್ನು ಅವಳ ಮುಂದೆ ಇಟ್ಟು ದೊಡ್ಡ ರಾಜನೊಂದಿಗೆ ಬೇಗನೆ ವಿವಾಹವಾಗಲಿರುವುದಕ್ಕಾಗಿ ಅವಳನ್ನು ಅಭಿನಂದಿಸುತ್ತ ತತ್‌ಕ್ಷಣ ನಿಶ್ಚಿತಾರ್ಥದ ಕುರುಹಾಗಿ ಮಣಿಗಳಿಂದ ಜೋಡಿಸಲಾಗಿದ್ದ ಸುವರ್ಣ ಕೊರಳು ಪಟ್ಟಿಯನ್ನು ಅವಳಿಗೆ ತೊಡಿಸಲೆತ್ನಿಸಿದರು. ಹಾಗೆ ತೊಡಿಸಿದ ಮೇಲೆ ನಿಶ್ಚಿತಾರ್ಥ ಮುರಿಯಲು ಬರುವಂತಿರಲಿಲ್ಲ.

"ಅವರಿಗೆ ಆಶ್ಚರ್ಯವಾಗುವಂತೆ ಸುಂದರ ಕನ್ಯೆ ಒಪ್ಪದೆ ತನ್ನ ಕೊರಳನ್ನು ಹಿಂದೆ ತೆಗೆದುಕೊಂಡು ಕೊರಳು ಪಟ್ಟಿಯನ್ನು ಧರಿಸಲು ನಿರಾಕರಿಸಿದಳು. ಮತ್ತು ಬೀಜನಗರದ ಅಂತಃಪುರ ಯಾರೇ ಸೇರಲಿ, ಅನಂತರ ಅವರ ಹತ್ತಿರದ ಸಂಬಂಧಿಗಳನ್ನು ಮತ್ತು ಗೆಳತಿಯರನ್ನು ಕೂಡ ಭೆಟ್ಟಿಯಾಗಲು ಬಿಡುವುದಿಲ್ಲ ಎಂದು ಅಭಿಪ್ರಾಯ ಪಟ್ಟಳು; ಐಹಿಕ ಸಂಪತ್ತಿಗಾಗಿ ಅವರು ಅವಳನ್ನು ಮಾರಲು ತೀರ ಸಂತೋಷ ಪಡುತ್ತಿರಬಹುದಾಗಿದ್ದರೂ ಬೀಜನಗರದ ಅರಮನೆಯ ಎಲ್ಲ ವೈಭವಕ್ಕಾಗಿ ಸಹ ತನ್ನ ತಂದೆ ತಾಯಿಗಳಿಂದ ಶಾಶ್ವತವಾಗಿ ದೂರವಿರಲು ಒಪ್ಪಲಾರದಷ್ಟು ಅವರನ್ನು ತಾನು ಪ್ರೀತಿಸುವುದಾಗಿ ಹೇಳಿದಳು. ಈ ಘೋಷಣೆಯೊಂದಿಗೆ ಉದುರಿದ ಪ್ರೀತಿಯ ಕಣ್ಣೀರು ಅವರ ತಂದೆ ತಾಯಿಗಳನ್ನು (ಹೃದಯವನ್ನು) ಕರಗಿಸಿತು; ಬಲ ಪ್ರಯೋಗಿಸಲು ಮನಸ್ಸಾಗದೆ ಅವರು ಬ್ರಾಹ್ಮಣನನ್ನು ಎಲ್ಲ ಕಾಣಿಕೆಗಳೊಂದಿಗೆ ಕಳಿಸಿಕೊಟ್ಟರು ಮತ್ತು ಅವನು ವ್ಯಥೆ ಹಾಗೂ ನಿರಾಶೆಪಟ್ಟು ಬೀಜನಗರಕ್ಕೆ ಮರಳಿದ....

"ಬೀಜನಗರಕ್ಕೆ ಬಂದು ಬ್ರಾಹ್ಮಣ ತನ್ನ ಯೋಜನೆ ವಿಫಲವಾದುದನ್ನು ವಿವರಿಸಿದಾಗ ರಾಜನ ಪ್ರೇಮ ಹುಚ್ಚಿಗೆ ತಿರುಗಿತು, ಮತ್ತು ತನ್ನ ಪ್ರೇಮದ ವಸ್ತು ಫಿರೋಜ ಶಾನ ರಾಜ್ಯದ[1] ಕೇಂದ್ರದಲ್ಲಿ ವಾಸಿಸುತ್ತಿದ್ದರೂ ಅವನು ಬಲಪ್ರಯೋಗ

ದಿಂದ ತನ್ನ ಆಸೆ ಈಡೇರಿಸಿಕೊಳ್ಳಲು ನಿರ್ಧರಿಸಿದ. ಈ ಉದ್ದೇಶಕ್ಕಾಗಿ ತನ್ನ ಪ್ರಾಂತಗಳ ಪ್ರವಾಸ ಕೈಕೊಳ್ಳುವ ನೆಪದಲ್ಲಿ ದೊಡ್ಡ ಸೈನ್ಯದೊಂದಿಗೆ ಬೀಜನಗರದಿಂದ ಹೊರಟ; ತುಮದ್ರಾ ನದಿಯ ದಡಗಳನ್ನು ತಲುಪಿದಾಗ ಐದು ಸಾವಿರ ಶ್ರೇಷ್ಠ ಅಶ್ವಾರೋಹಿಗಳನ್ನು ಆಯ್ದು ತನ್ನ ನಡತೆಯ ಲಗಾಮನ್ನು ಪ್ರೇಮಕ್ಕೆ ಒಪ್ಪಿಸಿ, ಗೆಳೆಯರ ವಿನಂತಿಗಳನ್ನೂ ಲೆಕ್ಕಿಸದೆ, ಹಗಲು ರಾತ್ರಿ ಅತ್ಯಂತ ವೇಗವಾಗಿ ಮುದಕಲ್‌ಗೆ[2] ಸಾಗಿ ಪರ್ತಾಲ್[3] ಇದ್ದ ಗ್ರಾಮವನ್ನು ಸುತ್ತುಗಟ್ಟಿ, ಅವಳನ್ನು ಅವಳ ಇಡಿ ಕುಟುಂಬದೊಂದಿಗೆ ಗಾಯ ಮಾಡದೆ ಸೆರೆಹಿಡಿದು ತನ್ನಲ್ಲಿಗೆ ತರಬೇಕೆಂದು ಆಜ್ಞಾಪಿಸಿದ."

ಅನಿರೀಕ್ಷಿತವಾದುದು ಘಟಿಸಿಯೇ ಬಿಟ್ಟಿತು. ರಾಜ ಪರ್ತಾಲಳ ಕುಟುಂಬಕ್ಕೆ ಎಚ್ಚರಿಕೆ ನೀಡಲು ಬ್ರಾಹ್ಮಣನನ್ನು ಕಳಿಸದೆ ಅಲಕ್ಷಿಸಿದ. ರಾಯನ ಸೈನಿಕರ ದೊಡ್ಡ ಪಡೆ ಬರುತ್ತಿದೆಯೆಂಬ ಸುದ್ದಿ ಮುದಕಲ್ ತಲುಪಿ ನಿವಾಸಿಗಳು ಓಡಿದರು ಮತ್ತು ಅವರಲ್ಲಿ ಆ ಹುಡುಗಿ ಮತ್ತು ಸಂಬಂಧಿಕರು ಇದ್ದರು. ಆದುದರಿಂದ, ಸೈನಿಕರು ಹಾಗೆಯೆ ಮರಳಿದರು. ಆದರೆ ದಾರಿಯಲ್ಲಿ ನಾಡನ್ನು ಸುಲಿದರು. ತಮಗಿಂತ ಉತ್ತಮ ಪಡೆ ಅವರ ಮೇಲೆ ಆಕ್ರಮಣ ಮಾಡಿತು ಮತ್ತು ಅವರಲ್ಲಿ ೨೦೦೦ ಜನ ಸತ್ತರು. ಇದು ಯುದ್ಧಕ್ಕೆ ದಾರಿ ಮಾಡಿತು.

"೮೯ನೆಯ ವರ್ಷದ ಚಳಿಗಾಲದ ಆರಂಭಕ್ಕೆ (ಅಂದರೆ ಕ್ರಿ.ಶ. ೧೪೦೬ರ[4] ಚಳಿಗಾಲ) ಅವನು (ಸುಲ್ತಾನನು) ದೊಡ್ಡ ಸೈನ್ಯದೊಂದಿಗೆ ನಡೆದ. ಮತ್ತು ದೇವಲರಾಯ ಮುಚ್ಚಿಕೊಂಡು ಕುಳಿತಿದ್ದ ಬೀಜನಗರಕ್ಕೆ ಬಂದ. ನಗರದ ಮೇಲೆ ಆಕ್ರಮಣ ಮಾಡಲಾಯಿತು ಮತ್ತು ಸುಲ್ತಾನ ಕೆಲವು ಬೀದಿಗಳನ್ನು ವಶಪಡಿಸಿ ಕೊಂಡರೂ ಕರ್ನಾಟಕಿಯರು ಅವನ ಸೈನ್ಯವನ್ನು ಹಿಮ್ಮೆಟ್ಟಿಸಿದ್ದರಿಂದ ಅವುಗಳನ್ನು ಬಿಟ್ಟುಬಿಡಬೇಕಾಯಿತು. ಈ ಯಶಸ್ಸಿನಿಂದ ಉತ್ತೇಜಿತನಾದ ದೇವಲರಾಯ ಈಗ ಗೋಡೆಗಳ ರಕ್ಷಣೆಯಲ್ಲಿ ತನ್ನ ಸೈನ್ಯದ ಬಿಡಾರ ಹೂಡುವ ಧೈರ್ಯ ಮಾಡಿದ. ಮತ್ತು ರಾಜಸೈನ್ಯವನ್ನು ಪೀಡಿಸಿದ. ಬೀಜನಗರದ ಸುತ್ತಮುತ್ತಲಿನ ತಗ್ಗುತೆಂಬ ದಿಂದ ಕೂಡಿದ ಕಲ್ಲುಭೂಮಿಯಲ್ಲಿ ತಮ್ಮ ಅಶ್ವದಳವನ್ನು ಸರಿಯಾಗಿ ಉಪಯೋಗಿಸಲಾರದ್ದರಿಂದ ಮುಸಲ್ಮಾನರು ಸ್ವಲ್ಪ ಎದೆಗುಂದಿದರು. ಈ ಸಮಯದಲ್ಲಿ ಸುಲ್ತಾನ ಫಿರೋಜ ಶಾನ ಕೈಗೆ ಒಂದು ಬಾಣ ಗಾಯ ಮಾಡಿತು. ಆದರೆ ಅವನು ಕುದುರೆ ಇಳಿಯಬಯಸಲಿಲ್ಲ; ಮತ್ತು ಬಾಣ ಕಿತ್ತು ಕೈಯನ್ನು ಬಟ್ಟೆಯಿಂದ ಕಟ್ಟಿಕೊಂಡ.

"ಅಹ್ಮದ್ ಖಾನ್ ಮತ್ತು ಖಾನಖಾನನ್‌ರ ಕಲಿತನದ ಹೋರಾಟದಿಂದ ಶತ್ರುಗಳನ್ನು ಕೊನೆಗೆ ಹೊಡೆದೋಡಿಸಲಾಯಿತು ಮತ್ತು ಸುಲ್ತಾನ ನಗರದಿಂದ ದೂರ ಅನುಕೂಲಕರ ಬಯಲಿಗೆ ಸರಿದನು. ಅಲ್ಲಿ ಅವನು ತನ್ನ ಗಾಯಾಳು ಯೋಧರು ಗುಣಮುಖರಾಗುವ ವರೆಗೆ ನಿಂತ."

ಅವನು ಇಲ್ಲಿ ನಾಲ್ಕು ತಿಂಗಳು ನಿಂತು ರಾಯನನ್ನು ಅವನ ರಾಜಧಾನಿಯಲ್ಲಿಯೆ ಬಂಧಿಯಾಗಿಸಿದರೆ ಅವನ ಸೈನಿಕರು ವಿಜಯನಗರದ ದಕ್ಷಿಣಕ್ಕಿರುವ ನಾಡನ್ನು ಹಿಂಸಿಸಿದರು ಮತ್ತು ಹಾಳು ಮಾಡಿದರು ಮತ್ತು ಬಂಕಾಪುರ ಕೋಟೆಯ ಮೇಲೆ ದಾಳಿಯಿಟ್ಟರು. "ಅನುಕೂಲಕರ ಬಯಲು" ಎಂದರೆ ಬಹುಶಃ ನಗರದ ದಕ್ಷಿಣಕ್ಕಿರುವ ಹೊಸಪೇಟೆ ಪಟ್ಟಣದ ಹತ್ತಿರದ ತೆರೆದ ಮತ್ತು ಸಮೃದ್ಧ ಕಣಿವೆ ಆಗಿತ್ತು. ಏಕೆಂದರೆ, ಅನೇಕ ಮೈಲುಗಳ ವರೆಗೆ ಈ ಇಡಿ ಕಣಿವೆಯ ಆಧಿಪತ್ಯ ಹೊಂದಿರದಿದ್ದರೆ ಸುಲ್ತಾನನು ದಕ್ಷಿಣಕ್ಕಿರುವ ನಾಡನ್ನು ಧ್ವಂಸಪಡಿಸಲು ಸಾಧ್ಯವಾಗುತ್ತಿರಲಿಲ್ಲ. ಬಂಕಾಪುರ ವಶವಾಯಿತು ಮತ್ತು ಅದಕ್ಕಾಗಿ ಕಳಿಸಿದ ಸೈನ್ಯಪಡೆಗಳು ತನ್ನೊಂದಿಗೆ ೬೦,೦೦೦ ಹಿಂದೂ ಸೆರೆಯಾಳುಗಳನ್ನು ತಂದವು; ಇದಾದ ಮೇಲೆ ವಿಜಯನಗರವನ್ನು ನೋಡಿಕೊಳ್ಳಲು ಖಾನಖಾನನನ್ನು ಬಿಟ್ಟು ಸುಲ್ತಾನನು ಸ್ವತಃ "ಶತ್ರುಗಳ ವಶದಲ್ಲಿಯೆ ಅತ್ಯಂತ ಭದ್ರವಾದ" ಅದೋನಿ ಕೋಟೆಯನ್ನು ಅಡಗಿಸಲು ಪ್ರಯತ್ನಿಸಿದ.

ದೇವರಾಯ ಆಗ ಶಾಂತಿಗಾಗಿ ವ್ಯವಹರಿಸಲಾರಂಭಿಸಿದ ಮತ್ತು ತೀರ ಅವಮಾನಕರವಾದ ಕರಾರುಗಳಿಗೂ ಅವನು ಒಪ್ಪಬೇಕಾಗಿ ಬಂತು. ಅವನು ತನ್ನ ಮಗಳನ್ನು ಸುಲ್ತಾನನಿಗೆ ಕೊಟ್ಟು ಮದುವೆ ಮಾಡಲು, ಅಪಾರ ಸಂಪತ್ತನ್ನು ಪರಿಹಾರವಾಗಿ ನೀಡಲು ಮತ್ತು ಬಂಕಾಪುರ್ ಕೋಟೆಯನ್ನು ಶಾಶ್ವತವಾಗಿ ಬಿಟ್ಟುಕೊಡಲು ಒಪ್ಪಿಕೊಂಡನು.

"ಕರ್ನಾಟಕದ ರಾಯರು ತಮ್ಮ ಜಾತಿಯ ವ್ಯಕ್ತಿಗಳನ್ನು ಬಿಟ್ಟು ಬೇರೆಯವರಿಗೆ ಮದುವೆ ಮಾಡಿಕೊಟ್ಟರದಿದ್ದರೂ ಅಪರಿಚಿತರಿಗೆ ಕೊಡುವುದು ತೀರ ಅಪಮಾನಕರವಾಗಿದ್ದರೂ ದೇವಲರಾಯ ಅನಿವಾರ್ಯವಾಗಿ ಈಡೇರಿಸಬೇಕಾಯಿತು ಮತ್ತು ಮದುವೆಯ ಉತ್ಸವಕ್ಕೋಸುಗ ಎರಡೂ ಬದಿಯವರು ಸಿದ್ಧತೆ ಮಾಡಿಕೊಂಡರು. ನಲವತ್ತು ದಿನಗಳವರೆಗೆ ನಗರ ಮತ್ತು ಸುಲ್ತಾನನ ಶಿಬಿರದ ಮಧ್ಯೆ ಸಂಪರ್ಕ ಮುಕ್ತವಾಗಿತ್ತು. ರಸ್ತೆಯ ಇಕ್ಕೆಲಗಳಲ್ಲಿ ಅಂಗಡಿಗಳು ಮತ್ತು ಮಳಿಗೆಗಳು ಸಾಲುಗಟ್ಟಿದವು. ಅವುಗಳಲ್ಲಿ ಕರ್ನಾಟಕದ ಗಾರುಡಿಗರು, ಹಾಸ್ಯಗಾರರು, ನೃತ್ಯಗಾರರು ಮತ್ತು ಅಣಕನಟರು ಬರಹೋಗುವವರನ್ನು ವಿನೋದಗೊಳಿಸಲು ತಮ್ಮ ಚಮತ್ಕಾರಗಳನ್ನು ಮತ್ತು ಕೌಶಲಗಳನ್ನು ಪ್ರದರ್ಶಿಸಿದರು. ಖಾನಖಾನನ್ ಮತ್ತು ಮೀರ್ ಫಜಲ್ ಉಲ್ಲಾವರ ಸಾಂಪ್ರದಾಯಿಕ ಕಾಣಿಕೆಗಳೊಂದಿಗೆ ಬೀಜನಗರಕ್ಕೆ ಹೋದರು. ಏಳು ದಿನಗಳಾದ ಮೇಲೆ ಅಲ್ಲಿಂದ ರಾಯನಿಂದ ಪಡೆದ ಬೆಲೆಯುಳ್ಳ ಬಳುವಳಿ ಮತ್ತು ಕಾಣಿಕೆಗಳೊಂದಿಗೆ ವಧುವನ್ನು 'ಸುಲ್ತಾನನ' ಬಿಡಾರಕ್ಕೆ ಕರೆತಂದರು. ಸುಲ್ತಾನನನ್ನು ನೋಡುವ ತೀವ್ರ ಬಯಕೆಯನ್ನು ದೇವಲರಾಯ

ವ್ಯಕ್ತಪಡಿಸಿದ್ದರಿಂದ ಫಿರೋಜ ಶಾ ತನ್ನ ವಧುವಿನೊಂದಿಗೆ ಮಾವನಾದ ಅವನನ್ನು ಭೇಟಿಯಾಗಲು ಅತ್ಯಂತ ನಯವಿನಯದಿಂದ ಒಪ್ಪಿದ.

ಒಂದು ದಿನ ನಿಶ್ಚಿತಪಡಿಸಿ ಅವನು ಖಾನಖಾನನ್‌ನ ನೇತೃತ್ವದಲ್ಲಿ ಶಿಬಿರವನ್ನು ಬಿಟ್ಟು ತನ್ನ ವಧುವಿನೊಂದಿಗೆ ಬೀಜನಗರಕ್ಕೆ ಹೊರಟ. ದಾರಿಯಲ್ಲಿ ದೇವಲರಾಯ ಬಹಳ ವೈಭವದಿಂದ ಅವನನ್ನು ಎದುರುಗೊಂಡ. ನಗರದ ದ್ವಾರದಿಂದ ಅರಮನೆಗಿದ್ದ ಆರು ಮೈಲು ರಸ್ತೆಯುದ್ದಕ್ಕೂ ಬಂಗಾರದ, ತುಪ್ಪಳಿನ, ಸ್ಯಾಟಿನ್ ಬಟ್ಟೆಗಳು ಮತ್ತು ಇನ್ನಿತರ ಬೆಲೆಯುಳ್ಳ ದ್ರವ್ಯಗಳಿಂದ ಹಾಸಲಾಗಿತ್ತು. ಇಬ್ಬರೂ ರಾಜರು ಸುಂದರ ಹುಡುಗ ಹುಡುಗಿಯರ ಸಾಲುಗಳ ಮಧ್ಯ ಕುದುರೆಯ ಮೇಲೆ ಕುಳಿತು ಸಾಗಿದರು. ಅವರು ಮುಂದೆ ಸಾಗುತ್ತಿದ್ದಂತೆ ಹುಡುಗ ಹುಡುಗಿಯರು ಅವರ ತಲೆಯ ಮೇಲೆ ಸುವರ್ಣ ತಟ್ಟೆಗಳನ್ನು ಮತ್ತು ಬೆಳ್ಳಿಯ ಹೂಗಳನ್ನು[2] ಬೆಳಗುತ್ತಿದ್ದರು. ನಂತರ ಅವುಗಳನ್ನು ನೆರವಿ ಹಿಡಿದುಕೊಳ್ಳುವಂತೆ ಅವರತ್ತ ಎಸೆಯುತ್ತಿದ್ದರು. ಇದಾದ ತರುವಾಯ ನಗರದ ನಿವಾಸಿಗಳು, ಪುರುಷ ಸ್ತ್ರೀಯರಿಬ್ಬರೂ, ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಕಾಣಿಕೆಗಳನ್ನು ಅರ್ಪಿಸಿದರು. ಓಣಿಗಳಲ್ಲಿ ಗುಂಪು ಗುಂಪಾಗಿ ಸಾಲುಗಟ್ಟಿದ್ದ ದೇವಲರಾಯನ ಸಂಬಂಧಿಕರು ನಗರ ಮಧ್ಯದಲ್ಲಿದ್ದ ಚೌಕದಲ್ಲಿ[3] ನೇರವಾಗಿ ಹಾಯ್ದುಬಂದು ತಮ್ಮ ಪ್ರಣಾಮ ಹಾಗೂ ಕಾಣಿಕೆಗಳನ್ನು ಸಲ್ಲಿಸಿ ಪಾದಮೆರವಣಿಗೆಯನ್ನು ಕೂಡಿಕೊಂಡು ರಾಜರ ಮುಂದೆ ಮುಂದೆ ನಡೆದರು. ಅರಮನೆಯ ಬಾಗಿಲಿಗೆ ಅವರು ಬರುತ್ತಲೆ ಸುಲ್ತಾನ ಮತ್ತು ರಾಯ ಕುದುರೆಗಳಿಂದ ಇಳಿದರು ಮತ್ತು ಅಮೂಲ್ಯವಾದ ಮಣಿಗಳನ್ನು ಜೋಡಿಸಿದ ಪಲ್ಲಕ್ಕಿ ಏರಿದರು. ಅದರಲ್ಲಿ ಅವರನ್ನು ವಧೂವರರ ಸ್ವಾಗತಕ್ಕಾಗಿ ಸಿದ್ಧಪಡಿಸಲಾಗಿದ್ದ ಕೊಟಡಿಗಳಿಗೆ ಹೊತ್ತೊಯ್ಯಲಾಯಿತು. ಅಲ್ಲಿ ದೇವಲರಾಯ ಬೀಳ್ಕೊಂಡು ತನ್ನ ಅರಮನೆಗೆ ಮಲಗುವುದಕ್ಕೆ ಹೋದ. ಮೂರು ದಿನಗಳ ವರೆಗೆ ರಾಜವೈಭವದಿಂದ ನೋಡಿಕೊಳ್ಳಲಾದ ಬಳಿಕ ಸುಲ್ತಾನ ರಾಯನಿಂದ ಬೀಳ್ಕೊಂಡ. ರಾಯ ಅವನ ಮೇಲೆ ಮೊದಲಿಗಿಂತಲೂ ಬೆಲೆಯುಳ್ಳ ಕಾಣಿಕೆಗಳನ್ನು ಆಗ್ರಹಪಡಿಸಿ ಕೊಟ್ಟು ಅವನ ಜೊತೆಗೆ ನಾಲ್ಕು ಮೈಲು ದಾರಿ ಸಾಗಿ ನಗರಕ್ಕೆ ಹಿಂತಿರುಗಿದ.

"ಅವನು ತನ್ನ ಬಿಡಾರದ ವರೆಗೆ ಬರದಿದ್ದುದಕ್ಕಾಗಿ ಸುಲ್ತಾನ ಫಿರೋಜ ಶಾ ಸಿಟ್ಟಿಗೆದ್ದ ಮತ್ತು ಅವನು ತನಗೆ ಇಂಥ ಅಸಡ್ಡೆಯಿಂದ ಉಂಟುಮಾಡಿದ ಅಪಮಾನದ ಸೇಡನ್ನು ಒಂದು ದಿನ ತೆಗೆದುಕೊಳ್ಳುವೆನೆಂದು ಮೀರ ಫಜಲ್ ಉಲ್ಲಾನ ಎದುರು ಹೇಳಿದ. ದೇವಲರಾಯನಿಗೆ ಈ ಸುದ್ದಿ ತಿಳಿಸಲಾಗಿ ಅವನು ಕೆಲವು ಸೊಕ್ಕಿನ ಮಾತು ಆಡಿದ. ಇದರಿಂದಾಗಿ ಕೌಟುಂಬಿಕ ಸಂಬಂಧವಿದ್ದರೂ ಸಹ ಅವರ ದ್ವೇಷ ಸಾಂತ್ವನಗೊಳ್ಳಲಿಲ್ಲ."

ಇದಾದನಂತರ ಫಿರೂಜ್ ತನ್ನ ರಾಜಧಾನಿಗೆ ಮರಳಿದ ಮತ್ತು ಲಾವಣ್ಯವತಿ ಪರ್ತಾಲಳನ್ನು ಕರೆಕಳಿಸಿದ. ಅವಳ ಸೌಂದರ್ಯ ಎಲ್ಲ ವದಂತಿಗಳನ್ನು ಮೀರಿದು ದಾಗಿರುವುದನ್ನು ಕಂಡು ಅವಳನ್ನು ತನ್ನ ಜ್ಯೇಷ್ಠ ಪುತ್ರ ಹಸನ್‌ಖಾನ್‌ನಿಗೆ ಮದುವೆ ಮಾಡಿಕೊಟ್ಟ. "(ವಿವಾಹ) ಬಂಧವನ್ನು ಬಹಳ ಸಂತೋಷ ಸಂಭ್ರಮಗಳು ಹಾಗೂ ರಾಜವೈಭವದಲ್ಲಿ ಕಟ್ಟಲಾಯಿತು. ಆ ಮಹಿಳೆಯ ಗಂಡನನ್ನು ಫಿರಿಸ್ತಾ "ದುರ್ಬಲ ಹಾಗೂ ದುರ್ವ್ಯಸನಿ ರಾಜಕುಮಾರ" ಎಂದು ವರ್ಣಿಸಿದ್ದಾನೆ. ಅವನು ಸಿಂಹಾಸನದ ವಾರಸುದಾರನಾಗಿದ್ದ, ಆದರೆ ವೀರ ಅಹ್ಮದ್ "ಖಾನಖಾನನ್" ಅವನನ್ನು ಸುಲಭ ವಾಗಿ ಪದಚ್ಯುತಗೊಳಿಸಿದ. ಅವನು ಫಿರುಜಾಬಾದಿನಲ್ಲಿ "ಸಂಪೂರ್ಣವಾಗಿ ಆಲಸ್ಯ ಮತ್ತು ಭೋಗಗಳಿಗೆ ಮುಡಿಪಾಗಿ" ಖಾಸಗಿ ಜೀವನ ಸಾಗಿಸಿದ ನಾವು ಅವನ ಬಗೆಗೆ ಕೊನೆಯದಾಗಿ ಕೇಳುವದೇನೆಂದರೆ ಅತಿಕ್ರಮಿಸಿದ ಅವನ ಕಕ್ಕ ಮೊದಲನೆಯ ಅಹ್ಮದ್ ಶಾಹ ಅವನನ್ನು ಕರುಣೆಯಿಂದ ನೋಡಿಕೊಂಡ, "ಅವನ ವಾಸ್ತವ್ಯಕ್ಕಾಗಿ ಫಿರೋಜಾಬಾದದ ಅರಮನೆಯನ್ನು, ವಿಶಾಲ ಜಾಗೀರನ್ನು, ಸಮಯ ಅಥವಾ ರೀತಿಯ ನಿರ್ಬಂಧವಿಲ್ಲದೆ ತನ್ನ ಅರಮನೆಯ ಸುತ್ತಲೂ ಎಂಟು ಮೈಲುಗಳೊಳಗೆ ಬೇಟೆಯಾಡುವ ಅಥವಾ ಸುಖ ಪಡೆಯಲು ಅನುಮತಿ ನೀಡಿದ". ಹಸನ "ಸಾಮ್ರಾಜ್ಯದ ಜವಾಬ್ದಾರಿಗಿಂತ ವಿಷಯಲೋಲುಪತೆಯ ಅಧಿಕಾರದಿಂದಲೆ ಹೆಚ್ಚು ತೃಪ್ತನಾದ. ಅವನ ಕಕ್ಕ ಜೀವಿಸುವವರೆಗೆ ಅವನು ತನ್ನ ಸುಖ ಅನುಭವಿಸಿದ, ಮತ್ತು ಅವರೀರ್ವರ ಮಧ್ಯೆ ಯಾವ ಭೇದವೂ ಉಂಟಾಗಲಿಲ್ಲ. ಆದರೆ ನಂತರ ಅವನನ್ನು ಕುರುಡ ನನ್ನಾಗಿಸಿ ಫಿರೋಜಾಬಾದ ಅರಮನೆಯಲ್ಲಿ ಗೃಹಬಂಧನದಲ್ಲಿಡಲಾಯಿತು." ಇದು ಕ್ರಿ.ಶ. ೧೪೩೪ರ ತರುವಾಯ ಆಗಿರಬೇಕು.

ಒಂದನೆಯ ದೇವರಾಯ ಕನಿಷ್ಠ ಪಕ್ಷ ಕ್ರಿ.ಶ. ೧೪೧೨ರ ವರೆಗೆ ಬದುಕಿದನು, ಮತ್ತು ಅವನ ನಂತರ ಅವನ ಮಗ ವೀರವಿಜಯ ಪಟ್ಟಕ್ಕೆ ಬಂದ. ನೂನಿಜ್ ಅವನನ್ನು "ವಿಸಯ" ಎಂದು ಕರೆಯುತ್ತಾನೆ ಮತ್ತು ಅವನು ಆರು ವರ್ಷ ರಾಜ್ಯವಾಳಿದನೆಂದು ಹೇಳುತ್ತಾನೆ. ಒಂದನೆಯ ದೇವರಾಯನ ಲಭ್ಯವಿರುವ ಕೊನೆಯ ಶಾಸನದ ಕಾಲ ಕ್ರಿ.ಶ. ೧೪೧೨-೧೩ ಎಂದು ಮತ್ತು ಅವನ ಉತ್ತರಾಧಿ ಕಾರಿ ವಿಜಯನ ಪ್ರಥಮ ಶಾಸನ ಕ್ರಿ.ಶ. ೧೪೧೩-೧೪ ಎಂದು ನಿರ್ಧರಿತವಾಗಿವೆ. ವಿಜಯನ ಕೊನೆಯ ಗೊತ್ತಿರುವ ಶಾಸನ ಕ್ರಿ.ಶ. ೧೪೧೬-೧೭ರದು ಮತ್ತು ಅವನ ಉತ್ತರಾಧಿಕಾರಿಯಾದ ಅವನ ಜೇಷ್ಠ ಪುತ್ರ ಎರಡನೆಯ ದೇವರಾಯನ ಇದುವರೆಗೆ ಗೊತ್ತಿರುವ ಪ್ರಥಮ ಶಾಸನದ ಕಾಲ ಸೋಮವಾರ, ೨೬, ೧೪೨೪-೨೪ ಎಂದು ನಿರ್ಧರಿತವಾಗಿದೆ. ನೂನಿಜ್ ಎರಡನೆಯ ದೇವರಾಯನಿಗೆ ಇಪ್ಪತ್ತೈದು ವರ್ಷಗಳ ಆಳಿಕೆ ನೀಡುತ್ತಾನೆ.

ಕೆಳಗಿನ ಕಾರಣಕ್ಕಾಗಿ ನಾನು ಎರಡನೆಯ ದೇವರಾಯ ತನ್ನ ಆಳಿಕೆಯನ್ನು ೧೪೧೯ರಲ್ಲಿ ಆರಂಭಿಸಿದನೆಂದು ಭಾವಿಸುವ ಒಲವುಳ್ಳವನಾಗಿದ್ದೇನೆ. ನೂನಿಜ್‌ನ

ಬಾತವಿದಾರರು ತನ್ನ ಆಳಿಕೆಯಲ್ಲಿ ವಿಜಯ "ಹೇಳುವಂತಹದೇನನ್ನೂ ಮಾಡಲಿಲ್ಲ" ಎಂದು ಹೇಳುತ್ತಾರೆ ಮತ್ತು ದಿನಚರಿ ದಾಖಲಿಸುವುದೇನೆಂದರೆ ತದನಂತರ ಅರ್ಥಾತ್ ಎರಡನೆಯ ದೇವರಾಯನ ಆಳಿಕೆಯಲ್ಲಿ "ಸತತ ಯುದ್ಧ" ಇತ್ತು. ಆದರೆ ಫಿರಿಸ್ತಾನಿಂದ ತಿಳಿದುಬರುವುದೇನೆಂದರೆ ೧೪೧೭ರಲ್ಲಿ ಕಲಬರ್ಗಾದ ಸುಲ್ತಾನ ಫಿರೂಜ್ ತೆಲಂಗಾಣದ ಹಿಂದೂಗಳ ವಿರುದ್ಧ ಕಾಲುಕೆದರಿ ಯುದ್ಧ ಹೂಡಿದ. ಅವನು ಅದೋನಿಯ ವಾಯುವ್ಯದಲ್ಲಿ ಎಪ್ಪತ್ತು ಮೈಲಿ ದೂರದಲ್ಲಿರುವ ಪಾಂಗುಲ[9] ಕೋಟೆಗೆ ಎರಡು ವರ್ಷ ಕಾಲ ಮುತ್ತಿಗೆ ಹಾಕಿದ, ಆದರೆ ಸೈನಿಕರು ಮತ್ತು ಕುದುರೆಗಳು ಎರಡರಲ್ಲೂ ಅಂಟುರೋಗ ಹರಡಿದುದರಿಂದ ಅದನ್ನು ಅಡಗಿಸುವ ಯತ್ನ ವಿಫಲವಾಯಿತು.

"ಉಚ್ಚ ಕುಲೀನರಲ್ಲಿ ಅನೇಕರು ಶಿಬಿರ ತ್ಯಜಿಸಿ ತಮ್ಮ ಅನುಯಾಯಿಗಳೊಂದಿಗೆ ತಮ್ಮ ತಮ್ಮ ಜಾಗೀರುಗಳಿಗೆ ಪಲಾಯನಗೈದರು. ಈ ಸಂದಿಗ್ಧ ಸಮಯದಲ್ಲಿ ದೇವಲರಾಯ ತನ್ನ ಸೈನ್ಯ ಜಮಾಯಿಸಿದ, ತೆಲಂಗಾಣ (ವಾರಂಗಲ್)ದ ರಾಜನ ವರೆಗೂ ಎಲ್ಲ ಸುತ್ತಮುತ್ತಲಿನ ರಾಜರಿಂದ ಸಹಾಯದೊರೆತು ಅಶ್ವದಳ ಹಾಗೂ ಕಾಲ್ದಳಗಳ ಅಪಾರ ಸಮೂಹದೊಂದಿಗೆ ಸುಲ್ತಾನನ ವಿರುದ್ಧ ನಡೆದ".

ಇದು ಕ್ರಿ.ಶ. ೧೪೧೯ರಲ್ಲಿ ಜರುಗಿತು, ಮತ್ತು ತನ್ನ ಇಡೀ ಜೀವನದಲ್ಲಿ "ಹೇಳುವಂಥ ದಾಖಲಿಸುವಂಥ ಏನನ್ನೂ ಮಾಡಿರದ" ಸೋಮಾರಿ ಪ್ರಭು ವಿಜಯನ ಸ್ವಭಾವಕ್ಕೆ ಈ ಉತ್ಸಾಹಿ ಕಾರ್ಯಾಚರಣೆ ಸಂಗತವಾಗದಿರುವುದರಿಂದ ಅವನ ಉತ್ತರಾಧಿಕಾರಿ ದೇವಲರಾಯ ಪಟ್ಟಕ್ಕೆ ಬಂದ ಕೂಡಲೆ ಇದು ಜರುಗಿತೆಂದು ನಾವು ಗ್ರಹಿಸಬೇಕು ; ಆಗ ಅವನ ಸುತ್ತಲೂ ಇದ್ದ ಕುಲೀನರು (ಅವನು ಆಳಲು ಆರಂಭಿಸಿದಾಗ ಬಹಳ ಚಿಕ್ಕವನಿದ್ದನೆಂದು ನಾನು ಭಾವಿಸುತ್ತೇನೆ)[10] ಉತ್ಸಾಹ ಮತ್ತು ಮಹತ್ವಾಕಾಂಕ್ಷೆಭರಿತರಾಗಿ ಹಿಂದೂ ಸೈನ್ಯವನ್ನು ಹುರಿದುಂಬಿಸಿದರು ಮತ್ತು ರಾಜನ ಹೆಸರಿನಲ್ಲಿ ತಮ್ಮ ನಾಡಿನ ಆನುವಂಶಿಕ ಶತ್ರುವಿನ ವಿರುದ್ಧ ಯುದ್ಧದಲ್ಲಿ ಧುಮುಕಿದರು.

ಇದು ಸರಿ ಇದ್ದುದಾದರೆ, ಎರಡನೆಯ ದೇವರಾಯನ ಆಳಿಕೆ ನೂನಿಜ್ ಹೇಳಿದಂತೆ ಇಪ್ಪತ್ತೈದು ವರ್ಷ ಬಾಳಿತ್ತೆಂದು ಒಪ್ಪಿದರೂ ಸಹ ಕ್ರಿ.ಶ. ೧೪೪೪ರಲ್ಲಿ ಕೊನೆಗೊಂಡಿತು. ಈ ದೇವರಾಯನ ಉತ್ತರಾಧಿಕಾರಿ ಮಗ "ಪೀಣರಾವ್"[11] ಹೇಗೆ ತನ್ನ ಸೋದರಳಿಯನಿಂದ ವಿಷ ಕಠಾರಿಯಿಂದ ಹೊಡೆಯಲ್ಪಟ್ಟ ಮತ್ತು ಗಾಯದ ಪರಿಣಾಮದಿಂದಾಗಿ ಆರು ತಿಂಗಳಾದ ಮೇಲೆ ಸತ್ತ ಎಂಬುದನ್ನು ದಿನಚರಿ ಮುಂದುವರಿದು ಹೇಳುತ್ತದೆ. ಸಮಕಾಲೀನನೂ ಆ ಸಮಯಕ್ಕೆ ವಿಜಯನಗರ ದಲ್ಲಿದ್ದವನೂ ಆದುದರಿಂದ ಅಬ್ದುರ್ ರಜ್ಜಾಕ್ ಹೆಚ್ಚು ನಂಬಲರ್ಹನು. ಅವನೂ

ಎರಡನೆಯ ದೇವರಾಯನ ಅದೇ ಕತೆಯನ್ನು ಹೇಳುತ್ತಾನೆ. ಆದರೆ ಭಾವೀ ಹಂತಕ ರಾಜನ ತಮ್ಮನೆಂದು ಹೇಳಿ ತೇದಿಯನ್ನು ರವಷ್ಟೂ ಸಂದೇಹದ ಛಾಯೆಯಿಲ್ಲದಂತೆ ಖಚಿತಗೊಳಿಸುತ್ತಾನೆ. ಆ ಘಟನೆ ನವಂಬರ ೧೪೪೨ ಮತ್ತು ಏಪ್ರಿಲ್ ೧೪೪೩ರ ನಡುವಿನ—ರಜ್ಜಾಕನ ಕ್ಯಾಲಿಕಟ್ ಸಂದರ್ಶನದ ಹೊರವಿಂತಿಗಳು—ಒಂದು ದಿನ ಜರುಗಿತು. ತಾನು ಆ ಊರಿನಲ್ಲಿರುವಾಗ ಅದು ಜರುಗಿತೆಂದು ಅವನು ಹೇಳುತ್ತಾನೆ. ಅಬ್ದುಲ್ ರಜ್ಜಾಕ್ ರಾಜನ ಮರಣವನ್ನು ಉಲ್ಲೇಖಿಸುವುದಿಲ್ಲ, ಮತ್ತು ಆದುದರಿಂದ ಅದು ಡಿಸೆಂಬರ ೧೪೪೩ರಲ್ಲಿ ಪ್ರವಾಸಿ ರಾಜಧಾನಿ ಬಿಡುವ ವರೆಗೆ ಸಂಭವಿಸಿರಲಿಲ್ಲ. ನೂನಿಜ್‌ನ "ಆರು ತಿಂಗಳು"ಗಳ ಬಗೆಗೆ ನಾವು ಬಹಳ ನಿರ್ದಿಷ್ಟವಾಗಬೇಕಿಲ್ಲವೆಂಬ ಗ್ರಹಿಕೆಯನ್ನಾಧರಿಸಿ ಆಕ್ರಮಣವನ್ನು ೧೪೪೨ರ ಏಪ್ರಿಲ್ ತಿಂಗಳ ಸುಮಾರಿಗೆ ಮಾಡಲಾಯಿತೆಂದು ಮತ್ತು ಎರಡನೆಯ ದೇವರಾಯ ಕ್ರಿ.ಶ. ೧೪೪೪ರ ತರುಣದಲ್ಲಿಯೆ ತೀರಿಕೊಂಡನೆಂದು ತೀರ್ಮಾನಿಸಬಹುದು. ಆದರೂ ಕೂಡ ಶಾಸನಗಳು ಕ್ರಿ.ಶ. ೧೪೪೯ರಷ್ಟು ತಡವಾಗಿಯೂ ದೇವರಾಯನೊಬ್ಬನ ಹೆಸರು ಉಲ್ಲೇಖಿಸುವುದರಿಂದ ಕೆಳಗೆ ಗಮನಿಸುವಂತೆ ಒಂದು ಕ್ಲಿಷ್ಟತೆ ಒದಗುತ್ತದೆ. ಆದರೆ, ಇವನು ಅದೇ ಹೆಸರಿನ ಇನ್ನೊಬ್ಬ ರಾಜ ಇದ್ದಿರುವ ಸಾಧ್ಯತೆಯಿದೆ.

ಮೇಲ್ಕಾಣಿಸಿದ ಸಂಗತಿಗಳನ್ನು ಜೋಡಿಸಿದರೆ ಎರಡನೆಯ ದೇವರಾಯನ ಇಪ್ಪತ್ತೈದು ವರ್ಷದ ಆಳಿಕೆ ಕ್ರಿ.ಶ. ೧೪೧೯ ಮತ್ತು ೧೪೪೪ರ ಮಧ್ಯೆ ಇರುವುದು ಕಂಡು ಬರುತ್ತದೆ.

---

1 ಕಥೆ ಹೇಳುವವ ನಿಷ್ಠಾವಂತ ಮುಹಮ್ಮದೀಯನೆಂಬುದನ್ನು ನಾವು ನೆನಪಿಡಬೇಕು. ಮುದಕಲ್ ಎರಡೂ ರಾಜ್ಯಗಳ ಮಧ್ಯೆ ಯಾವಾಗಲೂ ವಾದಗ್ರಸ್ತವಾಗಿದ್ದ ಪ್ರದೇಶದಲ್ಲಿತ್ತು.

2 ಸುಮಾರು ನಲವತ್ತು ಮೈಲು.

3 ಬ್ರಿಗ್ಸ್ ಅವಳನ್ನು "ನಿಹಾಲ್" ಎಂದು ಹೆಸರಿಸುತ್ತಾನೆ.

4 "೮೪೭ನೆಯ ವರ್ಷದ ಆರಂಭಕ್ಕೆ" ಎಂದು ಬ್ರಿಗ್ಸ್ ಹೇಳುತ್ತಾನೆ. ಇದು ಜೂನ್ ತಿಂಗಳಾಗಿರುವುದು ಮತ್ತು ನಂತರದ ತಿಂಗಳುಗಳು ಸೈನ್ಯಗಳ ನಡೆಗೆ ಅನನುಕೂಲವಾಗಬಹುದಿತ್ತು. ನಾನು ಸ್ಕಾಟ್‌ನ ಕಥನಭೇದವನ್ನು ಮೆಚ್ಚುತ್ತೇನೆ.

5 ಫಿರಿಸ್ತಾ ಸಾಮಾನ್ಯವಾಗಿ ಈ ಸ್ಥಳವನ್ನು "ಬೀಕಾಪೋರ್" ಎಂದು ಕರೆಯುತ್ತಾನೆ. (ಸ್ಕಾಟ್, i ೪೭, ೬೯, ೮೫, ೮೬ ಇತ್ಯಾದಿ), ಆದರೆ ಪು. ೩೦೧ರಲ್ಲಿ "ಬಿಂಕಾಪೋರ್" ಎಂದು ಬರೆದಿದ್ದಾನೆ. ಬಂಕಾಪುರ ಕರ್ನಾಟಕದಲ್ಲಿ ಮುಖ್ಯ ಕೋಟೆಗಳಲ್ಲೊಂದಾಗಿತ್ತು. ಅದು ನಮ್ಮ ದಿನಚರಿಗಳ "ಬೆಂಗಾಪೂರ" ಅಥವಾ "ವೆಂಗಾಪೂರ್" (ಮುಂದೆ ಪು. ೧೨೨ ನೋಡಿರಿ.)

6 ಇದು ಕೂಡ ಮುಹಮ್ಮದೀಯ ಶಿಬಿರ/ವಿಜಯನಗರದ ದಕ್ಷಿಣಕ್ಕೆ ಇರುವ ಹೊಸಪೇಟೆಯ ನೆರೆಹೊರೆಯಲ್ಲಿ ಇದ್ದುದನ್ನು ಸೂಚಿಸುತ್ತದೆ.

7 "ಧೂಪ ಮತ್ತು ಬೆಳ್ಳಿಯ ಹೂಗಳಿದ್ದ ಬಂಗಾರದ ಪಟ್ಟಿಗಳು"—ಬ್ರಿಗ್ಸ್ (ii ೩೮೬)

8 ಈ ಚೌಕವೆಂದರೆ ನೂನಿಜ್ ಮತ್ತು ಪ್ಯಾಸ್ ಉಲ್ಲೇಖಿಸಿರುವ ಬಯಲು ಸ್ಥಳ. ಮೆರವಣಿಗೆ ಮುಂದುವರಿದಂತೆ ಅದರ ಎಡಕ್ಕೆ ಅರಮನೆಯಿತ್ತು.

9 ಸ್ಕಾಟ್ "ಮಂಕುಲ್" (i, ೯೦) ಎಂದಿಟ್ಟುಕೊಂಡಿದ್ದಾನೆ, ಮತ್ತು ಬ್ರಿಗ್ಸ್ (ii, ೩೮೯) ಅವನ್ನು ನಿಸ್ಸಂಶಯವಾಗಿಯೂ ಸರಿಯಿರುವ "ಮಂಗುಲ್" ಎಂದು ತಿದ್ದುತ್ತಾನೆ.

10 ಅವನ ತಾತ ಒಂದನೆಯ ದೇವರಾಯ ತನ್ನ ಆಳಿಕೆಯ (ಕ್ರಿ.ಶ. ೧೪೦೬) ಆರಂಭದಲ್ಲಿ ಪ್ರಣಯಾಸಕ್ತ ಸಂಚು ಮತ್ತು ಸಾಹಸಗಳಲ್ಲಿ ತೊಡಗುವಷ್ಟು ಹರೆಯದವನಾಗಿದ್ದ, ಮತ್ತು ಹೆಚ್ಚೆಂದರೆ ಏಳು ವರ್ಷ ಮಾತ್ರ ಆಳಿದ. ಅವನ ಉತ್ತರಾಧಿಕಾರಿ ಮಗ ವಿಜಯ ಕೇವಲ ಆರು ವರ್ಷ ಆಳಿದ. ಆದುದರಿಂದ, ವಿಜಯನ ಮಗ ಕ್ರಿ.ಶ. ೧೪೧೯ರಲ್ಲಿ ಪಟ್ಟಕ್ಕೆ ಬಂದಾಗ ಕೇವಲ ಹುಡುಗನಾಗಿದ್ದ.

11 ಪೀಣ=ಚಿನ್ನ (ತೆಲುಗು) ಅಥವಾ ಚಿಕ್ಕ (ಕನ್ನಡ)=ಅಂದರೆ ಸಣ್ಣ ಅಥವಾ ಹರೆಯದ ಎಂದರ್ಥ. (ಕ್ರಿ.ಶ. ೧೬೧೪ರ ಘಟನೆಗಳನ್ನು ಕುರಿತು ಮುಂದೆ ಪು. ೨೨೨tt ನಲ್ಲಿ ಬ್ಯಾರಡಸ್ ಹೇಳುವ ಕತೆಯನ್ನು ನೋಡಿರಿ). ಈ ಹೆಸರು ದಕ್ಷಿಣ ಭಾರತದಲ್ಲಿ ಬಹಳ ಪ್ರಚಲಿತವಿದ್ದು ಸಾಮಾನ್ಯವಾಗಿ ಯುವರಾಜನಿಗೆ ಅನ್ವಯಿಸುತ್ತಿತ್ತು.

## ಅಧ್ಯಾಯ ೬

# ಎರಡನೆಯ ದೇವರಾಯ(ಕ್ರಿ.ಶ.೧೪೧೯ ರಿಂದ ೧೪೪೪ ಅಥವಾ(?) ೧೪೪೯)

**ಪುನಃ ಯುದ್ಧ; ೧೪೧೯-ವಿಜಯನಗರದ ಯಶಸ್ಸು-ಫಿರುಜನ ಮರಣ-ಸುಲ್ತಾನ ಅಹ್ಮದ ದೇವರಾಯನ ಮೇಲೆ ಆಕ್ರಮಣ ಮಾಡುವುದು-ದೇವರಾಯನ ಸಾಹಸ ಮತ್ತು ಅಲ್ಪ ಅಂತರದಿಂದ ಪಾರಾಗುವಿಕೆ-ನಗರದ ದ್ವಾರದಲ್ಲಿ ಅಹ್ಮದ-ಅವನು ಪ್ರಾಣ ಕಳೆದುಕೊಳ್ಳುವದರಲ್ಲಿದ್ದ-ದೇವರಾಯನ ಶರಣಾಗತಿ-ವಾರಂಗಲ್ಲಿನ ಪತನ ಸುಲ್ತಾನ ಅಲಾಉದ್ದೀನ-ದೇವರಾಯನ ಮುಂಜಾಗ್ರತೆಗಳು-ಅವನ ಹತ್ಯೆಯ ಯತ್ನ, ೧೪೪೩-ಅಬ್ದುಲ್ ರಜ್ಜಾಕ್ ಹೇಳಿದ ಕಥನ-ಕಲಬರ್ಗಾದ ವಿರುದ್ಧ ದಂಡಯಾತ್ರೆ-ರಾಜಧಾನಿಯಲ್ಲಿ ಸುಧಾರಣೆ-ರಾಜನ ಮರಣದ ಸಂಭವನೀಯ ತೇದಿ-ಮೂರನೆಯ ದೇವರಾಯನೆಂಬ ರಾಜ ಇದ್ದನೆ ?**

ಹಾಗಾದರೆ, ಎರಡನೆಯ ದೇವರಾಯ ವಿಜಯನಗರದ ರಾಜನಾಗಿದ್ದು ಕಲಬರ್ಗಾದೊಂದಿಗೆ೧೪೧೯ರಲ್ಲಿ ಯುದ್ಧ ಜರುಗಿತು.ಸುಲ್ತಾನನು ವಾರಂಗಲ್ ಕೋಟೆಯ ಮೇಲಿನ ಆಕ್ರಮಣದಲ್ಲಿ ಯಶಸ್ವಿಯಾಗಿರಲಿಲ್ಲ, ಮತ್ತು ವಿಜಯನಗರದ ಸೈನಿಕರು ಕುದುರೆ, ಕಾಲ್ಬಳ ಮತ್ತು ಆನೆಗಳೊಂದಿಗೆ ಅವನ ವಿರುದ್ಧ ನಡೆದರು. ತನ್ನ ಸೈನಿಕರು ಕೆಳಮಟ್ಟದವರೆಂದು ಭಾವಿಸಿದರೂ ಫಿರುಜ್ ಶಾಹ ಯುದ್ಧ ಮಾಡಿದ. ಯುದ್ಧ ಎಲ್ಲಿ ಜರುಗಿತೆಂದು ಫಿರಿಸ್ತಾ ಹೇಳುವದಿಲ್ಲ.

ಇಸ್ಲಾಮ ಸೈನಿಕರ ನೇತೃತ್ವ ವಹಿಸಿದ್ದ ವೀರ ಫಜಲ್ ಉಲ್ಲಾಹ ಕಾಫಿರರ ಮೇಲೆ ರಭಸದ ಆಕ್ರಮಣ ಮಾಡಿದ, ಮತ್ತು ಅವರ ಮಧ್ಯವ್ಯೂಹವನ್ನು ಹೊಡೆದೋಡಿಸಿ ಅವರ ದಕ್ಷಿಣ ಪಾರ್ಶ್ವದ ಮೇಲೆ ಏರಿಹೋದನು. ಅವನು ವಿಜಯ ಪುಷ್ಪಗಳನ್ನು ಬಳಿದುಕೊಳ್ಳುತ್ತಿದ್ದಾಗ ದೇವಲರಾಯ ಲಂಚ ಕೊಟ್ಟು ಆ ಉದ್ದೇಶಕ್ಕಾಗಿ ಅಣಿ ಮಾಡಿದ್ದ ಸುಲ್ತಾನನ ಅನುಚರರಲೊಬ್ಬ ಅವನ ತಲೆಯ ಮೇಲೆ ಪ್ರಾಣಾಂತಿಕ ಪೆಟ್ಟು ಹಾಕಿದ, ಮತ್ತು ತಕ್ಷಣ ಚಿತ್ರಹಿಂಸೆಯ ಶರಬತ್ ಗಟಗಟ ಕುಡಿದ. ಈ ಆತಂಕ ಘಟನೆ ಆ ದಿನದ ಅದೃಷ್ಟವನ್ನು ಬದಲಿಸಿತು; ಸುಲ್ತಾನ ಸೋತ ಮತ್ತು ಬಹಳ ಪ್ರಯಾಸಪಟ್ಟು ಅತ್ಯಂತ ಆಶ್ಚರ್ಯಕಾರಕ ಮತ್ತು ಧೀರ ಪ್ರಯತ್ನಗಳಿಂದ ರಣರಂಗದಿಂದ ಪಾರಾಗಿಹೋದ. ಹಿಂದೂಗಳು ಮುಸಲ್ಮಾನರ

ಸಾಮೂಹಿಕ ಸಂಹಾರ ಮಾಡಿದರು, ಮತ್ತು ರಣರಂಗದಲ್ಲಿ ಜಗಲಿ ಕಟ್ಟಿ ಅವರ ತಲೆಗಳನ್ನು ಅದರ ಮೇಲಿಟ್ಟರು. ಅವರು ಸುಲ್ತಾನನನ್ನು ಅವನ ನಾಡಿನೊಳಗೇ ಬೆನ್ನಟ್ಟಿದರು, ಅನೇಕ ಸ್ಥಳಗಳನ್ನು ವಶಪಡಿಸಿಕೊಂಡರು, ಅನೇಕ ಮಸೀದೆಗಳನ್ನು ಮತ್ತು ಪವಿತ್ರ ಸ್ಥಳಗಳನ್ನು ಒಡೆದು ಹಾಕಿದರು. ಜನರನ್ನು ದಯೆಯಿಲ್ಲದೆ ಕೊಚ್ಚಿ ಹಾಕಿದರು; ತಮ್ಮ ಕೃತ್ಯಗಳಿಂದ ಅವರು ಯುಗಗಳಿಂದಲೂ ಸಂಚಯಿತವಾಗಿದ್ದ ದ್ವೇಷ ಮತ್ತು ಕೋಪಗಳ ಹೊರೆ ಇಳಿಸುತ್ತಿರುವಂತೆ ತೋರಿತು. ಅಪಾಯ ಸ್ಥಿತಿಯ ತುರ್ತಿನಲ್ಲಿದ್ದ ಸುಲ್ತಾನ ಫಿರೋಜ ಶಾ ಗುಜರಾತದ ಸುಲ್ತಾನನ ನೆರವು ಕೋರಿದ. ಅವನು ಅದೇ ತಾನೆ ಸಿಂಹಾಸನವೇರಿದ್ದರಿಂದ ಯಾವುದನ್ನೂ ನೀಡದವ ನಾಗಿದ್ದ. ಕೊನೆಗೆ ಅವನ ಕಾರ್ಯಾಚರಣೆಗಳ ಅದೃಷ್ಟ ಅನುಕೂಲಕರ ತಿರುವು ಪಡೆಯಿತು ಪದೇಪದೇ ಜರುಗಿದ ಕಾಳಗಗಳ ನಂತರ ವೈರಿಯನ್ನು ಸುಲ್ತಾನನ ಸಹೋದರ ಖಾನಖಾನನ್ ಅವನ ಪ್ರದೇಶಗಳಿಂದ ಹೊರದೂಡಿದನು; ಆದರೆ ಈ ಕಷ್ಟಗಳು ಆ ಹೊತ್ತಿಗೆ ಮುದುಕನಾಗಿದ್ದ ಫಿರೋಜ ಶಾನ ಮನಸ್ಸಿನ ಮೇಲೆ ಪರಿಣಾಮ ಬೀರಿದವು ಮತ್ತು ಅವನು ದೀರ್ಘಕಾಲೀನ ಅನಾರೋಗ್ಯ ಹಾಗೂ ಬಲಗುಂದಿದ ಚೈತನ್ಯಕ್ಕೆ ತುತ್ತಾದ."

ಸೌಂದರ್ಯಮೂರ್ತಿ ಪರ್ತಾಲಳ ಗಂಡನಾದ ತನ್ನ ಮಗ ಅಧಿಕಾರಕ್ಕೆ ಬರ ಬೇಕೆಂಬುದು ಸುಲ್ತಾನನ ಅಪೇಕ್ಷೆಯಾಗಿತ್ತು. ಆದರೆ ಬಹುತೇಕ ಸರದಾರರೆಲ್ಲರ ಬೆಂಬಲ ಪಡೆದು ತನ್ನ ಉದ್ದೇಶಿತ ದುರಾಕ್ರಮಣದ ಈಡೇರಿಕೆಗಾಗಿ ಶಸ್ತ್ರಸಜ್ಜಿತನಾಗಿ ಅಹ್ಮದ ಖಾನಖಾನನ್ ರಾಜಧಾನಿಗೆ ಮುಂದುವರಿದು ಬಂದಾಗ ಫಿರುಜ ತನ್ನ ಇಚ್ಛೆ ಕೈಬಿಟ್ಟು ತನ್ನ ಮಗನ ಬದಲು ಅಹ್ಮದನನ್ನು ಸುಲ್ತಾನನನ್ನಾಗಿ ನಿಯಮಿಸಿದ.

ಫಿರುಜ ಸಪ್ಟಂಬರ ೨೪, ಕ್ರಿ.ಶ.೧೪೨೨ ರಂದು ೧ ತೀರಿಕೊಂಡ, ಮತ್ತು ಖಾನಖಾನನ್ ಒಂದನೆಯ ಅಹ್ಮದ್ ಶಾಹ ಎಂಬ ಹೆಸರಿನಿಂದ ಕಲಬರ್ಗಾದ ಸುಲ್ತಾನನಾದ.

"ತನ್ನ ಪ್ರಜೆಗಳ ಮನಸ್ಸಿನ ಮೇಲೆ ತನ್ನ ಸರಕಾರಕ್ಕೆ ಪ್ರತಿಯಾಗಿ ಪ್ರೀತಿಯನ್ನು ಒತ್ತಿ"ದ ಬಳಿಕ—ಅಂದರೆ, ಬಹುಶಃ ಕೆಲವು ತಿಂಗಳ ಅಂತರದ ನಂತರ—ಹೊಸ ದೊರೆಯ ಪ್ರಥಮ ಕಾರ್ಯವೆಂದರೆ ರಾಯನ ದಾಳಿಗಳಿಗಾಗಿ ಸೇಡು ತೀರಿಸ ಕೊಳ್ಳಲೋಸುಗ ತನ್ನ ಸೈನ್ಯವನ್ನು ಬಲಪಡಿಸುವುದೆ ಆಗಿತ್ತು; ಮತ್ತು ಎಲ್ಲ ಸಿದ್ಧತೆ ಮಾಡಿಕೊಂಡು ಅವನು ಆಕ್ರಮಣ ಮಾಡಲು ನಡೆದ. ದೇವರಾಯನ ದಂಡನಾಯಕರು ತಮ್ಮ ಸೈನಿಕರನ್ನು ಒಟ್ಟುಗೂಡಿಸಿದರು, ವಾರಂಗಲ್ಲಿನ ಸಹಾಯಕ್ಕಾಗಿ ಹೇಳಿಕಳಿಸಿದರು ತುಂಗಭದ್ರಾಕ್ಕೆ ನಡೆದರು ಮತ್ತು ಅಲ್ಲಿ ಬಿಡಾರ ಹೂಡಿದರು. ಇದರಿಂದ ಅವರು ತಮ್ಮ ಯಶಸ್ವಿ ದಾಳಿಯ ಬಳಿಕ ದೋಆಬನಿಂದ

ಹಿಂದೆ ಸರಿದಿದ್ದರೆಂದು ತೋರುತ್ತದೆ,ಹಿಂದೂ ಬಿಡಾರದ ಎದುರುಗಡೆ ನದಿಯ ಉತ್ತರ ದಡದ ಮೇಲೆ ಸುಲ್ತಾನ ನಾವು ಈಗ ರೂಢಿಯಲ್ಲಿದ್ದ ಒಂದು ಶಬ್ದ ಬಳಸಬಹುದಾದರೆ —ಒಂದು ಸುತ್ತುಗಟ್ಟಿ ಪಾಳೆಯ ರಚಿಸಿದ. ವೈರಿಗಳ ಕಾಲ್ದಳ ರಾತ್ರಿ ಆಕ್ರಮಣ ಮಾಡದಂತೆ ತಡೆಯಲು ರೂಮ್ (ಯುರೋಪದಲ್ಲಿ ಟರ್ಕಿ)ನ ರೀತಿಯಲ್ಲಿ ಅವನು ತನ್ನ ಬಿಡಾರವನ್ನು ವಾಹನ (ಬಂಡಿಗಳು ಮತ್ತು ಸರಕು ಬಂಡಿಗಳು)ಗಳಿಂದ ಸುತ್ತುವರಿದಿದ್ದನು, ಇಲ್ಲಿ ಅವನು ನಲವತ್ತು ದಿನ ನಿಂತ" ಎಂದ ಫಿರಿಸ್ತಾ ಹೇಳುತ್ತಾನೆ. ಆದುದರಿಂದ ನಾವು ಬಹುಶಃ ಕ್ರಿ ಶ.೧೪೨೦ನೆಯ ವರ್ಷದಾರಂಭದ ಒಣ ಋತುವಿನಲ್ಲಿದ್ದೇವೆ. ಏಕೆಂದರೆ, ನದಿ ತುಂಬಿ ಹರಿಯುತ್ತಿದ್ದ ಪಕ್ಷದಲ್ಲಿ ವೈರಿ ಅದನ್ನು ದಾಟುವ ಭಯ ಇರುತ್ತಿರಲಿಲ್ಲ. ಕ್ರಿ.ಶ.ದ ಆರಂಭದ ತಿಂಗಳುಗಳಲ್ಲಿ ಆ ನದಿ ಸಾಮಾನ್ಯವಾಗಿ ಹಿಂದೂ ರಾಜಧಾನಿಯ ಪೂರ್ವಕ್ಕಿರುವ ಬಯಲುಸೀಮೆಯಲ್ಲಿ ಮತ್ತು ಅದನ್ನು ಸುತ್ತುಗಟ್ಟಿದ ಗುಡ್ಡಗಳಿಂದ ದೂರದಲ್ಲಿ ಆಳವಿರುವದಿಲ್ಲ. ಆದರ ಕಲ್ಲುಬಂಡೆಯ ಹಾಸಿಗೆಯ ಮೇಲೆ ತೆಳ್ಳಗಿನ ತೊರೆಗಳು ಮಾತ್ರ ಹರಿಯುತ್ತಿರುತ್ತವೆ. ನಿಜ ಹೇಳುವುದಾದರೆ, ಆ ಕಾಲಕ್ಕೆ ನದಿ ದಾಟಬಲ್ಲಂತ ಹದಾಗಿತ್ತೆಂದು ಸ್ವತಃ ಫಿರಿಸ್ತಾ ಹೇಳುತ್ತಾನೆ.

ಆ ಮೇಲೆ ಒಂದು ನಾಟಕೀಯ ಘಟನೆ ಜರುಗಿತು. ಮಹಮ್ಮದೀಯ ಅಶ್ವದಳ ನದಿಯನ್ನು ದಾಟಿತ್ತು ಮತ್ತು ಜಡನಾಗಿದ್ದ ರಾಯನ ನಾಡನ್ನು ನಾಶ ಮಾಡಿತ್ತು, ಮತ್ತು ಸುಲ್ತಾನನು ನೇರದುರಾಗಿ ಮೇಲೆ ಬೀಳಲು ನಿರ್ಧರಿಸಿದನು. ವಾರಂಗಲ್ಲಿನ ಸೈನಿಕರು ರಾಯನ ಕೈಬಿಟ್ಟರು ಮತ್ತು ಹಿಂದೆ ಸರಿದರು.

"ರಾತ್ರಿಯಲ್ಲಿ ದಾರಿ ಕ್ರಮಿಸಿ ದೂರದಲ್ಲಿ ನದಿಯನ್ನು ದಾಟಿದ್ದ ಲೋದಿಖಾನ್ ಆಲಮ್ ಖಾನ್ ಮತ್ತು ದಿಲಾವರ್ ಖಾನ್ ನಸುಕಿನಲ್ಲಿ ಶತ್ರುಬಿಡಾರದ ಹೊರ ವಲಯ ತಲುಪಿದರು. ಏನಾಯಿತೆಂದರೆ, ಅದಕ್ಕೆ ಹೊಂದಿಕೊಂಡೆ ದಟ್ಟ ಕಬ್ಬಿನ ಬೆಳೆಯಿದ್ದ[2] ಉದ್ಯಾನದಲ್ಲಿ ಕೆಲವೇ, ಅನುಚರರನ್ನು ಸೇವೆಗಿಟ್ಟುಕೊಂಡು ರಾಯ ಮಲಗಿದ್ದನು. ಮುಸಲ್ಮಾನರ ಒಂದು ಪಡೆ ಕೊಳ್ಳೆಗಾಗಿ ಉದ್ಯಾನ ಪ್ರವೇಶಿಸಿದರು. ಗಾಬರಿಯಾಗಿ ಎಚ್ಚೆತ್ತ ದೇವಲರಾಯ ಕಬ್ಬಿನ ಹೊಲದಲ್ಲಿ ಹೆಚ್ಚೂ ಕಡಿಮೆ ಬತ್ತಲಾಗಿಯೇ ಓಡಿದ.. ಅಲ್ಲಿ ಅವನು ಸೈನಿಕರ ಕೈಯಲ್ಲಿ ಸಿಕ್ಕ. ಅವರು ಅವನನ್ನು ಸಾಮಾನ್ಯ ಮನುಷ್ಯನೆಂದು ಭಾವಿಸಿ ಅವನ ತಲೆಯ ಮೇಲೆ ಹೊರೆ ಹೊರಿಸಿ ಅವನನ್ನು ತಮ್ಮ ಮುಂದೆ ಓಡುವಂತೆ ಮಾಡಿದರು. ತನ್ನನ್ನು ಗುರುತು ಹಿಡಿಯದುದಕ್ಕೆ ಹಿಗ್ಗಿ ದೇವಲರಾಯ ಶಾಂತಿಯಿಂದಿದ್ದು, ತನ್ನನ್ನು ಬಡ ಮನುಷ್ಯನೆಂದು ಕೈಬಿಡಲಾಗುವುದು ಇಲ್ಲವೆ ತನಗೆ ಪಾರಾಗಲು ಶಕ್ಯವಾಗಬಹುದು ಎಂದು ಆಶಿಸಿ ಹೊರೆಯನ್ನು ಆಂ ಊಂ ಎನ್ನದೆ ಎತ್ತಿಕೊಂಡ.

"ಅವರಿನ್ನೂ ಬಹಳ ದೂರ ಸಾಗಿರಲಿಲ್ಲ. ಸುಲ್ತಾನ ಅಹ್ಮದ ಶಾ ನದಿ ದಾಟಿದ ಹಾಗೂ ರಾಯನ ಕಣ್ಮರೆಯ ಕೂಗು ಬಿಡಾರವನ್ನು ತುಂಬಿತು, ಮತ್ತು ಹಿಂದೂಗಳು ಚದುರತೊಡಗಿದರು. ಸುಲ್ತಾನ ಬಿಡಾರ ಪ್ರವೇಶಿಸಿದ, ಮತ್ತು ದೇವಲರಾಯನ ಒಡೆಯರು ಅವನನ್ನು ಅವನ ಪಾಡಿಗೆ ಬಿಟ್ಟು ಕಬ್ಬಿಗಿಂತ ಹೆಚ್ಚು ಬೆಲೆಯುಳ್ಳ ಕೊಳ್ಳೆಯ ಆಶೆಯಿಂದ ತಮ್ಮ ಗೆಳೆಯರನ್ನು ಕೂಡಿಕೊಳ್ಳಲು ಲಗುಬಗೆಯಿಂದ ನಡೆದರು. ದೇವಲರಾಯ ತನ್ನ ಸೈನಿಕರ ಜೊತೆಗೇ ಓಡಿದ. ಮಧ್ಯಾಹ್ನದ ಸುಮಾರಿಗೆ ತನ್ನ ಕೆಲವು ಮನ್ನೆಯರನ್ನು ಸಮೀಪಿಸಿದ, ಅವರು ಅವನನ್ನು ಗುರುತಿಸಿ ಬಹಳ ಸಂತೋಷದಿಂದ ಅವನನ್ನು ಸ್ವಾಗತಿಸಿದರು. ಅವನು ಸುರಕ್ಷಿತವಾಗಿರುವುದನ್ನು ಅರಿತು ಅವನ ಸೈನ್ಯ ಒಂದು ಕ್ರಮದಲ್ಲಿ ಒಟ್ಟುಗೂಡಿದರು; ಆದರೆ ಇತ್ತೀಚಿನ ಆಕಸ್ಮಿಕವನ್ನು ಅವನು ಅಪಶಕುನವೆಂದು ಪರಿಗಣಿಸಿದುದರಿಂದ ಅವನು ಯುದ್ಧಭೂಮಿಯಲ್ಲಿ ಕಾದುವ ಎಲ್ಲ ವಿಚಾರ ಬಿಟ್ಟು ಬೀಜನಗರಕ್ಕೆ ಓಡಿಹೋದ[3]

"ಅಹ್ಮದ ಶಾ ನಗರದ ಮುತ್ತಿಗೆಯಿಂದ ಮಾತ್ರ ತೃಪ್ತನಾಗದೆ ಬಯಲು ಸೀಮೆಯಲ್ಲಿ ದಂಡು ನುಗ್ಗಿಸಿ ತನ್ನ ಪೂರ್ವದ ಮುಹಮ್ಮದ ಶಾ ಬೀಜನಗರದ ರಾಯರೊಂದಿಗೆ ಮಾಡಿಕೊಂಡ ಒಡಂಬಡಿಕೆಗೆ ವ್ಯತಿರಿಕ್ತವಾಗಿ ದಯೆಯಿಲ್ಲದೆ ಪುರುಷರು, ಮಹಿಳೆಯರು ಮತ್ತು ಮಕ್ಕಳನ್ನು ಕೊಂದುಹಾಕಿದ. ಮಾನವೀಯತೆಗೆ ತಿಲಾಂಜಲಿಯಿತ್ತು, ಕೊಲ್ಲಲ್ಪಟ್ಟವರ ಸಂಖ್ಯೆ ಇಪ್ಪತ್ತು ಸಾವಿರ ತಲುಪಿದಾಗಲೆಲ್ಲ ಅವನು ಮೂರು ದಿನ ನಿಂತು ತನ್ನ ರಕ್ತಪಾತ ಕಾರ್ಯದ ನಿಮಿತ್ತ ಉತ್ಸವ ಆಚರಿಸಿದ. ಅವನು ಮೂರ್ತಿಯಿರುವ ದೇವಾಲಯಗಳನ್ನು ಒಡೆದುಹಾಕಿದ, ಮತ್ತು ಬ್ರಾಹ್ಮಣರ ವಿದ್ಯಾಲಯಗಳನ್ನು ನಾಶಪಡಿಸಿದ. ಈ ಕಾರ್ಯಾಚರಣೆಗಳು ನಡೆದಿರುವಾಗ ಐದು ಸಾವಿರ ಹಿಂದೂಗಳ ಪಡೆ ತಮ್ಮ ವಿನಾಶ ಮತ್ತು ದೇವರ ಅಪಮಾನಗಳಿಂದ ವಿಪರೀತ ರೋಷತಪ್ತರಾಗಿ ತಮ್ಮ ಎಲ್ಲ ಕಷ್ಟಗಳಿಗೆ ಕಾರಣ ಕರ್ತನಾದ ಸುಲ್ತಾನನ ಪ್ರಾಣ ತೆಗೆದುಕೊಳ್ಳುವ ಪ್ರಯತ್ನದಲ್ಲಿ ತಮ್ಮ ಜೀವನವನ್ನೆ ಬಲಿಕೊಡುವ ಪ್ರತಿಜ್ಞೆಗೈಯಲು ಒಕ್ಕಟ್ಟಾದರು. ಈ ಉದ್ದೇಶಕ್ಕಾಗಿ ಅವರು ಕಾರ್ಯಾಚರಣೆಯ ಪ್ರಥಮ ಅವಕಾಶವನ್ನೆ ಉಪಯೋಗಿಸಲೋಸುಗ ಸುಲ್ತಾನನ ಚಲನವಲನಗಳನ್ನು ನಿರೀಕ್ಷಿಸಲು ಬೇಹುಗಾರರನ್ನು ನಿಯಮಿಸಿದರು.

"ಹೀಗಿರುತ್ತಿರಲು ಒಂದು ದಿನ ಸುಲ್ತಾನ ಬೇಟೆಯಾಡಲು ಹೋದಾಗ ಪ್ರಾಣಿಯನ್ನು ಬೆನ್ನಟ್ಟುವ ಆತುರದಲ್ಲಿ ತನ್ನ ಅನುಚರರಿಂದ ಬೇರ್ಪಟ್ಟು ತನ್ನ ಬಿಡಾರದಿಂದ ಸುಮಾರು ಹನ್ನೆರಡು ಮೈಲು ದೂರ ಬಂದ.[4] ಈ ಸುದ್ದಿ ತಿಳಿದ ನಿಷ್ಠ ಕಾಫಿರರು ತಕ್ಷಣ ಅವನನ್ನು ತಡೆಗಟ್ಟಲು ಧಾವಿಸಿದರು ಮತ್ತು ಅವನ ವೈಯಕ್ತಿಕ ಅನುಚರರಾಗಿದ್ದ ಸುಮಾರು ಇನ್ನೂರು ಮೊಗಲರು ಅವನಿಂದ ಸ್ವಲ್ಪ ದೂರವಿದ್ದಾಗ, ಅವನು

ಕಾಣುವಲ್ಲಿಗೆ ಬಂದರು. ಬೆಚ್ಚಿದ ಸುಲ್ತಾನನು ದನಗಳ ಕೊಟ್ಟಿಗೆಯಂತೆ ಬಯಲಿನಲ್ಲಿ ನಿಂತಿದ್ದ ಸಣ್ಣ ಮಣ್ಣಿನ ಆವರಣವನ್ನು ತಲುಪುವ ಆಶೆಯಿಂದ ಕುದುರೆಯನ್ನು ಜೋರಾಗಿ ಓಡಿಸಿದ. ಆದರೆ ಅವನನ್ನು ಎಷ್ಟು ತೀಕ್ಷ್ಣವಾಗಿ ಬೆನ್ನಟ್ಟಲಾಗಿತ್ತೆಂದರೆ ಅವನ ದಾರಿಯಲ್ಲಿದ್ದ ಛಿನ್ನ ಭೂಮಿಯನ್ನು ಅವನನ್ನು ಬೆನ್ನಟ್ಟಿದವರು ಅವನ ಸಮಕ್ಕೆ ಬರುವ ಮುಂಚೆ ಅವನಿಗೆ ದಾಟಲಾಗಲಿಲ್ಲ. ಸುದೈವದಿಂದ ಈ ಕ್ಷಣದಲ್ಲಿ ಕೆಲವು ಬಿಲ್ಲುಗಾರರು ಅವನ ಸಹಾಯಕ್ಕೆ ಬಂದುದರಿಂದ ಸುಲ್ತಾನನು ತನ್ನ ಮಿತ್ರರೊಂದಿಗೆ ಆವರಣ ತಲುಪಲು ದೊರಕುವಷ್ಟು ಸಮಯ ಶತ್ರುಗಳನ್ನು ತಡೆಯಲಾಯಿತು. ಕಾಫಿರರು ಪ್ರವೇಶಿಸಲೆತ್ನಿಸಿದರು ಮತ್ತು ತೀವ್ರ ಕಾಳಗ ಜರುಗಿತು ; ಎಲ್ಲ ನಿಜಭಕ್ತರು ಮತನಿಷ್ಠೆಯನ್ನು ಪುನರುಚ್ಚರಿಸುತ್ತ ಶರಣಾಗತಿಗಿಂತ ಸಾಯುವುದು ಮೇಲೆಂದು ಶಪಥಗೈದರು....ತಮ್ಮ ಸಣ್ಣ ಪಡೆ ಬಹುತೇಕ ಕೊಲ್ಲಲ್ಪಟ್ಟು ಮತ್ತು ಗಾಯಗೊಳಿಸಲ್ಪಟ್ಟು ಆಕ್ರಮಣಕಾರರು ಗೋಡೆಯ ತೀರ ಸಮೀಪಕ್ಕೆ ಮುಂದುವರಿದರು. ಅವರು ಅದನ್ನು ಸುಲ್ತಾನನನ್ನು ತೀರ ಅಪಾಯ ಸ್ಥಿತಿಗೆ ಇಳಿಸುವಂತೆ ಪಿಕಾಸಿ ಮತ್ತು ಕೈಕೊಡಲಿಗಳಿಂದ ಕೆಡವಲಾರಂಭಿಸಿದರು. ಈ ಸಂದಿಗ್ಧ ಸಮಯಕ್ಕೆ ಸುಲ್ತಾನನ ಪ್ರಥಮ ಕವಚವಾಹಿಯಾಗಿದ್ದ ಅಬ್ದ್-ಅಲ್-ಖಾದರ್ ಅಲ್ಲಿಗೆ ಬಂದನು. ಸುಲ್ತಾನನ ಅನುಪಸ್ಥಿತಿಗೆ ಕಾರಣವಾದ ಏನಾದರೂ ಆಕಸ್ಮಿಕ ಜರುಗಬಹುದೆಂದು ಗಾಬರಿಗೊಂಡು ಕೆಲವು ಸೈನಿಕರೊಂದಿಗೆ ತನ್ನ ಪ್ರಭುವಿನ ಶೋಧದಲ್ಲಿ ತನ್ನ ಬಿಡಾರದಿಂದ ಹೊರಟ. ಕಾಫಿರರು ದೊಡ್ಡ ಕಿಂಡಿ ಕೊರೆದು ಪ್ರವೇಶಿಸಲುದ್ಯುಕ್ತರಾದಾಗ ಅದರ ಹಿಂಭಾಗ ಒಮ್ಮೆಲೆ ಆಕ್ರಮಣಕ್ಕೊಳಪಟ್ಟುದು ಕಂಡು ಬಂತು. ಸುಲ್ತಾನನು ತನ್ನ ಉಳಿದ ಗೆಳೆಯರೊಂದಿಗೆ ಅಬ್ದ್-ಅಲ್-ಖಾದಿರ್‌ನ ಜೊತೆಗೂಡಿ ವೈರಿಯ ಮೇಲೆ ಮುಗಿಬಿದ್ದ. ದೀರ್ಘ ಹೋರಾಟದನಂತರ ವೈರಿಗಳನ್ನು ರಂಗದಿಂದ ಹೊಡೆದೋಡಿಸಲಾಯಿತು. ವೈರಿಗಳ ಸಾವಿರ ಜನ ಮೃತಪಟ್ಟರು ಮತ್ತು ಮುಸಲ್ಮಾನರ ಐದುನೂರು ಜನ ಹುತಾತ್ಮರಾದರು. ಹೀಗೆ, ಅಬ್ದ್-ಅಲ್-ಖಾದಿರ್‌ನ ಪ್ರೇರಿತ ಮುಂಜಾಗ್ರತೆಯಿಂದ ಅಪಾಯದ ಆಳದಿಂದ ತನ್ನ ಸಾಮ್ರಾಜ್ಯವನ್ನು ಅನುಭವಿಸಲು ಮತ್ತೊಮ್ಮೆ ಪಟ್ಟಕ್ಕೆ ಬಂದಂತಾಯಿತು.[5] ತಮ್ಮ ಸೈನ್ಯದ ನೇತೃತ್ವ ವಹಿಸಿದ್ದ ಇಬ್ಬರು ದೊರೆಗಳು ಸಾಕಷ್ಟು ಸೈನಿಕರಿಲ್ಲದೆ ಅಪಾಯದಲ್ಲಿ ಸಿಲುಕಿಕೊಂಡರೂ ಇಬ್ಬರೂ ಅಪಾಯವಿಲ್ಲದೆ ಪಾರಾದ ಈ ಗಮನಾರ್ಹ ಘಟನೆ ಕಾಲದ ದಾಖಲೆಗಳಲ್ಲಿ ಸ್ಥಳ ಪಡೆಯಲು ಅರ್ಹವಾಗಿದೆ....

"ಈ ಘಟನೆಯ ನಂತರ ಅಹ್ಮದ್ ಶಾ ಇಡಿ ದೇಶವನ್ನು ನಾಶಗೊಳಿಸಿ ಬೀಜನಗರಕ್ಕೆ ಬಂದು ಅದನ್ನು ಅದರ ನಿವಾಸಿಗಳಿಗೆ ತೀರ ಕಷ್ಟವಾಗುವಂತೆ ಸುತ್ತುಗಟ್ಟಿ ತಡೆಯೊಡ್ಡಿದ. ಆಗ ದೇವಲರಾಯ ತನ್ನ ಜನರನ್ನು ಉಳಿಸಲು ಸುಲ್ತಾನನಲ್ಲಿಗೆ ರಾಯಭಾರಿಗಳನ್ನು ಕಳಿಸಿ ಶಾಂತಿಗಾಗಿ ಮೊರೆಯಿಟ್ಟ. ಆದಕ್ಕೆ ಸುಲ್ತಾನನು ಇದುವರೆಗೆ ಕೊಡಲು ಅಲಕ್ಷಿಸಲಾಗಿದ್ದ ಎಲ್ಲ ವರ್ಷಗಳ ಕಪ್ಪವನ್ನು ದೇವಲರಾಯನು

ಅತ್ಯುತ್ತಮ ಆನೆಗಳ ಮೇಲೆ ಹೇರಿ ತನ್ನ ಮಗನ ನೇತೃತ್ವದಲ್ಲಿ ನಗಾರಿ, ಕಹಳೆ ಮತ್ತು ಎಲ್ಲ ರಾಜ್ಯ ಲಾಂಛನಗಳೊಂದಿಗೆ ತನ್ನ (ಸುಲ್ತಾನನ) ಬಿಡಾರಕ್ಕೆ ಕಳಿಸಿಕೊಡಬೇಕೆಂಬ ಷರತ್ತಿನ ಮೇಲೆ ಒಪ್ಪಿದ.[6] ಅದನ್ನು ಅನುಸರಿಸಲು ನಿರಾಕರಿಸಲಾಗದ ದೇವಲರಾಯ ಬೇಡಿಕೆಗಳನ್ನು ಒಪ್ಪಿ ತನ್ನ ಮಗನನ್ನು ಸಂಪತ್ತು ಮತ್ತು ಬೆಲೆಯುಳ್ಳ ಚರ ಆಸ್ತಿ ಹೇರಿದ ಮೂವತ್ತು ಪ್ರಿಯವಾದ ಆನೆಗಳೊಂದಿಗೆ ಕಳಿಸಿಕೊಟ್ಟ. ಸುಲ್ತಾನನು ಅವನನ್ನು ಎದುರುಗೊಳ್ಳಲು ತನ್ನ ಕೆಲವು ಸರದಾರರನ್ನು ಕಳಿಸಿದ. ಬಿಡಾರದ ಪೇಟೆ ಮತ್ತು ದೊಡ್ಡ ಬೀದಿಗಳಲ್ಲಿ ಹಾಯ್ದು ಅವನನ್ನು ಸುಲ್ತಾನನ ಸನ್ನಿಧಿಗೆ ತರಲಾಯಿತು.[7] ಅವನನ್ನು ಆಲಿಂಗಿಸಿದ ಸುಲ್ತಾನನು ತನ್ನ ಸಿಂಹಾಸನದ ಅಡಿಯಲ್ಲಿ ಕುಳಿತುಕೊಳ್ಳಲು ಅವನಿಗೆ ಅನುಮತಿ ನೀಡಿದನು. ಮತ್ತು ಅವನ ಮೈಮೇಲೆ ಒಂದು ಭವ್ಯ ವಸ್ತ್ರ ತೊಡಿಸಿ, ಮಣಿಗಳನ್ನು ಜೋಡಿಸಿದ ಬಾಗುಕತ್ತಿಯನ್ನು ಅವನು ಸೊಂಟಕ್ಕೆ ಕಟ್ಟಿ ವಿವಿಧ ದೇಶಗಳ ಇಪ್ಪತ್ತು ಸುಂದರ ಕುದುರೆಗಳನ್ನು, ಒಂದು ಗಂಡಾನೆಯನ್ನು, ಬೇಟೆಗಾಗಿ ನಾಯಿಗಳನ್ನು ಮತ್ತು ಕರ್ನಾಟಕಿಯರು ಅದುವರೆಗೆ ಅದರ ಬಳಕೆಗೆ ಅಪರಿಚಿತರಿದ್ದ ಮೂರು ಗಿಡಗಗಳನ್ನು ನೀಡಿದನು. ಅವನು ಆಮೇಲೆ ಬೀಜನಗರದ ಸೆರೆಹೊರೆಯಿಂದ ನಡೆದನು. ಮತ್ತು ಕೃಷ್ಣಾ ನದಿಯ ದಡ ತಲುಪಿದ ಮೇಲೆ ರಾಯನ ಮಗನನ್ನು ಕಳಿಸಿ ಕೂಲಬರ್ಗಾಕ್ಕೆ ಮರಳಿದನು."

ಯುದ್ಧಕಾರ್ಯಾಚರಣೆಯ ಈ ವಿರಾಮದ ತೇದಿಯ ಬಗೆಗೆ ಸ್ವಲ್ಪ ಕಲ್ಪನೆ ಮಾಡಿಕೊಳ್ಳಲು ನಾವು ಫಿರಿಸ್ತಾನ ವೃತ್ತಾಂತದಲ್ಲಿ ಮುಂದೆ ನೋಡಬೇಕು. ಸುಲ್ತಾನನು ಕಲಬರ್ಗಾಕ್ಕೆ ಮರಳಿದ ವರ್ಷ ದಕ್ಷಿಣದಲ್ಲಿ ಘೋರ ಕ್ಷಾಮ ಬಿತ್ತು, ಮತ್ತು "ಮರು ವರ್ಷ ಕೂಡ ಮಳೆ ಬೀಳದ್ದರಿಂದ ಜನ ದಂಗೆಯೆದ್ದರು" ಎಂದು ಚರಿತ್ರಕಾರ ಹೇಳುತ್ತಾನೆ. ಇವೆರಡು ವರ್ಷಗಳು ಬಹುಶಃ ೧೫ನೆಯ ಡಿಸೆಂಬರ, ಕ್ರಿ.ಶ. ೧೪೨೨ ರಿಂದ ೨೩ನೆಯ ನವಂಬರ ೧೪೨೪ರವರೆಗೆ ವ್ಯಾಪಿಸಿದ್ದ ಹಿ.ಶ. ೮೨೬, ೮೨೭ ಆಗಿದ್ದವು. ಅವನು ಮುಂದುವರಿಯುತ್ತ "೮೨೮ನೆಯ ವರ್ಷದಲ್ಲಿ" ಸುಲ್ತಾನನು ವಾರಂಗಲ್ಲಿನ ವಿರುದ್ಧ ಸಾಗಿದನು ಎಂದೂ ಹೇಳುತ್ತಾನೆ. ಕೊನೆಯ ದಂಡಯಾತ್ರೆ ಕ್ರಿ.ಶ. ೧೪೨೨ರ ಡಿಸೆಂಬರ ಸುಮಾರಿಗೆ ಆರಂಭವಾಯಿತು; ರಾಯ ಕರಾರಿನ ಮೇಲೆ ಅಧೀನನಾಗುವಂತೆ ಒತ್ತಾಯಪಡಿಸುವಷ್ಟು ಉಪವಾಸ ಸ್ಥಿತಿಗೆ ನಿವಾಸಿಗಳನ್ನು ಇಳಿಸುವದರಲ್ಲಿ ಪರಿಣಮಿಸಿದ ಅಹ್ಮದನ ವಿಜಯನಗರದ ತಡೆಗಟ್ಟಿಗೆ ಕೆಲವು ತಿಂಗಳು ನೀಡಬೇಕಾದುದರಿಂದ ಯುದ್ಧದ ಮುಕ್ತಾಯದ ತೇದಿಯನ್ನು ನಿಶ್ಚಿತವಾಗಿ ಕ್ರಿ.ಶ. ೧೪೨೩ ಕ್ಕಿಂತ ಮುಂಚೆ ಎಂದು ನಿರ್ಧರಿಸಲಾಗುವುದಿಲ್ಲ. ಈ ಹನ್ನೆರಡು ತಿಂಗಳುಗಳಲ್ಲಿ ಕ್ಷಾಮ ಮತ್ತು ಮಳೆಯ ವೈಫಲ್ಯಗಳಿದ್ದುದರಿಂದ ತೀವ್ರ ಹವಾಮಾನದಲ್ಲಿ ಸೈನಿಕರಿಗೆ ದುರ್ಗಮವಾದ ವಿಜಯನಗರ ಮತ್ತು ಕಲಬರ್ಗಾ ಮಧ್ಯದ ಹತ್ತಿ ಬಯಲುಗಳನ್ನು ಹಾಗಿರದ ಪಕ್ಷದಲ್ಲಿನಕಿಂತ ತುಸು ಮುಂಚಿತವಾಗಿ ದಾಟಲು ಶಕ್ತನಾಗಿರಬಹುದು.

ಆಗ ಬೆಳೆಗಳಿಂದ ಸಮೃದ್ಧವಾಗಿದ್ದ ದಕ್ಖನಿನ ಏರಿಳಿತಗಳುಳ್ಳ ಬಯಲುಗಳ ಮೇಲೆ ಹಾಯ್ದು ವಾರಂಗಲ್ಲಿನ ವಿರುದ್ಧ ಹಿ.ಶ. ೮೨೪ ರಲ್ಲಿ ಸಾಗಿದಾಗ ಸುಲ್ತಾನನ ಮುಂದಿನ ಯುದ್ಧ ಜರುಗಿತು, ಮತ್ತು ಸಂಪೂರ್ಣವಾಗಿ ಯಶಸ್ವಿಯಾಯಿತು. ಹಿಂದೂ ರಾಜ್ಯ ಪೂರ್ತಿಯಾಗಿ ಮತ್ತು ಶಾಶ್ವತವಾಗಿ ನಾಶವಾಯಿತು. ಈ ಘಟನೆಗೆ ನೀಡಲಾದ ಇಂಗ್ಲಿಷ್ ತೇದಿ ಕ್ರಿ.ಶ. ೧೪೨೪. ಆದರೆ ಆ ವಿಷಯ ಕುರಿತು ಬರೆದವರಿಂದ ಕಾಲಾನುಕ್ರಮಣಿಕೆಯ ಕೋಷ್ಟಕದ ದೋಷಪೂರ್ಣ ಬಳಕೆಯಿಂದಾಗಿ ತಪ್ಪು ಸಂಭವಿಸಿರುವ ಸಾಧ್ಯತೆಯುಂಟು, ಮತ್ತು ಅಹ್ಮದ್ ಶಾಹನಿಂದ ವಾರಂಗಲ್ಲಿನ ಸ್ವಾಧೀನ ಕ್ರಿ.ಶ. ೧೪೨೫ರಲ್ಲಿ ಜರುಗಿರಬಹುದು. ಉದಾಹರಣೆಗೆ, ಬ್ರಿಗ್ಸ್ ಹಿ.ಶ. ೮೨೪ ಅನ್ನು "ಕ್ರಿ.ಶ, ೧೪೨೪" ಎಂದು ಕರೆಯುತ್ತಾನೆ. ಆದರೆ ಆ ವರ್ಷ ನವಂಬರ್ ೨೩, ೧೪೨೪ ರಂದು ಮಾತ್ರ ಆರಂಭವಾಯಿತು. ಹಾಗಾದರೂ ದಂಡಯಾತ್ರೆ ಬಲು ಅಲ್ಪ ಕಾಲದ್ದಾಗಿತ್ತು ಮತ್ತು ಆ ವರ್ಷದ ಡಿಸೆಂಬರಿಗಿಂತ ಮುಂಚೆ ಮುಗಿದಿರಬೇಕು.

ಸುಲ್ತಾನ ಅಹ್ಮದ್‌ನ ಮರಣ ದಿನವಾದ ರವಿವಾರ ಫೆಬ್ರುವರಿ ೨೭, ಕ್ರಿ.ಶ. ೧೪೩೫[8] ರಂದು ಆರಂಭಿಸಿದ ಅಹ್ಮದನ ಮಗ ಮತ್ತು ಉತ್ತರಾಧಿಕಾರಿ ಎರಡನೆಯ ಅಲಾ-ಉದ್-ದಿನ್‌ನ ಆಳಿಕೆಯ ಆರಂಭಿಕ ಕಾಲದವರೆಗೆ ವಿಜಯನಗರದ ಆಗುಹೋಗುಗಳ ಬಗೆಗೆ ಫಿರಿಸ್ತಾ ಏನನ್ನೂ ಹೇಳುವದಿಲ್ಲ.

ವಿಜಯನಗರದ ದೇವರಾಯನ ವಿರುದ್ಧ ಬಲಾಢ್ಯ ಸೈನ್ಯದೊಂದಿಗೆ ತನ್ನ ಸಹೋದರ ಮುಹಮ್ಮದ ಖಾನನನ್ನು ಕಳಿಸುವುದೆ ಅಲಾ-ಉದ್-ದಿನ್‌ನ ಪ್ರಥಮ ಕಾರ್ಯವಾಗಿತ್ತು—

"ಯಾವನು (ರಾಯ) ತನ್ನ ಕಪ್ಪವನ್ನು ಐದು ವರ್ಷ ತಡೆಹಿಡಿದಿದ್ದನೊ ಮತ್ತು ಬಾಕಿ ತೀರಿಸಲು ನಿರಾಕರಿಸುತ್ತಿದ್ದನೊ (ಅವನ ವಿರುದ್ಧ....) ಅವರು ನಾಡನ್ನು ಯಾವ ಬಗೆಯಲ್ಲಿ ನಾಶಪಡಿಸಿದರೆಂದರೆ ರಾಯನು ಅಲ್ಪ ಕಾಲದಲ್ಲಿಯೆ ಇಪ್ಪತ್ತು ಆನೆಗಳು, ಭಾರಿ ಮೊತ್ತದ ಧನ, ಸಂಗೀತ ಮತ್ತು ನೃತ್ಯಗಳಲ್ಲಿ ಪಳಗಿದ ಇನ್ನೂರು ಸ್ತ್ರೀ ಗುಲಾಮರನ್ನಲ್ಲದೆ ಮುಹಮ್ಮದ ಖಾನನಿಗೆ ಒಂದು ಬೆಲೆಯುಳ್ಳ ಕಾಣಿಕೆ ನೀಡುವ ಮೂಲಕ ಶಾಂತಿ ಪಡೆಯಲು ಸಂತೋಷಿಸಿದನು."

ಈ ವಿಜಯದಿಂದ ಉತ್ಸಾಹಿತನಾಗಿ ಮತ್ತು ದೊಡ್ಡ ಸೈನ್ಯದ ನೇತೃತ್ವ ಹೊಂದಿ ರಾಜಕುಮಾರ ಮುಹಮ್ಮದ ತನ್ನ ಸಹೋದರನ ವಿರುದ್ಧ ಬಂಡೆದ್ದ, ಮತ್ತು ಹೀಗೆ ಮಾಡುವಲ್ಲಿ ದೇವರಾಯನ ಸಹಾಯ ಪಡೆದನೆಂದು ಫಿರಿಸ್ತಾ ಹೇಳುತ್ತಾನೆ. ರಾಜಕುಮಾರ ಸುಲ್ತಾನನ ಮಂಡಲಾಧಿಪತಿಗಳಿಂದ ಮುದಕಲ್, ರಾಯಚೂರು, ಸೊಲಾಪುರ, ಬಿಜಾಪುರ ಮತ್ತು ನಲ್ದಿರಕ್‌ಗಳನ್ನು ವಶಪಡಿಸಿಕೊಂಡ, ಆದರೆ ರಾಜನ ಸೈನ್ಯಗಳೊಂದಿಗಿನ ಛಲ ಯುದ್ಧದಲ್ಲಿ ಪೂರ್ಣ ಸೋತು ಓಡಿಹೋದ. ಹಾಗಾದರೂ

ಆದಾದ ಸ್ವಲ್ಪೇ ಸಮಯದಲ್ಲಿ ಅವನನ್ನು ಉದಾರಿ ದೊರೆ ಕ್ಷಮಿಸಿದ ಮತ್ತು ರಾಯಚೂರಿನ ಕೋಟೆ ಮತ್ತು ಪ್ರದೇಶಗಳನ್ನು ಅವನಿಗೆ ನೀಡಲಾಯಿತು.

೧೪೪೩ರ ಸುಮಾರಿಗೆ ದೇವರಾಯ ಕಲಬರ್ಗಾದಲ್ಲಿರುವ ಬಲಶಾಲಿ ನೆರೆಯವನೊಂದಿಗೆ ಸಂಬಂಧಿಸಿದಂತೆ ತನ್ನ ಪರಿಸ್ಥಿತಿಯನ್ನು ಹೆಚ್ಚು ಗಂಭೀರವಾಗಿ ಪರಿಶೀಲಿಸತೊಡಗಿದ.

"ತನ್ನ ವರಿಷ್ಠರ ಹಾಗೂ ಪ್ರಮುಖ ಬ್ರಾಹ್ಮಣರ ಮಹಾ ಅಧಿವೇಶನ ಕರೆದು[9] ತನ್ನ ಕರ್ನಾಟಕ ನಾಡು ಬಹಮನೀ ಮನೆತನದ ಪ್ರದೇಶಗಳಿಗಿಂತ ವಿಸ್ತಾರ, ಜನಸಂಖ್ಯೆ ಮತ್ತು ಆದಾಯದಲ್ಲಿ ಎಷ್ಟೋ ಪಟ್ಟು ಮೇಲಾಗಿರುವುದನ್ನು ಮತ್ತು ಅದೇ ರೀತಿ ತನ್ನ ಸೈನ್ಯ ಎಷ್ಟೋ ಹೆಚ್ಚಾಗಿರುವದನ್ನು ವಿವರಿಸಿ ಮುಸಲ್ಮಾನರ ಯಶಸ್ಸುಗಳಿಗೆ ಹಾಗೂ ತಾನು ಅವರಿಗೆ ಕಪ್ಪ ಕೊಡುವ ಸ್ಥಿತಿಗೆ ಇಳಿಸಲ್ಪಡಲು ಕಾರಣವನ್ನು ಶೋಧಿಸಬಯಸಿದ. ಕೆಲವರು ಅಂದರು....ಮುಸಲ್ಮಾನರ ಶ್ರೇಷ್ಠತೆ ಎರಡು ಸ್ಥಿತಿಗಳಿಂದ ಉಂಟಾಗಿದೆ ; ಒಂದು, ಅವರ ಕುದುರೆಗಳೆಲ್ಲ ಬಲಿಷ್ಠವಾಗಿವೆ ಮತ್ತು ಕರ್ನಾಟಕದ ದುರ್ಬಲ, ತೆಳ್ಳಗಿನ ಕುದುರೆಗಳಿಗಿಂತ ಹೆಚ್ಚು ಶ್ರಮ ಸಹಿಸ ಬಲ್ಲವು ; ಇನ್ನೊಂದು ಬಾಹಮನೀ ಮನೆತನದ ಸುಲ್ತಾನರು ಯಾವಾಗಲೂ ತಗ್ಗದಂತೆ ನೋಡಿಕೊಳ್ಳುತ್ತಿದ್ದ ಮತ್ತು ರಾಯನ ಸೈನ್ಯದಲ್ಲಿ ಇರದ ಶ್ರೇಷ್ಠ ಬಿಲ್ಲುಗಾರರ ದೊಡ್ಡ ಪಡೆ.

"ಇದನ್ನು ತಿಳಿದು ದೇವರಾಯ ತನ್ನ ಸೇವೆಯಲ್ಲಿ ಮುಸಲ್ಮಾನರಿಗೆ ಆಸ್ಪದ ನೀಡುವಂತೆ ಆಜ್ಞೆ ನೀಡಿದ, ಅವರಿಗೆ ಜಾಗೀರಗಳನ್ನು ಹಾಕಿಕೊಟ್ಟ, ಬೀಜನಗರ ನಗರದಲ್ಲಿ ಅವರಿಗಾಗಿ ಒಂದು ಮಸೀದೆ ಕಟ್ಟಿಸಿದ ಮತ್ತು ತಮ್ಮ ಧರ್ಮ ಪರಿಪಾಲನೆಯಲ್ಲಿ ಅವರಿಗೆ ಯಾರೂ ತೊಂದರೆ ಕೊಡಬಾರದೆಂದು ಆಜ್ಞಾಪಿಸಿದ. ತಮ್ಮ ಧರ್ಮಕ್ಕೆ ವಿರುದ್ಧವಾಗದಂತೆ ತನ್ನ ಸಮಕ್ಷಮದಲ್ಲಿ ಮುಸಲ್ಮಾನರು ಮುಜುರೆಯೊಪ್ಪಿಸಲು ಅನುಕೂಲವಾಗುವಂತೆ ತನ್ನ ಸಿಂಹಾಸನದ ಮುಂದೆ ಒಂದು ಬೆಲೆಯುಳ್ಳ ಪೀಠದ ಮೇಲೆ ಕುರಾನನ್ನು ಇಡಿಸಿದ. ಅವನು ತನ್ನ ಎಲ್ಲ ಹಿಂದೂ ಸೈನಿಕರೂ ಬಿಲ್ಲುವಿದ್ಯೆ ಕಲಿಯುವಂತೆ ಆಜ್ಞಾಪಿಸಿದ ; ಅವನು ಮತ್ತು ಅವನ ಅಧಿಕಾರಿಗಳು ಎಷ್ಟು ಪರಿಶ್ರಮ ವಹಿಸಿದರೆಂದರೆ ಕೊನೆಗೆ ಅವನಲ್ಲಿ ಯಥಾಪ್ರಕಾರ ಭಲ್ಲೆ ಭರ್ಚಿಗಳಿಂದ ಸಜ್ಜಿತರಾದ ಎಂಭತ್ತು ಸಾವಿರ ಅಶ್ವಾರೋಹಿಗಳು ಮತ್ತು ಇನ್ನೂರು ಸಾವಿರ ಕಾಲಾಳುಗಳಲ್ಲದೆ ಬಿಲ್ಲುಗಾರಿಕೆಯಲ್ಲಿ ಪರಿಣತರಾದ ಎರಡು ಸಾವಿರ ಮುಸಲ್ಮಾನರು ಮತ್ತು ಅರುವತ್ತು ಸಾವಿರ ಹಿಂದೂಗಳು ಸಿದ್ಧರಾದರು."

ಪ್ರಾಯಶಃ ನವಂಬರ ೧೪೪೨ ಮತ್ತು ಎಪ್ರಿಲ್ ೧೪೪೩ರ ಮಧ್ಯೆ ಒಂದು ದಿನ ದೊರೆ ದೇವರಾಯನನ್ನು ಕೊಲೆ ಮಾಡುವ ಉಗ್ರ ಪ್ರಯತ್ನವನ್ನು ಅವನ ಅತ್ಯಂತ ನಿಕಟ ಸಂಬಂಧಿಗಳಲ್ಲೊಬ್ಬ—ಅಬ್ದುರ್ ರಜ್ಜಾಕ್‌ನ ಪ್ರಕಾರ ತಮ್ಮ,

ನೂನಿಜ್‌ನ ಪ್ರಕಾರ ಸೋದರಳಿಯ—ಮಾಡಿದ. ಅಬ್ದುರ್ ರಜ್ಜಾಕ್‌ನ ವೃತ್ತಾಂತ ಎರಡರಲ್ಲಿ ನಿಸ್ಸಂದೇಹವಾಗಿ ಅಧಿಕ ನಂಬಲರ್ಹವಾದುದು. ಏಕೆಂದರೆ, ಅವನು ಸಮಕಾಲೀನ ಪ್ರೇಕ್ಷಕ, ನೂನಿಜ್ ಹೇಳಿರುವ ಕತೆಯನ್ನು ಈ ಸಂಪುಟದ ಕೊನೆಯಲ್ಲಿರುವ ದಿನಚರಿಯಲ್ಲಿ ಕೊಡಲಾಗಿದೆ.[10] ಅಬ್ದುರ್‌ರಜ್ಜಾಕ್ ಕಾಲಿಕತ್ ಮತ್ತು ವಿಜಯನಗರಗಳಿಗೆ ಪರ್ಶಿಯಾದ ರಾಯಭಾರಿಯಾಗಿದ್ದ, ಮತ್ತು ಅವನ ವೃತ್ತಾಂತ ತೇದಿಯನ್ನು ನಿಶ್ಚಿತವಾಗಿ ನಿರ್ಧರಿಸಿರುವುದರಿಂದ ವಿಶೇಷ ಮಹತ್ವದ್ದಾಗಿದೆ.

"ಈ ವೃತ್ತಾಂತದ ಕರ್ತೃ ಕಾಲಿಕತ್ತದಲ್ಲಿ ತಂಗಿದ ಸಮಯದಲ್ಲಿ (ನವಂಬರ ೧೪೪೨ ರಿಂದ ಎಪ್ರಿಲ್ ೧೪೪೩) ಬಿಜನಗರ ನಗರದಲ್ಲಿ ಒಂದು ಅಸಾಧಾರಣ ಹಾಗೂ ಅದ್ವಿತೀಯ ಘಟನೆ ಜರುಗಿತು....

"ತನಗಾಗಿ ಹೊಸ ಮನೆ ಕಟ್ಟಿಸಿಕೊಂಡಿದ್ದ ರಾಜನ ಸಹೋದರ ಅಲ್ಲಿಗೆ ರಾಜನನ್ನು ಮತ್ತು ಸಾಮ್ರಾಜ್ಯದ ಪ್ರಮುಖ ವ್ಯಕ್ತಿಗಳನ್ನು ಆಮಂತ್ರಿಸಿದ. ಒಬ್ಬರೊಬ್ಬರ ಎದುರಿಗೆ ಊಟ ಮಾಡದಿರುವುದು ಕಾಫಿರರ ಸುಸ್ಥಾಪಿತ ಪದ್ಧತಿ. ಆಮಂತ್ರಿತರನ್ನೆಲ್ಲ ಒಂದು ಭವ್ಯ ಕೋಣೆಯಲ್ಲಿ ಒಂದೆಡೆ ಕೂಡಿಸಲಾಯಿತು. ಆಗಾಗ ರಾಜಕುಮಾರ ಸ್ವತಃ ತಾನೇ ಬಂದು ಇಲ್ಲವೆ ದೂತನನ್ನು ಕಳಿಸಿ ಇಂಥಿಂಥ ದೊಡ್ಡ ಮನುಷ್ಯರು ಬಂದು ತಮ್ಮ ಪಾಲಿನ ಭೋಜನವನ್ನು ಸ್ವೀಕರಿಸಬೇಕೆಂದು ಕೇಳಿ ಕೊಳ್ಳಲಾಗುತ್ತಿತ್ತು. ನಗರದಲ್ಲಿ ಲಭ್ಯವಿದ್ದ ಎಲ್ಲ ನಗಾರಿ, ಬುರುಡೆಮದ್ದಲೆ, ಕಹಳೆ ಮತ್ತು ಕೊಳಲುಗಳನ್ನು ಸಂಗ್ರಹಿಸುವಂತೆ ಎಚ್ಚರ ವಹಿಸಲಾಗಿತ್ತು, ಮತ್ತು ಈ ವಾದ್ಯಗಳನ್ನೆಲ್ಲ ಏಕಕಾಲಕ್ಕೆ ನುಡಿಸಿದಾಗ ಭಾರಿ ಸಪ್ಪಳವಾಗುತ್ತಿತ್ತು. ಕರೆಕಳಿಸಿದ ವ್ಯಕ್ತಿ ಭೋಜನಶಾಲೆ ಪ್ರವೇಶಿಸಿದ ತಕ್ಷಣ ಹೊಂಚು ಹಾಕಿ ಕಾಯ್ದಿದ್ದ ಇಬ್ಬರು ಹಂತಕರು ಅವನ ಮೇಲೆ ಜಿಗಿದು ಅವನನ್ನು ಕಠಾರಿಯಿಂದ ಇರಿದು ತುಂಡುತುಂಡಾಗಿ ಕೊಚ್ಚಿದರು. ಅವನ ಅಂಗಾಂಗಗಳನ್ನು ಅಂದರೆ ಅವನ ದೇಹದ ತುಂಡುಗಳನ್ನು ಅಲ್ಲಿಂದ ತೆಗೆದುಹಾಕಿ ಇನ್ನೊಬ್ಬ ಅತಿಥಿಯನ್ನು ಕರೆಕಳಿಸಲಾಗುತಿತ್ತು. ಅವನು ಕಗ್ಗೊಲೆಯ ಸ್ಥಳವನ್ನು ಪ್ರವೇಶಿಸಿದನೆಂದರೆ ಅದೃಶ್ಯನಾಗುತ್ತಿದ್ದ....ನಗಾರಿಗಳ ಸಪ್ಪಳ, ಕೂಗಾಟ ಮತ್ತು ಕೋಲಾಹಲದಲ್ಲಿ ಏನಾಗುತ್ತಿದೆ ಎಂಬುದು ಯಾರಿಗೂ ತಿಳಿಯುತ್ತಿರಲಿಲ್ಲ. ಈ ರೀತಿಯಲ್ಲಿ ರಾಜ್ಯದಲ್ಲಿ ಹೆಸರು, ಪದವಿಯುಳ್ಳವರನ್ನೆಲ್ಲ ಕೊಲ್ಲಲಾಯಿತು. ರಾಜಕುಮಾರ ತನ್ನ ಬಲಿಗಳ ರಕ್ತದ ವಾಸನೆಯಿಂದ ತುಂಬಿದ್ದ ತನ್ನ ಮನೆಯಿಂದ ರಾಜನ ಅರಮನೆಗೆ ಹೊರಟ, ಮತ್ತ ಆ ನಿವಾಸದಲ್ಲಿ ರಾಜ ನಿಯಮಿಸಲಾಗಿದ್ದ ಕಾವಲುಗಾರರನ್ನು ಸಂಬೋಧಿಸುತ್ತ ಅವರನ್ನು ತನ್ನ ಮನೆಗೆ ಪ್ರಶಂಸೆಯ ಶಬ್ದಗಳಲ್ಲಿ ಆಹ್ವಾನಿಸಿದ ಮತ್ತು ಅವರನ್ನೂ ಇತರ ಬಲಿಗಳ ಹಾದಿಯನ್ನೆ ಹಿಡಿಯುವಂತೆ ಮಾಡಿದ. ಹೀಗೆ, ಅರಮನೆ ಎಲ್ಲ ಸಂರಕ್ಷಕರಿಂದ ವಂಚಿತವಾಯಿತು. ಆ ಮೇಲೆ ಈ ದುರುಳ ಅಡಿಕೆಯ ಕೆಳಗೆ ಹರಿತವಾದ ಕಠಾರಿಯನ್ನು ಬಚ್ಚಿಟ್ಟಿದ್ದ

ತಟ್ಟೆಯೊಂದನ್ನು ಕೈಯಲ್ಲಿ ಹಿಡಿದುಕೊಂಡು ರಾಜನ ಸಾನಿಧ್ಯಕ್ಕೆ ಬಂದ. "ಭವನ ಸಿದ್ಧವಾಗಿದೆ ಮತ್ತು ನಿಮ್ಮ ಘನ ಉಪಸ್ಥಿತಿಗಾಗಿಯೆ ಎಲ್ಲರೂ ಕಾಯ್ತಿದ್ದಾರೆ" ಎಂದು ಅವನು ರಾಜನನ್ನು ಸಂಬೋಧಿಸಿದ.

"ದೊಡ್ಡವರು ಸ್ವರ್ಗದಿಂದ ಸ್ಫೂರ್ತಿ ಪಡೆಯುತ್ತಾರೆಂಬ ಸೂಕ್ತಿಯನ್ನನುಸರಿಸಿ 'ಇಂದು ನನ್ನ ಆರೋಗ್ಯ ಸರಿಯಿಲ್ಲ' ಎಂದ.

"ಹೀಗೆ ರಾಜನನ್ನು ತನ್ನ ಮನೆಗೆ ಬರುವಂತೆ ಆಕರ್ಷಿಸುವ ಆಸೆ ಕಳೆದುಕೊಂಡ ಈ ಕೃತಕ ಸಹೋದರ ತನ್ನ ಕಠಾರಿ ಹೊರತೆಗೆದು ಹಲವಾರು ಸಲ ಬಲವಾಗಿ ಇರಿದ. ಆದರಿಂದಾಗಿ ರಾಜ ಸಿಂಹಾಸನದ ಹಿಂದೆ ಬಿದ್ದ. ಹೀಗೆ ರಾಜ ಸತ್ತನೆಂದು ನಂಬಿದ ದ್ರೋಹಿ ರಾಜನ ತಲೆ ಕತ್ತರಿಸಲು ತನ್ನ ವಿಶ್ವಾಸಿಕನೊಬ್ಬನನ್ನು ಅಲ್ಲಿ ಬಿಟ್ಟು ಆ ಮೇಲೆ ಭವನದಿಂದ ಹೊರಬಿದ್ದು ಅರಮನೆಯ ಮುಖ ಮಂಟಪವನ್ನೇರಿ ಜನರನ್ನುದ್ದೇಶಿಸಿ ಹೀಗೆ ಸಂಬೋಧಿಸಿದ : 'ನಾನು ರಾಜನನ್ನು ಅವನ ಸಹೋದರರನ್ನು, ಇಂಥಿಂಥ ಅಮೀರರನ್ನು, ಬ್ರಾಹ್ಮಣರನ್ನು ಮತ್ತು ಮಂತ್ರಿಗಳನ್ನು ಕೊಲೆ ಮಾಡಿದ್ದೇನೆ ; ಈಗ ನಾನೇ ರಾಜ.'

"ಏತನ್ಮಧ್ಯೆ ಅವನ ಬೇಹುಕಾರ ರಾಜನ ತಲೆ ಕತ್ತರಿಸುವ ಉದ್ದೇಶದಿಂದ ಸಿಂಹಾಸನದತ್ತ ಬಂದ. ಆದರೆ, ಆರಾಜ ತಾನು ಹಿಂದೆ ಬಿದ್ದಿದ್ದ ಆಸನವನ್ನು ಹಿಡಿದು ಕೊಂಡು ಆ ದುರಾತ್ಮನ ಎದೆಗೆ ಎಷ್ಟೊಂದು ಬಲವಾಗಿ ಹೊಡೆದನೆಂದರೆ ಅವನು ಅಂಗಾತ ಬಿದ್ದ, ಆ ಮೇಲೆ, ಭಯಂಕರ ಕಾರ್ಯಾಚರಣೆಯ ದೃಶ್ಯದಿಂದ ಒಂದು ಮೂಲೆಯಲ್ಲಿ ಅವಿತುಕೊಂಡಿದ್ದ ಕಾವಲುಗಾರನೊಬ್ಬನ ಸಹಾಯದಿಂದ ರಾಜ ಪಾತಕಿಯನ್ನು ಕೊಂದು ಅಂತಃಪುರದ ಮಾರ್ಗವಾಗಿ ಅರಮನೆಯ ಹೊರಗೆ ನಡೆದ.

"ಇನ್ನೂ ಸಭಾಭವನದ ಪಾವಟಿಗೆಗಳ ಮೇಲೆ ನಿಂತಿದ್ದ ಅವನ ಸಹೋದರ ತನ್ನನ್ನು ರಾಜನೆಂದು ಮಾನ್ಯ ಮಾಡಬೇಕೆಂದು ಜನಸ್ತೋಮವನ್ನು ಆಹ್ವಾನಿಸಿದ. ಆ ಕ್ಷಣಕ್ಕೆ ರಾಜ 'ನಾನಿನ್ನೂ ಜೀವಂತವಾಗಿರುವೆ, ನಾನು ಚೆನ್ನಾಗಿದ್ದೇನೆ ಮತ್ತು ಸುರಕ್ಷಿತವಾಗಿದ್ದೇನೆ. ಆ ದುರುಳನನ್ನು ಹಿಡಿಯಿರಿ' ಎಂದು ಕೂಗಿದ.

ಅಲ್ಲಿ ನೆರೆದಿದ್ದ ಜನಸಮೂಹವೆಲ್ಲ ಒಟ್ಟಿಗೆ ಅಪರಾಧಿ ರಾಜಕುಮಾರನ ಮೇಲೆ ಮುಗಿಬಿದ್ದು ಅವನನ್ನು ಕೊಂದರು.

"ಪಾರಾದ ಒಬ್ಬನೇ ಒಬ್ಬನೆಂದರೆ ಮುಖ್ಯಮಂತ್ರಿ ದಣಾಯಿಕ. ಅವನು ಈ ದುಃಖಮಯ ಘಟನೆಗೆ ಮುನ್ನ ಸಿಲೋನದ ಗಡಿಗೆ ಯಾನ ಬೆಳೆಸಿದ್ದ. ಅವನನ್ನು ಮರಳಿ ಕರೆಯಿಸಿಕೊಳ್ಳಲು ರಾಜ ಹರಿಕಾರನನ್ನು ಕಳಿಸಿದ ಮತ್ತು ನಡೆದುದೆಲ್ಲವನ್ನು ಅವನಿಗೆ ತಿಳಿಸಿದ. ಸಂಚಿನಲ್ಲಿ ಯಾವುದೇ ರೀತಿ ನೆರವಾದ ಎಲ್ಲರನ್ನೂ ಕೊಲ್ಲಲಾಯಿತು. ಅಧಿಕ ಸಂಖ್ಯೆಯಲ್ಲಿ ಜನರನ್ನು ಕೊಲ್ಲಲಾಯಿತು, ಸಜೀವ ದಹಿಸಲಾಯಿತು,

ಮತ್ತು ಅವರ ಇಡಿ ಕುಟುಂಬಗಳನ್ನು ನಿರ್ಮೂಲಿಸಲಾಯಿತು. ಆಮಂತ್ರಣ ಪತ್ರ ತಂದಿದ್ದವನನ್ನು ಕೊನೆಯ ಹಂತದ ಹಿಂಸೆಗೆ ಗುರಿಪಡಿಸಲಾಯಿತು...."

ಆರು ತಿಂಗಳ ನಂತರ ರಾಜ ಸತ್ತನೆಂದು ಮತ್ತು ಅವನ ನಂತರ ಅವನ ಮಗ ಪಟ್ಟಕ್ಕೆ ಬಂದನೆಂದು ನೂನಿಜ್ ಹೇಳುತ್ತಾನೆ. ಆದರೆ ಡಿಸೆಂಬರ ೧೪೪೩ರ ಸುಮಾರಿಗೆ ತನ್ನನ್ನು ಸ್ವತಃ ದೇವರಾಯನಿಗೆ ಭೆಟ್ಟಿ ಮಾಡಿಸಲಾಯಿತೆಂದು ಅಬ್ದುರ್‌ರಜಾಕ್ ಘೋಷಿಸುತ್ತಾನೆ. ದೇವರಾಯನ ಮಗನ ಹೆಸರನ್ನಾಗಲಿ ಅವನ ಆಳಿಕೆಯ ದೀರ್ಘತೆಯನ್ನಾಗಲಿ ನೂನಿಜ್ ಕೊಟ್ಟಿಲ್ಲ; ಅವನು ದೇವಾಲಯಗಳಿಗೆ ದೊಡ್ಡ ದಾನಗಳನ್ನು ನೀಡುವದನ್ನುಳಿದು ಹೇಳುವಂತಹದೇನನ್ನೂ ಮಾಡಲಿಲ್ಲವೆಂದು ಮಾತ್ರ ಹೇಳುತ್ತಾನೆ. ಈ ರಾಜನ ನಂತರ 'ವಿರುಪಾಕರಾವ್' ಎಂಬ ಮಗ ಪಟ್ಟಕ್ಕೆ ಬಂದ. ಅವನೂ ವಿರುಪಾಕ್ಷನೂ ಒಂದೇ ಆಗಿರಬೇಕು. ನರಸಿಂಹನ ದುರಾಕ್ರಮಣ ಮತ್ತು ಪ್ರಥಮ ರಾಜವಂಶದ ಅವನತಿಗೆ ಎಡೆ ಮಾಡಿಕೊಟ್ಟ ತೊಂದರೆಗಳು ಅವನ ಆಳಿಕೆಯ ಆರಂಭದಿಂದ ಸುರುವಾದವೆಂದು ನೂನಿಜ್ ಹೇಳುತ್ತಾನೆ.

ಆದರೆ ಈ ಕಾಲದ ಗೊಂದಲಮಯ ದಾಖಲೆಗಳನ್ನು ಸರಿಯಾಗಿ ಜೋಡಿಸುವ ಮುನ್ನ ಕ್ರಿ.ಶ. ೧೪೪೩ರ ಘಟನೆಗಳಿಗೆ ನಾನು ಹಿಂದಿರುಗಬೇಕು.

"ಈ ಕಾಲಾವಧಿಯಲ್ಲಿ ಮುಖ್ಯಮಂತ್ರಿ ದಣಾಯಿಕ[11] ಕಲಬರ್ಗಾ ರಾಜ್ಯದೊಳಗೆ ದಂಡಯಾತ್ರೆ ಹೊರಟ" ಎಂದು ಅಬ್ದುರ್ ರಜಾಕ್ ೧೪೪೩ರ ದ್ವಿತೀಯಾರ್ಧವನ್ನು ಕುರಿತು ಹೇಳುತ್ತಾನೆ. ಈ ದಾಳಿಗೆ ಪ್ರೇರಕವಾದ ಕಾರಣಗಳು ಇಂತಿವೆ : ವಿಜಯನಗರದ ರಾಜನನ್ನು ಕೊಲೆಗೈಯ್ಯುವ ನೀಚ ಪ್ರಯತ್ನ ಮತ್ತು ವರಿಷ್ಠರ ಹಾಗೂ ಪ್ರಮುಖರ ಹತ್ಯೆಯ ಬಗೆಗೆ ಕೇಳಿದ್ದ ಸುಲ್ತಾನ ಅಲಾ-ಉದ್-ದಿನ್ ಈ ಸಮಯ ರಾಜ್ಯವನ್ನು ಹತ್ತಿಕ್ಕುವ ಪ್ರಯತ್ನಕ್ಕೆ ಅನುಕೂಲಕರವೆಂದು ಭಾವಿಸಿ "ಏಳು ಲಕ್ಷ ವರಾಹಗಳ" ಸಂದಾಯವನ್ನು ಬೇಡಿ ರಾಜನಿಗೆ ಸಂದೇಶ ಕಳಿಸಿದ. "ಬಿಜನಗರದ ರಾಜ ದಿಜವ್ ರಾಯ್ ಇಂಥ ಸಂದೇಶ ತಲುಪಿಕೆಯಿಂದ ಅಷ್ಟೇ ಕ್ಲೇಶ ಮತ್ತು ಕೋಪಗಳಿಗೆ ಒಳಗಾದನು" ಆದರೆ ಅವನು ದಿಟ್ಟ ಉತ್ತರ ಕಳಿಸಿದನು ಮತ್ತು ಯುದ್ಧ ಸಿದ್ಧತೆ ಮಾಡಿಕೊಂಡನು.

"ಎರಡೂ ಪಕ್ಷದವರು ಕಳಿಸಿದ ಸೈನ್ಯಪಡೆಗಳು ಎರಡೂ ರಾಜ್ಯಗಳ ಗಡಿಗಳಲ್ಲಿ ಬಹಳ ಧ್ವಂಸ ಮಾಡಿದವು....ಕಲಬರ್ಗಾ ನಾಡಿನ ಗಡಿಗಳ ಮೇಲೆ ದಾಳಿ ಮಾಡಿ ಹಲವಾರು ನತದೃಷ್ಟ ಸೆರೆಯಾಳುಗಳನ್ನು ವಶಪಡಿಸಿಕೊಂಡ ನಂತರ ದಣಾಯಿಕ ಹಿಂದೆ ಸರಿದನು...."

ಫಿರಿಸ್ತಾ ಕೂಡ ಕ್ರಿ.ಶ. ೧೪೪೩ರ ಈ ಯುದ್ಧವನ್ನು ವರ್ಣಿಸುತ್ತಾನೆ. ದೇವರಾಯ ಬೀಕಂತಲೆ ಬಾಹಮನಿ ರಾಜರ ಮೇಲೆ ಆಕ್ರಮಣ ಮಾಡಿದನೆಂದು ಅವನು ಹೇಳುತ್ತಾನೆ.

“ಒಮ್ಮೆಲೆ ತುಮೆದ್ರಾ ದಾಟಿದ, ಮುದಕಲ್ ಕೋಟೆ ವಶಪಡಿಸಿಕೊಂಡ, ರಾಯಚೋರ ಮತ್ತು ಬೀಕಾಪೋರ್‌ಗಳಿಗೆ ಮುತ್ತಿಗೆ ಹಾಕಲು ಮಗನನ್ನು ಕಳಿಸಿದ. ಕಿಷ್ಟ್ನಾದ ದಂಡೆಗುಂಟ ತಾನು ಬಿಡಾರ ಹೂಡಿದ ಮತ್ತು ಸೈನಿಕ ತಂಡಗಳನ್ನು ಕಳಿಸಿದ. ಅವುಗಳು ಸೌಘರ ಮತ್ತು ಬೀಜಾಪೋರಗಳಷ್ಟು ದೂರದ ನಾಡನ್ನು ಸುಲಿದರು ಮತ್ತು ಬೆಂಕಿ ಹಾಗೂ ಕತ್ತಿಗಳಿಂದ ನಾಶಪಡಿಸಿದರು.

“ಈ ದಾಳಿಯ ಸುದ್ದಿ ತಿಳಿದು ಸುಲ್ತಾನ ಅಲ್ಲಾ-ಉದ್-ದ್ದೀನ್ ಅದನ್ನು ಹಿಮ್ಮೆಟ್ಟಿಸಲು ಸಿದ್ಧತೆ ಮಾಡಿಕೊಂಡ, ಮತ್ತು ತೆಲಂಗಾಣಾ, ದೌಲತಾಬಾದ ಮತ್ತು ಬೇರಾರ್‌ನ ತನ್ನ ಎಲ್ಲ ಪಡೆಗಳಿಗೆ ತಡಮಾಡದೆ ರಾಜಧಾನಿ ಅಹಮದಾಬಾದಿಗೆ ಬರುವಂತೆ ಆಜ್ಞಾಪಿಸಿದ. ಅವುಗಳು ಬಂದ ಮೇಲೆ ಎಲ್ಲವನ್ನೂ ಪರಿಶೀಲಿಸಿದ ಮತ್ತು ತನ್ನ ಸೈನ್ಯದಲ್ಲಿ ಐವತ್ತು ಸಾವಿರ ಅಶ್ವ, ಅರುವತ್ತು ಸಾವಿರ ಕಾಲಾಳು ಮತ್ತು ಫಿರಂಗಿಗಳ ಗಮನಾರ್ಹ ಹಿಂಜೋಲು ಇದ್ದುದನ್ನು ಕಂಡುಕೊಂಡ. ಈ ಬಲದೊಂದಿಗೆ ಅವನು ವೈರಿಯ ವಿರುದ್ಧ ಸಾಗಿದ; ಮತ್ತು ದೇವರಾಯ ಬರುವುದನ್ನು ನೋಡಿ ತನ್ನ ಠಾಣೆ ಬದಲಿಸಿದ, ಮುದಕಲ್ ಕೋಟೆಯ ಗೋಡೆಗಳ ಕೆಳಗೆ ಬಿಡಾರ ಹೂಡಿದ ಮತ್ತು ಸುಲ್ತಾನನಿಗೆ ತೊಂದರೆ ಕೊಡಲು ದೊಡ್ಡ ಸೈನ್ಯವನ್ನು ಕಳಿಸಿದ.

“ಮುದಕಲ್ಲಿನಿಂದ ಹನ್ನೆರಡು ಮೈಲುಗಳ ಮೇಲೆ ನಿಂತು ಮತ್ತು ದೇವರಾಯನ ಮಕ್ಕಳ[12] ವಿರುದ ದೌಲತಾಬಾದದ ಸೈನಿಕರೊಂದಿಗೆ ಮಲಿಕ್ ಅಲ್ ತಿಜಾರ್‌ನನ್ನು ಮತ್ತು ಬೀಜಾಪೋರದ ಮಂಡಲಾಧಿಪತಿ ಖಾನ ಝಮೌನ್ ಮತ್ತು ಬೇರರ್ ಮತ್ತು ತೆಲಂಗಾಣದ ಸೈನ್ಯಗಳ ದಂಡನಾಯಕನಾದ ಖಾನ ಅಝಮ್‌ರನ್ನು ಮುಖ್ಯ ಶತ್ರುಪಡೆಯ ವಿರುದ್ಧ ಕಳಿಸಿದ. ಮಲಿಕ್-ಅಲ್-ತಿಜಾರ್ ಮೊದಲು ರಾಯಜೋರಿಗೆ ಹೋಗಿ ದೇವರಾಯನ ಹಿರಿಯ ಮಗನೊಂದಿಗೆ ಯುದ್ಧ ಮಾಡಿದ. ಅವನು ಯುದ್ಧದಲ್ಲಿ ಗಾಯಗೊಂಡು ಬೀಕಾಪೋರದ ಕಡೆಗೆ ಓಡಿದ. ಅಲ್ಲಿಂದ ಕೋಟೆಯ ಮುತ್ತಿಗೆ ಕೈಬಿಟ್ಟು ಬಂದ ಅವನ ತಮ್ಮ ಆವನೊಂದಿಗೆ ಕೂಡಿಕೊಂಡ.

“ಎರಡು ತಿಂಗಳ ಅವಧಿಯಲ್ಲಿ ಎರಡೂ ಬೃಹತ್ ಸೈನ್ಯಗಳ ಮಧ್ಯೆ ಮುದಕಲ್ಲಿನ ಹತ್ತಿರ ಮೂರು ಕಾಳಗಗಳಾದವು. ಮೊದಲನೆಯದರಲ್ಲಿ ಎರಡೂ ಬದಿಯಲ್ಲಿ ಅನೇಕರು ಸತ್ತರು, ಮತ್ತು ಹಿಂದೂಗಳಿಗೆ ಪ್ರಯೋಜನ ಉಂಟಾಗಿ ಮುಸಲ್ಮಾನರು ತೀವ್ರ ತೊಂದರೆ ಅನುಭವಿಸಿದರು.[13] ಸುಲ್ತಾನನು ಮಿಕ್ಕವುಗಳಲ್ಲಿ ಯಶಸ್ವಿಯಾದ;

ಮತ್ತು ಕೊನೆಯದರಲ್ಲಿ ದೇವರಾಯನ ಹಿರಿಯ ಮಗ ಖಾನ ಝಮಾನನು ಎಸೆದ ಭರ್ಚಿಯಿಂದ ಮೃತಪಟ್ಟ. ಈ ಘಟನೆ ಹಿಂದೂಗಳಲ್ಲಿ ಭೀತಿ ಉಂಟುಮಾಡಿತು, ಮತ್ತು ಅವರು ಅತ್ಯಂತ ಅವಸರದಿಂದ ಮುಂದಕಲ್ಲಿನ ಕೋಟೆಯೊಳಗೆ ಓಡಿದರು."

ಇಬ್ಬರು ಮುಖ್ಯ ಮಹಮ್ಮದೀಯ ಅಧಿಕಾರಿಗಳು ಬೆನ್ನಟ್ಟುವ ಹುಮ್ಮಸ್ಸಿನಲ್ಲಿ ಓಡಿಹೋಗುವವರೊಂದಿಗೆ ನಗರವನ್ನು ಪ್ರವೇಶಿಸಿದರು ಮತ್ತು ಅವರನ್ನು ಹಿಂದೂಗಳು ಸೆರೆ ಹಿಡಿದರು.

ಅನಂತರ, ತನ್ನ ಪ್ರದೇಶಗಳಲ್ಲಿ ಇನ್ನೆಂದೂ ತೊಂದರೆ ಕೊಡುವುದಿಲ್ಲವೆಂದು ವಚನವಿತ್ತರೆ ತಾನು ನಿಗದಿಪಡಿಸಿದ ಕಪ್ಪವನ್ನು ಪ್ರತಿವರ್ಷ ಕೊಡುವುದಾಗಿ ಮತ್ತು ಇಬ್ಬರೂ ಸೆರೆಯಾಳುಗಳನ್ನು ಮರಳಿಸುವುದಾಗಿ ದೇವರಾಯ ಸುಲ್ತಾನನಿಗೆ ಸಂದೇಶ ಕಳಿಸಿದ. ಇದನ್ನು ಸ್ವೀಕರಿಸಿ ಒಪ್ಪಂದ ಮಾಡಿಕೊಳ್ಳಲಾಯಿತು ಮತ್ತು ಸೆರೆಯಾಳುಗಳು ಕಪ್ಪ ಹಾಗೂ ಹೆಚ್ಚಿನ ಕಾಣಿಕೆಗಳೊಂದಿಗೆ ವಾಪಸಾದರು ; ದೇವರಾಯನ ಆಳಿಕೆಯ ಕೊನೆಯವರೆಗೆ ಎರಡೂ ಪಕ್ಷಗಳು ತಮ್ಮ ಒಪ್ಪಂದವನ್ನು ಪಾಲಿಸಿದವು.

ಫಿರಿಸ್ತಾ ಅದನ್ನು ಸ್ಪಷ್ಟವಾಗಿ ಹೇಳದಿದ್ದರೂ ಒಪ್ಪಂದದ ಷರತ್ತುಗಳಿಂದ ನಮಗೆ ತಿಳಿದು ಬರುವುದೇನೆಂದರೆ ಸುಲ್ತಾನನು ಕಪ್ಪವನ್ನು ಕೇಳಿದ್ದನು ಮತ್ತು ಅಬ್ದುರ್ ರಜಾಕ್‌ನ ವೃತ್ತಾಂತದಲ್ಲಿ 'ದಣಾಯಿಕ' ಪ್ರತಾಪದೊಂದಿಗೆ ಹಿಂತಿರುಗದೆ ಕೇವಲ "ಹಲವರು ನತದೃಷ್ಟ ಸೆರೆಯಾಳುಗಳನ್ನು ವಶಪಡಿಸಿಕೊಂಡು ಏಕೆ ಹೆಜ್ಜೆ ಹಿಂದೆ ಇಟ್ಟನು" ಎಂಬದನ್ನೂ ಅದು ತೋರ್ಪಡಿಸುತ್ತದೆ.

ದಂಡಯಾತ್ರೆ ಸಂಕ್ಷಿಪ್ತ ಅವಧಿಯದಾಗಿದ್ದಿರಬೇಕು. ಏಕೆಂದರೆ, ಫಿರಿಸ್ತಾನ ಅಭಿಪ್ರಾಯದಲ್ಲಿ ಅದು ಹಿ.ಶ. ೮೪೭ (ಮೇ ೧, ಕ್ರಿ.ಶ. ೧೪೪೩ ರಿಂದ ಏಪ್ರಿಲ್ ೧೯, ೧೪೪೪ರ ವರೆಗೆ)ರಲ್ಲಿ ಆರಂಭವಾಗಿ ಅಬ್ದುರ್ ರಜಾಕ್ ವಿಜಯನಗರ ಬಿಟ್ಟ ಡಿಸೆಂಬರ್ ೧೪೪೩ ಗಿಂತ ಮುಂಚೆ ಮುಗಿಯಿತು.

ಹೀಗೆ ವೃತ್ತಾಂತ ೧೪೪೩ನೆಯ ವರ್ಷದ ಕೊನೆಯ ವರೆಗೆ ತರಲ್ಪಟ್ಟಿದ್ದರಿಂದ ನಾವು ಮುಂದುವರಿಯುವ ಪೂರ್ವದಲ್ಲಿ ಇತರ ದಾಖಲೆಗಳತ್ತ ತಿರುಗಿ ಎರಡನೆಯ ದೇವರಾಯನ ಆಳಿಕೆಯ ಬಗೆಗೆ ಅವು ಏನು ಹೇಳುತ್ತವೆಂಬುದನ್ನು ನೋಡೋಣ. ಅವನು ಕ್ರಿ.ಶ. ೧೪೧೯ ರಲ್ಲಿ ಪಟ್ಟಕ್ಕೆ ಬಂದಾಗ ಅವನು ಬಹಳ ತರುಣನಾಗಿದ್ದಂತೆ ಕಾಣುತ್ತದೆಂಬುದನ್ನು ನಾನು ಈ ಮೊದಲು ಹೇಳಿದ್ದೇನೆ. ೧೪೪೩ರಲ್ಲಿ ಅವನು ಆಗಲೆ ಇಪ್ಪತ್ತುಮೂರು ವರ್ಷ ಆಳಿದ್ದ. ಅಬ್ದುರ್ ರಜಾಕ್‌ನ ದಿನಚರಿಯ ಹ್ಯಾಕ್ಲುಟ್ ಅನುವಾದ, ರಜಾಕ್ ೧೪೪೩ರಲ್ಲಿ ಎರಡನೆಯ ದೇವರಾಯ ರಾಜನನ್ನು ಭೇಟಿಯಾದನೆಂದು ಹೇಳುತ್ತದೆ ಮತ್ತು ಇಂಡಿಯಾ ಆಫೀಸ್ ಪ್ರತಿ, ರಾಜ ಆಗ

"ಅತೀವ ತರುಣ"ನಾಗಿದ್ದನೆಂಬ ಹೆಚ್ಚಿನ ಮಾಹಿತಿ ಒಳಗೊಂಡಿದೆ. ಯಾವ ಕಥಾನಕ ಹೆಚ್ಚು ನಿಖರವಾದುದೆಂಬುದು ನನಗೆ ತಿಳಿಯದು. ಆದರೆ, ಈ ಹೆಚ್ಚಿನ ಶಬ್ದಗಳು ಮೂಲಕೃತಿಯ ಅಂಗವೆಂದು ಸ್ವೀಕೃತವಾದರೂ ಸಹ ಬಹುಶಃ ರಾಯಭಾರಿಯನ್ನು ರಾಜಕುಮಾರರಲ್ಲೊಬ್ಬನಿಗೆ ಪರಿಚಯಿಸಲಾಯಿತೆ ಹೊರತು ರಾಜನಿಗೇ ಅಲ್ಲ ಎಂಬ ಗ್ರಹಿಕೆಯಿಂದ ಈ ತೊಂದರೆಯನ್ನು ಸ್ಪಷ್ಟೀಕರಿಸಬಹುದಾಗಿದೆ. ಪ್ರವಾಸಿ ತಾನು ಪರ್ಶಿಯಾದ ರಾಯಭಾರಿಯೆಂದು ಪ್ರತಿನಿಧಿಸುವಲ್ಲಿ ಮೋಸಗಾರನೊ ಹೇಗೆಂಬ ಬಗೆಗೆ ರಾಜನಿಗೆ ಸಂದೇಹ ಮೂಡಿದಂತೆ ತೋರುತ್ತದೆ ಮತ್ತು ಅವನು ಸ್ವತಃ ತನ್ನ ಸಂದರ್ಶನ ನೀಡಿರಲಿಕ್ಕಿಲ್ಲ.

ಆ ಆಳಿಕೆಯ ಅನೇಕ ಶಾಸನಗಳು ಲಭ್ಯವಿದೆ. ಒಂದು ಕ್ರಿ.ಶ. ೧೫೨೬ರಲ್ಲಿ[14] ರಾಜನ ಹೆಸರಿನಲ್ಲಿನ ಘೋಷಣೆಯನ್ನು ದಾಖಲಿಸುತ್ತದೆ. ಅದೇ ವರ್ಷದಲ್ಲಿ ಬುಧವಾರ, ಅಕ್ಟೋಬರ ೧೬ಕ್ಕೆ[15] ತಾಳೆಹೊಂದುವ ತೇದಿ ಹೊಂದಿರುವ ಇನ್ನೊಂದರ ಪ್ರಕಾರ ಅವನು ರಾಜಧಾನಿಯಲ್ಲಿ 'ಪಾನ ಸುಪಾರಿ ಬಜಾರ' ಎಂಬ ಓಣಿಯಲ್ಲಿ ಜೈನ ಮಂದಿರವನ್ನು ಕಟ್ಟಿಸಿದ. ಈ ಮಂದಿರ ಸರಕಾರಿ ನಕ್ಷೆಯಲ್ಲಿ ನಂ ೩೫ ಎಂದು ಗುರುತಿಸಿದ ಮಂದಿರದ ನೈರುತ್ಯಕ್ಕೆ ಇದೆ. ಅದು ರಾಜನ ಅರಮನೆಯ ಸುತ್ತು ಗೋಡೆಗಳೊಳಗೆ ಮತ್ತು ಇನ್ನೂ ಅಸ್ತಿತ್ವದಲ್ಲಿರುವ ಗಜಶಾಲೆಗಳ ಹಿಂಭಾಗಕ್ಕೆ ಹತ್ತಿಕೊಂಡು ಇದೆ. ಈ ಶಾಸನದಲ್ಲಿ ರಾಜನನ್ನು **ಮಹಾರಾಜಾಧಿರಾಜ ರಾಜಪರಮೇಶ್ವರ** ಎಂಬ ಪೂರ್ಣ ಸಾಮ್ರಾಜ್ಯಶಾಹಿ ಬಿರುದಿನಿಂದ ಗೌರವಿಸಲಾಗಿದೆ. ಈ ಬಜಾರದ ನಿವೇಶನವನ್ನು ಖಚಿತವಾಗಿ ಗುರುತಿಸಬಹುದು. ಆನೆಗುಂದಿಗೆ ಹತ್ತಿಕೊಂಡು ಎದುರಿಗಿರುವ ನದಿಯ ದಕ್ಷಿಣ ಬದಿಯಲ್ಲಿರುವ ಭದ್ರದ್ವಾರದ ಮೂಲಕ ಈಗ ತುಂಗಭದ್ರಾ ಹಾಯ್ಗಡಕ್ಕೆ ಹೋಗುವ ರಸ್ತೆ ಸೇರಲು ನೇರವಾಗಿ ಅರಮನೆ ದ್ವಾರದಿಂದ ಹಜಾರ ರಾಮಸ್ವಾಮಿ ದೇವಾಲಯದ ಹತ್ತಿರದಲ್ಲಿ ಈಶಾನ್ಯ ದಿಕ್ಕಿನಲ್ಲಿ ಹಾಯ್ದು ಹೋಗುವ ರಸ್ತೆಯ ಇಕ್ಕೆಲಗಳಲ್ಲಿ ಸಾಗುವ ಸಮತಟ್ಟಾದ ಒಣ ನೆಲದ ಮೇಲೆ ಅದು ಇತ್ತು. ಅದು ಎತ್ತರ ಗೋಡೆಗಳು ಹಾಗೂ ವೀಕ್ಷಣಾಗೋಪುರಗಳುಳ್ಳ ಚಕ್ರಾಧಿಪತ್ಯದ ಕಚೇರಿ ಆವರಣವನ್ನು ಮತ್ತು ಎಡಬದಿಯಲ್ಲಿರುವ ಗಜಶಾಲೆಗಳನ್ನು ಹಿಂದೆ ಬಿಟ್ಟು ಕಲ್ಲಮ್ಮ ಮತ್ತು ರಂಗಸ್ವಾಮಿ ದೇವಾಲಯಗಳ ಉತ್ತರ ಬದಿಗೆ ಹಾಯ್ದು, ಜೈನ ಮಂದಿರ ಹಾಗೂ ನಕ್ಷೆಯಲ್ಲಿ ೩೫ ಸಂಖ್ಯೆಯಿಂದ ಗುರುತಿಸಿರುವ ದೇವಾಲಯವನ್ನು ಬಳಸಿ ಮೇಲ್ಕಾಣಿಸಿದ ಮುಖ್ಯರಸ್ತೆಯ ಬಯಲಿಗೆ ಬರುವ ವರೆಗೆ ಉತ್ತರದಲ್ಲಿ ಈ ಬಯಲನ್ನು ಸುತ್ತುಗಟ್ಟಿರುವ ಬಂಡೆಗುಡ್ಡಗಳ ಕೆಳಗೆ ಸಾಗಿತ್ತು. ಈ ಬೀದಿ ಆನೆಗುಂದಿಯ ಹಳೆಯ ನಗರದಿಂದ ರಾಜನ ಅರಮನೆಗೆ ನೇರ ಪ್ರವೇಶ ಒದಗಿಸುತ್ತಿರಬಹುದು.

ಕ್ರಿ.ಶ. ೧೪೩೦ರಲ್ಲಿ ರಾಜನು ದೂರ ದಕ್ಷಿಣದಲ್ಲಿ ತಂಜಾವೂರ ಜಿಲ್ಲೆಯಲ್ಲಿ[16] ದೇವಾಲಯಕ್ಕೆ ದತ್ತಿ ನೀಡಿದ, ಉತ್ತರ ಆರ್ಕಾಟಿನ ಪಡವೇಡುವಿನಲ್ಲಿ ಅನುಕ್ರಮವಾಗಿ ಕ್ರಿ.ಶ. ೧೪೩೩-೩೪ ಮತ್ತು ೧೪೩೪-೩೫ ತೇದಿ ಹೊಂದಿರುವ ಅವನ ಆಳಿಕೆಗೆ ಸಂಬಂಧಿಸಿದ ಎರಡು ಶಾಸನಗಳಿವೆ[17] ನೂನಿಜ್ ಹೇಳುವಂತೆ ಎರಡನೆಯ ದೇವರಾಯ ಅವನ ಕೊಲೆಯ ಯತ್ನದ ಕೆಲವು ತಿಂಗಳಾದ ಮೇಲೆ ಮರಣಹೊಂದಿದ್ದರೆ ಮತ್ತು ಅಬ್ದುರ್ ರಜಾಕ್ ಅವನನ್ನು ಡಿಸೆಂಬರ ೧೪೪೩ರಲ್ಲಿ ಭೆಟ್ಟಿಯಾಗಿದ್ದ ಪಕ್ಷದಲ್ಲಿ ಅವನು ೧೪೪೪ರ ಆರಂಭದಲ್ಲಿ ಮರಣಿಸಿದನೆಂಬ ನಂಬಿಕೆಗೆ ನಾವು ಬರುವಂತಾಗುತ್ತದೆ. ಖಚಿತವಾದ ಪ್ರಮಾಣದ ಅಭಾವವುಂಟು. ಯಾವುದೇ ಖಚಿತ ತೀರ್ಮಾನಕ್ಕೆ ಬರುವ ಮುನ್ನ ನಾವು ಇತರ ಶಾಸನಗಳನ್ನು ಕಾಳಜಿಯಿಂದ ಪರೀಕ್ಷಿಸಬೇಕು. ಹೀಗೆ ಪ್ರೊಫೆಸರ ಕಿಎಲ್‌ಹಾರ್ನ್[18] ಪ್ರಕಟಿಸಿದ, ಮಂಗಳವಾರ, ಮೇ ೨೪, ಕ್ರಿ.ಶ. ೧೪೪೬ಕ್ಕೆ ತಾಳೆ ಹೋಗುವ ದಿನಾಂಕ ಹೊಂದಿರುವ, ಶ್ರವಣಬೆಳ್ಗೊಳದಲ್ಲಿನ ಶಾಸನವೊಂದು ಆದಿನ "ಪ್ರತಾಪ ದೇವರಾಯ" ಮರಣಿಸಿದ ಬಗೆಗೆ ಇದೆ; ಅದನ್ನು ಬಹಳ ವಿಲಕ್ಷಣ ಮತ್ತು ಸ್ವಾರಸ್ಯಕರ ಶಬ್ದಗಳಲ್ಲಿ ಹೇಳಲಾಗಿರುವುದರಿಂದ ನಾನು ಪೂರ್ಣ ಅನುವಾದವನ್ನು ನೀಡುತ್ತೇನೆ.

"ಕೇಡಿನ ವರ್ಷ ಕ್ಷಯದಲ್ಲಿ, ದರಿದ್ರ (ತಿಂಗಳು) ಎರಡನೆಯ ವೈಶಾಖದಲ್ಲಿ, ಒಂದು ಕ್ಷುದ್ರ ಮಂಗಳವಾರದಂದು, ಬೆಳಕಿನ ವಿರುದ್ಧವಾದ ಪಕ್ಷದಲ್ಲಿ[19] ಹದಿನಾಲ್ಕನೆಯ ದಿನದಂದು, ಪ್ರತಾಪದ ಅಸಮಾನ ನಿಧಿಯಾಗಿದ್ದ ದೇವರಾಯ, ಅಯ್ಯೋ! ಮರಣ ಹೊಂದಿದ." ಆದರೆ ಮೃತಪಟ್ಟವನ ರಾಜಬಿರುದುಗಳನ್ನು ಹೇಳದಿರುವುದರಿಂದ ಅವನು ರಕ್ತಸಂಬಂಧಿ ರಾಜಕುಮಾರ ಮಾತ್ರನಾಗಿರಬಹುದು. ಕ್ರಿ.ಶ. ೧೪೪೬ರ ದೆಂದು ನಿರ್ಧಾರಿತವಾದ ತಂಜಾವೂರಿನ ಶಾಸನವೊಂದು ದೇವರಾಯ ಎಂಬ ಹೆಸರನ್ನು ಉಲ್ಲೇಖಿಸುತ್ತದೆ, ಆದರೆ "ನಾಲ್ಕು ಸಾಗರಗಳ ಪ್ರಭು" ಎಂಬ ಬಿರುದನ್ನು ಹೊರತುಪಡಿಸಿ ಇನ್ನಾವ ರಾಜವೈಭವದ ಬಿರುದುಗಳನ್ನೂ ಕೊಡುವುದಿಲ್ಲ.[20] ಶನಿವಾರ, ಆಗಸ್ಟ[21], ಕ್ರಿ.ಶ. ೧೪೪೯ ರೊಂದಿಗೆ ತಾಳೆ ಹೊಂದುವ ದಿನಾಂಕವುಳ್ಳ ಕಾಂಜೀವರಂನ ಒಂದು ಶಾಸನ ಪೂರ್ಣ ರಾಜವೈಭವದ ಬಿರುದುಗಳನ್ನು ನೀಡಲಾದ ವೀರ ಪ್ರತಾಪ ಪ್ರೌಢ ಇಮ್ಮಡಿ ದೇವರಾಯ ಎಂದು ಕರೆಯಲಾಗಿರುವ ರಾಜನ ದತ್ತಿಯನ್ನು ದಾಖಲಿಸುತ್ತದೆ. ಹದಿನಾರನೆಯ ಶತಮಾನದಲ್ಲಿ ಸಂಪ್ರದಾಯಾರೂಢವಾಗಿದ್ದಂತೆ; ಎರಡನೆಯ ದೇವರಾಯನ ಉತ್ತರಾಧಿಕಾರಿಯ ಹೆಸರನ್ನು ನೂನಿಜ್ ಬಿಟ್ಟಿರುವುದು ಕೋಪ ಉಂಟು ಮಾಡುತ್ತದೆ. ಏಕೆಂದರೆ, ಅದು ಒಂದು ತೀರ್ಮಾನಕ್ಕೆ ಬರಲು ನಮಗೆ ಸಹಾಯಕವಾಗುತ್ತಿತ್ತು. ಈಗಿನ ಮಟ್ಟಿಗೆ, ಕ್ರಿ.ಶ. ೧೪೪೪ರಿಂದ ೧೪೪೯ರ ವರೆಗೆ ಆಳಿದ ಮೂರನೆಯ ದೇವರಾಯ ಇದ್ದಂತೆ ತೋರುತ್ತದೆ; ಆದರೆ ಈ ಅಂಶ ಇನ್ನೂ ಇತ್ಯರ್ಥವಾಗಿಲ್ಲ.

ಎರಡನೆಯ ದೇವರಾಯನ ಸಚಿವರಲ್ಲೊಬ್ಬನ ಹೆಸರು ನಾಗಣ್ಣ ಎಂದಿತ್ತೆಂದು ಶ್ರೀ ರೈಸ್ ತೋರಿಸಿದ್ದಾರೆ ; ಸೈನ್ಯದ ನೇತೃತ್ವ ಸೂಚಿಸುವ "ದಣಾಯಕ" ಎಂಬ ಬಿರುದು ಅವನಿಗಿತ್ತು.

---

1 ಒಂದನೆಯ ಶವ್ವಾಲ ಹಿ.ಶ. ೮೨೫. ಫಿರಿಸ್ತಾ (ಸ್ಕಾಟ್) ಪುಟ ೯೫, ಆಳಿಕೆಯ ದೀರ್ಘತೆಯನ್ನು ಕೊಡುತ್ತಾನೆ ಮತ್ತು ಅವನ ಅಂಕಿಗಳು ಈ ಪರಿಣಾಮ ಬೀರುತ್ತವೆ.

2 ಆ ಸ್ಥಳ ಬಹುಶಃ ರಾಯರ ಆಳಿಕೆಗಳಲ್ಲಿ ಈ ನದಿಗೆ ಅಡ್ಡವಾಗಿ ಕಟ್ಟಿದ ಅಣೆಕಟ್ಟಿನಿಂದ ನೀರು ಪೂರೈಕೆಯಾಗುವ ಹಳೆಯ ನೀರಾವರಿ ಕಾಲುವೆಗಳಿಗೆ ಸಮೀಪವಿದ್ದಿರಬೇಕು.

3 ಈ ಕತೆಯನ್ನು ರಾಯ ಆ ಸಮಯಕ್ಕೆ ಎಳೆಯ ವಯಸ್ಸಿನವನಾಗಿದ್ದ ಸಂಗತಿಯೊಂದಿಗೆ ಸಮನ್ವಯಿಸುವುದು ಕಷ್ಟಕರ. ಏಕೆಂದರೆ, ಆಗ ಅವನು ತೀರ ಹುಡುಗನಾಗಿದ್ದುದು ನಿಜವೆಂದು ನಾನು ಬಗೆಯುತ್ತೇನೆ. ಫಿರಿಸ್ತಾ ಈ ವೃತ್ತಾಂತ ತೆಗೆದುಕೊಂಡಿದ್ದ, ಮಹಮ್ಮದೀಯ ಚರಿತ್ರಕಾರರು ಸೈನ್ಯದ ನೇತೃತ್ವ ವಹಿಸಿದ್ದ ಕುಟುಂಬದ ವಯಸ್ಕನೊಬ್ಬನನ್ನು ರಾಜನೆಂದು ತಪ್ಪು ತಿಳಿಯುವ ಸಾಧ್ಯತೆಯಿತ್ತೆ ? ಚರಿತ್ರಕಾರರು ಹಿಂದೂ ರಾಜರ ಹೆಸರುಗಳನ್ನು ಖಚಿತ ಪಡಿಸಿಕೊಳ್ಳಲು ಶ್ರಮವಹಿಸಿದಂತೆ ತೋರುವುದಿಲ್ಲ. ಆದರೂ ಸಹ, ಸ್ವಲ್ಪ ಮುಂದೆ ಫಿರಿಸ್ತಾ ದೇವರಾಯನ ಮಗನ ಬಗೆಗೆ ಹೇಳುತ್ತಾನೆ.

4 ವಿಜಯನಗರಕ್ಕೆ ತೀರ ಹತ್ತಿರದಲ್ಲಿ ನಡೆಯಿತೆಂಬುದನ್ನು ಬಿಟ್ಟು ಈ ಘಟನೆ ಜರುಗಿದ ಸ್ಥಳದ ಬಗೆಗೆ ಯಾವ ಸುಳಿವೂ ಇಲ್ಲ. ಸುಲ್ತಾನ ಕೆಳಗೆ ಬಯಲಿರುವ ಕೆಲವು ಗುಡ್ಡಗಳ ಬಳಿ ಹೋಗಿರಬೇಕು. ಏಕೆಂದರೆ, ಅವನು ಬಯಲಿನಲ್ಲಿದ್ದ ಮಣ್ಣಿನ ಆವರಣ ತಲುಪುವ ಆತುರದಲ್ಲಿ ಕುದುರೆಗೆ ದಾಟಲು ಕಠಿಣವಾದ ಬಯಲು ಭೂಮಿ ಎದುರಾಯಿತು. ಈ ವರ್ಣನೆ ಸಮೀಪದಲ್ಲಿನ ಅಸಂಖ್ಯ ಸ್ಥಳಗಳಿಗೆ ಅನ್ವಯಿಸುತ್ತದಾದುದರಿಂದ ಊಹಿಸುವುದು ನಿಷ್ಪ್ರಯೋಜಕ, ಅವನು ಕುದುರೆಯ ಮೇಲಿದ್ದುದರಿಂದ ಅವನು ಚಿಗರಿಯನ್ನು ಹಿಂದೆ ಹಾಕುತ್ತಿದ್ದುದು ಸಾಧ್ಯವಿದ್ದಿರಬಹುದು.

5 ಅಹ್ಮದ ಪಟ್ಟಕ್ಕೆ ಬರುವ ಮುನ್ನ ಅವನ ಅಣ್ಣ ಪೈಗಂಬರವಾಸಿ ಸುಲ್ತಾನ ಫಿರೂಜ ಸಿಂಹಾಸನವನ್ನು ತನ್ನ ಮಗ ಹಸನನಿಗೆ ದೊರಕಿಸಲೋಸುಗ ಅಹ್ಮದನ ಕಣ್ಣು ಕೀಳಿಸಲು ಹೊಂಚು ಹಾಕಿದ್ದ. ಇದರ ಬಗೆಗೆ ಎಚ್ಚರಿಕೆ ನೀಡಲಾಗಿದ್ದ ಅಹ್ಮದ ತನ್ನ ಸುರಕ್ಷಿತತೆಯನ್ನು ಕಾಪಾಡಿಕೊಳ್ಳಲು ಸಕಾಲದಲ್ಲಿ ಕಲಬುರ್ಗಾಕ್ಕೆ ಹೊರಟ.

6 ಇದು ಮಹಮ್ಮದೀಯ ಕಥನಾಂತರ. ಕ್ರಿ.ಶ. ೧೪೯೯ರ ಒಪ್ಪಂದದ ಕರಾರುಗಳನ್ನು ಹೇಳುವಾಗ ಫಿರಿಸ್ತಾ ಈ ಕಪ್ಪದ ಬಗೆಗೆ ಏನನ್ನೂ ಹೇಳಿಲ್ಲ. ಆದರೆ, ಕಪ್ಪವನ್ನು ನಿಜವಾಗಿಯೂ ಕೊಡಲಾಯಿತೆಂಬುದು ನಿಜವಿರಬಹುದು.

ಸ್ಪಷ್ಟವಿರುವಂತೆ ಅವನ್ನು ಮುಹಮ್ಮದ ಷಾ ಬಹಮನಿ ವಸೂಲು ಮಾಡಿದ್ದ ಮತ್ತು ಒಂದನೆಯ ಬುಕ್ಕರಾಯ ಒಪ್ಪಿದ್ದ. ಒಂದನೆಯ ಬುಕ್ಕರಾಯ ದಾವೂದ ಶಾಹನ ಸಹೋದರನಾದ ಮುಹಮ್ಮದ ಪಟ್ಟಕ್ಕೆ ಬಂದಾಗ ಈ ವ್ಯವಸ್ಥೆಯನ್ನು ದೃಢೀಕರಿಸಿದ. (ಮೇಲೆ ಪುಟ ೪೭)

7 ಸೋತ ಕೆಳಮಟ್ಟದವನೆಂದು ಅವನನ್ನು ನಿಜವಾಗಿ ಅವಹೇಳನಕರವಾಗಿ ನಡೆಸಿದಂತೆ ಹಾಗೂ ಆ ರೀತಿ ಮುಹಮ್ಮದೀಯ ಸೈನ್ಯಕ್ಕೆ ಪ್ರದರ್ಶಿಸಿದಂತೆ ತೋರುತ್ತದೆ. ಅವನಿಗೆ ಗೌರವ ತೋರುವ ಮನಸ್ಸಿದರೆ ಸ್ವತಃ ಸುಲ್ತಾನನೇ ಅವನನ್ನು ಎದುರುಗೊಂಡು ಅವನ ತಂದೆಯ ಪ್ರತಿನಿಧಿಯೆಂದು ಪರಿಗಣಿಸಿ ಅವನ ಜೊತೆ ನಡೆದು ಬರಬಹುದಿತ್ತು. ಅಲ್ಲದೆ, ರಾಜಕುಮಾರ ಸಿಂಹಾಸನದ ಅಡಿಯಲ್ಲಿ ಕುಳಿತುಕೊಳ್ಳಲು ಅನುಮತಿಸಲಾಗಿತ್ತು ಮತ್ತು ಬಹುಮಟ್ಟಿಗೆ ಅವನನ್ನು ಸ್ವಸ್ಥ ಕೃಷ್ಣಾ ನದಿ ತಲುಪುವವರೆಗೆ ಸೈನ್ಯದೊಂದಿಗೆ ಸೆರೆಯಾಳಿನಂತೆ ಕರೆದೊಯ್ಯಲಾಯಿತು.

8 ೮ನೆಯ ರಜಬ್ ಹಿ.ಶ. ೭೬೮ (ಫಿರಿಸ್ತಾ), ಬರ್‌ಹಾನ್-ಇ-ಮಾಸಿರ್ ೩ನೆಯ ರಜಬ್ ಎಂದು ಹೇಳುತ್ತದೆ.

9 ಫಿರಿಸ್ತಾ (ಸ್ಕಾಟ್), i, ೧೧೮

10 ಮುಂದೆ, ಪುಟ. ೩೦೩

11 'ದಣ್ಣಾಯಕ' ಎಂಬುದನ್ನು ಪ್ರವಾಸಿ ಅಂಕಿತನಾಮವೆಂದು ಗ್ರಹಿಸಿದ್ದಾನೆ. ಕೇವಲ 'ಸೇನಾಧಿಪತಿ'—ಧನ್ನಾಯಕ ಎಂದು ಮಾತ್ರ ಅದರ ಅರ್ಥ.

12 ದೇವರಾಯನ ವಯಸ್ಸಿನ ಬಗೆಗೆ ಮೇಲೆ ಪುಟ ೬೩ ನೋಡಿರಿ. ಈ ಹೊತ್ತಿಗೆ ಅವನು ಸಿಂಹಾಸನದ ಮೇಲಿದ್ದು ಇಪ್ಪತ್ತಮೂರು ವರ್ಷಗಳಾಗಿದ್ದವು.

13 ಈ ಶಬ್ದಗಳು ಅಬ್ದುರ್ ರಜಾಕ್‌ನ ಹೇಳಿಕೆಯನ್ನು ದೃಢಪಡಿಸುವಂತೆ ತೋರುತ್ತವೆ.

14 ಪ್ರಚಲಿತ ಶಕೆ ೧೩೪೮, ವಿಶ್ವಾವಸು ವರ್ಷ ("ಏಶಿಯಾಟಿಕ್ ರಿಸರ್ಚಸ್", XX ಪು. ೩೩ ; ಹುಲ್ಟ್ಜ್‌ನ ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್," i, ೮೨)

15 ಅದೇ ಪು. ೧೬೦ ; ಪ್ರಚಲಿತ ಶಕೆ ೧೩೪೯, ಪರಾಭವ ಅನಂತರವರ್ಷ, ಕಾರ್ತಿಕ ಮಾಸದ ಹುಣ್ಣಿಮೆಯ ದಿನದಂದು.

16 ಹುಲ್ಟ್ಜ್‌ನ "ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್," i, ಪು. ೭೯, ಐದನೆಯ ಕರ್ಕಾಟಕ ಶುಕ್ಲ, ಪ್ರಚಲಿತ ಶಕೆ ೧೩೫೨, ಸಾಧಾರಣ ವರ್ಷ. ದಾನಿಯ ಹೆಸರನ್ನು ವೀರ ಪ್ರತಾಪ ದೇವರಾಯ ಮಹಾರಾಯ ಎಂದು ಕೊಡಲಾಗಿದೆ ಮತ್ತು ಅವನನ್ನು ಮಹಾಮಂಡಲೇಶ್ವರ, ನಾಲ್ಕು ಸಾಗರಗಳ ಪ್ರಭು, ಎಂದು ಕರೆಯಲಾಗಿದೆ.

17 ಉಪರೋಕ್ತ ಕೃತಿ, ಪು. ೧೦೯. ಇವೆರಡೂ ರಾಜನಿಗೆ ಪೂರ್ಣ ರಾಜವೈಭವದ ಬಿರುದುಗಳನ್ನು ಕೊಡುತ್ತವೆ.

18 ಇಂಡಿಯನ್ ಆ್ಯಂಟಿಕ್ವಿಟಿಜ್, XXV, ೩೪೬

19 ಅರ್ಥಾತ್, ತಿಂಗಳಿನ ಎರಡನೆಯ ಅಥವಾ ಕತ್ತಲಿನ ಅರ್ಧಭಾಗ (ಕೃಷ್ಣಪಕ್ಷ).

20 ಹುಲ್ಟ್‌ಜ್‌ನ "ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್," ii, ೩೩೯ ದಿನಾಂಕ ಮುಗಿದ ಶಕೆ ೧೮೬೩, ವರ್ಷ, ಕ್ಷಯ, ಬುಧವಾರ, ತಿಂಗಳಿನ ಬೆಳಕಿನ ಅರ್ಧಭಾಗದ ಐದನೆಯ ದಿನ, ನಕ್ಷತ್ರ ಪೂರ್ವ ಫಾಲ್ಗುಣಿ ದಿನದಂದು

21 ಹುಲ್ಟ್‌ಜ್ 'ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್," i, ೧೧೦, ಮುಗಿದ ಶಕೆ ೧೩೭೧, ವರ್ಷ ಶುಕ್ಲ, ಶನಿವಾರ ಸಿಂಹ ಮಾಸದ ೧೩ನೆಯ ಶುಕ್ಲ, ನಕ್ಷತ್ರ ಉತ್ತರಾಷಾಢ ದಿನದಂದು.

ಅಧ್ಯಾಯ ೭

## ಎರಡನೆಯ ದೇವರಾಯನ ಆಳಿಕೆ (ಕ್ರಿ.ಶ.೧೪೨೦ (?) ೧೪೪೬)ಯಲ್ಲಿ ವಿಜಯನಗರ ನಗರ

**ಬ್ರಾಕಿಯೊಲಿನಿಗೆ ನಿಕೋಲೊ ನೀಡಿದ ವರ್ಣನೆ–ರಾಜಧಾನಿ–ಉತ್ಸವಗಳು–ಬೃಹತ್ ಜನಸಂಖ್ಯೆ–ಅಬ್ದುರ್ ರಝಾಕ್‌ನ ವರ್ಣನೆ–ಅವನ ಪ್ರವಾಸ–ನಗರದ ಗೋಡೆಗಳು–ಟಂಕಸಾಲೆ–ಬಜಾರಗಳು–ಶ್ರೇಷ್ಠ ಮಹಾನವಮಿಉತ್ಸವ**

ಈ ದಿನಗಳಲ್ಲಿ ಶ್ರೇಷ್ಠ ವಿಜಯನಗರ ನಗರದ ಸ್ವರೂಪ ಮತ್ತು ಸ್ಥಿತಿಯ ಬಗೆಗೆ ಸ್ವಲ್ಪ ತಿಳಿದುಕೊಳ್ಳಲು ಕೊಂಚ ಸಮಯದ ವರೆಗೆ ಐತಿಹಾಸಿಕ ಘಟನಾವಳಿಯನ್ನು ಸ್ಥಗಿತಗೊಳಿಸುವುದೊಳಿತು. ಕ್ರಿ.ಶ.೧೩೭೮ರಷ್ಟು ಹಿಂದೆಯೆ ಕಲಬರ್ಗಾದ ಸುಲ್ತಾನ ಮುಜಾಹಿದ್ ಈ ರಾಜಧಾನಿಯ ಸೌಂದರ್ಯದ ಬಗೆಗೆ ಎಷ್ಟೊಂದು ಕೇಳಿದ್ದನೆಂದರೆ ಅದನ್ನು ನೋಡಬಯಸಿದನೆಂಬುದನ್ನು ನಾವು ಈಗಾಗಲೆ ಗಮನಿಸಿದ್ದೇವೆ, ಮತ್ತು ಮುಂದಿನ ಅರ್ಧ ಶತಮಾನದಲ್ಲಿ ಅದರ ಮಹತ್ವ ಹಾಗೂ ವೈಭವ ಬೆಳೆದಿದ್ದವು. ೧೪೨೦ ಅಥವಾ ೧೪೨೧ರ ಸುಮಾರಿಗೆ ಸಾಮಾನ್ಯವಾಗಿ ನಿಕೊಲೊ ಕಾಂಟೆ ಅಥವಾ ನಿಕೊಲೊ ಧ್ವ ಕಾಂಟೆ ಎಂದು ಕರೆಯಲಾಗುತ್ತದೆ. ನಿಕೊಲೊ ಎಂಬ ಇಟಲಿಯವ ವಿಜಯನಗರಕ್ಕೆ ಭೆಟ್ಟಿಯಿತ್ತ. ಅವನು ಪ್ರಥಮ ಐರೋಪ್ಯ ಸಂದರ್ಶಕನಾಗಿರಲಿ ಬಿಡಲಿ, ನಮಗೆ ಗೊತ್ತಿರುವಂತೆ ಇಂದಿನವರೆಗೂ ಆ ಸ್ಥಳ ಕುರಿತು ಅವನ ವರ್ಣನೆ ಉಳಿದುಬಂದಿರುವ ಮೊದಲನೆಯದು. ಎರಡನೆಯ ದೇವರಾಯ ಪಟ್ಟಕ್ಕೆ ಬಂದ ಅನತಿ ಕಾಲದಲ್ಲಿಯೆ ಅವನ ಭೆಟ್ಟಿ ಸಂಭವಿಸಿರಬೇಕು. ಸ್ಪಷ್ಟ ಗೋಚರವಿರುವಂತೆ ನಿಕೊಲೊ ತಾನೇ ಸ್ವತಃ ಏನನ್ನೂ ಬರೆಯಲಿಲ್ಲ. ಅವನ ಕತೆಗಳನ್ನು ಪೋಪನ ಮಾಹಿತಿಗಾಗಿ ಅವನ ಕಾರ್ಯದರ್ಶಿ ಪೊಗಿಯೊ ಬ್ರಾಕಿಯೊಲಿನಿ ಲ್ಯಾಟಿನ್ನಿನಲ್ಲಿ ಬರೆದಿಟ್ಟ. ಪೋರ್ತುಗೀಜಿನಲ್ಲಿ ಭಾಷಾಂತರಗೊಂಡ ಅವುಗಳನ್ನು ರ್‍ಯಾಮುಸಿಯೊ ಪೋರ್ತುಗೀಜಿನಿಂದ ಇಟಾಲಿಯನ್ನಿಗೆ ಮರುಭಾಷಾಂತರಿಸಿದ. ಅವನು ಲ್ಯಾಟಿನ್ನಿನಲ್ಲಿನ ಮೂಲ ಪ್ರತಿ ಹುಡುಕಿ ವಿಫಲನಾದ. ಮೂಲಕೃತಿಯನ್ನು ೧೭೨೩ರಲ್ಲಿ ಪಿ. ಬ್ರ್ಯಾಕಿಯೊಲಿನಿ, **ದ ವೆರಿಯಟೇಟ್ ಫಾರ್ಟ್ಯೂನ್' ಲಿಬರ್ ಕ್ವಾಟುಒರ್** ಎಂಬ ಹೆಸರಿನಲ್ಲಿ ಪ್ಯಾರಿಸಿನ ಆ್ಯಬೆ ಆಲಿವಾ ಪ್ರಕಟಿಸಿತು.

ಭಾರತಕ್ಕೆ ಬಂದಿಳಿದ ನಿಕೊಲೊ ಮೊದಲು ಗುಜರಾತದಲ್ಲಿನ ಕ್ಯಾಂಬೆ ನಗರಕ್ಕೆ ಭೆಟ್ಟಿಕೊಟ್ಟ. ಅಲ್ಲಿ ಇಪ್ಪತ್ತು ದಿನಗಳ ವಾಸದನಂತರ ಕರಾವಳಿಯಗುಂಟ ಕೆಳಗೆ

'ಪಕಮುರಿಯಾ' (ಬಹುಶಃ ಬಾರ್ಕೂರ) ಮತ್ತು ನಂತರದ ಲೇಖಕರ 'ಮೌಂಟ್ ದ ಎಲಿ' ಇಲ್ಲವೆ 'ಕಾಬೊ ದ ಎಲಿ' ಆಗಿರುವ 'ಹೆಲಿ'ಗಳಿಗೆ ಸಾಗಿದ. ಅಲ್ಲಿಂದ ಆವನು ಒಳನಾಡಿನಲ್ಲಿ ಪಯಣಿಸಿ ರಾಯನ ರಾಜಧಾನಿ ವಿಜಯನಗರ ತಲುಪಿದ. ಅದನ್ನವನು "ಬಿಝುನೆಗೆಲಿಯಾ"[1] ಎಂದು ಕರೆಯುತ್ತಾನೆ. ಆವನು ತನ್ನ ವರ್ಣನೆಯನ್ನು ಹೀಗೆ ಆರಂಭಿಸುತ್ತಾನೆ :—

'ಬಿಝುನೆಗೆಲಿಯಾದ ಮಹಾನಗರ ಅತಿ ಕಡಿದಾದ ಪರ್ವತಗಳ ಹತ್ತಿರ ನೆಲೆಗೊಂಡಿದೆ. ನಗರದ ಸುತ್ತಳತೆ ಅರುವತ್ತು ಮೈಲು ಇದೆ. ಅದರ ಗೋಡೆಗಳು ಪರ್ವತಗಳವರೆಗೆ ಚಾಚಿವೆ ಮತ್ತು ಅವುಗಳ ಅಡಿಯಲ್ಲಿರುವ ಕಣಿವೆಗಳನ್ನು ಆವರಿಸಿವೆ. ಅದರಿಂದ ಅವುಗಳ ವ್ಯಾಪ್ತಿ ಹೆಚ್ಚಿದೆ. ಈ ನಗರದಲ್ಲಿ ಶಸ್ತ್ರ ಧರಿಸಲು ಯೋಗ್ಯರಾದ ತೊಂಬತ್ತು ಸಾವಿರ ಜನರಿರುವರೆಂದು ಅಂದಾಜು ಮಾಡಲಾಗಿದೆ".

ನಾನು ಇಲ್ಲೊಂದು ತಿದ್ದುಪಡಿಯನ್ನು ನಡುವೆ ಸೇರಿಸಬೇಕಾಗಿದೆ. ವಿಜಯನಗರದಲ್ಲಿ ಹೇಳಲು ಯೋಗ್ಯವಾದ ಪರ್ವತಗಳಿರಲಿಲ್ಲ. ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಕಲ್ಲುಗುಡ್ಡಗಳ ರಾಶಿ ಮಾತ್ರವಿತ್ತು. ಅವುಗಳಲ್ಲಿ ಕೆಲವು ಗಮನಾರ್ಹ ಎತ್ತರಕ್ಕೆ ಏರಿದ್ದವು. ಆದರ ರಕ್ಷಣಾಸಾಲುಗಳ ವ್ಯಾಪ್ತಿ ಅಸಾಧಾರಣವಾಗಿತ್ತು. ಎತ್ತರವಾದ ಮತ್ತು ಬೃಹದಾಕಾರದ ಕಲ್ಲುಗೋಡೆಗಳು ಎಲ್ಲೆಲ್ಲೂ ಕಣಿವೆಗಳಿಗೆ ಅಡ್ಡಹಾಯ್ದಿದ್ದವು ಮತ್ತು ಪರ್ವತಗಳ ವರೆಗೆ ಸಾಗಿದುದಲ್ಲದೆ ಗುಡ್ಡಗಳ ಮೇಲೂ ಹತ್ತಿದ್ದವು. ಹೊರಸಾಲುಗಳು ಸಮತಟ್ಟು ಪ್ರದೇಶದ ಮೇಲೆ ಹಲವಾರು ಮೈಲುಗಳ ವರೆಗೆ ಅವಿಚ್ಛಿನ್ನವಾಗಿ ಚಾಚಿದ್ದವು. ಕಲ್ಲುಬಂಡೆಗಳಿಂದ ಆಚ್ಛಾದಿತವಾದ ಎತ್ತರಗಳ ಮಧ್ಯವಿರುವ ತಗ್ಗುಗಳು ಮತ್ತು ಕಣಿವೆಗಳು ಜನವಸತಿಯಿಂದ ತುಂಬಿದ್ದವು. ಅವೆಲ್ಲ ಬಹುಮಟ್ಟಿಗೆ ನಿಸ್ಸಂದೇಹವಾಗಿ ಬಡ ಹಾಗೂ ಹೊಲಸು ಇದ್ದವು. ಆದರೆ, ಮಧ್ಯದಲ್ಲಿ ವರಿಷ್ಠರು ವರ್ತಕರ ಮತ್ತು ವಿಶಾಲ ಸಮುದಾಯದ ಉಚ್ಚ ವರ್ಗಗಳ ಕಲ್ಲಿನ ನಿವಾಸಗಳಿಂದ ಹೆಣೆಯಲ್ಪಟ್ಟಿದ್ದವು. ಜೋಕೆಯಿಂದ ಕಟ್ಟಲಾಗಿದ್ದ ರಾಯರುಗಳು ನೀರು ಕಾಲುವೆಗಳು ಭೂಮಿಗೆ ನೀರುಣಿಸಲು ಸಾಧ್ಯವಾಗಿಸಿದ್ದೆಡೆ ಮಾತ್ರ ನಿವಾಸಗಳಿರಲಿಲ್ಲ. ಈ ಭಾಗಗಳಲ್ಲಿ ಸಮೃದ್ಧ ತೋಟಗಳು ಮತ್ತು ಆರಣ್ಯಗಳು, ಸೊಂಪಾಗಿ ಬೆಳೆದ ಭತ್ತ ಮತ್ತು ಕಬ್ಬಿನ ಬೆಳೆಗಳು ವಿಪುಲವಾಗಿದ್ದವು. ಅಲ್ಲಲ್ಲಿ ಅದ್ಭುತವಾಗಿ ಕೆತ್ತಲಾದ ಹಿಂದೂ ದೇವತೆಗಳ ದೇವಸ್ಥಾನಗಳು ಮತ್ತು ಗುಡಿಗಳು ಇದ್ದವು. ಅವುಗಳಲ್ಲಿ ಅಧಿಕ ಮಹತ್ವದವುಳ್ಳವುಗಳಿಗೆ ಬ್ರಾಹ್ಮಣೀಯ ಕಾಲೇಜಗಳು ಮತ್ತು ಶಾಲೆಗಳನ್ನು ಸೇರಿಸಲಾಗಿತ್ತು.

ದೃಶ್ಯಾವಳಿಯ ಸ್ವರೂಪದ ಬಗೆಗಾದರೋ ಗಲಳಜರಲ್ಲಿ ಶ್ರೇಷ್ಠ ದಕ್ಷಿಣ-ಭಾರತೀಯ ಭೂವಿಜ್ಞಾನಿ ಲೆಫ್ಟಿನೆಂಟ್ ನ್ಯೂಬೋಲ್ಡ್[2] ನೀಡಿದ ವರ್ಣನೆಯನ್ನು ಉದ್ಧರಿಸುವುದಕ್ಕಿಂತ ಒಳ್ಳೆಯದು ಇನ್ನೊಂದಿಲ್ಲ :—

'ತುಂಬದ್ರಾದ ದಕ್ಷಿಣ ದಡದ ಮೇಲಿನ ವಿಜಯನಗರದ ಹಾಗೂ ಉತ್ತರ ದಡದ ಮೇಲಿನ ಅದರ ಹೊರಗೇರಿ ಆನೆಗುಂದಿಯ ಭಗ್ನಾವಶೇಷಗಳು ಆವರಿಸಿರುವ ವ್ಯಾಪಕ ವಾಗಿರುವ ಇಡಿ ನಿವೇಶನ ಬೆಣಚುಗಲ್ಲು ಮತ್ತು ಅವನ್ನು ಹೋಲುವ ಪದರುಗಲ್ಲಿನ ದೊಡ್ಡ ನಗ್ನ ರಾಶಿ ಮತ್ತು ಗುಬಾಟುಗಳಿಂದ ಆವೃತವಾಗಿದೆ. ಅವುಗಳು ಮುರಿದು ಬಿದ್ದಿರುವ ಬಂಡೆಗಳ ರಾಶಿಯಿಂದ ಅಡಚಣೆ ಒಡ್ಡಲ್ಪಟ್ಟ ಬಂಡೆಗಣಿವೆ ಮತ್ತು ಇಕ್ಕಟ್ಟಾದ ಹಾಗೂ ಏರುಪೇರುಗಳಿಂದೊಡಗೂಡಿದ ಕಣಿವೆಗಳಿಂದ ಪ್ರತ್ಯೇಕಿಸಲ್ಪಟ್ಟವೆ. ವಿಶಾಲವಾದ ಸಮತಟ್ಟಾದ ತಳವುಳ್ಳ ಕಣಿವೆಗಳಲ್ಲಿ ಕೆಲವು ನದಿಯಿಂದ ಮೇಲುಕಾಲುವೆ ಮೂಲಕ ನೀರು ಉಣ್ಣುತ್ತವೆ....ಬೀಜನಗರ ಮತ್ತು ಆನೆಗುಂದಿಯ ಶಿಖರಗಳು, ಕೋಡುಬಂಡೆಗಳು ಮತ್ತು ತೊಲೆಗಲ್ಲುಗಳು ಚಿತ್ತಾಕರ್ಷಕ ಅಸ್ತವ್ಯಸ್ಥತೆ ಯಿಂದ ಕ್ಷಿತಿಜದತ್ತ ಚಾಚಿವೆ. ಅವುಗಳು ಡೆಕ್ಕನದ ಪ್ರಾಚೀನ ರಾಜಧಾನಿಯ ಅಧಿಕ ಕೃತ್ರಿಮ ಭಗ್ನಾವಶೇಷಗಳಿಗಿಂತ ಭಿನ್ನವಾಗಿಲ್ಲ. ಸಾಮಾನ್ಯವಾಗಿ ಅವುಗಳ ಬದಿ ಯಿಂದಲೆ ಎಬ್ಬಿ ತೆಗೆದು ಕಲ್ಲು ದಿಮ್ಮಿಗಳಿಂದ ಕಟ್ಟಲಾಗಿರುವ ಅವುಗಳು ಮೇಲಿಂದ ಮೇಲೆ ಬೃಹದಾಕಾರದ ಪ್ರಾಕೃತಿಕ ಕಲ್ಲುಕೆಲಸದಿಂದ ಪ್ರಕೃತಿಯು ಬೃಹತ್ ಗುಮ್ಮಟ ಮತ್ತು ಏಣುಗಳ ನೆತ್ತಿಗೇರುತ್ತಿರುವ ಬೆಣಚುಗಲ್ಲಿನ ವಿಪರೀತ ದೊಡ್ಡ ಘನಾಕೃತಿಯ ಕಲ್ಲುದಿಮ್ಮಿಯ ಗೋಡೆಗಳಲ್ಲಿ ಮತ್ತು ಗತ್ತಿನಿಂದ ನಿಂತಿರುವ ತೊಲೆಗಲ್ಲುಗಳಲ್ಲಿ ಪ್ರಕೃತಿ ಪ್ರದರ್ಶಿಸಿದ ಅನ್ಯಪ್ರತ್ಯನ್ಯ ಸೂಕ್ಷ್ಮತೆ ಮತ್ತು ಧಾರ್ಡ್ಯಗಳೊಂದಿಗೆ ರೂಪ ರೇಷೆಯ ವಿಕಟತೆ ಹಾಗೂ ಸ್ವರೂಪದ ಬೃಹದಾಕಾರತೆಯಲ್ಲಿ ಪೈಪೋಟಿ ಮಾಡುತ್ತವೆ."

ಅರಮನೆಗಳು. ದೇವಾಲಯಗಳು, ಗೋಡೆಗಳು ಮತ್ತು ಹೆಬ್ಬಾಗಿಲುಗಳ ಅವಶೇಷಗಳನ್ನು ಇಂದೂ ಕಾಣಬಹುದು. ಇವುಗಳು ಸ್ವತಃ ವಿಜಯನಗರದ ನಿವೇಶ ನದಲ್ಲಿ ಮಾತ್ರವಲ್ಲದೆ ರಭಸದಿಂದ ಹರಿಯುತ್ತಿರುವ ನದಿಯ ಉತ್ತರ ಬದಿಯಲ್ಲಿ ನಿಂತಿರುವ ಸಾಮ್ರಾಜ್ಯ-ನಗರದ ತಾಯಿಯಾದ ಭವ್ಯವಾದ ಆನೆಗುಂದಿ ದುರ್ಗದಲ್ಲೂ ವಿಪುಲವಾಗಿ ಕಾಣಸಿಗುತ್ತವೆ. ಈ ಜೋಡುನಗರದ ಜನಸಂಖ್ಯೆ ಅಪಾರವಾಗಿತ್ತು ಮತ್ತು ಅದು ವ್ಯಾಪಿಸಿದ ಕ್ಷೇತ್ರ ಬಹಳ ವಿಶಾಲವಾಗಿತ್ತು. ದಕ್ಷಿಣದಲ್ಲಿರುವ ಕೊನೆಯ ಗೋಡೆಯಿಂದ ಈಗಿನ ಹೊಸಪೇಟೆ ನಗರದಾಚೆ ಉತ್ತರದಲ್ಲಿರುವ ಆನೆಗುಂದಿಯ ರಕ್ಷಣಾದುರ್ಗಸಾಲುಗಳ ತೀರ ತುದಿಯ ವರೆಗೆ ಅಂತರ ಸುಮಾರು ಹನ್ನೆರಡು ಮೈಲಿದೆ. ಬಯಲಿನಲ್ಲಿರುವ ತೀರ ಪಶ್ಚಿಮದ ಗೋಡೆಗಳ ಸಾಲಿನಿಂದ ದಾರೋಜಿ ಮತ್ತು ಕಂಪ್ಲಿಗಳಲ್ಲಿನ ಗುಡ್ಡಗಳಲ್ಲಿನ ಪೂರ್ವಕಟ್ಟಡಗಳ ಕೊನೆಯ ವರೆಗೆ ಅಂತರ ಸುಮಾರು ಹತ್ತು ಮೈಲಿದೆ. ಈ ಕ್ಷೇತ್ರದೊಳಗೆ ನಾನು ಹೇಳಿರುವ ಕಟ್ಟಡಗಳ ಅವಶೇಷಗಳು ಕಂಡುಬರುತ್ತವೆ. ಹೊರ ಮನೆಗಳು ಅದೃಶ್ಯವಾಗಿವೆ ಮತ್ತು ಮುರುಕಲುಗುಪ್ಪೆ ಹಳೆಯ ನೆಲಹಂತದ ಮೇಲೆ ಅನೇಕ ಅಡಿ ದಟ್ಟವಾಗಿ ಬಿದ್ದಿದೆ. ಆದರೆ ಕಾಲುವೆಗಳು ಇನ್ನೂ ಕಾರ್ಯಸ್ಥಿತಿಯಲ್ಲಿವೆ, ಮತ್ತು ಅವುಗಳು ಇರುವೆಡೆಯಲ್ಲೆಲ್ಲ ಸಮೃದ್ಧ

ಬೆಳೆಗಳು, ಉನ್ನತ ಹಾಗೂ ಭವ್ಯ ಮರಗಳು, ಮತ್ತು ಸೊಂಪಾಗಿ ಬೆಳೆದ ಸಸ್ಯಗಳ ಜಂಗಲು ಕಾಣಸಿಗುತ್ತದೆ. ಮೇಲಿನ ಬಂಡೆಗಳಲ್ಲಿ ಕಟ್ಟಡಗಳು ದೇವಾಲಯಗಳು ಮತ್ತು ಗೋಡೆಗಳ ಅವಶೇಷಗಳಿವೆ, ಮತ್ತು ಅನೇಕ ಕಡೆ ಮಂಗಗಳು ಮತ್ತು ಪಕ್ಷಿಗಳ ಹೊರತು ಬೇರೆ ಯಾರಿಗೂ ದುರ್ಗಮವಾಗಿರುವ ಸ್ಥಳಗಳಾದ ದೊಡ್ಡ ಕಲ್ಲು ಬಂಡೆಗಳ ಹೊರಚಾಚಿರುವ ಅಂಚುಗಳಲ್ಲಿ ಇಲ್ಲವೆ ಉನ್ನತ ಕಲ್ಲು ಬಂಡೆಗಳ ತುತ್ತ ತುದಿಯ ಮೇಲೆ ಕಟ್ಟಲಾದ ಚಿಕ್ಕ ಮಂದಿರಗಳು ನಿಂತಿವೆ.

ಒಂದಾನೊಂದು ಕಾಲಕ್ಕೆ ತಮ್ಮ ಭವ್ಯತೆ ಮತ್ತು ಗಾಂಭೀರ್ಯಗಳಿಂದ ಗಮನಾರ್ಹವಾಗಿದ್ದ ಬೃಹತ್ ಕಟ್ಟಡಗಳು ಅವಶೇಷಗಳು ಕೇಂದ್ರೀಯ ಆವರಣ ದಲ್ಲಿವೆ. ಇವುಗಳು ರಾಜನ ಅರಮನೆಯನ್ನು ಅದಕ್ಕೆ ಹತ್ತಿಕೊಂಡೆ ಸುತ್ತುವರಿದಿದ್ದವು; ಆದರೆ ೧೫೬೫ ರಲ್ಲಿ ಮಹಮ್ಮದೀಯರು ಅವುಗಳ ಮೇಲೆ ಎಷ್ಟು ಪರಿಣಾಮ ಕಾರಿಯಾಗಿ ತಮ್ಮ ಅನಾಗರಿಕ ಇಷ್ಟ ಈಡೇರಿಸಿಕೊಂಡರೆ ಇವುಗಳ ಪೈಕಿ ಅಧಿಕ ಬೃಹದಾಕಾರದ ಸೌಧಗಳ ಕಳಚಿ ಬಿದ್ದಿರುವ ಅವಶೇಷಗಳು ಮಾತ್ರ ಇನ್ನೂ ನಿಂತಿವೆ. ಅರಮನೆಯ ನಿವೇಶನವಾದರೋ ಒಡೆದ ಕಲ್ಲುದಿಮ್ಮಿಗಳ ಗುಡ್ಡೆಗಳು, ನಜ್ಜುಗುಜ್ಜಾದ ಕಟ್ಟಡ ಕೆಲಸ, ಮತ್ತು ಶಿಲ್ಪಗಳ ಚೂರುಗಳಿಂದ ತುಂಬಿರುವ ವಿಶಾಲ ಕ್ಷೇತ್ರದ ನೆಲದ ಮೇಲೆ ಗುರುತಿಸಲ್ಪಡುತ್ತದೆ. ಒಂದೂ ಕಲ್ಲನ್ನು ಇನ್ನೊಂದರ ಮೇಲೆ ಬಿಡಲಾಗಿಲ್ಲ.

ನಿಕೊಲೊನಿಗೆ ಹಿಂದಿರುಗೋಣ. ಅವನು ಹೀಗೆ ಮುಂದುವರೆಯುತ್ತಾನೆ :

"ಈ ಪ್ರದೇಶದ ನಿವಾಸಿಗಳು ತಮಗೆ ಇಷ್ಟಬಂದಷ್ಟು ಹೆಂಡಂದಿರನ್ನು ಮದುವೆಯಾಗುತ್ತಾರೆ. ಅವರನ್ನು ಅವರ ಮೃತ ಗಂಡಂದಿರ ಜೊತೆಗೆ ಸುಡಲಾಗುತ್ತದೆ. ಅವರ ರಾಜ, ಭಾರತದ ಇತರ ಎಲ್ಲ ರಾಜರುಗಳಿಗಿಂತ ಹೆಚ್ಚು ಪ್ರಬಲನಾಗಿರುವನು. ಅವನು ತನಗಾಗಿ ೧೨,೦೦೦ ಹೆಂಡಂದಿರನ್ನು ಮದುವೆಯಾಗಿದ್ದಾನೆ. ಅವರಲ್ಲಿ ೪೦೦೦ ಅವನು ಹೋದಡೆಯಲ್ಲೆಲ್ಲ ನಡೆದುಕೊಂಡೆ ಅವನನ್ನು ಅನುಸರಿಸುತ್ತಾರೆ. ಮತ್ತು ಅಡಿಗೆ ಮನೆಯ ಸೇವೆಯಲ್ಲಿ ಮಾತ್ರ ತೊಡಗಿಸಲ್ಪಟ್ಟಿರುತ್ತಾರೆ. ಉಳಿದವರನ್ನು ಪುರುಷರು ಮೇಣೆಗಳಲ್ಲಿ ಹೊತ್ತು ತರುತ್ತಾರೆ. ಅವರಲ್ಲಿ ೨೦೦೦ ಅಥವಾ ೩೦೦೦ ಜನರನ್ನು ತನ್ನ ಮರಣ ಕಾಲಕ್ಕೆ ಅವರು ಸ್ವಂತ ಇಚ್ಛೆಯಿಂದ ಚಿತೆಯೇರಬೇಕೆಂಬ ಷರತ್ತಿಗೊಳಪಟ್ಟು, ಹೆಂಡಂದಿರೆಂದು ಆಯ್ಕೆ ಮಾಡಲಾಗಿತ್ತು. ಅದು ಅವರಿಗೆ ದೊಡ್ಡ ಗೌರವವೆಂದು ಪರಿಗಣಿತವಾಗಿತ್ತು....

"ವರ್ಷದಲ್ಲಿ ಒಂದು ನಿರ್ದಿಷ್ಟ ಸಮಯಕ್ಕೆ ಅವರ ದೇವತಾಮೂರ್ತಿಯನ್ನು ಎರಡು ರಥಗಳ ಮಧ್ಯೆ ಇರಿಸಿ ನಗರದಲ್ಲಿ ಒಯ್ಯಲಾಗುತ್ತದೆ. ಅವುಗಳಲ್ಲಿ ಶ್ರೀಮಂತವಾಗಿ ಅಲಂಕೃತರಾದ ತರುಣಿಯರಿದ್ದು ದೇವರನಾಮ ಹಾಡುತ್ತಾರೆ, ಮತ್ತು ರಥಗಳನ್ನು ಬೃಹತ್ ಜನಸಮೂಹ ಅನುಸರಿಸುತ್ತದೆ. ಭಕ್ತಿಯ ಆವೇಶಕ್ಕೊಳಗಾದ ಅನೇಕರು

ಜಜ್ಜಿ ಮರಣವನ್ನಪ್ಪಲೋಸುಗ ಗಾಲಿಗಳ ಮುಂದೆ ನೆಲದ ಮೇಲೆ ಬೀಳುತ್ತಾರೆ. ತಮ್ಮ ದೇವರಿಗೆ ಆ ಮಾದರಿಯ ಮೃತ್ಯು ಸ್ವೀಕಾರಾರ್ಹವೆಂದು ಅವರು ಹೇಳುತ್ತಾರೆ. ಇನ್ನು ಕೆಲವರು ತಮ್ಮ ಪಕ್ಕೆಯಲ್ಲಿ ತೂತು ಕೊರೆದುಕೊಂಡು ಅದರ ಮೂಲಕ ಹಗ್ಗ ಪೋಣಿಸಿಕೊಂಡು ಅಲಂಕಾರವೆಂಬಂತೆ ರಥಕ್ಕೆ ತೂಗು ಹಾಕಿಕೊಳ್ಳುವರು, ಮತ್ತು ಹೀಗೆ ನೇತಾಡುತ್ತ ಮತ್ತು ಅರೆಮೃತ ಸ್ಥಿತಿಯಲ್ಲಿ ತಮ್ಮ ದೇವರ ಮೂರ್ತಿಯೊಂದಿಗೆ ಸಾಗುತ್ತಾರೆ. ಈ ರೀತಿಯ ತ್ಯಾಗ ಅತ್ಯುತ್ತಮ ಮತ್ತು ಎಲ್ಲಕ್ಕಿಂತ ಹೆಚ್ಚು ಸ್ವೀಕೃತವೆಂದು ಅವರು ಪರಿಗಣಿಸುತ್ತಾರೆ.

"ವರ್ಷದಲ್ಲಿ ಮೂರು ಸಲ ಅವರು ವಿಶೇಷ ವೈಭವದ ಉತ್ಸವಗಳನ್ನು ಆಚರಿಸುತ್ತಾರೆ. ಈ ಸಂದರ್ಭಗಳಲ್ಲೊಂದರಲ್ಲಿ ಎಲ್ಲ ವಯಸ್ಸಿನ ಪುರುಷ ಸ್ತ್ರೀಯರು ನದಿಗಳಲ್ಲಿ ಇಲ್ಲವೆ ಸಮುದ್ರದಲ್ಲಿ ಸ್ನಾನ ಮಾಡಿ ಹೊಸ ಬಟ್ಟೆ ತೊಟ್ಟು ಮೂರು ಪೂರ್ಣ ದಿನಗಳನ್ನು ಗಾಯನ, ನೃತ್ಯ, ಮತ್ತು ಭೋಜನಗಳಲ್ಲಿ ಕಳೆಯುತ್ತಾರೆ. ಇನ್ನೊಂದು ಉತ್ಸವದಲ್ಲಿ ತಮ್ಮ ದೇವಾಲಯಗಳ ಒಳಗೆ ಮತ್ತು ಮಾಳಿಗೆಯ ಮೇಲೆ ಸೂಸಿಹುಣ್ಣಿನ ಎಣ್ಣೆಯ ಅಸಂಖ್ಯ ದೀಪಗಳನ್ನು ಹಚ್ಚಿ ಅವುಗಳನ್ನು ಹಗಲು ರಾತ್ರಿ ಉರಿಸುತ್ತಾರೆ. ಒಂಬತ್ತು ದಿನ ನಡೆಯುವ ಮೂರನೆಯದರಲ್ಲಿ ಎಲ್ಲ ರಹದಾರಿಗಳಲ್ಲಿ ಸಣ್ಣ ಹಡಗಗಳ ಪಟಸ್ತಂಭದಂತಿರುವ ದೊಡ್ಡ ತೊಲೆಗಳನ್ನು ನಿಲ್ಲಿಸುತ್ತಾರೆ. ಅವುಗಳ ಮೇಲ್ಭಾಗಕ್ಕೆ ವಿವಿಧ ನಮೂನೆಯ ಅತಿ ಸುಂದರವಾದ ಮತ್ತು ಬಂಗಾರದ ಎಳೆಗಳನ್ನು ಜೋಡಿಸಿದ ಅರಿವೆಯ ತುಂಡುಗಳನ್ನು ಕಟ್ಟುತ್ತಾರೆ. ಪ್ರತಿದಿನ ಧರ್ಮಕ್ಕೆ ಮೀಸಲಾದ, ಶಾಂತಚಿತ್ತದಿಂದ ಎಲ್ಲವನ್ನೂ ಸಹಿಸಬಲ್ಲ, ದೇವರ ಅನುಗ್ರಹಕ್ಕಾಗಿ ಪ್ರಾರ್ಥಿಸಬೇಕಿದ್ದ, ಪೂಜ್ಯಭಾವದ ವ್ಯಕ್ತಿಯೊಬ್ಬನನ್ನು ಕೂಡಿಸಲಾಗುತ್ತದೆ. ಈ ವ್ಯಕ್ತಿಗಳ ಮೇಲೆ ಕಿತ್ತಳೆ, ಲಿಂಬೆ, ಮತ್ತು ಇತರ ಸುವಾಸನೆಯ ಹಣ್ಣುಗಳನ್ನು ಎಸೆಯುತ್ತಾರೆ. ಅದೆಲ್ಲವನ್ನು ಅವರು ಸಮಾಧಾನದಿಂದ ಸಹಿಸುತ್ತಾರೆ. ಇನ್ನೂ ಮೂರು ಉತ್ಸವ ದಿನಗಳೂ ಇವೆ. ಅಂದು ರಾಜ ರಾಣಿಯರೂ ಸೇರಿದಂತೆ ಎಲ್ಲ ದಾರಿಹೋಕರ ಮೇಲೆ ಆ ಉದ್ದೇಶಕ್ಕಾಗಿಯೇ ರಸ್ತೆ ಬದಿಯಲ್ಲಿ ಇರಿಸಿದ ಕೇಸರಿ ನೀರನ್ನು ಸಿಂಪಡಿಸುತ್ತಾರೆ. ಇದನ್ನು ಎಲ್ಲರೂ ಬಹಳ ನಗೆಯೊಂದಿಗೆ ಸ್ವೀಕರಿಸುತ್ತಾರೆ.

ಈ ಉತ್ಸವಗಳಲ್ಲಿ ಮೊದಲನೆಯದು ಕನ್ನಡದ ಹೊಸ ದಿನವಿರಬಹುದು. ಅದು ತನ್ನ ಭೆಟ್ಟಿಯ ಕಾಲದಲ್ಲಿ ಅಕ್ಟೋಬರ್ ೧೨ ರಂದು ಇತ್ತು ಎಂದು ಡಾಮಿಂಗೊ ಪ್ಯಾಸ್ ತನ್ನ ದಿನಚರಿಯಲ್ಲಿ ವೃಥವಾಗಿ ಹೇಳುತ್ತಾನೆ. ಎರಡನೆಯದು ಅಕ್ಟೋಬರ ತಿಂಗಳಿನ ಸುಮಾರಿಗೆ ಜರುಗುವ, ಆಗ ಎಲ್ಲ ಮನೆಯವರೂ ದೀಪಗಳನ್ನು ಬೆಳಗಿಸುವ ಮತ್ತು ದೇವಾಲಯಗಳನ್ನು ದೀಪಾಲಂಕರಿಸುವ ದೀಪಾವಳಿ ಹಬ್ಬವಿರಬೇಕು. ಮೂರನೆಯದರ ವರ್ಣನೆ ವಿಜಯನಗರದಲ್ಲಿ ಒಂಬತ್ತು ದಿನಗಳ ಉತ್ಸವವಾದ ಮಹಾನವಮಿಗೆ ಸರಿಹೋಲುತ್ತದೆ. ಅದು ಪ್ಯಾಸ್‌ನ ಭೆಟ್ಟಿಯ ಕಾಲಕ್ಕೆ

ಸಪ್ಟಂಬರ [illegible] ಜರುಗಿತ್ತು. ಮತ್ತೊಂದು ಮೂರು ದಿನಗಳ ಉತ್ಸವ ಹೋಳಿ ಹಬ್ಬವನ್ನು ಹೋಲುತ್ತದೆ.

ಕಾಂಟಿ ಮುಂದುವರೆದು ತಾನು 'ಅಲ್ಬೆನಿಗರಸ್' ಎಂದು ಕರೆದ ಗುಡ್ಡದಲ್ಲಿ ಮತ್ತು ವಿಜಯನಗರದಾಚೆ 'ಉತ್ತರದ ಕಡೆ' ಹದಿನೈದು ದಿನಗಳ ಪ್ರಯಾಣದ ಸ್ಥಳಗಳಲ್ಲಿ ವಜ್ರಗಳು ದೊರೆಯುವದನ್ನು ವರ್ಣಿಸುತ್ತಾನೆ. ವಜ್ರಗಳು ದುರ್ಗಮ ಕಣಿವೆಗಳಲ್ಲಿ ಬಿದ್ದಿವೆ, ಅವುಗಳಲ್ಲಿ ಮಾಂಸದ ಮುದ್ದೆ ಒಗೆದು, ಅವುಗಳಿಗೆ ವಜ್ರಗಳು ಅಂಟಿಕೊಂಡು, ಮಾಂಸದ ಮುದ್ದೆಗಳನ್ನು ಹದ್ದುಗಳು ಶಿಖರದ ಮೇಲೆ ಒಯ್ಯಲಾಗ ಅವುಗಳನ್ನು ಹೊಡೆದೋಡಿಸಿ ಹರಳುಗಳನ್ನು ಪಡೆಯಲಾಗುತ್ತದೆಂಬ ಕತೆಯನ್ನು ಪುನರಾವೃತ್ತಿ ಮಾಡುತ್ತಾನೆ. ಇದು ನಮಗೆ ಗೊತ್ತಿರುವ ನಾವಿಕ ಸಿಂದಬಾದನ ಕತೆಯೆ ಆಗಿದೆ. ನೀಡಲಾಗಿರುವ ಮಾರ್ಗನಿರ್ದೇಶನ, ಅದು ಉತ್ತರಕ್ಕಿಂತ ಪೂರ್ವವಾಗಿರಬೇಕಿದ್ದರೂ, ಉಲ್ಲೇಖಿತ ಗಣಿಗಳು ಕೃಷ್ಣಾ ನದಿಯ ಮೇಲಿನ ಗಣಿಗಳನ್ನು ಸೂಚಿಸುತ್ತವೆ. ಅವುಗಳನ್ನು ಪ್ರವಾಸಿಗಳು ಹೆಚ್ಚಾಗಿ "ಗೋಳಕೊಂಡದ ಗಣಿಗಳು" ಎಂದೆ ಕರೆದಿದ್ದಾರೆ. ಮಾರ್ಕೊ ಪೊಲೊ ೧೨೯೬ರಲ್ಲಿ ಅವೇ ಗಣಿಗಳ ಅದೇ ಕತೆಯನ್ನು ಹೇಳಿದ. ಕಾಂಟಿ ಹೀಗೆ ಮುಂದುವರಿಯುತ್ತಾನೆ :—

"ಅವರು ವರ್ಷವನ್ನು ಹನ್ನೆರಡು ತಿಂಗಳುಗಳಲ್ಲಿ ವಿಭಜಿಸುತ್ತಾರೆ. ಅವುಗಳನ್ನು ರಾಶಿ ಚಕ್ರದ ಚಿಹ್ನೆಗಳನ್ನನುಸರಿಸಿ ಹೆಸರಿಸುತ್ತಾರೆ. ಶಕೆಯನ್ನು ಬೇರೆ ಬೇರೆ ರೀತಿಗಳಲ್ಲಿ ಗಣನೆ ಮಾಡಲಾಗುತ್ತದೆ ..."

ವಿವಿಧ ನಾಣ್ಯ ಪದ್ಧತಿಗಳು ಹಾಗೂ ಚಲಾವಣೆಗಳ ಸಂಕ್ಷಿಪ್ತ ವೃತ್ತಾಂತ ನೀಡಿದ ಬಳಿಕ—ಅದು ಸ್ವಾರಸ್ಯಕರವಾಗಿದ್ದರೂ ಅವುಗಳ ವಿವಿಧ ಸ್ಥಳಗಳನ್ನು ಕಲ್ಪನೆಗೆ ಬಿಡಲಾಗಿದೆ—ಅವನು ಹೀಗೆ ಬರೆಯುತ್ತಾನೆ :

"ಮಧ್ಯ ಭಾರತದ ನಿವಾಸಿಗಳು ದಂಡು ಕವಣೆ[3], ನಾವು ಬೊಂಬಾರ್ಡಸ್ ಎಂದು ಕರೆಯುವ ಯಂತ್ರಗಳು ಹಾಗೂ ನಗರಗಳ ಮುತ್ತಿಗೆಗೆ ಅನುಗೊಳಿಸಿದ ಇತರ ಯುದ್ಧೋಪಕರಣಗಳನ್ನೂ ಬಳಸುತ್ತಾರೆ.

"ನಮ್ಮನ್ನು ಫ್ರಾಂಕರೆಂದು ಕರೆಯುವ ಅವರು ಹೀಗೆನ್ನುತ್ತಾರೆ : "ಅವರು ಇತರ ದೇಶಗಳನ್ನು ಅಂಧರೆಂದು ಕರೆಯುತ್ತ ತಮಗೆ ಮಾತ್ರವೇ ಎರಡು ಕಣ್ಣುಗಳಿರುವುದು, ಮತ್ತು ನಮಗೆ ಇರುವುದು ಒಂದೇ ಒಂದು, ಏಕೆಂದರೆ ಅವರು ತಾವು ಇತರ ಎಲ್ಲರನ್ನು ವಿವೇಕದಲ್ಲಿ ಮೀರಿದವರು ಎಂದು ಪರಿಗಣಿಸುತ್ತಾರೆ."[4]

"ಕ್ಯಾಂಬೆಯ ನಿವಾಸಿಗಳು ಮಾತ್ರ ಕಾಗದ ಬಳಸುತ್ತಾರೆ; ಇತರ ಎಲ್ಲ ಭಾರತೀಯರು ಗಿಡದ ಎಲೆಗಳ ಮೇಲೆ ಬರೆಯುತ್ತಾರೆ. ಅವರು ಅಪಾರ ಸಂಖ್ಯೆಯ ಗುಲಾಮರನ್ನು ಹೊಂದಿದ್ದಾರೆ, ಮತ್ತು ದಿವಾಳಿ ಎದ್ದ ಸಾಲಗಾರನು ಎಲ್ಲೆಲ್ಲೂ ಸಾಲಿಗನ ಆಸ್ತಿಯೆಂದು ತೀರ್ಮಾನಿಸಲಾಗುತ್ತದೆ. ಇಂಥ ಜನರ ಮತ್ತು ದೇಶಗಳ

ಸಂಖ್ಯೆ ನಂಬಿಕೆಯನ್ನು ಮೀರಿದ್ದು. ಅವರ ಸೈನ್ಯಗಳಲ್ಲಿ ದಶಲಕ್ಷಕ್ಕೂ ಅಧಿಕ ಜನರಿದ್ದಾರೆ."

ಅಬ್ದುರ್ ರಜಾಕನೂ ಎರಡನೆಯ ದೇವರಾಯನ ಆಳಿಕೆಯಲ್ಲಿ, ಆದರೆ ಕಾಂಟಿಗಿಂತ ಸುಮಾರು ಇಪ್ಪತ್ತು ವರ್ಷಗಳ ನಂತರ, ನಗರವನ್ನು ಸಂದರ್ಶಿಸಿದ್ದನು. ಅವನಿಗೆ ಪರ್ಶಿಯಾದ ರಾಯಭಾರವನ್ನು ಒಪ್ಪಿಸಲಾಗಿತ್ತು ಮತ್ತು ಅವನು ಜನವರಿ ೧೩ ಕ್ರಿ.ಶ. ೧೪೪೨ರಂದು ಉದ್ದಿಷ್ಟ ಕಾರ್ಯಾರ್ಥವಾಗಿ ಹೊರಟ. ಆ ವರ್ಷದ ನವಂಬರಿನ ಆರಂಭಕ್ಕೆ ಅವನು ಕಾಲಿಕತ್ತಿಗೆ ಬಂದ. ಅಲ್ಲಿ ಏಪ್ರಿಲ್ ೧೪೪೩ರ ವರೆಗೆ ಇದ್ದ. ಅಲ್ಲಿರುವಾಗ ವಿಜಯನಗರಕ್ಕೆ ಕರೆಕಳಿಸಲ್ಪಟ್ಟ, ಅಲ್ಲಿಗೆ ಪ್ರಯಾಣ ಬೆಳೆಸಿದ, ಮತ್ತು ಮಹಾನಗರದಲ್ಲಿ ಆ ವರ್ಷದ ಏಪ್ರಿಲ್ ಕೊನೆಯಿಂದ ಡಿಸೆಂಬರ ೫ರ ವರೆಗೆ ಇದ್ದ. ಕೆಳಗಿನ ಅವತರಣಿಕೆ ಅವನು ಕಾಲಿಕತ್ತ ಬಿಟ್ಟುದೇಕೆಂಬುದನ್ನು ವಿಶದೀಕರಿಸುತ್ತದೆ.

"ಒಮ್ಮಿಂದೊಮ್ಮೆಲೆ ಬಂದ ಒಬ್ಬ ಮನುಷ್ಯ ಸುದ್ದಿ ತಂದುದೇನೆಂದರೆ ಬಲಶಾಲಿ ಸಾಮ್ರಾಜ್ಯ ಮತ್ತು ಶಕ್ತಿವಂತ ಆಧಿಪತ್ಯ ಹೊಂದಿದ ಬೀಜನಗರದ ರಾಜ ಅವನಿಗೆ ಒಂದು ಪತ್ರ ಒಪ್ಪಿಸಿ ಸಮೋರಿಗೆ ಪ್ರತಿನಿಧಿಯಾಗಿ ಕಳಿಸಿದ. ಅದರಲ್ಲಿ ದೊರೆ ಸುಖಿ ಖಾಖನ್ (ಅಂದರೆ ಪರ್ಶಿಯಾದ ರಾಜ)ನ ರಾಯಭಾರಿಯನ್ನು ತನ್ನಲ್ಲಿಗೆ ಕಳಿಸುವಂತೆ ಅಪೇಕ್ಷಿಸಿದ್ದ. ಸಮೋರಿ ಬಿಜನಗರದ ರಾಜನ ಕಾನೂನಿಗೆ ಅಧೀನನಾಗಿರದಿದ್ದರೂ ಅವನು ಅವನಿಗೆ ಗೌರವ ನೀಡುತ್ತಾನೆ ಮತ್ತು ಯಾವಾಗಲೂ ಅವನಿಗೆ ಅತ್ಯಂತ ಅಂಜಿಕೊಂಡಿರುತ್ತಾನೆ. ಏಕೆಂದರೆ, ಕೇಳಿಬರುತ್ತಿರುವುದು ನಿಜವಿದ್ದರೆ, ಬಿಜನಗರದ ಅರಸನ ಆಧಿಪತ್ಯದಲ್ಲಿ ಪ್ರತಿಯೊಂದು ಕಾಲಿಕತ್ತಕ್ಕೆ ಸಮನಾದ ಮುನ್ನೂರು ಬಂದರುಗಳಿವೆ ಮತ್ತು ನೆಲದ ಮೇಲೆ ಅವನ ಪ್ರಾಂತಗಳು ಮೂರು ತಿಂಗಳ ಪ್ರವಾಸದಷ್ಟು ಪ್ರದೇಶವನ್ನು ಹೊಂದಿವೆ."

ಈ ವಿನಂತಿ ಪಾಲಿಸಿ ಅಬ್ದುರ್ ರಜಾಕ್ ಸಮುದ್ರ ಮಾರ್ಗವಾಗಿ ಕಾಲಿಕತ್ತದಿಂದ ಹೊರಟ ಮತ್ತು "ಬಿಜನಗರ ರಾಜ್ಯದ ಗಡಿಯಾಗಿದ್ದ ಮಂಗಳೂರಿಗೆ" ಹೋದ. ಅವನು ಅಲ್ಲಿ ಎರಡು ಅಥವಾ ಮೂರು ದಿನ ತಂಗಿ ನಂತರ ಅನೇಕ ಪಟ್ಟಣಗಳಲ್ಲಿ ಹಾಯ್ದು ಒಳನಾಡಿನಲ್ಲಿ ಪಯಣಿಸಿದ. ಅವುಗಳಲ್ಲಿ ಒಂದು ಊರಿನಲ್ಲಿ ಅವನು ಕಂಚಿನಲ್ಲಿ ನಿರ್ಮಿಸಲಾದ ಒಂದು ಚಿಕ್ಕ ಆದರೆ ಅದ್ಭುತ ಮಂದಿರವನ್ನು ನೋಡಿದ.

"ಕೊನೆಗೆ ನಾನು ಅದರ ಶಿಖರ ಆಕಾಶವನ್ನು ತಲುಪಿದ್ದ ಪರ್ವತಕ್ಕೆ ಬಂದೆ. ಈ ಪರ್ವತ ಮತ್ತು ಕಾಡನ್ನು ಹಿಂದೆ ಬಿಟ್ಟು ಬೇಲೂರ್ ಪಟ್ಟಣವನ್ನು ತಲುಪಿದೆ. ಅದರ ಮನೆಗಳು ಅರಮನೆಗಳಂತಿದ್ದವು."

ಇಲ್ಲಿ ಅವನು ಉತ್ಕೃಷ್ಟ ಶಿಲ್ಪದ ದೇವಾಲಯವನ್ನು ನೋಡಿದ.

"ಔಲ್‌ಹಿಜಾ[7] ತಿಂಗಳ ಕೊನೆಗೆ ನಾವು ಬಿಜನಗರಕ್ಕೆ ಬಂದೆವು ನಮ್ಮನ್ನು ಸ್ವಾಗತಿಸಲು ರಾಜನು ಅಪಾರ ಪರಿವಾರವನ್ನು ಕಳಿಸಿದ್ದ ಮತ್ತು ನಮ್ಮ ವಾಸಕ್ಕಾಗಿ ಅತ್ಯಂತ ಸುಂದರ ಮನೆಯನ್ನು ಗೊತ್ತುಮಾಡಿದ್ದ. ಅವನ ರಾಜ್ಯ ಸೆರೆಂಡಿಬ್‌ದ ಗಡಿಯಿಂದ ಕಲಬರ್ಗಾ ನಾಡಿನ ಅಂಚಿನವರೆಗೆ (ಅಂದರೆ ಕೃಷ್ಣಾ ನದಿಯಿಂದ ಕನ್ಯಾಕುಮಾರಿಯ ವರೆಗೆ) ಹಬ್ಬಿದೆ. ಆಕಾರದಲ್ಲಿ ಪರ್ವತ ಹಾಗೂ ರೂಪದಲ್ಲಿ ದೈತ್ಯನಂತಿರುವ ಸಾವಿರಕ್ಕಿಂತ ಅಧಿಕ ಆನೆಗಳು ಅಲ್ಲಿ ನೋಡಸಿಗುತ್ತವೆ. ಸೈನಿಕರ ಸಂಖ್ಯೆ ಹನ್ನೊಂದು ಲಕ್ಷ (೧,೧೦೦,೦೦೦). ಇಡಿ ಹಿಂದುಸ್ತಾನದಲ್ಲಿ ರಾಯನಿಗಿಂತ ಅಧಿಕ ಪಾರಮ್ಯವುಳ್ಳ ಇನ್ನೊಬ್ಬ ರಾಜ ಹುಡುಕಿದರೂ ಸಿಗುವದಿಲ್ಲ. ಈ ನಾಡಿನ ಅರಸರು ರಾಯ ಎಂಬ ಬಿರುದು ಧರಿಸಿರುತ್ತಾರೆ.

"ಬಿಜನಗರ ನಗರ ಹೇಗಿದೆಯೆಂದರೆ ಕಣ್ಣು ಅಂಥ ಊರನ್ನು ಕಂಡರಿಯದು, ಇಡಿ ಪ್ರಪಂಚದಲ್ಲಿ ಇದಕ್ಕೆ ಸರಿಸಮಾನವಾದುದು ಎಲ್ಲಿಯಾದರೂ ಇದ್ದುದನ್ನು ಕಿವಿ ಕೇಳರಿಯದು. ಏಳು ದುರ್ಗಗಳು ಮತ್ತು ಅಷ್ಟೇ ಸಂಖ್ಯೆಯ ಗೋಡೆಗಳು ಒಂದನ್ನೊಂದು ಸುತ್ತುವರಿಯುವಂತೆ ಅವನ್ನು ಕಟ್ಟಲಾಗಿದೆ. ಒಂದನೆಯ ದುರ್ಗದ ಸುತ್ತ ಒಬ್ಬ ಮನುಷ್ಯನಷ್ಟು ಎತ್ತರವಿರುವ ಕಲ್ಲುಗಳಿವೆ. ಅವುಗಳ ಅರ್ಧಭಾಗ ಭೂಮಿಯೊಳಗೆ ಹೂಳಲಾಗಿದ್ದು ಉಳಿದರ್ಧ ಮೇಲೆ ಹಾಯ್ದಿವೆ. ಇವುಗಳನ್ನು ಒಂದಕ್ಕೊಂದು ಯಾವ ರೀತಿ ನಿಲ್ಲಿಸಲಾಗಿದೆಯೆಂದರೆ ಯಾವ ಅಶ್ವಾರೋಹಿಯಾಗಲಿ ಕಾಲಾಳಾಗಲಿ ಧೈರ್ಯವಾಗಿ ಇಲ್ಲವೆ ಸುಲಭವಾಗಿ ದುರ್ಗದ ಹತ್ತಿರಕ್ಕೆ ಬರುವಂತಿರಲಿಲ್ಲ

ಈ ಏಳು ಗೋಡೆಗಳ ಮತ್ತು ದ್ವಾರಗಳ ಸ್ಥಾನ ನನಗೆ ಬಹುಕಾಲದಿಂದ ಒಗಟಾಗಿವೆ. ಆದರೆ ನಾನು ಕೆಳಗಿನ ಸ್ಪಷ್ಟೀಕರಣವನ್ನು ಊಹಿಸುತ್ತೇನೆ. ಪ್ರವಾಸಿ ನೈರುತ್ಯದಿಂದ ಬಳಿಸಾರಿದ ಮತ್ತು ಅವನು ನೋಡಿದ ಗೋಡೆಯ ಪ್ರಥಮ ಸುತ್ತು ಹೊಸಪೇಟೆಯ ನೈಋತ್ಯಕ್ಕಿರುವ ಎರಡು ಗುಡ್ಡಗಳ ಮಧ್ಯವಿರುವ ಭೂಕಂತದ ಮೇಲಿರುವದಾಗಿರಬೇಕು. ಈ ಬಾಹ್ಯ ರಕ್ಷಣಾ-ಕಟ್ಟಡವನ್ನು ಕರಾವಳಿಯಿಂದ ಬಂದ ಪ್ರವಾಸಿಗರಿಗೆಲ್ಲ ಮೊಟ್ಟಮೊದಲು ಕಣ್ಣಿಗೆ ಬೀಳುವಂಥದೆಂದು ಪ್ಯಾಸ್ ಕೂಡ ವರ್ಣಿಸಿದ್ದಾನೆ. ಈ ಪ್ರವೇಶದ್ವಾರದಲ್ಲಿ ಬರಮಾಡಿಕೊಳ್ಳಲಾದ ರಜಾಕ್ "ಸಾಗುವಳಿ ಮಾಡಿದ ಜಮೀನುಗಳು, ಮನೆಗಳು, ಮತ್ತು ಉದ್ಯಾನಗಳ" ಮಾರ್ಗವಾಗಿ ಕೆಳಗೆ ಹೊಸಪೇಟೆಯ ದ್ವಾರ ತಲುಪಿರಬೇಕು. ಅಲ್ಲಿ ಕೋಟೆಯ ಎರಡನೆಯ ಸುತ್ತು ಅಡ್ಡಗಟ್ಟಿತು. ಆ ಪಟ್ಟಣ ಆಗ ಜನಸಾಂದ್ರವಾಗಿರದ್ದರಿಂದ ಅವನು ನಗರದ ಉತ್ತರ ಬದಿಯಲ್ಲಿರುವ ಮೂರನೆಯ ಸುತ್ತಿನ ಗೋಡೆ ದಾಟುವ ವರೆಗೆ ಅದೇ ಲಕ್ಷಣಗಳು ಅವನ ಕಣ್ಣಿಗೆ ಬೀಳುತ್ತವೆ. ಇಲ್ಲಿಂದ ಮನೆಗಳು ಜನನಿಬಿಡವಾಗುತ್ತ ಬಹುಶಃ ಇಕ್ಕೆಲಗಳಲ್ಲಿ ಅಂಗಡಿಗಳುಳ್ಳ, ಅಲ್ಲಿಂದ ರಾಜಧಾನಿಗೆ ಸಾಗುವ ದೀರ್ಘ

ಬೀಡಿಯಾಗಿ ಮಾರ್ಪಡುತ್ತವೆ. ಗಟ್ಟಿಯಾದ ಹೆಬ್ಬಾಗಿಲಿರುವ ಸುತ್ತಿನ ಗೋಡೆ ಈಗಿನ ಮಾಲಪನಗುಡಿ ಗ್ರಾಮದ ದಕ್ಷಿಣಕ್ಕೆ ಕಾಣಸಿಗುತ್ತದೆ. ಅಲ್ಲಿ ಪುರಾತನ ಕಟ್ಟಡಗಳ ಹಲವಾರು ಅವಶೇಷಗಳು ಇವೆ. ಅವುಗಳಲ್ಲಿ ಒಂದು ಸುಂದರ ಕಲ್ಲುಭಾವಿ ಗಮನ ಸೆಳೆಯುತ್ತದೆ. ಅದು ಬಹುಶಃ ಒಂದು ಕಾಲಕ್ಕೆ ಒಬ್ಬ ವರಿಷ್ಠ ಇಲ್ಲವೆ ಮುಖ್ಯಾಧಿಕಾರಿಯ ಹಳ್ಳಿಮನೆಗೆ ಸೇರಿದುದಾಗಿತ್ತು. ಐದನೆಯ ಸುತ್ತು ಮಾಲಪನ ಗುಡಿಯ ಉತ್ತರಕ್ಕಿದೆ ಮತ್ತು ಇಲ್ಲಿ ಅದರ ಗೋಡೆ ಬಹಳ ಭಗ್ನ ಹಾಗೂ ನಾಶವಾಗಿದ್ದರೂ ದೊಡ್ಡ ಹೆಬ್ಬಾಗಿಲು ಇನ್ನೂ ನಿಂತಿದೆ. ಆರನೆಯ ಸುತ್ತನ್ನು ಕಮಲಾಪುರ ಕೆರೆಯ ದಕ್ಷಿಣಕ್ಕೆ ಒಯ್ಯಲಾಗಿದೆ. ಏಳನೆಯ ಅಥವಾ ಒಳಗಿನ ಸುತ್ತು ಆ ಗ್ರಾಮದ ಉತ್ತರಕ್ಕೆ ತಕ್ಕಷ್ಟು ಉತ್ತಮ ಸ್ಥಿತಿಯಲ್ಲಿ ಇನ್ನೂ ಕಂಡುಬರುತ್ತಿರುವ ದೊಡ್ಡ ಗೋಡೆ. ಈ ಕೊನೆಯದು ಅರಮನೆ ಹಾಗೂ ಸರಕಾರಿ ಕಟ್ಟಡಗಳನ್ನು ಸುತ್ತುವರಿದಿತ್ತು. ಅದು ಸುತ್ತುವರಿದ ಕ್ಷೇತ್ರ ಸ್ಥೂಲವಾಗಿ ಉತ್ತರದಿಂದ ದಕ್ಷಿಣಕ್ಕೆ ಒಂದು ಮೈಲು ಹಾಗೂ ಪೂರ್ವದಿಂದ ಪಶ್ಚಿಮಕ್ಕೆ ಎರಡೂಕಾಲು ಮೈಲು ಇದೆ. ರಜಾಕ್ ಪ್ರಸ್ತಾಪಿಸಿದ ನೇರವಾಗಿ ನಿಂತಿರುವ ಕಲ್ಲುಗಳನ್ನು ಡೊಮಿಂಗೊ ಪ್ಯಾಸ್ ಕ್ರಿ.ಶ.೧೫೨೦ ರಲ್ಲಿ ನೋಡಿದ್ದ.[8] ಅವು ಈಗ ಕಣ್ಮರೆಯಾಗಿವೆಯೆಂದು ನನಗೆನಿಸುತ್ತದೆ.

"ದುಂಡಗಿನ ಆಕಾರದ ಕೋಟೆ, ಅದನ್ನು ಪರ್ವತದ ತುದಿಯ ಮೇಲೆ ಕಟ್ಟಲಾಗಿದೆ ಮತ್ತು ಕಲ್ಲು ಮತ್ತು ಸುಣ್ಣದಿಂದ ಕಟ್ಟಲಾಗಿದೆ. ಅದಕ್ಕೆ ಬಲವಾದ ಬಾಗಿಲುಗಳಿವೆ. ಅವುಗಳ ಕಾವಲುಗಾರರು ಯಾವಾಗಲೂ ತಮ್ಮ ಸ್ಥಾನದಲ್ಲಿರುತ್ತಾರೆ ಮತ್ತು ಎಲ್ಲವನ್ನೂ ಅತ್ಯಂತ ಕೂಲಂಕಷವಾಗಿ ಪರೀಕ್ಷಿಸುತ್ತಾರೆ" ಎಂದು ಮುಂತಾಗಿ ರಜಾಕ್ ಬಾಹ್ಯ ದುರ್ಗವನ್ನು ವರ್ಣಿಸುತ್ತಾನೆ. ಈ ಅವತರಣಿಕೆ ಗೋಡೆಯು ಹೊರಸುತ್ತಿಗೆ ಸಂಬಂಧಿಸಿದುದಾಗಿರಬೇಕು. ಏಕೆಂದರೆ, ರಜಾಕ್‌ನ "ಏಳನೆಯ ಕೋಟೆ" ಎಲ್ಲಕ್ಕಿಂತ ಒಳಗಿನದು, ಬಾಗಿಲುಗಳಲ್ಲಿದ್ದ ಕಾವಲುಗಾರರೇ ಸುಂಕ ವಸೂಲು ಮಾಡುವ ಕೆಲಸ ಒಪ್ಪಿಸಿದ ಅಧಿಕಾರಿಗಳಾಗಿದ್ದರೆಂಬುದು ನಿಸ್ಸಂದೇಹ. ಹೆನ್ರಿ ಈಲಿಯಟ್‌ನ ಅನುವಾದ (ಪು.೧೦೪), ಉದ್ಧರಿಸಲಾದ ಅವತರಣಿಕೆಗೆ ಇನ್ನೂ ಸೇರಿಸುತ್ತ ಹೀಗನ್ನುತ್ತದೆ.

"ಅವರು ಜಿಝಯಾತ್ ಅಥವಾ ಕರಗಳನ್ನು ವಸೂಲು ಮಾಡುತ್ತಾರೆ." ಪ್ರಮುಖ ನಗರಗಳ ದ್ವಾರಗಳಲ್ಲಿ ಸುಂಕ ವಸೂಲು ಮಾಡುವ ಈ ಪದ್ಧತಿ ಮೊನ್ನೆ ಮೊನ್ನೆಯ ವರೆಗೆ ಪ್ರಚಲಿತವಿದ್ದು ಬ್ರಿಟಿಶ್ ಸರಕಾರವೆ ಅದನ್ನು ರದ್ದುಗೊಳಿಸಿತು.

"ಏಳನೆಯ ಕೋಟೆ ಉತ್ತರಕ್ಕಿದೆ ಮತ್ತು ರಾಜನ ಅರಮನೆಯೂ ಆಗಿದೆ. ಉತ್ತರ ದಕ್ಷಿಣಗಳ ಬಾಹ್ಯ ಕೋಟೆಗಳ ಎದುರು ಬದುರಿನ ದ್ವಾರಗಳ ನಡುವಣ ಅಂತರ ಎರಡು ಪರಸಂಗಗಳು,[2] ಮತ್ತು ಪೂರ್ವದಿಂದ ಪಶ್ಚಿಮಕ್ಕೂ ಅಷ್ಟೇ.

"ಒಂದನೆಯ ಕೋಟೆಯನ್ನು ಎರಡನೆಯದರಿಂದ ಬೇರ್ಪಡಿಸುವ ಕ್ಷೇತ್ರ ಮತ್ತು ಮೂರನೆಯ ಕೋಟೆಯವರೆಗೆ ಸಾಗುವಳಿ ಮಾಡಿದ ಹೊಲಗಳು, ಮನೆಗಳು ಮತ್ತು ತೋಟಗಳಿಂದ ತುಂಬಿದೆ. ಮೂರನೆಯದರಿಂದ ಏಳನೆಯದರವರೆಗಿನ ಕ್ಷೇತ್ರದಲ್ಲಿ ಅಸಂಖ್ಯ ಜನರ ಸಮೂಹ, ಅನೇಕ ಅಂಗಡಿಗಳು ಮತ್ತು ಪೇಟೆ ಕಾಣಸಿಗುತ್ತವೆ. ರಾಜನ ಅರಮನೆಯ ಹತ್ತಿರ ಎದುರುಬದುರಾಗಿ ನಾಲ್ಕು ಪೇಟೆಗಳಿವೆ. ಉತ್ತರಕ್ಕೆ ರಾಯನ ಅರಮನೆಯ ಮುಖಮಂಟಪವಿದೆ. ಪ್ರತಿ ಪೇಟೆಯ ಮೇಲೆ ಭವ್ಯ ದ್ವಾರಮಂಟಪವುಳ್ಳ ಉನ್ನತ ಕಮಾನು ದಾರಿಯಿದೆ. ಆದರೆ ರಾಜನ ಅರಮನೆಯ ಓಲಗ ಎಲ್ಲಕ್ಕಿಂತ ಎತ್ತರವಾಗಿದೆ. ಪೇಟೆಗಳು ಅತ್ಯಂತ ಉದ್ದವೂ ಅಗಲವೂ ಆಗಿವೆ.[10]

"ಗುಲಾಬಿ ಹೂಗಳನ್ನು ಎಲ್ಲೆಡೆಯೂ ಮಾರಲಾಗುತ್ತದೆ. ಈ ಜನರು ಗುಲಾಬಿಗಳಿಲ್ಲದೆ ಬಾಳರು, ಮತ್ತು ಅವರು ಅವುಗಳು ಆಹಾರದಷ್ಟೆ ಆವಶ್ಯಕವೆಂದು ಪರಿಭಾವಿಸುತ್ತಾರೆ........ಪ್ರತಿ ವೃತ್ತಿಗೆ ಸೇರಿದ ಪ್ರತಿ ವರ್ಗ ಒಂದಕ್ಕೊಂದು ಹೊಂದಿಕೊಂಡ ಅಂಗಡಿಗಳನ್ನು ಪಡೆದಿದೆ. ರತ್ನಾಭರಣ ವ್ಯಾಪಾರಿಗಳು ಪೇಟೆಗಳಲ್ಲಿ ಮುಕ್ತವಾಗಿ ಮುತ್ತು, ಮಾಣಿಕ್ಯ, ಪಚ್ಚೆ, ವಜ್ರಗಳನ್ನು ಮಾರುತ್ತಾರೆ. ಈ ಹಿತಕರ ಸ್ಥಳದಲ್ಲಿಯೂ ರಾಜನ ಅರಮನೆಯಲ್ಲಿಯೂ ಅನೇಕ ಹರಿಯುವ ನದಿಗಳು ಮತ್ತು ಮೆರುಗುಗೊಳಿಸಲಾದ ಮತ್ತು ನಯವಾದ ಕಟೆದ ಕಲ್ಲುಗಳಿಂದ ಕಟ್ಟಲಾದ ಕಾಲುವೆಗಳಿವೆ.[11]

"ಸುಲ್ತಾನನ ಮುಖಮಂಟಪದ ಎಡಕ್ಕೆ ದಿವಾನ್‌ಖಾನೆ[12] ನಿಂತಿದೆ. ಅದು ಅತ್ಯಂತ ದೊಡ್ಡದಾಗಿದ್ದು ಅರಮನೆಯಂತೆ ಕಾಣುತ್ತದೆ. ಅದರ ಮುಂದೆ ಒಂದು ಸಭಾಂಗಣವಿದೆ. ಅದರ ಎತ್ತರ ಮನುಷ್ಯನ ನಿಲುವಿಗಿಂತ ಹೆಚ್ಚಿದೆ, ಅದರ ಉದ್ದ ಮೂವತ್ತು ಮತ್ತು ಅಗಲ ಹತ್ತು ಘಜ ಇದೆ.[13] ಅದರಲ್ಲಿ ದಫ್ತರ-ಖಾನೆ (ನ್ಯಾಯಾಲಯ)ವನ್ನು ಇರಿಸಲಾಗಿದೆ ಮತ್ತು ಇಲ್ಲಿ ಲಿಪಿಕಾರರು ಕೂಡುತ್ತಾರೆ.... ಈ ಅರಮನೆಯ ಮಧ್ಯದಲ್ಲಿ ಎತ್ತರ ಜಗಲಿಯ ಮೇಲೆ ದಣಾಯಿಕ[4] ಎಂದು ಕರೆಯಲಾದ ನಪುಂಸಕ ಕೂತಿರುತ್ತಾನೆ. ಅವನೇ ನ್ಯಾಯಸ್ಥಾನದ ಏಕೈಕ ಅಧಿಪತಿ. ಭವನದ ಕೊನೆಯಲ್ಲಿ ಸಾಲಾಗಿ ನಿಂತ ಚೋಬದಾರರು[14] ಇರುವರು. ದಿವಾನ ಅಥವಾ ದಣಾಯಿಕ ಜನರ ವ್ಯಾಜ್ಯಗಳನ್ನು ತೀರ್ಮಾನಿಸುತ್ತಾನೆ ಮೇಲ್ಮನವಿ ಇಲ್ಲ. ಕೆಲಸ ಮುಗಿಸಿ ದಣಾಯಿಕ ಏಳು ಬಾಗಿಲುಗಳ ಮೂಲಕ ಹಾಯ್ದು ಅರಮನೆ ಪ್ರವೇಶಿಸುತ್ತಾನೆ. ಮತ್ತು ಕೊನೆಯದನ್ನು ತಾನೊಬ್ಬನೆ ಪ್ರವೇಶಿಸಿ ರಾಜನಿಗೆ ವರದಿ ನೀಡುತ್ತಾನೆ.

"ರಾಜನ ಅರಮನೆಯ ಹಿಂದೆ[15] ದಣಾಯಕನಿಗೆ ಕೊಡಲಾದ ಮನೆ ಮತ್ತು ಸಭಾಂಗಣಗಳಿವೆ. ಆ ಅರಮನೆಯ ಉತ್ತರಕ್ಕೆ ಟಂಕಸಾಲೆಯಿದೆ.

"ಈ ಸಾಮ್ರಾಜ್ಯ ಎಷ್ಟೊಂದು ಜನಸಂಖ್ಯೆ ಪಡೆದಿದೆಯೆಂದರೆ ವ್ಯಾಪಕ ವಿವರಗಳನ್ನು ಬಳಸದೆ ಅದರ ಕಲ್ಪನೆ ಮಾಡಿಕೊಡುವದು ಅಸಾಧ್ಯ. ರಾಜನ ಅರಮನೆಯಲ್ಲಿ ಹೊಂಡಗಳನ್ನು ಹೋಲುವ ಹಲವಾರು ಗೂಡುಗಳಿವೆ. ಅವುಗಳಲ್ಲಿ ತುಂಬಿಡಲಾದ ಬಂಗಾರದ ಗಟ್ಟಿಗಳು ಅವಿಚ್ಛಿನ್ನ ವಿಸ್ತಾರ ನಿರ್ಮಿಸಿವೆ."

ದಿವಾನ್-ಖಾನೆಯ ಎದುರಿಗೆ ಗಜಶಾಲೆಯಿದೆ ಎಂದು ಅವನು ಮುಂದುವರಿಸುತ್ತಾನೆ :

"ಪ್ರತಿಯೊಂದು ಆನೆಗೆ ಒಂದು ಪ್ರತ್ಯೇಕ ಅಂಕಣವಿದೆ. ಅದರ ಗೋಡೆಗಳು ಗಟ್ಟಿಯಾಗಿದ್ದು ಮಾಳಿಗೆಯನ್ನು ಕಟ್ಟಿಗೆಯ ಗಟ್ಟಿ ತುಂಡುಗಳಿಂದ ಮಾಡಲಾಗಿದೆ.... ಟಂಕಸಾಲೆಯ ಎದುರಿಗೆ ಮಂಡಲಾಧಿಪತಿಯ ಮನೆಯಿದೆ.ಅಲ್ಲಿ ಹನ್ನೆರಡು ಸಾವಿರಕ್ಕೂ ಹೆಚ್ಚು ಸೈನಿಕರು ಸನ್ನದ್ಧರಾಗಿ ಇಡಲ್ಪಟ್ಟಿರುವರು....ಟಂಕಸಾಲೆಯ ಹಿಂದೆ ಒಂದು ತರಹದ ಪೇಟೆಯಿದೆ. ಅದು ಮುನ್ನೂರು ಘೆಜಕ್ಕಿಂತ ಹೆಚ್ಚು ಉದ್ದ ಇಪ್ಪತ್ತಕ್ಕಿಂತ ಹೆಚ್ಚು ಅಗಲವಿದೆ.[16] ಎರಡೂ ಬದಿಗಳಲ್ಲಿ ಮನೆಗಳು ಮತ್ತು ಅಂಗಳಗಳು ಸಾಲು ಗಟ್ಟಿವೆ ; ಅವುಗಳ ಮುಂದೆ ಬೆಂಚು (ಕುರ್ಚಿ)ಗಳ ಬದಲು ಸುಂದರ ಕಲ್ಲುಗಳಿಂದ ಕಟ್ಟಿದ ಹಲವಾರು ಉನ್ನತ ಆಸನಗಳಿವೆ. ಕೊಟಡಿಗಳಿಂದಾದ ಸಾಲುಬೀದಿಯ ಎರಡೂ ಬದಿಗಳ ಮೇಲೆ ಸಿಂಹಗಳು, ಚಿರತೆಗಳು, ಹುಲಿಗಳು ಮತ್ತು ಇತರ ಪ್ರಾಣಿಗಳ ಆಕೃತಿಗಳನ್ನು ಬಿಡಿಸಲಾಗಿದೆ.[17] ಜಗಲಿಗಳ ಮೇಲೆ ಸಿಂಹಾಸನಗಳು ಮತ್ತು ಕುರ್ಚಿಗಳನ್ನು ಇರಿಸಲಾಗಿದೆ, ಮತ್ತು ರತ್ನಗಳಿಂದ ಹಾಗೂ ಉತ್ಕೃಷ್ಟ ಬಟ್ಟೆಗಳಿಂದ ಅಲಂಕೃತರಾದ ವಾರಾಂಗನೆಯರು ಅವುಗಳ ಮೇಲೆ ಕುಳಿತುಕೊಳ್ಳು ತ್ತಾರೆ."

ಲೇಖಕ ತನಗೆ ಗೊತ್ತು ಮಾಡಲಾಗಿದ್ದ ಉನ್ನತ ಮನೆಯಲ್ಲಿ ಒಂದನೆಯ ಮುಹರಮ್ (ಮೇ ೧, ೧೪೪೧) ದಂದು ವಾಸ್ತವ್ಯ ಹೂಡಿದ.

"ಒಂದು ದಿನ ರಾಜನ ಅರಮನೆಯಿಂದ ಕಳಿಸಲಾಗಿದ್ದ ದೂತರು ನನ್ನನ್ನು ಕಾಣಲು ಬಂದರು, ಮತ್ತು ಅದೇ ದಿನದ ಮುಕ್ತಾಯಕ್ಕೆ ನಾನು ದರಬಾರಿನಲ್ಲಿ ಹಾಜರಾದೆ....ದೊರೆ ಸಭಾಂಗಣದಲ್ಲಿ ರಾಜ್ಯದ ಅತ್ಯಂತ ಪ್ರಭಾವಿ ಲಾಂಛನಗಳ ಮಧ್ಯೆ ಕುಳಿತಿದ್ದ. ಅವನ ಎಡಬಲಗಳಲ್ಲಿ ಅಸಂಖ್ಯ ಜನರ ಸಮೂಹ ಗೋಲಾಕಾರದಲ್ಲಿ ನಿಂತಿದ್ದರು. ರಾಜ ಹಸಿರು ಸ್ಯಾಟಿನ್ ಬಟ್ಟೆಯನ್ನು, ಕೊರಳಲ್ಲಿ ಸುಂದರ ಜಲಗಳ ಮುತ್ತುಗಳು ಮತ್ತು ಇತರ ಭವ್ಯ ಮಾಣಿಕ್ಯಗಳಿಂದ ಕೂಡಿದ ಕೊರಳುಪಟ್ಟಿ ಧರಿಸಿದ್ದ. ಅವನ ಮೈಬಣ್ಣ ಹಳದಿಕಂದು, ಅವನ ಮೈಕಟ್ಟು ಸ್ವಲ್ಪ ತೆಳ್ಳಗೆ, ಹಾಗೆ ನೋಡಿದರೆ ಅವನು ಎತ್ತರ. ಅವನ ಗಲ್ಲಗಳ ಮೇಲೆ ತೆಳುವಾದ ಎಳೆಕೂದಲನ್ನು ಕಾಣಬಹುದು. ಆದರೆ ಅವನ ಗದ್ದದ ಮೇಲೆ ಗಡ್ಡವಿರಲಿಲ್ಲ. ಅವನ ಮುಖಚರ್ಯೆ ಅತ್ಯಂತ ಸಂತೋಷದಾಯಕವಾಗಿತ್ತು[18]....

"ವರದಿ ನಿಜ ಹೇಳುತ್ತಿದ್ದರೆ ಪತ್ನಿಯರು ಮತ್ತು ಉಪಪತ್ನಿಯರ ಸಂಖ್ಯೆ ಏಳುನೂರು ಆಗುತ್ತದೆ."

ಅಬ್ದುರ್ ರಜಾಕ್ ರಾಜಧಾನಿಯಲ್ಲಿ ತಾನಿದ್ದಾಗ ವೀಕ್ಷಿಸಿದ ದೊಡ್ಡ ಹಬ್ಬವೊಂದರ ಉಜ್ವಲತೆಯ ಬಗೆಗೆ ಹೊಳೆಯುವ ವೃತ್ತಾಂತ ನೀಡುತ್ತಾನೆ. ಅವನು ಅದನ್ನು ಮಹಾನವಮಿ[19] ಹಬ್ಬ ಎಂದೆನ್ನುತ್ತಾನೆ. ಆದರೆ, ಅವನು ತಪ್ಪು ತಿಳಿದಿದ್ದ ನೆಂಬ ಬಗೆಗೆ ನನ್ನವೇ ಸಂದೇಹಗಳಿವೆ. ಏಕೆಂದರೆ, ರಜಬ್ ತಿಂಗಳಲ್ಲಿ (ಅಕ್ಟೋಬರ್ ೨೫ ರಿಂದ ನವಂಬರ್ ೨೩, ಕ್ರಿ.ಶ. ೧೪೪೩) ಅದು ನಡೆಯಿತೆಂದು ಅವನು ಸಾರುತ್ತಾನೆ. ಹಿಂದೂಗಳು ಮಹಾನವಮಿಯನ್ನು ಒಂಬತ್ತು ದಿನಗಳ ಉತ್ಸವವಾಗಿ ಆಚರಿಸುತ್ತಾರೆ. ದೇಶೀಯ ಗಣನೆಯಲ್ಲಿ ಆಶ್ವಿನ ಶುಕ್ಲ ೧ ರಂದು ಅಂದರೆ ಆಶ್ವಿನ ತಿಂಗಳ ಆರಂಭವನ್ನು ಸೂಚಿಸುವ ಅಮವಾಸ್ಯೆಯ ಎರಡನೆಯ ದಿನ ಅದು ಆರಂಭ ವಾಗುತ್ತದೆ ; ಆದರೆ, ಆ ಕಾಲದಲ್ಲಿ ಹೊಸ ವರ್ಷ ದಿನ ಮುಂದಿನ ತಿಂಗಳಾದ ಕಾರ್ತಿಕದ ಮೊದಲ ದಿನವಾಗಿತ್ತು (ಎಂಟು ವರ್ಷಗಳ ತರುವಾಯ ಪ್ಯಾಸ್‌ನ ಕಾಲದಲ್ಲಿ ಖಂಡಿತವಾಗಿಯೂ ಆರಂಭಿಸಿದಂತೆ ಅದು ಒಂದನೆಯ ಕಾರ್ತಿಕದಂದು ಆರಂಭಿಸಿದ್ದಾದರೆ) ಆದರೆ, ಕ್ರಿ.ಶ. ೧೪೪೩ ರಲ್ಲಿನ ರಜಬ್‌ನ ಹುಣ್ಣಿಮೆ ಕಾರ್ತಿಕದ ಹುಣ್ಣಿಮೆಗೆ ತಾಳೆ ಹೊಂದುತ್ತಿತ್ತಲ್ಲದೆ ಆಶ್ವಿನದರೊಂದಿಗಲ್ಲ.[20] ಆದುದರಿಂದ, ಅವನು ನೋಡಿದ ಹಬ್ಬ ಹೊಸ ವರ್ಷದ ಹಬ್ಬವಿರಬೇಕು ಇಲ್ಲವೆ ಪ್ರವಾಸಿ "ರಜಬ್" ತಿಂಗಳೆಂದು ಹೇಳುವಲ್ಲಿ ತಪ್ಪು ಮಾಡಿರಬೇಕು. ಇವೆರಡರಲ್ಲಿ ಮೊದಲನೆಯದೆ ಅತ್ಯಂತ ಸಂಭವನೀಯ. ಏಕೆಂದರೆ, ಅವನು ಸ್ಪಷ್ಟವಾಗಿಯೆ ಹಬ್ಬವನ್ನು ಮೂರು ದಿನಗಳ ಅವಧಿಯುಳ್ಳದ್ದನ್ನಾಗಿ ಮಾಡಿದ್ದಾನೆ. ಮಹಾನವಮಿಯಾದರೊ ಅದರ ಹೆಸರೇ ಸೂಚಿಸುವಂತೆ ಒಂಬತ್ತು ದಿನಗಳ ಉತ್ಸವ. ಆದರೆ ಇನ್ನೂ ಒಂದು ಅಡಚಣೆ ಉಂಟು. ಮಹಾನವಮಿ ಆಚರಣೆಗಳು ಅಮಾವಾಸ್ಯೆಯ ಮರುದಿನ ಆರಂಭಿಸುತ್ತವೆ. ಆದರೆ, ತಾನು ನೋಡಿದ ಹಬ್ಬ 'ಹುಣ್ಣಿಮೆ'ಯ ದಿನ ಆರಂಭವಾಯಿತೆಂದು ರಜಾಕ್ ಹೇಳುತ್ತಾನೆ. ಆದರೆ ಅದು ಬರಹ ದೋಷದಿಂದಾಗಿರಬಹುದು.

ಇದು ಹೇಗೊ ಇರಲಿ, ಅವನು ಉಜ್ವಲ ದೃಶ್ಯದ ವೀಕ್ಷಕನಾಗಿದ್ದುದಂತೂ ನಿಜ, ಮತ್ತು ಅದನ್ನು ಕುರಿತ ಅವನ ವೃತ್ತಾಂತವನ್ನು ಕೆಳಗೆ ಅನುಬಂಧಿಸುತ್ತೇನೆ :

"ಬಿಜನಗರದ ರಾಜನು ಹೊರಡಿಸಿದ ಆಜ್ಞೆಗಳಿಗೆ ಅನುಗುಣವಾಗಿ ಅವನ ರಾಜ್ಯದ ಎಲ್ಲ ಭಾಗಗಳಿಂದ ದಂಡನಾಯಕರು ಮತ್ತು ಪ್ರಮುಖ ವ್ಯಕ್ತಿಗಳು.... ಅರಮನೆಯಲ್ಲಿ ಉಪಸ್ಥಿತರಾದರು. ಅವರು ತಮ್ಮೊಂದಿಗೆ ಸಾವಿರ ಆನೆಗಳನ್ನು ತಂದರು....ಅವುಗಳನ್ನು ಹೊಳೆಯುವ ಕವಚಗಳಿಂದ ಮತ್ತು ಭವ್ಯವಾಗಿ ಅಲಂಕೃತ ವಾದ ಕೋಟೆ–ಮನೆಗಳಿಂದ ಹೊದಿಸಲಾಗಿತ್ತು....ರೆಜೆಬ್ ತಿಂಗಳಿನಲ್ಲಿ ಸತತ ಮೂರು ದಿನಗಳವರೆಗೆ ವಿಶಾಲ ಭೂಕ್ಷೇತ್ರವನ್ನು ಭವ್ಯವಾಗಿ ಅಲಂಕರಿಸಲಾಗಿತ್ತು. ಅಲ್ಲಿ

ಒಟ್ಟಿಗೆ ಸೇರಿಸಲಾದ ಬೃಹದಾಕಾರದ ಆನೆಗಳು ಸಮುದ್ರದ ತೆರೆಗಳಂತೆ ಇಲ್ಲವೆ ಪುನರುಜ್ಜೀವನದ ದಿನದಂದು ಶೇಖರಿತವಾಗುವ ಸಾಂದ್ರ ರಾಶಿಯಂತೆ ತೋರುತ್ತಿದ್ದವು. ಈ ಭವ್ಯ ಕ್ಷೇತ್ರದ ಮೇಲೆ ತುದಿಯಿಂದ ಕೆಳತನಕ ಉಬ್ಬುಚಿತ್ರಗಳಿಂದ ತುಂಬಿದ ಮೂರು, ನಾಲ್ಕು, ಅಥವಾ ಐದು ಅಟ್ಟಗಳ ಅಸಂಖ್ಯ ಮಂಟಪಗಳನ್ನು ನಿರ್ಮಿಸ ಲಾಗಿತ್ತು....ಈ ಮಂಟಪಗಳಲ್ಲಿ ಕೆಲವನ್ನು ಯಾವ ರೀತಿಯಲ್ಲಿ ಜೋಡಿಸಲಾಗಿತ್ತೆಂದರೆ ಅವುಗಳು ಶೀಘ್ರವಾಗಿ ದುಂಡಗೆ ತಿರುಗುತ್ತ ಹೊಸ ಮುಖ ಪ್ರದರ್ಶಿಸಬಲ್ಲವು ಗಳಾಗಿದ್ದವು ; ಪ್ರತಿ ಕ್ಷಣ ಒಂದು ಹೊಸ ಭವನ ಇಲ್ಲವೆ ಕೋಣೆ ದೃಷ್ಟಿಗೆ ಬೀಳುತ್ತಿತ್ತು.

"ಈ ಸ್ಥಳದ ಎದುರಿಗೆ ಒಂಬತ್ತು ಭವ್ಯಾಲಂಕೃತ ಅರಮನೆಗಳು ನಿಂತಿದ್ದವು. ಒಂಬತ್ತನೆಯದರಲ್ಲಿ ರಾಜನ ಸಿಂಹಾಸನ ಇರಿಸಲಾಗಿತ್ತು. ಏಳನೆಯದರಲ್ಲಿ ಈ ವೃತ್ತಾಂತದ ನಮ್ರ ಲೇಖಕನಿಗೆ ಸ್ಥಳ ಒದಗಿಸಲಾಗಿತ್ತು....ಅರಮನೆ ಮತ್ತು ಮಂಟಪಗಳ ನಡುವೆ...ಸಂಗೀತಗಾರರು ಮತ್ತು ಕಥೆ ಹೇಳುವವರು ಇದ್ದರು."

ಭವ್ಯ ವಸ್ತ್ರ ಧರಿಸಿದ ಹುಡುಗಿಯರು "ರಾಜನ ಎದುರಿಗೆ ಒಂದು ಸುಂದರ ಪರದೆಯ ಹಿಂದೆ" ನೃತ್ಯ ಮಾಡುತ್ತಿದ್ದರು. ಗಾರುಡಿಗರು ಅಸಂಖ್ಯ ಪ್ರದರ್ಶನ ನೀಡಿದರು. ಅವರು ಅದ್ಭುತವಾಗಿ ಮಾತು ಕಲಿಸಲಾದ ಆನೆಗಳನ್ನು ಪ್ರದರ್ಶಿಸಿದರು.

ಮೂರು ಆನುಕ್ರಮಿಕ ದಿನಗಳಂದು ಸೂರ್ಯೋದಯದಿಂದ ಸೂರ್ಯಾಸ್ತದ ವರೆಗೆ ರಾಜೋತ್ಸವವನ್ನು ಅತ್ಯಂತ ವೈಭವಪೂರ್ಣ ಶೈಲಿಯಲ್ಲಿ ಮುಂದುವರಿಸ ಲಾಯಿತು. ಪಟಾಕಿಗಳು, ಆಟಗಳು, ಮನರಂಜನೆಗಳು ಸಾಗಿದವು. ಮೂರನೆಯ ದಿನ ಲೇಖಕನನ್ನು ರಾಜನಿಗೆ ಪರಿಚಯಿಸಲಾಯಿತು.

"ಅಸಾಧಾರಣ ಆಕಾರದ ಸಿಂಹಾಸನ ಸುವರ್ಣದಿಂದ ಮಾಡಲಾಗಿದ್ದು ಅತ್ಯಂತ ಬೆಲೆಯುಳ್ಳ ಅಮೂಲ್ಯ ಹರಳುಗಳಿಂದ ಶ್ರೀಮಂತಗೊಳಿಸಲಾಗಿತ್ತು.... ಸಿಂಹಾಸನದ ಮುಂದಿದ್ದ ಚಚ್ಚೌಕಾದ ಮೆತ್ತೆಯ ಅಂಚುಗಳ ಮೇಲೆ ಮೂರು ಸಾಲು ಮುತ್ತುಗಳನ್ನು ಹೆಣೆಯಲಾಗಿತ್ತು. ಆ ಮೂರು ದಿನ ರಾಜ ಈ ಮೆತ್ತೆಯ ಮೇಲೆ ಆಸೀನನಾಗಿದ್ದ. ಮಹಾನವಮಿ ಉತ್ಸವ ಮುಕ್ತಾಯವಾದಾಗ ಸಂಜೆಯ ಪ್ರಾರ್ಥನಾ ಸಮಯಕ್ಕೆ ಉದ್ದ ಅಗಲಗಳೆರಡು ಹತ್ತು ಘೆಜ[21] ಇದ್ದ ನಾಲ್ಕು ಜಗಲಿಗಳ ಮಧ್ಯೆ ನನ್ನನ್ನು ಕರೆತರಲಾಯಿತು. ಮಾಳಿಗೆ ಮತ್ತು ಗೋಡೆಗಳನ್ನು ಸಂಪೂರ್ಣವಾಗಿ ಅಮೂಲ್ಯ ಹರಳು ಖಚಿತವಾದ ಬಂಗಾರದ ತಗಡುಗಳಿಂದ ಮಾಡಲಾಗಿತ್ತು. ಪ್ರತಿ ತಗಡು ಖಡ್ಗದ ಅಲಗಿನಷ್ಟು ದಪ್ಪವಾಗಿತ್ತು ಮತ್ತು ಬಂಗಾರದ ಮೊಳೆಗಳಿಂದ ಬಡಿಯಲಾಗಿತ್ತು. ಮುಂದಿರುವ ಜಗಲಿಯ ಮೇಲೆ ರಾಜನ ಸಿಂಹಾಸನ ಇರಿಸಲಾಗಿದೆ, ಮತ್ತು ಸಿಂಹಾಸನ ಬಲು ದೊಡ್ಡ ಆಕಾರದ್ದಿದೆ."

ಈ ಪ್ರವಾಸಿಗಳು ನೀಡಿದ ವರ್ಣನೆಗಳು ಹದಿನೈದನೆಯ ಶತಮಾನದ ಪೂರ್ವಾರ್ಧದಲ್ಲಿ ಈ ಮಹಾ ಹಿಂದೂ ರಾಜಧಾನಿ ಹೊಂದಿದ್ದ ವೈಭವಗಳ ಒಳ್ಳೆಯ ಕಲ್ಪನೆ ನೀಡುತ್ತವೆ ; ಇದನ್ನು ಲಕ್ಷ್ಯದಲ್ಲಿರಿಸಿಕೊಂಡು ನಾವು ಆ ಕಾಲದ ಇತಿಹಾಸಕ್ಕೆ ಹಿಂತಿರುಗುತ್ತೇನೆ.

---

1 ಇಯಾ ಪ್ರತ್ಯಯವನ್ನು ಬ್ರ್ಯಾಕಿಯೊಲಿನಿ ಅನೇಕ ಭಾರತೀಯ ಹೆಸರುಗಳಿಗೆ ಜೋಡಿಸುತ್ತಾನೆ; ಹೀಗೆ ಬಾರ್ಕೂರಿನ ಪೋರ್ತುಗೀಜ ರೂಪಾಂತರವಾದ ಬಕಾನೂರಿಗೆ 'ಪಳಮುರಿಯಾ', ಚಂದ್ರಗಿರಿಗೆ 'ಸೆಂದರಘಿರಿಯಾ', ಉದಯಗಿರಿಗೆ 'ಒದೆಶ್ಚಿರಿಯಾ' ಇತ್ಯಾದಿ.

2 ಜರ್ನಲ್ ಆಫ್ ದಿ ಏಶಿಯಾಟಿಕ್ ಸೊಸಾಯಿಟಿ ಆಫ್ ಬೆಂಗಾಲ್, ಸಂ. xiv, ಭಾಗ ii, ಪು. ೫೧೮.

3 ಸಾಮಾನ್ಯವಾಗಿ ಸ್ಫಟಿಕಶಿಲೆಯಿಂದ ಮಾಡಲಾದ ಮತ್ತು ಹೆಚ್ಚಾಗಿ ವಿಜಯನಗರದ ಸುತ್ತಮುತ್ತಲಿನ ಪ್ರದೇಶದಲ್ಲಿರುವ ಹಳೆಯ ಕೋಟೆಗಳ ನಿವೇಶನಗಳಲ್ಲಿ ದೊರೆಯುವ ಕಲ್ಲಿನ ಗುಂಡುಗಳು ಬಹುಶಃ ಈ ಆಯುಧಗಳಿಂದ ಎಸೆಯಲ್ಪಡಲು ಉದ್ದೇಶಿತವಾಗಿದ್ದವು. ಅವುಗಳನ್ನು ಹೆಚ್ಚಾಗಿ 'ತೋಪುಗುಂಡು'ಗಳೆಂದು ಕರೆಯಲಾಗಿದೆ. ಆದರೆ ಫಿರಂಗಿಗಳಿಂದ ಹಾರಿಸಲು ಸಾಧ್ಯವಿಲ್ಲ. ಏಕೆಂದರೆ ಆಸ್ಫೋಟದಲ್ಲಿ ಅವು ಒಡೆದು ಹೋಗುತ್ತಿದ್ದವು. ಮತ್ತು ಫಿರಂಗಿಗೆ ಗಂಭೀರ ಸ್ವರೂಪದ ಧಕ್ಕೆ ಉಂಟುಮಾಡುತ್ತಿದ್ದವು.

4 ಅದೇ ಕಾಲಕ್ಕೆ ಅಂದರೆ ೧೪೩೬ರಲ್ಲಿ ಬಾರ್ಬರೊ (ಹ್ಯಾಕ್ಲುಟ್ ಸೊಸೈಟಿ, "ಟ್ರ್ಯಾವೆಲ್ಸ್ ಆಫ್ ಬಾರ್ಬರೊ", ಪು. ೫೮), ಟಾರ್ಟರಿಯಲ್ಲಿ ತನ್ನ ವಾಸ್ತವ್ಯ ಕುರಿತು ಹೀಗೆ ಬರೆದ: "ಆಗ ಕಟಾಇಜ ಬಗೆಗೆ ಮಾತನಾಡುತ್ತ ಅವನು ನನಗೆ ಹೇಳಿದುದೇನೆಂದರೆ ಆ ಅರಸನ ದರಬಾರದ ಮುಖ್ಯಾಧಿಕಾರಿಗೆ ಫ್ರಾಂಚಿ ಅಂದರೇನೆಂಬುದು ಚೆನ್ನಾಗಿ ತಿಳಿದಿತ್ತು...ನಾವು ಕಟಾಯಿನಿಗಳಿಗೆ ಎರಡು ಕಣ್ಣಿದ್ದರೆ ನೀವು ಫ್ರಾಂಚಿಗಳಿಗೆ ಒಂದು ಇದೆ. ನಿಮಗಾದರೊ (ತನ್ನ ಜೊತೆಗಿದ್ದ ಟಾರ್ಟರರ ಕಡೆಗೆ ತಿರುಗುತ್ತ ಒಂದೂ ಇಲ್ಲ". ಈ ವಿಚಿತ್ರ ಸಂಘಟನೆ ಕುತೂಹಲಕರವಾಗಿದೆ.

5 ಕಾಲಿಕತ್ತದ ಸಮುರಿ

6 ಸರ್ ಎಚ್. ಈಲಿಯಟ್ ("ಹಿಸ್ಟರಿ", iv, ೧೦೩, ಟಿಪ್ಪಣಿ) ಅಬ್ದುರ್ ರಜಾಕ್‌ನ ಕಾಗುಣಿತವೆಂದು "ಬಿದರೂರ" ಎಂದು ಕೊಟ್ಟಿದ್ದಾನೆ. ಉಲ್ಲೇಖಿತ ಊರು ಬಹುಶಃ ಬಿದನೂರ ಆಗಿತ್ತು.

7 ಇದು ಎಚ್. ೮೪೬ರಲ್ಲಿತ್ತು, ಮತ್ತು ಏಪ್ರಿಲದ ಕೊನೆ, ಕ್ರಿ.ಶ. ೧೪೪೩ಕ್ಕೆ ತಾಳೆ ಹೊಂದುತ್ತವೆ.

8 ಮುಂದೆ, ಪು. ೨೫೩

9 ಅಂದರೆ ಸುಮಾರು ಏಳು ಮೈಲು. ಮೊದಲ ರಕ್ಷಣೆಯ ತೀರ ದಕ್ಷಿಣದ ತುದಿಯಿಂದ ಉತ್ತರಕ್ಕೆ ನದಿಯವರೆಗೆ ಅಳೆದುದಾದರೆ ಅದು ವಾಸ್ತವಿಕವಾಗಿ ಸುಮಾರು

ಎಂಟು ಮೈಲುಗಳಿದೆ. ಎರಡು ಮೈಲು ಇನ್ನೂ ಉತ್ತರಕ್ಕಿರುವ ಉತ್ತರದ ಸುತ್ತುಗಳನ್ನು ರಜಾಕ್ ಸ್ಪಷ್ಟವಾಗಿಯೆ ಆನೆಗುಂದಿಯ ಗೋಡೆಗಳಲ್ಲಿ ಸೇರಿಸಿಲ್ಲ.

10 ವರ್ಣನೆಗಳು ಅಸ್ಪಷ್ಟವಾಗಿವೆ. ರಸ್ತೆಯುದ್ದಕ್ಕೂ ಅರಮನೆಯ ದ್ವಾರದಿಂದ ನದಿಯ ಮೇಲಿನ ಆನೆಗುಂದಿ ದ್ವಾರದವರೆಗೆ ಸಾಗಿರುವ ಪಾನಸುಪಾರಿ ಬಜಾರ ಎಂಬ ಉದ್ದವಾದ ಪೇಟೆ ಇದ್ದಿತೆಂಬ ನನ್ನ ಗ್ರಹಿಕೆ ಸರಿಯಾಗಿದ್ದರೆ ಅದನ್ನು ನಿಶ್ಚಿತ ವಾಗಿಯೂ ಇನ್ನೊಂದು ರಸ್ತೆ ಅಡ್ಡಹಾಯ್ದಿರಬೇಕು. ಆದುದರಿಂದ, ಬಹುಶಃ ಈ ರಸ್ತೆ ಒಳ ಆವರಣದ ಕಮಲಾಪುರ ದ್ವಾರದಿಂದ ಉತ್ತರಕ್ಕೆ ಶ್ರೇಷ್ಠ ಹಂಪಿ ದೇವಾಲಯದವರೆಗೆ ಸಾಗಿದ ಅಂಗಡಿಗಳಿಂದ ಸಾಲುಗಟ್ಟಿದ ರಸ್ತೆಯಾಗಿರಬೇಕು. ಅರಮನೆಯ ದ್ವಾರಕ್ಕೆ ಹತ್ತಿಕೊಂಡೇ ಈ ರಸ್ತೆಗಳು ಒಂದನ್ನೊಂದು ಸಮಕೋನ ಗಳಲ್ಲಿ ಛೇದಿಸುತ್ತವೆ ಮತ್ತು ನಾಲ್ಕು ಪ್ರತ್ಯೇಕ ಪೇಟೆಗಳನ್ನು ಅಥವಾ ಬೀದಿಗಳನ್ನು ಮಾಡುತ್ತವೆ. ದ್ವಾರಮಂಟಪಗಳು ಮತ್ತು ಮುಖಮಂಟಪಗಳು ಈಗ ಅಸ್ತಿತ್ವ ದಲ್ಲಿಲ್ಲ, ಆದರೆ ಹಂಪಿ ದೇವಾಲಯದಿಂದ ಪೂರ್ವಕ್ಕೆ ಸಾಗುವ ಬೀದಿಯಲ್ಲಿನ ಅವಶೇಷಗಳಿಂದ ದ್ವಾರಮಂಟಪಗಳು ಹಿಂದಿನ ಕಾಲದಲ್ಲಿ ಹೇಗಿದ್ದವೆಂಬುದನ್ನು ತೋರುತ್ತವೆ. ಈ ಕೊನೆಯ ಬೀದಿಯೇ ಅರ್ಧ ಮೈಲು ಉದ್ದವಿದೆ.

11 'ಸ್ತ್ರೀಯರ ಸ್ನಾನಗೃಹ'ದಿಂದ ಅನತಿ ದೂರದಲ್ಲಿ ಇವುಗಳ ಅವಶೇಷಗಳು ಇಂದಿಗೂ ಕಾಣಸಿಗುತ್ತವೆ. ನೀರು ಸಾಗಿಸುವ ಉದ್ದ ಹರಿದೋಣಿ ಇತ್ತು, ಮತ್ತು ಅದರ ಎರಡೂ ಬದಿಗೆ ಮನೆಬಳಕೆಯ ನೀರು ಹಿಡಿಯಲು ಉದ್ದಿಷ್ಟವಾದ ನಾನಾ ಆಕಾರ ಗಳ ದುಂಡುಪಾತ್ರೆಗಳನ್ನು ಪಡಪುಕೊಳ್ಳಲೋಸುಗ ಕೆತ್ತಿರಬಹುದಾದ ತಗ್ಗು ಗಳಿದ್ದವು.

12 "ದಿವಾನ್-ಇ-ಖಾನಾ ನಲವತ್ತು ಕಂಬಗಳ ಸಭಾಂಗಣವನ್ನು ಹೋಲುತ್ತದೆ" (ಸರ್ ಎಚ್. ಈಲಿಯಟ್‌ನ ಅನುವಾದ, 'ಹಿಸ್ಟರಿ', iv, ೧೦೮) ಯಾವ ಕಟ್ಟಡವನ್ನು ಪ್ರಸ್ತಾಪಿಸಲಾಗುತ್ತಿದೆಯೆಂಬುದರ ಬಗೆಗೆ ನನಗೆ ಸಂದೇಹ. ಹ್ಯಾಕ್ಲ್ಯುಟ್ ಅನುವಾದಕನ ಕಥಾನಕ ಗಜಶಾಲೆಗಳ ಪಶ್ಚಿಮಕ್ಕೆ ಇರುವ "ಝನಾನಾ" ಎಂದು ಕರೆಯಲಾಗಿದ್ದ ದೊಡ್ಡ ಆವರಣವನ್ನು ಸೂಚಿಸಿರುವಂತಿದೆ. ಸರ್ ಹೆನ್ರಿ ಹ್ಯಾಕ್ಲ್ಯುಟ್‌ನ ವರ್ಣನೆಗೆ ನಿಕರವಾಗಿ ಸರಿಹೊಂದುವ ಯಾವ ಸಭಾಂಗಣವನ್ನೂ ನಾನರಿಯೆ. ಪ್ರಸ್ತಾಪಿಸಲಾಗಿರುವ ಆವರಣವನ್ನು ಸುತ್ತುವರಿದ ಕೋನಗಳಲ್ಲಿ ರುವ ನಿರೀಕ್ಷಣಾ ಗೋಪುರಗಳುಳ್ಳ ಉನ್ನತ ಗೋಡೆಗಳು ರಾಜಪತ್ರಾಗಾರ ರಾಜ್ಯದ ಕಚೇರಿಗಳ—"ದಿವಾನ್ ಖಾನಾ"—ಸಂರಕ್ಷಣೆಗೋಸುಗವೆ ಕಟ್ಟಲಾದಂಥವು ಗಳೆಂದು ಊಹಿಸಬಹುದು. ಹಾಗಿದ್ದ ಪಕ್ಷದಲ್ಲಿ, ಎದುರಿಗಿರುವ "ಹಜಾರ"ವೆ "ಸಭಾಂಗಣ"ವೆಂಬ ಕಲ್ಪಕ ಹೆಸರು ಕೊಟ್ಟಿರುವ ಕಟ್ಟಡವಾಗಿರಬಹುದು. ಈ ಭವನ ಅಥವಾ ದಫ್ತರ್-ಖಾನಾ ಸಚಿವ ಮತ್ತು ಅವನ ಸಹೋದ್ಯೋಗಿಗಳ ಕಾರ್ಯಾಲಯ—ನಿತ್ಯಗೆಲಸದ ಕಚೇರಿ ಅಥವಾ ನ್ಯಾಯಾಲಯ; ಆವರಣ ದಲ್ಲಿರುವ ಕೇಂದ್ರೀಯ ಕಚೇರಿಗಳಿಂದ ಅಗತ್ಯ ದಸ್ತೈವಜುಗಳು ಮತ್ತು ದಾಖಲೆ ಗಳನ್ನು ತರಲಾಗುತ್ತಿತ್ತು ಮತ್ತು ಒಯ್ಯಲಾಗುತ್ತಿತ್ತು.

13 ಸ್ಥೂಲವಾಗಿ ಇಪ್ಪತ್ತು × ಏಳು ಗಜಗಳು. ಉಲ್ಲೇಖಿಸಿರುವ ಎತ್ತರವನ್ನು ಅರ್ಥ ಮಾಡಿಕೊಳ್ಳುವುದು ಕಠಿಣ.

4 ಇಂಡಿಯಾ ಆಫೀಸ್ ಪ್ರತಿಯಲ್ಲಿರುವಂತೆಯೆ ನಾನು ಈ ಶಬ್ದ ಕೊಟ್ಟಿರುವೆ. ಹ್ಯಾಕ್ಲ್ಯುಟ್‌ನ ಆವೃತ್ತಿಯಲ್ಲಿ ದೈಯಾಂಗ್ ಎಂದಿದೆ. ಅದು ಸರಿಯಲ್ಲವೆಂದು ತೋರುತ್ತದೆ.

14 ಸಾಮಾನ್ಯವಾಗಿ ಬೆಳ್ಳಿ ಹೊದಿಸಲಾದ ಬಡಿಗೆ ಹಿಡಿದ ಅಧಿಕಾರಿಗಳು.

15 ತಾನು ಅರಮನೆಯ ದ್ವಾರದಲ್ಲಿ ಪೂರ್ವಾಭಿಮುಖವಾಗಿ ನಿಂತಿದ್ದನೆಂಬಂತೆ ಅಬ್ದುರ್ ರಜ್ಜಾಕ್ ಬರೆಯುತ್ತಾನೆ. ಹಾಗೆ ಗ್ರಹಿಸಿದರೆ, ಅವನ ವರ್ಣನೆ ನಿಖರವಾಗಿದೆ. ಶ್ರೀ ಎ. ರೀ. ಈ ಅಭಿಪ್ರಾಯವನ್ನು ಸಾಮಾನ್ಯವಾಗಿ ಮದ್ರಾಸ್ ಕ್ರಿಶ್ಚನ್ ಕಾಲೇಜ್ ಮ್ಯಾಗಜಿನ್ (ಡಿಸೆಂಬರ ೧೮೮೬)ನಲ್ಲಿ ಪ್ರಕಟವಾದ ಒಂದು ಲೇಖನದಲ್ಲಿ ತಾಳಿದ್ದಾರೆ.

16 ಸುಮಾರು ಇನ್ನೂರು ಗಜ ಉದ್ದ, ಹದಿನೈದು ಅಗಲ.

17 ಇದೆಲ್ಲ ಮಾಯವಾದಂತೆ ತೋರುತ್ತದೆ. ಆದರೆ ಈಗಿನ ಕಮಲಾಪುರದಿಂದ ಹಂಪೆಯ ಮುಖ್ಯರಸ್ತೆಯ—ಲೇಖಕ ನಿಂತಂತೆ "ಟಂಕಸಾಲೆಯ ಹಿಂದೆ"—ಎರಡೂ ಬದಿಗಳಲ್ಲಿ ಕಟ್ಟಡಗಳು ನಿಂತಿದ್ದಿರಬಹುದು.

18 ಇಂಡಿಯಾ ಆಫೀಸ್ ಪ್ರತಿ ಇಲ್ಲಿ ಹೀಗೆ ಹೆಚ್ಚಿಗೆ ಹೇಳುತ್ತದೆ: "ಅವನು ಅತ್ಯಂತ ತರುಣನಾಗಿದ್ದನು" ಹಾಗಾದರೆ, ರಾಯಭಾರಿ ಸಂದರ್ಶನ ಪಡೆದ ವ್ಯಕ್ತಿ ಆ ಸಮಯಕ್ಕೆ (೧೪೪೩) ಇಪ್ಪತ್ತು ಮೂರು ವರ್ಷ ಸಿಂಹಾಸನದ ಮೇಲಿದ್ದ ಎರಡನೆಯ ದೇವರಾಯನಂತೂ ಇರಲಿಕ್ಕಿಲ್ಲ.

19 ಮಹಾನದಿ (ಹ್ಯಾಕ್ಲ್ಯುಟ್), ಮಹಾನವಿ (ಈಲಿಯಟ್) ಅರ್ಥದ ಬಗೆಗೆ ಯಾವ ಸಂಶಯವೂ ಇಲ್ಲ.

20 ಹಿಂದೂ ಗಣನೆಯಲ್ಲಿ ಕಾರ್ತಿಕ ತಿಂಗಳ ಆರಂಭದೊಂದಿಗೆ ತಾಳೆಹೊಂದುವ ಹುಣ್ಣಿಮೆಯ ಪ್ರತ್ಯಕ್ಷ ಕ್ಷಣ ಅಕ್ಟೋಬರ್ ೨೩ರಂದು ಬೆಳಿಗ್ಗೆ ೭, ೪೦, ಮತ್ತು ಕಾರ್ತಿಕದ ಪ್ರಥಮ ಹಿಂದೂ ದಿನ (ತಿಥಿ) ಆಕ್ಟೋಬರ ೨೪ರಂದು ಬೆಳಿಗ್ಗೆ ೯ಕ್ಕೆ ಆರಂಭವಾಗುತ್ತದೆ. ಮಹಮ್ಮದೀಯ ತಿಂಗಳ ಚಂದ್ರನ ಸೌಗೋದಯದೊಂದಿಗೆ ಆರಂಭಿಸುತ್ತದೆ, ಮತ್ತು ಇದು ೨೪ ಅಥವಾ ೨೫ರ ಸಂಜೆ ಸಂಭವಿಸಿರಬಹುದು. ಏನಿದ್ದರೂ, ಪೂರಾ ಒಂದು ತಿಂಗಳು ಮೊದಲು ನಡೆದ ಹಬ್ಬವನ್ನು "ರಜಬ್ ತಿಂಗಳಿನ ಮೂರು ದಿನಗಳಲ್ಲಿ" ನಡೆದ ಹಬ್ಬವೆಂದು ರಜಾಕ್ ಕರೆಯುವುದು ಅಸಂಭವನೀಯ. ಆದುದರಿಂದ, ಅವನು ಕಾರ್ತಿಕದಲ್ಲಿನ ಹೊಸ ವರ್ಷದ ಉತ್ಸವಗಳ ಕಾಲಕ್ಕೆ ಹಾಜರಿದ್ದಿರಬೇಕಲ್ಲದೆ ಒಂದು ತಿಂಗಳ ಹಿಂದೆ ಆಶ್ವಿನದಲ್ಲಿನ ಮಹಾನವಮಿಯ ಕಾಲಕ್ಕಲ್ಲ. ತಾನು ಹಾಜರಿದ್ದ ಹಬ್ಬಗಳ ಪ್ಯಾಸ್‌ನ ವರ್ಣನೆ ಗಮನಿಸಿರಿ. ತಾನು ವಿಜಯನಗರದಲ್ಲಿದ್ದಾಗ ಒಂಬತ್ತು ದಿನಗಳ ಮಹಾನವಮಿ ಸೆಪ್ಟಂಬರ ೧೨ರಂದು ಜರುಗಿತೆಂದು ಅವನು ಹೇಳುತ್ತಾನೆ, ಮತ್ತು ಆ ವಿವರಗಳು ಕ್ರಿ.ಶ. ೧೫೨೦ರೊಂದಿಗೆ ತಾಳೆ ಹೊಂದುತ್ತವೆ. ಸೆಪ್ಟೆಂಬರ ೧೨, ೧೫೨೦ ಆಶ್ವಿನ

ತಿಂಗಳಿನ ಮೊದಲನೆಯ ದಿನ. ಆ ವರ್ಷದ ಹೊಸ ವರ್ಷದ ಹಬ್ಬ ಅಕ್ಟೋಬರ ೧೨ರಂದು ಜರುಗಿತು. ಅನೆರಡೂ ಹುಣ್ಣಿಮೆಯಾಗಿರದೆ ಅಮಾವಾಸ್ಯೆಯ ಎರಡನೆಯ ದಿನವಾಗಿದ್ದುದರಿಂದ ಅದು ಕಾರ್ತಿಕದ ಮೊದಲ ದಿನದೊಂದಿಗೆ ತಾಳೆ ಹೊಂದುತ್ತದೆ.

21 ಸುಮಾರು ಏಳು ಗಜ ಅಥವಾ ಇಪ್ಪತ್ತೊಂದು ಅಡಿ.



## ಅಧ್ಯಾಯ ೮

# ಪ್ರಥಮ ರಾಜವಂಶದ ಮುಕ್ತಾಯ (ಕ್ರಿ.ಶ.೧೪೪೯ ರಿಂದ ೧೪೯೦)

**ಮಲ್ಲಿಕಾರ್ಜುನ ಮತ್ತು ಒಂದನೆಯ ವಿರೂಪಾಕ್ಷ–ರಾಜಶೇಖರ ಮತ್ತು ಎರಡನೆಯ ವಿರೂಪಾಕ್ಷ–ದಕ್ಖನ್ ಇದು ಸ್ವತಂತ್ರ ರಾಜ್ಯಗಳಾಗಿ ಒಡೆಯುತ್ತದೆ –ಬಿಜಾಪುರದ ರಾಜ ಗೋವಾ ಮತ್ತು ಬೆಳಗಾಂವಿ ವಶಪಡಿಸಿಕೊಳ್ಳುತ್ತಾನೆ– ರಾಜಮುಂದ್ರಿ, ಕೊಂಡಪಲ್ಲೆ, ಮತ್ತು ತೆಲಂಗಾಣದ ಇತರ ಭಾಗಗಳಲ್ಲಿ ಯುದ್ಧ–ಮುಹಮ್ಮದ ಗವಾನನ ಮರಣ–ರಷ್ಯದ ಪ್ರವಾಸಿ ನಿಕಿಟಿನ್– ವಿಜಯನಗರದಲ್ಲಿ ಅರಾಜಕತೆ–ನರಸಿಂಹ ಸಿಂಹಾಸನವನ್ನು ಆಕ್ರಮಿಸುತ್ತಾನೆ.**

ಎರಡನೆಯ ದೇವರಾಯನ ಆಳಿಕೆಯ ನಂತರದ ಅವಧಿ ಯಾವ ಮೂಲದಿಂದಲೂ ತೃಪ್ತಿಕರವಾಗಿ ತುಂಬಲು ಬಲು ಕಠಿಣವಾದುದೆಂಬುದನ್ನು ನಾನು ಈ ಮೊದಲು ಹೇಳಿಯಾಗಿದೆ. ಅದು ವಿಜಯನಗರದಲ್ಲಿ ಗೋಜಲಿನ ಅವಧಿಯಾಗಿತ್ತು. ಈ ಸಂಗತಿಯನ್ನು ನೂನಿಜ್ ತನ್ನ ದಿನಚರಿಯಲ್ಲಿ ಸ್ಪಷ್ಟವಾಗಿ ಕಾಣಿಸಿದ್ದಾನೆ.

ದೇವರಾಯನ ಉಲ್ಲೇಖವಿರುವ ಯಾವುದೆ ಶಾಸನದಲ್ಲಿಯೂ ಕ್ರಿ.ಶ.೧೪೪೯ ಕೊನೆಯ ದಿನಾಂಕವಾಗಿದೆ. ಮತ್ತು ಡಾ.ಹುಲ್ಟ್‌ಜ್[1] ಅದನ್ನು ಎರಡನೆಯ ದೇವರಾಯನಿಗೆ ಗೊತ್ತುಮಾಡುತ್ತಾನೆ. ಈ ಮೊದಲು ಸೂಚಿಸಿರುವಂತೆ ಕ್ರಿ.ಶ. ೧೪೪೪ ಮತ್ತು ೧೪೪೯ರ ಮಧ್ಯೆ ಸಿಂಹಾಸನದ ಮೇಲೆ ಮೂರನೆಯ ದೇವರಾಯನೊಬ್ಬ ಇದ್ದಿರಬಹುದು, ಆದರೆ ಅದಿನ್ನೂ ಸಿದ್ಧಪಡಬೇಕಿದೆ. ಶಾಸನಗಳ ಪ್ರಕಾರ ಎರಡನೆಯ ದೇವರಾಯನ ಇಬ್ಬರು ಮಕ್ಕಳ ಹೆಸರು ಅನುಕ್ರಮವಾಗಿ ಮಲ್ಲಿಕಾರ್ಜುನ ಮತ್ತು ಒಂದನೆಯ ವಿರೂಪಾಕ್ಷ. ಮೊದಲನೆಯವನ ಕ್ರಿ.ಶ.೧೪೫೨-೫೩ ಮತ್ತು ೧೪೬೪-೬೫[2]ರ ದೆಂದು ಕಾಲನಿರ್ಣಯ ಮಾಡಲಾದ ಶಾಸನಗಳು ಮತ್ತು ಎರಡನೆಯವನ ೧೪೭೦[0]ರದೆಂದು ನಿರ್ಣಯಿತವಾದ ಒಂದು ಶಾಸನವಿದೆ. ಮಲ್ಲಿಕಾರ್ಜುನನಿಗೆ ಎರಡು ಮಕ್ಕಳಿದ್ದಂತೆ ತೋರುತ್ತದೆ. ಕ್ರಿ.ಶ.೧೪೭೯-೮೦ ಮತ್ತು ೧೪೮೬-೮೭ರ ವರ್ಷಗಳಲ್ಲಿನ ಅವನ ಬಗೆಗೆ ಶಾಸನಗಳಿರುವ ರಾಜಶೇಖರ, ಮತ್ತು ರಾಜಶೇಖರನ ಕೊನೆಯ ಶಾಸನಕ್ಕಿಂತ ಮೂರು ವರ್ಷ ಮುಂಚೆ ಕ್ರಿ.ಶ.೧೪೮೩-೮೪ ದಿನಾಂಕ ಹೊಂದಿರುವ ಶಾಸನದಲ್ಲಿ ಹೆಸರಿಸಲ್ಪಟ್ಟಿರುವ ಎರಡನೆಯ ವಿರೂಪಾಕ್ಷ.

ಡಾ. ಹುಲ್ಟ್‌ಜ್ ಎಪಿಗ್ರಾಫಿಯಾ ಇಂಡಿಕಾದ ಮೂರನೆಯ ಸಂಪುಟದ ಪುಟ ೩೬ರಲ್ಲಿ ಈ ದಿನಾಂಕಗಳನ್ನು ಕೊಡುತ್ತಾನೆ. ಆದರೆ ಅದೇ ಕೃತಿಯ ನಾಲ್ಕನೆಯ

ಸಂಪುಟದಲ್ಲಿ (ಪು.೧೮೦)ಕ್ರಿ.ಶ.೧೪೭೮-೭೯ರೊಂದಿಗೆ ತಾಳೆಹೊಂದುವ ವರ್ಷದಲ್ಲಿ ಕಾಲನಿರ್ಣಯಿಸಲಾದ ರಾಜಶೇಖರನ ಶಾಸನವೊಂದು ಉತ್ತರ ಆರ್ಕಾಟದ ಅಂಬೂರಿನಲ್ಲಿದೆಯೆಂದು ಉಲ್ಲೇಖಿಸುತ್ತಾನೆ. ಕಡಪಾ ಜಿಲ್ಲೆಯ ಪಾರ್ನಪಲ್ಲೆ (ಅಥವಾ ಪಾರನಪಲ್ಲೆ)ಗ್ರಾಮದಲ್ಲಿ ಕಂಡ ಶಿಲಾಶಾಸನದ ಬಗೆಗೂ ನಾನು ಕೇಳಿದ್ದೇನೆ. ತಾಮ್ರಪಟದ ಮೇಲೆ ಅದರ ನಕಲು ಅನಂತಪುರ ಜಿಲ್ಲೆಯ ತಾಡಪತ್ರಿ ತಾಲೂಕಿನ ಗೂಡ್ಡಮಾರಿಯ ನಾರಾಯಣ ರೆಡ್ಡಿ ಎಂಬುವನೊಬ್ಬನಲ್ಲಿದೆಯೆಂದು ಹೇಳಲಾಗುತ್ತಿದೆ ಇದು ಶಕೆ ೧೩೯೮(ಕ್ರಿ.ಶ.೧೪೭೬-೭೭)ರ ದಿನಾಂಕ ಹೊಂದಿರುವದಾಗಿಯೂ "ವಿಜಯನಗರದ ಪ್ರೌಢದೇವರಾಯ"ನನ್ನು ಸಾರ್ವಭೌಮನೆಂದು ಉಲ್ಲೇಖಿಸಿರುವುದಾಗಿಯೂ ಹೇಳಲಾಗುತ್ತಿದೆ.

ರಾಜಶೇಖರನ ಎರಡನೆಯ ಶಾಸನವನ್ನು ಹಳೆಯ ರಾಜಮನೆತನದ ಅಂತಿಮ ಪತನಕ್ಕಿಂತ ಸ್ವಲ್ಪೇ ಮುಂಚೆ ಕೆತ್ತಲಾಗಿರಬೇಕು, ಏಕೆಂದರೆ, ದುರಾಕ್ರಮಿ ನರಸಿಂಹನ ಪ್ರಥಮ ಖಚಿತ ದಿನಾಂಕ ಕ್ರಿ.ಶ.೧೪೯೦ ಇದೆ.

ಮೇಲುಸೇರುವೆಯಾಗಿರುವ ದಿನಾಂಕಗಳ ಗೋಜಲಿನ ಮಧ್ಯೆ ನಾವು ನೇರವಾಗಿ ನೂನಿಜ್‌ನತ್ತ ತಿರುಗಬೇಕು; ೧೫೩೫ರ ಸುಮಾರಿಗೆ ವಾಡಿಕೆಯಿಂದ ಸಂಗ್ರಹಿಸಲಾದ ಅವನ ಕತೆ ಸ್ಪಷ್ಟ ಹಾಗೂ ಅನುಕ್ರಮಿಕವಾಗಿರುವುದಾದರೂ ಇತರ ದಾಖಲೆಗಳಿಂದ ಭಿನ್ನವಾಗಿದೆ. ಅವನ ಪ್ರಕಾರ, ಎರಡನೆಯ ದೇವರಾಯನಿಗೆ ಪೀಣರಾಯನೆಂಬ ಮಗನಿದ್ದ, ಅವನು ತನ್ನ ಮೇಲಾದ ಕೊಲೆಯ ಯತ್ನದ ಆರು ತಿಂಗಳ ನಂತರ ತೀರಿಕೊಂಡ ; ಆದರೆ, ಈ ನತದೃಷ್ಟ ಅರಸ ಎರಡನೆಯ ದೇವರಾಯನೆಂದು ಮತ್ತು ಈ ಪಾತಕವನ್ನು ೧೪೪೩ರ ಎಪ್ರಿಲ್ ತಿಂಗಳಿಗಿಂತ ಮೊದಲು ಎಸಗಲಾಗಿತ್ತೆಂದು ಅಬ್ದುರ್ ರಜಾಕ್ ನಿರ್ಣಾಯಕವಾಗಿ ಸ್ಥಾಪಿಸುತ್ತಾನೆಂಬುದನ್ನು ನಾವು ತೋರಿಸಿದ್ದೇವೆ. ಪೀಣರಾಯ ಹಿಂದೆ ಬಿಟ್ಟುಹೋದ ಅವನ ಹೆಸರಿಲ್ಲದ ಮಗ ವಿಶೇಷವಾದುದನ್ನೇನೂ ಮಾಡಲಿಲ್ಲ ಮತ್ತು ಅವನ ನಂತರ ಅವನ ಮಗ "ವಿರುಪಾಕ್ಷ"— ವಿರೂಪಾಕ್ಷನೆಂದೆ ಆ ಹೆಸರಿನ ಸ್ಪಷ್ಟ ಅರ್ಥ—ಪಟ್ಟಕ್ಕೆ ಬಂದ ವಿರುಪಾಕ್ಷನನ್ನು ಅವನ ಹಿರಿಯ ಮಗ ಕೊಲೆಗೈದ. ಅವನನ್ನಾದರೊ ಅವನ ತಮ್ಮ 'ಪಾಡೆಯ ರಾವ್' ಕೊಲೆಗೈದ ಮತ್ತು ಈ ರಾಜ ದುರಾಕ್ರಮಿ ನರಸಿಂಹನಿಗೆ ರಾಜ್ಯವನ್ನು ಕಳೆದುಕೊಂಡ.

ಈ ಕಾಲಾವಧಿ ನಿಸ್ಸಂದೇಹವಾಗಿಯೂ ಕ್ಷುಬ್ಧವಾಗಿತ್ತು. ಸದ್ಯ ಖಚಿತವಾಗಿ ಮತ್ತು ಧಾರಾಳವಾಗಿ ಹೇಳಬಹುದಾದುದೇನೆಂದರೆ ನರಸಿಂಹನ ದುರಾಕ್ರಮಣಕ್ಕಿಂತ ಮುಂಚಿನ ಸುಮಾರು ನಲವತ್ತು ವರ್ಷಗಳವರೆಗೆ ರಾಜಕೀಯ ಕ್ಷೋಭೆ, ಅತೃಪ್ತಿ, ಮತ್ತು ಹಳೆಯ ರಾಜಮನೆತನದ ಪ್ರತಿನಿಧಿಗಳ ವಿಷಯದಲ್ಲಿ ವ್ಯಾಪಕ ವಿರೋಧಗಳ ಮಧ್ಯೆ ರಾಜ್ಯ ಒಂದು ಕೈಯಿಂದ ಇನ್ನೊಂದಕ್ಕೆ ಹೋಯಿತು. ಹಳೆಯ

ರಾಜಮನೆತನದ ಪ್ರತಿನಿಧಿಗಳಲ್ಲಿ ಹಲವರು ದುರ್ಮರಣಕ್ಕೀಡಾದರೆಂದು ತೋರುತ್ತದೆ. ದುರಾಕ್ರಮಣ ಕ್ರಿ.ಶ. ೧೪೮೭ ಮತ್ತು ೧೪೯೦ರ ನಡುವೆ ಯಾವಾಗಲೊ ಸಂಭವಿಸಿತು.

ಈ ಕಾಲದಲ್ಲಿ ವಿಜಯನಗರ ಮತ್ತು ಉತ್ತರಕ್ಕಿದ್ದ ಅದರ ಆನುವಂಶಿಕ ವೈರಿಗಳ ಮಧ್ಯೆ ಇದ್ದ ರಾಜಕೀಯ ಸಂಬಂಧಗಳೇನೆಂದು ನೋಡಲು ನಾವು ಹಿಂದೂ ಮತ್ತು ಪೋರ್ತುಗೀಜ ದಾಖಲೆಗಳನ್ನು ಬಿಟ್ಟು ಮಹಮ್ಮದೀಯ ಚರಿತ್ರಕಾರರತ್ತ ತಿರುಗಬೇಕು. ಆಗ ಇದ್ದ ಶಾಂತ ಪರಿಸ್ಥಿತಿಗಳನ್ನು ಕದಡುವಂಥ ಯಾವ ಘಟನೆಯೂ ಕ್ರಿ.ಶ. ೧೪೪೩ ಮತ್ತು ೧೪೫೮ರ ಮಧ್ಯೆ ಜರುಗಿದ ಬಗೆಗೆ ಫಿರಿಸ್ತಾ ಹೇಳುವುದಿಲ್ಲ. ಹೆಚ್ಚಿನ ರಾಷ್ಟ್ರೀಯ ಜಂಜಾಟಗಳಿಗೆ ಇಳಿಯದಂತೆ ಕಲಬರ್ಗಾ ಸ್ವತಃ ಬಹಳ ತ್ರಾಸಿನ ಪರಿಸ್ಥಿತಿಯಲ್ಲಿತ್ತು. ಒಳಜಗಳ ಮತ್ತು ಯಾದವೀ ಯುದ್ಧ ದಖ್ಖನದಲ್ಲಿ ಭುಗಿಲೆದ್ದಿತು ಮತ್ತು ದೇಶ ತನ್ನಲ್ಲಿಯೆ ಒಡೆಯಿತು. ಆರಂಭವಾದ ತೊಂದರೆ ಬಾಹಮನಿ ಅರಸೊತ್ತಿಗೆಯ ನಿರ್ಮೂಲನ ಹಾಗೂ ಒಂದರ ಬದಲು ಐದು ಪ್ರತಿಸ್ಪರ್ಧಿ ಮಹಮ್ಮದೀಯ ರಾಜ್ಯಗಳ ಸ್ಥಾಪನೆಯೊಂದಿಗೆ ಮುಕ್ತಾಯವಾಯಿತು.

ಅಲಾ-ಉದ್-ದಿನ್ ಫೆಬ್ರುವರಿ ೧೩, ಕ್ರಿ.ಶ. ೧೪೫೮ (?)[4] ರಲ್ಲಿ ತೀರಿಕೊಂಡ ಮತ್ತು "ಕ್ರೂರ ಹಾಗೂ ರಕ್ತಪಿಪಾಸಿ" ಸ್ವಭಾವದ ರಾಜನಾದ ಅವನ ಮಗ ಹುಮಾಯೂನ ಪಟ್ಟಕ್ಕೆ ಬಂದ. ಮರುವರ್ಷ ಹುಮಾಯೂನ ತೆಲುಗರ ನಾಡಿನ ವಿರುದ್ಧ ಯುದ್ಧ ಹೂಡಿದ ಮತ್ತು ದೇವರಕೊಂಡಕ್ಕೆ ಮುತ್ತಿಗೆ ಹಾಕಿದ. ಅದು ಎಷ್ಟೊಂದು ಬಲವಾದ ಪ್ರತಿರೋಧ ಒಡ್ಡಿತೆಂದರೆ ದಖ್ಖನಿ ಸೈನ್ಯಗಳು ದಿಗ್ಭ್ರಮೆಗೊಂಡು ಹಿಂತಿರುಗಿದವು. ಅವನು ೫ನೆಯ ಸೆಪ್ಟಂಬರ ೧೪೬೧[5] ರಂದು ಮರಣ ಹೊಂದಿದ. ಅದರಿಂದ ಅವನ ಎಲ್ಲ ಪ್ರಜೆಗಳಿಗೆ ನೆಮ್ಮದಿ ದೊರೆಯಿತು. ಆ ಕಾಲಕ್ಕೆ ಮಲ್ಲಿಕಾರ್ಜುನ ವಿಜಯನಗರದ ರಾಜನಾಗಿದ್ದಂತೆ ತೋರುತ್ತದೆ.

ಆಗ ಇನ್ನೂ ಎಂಟು ವರ್ಷದವನಿದ್ದ ನೈಜಾಮ ಶಾಹ ಪಟ್ಟಕ್ಕೆ ಬಂದ. ಆದರೆ ಅವನ ಆಳಿಕೆ ಅಲ್ಪ ಕಾಲದ್ದಿತ್ತು. ಅವನ ನಂತರ ಅವನ ತಮ್ಮ ಮುಹಮ್ಮದ ಜುಲೈ ೩೦, ಕ್ರಿ.ಶ. ೧೪೬೩[6] ರಂದು ಪಟ್ಟಕ್ಕೆ ಬಂದ.

೧೪೬೯ರ ವರ್ಷದ ಮಧ್ಯದಲ್ಲಿ, ರಾಜಶೇಖರ ಇಲ್ಲವೆ ಒಂದನೆಯ ವಿರೂಪಾಕ್ಷ ವಿಜಯನಗರದ ರಾಜನಿದ್ದಾಗ, ಮುಹಮ್ಮದನ ಮಂತ್ರಿ ಮಹಮೂದ್ ಗವಾನ ಪಶ್ಚಿಮಕ್ಕೆ ದಂಡೆತ್ತಿ ನಡೆದ. ಪೂರ್ತಿ ಯಶಸ್ವಿ ದಂಡಯಾತ್ರೆಯ ನಂತರ ಆಗ ನೆಲ ಮತ್ತು ಜಲಮಾರ್ಗವಾಗಿ ವಿಜಯನಗರದ ರಾಯನ ಸ್ವಾಧೀನದಲ್ಲಿದ್ದ ಗೋವಾ ಮೇಲೆ ಆಕ್ರಮಣ ಮಾಡಿದ. ಅವನು ಸಂಪೂರ್ಣ ವಿಜಯಿಯಾಗಿ ಅದನ್ನು ವಶಪಡಿಸಿಕೊಂಡ.

ಬ್ಯಾರೋಸ್‌ನ[7] ಪ್ರಕಾರ, ಕ್ರಿ.ಶ. ೧೪೬೯ರಲ್ಲಿ ಜರುಗಿದ ಮಹಮ್ಮದೀಯರ ಕ್ರೂರ ಹತ್ಯೆಯ ಸೇಡು ತೀರಿಸಿಕೊಳ್ಳಲೋಸುಗ ಬಹುಶಃ ಯುದ್ಧವನ್ನು ಕೈಕೊಳ್ಳಲಾಯಿತು. ಈ ಕಾಲಾವಧಿಯಲ್ಲಿ ಕರಾವಳಿ ವ್ಯಾಪಾರ ಸಂಪೂರ್ಣವಾಗಿ ಮಹಮ್ಮದೀಯರ ಕೈಯಲ್ಲಿತ್ತು ಮತ್ತು ಅವರು ಬಹುಮಟ್ಟಿಗೆ ದಖ್ಖನದಲ್ಲಿನ ಕಾದಾಡುತ್ತಿದ್ದ ದೊಡ್ಡ ಸೈನ್ಯಗಳು ಹಾಗೂ ವಿಜಯನಗರದ ಸಲುವಾಗಿ ಕುದುರೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಹಿಂದೂ ರಾಜ ಈ ಪೂರೈಕೆಯನ್ನೆ ಹೆಚ್ಚಾಗಿ ಅವಲಂಬಿಸಿದ್ದ. ೧೪೬೯ರಲ್ಲಿ ಬಟಿಕಲ್ (ಭಟಕಲ್)ದ ಮೂರರು "ಡೆಕ್ಕನದ ಮೂರ"ರಿಗೆ ಕುದುರೆಗಳನ್ನು ಮಾರಿದುದರಿಂದ ವಿಜಯನಗರದ ರಾಜ ಒನೊರ (ಹೊನಾವರ) ದಲ್ಲಿದ್ದ ತನ್ನ ಮಾಂಡಲಿಕನಿಗೆ "ಸಾಧ್ಯವಿದ್ದಷ್ಟೂ ಅವರನ್ನು ಕೊಲ್ಲಲು ಮತ್ತು ಇತರರನ್ನು ಅಂಜಿಸಿ ಓಡಿಸಲು" ಆಜ್ಞಾಪಿಸಿದ. ಇದು ಭಯಂಕರ ಹತ್ಯಾಕಾಂಡದಲ್ಲಿ ಪರಣಮಿಸಿತು. ಅದರಲ್ಲಿ ೧೦,೦೦೦ ಮುಸಲ್ಮಾನರು ಪ್ರಾಣ ಕಳೆದುಕೊಂಡರು. ಬದುಕುಳಿದವರು ಓಡಿ ಗೋವಾದಲ್ಲಿ ನೆಲೆಸುವ ಮೂಲಕ ತರುವಾಯ ಪೋರ್ತುಗೀಜ ಭಾರತದ ರಾಜಧಾನಿಯಾದ ನಗರವನ್ನು ಸ್ಥಾಪಿಸಿದರು. "ವಿರುಪಾಕ"ನ[8] ಆಳಿಕೆಯಲ್ಲಿ "ಗೋವಾ, ಚೌಲ್, ಮತ್ತು ದಾಬುಲ್"ಗಳನ್ನು ವಿಜಯನಗರ ಕಳೆದುಕೊಂಡುದನ್ನು ನೂನಿಜ್ ಉಲ್ಲೇಖಿಸುತ್ತಾನೆ (ಹತ್ಯಾಕಾಂಡ ಕ್ರಿ.ಶ. ೧೪೭೯ರಲ್ಲಿ ಆಯಿತೆಂದು ಪರ್ಚಸ್ ಹೇಳುತ್ತಾನೆ.)

ಸ್ವಲ್ಪ ಕಾಲಾನಂತರ ಸುಲ್ತಾನ ಮುಹಮ್ಮದನಡಿಯಲ್ಲಿ ಗುಲಾಮನಾಗಿದ್ದ ಯುಸುಫ್ ಆದಿಲ್ ಖಾನ್ ಎಂಬವನೊಬ್ಬ ಪ್ರಾಬಲ್ಯಕ್ಕೆ ಬಂದ. ಅವನು ಅನತಿ ಕಾಲದಲ್ಲಿಯೆ ಬಾಹಮನಿ ರಾಜವಂಶವನ್ನು ಪದಚ್ಯುತಗೊಳಿಸಿ ಬಿಜಾಪುರದ ಪ್ರಥಮ ಸ್ವತಂತ್ರ ಸಾರ್ವಭೌಮನಾದ—ಪ್ರಥಮ 'ಆದಿಲ್' ಶಾಹ"

೧೪೭೦ರಲ್ಲಿ ಸುಲ್ತಾನನು ರಾಜಹಮಂದ್ರಿ ಮತ್ತು ಕೊಂಡಾವಿಡ್‌ಗಳನ್ನು ಒರಿಸಾದ ರಾಜನಿಂದ ಕಿತ್ತುಕೊಂಡ ಎಂದು ಬರ್ಹಾನಿ ಮಾಸಿರ್ ಹೇಳುತ್ತದೆ. ಗುಡ್ಡದ ಸಾಲಿನಲ್ಲಿ ಸುಂದರವಾಗಿ ನಿಂತಿರುವ ಗಿರಿದುರ್ಗವಾಗಿದ್ದ ಕೊಂಡಪಲ್ಲೆಯಲ್ಲಿನ ಶಾಸನವೊಂದು ಕಾಲವನ್ನು ೧೪೭೦ ಅಥವಾ ೧೪೭೧ ಎಂದು ಹೇಳುತ್ತದೆ; ನನ್ನ ಪ್ರತಿ ಪರಿಪೂರ್ಣವಾಗಿಲ್ಲ.

ಫಿರಿಸ್ತಾ ಹೀಗೆ ಹೇಳುತ್ತಾನೆ–

"೮೭೭ನೆಯ ವರ್ಷದಲ್ಲಿ (ಕ್ರಿ.ಶ. ೧೪೭೨-೭೩) ಬಿಜನಗರದ ರಾಜನ ಚಿತಾವಣೆಯಿಂದ ಬಳಗಾಂವ್‌ನ ಕೋಟೆಯ ರಾಯನಾದ ಪರ್ಕ್‌ನಾ, ಗೋವಾ ದ್ವೀಪವನ್ನು ತಿರುಗಿ ವಶಪಡಿಸಿಕೊಳ್ಳಲು ದಂಡೆತ್ತಿ ಹೊರಟ....ಈ ದಾಳಿಯ ಸುದ್ದಿ ತಿಳಿಯುತ್ತಲೆ ಮುಹಮ್ಮದ ಶಾ ತನ್ನ ಸೈನ್ಯಗಳನ್ನು ಜಮಾಯಿಸಿ ಬಳಗಾಂವ್‌ನ ವಿರುದ್ಧ ನಡೆದ. ಅದು ಬಹಳ ಬಲವಾದ ಕೋಟೆ. ಅದರ ಸುತ್ತಲೂ ಆಳವಾದ,

ನೀರುಳ್ಳ ಕಂದಕ ಉಂಟು, ಮತ್ತು ಅದರ ಹತ್ತಿರವಿರುವ ಕೋಟೆ ಕೊತ್ತಲಗಳಿಂದ ಸಂರಕ್ಷಿತವಾದ ಕಣಿವೆಮಾರ್ಗ ಅದಕ್ಕಿರುವ ಒಂದೇ ಪ್ರವೇಶ ಮಾರ್ಗ.”

ಆ ಊರನ್ನು ಅಂಕೆಯಲ್ಲಿರಿಸಿಕೊಳ್ಳುವುದರೊಂದಿಗೆ ಆಕ್ರಮಣ ಕೊನೆಗೊಂಡಾಗ ಸುಲ್ತಾನ ಕಲಬರ್ಗಾಕ್ಕೆ ಮರಳಿದ.

ಬರಹಾನ್-ಇ-ಮಾಸಿರ್ ಬೆಳಗಾಂವಿಯ ದೊರೆಯನ್ನು “ಪರ್ಕತಪಾಹ್” ಎಂದು ಕರೆಯುತ್ತದೆ. ಆ ಕೃತಿಯ ಅನುವಾದಕ, ಮೇಜರ್ ಕಿಂಗ್, ಆ ಹೆಸರಿನ ಅಕ್ಷರ ಜೋಡಣೆಯ ವಿಪುಲ ವೈವಿಧ್ಯವನ್ನು ಕೊಟ್ಟಿದ್ದಾನೆ, ಅವು ಯಾವುವೆಂದರೆ, “ಬರ್ಕ್‌ನಾಹ್” “ಪರ್ಕತಪಾಹ್” “ಪರ್ಕತಿಯಾ”“ಪರ್ಕಿತಾಹ್” “ಬರ್ಕಾಬ್ತಾಹ್”[9] ಬ್ರಿಗ್ಸ್ ಅದನ್ನು “ಬರ್ಕನಾ” ಎಂದು ಹೇಳುತ್ತಾನೆ. ನಿಜವಾದ ಹೆಸರು ವಿಕ್ರಮ ಎಂದು ತಿಳಿಯಲಾಗಿದೆ.

೧೪೭೫ರ ಸುಮಾರಿಗೆ ದಖ್ಖನ್‌ದಲ್ಲಿ ಹಾಗೂ ತೆಲುಗುನಾಡಿನಲ್ಲಿ ಎರಡು ವರ್ಷ ದೀರ್ಘ ಕಾಲದ ಭೀಕರ ಬರ ಬಿತ್ತು. ಅದರ ಕೊನೆಗೆ ಕೊಂಡಪಲ್ಲಿಯ ಹಿಂದೂ ಜನಸಂಖ್ಯೆ ಬಂಡೆದ್ದು ಮಹಮ್ಮದೀಯ ಮಂಡಲಾಧಿಪತಿಯನ್ನು ಕೊಲೆಗೈದು ಒರಿಸಾದ ರಾಜನ ನೆರವನ್ನು ಆಹ್ವಾನಿಸಿದರು. ಅಂತೆಯೆ ಈ ರಾಜ ಮುನ್ನಡೆದು ಆಗ ನೈಜಾಮ್-ಉಲ್-ಮುಲ್ಕ್‌ನ ಮಂಡಲಾಧಿಪತ್ಯದಲ್ಲಿದ್ದ ರಾಜಹಮಂದ್ರಿಗೆ ಮುತ್ತಿಗೆ ಹಾಕಿದ. ಆದರೆ, ಆ ಊರಿನ ಬಿಡುಗಡೆಗೆ ಸ್ವತಃ ಸುಲ್ತಾನ ದಂಡೆತ್ತಿ ಬಂದಾಗ ಒರಿಸಾದ ಸೈನ್ಯ ಹಿಂತಿರುಗಿತು. ಮಾರ್ಚ್ ೧೪೭೮ ಕ್ರಿ.ಶ.ಕ್ಕೆ ಸರಿ ಹೊಂದುವ ೮೮೨ನೆಯ ವರ್ಷದ ಉತ್ತರಾರ್ಧದಲ್ಲಿ ಮುಹಮ್ಮದ್ ಒರಿಸಾದ ರಾಜಧಾನಿಯೊಳಕ್ಕೆ ನುಗ್ಗಿದ, “ಮತ್ತು ನಿವಾಸಿಗಳನ್ನು ಹತ್ಯೆಗೈಯುವಲ್ಲಿ ಮತ್ತು ವೈರಿಯ ನಾಡನ್ನು ನಾಶಪಡಿಸುವಲ್ಲಿ ಎಳ್ಳಷ್ಟೂ ದಯೆ ತೋರಲಿಲ್ಲ.” ರಾಜ ಶರಣಾಗತನಾದ ಮತ್ತು ಸುಲ್ತಾನನಿಂದ ಇನ್ನೂ ಹೆಚ್ಚಿನ ಹಸ್ತಕ್ಷೇಪದಿಂದ ಮುಕ್ತನಾಗಲು ಕೆಲವು ಬೆಲೆಯುಳ್ಳ ಆನೆಗಳನ್ನು ಕಾಣಿಕೆ ನೀಡಿದ.

ನಂತರ ಏನಾಯಿತೆಂಬುದರ ಬಗೆಗೆ ಫಿರಿಸ್ತಾ ಮತ್ತು ಬರಹಾನ್-ಇ-ಮಾಸಿರ್ ಬಹಳಷ್ಟು ಭಿನ್ನಾಭಿಪ್ರಾಯಪಡುತ್ತಾರೆ. ಫಿರಿಸ್ತಾ ಹೇಳುವುದೇನೆಂದರೆ ಒರಿಸಾದೊಳಗಿನ ದಾಳಿಯನಂತರ ಮುಹಮ್ಮದ ಶಾ ಕೊಂಡಪಲ್ಲಿಯನ್ನು ಅಂಕೆಯಲ್ಲಿಟ್ಟುಕೊಂಡು ಅಲ್ಲಿ ದೇವಾಲಯವೊಂದನ್ನು ನಾಶಪಡಿಸಿ ಅದಕ್ಕೆ ಸೇರಿದ ಬ್ರಾಹ್ಮಣ ಅರ್ಚಕರನ್ನು ಕೊಂದು ಆ ಜಾಗದ ಮೇಲೆ ಮಸೀದೆ ಕಟ್ಟಲು ಆಜ್ಞಾಪಿಸಿದ. ಅವನು ಹೆಚ್ಚೂಕಡಿಮೆ ಮೂರು ವರ್ಷ ರಾಜಹಮಂದ್ರಿಯಲ್ಲಿ ಉಳಿದ, ತೆಲಂಗಾಣ ನಾಡನ್ನು ಭದ್ರಪಡಿಸಿದ, ಕೆಲವು ಅಂಕೆ ಮೀರಿದ ಜಮೀನದಾರರನ್ನು ಹೊರದಬ್ಬಿದ, ಮತ್ತು “ನರಸಿಂಗರಾಯನನ್ನು ಗೆಲ್ಲಲು ನಿರ್ಧರಿಸಿದ”.

ಫಿರಿಸ್ತಾ ಹೀಗೆನ್ನುತ್ತಾನೆ :

"ನನಸಿಂಗ ಕಾರ್ನಾಟಕ್[10] ಮತ್ತು ತೆಲಂಗಾಣಗಳ ಮಧ್ಯೆ ಸಮುದ್ರ ಕರಾವಳಿಗುಂಟ ಮಚಲಿಪಟ್ಟಮ್[11]ವರೆಗೆ ಹಬ್ಬಿರುವ ನಾಡಿನ ಸ್ವಾಧೀನ ಪಡೆದ ಬಲಶಾಲಿ ರಾಜನಾಗಿದ್ದ, ಮತ್ತು ಬೀಜನಗರ ಪ್ರದೇಶದ ಹಲವಾರು ಭದ್ರಕೋಟೆಗಳುಳ್ಳ ಬಹುಭಾಗವನ್ನು ಗೆದ್ದುಕೊಂಡು ತನ್ನ ರಾಜ್ಯಕ್ಕೆ ಸೇರಿಸಿಕೊಂಡ."

ಇವನು ಬಹುಶಃ ವಿಜಯನಗರದ ರಾಜನ ಸಂಬಂಧಿಯಾಗಿದ್ದ ಬಲಶಾಲಿ ಮುಖ್ಯಸ್ಥ ನರಸಿಂಹರಾಯ. ವಿಶಾಲ ಪ್ರದೇಶಗಳ ಆಡಳಿತವನ್ನು ವಹಿಸಿಕೊಡಲಾಗಿದ್ದ ಅವನು ಕೊನೆಗೆ ತಾನೇ ಕಿತ್ತೊಗೆದ ದುರ್ಬಲ ರಾಜನ ಅಡಿಯಲ್ಲಿ ಶೀಘ್ರವಾಗಿ ಸ್ವಾತಂತ್ರ್ಯದೆಡೆ ಏರುತ್ತಿದ್ದ. ಸುಲ್ತಾನ ಕೊಂಡಪಲ್ಲೆಗೆ[12] ನಡೆದ. ಅಲ್ಲಿ ಅವನಿಗೆ ಹೇಳಲಾದುದೇನೆಂದರೆ ಅಲ್ಲಿಂದ ಹತ್ತು ದಿನಗಳ ಪ್ರಯಾಣದ ಅಂತರದಲ್ಲಿ "ಬೆಲೆಯುಳ್ಳ ಹರಳುಗಳಿಂದ ಅಲಂಕೃತವಾದ ಬಂಗಾರದ ತಗಡುಗಳಿಂದ ಆಚ್ಛಾದಿತವಾದ ಗೋಡೆಗಳು ಮತ್ತು ಚಾವಣಿಯುಳ್ಳ ಕಂಚಿಯ[13] ದೇವಾಲಯವಿದೆ ;" ಈ ಸುದ್ದಿ ತಿಳಿದು ಸುಲ್ತಾನನು ೬೦೦೦ ಅಶ್ವಯೋಧರನ್ನು ಮಾತ್ರ ತನ್ನೊಂದಿಗೆ ತೆಗೆದುಕೊಂಡು ಅಲ್ಲಿಗೆ ಕಷ್ಟದ ಪ್ರಯಾಣ ಬೆಳೆಸಿದನೆಂದು ಮತ್ತು ಆ ಸ್ಥಳವನ್ನು ಧ್ವಂಸಮಾಡಿದನೆಂದು ಹೇಳಲಾಗಿದೆ.

ಮುಹಮ್ಮದ ಶಾಹನ ಈ ಕಾಲದ ಕಾರ್ಯಾಚರಣೆಗಳ ಬಗೆಗೆ ಬರಹಾನ್-ಇ-ಮಾಸಿರ್ ನೀಡುವ ವೃತ್ತಾಂತವೇನೆಂದರೆ ಅವನು ರಾಜಹಮಂದ್ರಿಗೆ ಹೋದಾಗ ಅಲ್ಲಿ ನರಸಿಂಹರಾಯ "೭೦೦,೦೦೦ ನತದೃಷ್ಟ ಕಾಲಾಳುಗಳು ಮತ್ತು ಲೋಹ ಪರ್ವತದಂತಿದ್ದ ೫೦೦ ಆನೆಗಳೊಂದಿಗೆ" ಇದ್ದುದನ್ನು ಕಂಡ. ಎಲ್ಲ ವೈಭವ ಮತ್ತು ಬಲವಿದ್ದರೂ ಸಹ ನರಸಿಂಹರಾಯ ಇಸ್ಲಾಮದ ಸೈನ್ಯ ಬರುತ್ತಿದ್ದಂತೆ ಹೇಡಿಯಂತೆ ಓಡಿದ. ಸುಲ್ತಾನನು ಆಗ ರಾಜಹಮಂದ್ರಿಯನ್ನು ಅಡಗಿಸಿದ. ಅದು ಫಿರಿಸ್ತಾ ಹೇಳುವಂತೆ ಮುಹಮ್ಮದೀಯರ ವಶದಲ್ಲಿರದೆ ಹಿಂದೂ ಸೈನ್ಯದ ಹಿಡಿತದಲ್ಲಿತ್ತು. ೧೪೮೦ರ[14] ನವಂಬರನಲ್ಲಿ (?) ಅವನು ರಾಜಹಮಂದ್ರಿಯಿಂದ ಕೊಂಡಾವಿಡ್‌ಗೆ ನಡೆದು "ವಿಜಯನಗರ ರಾಜ್ಯದತ್ತ ಸಾಗಿದನು" ಆ ಕೋಟೆಯನ್ನು ಅಂಕೆಯಲ್ಲಿರಿಸಿಕೊಂಡ ಸ್ವಲ್ಪ ಕಾಲದ ನಂತರ ಅವನು ನರಸಿಂಹನಿಗೆ ಸೇರಿದ ಮಾಲೂರಿಗೆ ನಡೆದ. "ಅವನು ತನ್ನ ಅಸಂಖ್ಯ ಸೈನ್ಯ ಹಾಗೂ ಪ್ರದೇಶಗಳ ವ್ಯಾಪ್ತಿಯಿಂದಾಗಿ ತೆಲಂಗಾಣಾ ಮತ್ತು ವಿಜಯನಗರದ ಎಲ್ಲ ರಾಜರುಗಳಲ್ಲಿ ಅತ್ಯಂತ ದೊಡ್ಡವನೂ ಬಲಶಾಲಿಯೂ ಆಗಿದ್ದನು. ಮತ್ತು "ಕನ್ನಡ ಮತ್ತು ತೆಲಂಗಾಣಾ ನಾಡುಗಳ ನಡುವೆ ನೆಲೆಗೊಂಡಿದ್ದ ಮತ್ತು ವಿಜಯನಗರದ ಕರಾವಳಿಯ ಬಹುತೇಕ ಜಿಲ್ಲೆಗಳು ಹಾಗೂ ಒಳನಾಡನ್ನು ಸ್ವಾಧೀನಪಡಿಸಿಕೊಂಡಿದ್ದ."

ಮಾಲೂರಿನಲ್ಲಿರುವಾಗ ಸುಲ್ತಾನನಿಗೆ ದೇವಾಲಯಗಳು ಇತ್ಯಾದಿಗಳುಳ್ಳ "ಗಾಂಜಿ ಎಂಬ ನಗರ ತನ್ನ ಬಿಡಾರದಿಂದ ಐವತ್ತು ಫರಸಖಾಗಳ ಅಂತರದಲ್ಲಿದೆ" ಎಂದು ತಿಳಿಸಲಾಗಿ ಅವನು ಕೂಡಲೆ ಅಲ್ಲಿಗೆ ತೆರಳಿ ೧೨ನೆಯ ಮಾರ್ಚ್, ಕ್ರಿ.ಶ.

೧೪೮೧ ರಂದು[15] ಆ ಸ್ಥಳದ ಮುಂದೆ ಬಂದು ನಿಂತನು. ಅವನು ನಗರವನ್ನು ಧ್ವಂಸಗೊಳಿಸಿ ಮರಳಿದನು.

ಇದಾದ ತರುವಾಯ ಸುಲ್ತಾನನು ಮಸೂಲಿಪಟಮ್‌ಗೆ ತೆರಳಿ ಅದನ್ನು ಅಡಗಿಸಿ ಅಲ್ಲಿಂದ ಕೊಂಡಪಲ್ಲಿಗೆ ನಡೆದನು. ಇದವನ ಕೊನೆಯ ಯಶಸ್ಸು.೧೪೮೧ರಲ್ಲಿ ಅವನು ಉದ್ದೇಶಪೂರ್ವಕವಾಗಿ ಮಾಡಿದ ಅವನ ವಿಶ್ವಾಸಿಕ ಮತ್ತು ವಿಧೇಯ ಸೇವಕ ಪ್ರಖ್ಯಾತ ಮಹಮ್ಮದ ಗವಾನನ ಕೊಲೆ ವರಿಷ್ಠರಲ್ಲಿ ಎಷ್ಟು ಅಸಹ್ಯ ಹುಟ್ಟಿಸಿತೆಂದರೆ ಸ್ವಲ್ಪ ಕಾಲದಲ್ಲಿಯೆ ರಾಜ್ಯ ಛಿನ್ನಭಿನ್ನವಾಯಿತು, ನಾಯಕರು ಬಂಡೆದ್ದರು, ರಾಜವಂಶವನ್ನು ಪದಚ್ಯುತಗೊಳಿಸಲಾಯಿತು, ಮತ್ತು ಅದರ ಅವಶೇಷಗಳ ಮೇಲೆ ಐದು ಸ್ವತಂತ್ರ ರಾಜ್ಯಗಳು ತಲೆಯೆತ್ತಿದವು.

ಮುಹಮ್ಮದ ಶಾಹ ೨೧ನೆಯ ಮಾರ್ಚ್, ಕ್ರಿ.ಶ. ೧೪೮೨ರಂದು ತೀರಿಕೊಂಡ. ಅವನ ಮರಣಕ್ಕಿಂತ ತುಸು ಮುಂಚೆ "ವಿಜಯನಗರದ ರಾಜ ಸೇವಾರಾಯ್" ಅಲ್ಲಿಗೆ ಕಳಿಸಿದ್ದ ವಿಜಯನಗರದ ಸೈನ್ಯದಿಂದ ಗೋವಾವನ್ನು ಬಿಡಿಸಿಕೊಳ್ಳಲೋಸುಗ ದಂಡಯಾತ್ರೆಯನ್ನು ಯೋಜಿಸಿದ್ದ (ಫಿರಿಸ್ತಾ) ; ಆದರೆ ಸುಲ್ತಾನ್ನನ ಮರಣ ಇದಕ್ಕೆ ತಡೆಯೊಡ್ಡಿತು (ಬರ-ಹಾನ್-ಇ-ಮಾಸಿರ್).

ರಷ್ಯನ್ ಪ್ರವಾಸಿ ಅಥನೇಶಿಯಸ್ ನಿಕಿಟಿನ್‌ನ ಬರಹಗಳಲ್ಲಿ ಮುಹಮ್ಮದ ಶಾಹನ ಆಳಿಕೆಯ ಕಾಲದಲ್ಲಿ ಕಲಬುರ್ಗಾದ ಆಗುಹೋಗುಗಳ ಬಗೆಗೆ ಇನ್ನೂ ಹೆಚ್ಚಿನ ಮಾಹಿತಿ ನಮಗೆ ದೊರಕುತ್ತದೆ, ಆದರೆ ಅವನ ವಾಸ್ತವ್ಯದ ಕಾಲವನ್ನು ಖಚಿತವಾಗಿ ನಿರ್ಣಯಿಸುವುದು ಕಠಿಣ. ನಿಕಿಟಿನ್ ಟ್ವರ್‌ದ ನಿವಾಸಿಯಾಗಿದ್ದ ಮತ್ತು ಗ್ರ್ಯಾಂಡ್ ಡ್ಯೂಕ್ ಮೈಕಲ್ ಬೋರಿಸೊವಿಚ್ ಮತ್ತು ತನ್ನ ಬಿಷಪ್ ಗೆನೆಡಿಯಸ್‌ರ ಅನುಮತಿಯಿಂದ ಪ್ರಯಾಣ ಹೊರಟ. ಇದು ಅವನ ಪಯಣದ ಆರಂಭಕಾಲವನ್ನು ಎಷ್ಟು ದೂರ ನಿರ್ಧರಿಸುತ್ತದೆಂದರೆ ಅದು ೧೪೬೨ರ ನಂತರ ಸಂಭವಿಸಿರಬೇಕು, ಮತ್ತು "ಬಾಂಬೆ ಗ್ಯಾಜೆಟಿಯರ್"ದ ಲೇಖಕ ರೆ. ಪೂನಾಹ್ ಭಾರತದಲ್ಲಿ ನಿಕಿಟಿನ್‌ನ ವಾಸ್ತವ್ಯಕ್ಕೆ ೧೪೬೮ರಿಂದ ೧೪೭೪ರ ಅವಧಿಯನ್ನು ಗೊತ್ತುಪಡಿಸುತ್ತಾನೆ.

ನಿಕಿಟಿನ್ ಮೊದಲು ಚೌಲ್‌ಗೆ ಹೋದ ಮತ್ತು ಅಲ್ಲಿಂದ ಭೂಮಾರ್ಗವಾಗಿ ಜುನೀರ್‌ಗೆ ಪಯಣಿಸಿದ.

"ಇಲ್ಲಿ ಮೆಲಿಕ್ಟುಚಾರ್‌ದ ಮಾಂಡಲಿಕನಾದ ಭಾರತೀಯ ಜ್ಯೂನೀರ್‌ದ ಖಾನ್, ಅಸತ್ ವಾಸಿಸುತ್ತಾನೆ....ಕೆಲವೊಮ್ಮೆ ಸೋಲುತ್ತ, ಹೆಚ್ಚಾಗಿ ಗೆಲ್ಲುತ್ತ ಅವನು ಕೊಫರರೊಂದಿಗೆ ಇಪ್ಪತ್ತು ವರ್ಷ ಕಾದುತ್ತಿರುವನು."

"ಮೇಲಿಕ್ಟುಚಾರ್" ಎಂದರೆ ಬಹುಶಃ ಕ್ರಿ.ಶ. ೧೪೫೭ರಲ್ಲಿ "ಮಾಲಿಕ್-ಅಲ್-ತಿಜಾರ್" ಎಂಬ ಬಿರುದನ್ನು ಪಡೆದ ಪ್ರಖ್ಯಾತ ಮಂತ್ರಿ ಮಹಮ್ಮದ ಗವಾನ್. ಈ ಬಿರುದನ್ನು ಬಾಹಮನಿ ದರಬಾರದ ವರಿಷ್ಠರಲ್ಲಿ ಮುಖ್ಯನು ಧರಿಸುತ್ತಿದ್ದ. ಅದರ ವಾಚ್ಯಾರ್ಥ "ವರ್ತಕರ ಮುಖ್ಯಸ್ಥ" ಎಂದು. "ಕೊಫರ್"ರೆಂದರೆ ಕಾಫಿರರು ಅಥವಾ ಹಿಂದೂಗಳು. ಜುನೀರ್‌ದ ಸ್ವೆಸ್ಸ ಮಾಲಿಕ್‌ನ ಅಧಿಪತ್ಯದಲ್ಲಿದ್ದಾಗ ೧೪೬೯ದಲ್ಲಿ

ಮಾಲಿಕ್-ಅಲ್-ತಿಜಾರ್ ಮತ್ತು "ಸೊಂಗೀರ್, ಖಾಲ್‌ನೆಹ್, ಮತ್ತು ಕೋಕಣ್‌ದ ಬಂಡುಕೋರರ" ಮಧ್ಯೆ ಯುದ್ಧ ಜರುಗಿತೆಂದು ಫಿರಿಸ್ತಾ ಹೇಳುತ್ತಾನೆ. ಯುದ್ಧ ಸಮಯದಲ್ಲಿ ಈಗಾಗಲೆ ಹೇಳಿದಂತೆ ಅವನು ಗೋವಾವನ್ನು ವಶಪಡಿಸಿಕೊಂಡ. ರಾಜಹಮಂದ್ರಿ, ವಿನುಕೊಂಡ ಮತ್ತು ಇತರ ಸ್ಥಳಗಳ ಹಿಂದೂಗಳ ವಿರುದ್ಧವೂ ದಂಡಯಾತ್ರೆಗಳು, ಮತ್ತು ಈಗಾಗಲೆ ವರ್ಣಿಸಿರುವಂತೆ ೧೪೭೨ರಲ್ಲಿ ಬೆಳಗಾಂವಿಯ ವಿರುದ್ಧ ಒಂದು, ನಡೆದವು. ಪೂರ್ವ ಕರಾವಳಿಯ ಬಲಶಾಲಿ ಹಿಂದೂ ರಾಜ ನರಸಿಂಹನ ವಿರುದ್ಧ ದೌಲತಾಬಾದ ಮತ್ತು ಜುನೀರ್‌ಗಳ ಸೈನ್ಯಗಳನ್ನು ಕಳಿಸಲಾಯಿತೆಂದು ಫಿರಿಸ್ತಾ ಹೇಳುತ್ತಾನೆ.[16] ಕಲಬರ್ಗಾ ಮತ್ತು ಅಲ್ಲಿ ತನ್ನ ಅನುಭವಗಳ ಬಗೆಗೆ ನಿಕಿಟಿನ್ ಹೀಗೆ ಬರೆಯುತ್ತಾನೆ :

"ಹಿಂದೂಗಳು ...ಎಲ್ಲ ಬತ್ತಲೆ ಹಾಗೂ ಬರಿಗಾಲಿನವರು. ಅವರು ಒಂದು ಕೈಯಲ್ಲಿ ಢಾಲು ಇನ್ನೊಂದರಲ್ಲಿ ಕತ್ತಿಯನ್ನು ಹಿಡಿದಿರುತ್ತಾರೆ. ಕೆಲವು ಸೇವಕರನ್ನು ನೇರವಾದ ಬಿಲ್ಲು ಬಾಣಗಳಿಂದ ಸಜ್ಜುಗೊಳಿಸಲಾಗಿರುತ್ತದೆ. ಆನೆಗಳನ್ನು ಯುದ್ಧಗಳಲ್ಲಿ ಬಹಳ ಬಳಸಲಾಗುತ್ತದೆ....ಆನೆಗಳ ಸೊಂಡಿಲುಗಳು ಮತ್ತು ಕೋರೆಗಳಿಗೆ ದೊಡ್ಡ ಕುಡಗೋಲುಗಳನ್ನು ಕಟ್ಟಲಾಗಿರುತ್ತದೆ, ಮತ್ತು ಅವುಗಳಿಗೆ ಉಕ್ಕಿನ ಅಲಂಕಾರಮಯ ತಗಡುಗಳನ್ನು ಹೊದಿಸಲಾಗಿರುತ್ತದೆ. ಅವುಗಳು ಒಂದು ದುರ್ಗವನ್ನು (ಅಂಬಾರಿ ?) ಹೊತ್ತೊಯ್ಯುತ್ತವೆ. ಮತ್ತು ಅದರಲ್ಲಿ ರಕ್ಷಾಕವಚ ಧರಿಸಿದ ಹನ್ನೆರಡು ಜನ ತುಬಾಕಿ ಮತ್ತು ಬಾಣಗಳೊಂದಿಗೆ ಕುಳಿತಿರುತ್ತಾರೆ.... ಭೂಮಿ ಬಲು ಜನನಿಬಿಡವಾಗಿದೆ : ಹಳ್ಳಿಯವರು ಕಷ್ಟದಲ್ಲಿರುವರಾದರೆ ವರಿಷ್ಠರು ಅತ್ಯಂತ ಶ್ರೀಮಂತರಾಗಿದ್ದು ಐಷಾರಾಮದಲ್ಲಿ ಸಂತೋಷಿಸುತ್ತಾರೆ. ಅವರನ್ನು ಅವರ ಬೆಳ್ಳಿಯ ಮಂಚಗಳ ಮೇಲೆ ಹೊತ್ತೊಯ್ಯುವ ರೂಢಿಯಿದೆ. ಮಂಚದ ಮುಂದೆ ಇಪ್ಪತ್ತರಷ್ಟು ಬಂಗಾರದ ಜೀನು ತೊಡಿಸಿದ ದಾಳಿಗುದುರೆಗಳು ಮತ್ತು ಹಿಂದೆ ಕುದುರೆಯ ಮೇಲೆ ಮುನ್ನೂರು ಮಂದಿ ಮತ್ತು ಕಾಲ್ನಡಿಗೆಯಲ್ಲಿ ಐದುನೂರು, ಕಹಳೆಯವರು, ಹತ್ತು ಪಂಜುಧಾರಕರು ಮತ್ತು ಹತ್ತು ಸಂಗೀತಗಾರರು ಇರುತ್ತಾರೆ.

"ಸುಲ್ತಾನನ ಪರಿವಾರದಲ್ಲಿ ಬಂಗಾರದ ಸಜ್ಜು ಹೊದಿಸಿದ ಸುಮಾರು ಸಾವಿರ ಸಾಧಾರಣ ಕುದುರೆಗಳು, ಪಂಜುಧಾರಕರೊಂದಿಗೆ ನೂರು ಒಂಟೆಗಳು, ಮುನ್ನೂರು ಕಹಳೆಯವರು, ಮುನ್ನೂರು ನೃತ್ಯಗಾರರನ್ನು ಕಾಣಬಹುದು.... ಬಂಗಾರದ ಜೀನಿನ ಮೇಲೆ ಕುಳಿತ ಸುಲ್ತಾನನು ನೀಲಮಣಿಗಳಿಂದ ಕಸೂತಿ ಹಾಕಿದ ಉಡುಪನ್ನು ಧರಿಸುತ್ತಾನೆ ಮತ್ತು ಅವನ ಚೂಪಾದ ತಲೆಯುಡಿಗೆಯ ಮೇಲೆ ಒಂದು ದೊಡ್ಡ ವಜ್ರವಿರುತ್ತದೆ ; ಅವನು ನೀಲಮಣಿಗಳನ್ನು ಜೋಡಿಸಲಾದ ಬಂಗಾರದ ಕವಚಗಳ ತಂಡವನ್ನು ಮತ್ತು ಮೂರು ಸುವರ್ಣಖಚಿತ ಖಡ್ಗಗಳನ್ನು ಸಹ ಜೊತೆಗೆ ಒಯ್ಯುತ್ತಾನೆ. ಸುಲ್ತಾನನ ಸಹೋದರ ಸುವರ್ಣ ಮಂಚದ ಮೇಲೆ

ಕುಳಿತಿರುತ್ತಾನೆ. ಮುಖಮಲ್ಲಿನಿಂದ ಆಚ್ಛಾದಿತವಾದ ಅದರ ಕೊಡೆ ಬೆಲೆಯುಳ್ಳ ಹರಳುಗಳೊಂದಿಗೆ ಅಲಂಕರಿಸಲ್ಪಟ್ಟಿರುತ್ತದೆ....ಮಹಮ್ಮದ ಸುವರ್ಣ ಮಂಚದ ಮೇಲೆ ಕುಳಿತುಕೊಳ್ಳುತ್ತಾನೆ. ಅದರ ರೇಷ್ಮೆ ಕೊಡೆಯು ಮೇಲ್ಭಾಗ ಬಂಗಾರದ್ದಿದ್ದು ಅದನ್ನು ಚಿನ್ನದ ಗಿಲೀಟು ಮಾಡಿದ ಸಜ್ಜು ಹಾಕಿದ ನಾಲ್ಕು ಕುದುರೆಗಳು ಎಳೆಯುತ್ತವೆ. ಅವನ ಸುತ್ತಲೂ ಜನರ ಸಮೂಹವಿರುತ್ತದೆ, ಮತ್ತು ಮುಂದೆ ಅನೇಕ ಗಾಯಕರು ಮತ್ತು ನೃತ್ಯಗಾರರು ಇರುತ್ತಾರೆ....

"ಮೆಲಿಖ್ ತುಚಾರ್ ಅವುಗಳ ಹಡಗುಗಳು ಭಾರತೀಯ (ಹಿಂದೂ ?) ಸಾಗರದಲ್ಲಿ ಕೊಳ್ಳೆ ಹೊಡೆಯುತ್ತಿದ್ದ ಎರಡು ಭಾರತೀಯ ನಗರಗಳನ್ನು ವಶಪಡಿಸಿ ಕೊಂಡ, ಏಳು ರಾಜರನ್ನು ಅವರ ಸಂಪತ್ತಿನೊಂದಿಗೆ ಸೆರೆಹಿಡಿದ.. ನಗರಕ್ಕೆ ಎರಡು ವರ್ಷಗಳ ವರೆಗೆ ಇನ್ನೂರು ಸಾವಿರ ಸೈನಿಕರು, ನೂರು ಆನೆಗಳು, ಮತ್ತು ಮುನ್ನೂರು ಒಂಟೆಗಳ ಸೈನ್ಯ ಮುತ್ತಿಗೆ ಹಾಕಿತ್ತು[17]....

"ಮಿರಖೂ ಮಿಲ್ಕ್, ಮೆಕ್-ಖಾನ್, ಮತ್ತು ಫರತ್‌ಖಾನ್ ಮೂರು ದೊಡ್ಡ ನಗರಗಳನ್ನು ಮತ್ತು ಬೆಲೆಯುಳ್ಳ ಹರಳುಗಳ ಅಪಾರ ಮೊತ್ತವನ್ನು ವಶಪಡಿಸಿಕೊಂಡರು. ಅದೆಲ್ಲವನ್ನೂ ಮೆಲಿಕ್ ತುಚಾರ್‌ನಲ್ಲಿಗೆ ತರಲಾಯಿತು.... ಅವರು ಆರೋಹಣದ ದಿನದಂದು ಬೀದರಕ್ಕೆ ಬಂದರು."

ಸುಲ್ತಾನನ ಸಹೋದರ ದಂಡಯಾತ್ರೆಯ ಮೇಲಿದ್ದಾಗ ಅವನ ಜೊತೆಗೆ ಅವನ ತಾಯಿ ಮತ್ತು ಸಹೋದರಿ, ಮತ್ತು ಕುದುರೆಯ ಮೇಲೆ ಇಲ್ಲವೆ ಸುವರ್ಣ ಮಂಚದ[18] ಮೇಲೆ ೨೦೦೦ ಸ್ತ್ರೀಯರು ಇರುತ್ತಾರೆ ; ಅವನ ಪರಿವಾರದ ಮುಂಭಾಗ ದಲ್ಲಿ ಬಂಗಾರದ ಸಜ್ಜು ಹೊದಿಸಲಾದ ಮುನ್ನೂರು ಸಾಮಾನ್ಯ ಕುದುರೆಗಳಿರುತ್ತವೆ.

"ಮೆಲಿಕ್ ತುಚಾರ್ ಬೀದರ್‌ನಿಂದ ತನ್ನ ೫೦,೦೦೦ ಸೈನ್ಯ ಬಲದೊಂದಿಗೆ ಭಾರತೀಯರ ವಿರುದ್ಧ ನಡೆದನು....ಸುಲ್ತಾನನು ತನ್ನದೂ ೫೦,೦೦೦ ಸೈನ್ಯಬಲ ಕಳಿಸಿಕೊಟ್ಟ ಈ ಬಲದೊಂದಿಗೆ ಮೆಲಿಕ್ ತುಚಾರ್ ದೊಡ್ಡ ಭಾರತೀಯ ರಾಜ್ಯವಾಗಿದ್ದ ಚಿನುದಾರದೊಂದಿಗೆ ಯುದ್ಧ ಮಾಡಲು ತೆರಳಿದ. ಆದರೆ, ಬಿನೇದಾರ್[19]ದ ರಾಜನಲ್ಲಿ ೩೦೦ ಆನೆಗಳು, ತನ್ನದೇ ಸೈನ್ಯದ ೧೦೦,೦೦೦ ಯೋಧರು ಮತ್ತು ೫೦,೦೦೦ ಕುದುರೆಗಳಿದ್ದವು."

ಲೇಖಕ ನಂತರ ಸುಲ್ತಾನನ ಸೈನ್ಯದ ಮಿಕ್ಕ ವಿವರಗಳನ್ನು ನೀಡುತ್ತಾನೆ ಮತ್ತು ಅದೆಲ್ಲ ಸೇರಿ ಬೇರಿಜು ೯೦೦,೦೦೦ ಕಾಲಾಳುಗಳು, ೧೯೦,೦೦೦ ಕುದುರೆ ಗಳು, ಮತ್ತು ೫೭೫ ಆನೆಗಳು ಆಗುತ್ತವೆ.

"ಸುಲ್ತಾನನು ತನ್ನ ಸೈನ್ಯದೊಂದಿಗೆ....ಕಲಬರ್ಗಾದಲ್ಲಿ ಮೆಲಿಕ್ ತುಚಾರ್ ನನ್ನು ಕೂಡಿಕೊಳ್ಳಲು ನಡೆದನು. ಆದರೆ ಅವರ ದಂಡಯಾತ್ರೆ ಯಶಸ್ವಿಯಾಗಲಿಲ್ಲ,

ಏಕೆಂದರೆ ಒಂದೇ ಒಂದು ಭಾರತೀಯ ಪಟ್ಟಣವನ್ನು ವಶಪಡಿಸಿಕೊಂಡರಾದರೂ ಬಹಳ ಜನರನ್ನು ಮತ್ತು ಸಂಪತ್ತನ್ನು ಕಳೆದುಕೊಳ್ಳಬೇಕಾಯಿತು.[20]

ಹಿಂದೂ ಸುಲ್ತಾನ ಕದಮ್ ಬಹಳ ಬಲಶಾಲಿ ರಾಜ. ಅವನು ಅಪಾರ ಸೈನ್ಯ ಹೊಂದಿದ್ದು ಬಿಜೆನೆಘರದಲ್ಲಿ ಗುಡ್ಡದ ಮೇಲೆ ವಾಸಿಸುತ್ತಾನೆ. ಈ ವಿಶಾಲ ನಗರ ಮೂರು ಕೋಟೆಗಳಿಂದ ಸುತ್ತುವರಿಯಲ್ಪಟ್ಟಿದೆ ಮತ್ತು ನದಿಯಿಂದ ಛೇದಿತ ವಾಗಿದೆ. ಅದರ ಒಂದು ಗಡಿಯಲ್ಲಿ ಭಯಂಕರ ಅರಣ್ಯವಿದೆ, ಇನ್ನೊಂದರಲ್ಲಿ ಕಣಿವೆಯಿದೆ; ಅದ್ಭುತ ಸ್ಥಳ ಮತ್ತು ಯಾವ ಉದ್ದೇಶಕ್ಕೂ ಅನುಕೂಲವಾದುದು. ಒಂದು ರಸ್ತೆ ನಗರದ ಮೂಲಕವೆ ಹಾಯುತ್ತದೆ, ಮತ್ತು ಕೆಳಗೆ ದರಿಯುಳ್ಳ ಗುಡ್ಡ ಎತ್ತರವಾಗಿ ಏರುವುದರಿಂದ ನಗರ ಅಭೇದ್ಯವಾಗಿದೆ.

"ವೈರಿಗಳು ಅದಕ್ಕೆ ಒಂದು ತಿಂಗಳು ಮುತ್ತಿಗೆ ಹಾಕಿದರು ಮತ್ತು ನೀರು ಮತ್ತು ಅನ್ನದ ಕೊರತೆಯಿಂದಾಗಿ ಅನೇಕ ಜನರನ್ನು ಕಳೆದುಕೊಂಡರು. ಬೇಕಾದಷ್ಟು ನೀರು ಕಾಣಿಸುತ್ತಿತ್ತು, ಆದರೆ ತಲುಪಲಾಗಲಿಲ್ಲ.

"ಈ ಭಾರತೀಯ ಭದ್ರಕೋಟೆಯನ್ನು ಕೊನೆಗೆ ಮೆಲಿಕ್ ಖಾನ್ ಖೋದಾ ವಶಪಡಿಸಿಕೊಂಡ. ಅವನು ಅದಕ್ಕೆ ಲಗ್ಗೆ ಹಾಕಿ ಅದನ್ನು ಅಡಗಿಸಲು ಹಗಲು-ರಾತ್ರಿ ಕಾದಿದ. ಭಾರಿ ತೋಪುಗಳಿಂದ ದಾಳಿಯಿಟ್ಟ ಸೈನ್ಯ ಇಪ್ಪತ್ತು ದಿನ ಉಣಲಿಲ್ಲ, ಕುಡಿಯಲಿಲ್ಲ. ನಗರವನ್ನು ವಶಪಡಿಸಿಕೊಂಡಾದ ಮೇಲೆ ೨೦,೦೦೦ ಪುರುಷ ಮತ್ತು ಸ್ತ್ರೀ ನಿವಾಸಿಗಳ ತಲೆ ಕತ್ತರಿಸಲಾಯಿತು. ೭೦,೦೦೦ ಮುದುಕರು ಮತ್ತು ತರುಣರನ್ನು ಸೆರೆಹಿಡಿದು ಮಾರಲಾಯಿತು.....ಆದರೆ, ಭಂಡಾರ ಬರಿದಾದುದನ್ನು ಕಂಡು ನಗರವನ್ನು ತ್ಯಜಿಸಲಾಯಿತು."

ಈ ಕಾಲದಲ್ಲಿ ಸುಲ್ತಾನನ ಸೈನ್ಯಗಳಿಂದ ವಿಜಯನಗರದ ಸ್ವಾಧೀನದ ಬಗೆಗೆ ಇನ್ನಾವ ಮಾಹಿತಿಯೂ ನಮಗೆ ಲಭ್ಯವಿರದ್ದರಿಂದ ಇದು ಯಾವುದಕ್ಕೆ ಸಂಬಂಧಿಸಿ ದೆಂದು ನಿರ್ಣಯಿಸುವುದು ಅಸಾಧ್ಯ. ಆದರೆ ಪ್ರವಾಸಿ ಆ ಸ್ಥಳವನ್ನು ರಾಜಮಹೇಂದ್ರಿ ಅಥವಾ ತೆಲಂಗಾಣದ ಪೂರ್ವ ನಗರಗಳಲ್ಲೊಂದರ ಜೊತೆಗೆ ಗೋಜಲು ಮಾಡಿ ಕೊಂಡಿರಬಹುದು.

ಈ ಮೊದಲು ಹೇಳಿರುವಂತೆ ಕ್ರಿ.ಶ.೧೪೮೭ರಲ್ಲಿ ಆಗಿನ್ನೂ ಹನ್ನೆರಡು ವರ್ಷ ದವನಿದ್ದ ಎರಡನೆಯ ಮಹಮ್ಮದ ಶಾಹ್ ಪಟ್ಟಕ್ಕೆ ಬಂದ, ಆದರೆ ಅವನ ಪ್ರಭುತ್ವ ಹೆಸರಿಗೆ ಮಾತ್ರವಾಗಿತ್ತು. ಸಂತತ ಗಲಭೆಗಳು ಜರುಗಿದವು; ಅನೇಕ ಪ್ರದೇಶಗಳ ಸರದಾರರು ರಾಜನ ವಿರುದ್ಧ ಬಂಡೆದ್ದರು, ಮತ್ತು ಅದರಲ್ಲಿಯೂ ಗೋವಾದ ಮಂಡಲಾಧಿಪತಿ ಕರಾವಳಿಯ ಮೇಲಿನ ಅನೇಕ ಮಹತ್ವದ ಸ್ಥಳಗಳನ್ನು ವಶಪಡಿಸಿ ಕೊಂಡು ತನ್ನ ಸ್ವಾತಂತ್ರ್ಯವನ್ನು ಸಾಧಿಸಲೆಳ್ಸಿಸಿದ; ರಾಜಧಾನಿಯಲ್ಲಿ ಆಂತರಿಕ

ಯುದ್ಧ ಭುಗಿಲೆದ್ದಿತು; ಸ್ವಲ್ಪ ಕಾಲದಲ್ಲಿಯೆ ದೊಡ್ಡ ಸರದಾರರು ಬಾಹಮನಿಯವರ ಅಧಿಪತ್ಯಕ್ಕೆ ವಿಧೇಯತೆಯ ಎಲ್ಲ ತೋರಿಕೆಯನ್ನೂ ಕಿತ್ತೆಸೆದರು, ಮತ್ತು ಕೊನೆಗೆ ರಾಜ್ಯವನ್ನು ತಮ್ಮಲ್ಲಿಯೆ ಹಂಚಿಕೊಂಡರು.

ವಿಜಯನಗರದಲ್ಲೂ ಅರಾಜಕತೆಯಿತ್ತೆಂದು ತೋರುತ್ತದೆ, ಮತ್ತು ದಖ್ಖನಿ ಸರದಾರರು ಅಂತಿಮವಾಗಿ ಬಂಡೆದ್ದ ಸುಮಾರಿಗೆ ನರಸಿಂಹರಾಯ ಸಿಂಹಾಸನಾರೂಢ ನಾಗಿದ್ದ ಮತ್ತು ಹೊಸ ಮತ್ತು ಬಲಶಾಲಿ ರಾಜವಂಶ ಸ್ಥಾಪಿಸಿದ.

ದಖ್ಖನದಲ್ಲಿ ತಲೆಯೆತ್ತಿದ ಐದು ಪ್ರತ್ಯೇಕ ರಾಜ್ಯಗಳಾವುವೆಂದರೆ ನಮಗೆ ಹೆಚ್ಚು ಸಂಬಂಧವಿರುವ ಬಿಜಾಪುರದ ಆದಿಲ್ ಶಾಹರು; ಬೀದರ ಅಥವಾ ಅಹಮದಬಾದಿನ ಬರೀದ್‌ಶಾಹರು; ಬೀರರ್‌ನ ಇಮಾದ್ ಶಾಹರು; ಅಹಮ್ಮದ ನಗರದ ನಿಜಾಮ ಶಾಹರು; ಮತ್ತು ಗೋಲ್ಕೊಂಡದ ಕುತುಬ್ ಶಾಹರು.

ಬಿಜಾಪುರದ ಆದಿಲ್ ಶಾಹ್ ತನ್ನ ವಂಶದ ಮೊದಲಿಗನಾಗಿದ್ದ, ಮತ್ತು ಕ್ರಿ.ಶ.೧೪೮೯ರಲ್ಲಿ ತನ್ನ ಸ್ವಾತಂತ್ರ್ಯ ಘೋಷಿಸಿದ. ದುಃಖಿರಾಜ ಎರಡನೆಯ ಮಹಮ್ಮದ್ ಡಿಸೆಂಬರ್ ೧೮,ಕ್ರಿ.ಶ.೧೫೧೮ರ ವರೆಗೆ ಅಪಮಾನಕರ ಏಕಾಂತದಲ್ಲಿ ಬಾಳಿದ' ಮತ್ತು ಅವನ ಹಿರಿಯ ಮಗ, ಅಹಮ್ಮದ, ಹೆಸರಿಗೆ ಮಾತ್ರ ಪಟ್ಟಕ್ಕೆ ಬಂದ, ಅಹಮ್ಮದನ ಎರಡು ವರ್ಷಗಳ ಆಳಿಕೆಯ ನಂತರ ಅವನ ಇಬ್ಬರು ಸಹೋದರರು, ಪದಚ್ಯುತಗೊಳಿಸಲಾದ ಅಲಾ-ಉದ್-ದಿನ್ ಮತ್ತು (ಕೊಲೆಗೀಡಾದ)ವಾಲಿ, ಶೀಘ್ರ ಅನುಕ್ರಮದಲ್ಲಿ ಪಟ್ಟಕ್ಕೆ ಬಂದರು. ಅಪರಾದ ಮೇಲೆ ಎರಡನೆಯ ಅಹಮ್ಮದನ ಮಗ ಕಲೀಮ್ ಉಲ್ಲಾಹ್‌ನನ್ನು ನಾಮಮಾತ್ರಕ್ಕೆ ಸಿಂಹಾಸನದ ಮೇಲೆ ಕೂರಿಸಲಾಯಿತು. ಆದರೆ ಅವನನ್ನು ಬಿಗಿ ಬಂಧನದಲ್ಲಿಡಲಾಗಿತ್ತು, ಮತ್ತು ಅವನ ಮರಣದೊಂದಿಗೆ ಬಾಹಮನಿ ರಾಜವಂಶ ಶಾಶ್ವತವಾಗಿ ಅವಸಾನ ಹೊಂದಿತು.

---

1 ಎಪಿಗ್ರಾಫಿಕಾ, ಇಂಡಿಕಾ **iii**, ೩೬ ರಲ್ಲಿನ ವಂಶಾವಳಿ ಕೋಷ್ಟಕ

2 ಡಾ. ಹುಲ್ಟ್ಜ್‌(ಎಪಿ.ಇಂ. **iii** ೩೬, ಮತ್ತು ಟಿಪ್ಪಣಿ,ಇಂಡಿಯನ್ ಆ್ಯಂಟಿಕ್ವಿಟಿಜ್ **xxi**, ೩೨೧)ಕೊನೆಯದು ಚಿಕ್ಕ ಕಾಂಜಿವರಂನಲ್ಲಿ ದೇವಾಲಯವೊಂದರ ಮೇಲಿದೆ ಮತ್ತು ಗತಿಸಿದ ೧೪೮೭ಶಕೆ, ಪಾರ್ಥಿವ ವರ್ಷ ಎಂದು ದಿನಾಂಕ ಹೊಂದಿದೆ.

3 ಗತಿಸಿದ ೧೪೯೨, ಶಕೆ, ವಿಕೃತಿ ವರ್ಷ, ಅದೇ ದೇವಾಲಯದ ಮೇಲೆ (ಇಂಡಿಯನ್ ಆ್ಯಂಟಿಕ್ವಿಟಿಜ್, **xxi**, ೩೨೧-೩೨೨).

4 ಅವನು ಇಪ್ಪತ್ತೊಮ್ಮರು ವರ್ಷ ಒಂಬತ್ತು ತಿಂಗಳು ಇಪ್ಪತ್ತು ದಿನ ಆಳಿದನೆಂದು ಫಿರಿಸ್ತಾ ಹೇಳುತ್ತಾನೆ. ಆದುದರಿಂದ ಈ ದಿನಾಂಕ. ಬರಹಾನ್-ಇ-ಮಾಸಿರ್ ಅವನ ಮರಣವನ್ನು ಜಮಾದಲ್ ಅವ್ವಲ್ ಹಿ.ಶ.೮೬೨ರ ಕೊನೆಗೆ ನಿಶ್ಚಿತಗೊಳಿಸುತ್ತದೆ. ಅದು ಕ್ರಿ.ಶ.೧೪೫೮ಕ್ಕೆ ಸರಿಹೊಂದುತ್ತದೆ. ಇನ್ನೊಬ್ಬ ಪರಿಣತ ನಾಲ್ಕು ವರ್ಷಗಳ

ನಂತರ ಎಂದು ದಿನಾಂಕ ಕೊಡುತ್ತಾನೆಂದು ಮೇಜರ್ ಕಿಂಗ್ ಹೇಳುತ್ತಾನೆ(ಇಂಡಿ, ಆ್ಯಂಟಿ, ಸಪ್ಟಂ, ೧೮೯೯ ಪು.೨೪೨. ಟಿಪ್ಪಣಿ)

5 ಎರಡನೆಯ ಝಿಲ್‌ಕಾದಾ, ಹಿ.ಶ.೮೬೫

6 ೧೩ನೆಯ ಝಿಲುಕಾದಾ, ಹಿ.ಶ. ೮೬೭

7 ಡಿಸೆಂಬರ, **I, viii.c** ೧೦

8 ಮುಂದೆ, ಪು.೭೦೫

9 ಇಂಡಿಯನ್ ಆ್ಯಂಟಿಕ್ವಿಟೀಸ್, ನವಂಬರ ೧೮೯೯, ಪು. ೨೮೬, ಟಿಪ್ಪಣಿ

10 ವಿಜಯನಗರ

11 ಮಾಸುಲಿಪಟಮ್

12 ಸ್ಕಾಟ್‌ನ ಅನುವಾದದಲ್ಲಿ "ಫೊಂಡ ಪೋರಗ್"ಎಂದಿದೆ (**i**, ೧೬೬); ಬ್ರಿಗ್ಸ್ (**ii**,೫೦೦) "ಕೊಂಡಪಿಲ್ಲಿ" ಎನ್ನುತ್ತಾನೆ.

13 ಇದು ಸ್ಪಷ್ಟವಾಗಿಯೆ ಕಾಂಜಿ ಅಥವಾ ಕಾಂಜೀವರಂ; ಆದರೆ, ಕತೆ ಅತ್ಯಂತ ಅಸಂಭವನೀಯವಾಗಿದೆ, ಅಂತರ ೨೫೦ ಮೈಲುಗಳಾಗಿತ್ತು, ಮತ್ತು ದಾರಿ ವೈರಿ ನಾಡಿನ ಹೃದ್ಭೂಮಿಯಲ್ಲಿ ಹಾಯುತ್ತಿತ್ತು.

14 ರಮಜಾನ, ಹಿ.ಶ.೮೮೫

15 ೧೧ನೆಯ ಮುಹರಮ್, ಹಿ.ಶ.೮೮೬.

16 ಸ್ಕಾಟ್‌ನ ಅನುವಾದ **i**, ೧೬೭

17 ಈ ನಗರಗಳಲ್ಲೊಂದು ೧೫೬೯ರಲ್ಲಿ ವಶಪಡಿಸಿಕೊಂಡ ಗೋವಾ ಆಗಿರುವ ಸಾಧ್ಯತೆಯುಂಟು

18 ಸ್ಪಷ್ಟವಾಗಿಯೆ ಮೇಣೆ ಎಂಬರ್ಥದಲ್ಲಿ

19 "ಚೆಸುವಾರ್" ಮತ್ತು "ಬಿಸೆದಾರ್" ಮುಂದೆ "ಬಿಜೆನೆಘರ್" ಎಂದು ಕರೆಯಲಾಗಿರುವ ವಿಜಯನಗರದ ಭಿನ್ನ ರೂಪಗಳು.

20 ಇದು ಬಹುಶಃ ಬೆಳಗಾಂವಿಯನ್ನು ಉಲ್ಲೇಖಿಸುತ್ತಿರಬೇಕು (ಕ್ರಿ.ಶ.೧೪೭೧).

ಅಧ್ಯಾಯ ೯

# ಎರಡನೆಯ ರಾಜವಂಶದ ಪ್ರಥಮ ರಾಜರು
## (ಕ್ರಿ.ಶ. ೧೪೯೦ ರಿಂದ ೧೫೦೯)

**ನರಸಿಂಹ ಸಿಂಹಾಸನವನ್ನು ದುರಾಕ್ರಮಿಸುತ್ತಾನೆ— ಕೊನೆಯ ರಾಜನ ಪಲಾಯನ—ಸಾಳುವ ತಿಮ್ಮ—ವೀರ ನರಸಿಂಹ—ಬಿಜಾಪುರ ಪುನಃ ವಿಜಯನಗರದ ಮೇಲೆ ದಾಳಿ ಮಾಡುತ್ತದೆ—ಭಾರತದಲ್ಲಿ ಪೋರ್ತುಗೀಜರು—ಅವರು ಗೋವಾ ವಶಪಡಿಸಿಕೊಳ್ಳುತ್ತಾರೆ—ವರ್ತಮಾನ ದಾಖಲೆಗಳು—ಅಲ್ಬುಕರ್ಕ್**

೧೮೮೩ ರಲ್ಲಿ ಪ್ರಕಟವಾದ ನನ್ನ "ದಕ್ಷಿಣ ಭಾರತದ ರಾಜವಂಶಗಳ ರೂಪ ರೇಷೆ"ಯಲ್ಲಿ (ಪು. ೧೦೬), ಈ ಕೆಳಗಿನ ಅವತರಣಿಕೆ ಇದೆ.

"ನಾವು ಈಗ ಎರಡನೆಯ ಅಥವಾ ನರಸಿಂಹ ರಾಜವಂಶಕ್ಕೆ ಬರುತ್ತೇವೆ. ಅದರ ವಂಶಜರು ದಕ್ಷಿಣ ಭಾರತದ ಮೇಲೆ ಆಳಿಕೆ ನಡೆಸಿದ ಯಾವುದೆ ರಾಜರಿಗಿಂತ ಬಲಶಾಲಿಗಳಾಗಿದ್ದರು. ನರಸಿಂಹನ ಆಳಿಕೆಯ ಆರಂಭದ ಕಾಲವನ್ನು ಡಾ. ಬರ್ನೆಲ್ ಕ್ರಿ.ಶ. ೧೪೯೦ ಎಂದು ನಿಶ್ಚಯಿಸುತ್ತಾನೆ, ಮತ್ತು ಈಗ ಸದ್ಯ ಆ ಹೇಳಿಕೆಯನ್ನು ಸುಳ್ಳಾಗಿಸುವ ಯಾವ ವಿಶ್ವಾಸಾರ್ಹ ಶಾಸನವೂ ಇದ್ದಂತಿಲ್ಲ. ಆದರೆ, ಬಿಶಪ್ ಕಾಲ್ಡ್‌ವೆಲ್ ತನ್ನ "ಹಿಸ್ಟರಿ ಆಫ್ ತಿನೆವೆಲ್"ನಲ್ಲಿ (ಪು. ೪೮) ನರಸಿಂಹನ ಆಳಿಕೆಯ ಆರಂಭ ಕಾಲವನ್ನು ಕ್ರಿ. ೧೪೮೭ ಎಂದು ನಿರ್ಣಯಿಸುತ್ತಾನೆ ಎಂಬುದನ್ನು ಗಮನಿಸಿದ್ದೇನೆ. ಅವನು ಹಳೆಯ ರಾಜವಂಶವನ್ನು ಹೊರದಬ್ಬಿ ವಿಜಯನಗರದ ಪ್ರಭುತ್ವ ಸಂಪಾದಿಸಿದ ಇತಿಹಾಸದ ಬಗೆಗೆ ನಾವು ಇನ್ನೂ ತಿಳಿಯಬೇಕಿದೆ."

ಆ ವಿಷಯದ ಮೇಲೆ ಬೆಳಕು ಬೀರುವಂತಹ ಯಾವುದೂ ಇದು ವರೆಗೆ ಸಂಭವಿಸಿಲ್ಲ, ಮತ್ತು ಇಡಿ ವಿಷಯ ಈತನಕ ಗಾಢ ಕತ್ತಲಲ್ಲೆ ಉಳಿದುಕೊಂಡಿದೆ; ಆದರೆ ಹೊಸದಾಗಿ ದೊರಕಿರುವ ನೂನಿಜ್‌ನ ದಿನಚರಿ ಇಡಿ ಕತೆಯನ್ನು ಅತ್ಯಂತ ಸ್ವಾರಸ್ಯಕರವಾದ ರೀತಿಯಲ್ಲಿ ನೀಡುತ್ತದೆ, ಆದರೆ ಅದರ ಖಚಿತತೆಯ ಬಗೆಗೆ ನಾನು ರುಜುವಾತು ಮಾಡಿಕೊಡಲಾರೆ. ಆದಾಗ್ಯೂ ಅದು ತಾನು ನಿರೂಪಿಸುತ್ತಿರುವ ಘಟನೆಗಳು ಜರುಗಿದ ಐವತ್ತು ಅಥವಾ ಅರವತ್ತು ವರ್ಷಗಳೊಳಗೆ ಬರೆದ ಆರಂಭಿಕ ಹದಿನಾರನೆಯ ಶತಮಾನದ ಸಾಂಪ್ರದಾಯಿಕ ಇತಿಹಾಸದ ಸಾರಾಂಶ. ವಿರುಪಾಕ್ಷ ರಾಯ 'ವೆರುಪಾಕ ರಾವ್' ದುರ್ಬಲ ಹಾಗೂ ಅಯೋಗ್ಯ ಅರಸನಾಗಿದ್ದ ಮತ್ತು

ಅವನ ಕಾಲದಲ್ಲಿ ಗೋವಾ, ಚೌಲ ಮತ್ತು ದಾಭೋಲ್ ಸೇರಿದಂತೆ ವಿಶಾಲ ಭೂ ಪ್ರದೇಶಗಳು ಮಹಮ್ಮದೀಯರ ಪಾಲಾದವೆಂದು ಅವನು ಹೇಳುತ್ತಾನೆ ; ಈ ಹೇಳಿಕೆ ಮಾತ್ರನಂತೂ ಐತಿಹಾಸಿಕವಾಗಿ ನಿಸ್ಸಂಶಯವಾಗಿಲ್ಲ, ವಿರುಪಾಕ್ಷ ನಿರಂಕುಶಾಧಿಕಾರಿ, ಕ್ರೂರಿ, ವಿಷಯಲೋಲುಪ 'ಸ್ತ್ರೀಯರು ಮತ್ತು ಮದಿರೋನ್ಮಾದಗಳಲ್ಲದೆ ಇನ್ನಾವುದಕ್ಕೂ ಲಕ್ಷ್ಯ ಕೊಡದವನು" ಆಗಿದ್ದುದರಿಂದ ಇಡಿ ನಾಡು ರೋಷ ಮತ್ತು ಬಂಡಾಯಗಳಿಗೆ ಉದ್ರಿಕ್ತವಾಯಿತು. ಕೊನೆಗೆ ಅವನನ್ನು. ಅವನ ಹಿರಿಯ ಮಗ ಕೊಲೆ ಮಾಡಿದ. ಅವನು ಸಹ ತನ್ನ ತಮ್ಮ 'ಪಾದೆಯ ರಾವ್'ನಿಂದ ಕೊಲೆಯಾದ. ಅವನಲ್ಲಾದರೊ ತನ್ನ ತಂದೆಯ ಅಪರಾಧಗಳು ಮತ್ತು ಹುಚ್ಚುತನಗಳು ಪುನರಾವೃತ್ತಗೊಂಡವು. ರಾಜರ ಈ ಪರಂಪರೆಯಿಂದ ಬೇಸತ್ತು ಮನ್ನೆಯರು ಬಂಡೆದ್ದು ತಮ್ಮ ರಾಜನನ್ನು ಪದಚ್ಯುತಗೊಳಿಸಿ ತಮ್ಮವನೇ ಒಬ್ಬನಾದ ನರಸಿಂಹ–"ಅವನಿಗೆ ಒಂದು ರೀತಿಯಲ್ಲಿ ಸಂಬಂಧಿತನಾಗಿದ್ದ ನರಸಿಂಗುಅ"—ನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದರು.

ಹೇಗೆ ನರಸಿಂಹನ ದಳವಾಯಿ ನಗರದ ದ್ವಾರಗಳನ್ನು ತಲುಪಿದಾಗ ಅದು ಅರಕ್ಷಿತವಾಗಿತ್ತು, ಹೇಗೆ ಅವನು ಅರಮನೆಯೊಳಗೆ ನುಗ್ಗಿದ ಮತ್ತು ಅವನನ್ನು ಪ್ರತಿರೋಧಿಸಲು ಯಾರೂ ಇರಲಿಲ್ಲ, ಹೇಗೆ ಅವನು ಅಂತಃಪುರದವರೆಗೂ ಹೋಗಿ "ಸ್ತ್ರೀಯರಲ್ಲಿ ಕೆಲವರನ್ನು ಕೊಂದ," ಮತ್ತು ಹೇಗೆ ಕೊನೆಗೆ ಹೇಡಿ ರಾಜ ಓಡಿದ ಮುಂತಾದ ಕೊನೆಯ ದೃಶ್ಯಗಳ ಮೂರ್ತಿವತ್ತಾದ ವೃತ್ತಾಂತವನ್ನು ನೂನಿಜ್ ನೀಡುತ್ತಾನೆ.

"ಅದಾದ ನಂತರ, ನರಸಿಂಗುಅನನ್ನು ರಾಜನ ಸ್ಥಾನಕ್ಕೆ ಏರಿಸಲಾಯಿತು ... ಮತ್ತು ಅವನು ಬಹಳ ಬಲಶಾಲಿಯಾದುದರಿಂದ ಮತ್ತು ಜನರ ಪ್ರೀತಿಗೆ ಪಾತ್ರನಾದುದರಿಂದ, ಅಂದಿನಿಂದ ಬಿಸನಗ ರಾಜ್ಯವನ್ನು ನರಸಿಂಗನ ರಾಜ್ಯವೆಂದು ಕರೆಯಲಾಯಿತು."

ಹಳೆಯ ರಾಜವಂಶದೊಂದಿಗೆ ನರಸಿಂಗನ ಸಂಬಂಧದ ಸಮಸ್ಯೆಯನ್ನು ಇದುವರೆಗೆ ಸಮಾಧಾನಕರವಾಗಿ ಬಿಡಿಸಲಾಗಿಲ್ಲ. ಸಾಳುವ ಎಂದು ಕರೆಯಲಾದ ಮನೆತನಕ್ಕೆ ಅವನು ಸೇರಿದ್ದ, ಮತ್ತು ಆ ಕಾಲದ ಶಾಸನಗಳು ಮತ್ತು ಸಾಹಿತ್ಯ ಕೃತಿಗಳಲ್ಲಿ ಅವನ ಸಂಬಂಧಿಕರು ಇಲ್ಲವೆ ವಂಶಜರಾದ ಬಲಶಾಲಿ ದೊರೆಗಳ ಬಗೆಗೆ ನಾವು ಸತತ ಕೇಳುತ್ತೇವೆ. ಹೀಗೆ, ರಾಜಾ ಕೃಷ್ಣದೇವರಾಯನ ಮಂತ್ರಿಯಾಗಿದ್ದ ಮತ್ತು ನೂನಿಜ್ 'ಸಾಲ್ವತಿನಿಯಾ' ಎಂದು ಕರೆಯುವ ಸಾಳುವ ತಿಮ್ಮನ ಬಗೆಗೆ ನಮ್ಮ ದಿನಚರಿ ಬಹಳ ಹೇಳುತ್ತದೆ. ಕ್ರಿ. ಶ. ೧೪೭೨-೭೩ರೊಂದಿಗೆ ತಾಳೆಹೊಂದುವ ೧೩೯೫ನೆಯ ಶಕ ವರ್ಷದ ಶಾಸನವೊಂದು ದೊಡ್ಡ ದೊರೆಯೆಂದು, ಆದರೆ ದೊಡ್ಡ ದೊರೆ ಮಾತ್ರವೆಂದು[1], ನರಸಿಂಹವನ್ನು ಕುರಿತು ಹೇಳುತ್ತದೆ.

ಕ್ರಿ.ಶ.೧೪೬೨-೬೩ರ[2] ಇನ್ನೊಂದು ಶಾಸನವೂ ಹಾಗೆಯೇ ಹೇಳುತ್ತದೆ. ಆದರೆ, ಕ್ರಿ.ಶ ೧೪೯೫-೯೬ರ[3] ಒಂದು ಶಾಸನದಲ್ಲಿ ಮಾತ್ರ ಅವನನ್ನು 'ಮಹಾರಾಯ' ಅಥವಾ 'ರಾಜ'ನೆಂದು ಕರೆಯಲಾಗಿದೆ. ಅವನ ದುರಾಕ್ರಮಣದ ನಿಕರವಾದ ದಿನಾಂಕ ಹಾಗೂ ಪದಚ್ಯುತ ರಾಜನೊಂದಿಗೆ ದುರಾಕ್ರಮಿಯ ನಿಜವಾದ ಸಂಬಂಧಗಳನ್ನು ಖಚಿತಪಡಿಸುವುದು ಕಠಿಣವಿರಬಹುದಾದರೂ ನರಸಿಂಹ ಈ ಸಮಯಕ್ಕೆ ವಾಸ್ತವವಾಗಿ ರಾಜನಾದುದು, ಅವನ ಶಕ್ತಿ ಮತ್ತು ಅವನ ಸೈನ್ಯ ಬಲದಿಂದ ಮಹಮ್ಮದೀಯ ಆಕ್ರಮಣಕ್ಕೆ ತಡೆಯೊಡ್ಡಿದುದು, ಮತ್ತು ಅವನ ಅಡಿಯಲ್ಲಿ ವಿಜಯನಗರದ ಸಾಮ್ರಾಜ್ಯ ಪುನಃ ಭದ್ರಪಟ್ಟುದು ನಿಜ ಸಂಗತಿಗಳು.

ಫಿರಿಸ್ತಾ ನೀಡಿದ ಈ ಕಾಲಾವಧಿಯ ವೃತ್ತಾಂತ ನೂನಿಜ್‌ನದಕ್ಕಿಂತ ಸಂಪೂರ್ಣ ಭಿನ್ನವಾಗಿದೆ, ಮತ್ತು ಬಹಳ ಗೋಜಲು ಮತ್ತು ಕಠಿಣತೆ ಉಂಟುಮಾಡುತ್ತದೆ. ನಂತರ ಪಟ್ಟಕ್ಕೆ ಬಂದ ಅರಸರಾದ ನರಸ, ವೀರ ನರಸಿಂಹ, ಕೃಷ್ಣದೇವರಾಯ, ಅಚ್ಯುತ, ಮತ್ತು ಸದಾಶಿವರ ಸಂಬಂಧದ ಬಗೆಗಂತೂ ಸ್ಥಳೀಯ ಶಾಸನಗಳೇ ಒಂದಕ್ಕೊಂದು ಸಂಪೂರ್ಣ ಭಿನ್ನವಾಗಿವೆ. ಆದರೂ ಸಹ ಎರಡನೆಯ ರಾಜವಂಶದ ಇತಿಹಾಸದ ಸಾಮಾನ್ಯ ಕ್ರಮದಲ್ಲಿನ ಕೆಲವು ಅಂಶಗಳು ಸಾಕಷ್ಟು ಖಚಿತವಾಗಿವೆ, ಮತ್ತು ಇವುಗಳನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಬಹುದು. ಮೊದಲ ರಾಜವಂಶದ ಕೊನೆಯ ರಾಜರನ್ನು ಕ್ರಿ. ಶ. ೧೪೯೦ರ ಸುಮಾರಿನ ವರೆಗೆ ಗುರುತಿಸಲಾಗಿತ್ತು. ೧೫೦೯ ರಲ್ಲಿ ಕೃಷ್ಣದೇವರಾಯನ ಆರೋಹಣದವರೆಗೆ ನರಸಿಂಹ ಮತ್ತು ವೀರ ನರಸಿಂಹ ಆಳಿದರು ; ೧೫೩೦ ರಲ್ಲಿ ಕೃಷ್ಣನ ನಂತರ ಅಚ್ಯುತ ಪಟ್ಟಕ್ಕೆ ಬಂದ, ಮತ್ತು ಅವನ ನಂತರ ಸದಾಶಿವ ೧೫೪೨ರಲ್ಲಿ ಬಂದ. ಕೊನೆಯವನಂತೂ ಮೊದಲು ಹೆಸರಿಗೆ ಮಾತ್ರ ಮಂತ್ರಿಯಾಗಿದ್ದ. ಆದರೆ ನಂತರ ಸ್ವತಂತ್ರನಾದ, ಮೂವರು ಸಹೋದರರಲ್ಲಿ ಎಲ್ಲಕ್ಕೂ ಹಿರಿಯವನಾದ ರಾಮರಾಯನ ಕೈಯಲ್ಲಿ ವಸ್ತುತಃ ಸೆರೆಯಾಳಾಗಿದ್ದ. ಉಳಿದ ಸಹೋದರರ ಹೆಸರು ತಿರುಮಲ ಮತ್ತು ವೆಂಕಟಾದ್ರಿ. ೧೫೬೫ರಲ್ಲಿ ಮೇಲೆ ಹೆಸರಿಸಲಾಗಿರುವ ದಖ್ಖನದ ಐದು ಮಹಮ್ಮದೀಯ ರಾಜರ ಒಕ್ಕೂಟ ತಾಳಿಕೋಟೆ ಯುದ್ಧದಲ್ಲಿ ಸಾಮ್ರಾಜ್ಯವನ್ನು ಸಂಪೂರ್ಣವಾಗಿ ಮುಗಚಿ ಹಾಕುವವರೆಗೆ ಮತ್ತು ಭವ್ಯ ರಾಜಧಾನಿಬಹುಮಟ್ಟಿಗೆ ಅಸ್ತಿತ್ವದಿಂದ ಅಳಿಸಲ್ಪಡು ವವರೆಗೆ ಈ ಮೂರು ವ್ಯಕ್ತಿಗಳು ರಾಜ್ಯದ ಆಡಳಿತವನ್ನು ತಮ್ಮ ಕೈಯಲ್ಲಿಟ್ಟು ಕೊಂಡಿದ್ದರು.

ನಮಗೆ ಮಾರ್ಗದರ್ಶನ ನೀಡುವ ಈ ಸಂಗತಿಗಳನ್ನಿಟ್ಟುಕೊಂಡು ಎರಡನೆಯ ರಾಜವಂಶದ ಹುಟ್ಟಿನ ಬಗೆಗೆ ಅವರಲ್ಲಿ ಸಮ್ಮತವಾಗಿರುವ ಕೆಲವು ಅಂಶಗಳನ್ನು— ವ್ಯತ್ಯಾಸಗಳನ್ನು ಸರಿಹೊಂದಿಸಿ ನಿಜವಾದ ಸತ್ಯಕ್ಕೆ ಬರಲು ಸಹಾಯಕವಾಗಿರುವ— ಪಡೆದುಕೊಳ್ಳುವ ವಿಫಲ ಯತ್ನ ಮಾಡುತ್ತ ನಾವು ನೂನಿಜ್ ಮತ್ತು ಫಿರಿಸ್ತಾರುಗಳ ದಿನಚರಿಗಳತ್ತ ತಿರುಗೋಣ. ನಾವು ಕೇವಲ ಸಂಭವನೀಯತೆಗಳಿಂದ ನಿರ್ಧರಿಸು

ವುದಾದರೆ ಇಬ್ಬರಲ್ಲಿ ನೂನಿಜ್ ನೀಡಿದ ಇತಿಹಾಸ ಹೆಚ್ಚು ನಿಕರವಾಗಿರಬಹುದೆಂದು ತೋರುತ್ತದೆ. ಅವನು ತನ್ನ ದಿನಚರಿಯನ್ನು ಅಚ್ಯುತನ ಆಳಿಕೆಯಲ್ಲಿ ಸುಮಾರು ೧೫೩೬ರಲ್ಲಿ ಬರೆದ; ಅವನು ಹಿಂದೂ ರಾಜಧಾನಿಯಲ್ಲಿಯೆ ವಾಸಿಸಿದ್ದ, ವಿವರಿಸ ಲಾಗಿರುವ ಘಟನೆಗಳು ಜರುಗಿದ ಅನತಿ ಕಾಲದಲ್ಲಿ ಅವನು ಹಿಂದೂ ಮೂಲಗಳಿಂದ ಮಾಹಿತಿ ಸಂಪಾದಿಸಿದ. ಕ್ರಿ. ಶ. ೧೬೦೭ರವರೆಗೆ ಬರೆಯದ ಫಿರಿಸ್ತಾ ಯಾವ ಅರ್ಥದಲ್ಲೂ ಸಮಕಾಲೀನ ದಾಖಲೆಗಾರನಾಗಿರಲಿಲ್ಲ ಮತ್ತು ಹಿಂದೂಗಳ ಮಧ್ಯೆ ವಾಸಿಸದೆ ಅಹಮದ ನಗರದ ನಿಜಾಮ ಶಾಹನ ಆಸ್ಥಾನದಲ್ಲಿದ್ದ. ಆದಾಗ್ಯೂ ನೂನಿಜ್ ವಿವರಿಸುವ ಆಳಿಕೆಗಳ ಅವಧಿಗಳು ನಿಸ್ಸಂದೇಹವಾಗಿಯೂ ವಿಶ್ವಾಸಾರ್ಹ ಮೂಲಗಳಿಂದ ನಾವು ಪಡೆದ ಕಾಲಗಳೊಂದಿಗೆ ತಾಳೆಹೊಂದುವುದಿಲ್ಲ.

ಹಳೆಯ ವಂಶಪರಂಪರೆಯ ಕೊನೆಯವನೂ ವಿರುಪಾಕ್ಷನ ಮಗನೂ ಆಗಿದ್ದ 'ಪಾದೆಯ ರಾವ್' ನರಸಿಂಹ ಸಿಂಹಾಸನವನ್ನು ವಶಪಡಿಸಿಕೊಂಡಾಗ ರಾಜಧಾನಿ ಯಿಂದ ಓಡಿದನೆಂದು, ಎರಡನೆಯವ ನಲ್ವತ್ತುನಾಲ್ಕು ವರ್ಷ ಆಳಿದನು ಮತ್ತು ಇಬ್ಬರು ಪುತ್ರರನ್ನು ಬಿಟ್ಟು ಸತ್ತನೆಂದು ನೂನಿಜ್ ಹೇಳುತ್ತಾನೆ. ಇವರಿಬ್ಬರೂ ಯುವಕರು ತೀರ ಚಿಕ್ಕವರಿದ್ದುದರಿಂದ ಸಾಯುವಾಗ ರಾಜನು ರಾಜ್ಯಭಾರವನ್ನು ತನ್ನ ಮಂತ್ರಿ ನರಸ ನಾಯಕನಿಗೆ ಒಪ್ಪಿಸಿದ, ಮತ್ತು ಇಬ್ಬರೂ ರಾಜಕುವರರನ್ನು ಕೊಲೆ ಮಾಡಲಾಯಿತು. ನರಸ ಸಿಂಹಾಸನವನ್ನು ವಶಪಡಿಸಿಕೊಂಡ ಮತ್ತು ತಾನು ಸಾಯುವವರೆಗೆ ಹಿಡಿದುಕೊಂಡ. ಅವನ ಆಳಿಕೆಯ ಅವಧಿಯನ್ನು ಕೊಡ ಲಾಗಿಲ್ಲ. ಅವನ ನಂತರ ಅವನ ಮಗ "ಬಸ್ಬಲ್‌ರಾವ್" (? ಬಸವರಾಯ) ಪಟ್ಟಕ್ಕೆ ಬಂದು ಆರು ವರ್ಷ ಆಳಿದ ನಂತರ ಅವನ ಸಹೋದರ ಮಹಾನ್ ಕೃಷ್ಣದೇವರಾಯ ಪಟ್ಟಕ್ಕೆ ಬಂದ. ಈಗ ನಮಗೆ ಕೃಷ್ಣದೇವರಾಯ ಕ್ರಿ. ಶ. ೧೫೦೯ರಲ್ಲಿ ಆಳಲಾರಂಭಿ ಸಿದನೆಂದು ಗೊತ್ತಿದೆ. ಇದು ಅವನ ಪೂರ್ವಿಕ 'ಬಸ್ಬಲ್'ನ ಆರೋಹಣದ ಕಾಲ ೧೫೦೩ ಎಂದು ನಿರ್ಧರಿಸುತ್ತದೆ. ನರಸನ ಆಳಿಕೆಗೆ ಐದು ವರ್ಷ ನೀಡುವದಾದರೆ —ಇದು ಶುದ್ಧ ಊಹೆ—ಅವನ ಆರೋಹಣ ಕ್ರಿ. ಶ. ೧೪೯೮ ರಲ್ಲಾಗುತ್ತದೆ, ಮತ್ತು ನರಸಿಂಹನ ನಲವತ್ತನಾಲ್ಕು ವರ್ಷಗಳು ಕ್ರಿ. ಶ. ೧೪೫೪ರಲ್ಲಿ ಆರಂಭಿಸು ತ್ತವೆ; ಆದರೆ ಇದು ಸ್ಪಷ್ಟವಾಗಿ ಎರಡನೆಯ ದೇವರಾಯನ ಮಗ ಮಲ್ಲಿಕಾರ್ಜುನನ ಆಳಿಕೆಯೊಂದಿಗೆ ಸಮಪಾತವಾಗುತ್ತದೆ. ನಂತರದ ವರ್ಷಗಳಲ್ಲಿ ಹಿಂದೂಗಳು ದುರಾಕ್ರಮಿ ನರಸಿಂಹನ ಆಳಿಕೆಯನ್ನು ಅವನು ವಸ್ತುತಃ ರಾಜನಾದ ದಿನ ಬಿಟ್ಟು ಮಂತ್ರಿಯಾಗಿ ಅಥವಾ ದೊಡ್ಡ ಮನ್ನೆಯನಾಗಿ ಅಧಿಕಾರ ಪಡೆಯಲಾರಂಭಿಸಿದ ಸಮಯದಿಂದ ಎಣಿಕೆ ಮಾಡಿರುವ ಸಾಧ್ಯತೆಯುಂಟು; ಆದರಿದು ಶುದ್ಧ ಊಹೆ.

ಮುಹಮ್ಮದ ಶಾಹ ಬಾಹಮನಿಯ ಮರಣಕ್ಕಿಂತ ತುಸು ಮುಂಚೆ ೧೪೮೧ ರಲ್ಲಿ 'ಸೇವಾರಾಯ್' ಎಂಬವನೊಬ್ಬ ವಿಜಯನಗರದ ರಾಜನಾಗಿದ್ದನೆಂದು ಫಿರಿಸ್ತಾ ಹೇಳುತ್ತಾನೆ. ಆದಿಲ್ ಶಾಹರಲ್ಲಿ ಪ್ರಥಮನಾದ ಬಿಜಾಪುರದ ರಾಜನ ಬಗೆಗೆ

ಪ್ರಸ್ತಾಪಿಸುತ್ತ, ಆದಿಲ್‌ನ ವೈರಿ ಕಾಸಿಮ್ ಬಾರಿದ್ ಆಗ ವಿಜಯನಗರದ ಮಂತ್ರಿಯನ್ನು ತನ್ನ ವೈರಿಯು ಏರುತ್ತಿರುವ ಬಲದ ವಿರುದ್ಧ ನೆರವು ಯಾಚಿಸಿದ,[4] ರಾಯ ಕೂಸಾಗಿದ್ದುದರಿಂದ ಅವನ ಮಂತ್ರಿ 'ಹೀಮರಾಜೆ[5] ಸೈನ್ಯ ಕಳಿಸಿದ' ಮತ್ತು ಮುದಕಲ್ ಮತ್ತು ರಾಯಚೂರವರೆಗಿನ ಪ್ರದೇಶವನ್ನು ಹಿಡಿದುಕೊಂಡ ಎಂದು ಚರಿತ್ರಕಾರ ಹೇಳುತ್ತಾನೆ. ಇದು ಸಂಭವಿಸಿದುದು ನವಂಬರ ೧೪೮೯ರಿಂದ ನವಂಬರ ೧೪೯೦ರ ಅವಧಿಯನ್ನು ಒಳಗೊಳ್ಳುವ ಹಿ. ಶ. ೮೯೫ ರಲ್ಲಿ. ಆದುದರಿಂದ 'ಹೀಮರಾಜೆ' ಅಂದರೆ ಬಹುಶಃ ಸಿಂಹ ಅಥವಾ ನರಸಿಂಹರಾಜ ಅಥವಾ ಬೇರೆ ರೀತಿಯಾಗಿ ವೀರ ನರಸಿಂಹ ಎಂದು ಕರೆಯಲಾದ ನರಸ ಇರಬೇಕು.

ಫಿರಿಸ್ತಾ ಅದೇ ಘಟನೆಯ ಇನ್ನೊಂದು ವೃತ್ತಾಂತವನ್ನೂ ಕೊಡುತ್ತಾನೆ. ಇದರ ಪ್ರಕಾರ, ಹಿಂದೂ ರಾಜಧಾನಿಯಲ್ಲಿ ಕಲಹಗಳ ಬಗೆಗೆ ಕೇಳಿದ ಆದಿಲ್ ಶಾಹ ಸ್ಪಷ್ಟವಿರುವಂತೆ ೧೪೯೩ ರಲ್ಲಿ ರಾಯಚೂರಿನ ವಿರುದ್ಧ ದಂಡೆತ್ತಿ ನಡೆದ; ಆಗ್ಗೆ ಈ ಕಲಹಗಳನ್ನು ಬಗೆಹರಿಸಿ ಹೀಮರಾಜೆ 'ಚಿಕ್ಕರಾಯನೊಂದಿಗೆ' ಆ ನಗರಕ್ಕೆ ಸಾಗಿದ. ಯುದ್ಧ ನಡೆದು ಹೀಮರಾಜೆ ಪರಾಜಿತನಾದ; ಮತ್ತು ಚಿಕ್ಕರಾಜ ಮರಣಾಂತಿಕ ಗಾಯಗೊಂಡು ಮನೆ ತಲುಪುವ ಮುಂಚೆ ತೀರಿಕೊಂಡುದರಿಂದ ಹೀಮರಾಜೆ ಸರ್ಕಾರವನ್ನು ಮತ್ತು ದೇಶವನ್ನು ಹಿಡಿದುಕೊಂಡ.

ಇದೂ ಅಲ್ಲದೆ, ಹಳೆಯ ರಾಜವಂಶದ ಪತನ ಮತ್ತು 'ಹೀಮರಾಜೆ'ಯ ಆರೋಹಣದ ಬಗೆಗೆ ಫಿರಿಸ್ತಾನ ಬೇರೆರಡು ಅವತರಣಿಕೆಗಳಿವೆ. ಒಂದು[6] ಹೀಗೆ ಇದೆ :

'ಹೀಮರಾಜೆ ಪ್ರಥಮ ದುರಾಕ್ರಮಿಯಾಗಿದ್ದ. ಅವನು ಬೀಜನಗರದ ಎಳೆಯ ರಾಜನಾದ ಶೀವ್‌ರಾಯ್‌ನ ಮಗನನ್ನು ವಿಷವಿಟ್ಟು ಕೊಂದಿದ್ದ, ಅವನ ಶಿಶುಸಹೋದರನನ್ನು ತನ್ನ ಸಂಚಿನ ಸಾಧನವನ್ನಾಗಿಸಿಕೊಂಡು ನಿಧಾನವಾಗಿ ಪುರಾತನ ಮನ್ನೆಯರನ್ನು ಕಿತ್ತೆಸೆದು ಕೊನೆಗೆ ರಾಜ್ಯದ ಮೇಲೆ ತನ್ನದೇ ಪರಮ ಪ್ರಭುತ್ವ ಸ್ಥಾಪಿಸಿದ.'

ಇನ್ನೊಂದು[7] ಹೀಗೆ ಹೇಳುತ್ತದೆ :

'ಬೀಜನಗರದ ಆಡಳಿತ ಅವಿಚ್ಛಿನ್ನ ಪರಂಪರೆಯಾಗಿ ಏಳು ನೂರು ವರ್ಷಗಳ ಕಾಲ ಒಂದೇ ಮನೆತನದಲ್ಲಿ ಉಳಿದಿತ್ತು. ಶೀವ್‌ರಾಯ್‌ನ ಮರಣಾನಂತರ ಅವನ ಅಲ್ಪವಯಿ ಮಗ ಪಟ್ಟಕ್ಕೆ ಬಂದ. ಅವನು ಬಹಳ ಕಾಲ ಬದುಕಲಿಲ್ಲ ಮತ್ತು ತನ್ನ ತಮ್ಮನಿಗೆ ಸಿಂಹಾಸನ ಬಿಟ್ಟು ಗತಿಸಿದ. ಅವನು ಕೂಡ ಅರಸೊತ್ತಿಗೆಯ ಉದ್ಯಾನದಿಂದ ಸುಖಾನುಭವದ ಹೂಗಳನ್ನು ಬಹಳ ಕಾಲ ಆಯ್ದುಕೊಂಡಿರಲಿಲ್ಲ ಅಷ್ಟರಲ್ಲಿ ತಮ್ಮ ಚಂಚಲತೆಯನ್ನು ಶೃತಪಡಿಸಿದ ಕ್ರೂರ ಮುಗಿಲುಗಳು ವಿನಾಶದ ಬಿರುಗಾಳಿಯಿಂದ ಅವನ ಜೀವನದ ಭೂಮಿಯನ್ನು ಸುಟ್ಟುಹಾಕಿದವು.[8] ಅವನ

ನಂತರ ಪಟ್ಟಕ್ಕೆ ಬಂದವನು ಕೇವಲ ಮೂರು ತಿಂಗಳ ಕೂಸಾಗಿದ್ದು, ಪಾಂಡಿತ್ಯ ಮತ್ತು ಅನುಭವಗಳಿಗೆ ಹೆಸರಾಗಿದ್ದ ಅದೇ ಮನೆತನದ ಪ್ರಮುಖ ಮಂತ್ರಿಗಳಲ್ಲೊಬ್ಬ ನಾದ ಹೀಮರಾಜೆ ಏಕೈಕ ರಾಜಪ್ರತಿನಿಧಿಯಾದನು, ಮತ್ತು ರಾಜ್ಯದ ಎಲ್ಲ ಮನ್ನೆಯರು ಮತ್ತು ಸಾಮಂತರು ನಲವತ್ತು ವರ್ಷ ಸಂತೋಷದಿಂದ ಅವನಿಗೆ ವಿಧೇಯರಾಗಿದ್ದರು; ಹಾಗಿದ್ದರೂ ಚಿಕ್ಕರಾಜ ಪ್ರಾಯಕ್ಕೆ ಬರಲು ಅವನನ್ನು ವಿಷವಿಟ್ಟು ಕೊಂದು ರಾಜಪ್ರಾತಿನಿಧ್ಯವನ್ನು ತನ್ನ ಕೈಯಲ್ಲಿಯೇ ಇಟ್ಟುಕೊಳ್ಳುವ ನೆಪಕ್ಕಾಗಿ ಆ ಮನೆತನದ ಶಿಶುವೊಂದನ್ನು ಸಿಂಹಾಸನದ ಮೇಲೆ ಕೂಡಿಸಿದ್ದ.[9] ಹೀಮರಾಜೆನ ಮರಣಾನಂತರ ಅವನ ಮಗ ರಾಮರಾಜೆ ಅಧಿಕಾರಕ್ಕೆ ಬಂದ. ಅವನು ಸೇವ್‌ರಾಯ್‌ನ ಮಗನ ಮಗಳನ್ನು ಮದುವೆಯಾಗಿ ಆ ನೆಂಟತನದಿಂದ ತನ್ನ ಪ್ರಭಾವ ಹಾಗೂ ಬಲ ಹೆಚ್ಚಿಸಿಕೊಂಡ."

೧೫೩೫ ರಲ್ಲಿ ಇಲ್ಲವೆ ಆ ಸುಮಾರಿಗೆ ಜರುಗಿದ ಘಟನೆಯೊಂದನ್ನು ವರ್ಣಿಸಲು ಅವನು ಮುಂದಾಗುತ್ತಾನೆ. ಅದನ್ನು ಅದರ ಸಂದರ್ಭದಲ್ಲಿ ಪರಿಗಣಿಸ ಲಾಗುವುದು.

೧೫೩೦ನೆಯ ವರ್ಷದ ಘಟನೆಗಳ ಬಗೆಗೆ ಬರೆಯುತ್ತ[10] ಫಿರಿಸ್ತಾ ಹೀಮರಾಜೆಯ ಮರಣ ಹಾಗೂ ಅವನ ಮಗ ರಾಮರಾಜೆಯ ನೂತನ ಅಧಿಕಾರ ಗ್ರಹಣದಿಂದಾಗಿ ವಿಜಯನಗರದ ವ್ಯವಹಾರಗಳು ಗೊಂದಲದಲ್ಲಿ ಮುಳುಗಿದ್ದವು ಎಂದು ಹೇಳುವುದು ಕಂಡುಬರುತ್ತದೆ. ನರಸಿಂಹ, ನರಸ ಅಥವಾ ವೀರ ನರಸಿಂಹ, ಮತ್ತು ೧೫೩೦ರಲ್ಲಿ ತೀರಿಕೊಂಡ ಕೃಷ್ಣದೇವರಾಯರ ಆಳಿಕೆಗಳಲ್ಲಿ ಅವನ ಹೀಮರಾಜೆ ಅಥವಾ ತಿಮ್ಮರಾಜ ಆ ರಾಜ್ಯದ ಅರಸರ ಮಹಮ್ಮದೀಯ ಹೆಸರಾಗಿತ್ತೆಂಬ ತೀರ್ಮಾನಕ್ಕೆ ನಿಶ್ಚಿತವಾಗಿ ಬರಲು ಈ ಅವತರಣಿಕೆ ಸಹಾಯಕವಾಗುತ್ತದೆ. ನರಸನ ಮತ್ತು ಕೃಷ್ಣದೇವರಾಯನ ಬಲಶಾಲಿ ಮಂತ್ರಿ ಸಾಳುವ ತಿಮ್ಮನನ್ನು ನರಸಿಂಹ ಮತ್ತು ನರಸರೊಂದಿಗೆ ಗೋಜಲು ಮಾಡಿಕೊಂಡು ಫಿರಿಸ್ತಾ ಮೂವರನ್ನೂ ಒಬ್ಬನೇ ವ್ಯಕ್ತಿಯನ್ನಾಗಿಸಿದ, ೧೫೩೦ರಲ್ಲಿ ಅಚ್ಯುತನ ಆರೋಹಣದಿಂದ ೧೫೬೪ರ ವರೆಗೆ "ರಾಮರಾಜೆ" ರಾಜನಾಗಿದ್ದನೆಂದು ಫಿರಿಸ್ತಾ ಹೇಳುತ್ತಾನೆ.

ಹೆಸರುಗಳು ಮತ್ತು ವಿವರಗಳು ಭಿನ್ನವಾಗಿದ್ದರೂ ಫಿರಿಸ್ತಾ ಹಾಗೂ ನೂನಿಜ್‌ರ ವೃತ್ತಾಂತಗಳಲ್ಲಿ ಸತ್ಯದ ಸಾಮಾನ್ಯ ಆಧಾರವಿರುವದನ್ನು ಸ್ಪಷ್ಟವಾಗಿ ಗಮನಿಸಬಹುದು. ಸಹೋದರರಾಗಿದ್ದ ಎರಡೂ ಚಿಕ್ಕ ರಾಜರ ಮರಣಗಳನ್ನು, ರಾಜ್ಯದ ಇನ್ನಿಬ್ಬರು ಉತ್ತರಾಧಿಕಾರಿಗಳ ಆ ನಂತರದ ಕೊಲೆಯನ್ನು ಮತ್ತು ಮಂತ್ರಿಯಿಂದ ಸಿಂಹಾಸನದ ದುರಾಕ್ರಮಣವನ್ನು ಎರಡೂ ವೃತ್ತಾಂತಗಳು ಕಥಿಸುತ್ತವೆ.

ಈ ಹೇಳಿಕೆಗಳನ್ನು ಗಮನದಲ್ಲಿರಿಸಿ ನಾವು ಫಿರಿಸ್ತಾನ ವೃತ್ತಾಂತದಲ್ಲಿ ಅಧಿಕ ವಿಶ್ವಾಸಾರ್ಹ ಭಾಗದತ್ತ ತಿರುಗುತ್ತೇವೆ.

ಯುಸುಫ್ ಆದಿಲ್ ಖಾನ್ ಕ್ರಿ.ಶ. ೧೪೮೯ರಲ್ಲಿ ತನ್ನನ್ನು ಬಿಜಾಪುರದ ಸ್ವತಂತ್ರ ರಾಜನೆಂದು ಸಾರಿದ. ಸ್ವಲ್ಪ ಕಾಲಾನಂತರ, ಕೊನೆಗೆ ಅಹಮದಾಬಾದ ಪ್ರದೇಶಗಳ ಅರಸನಾದ ಅವನ ವೈರಿ ಕಾಸಿಮ್ ಬಾರಿದ್ ಹೊಟ್ಟೆಕಿಚ್ಚಿನ ಆವೇಶದಲ್ಲಿ ಬಿಜಾಪುರದ ವಿರುದ್ಧ ವಿಜಯನಗರದ ನೆರವು ಯಾಚಿಸಿದ ಮತ್ತು ಪ್ರತಿಫಲವಾಗಿ ಮುದಕಲ್ ಮತ್ತು ರಾಯಚೂರ ಅಥವಾ ಎರಡೂ ನದಿಗಳ ಮಧ್ಯೆ ಇರುವ ಪ್ರದೇಶವನ್ನು ಬಿಟ್ಟುಕೊಡುವ ವಚನವಿತ್ತ. ನರಸಿಂಹ ಹಿಂದೂಗಳ ಸೈನ್ಯಗಳನ್ನು ಜಮಾಯಿಸಿ, ದೊಡ್ಡ ಸೈನ್ಯದೊಂದಿಗೆ ತುಂಗಭದ್ರಾ ದಾಟಿ, ಆ ನಾಡನ್ನೆಲ್ಲ ವಿನಾಶಗೊಳಿಸಿದ ನಂತರ ಮುದಕಲ್ ಮತ್ತು ರಾಯಚೂರು ಎರಡೂ ನಗರಗಳನ್ನು ವಶಪಡಿಸಿಕೊಂಡ. ಹೀಗೆ, ಅವು ಮತ್ತೊಮ್ಮೆ ವಿಜಯನಗರದ ಸ್ವಾಧೀನದಲ್ಲಿ ಬಂದವು.

ಇದಾದ ಸ್ವಲ್ಪ ಕಾಲದಲ್ಲಿ ಕ್ರಿ.ಶ. ೧೪೯೩ರ ಸುಮಾರಿಗೆ ಸುಲ್ತಾನ ಯುಸುಫ್ ಆದಿಲ್ ಕಳೆದುಕೊಂಡ ಪ್ರದೇಶ ಮರಳಿ ಪಡೆಯಲು ಪುನಃ ದಂಡೆತ್ತಿ ನಡೆದು ಕೃಷ್ಣಾದವರೆಗೆ ಮುಂದುವರೆದ. ಆದರೆ ಬೇನೆ ಬಿದ್ದು ಎರಡು ತಿಂಗಳು ನಿಂತ; ಮತ್ತು ಫಿರಿಸ್ತಾ ಏನಾಯಿತೆಂಬುದರ ಕೆಳಗಿನ ವೃತ್ತಾಂತವನ್ನು ನೀಡುತ್ತಾನೆ. ಇದನ್ನು ಈ ಮೊದಲೆ ಪ್ರಸ್ತಾಪಿಸಲಾಗಿದೆ, ಆದರೆ ಈಗ ಪೂರ್ತಿಯಾಗಿ ನೀಡಲಾಗುತ್ತಿದೆ :

"ಈ ಮಧ್ಯಂತರದಲ್ಲಿ ತನ್ನ ಅಂತಃಕಲಹಗಳನ್ನು[11] ಪರಿಹರಿಸಿ ದೊಡ್ಡ ಸೈನ್ಯದ ನೇತೃತ್ವ ವಹಿಸಿ ಹೀಮಾರಾಜೆ ಚಿಕ್ಕರಾಯನೊಂದಿಗೆ ಮುಂದೆ ಸಾಗಿದ. ಅವನ ಗುಣಹೊಂದುವಿಕೆಗೆ ಅವನ ಪ್ರಜೆಗಳು ಕಳಕಳಿಯ ಪ್ರಾರ್ಥನೆಗಳನ್ನು ಸಲ್ಲಿಸುತ್ತಿದ್ದ ಆದಿಲ್ ಶಾನ ಸೈನ್ಯ ಇದನ್ನು ನೋಡಿ ಭಯಭೀತವಾಯಿತು"....(ಪ್ರಾರ್ಥನೆಗಳಿಗೆ ಉತ್ತರವಾಗಿ ಸುಲ್ತಾನ ಗುಣಹೊಂದಿದ).

"ಹೀಮರಾಜೆ ತುಮೆದ್ರಾ ದಾಟಿ ವೇಗವಾಗಿ ಮುಂದೆ ಬರುತ್ತಿದ್ದ ಸುದ್ದಿ ತಲುಪಿ ಯುಸುಫ್ ಆದಿಲ್ ಶಾ ತನ್ನ ಸೈನ್ಯದ ಸಾಮಾನ್ಯ ಪರಿಶೀಲನೆಗೆ ಆಜ್ಞೆಯಿತ್ತ....(ಮತ್ತು ಮುಂದೆ ಸಾಗಿ ಹಿಂದೂಗಳಿಗಿಂತ ಸ್ವಲ್ಪ ಅಂತರದಲ್ಲಿ ತನ್ನ ಬಿಡಾರ ಹೂಡಿದ) ಏನೂ ಜರುಗದೆ ಹಲವು ದಿನ ಗತಿಸಿದವು. ಕೊನೆಗೆ ರೆಜಿಬ್ ೧೪೯೮[12]ರಲ್ಲಿ ಶನಿವಾರದಂದು ಎರಡೂ ಸೈನ್ಯಗಳು ವ್ಯೂಹ ರಚಿಸಿದವು ಮತ್ತು ಯುದ್ಧಾರಂಭದಲ್ಲಿ ಆದಿಲ್ ಶಾನ ಐದುನೂರು ಸೈನಿಕರು ಕೊಲ್ಲಲ್ಪಟ್ಟು, ಮಿಕ್ಕವರು ಅಸ್ತವ್ಯಸ್ತಗೊಂಡು ಹಿಂದೆ ಸರಿದರು, ಆದರೆ ಸುಲ್ತಾನ ಅವರನ್ನು ಪುನಃ ವ್ಯೂಹ ಕಟ್ಟಿದ. ಸೆರೆಯಿಂದ ತಪ್ಪಿಸಿಕೊಂಡು ಬಂದಿದ್ದ ಒಬ್ಬ ಅಧಿಕಾರಿ ವೈರಿಗಳು ಕೊಳ್ಳೆ ಹೊಡೆಯುವುದರಲ್ಲಿ ಮಗ್ನರಾಗಿದ್ದಾರೆ ಮತ್ತು ಅವರ ಮೇಲೆ ಪ್ರಯೋಜನಕಾರಿಯಾಗಿ ಆಕ್ರಮಣ ಮಾಡಬಹುದೆಂದು ಸೂಚಿಸಿದ. ಸುಲ್ತಾನನಿಗೆ ಈ ಸಲಹೆ ಬಹಳ ಇಷ್ಟವಾಗಿ

ಅವನು ಮುಂದುವರಿದ ; ಆಗ ತನ್ನೆಲ್ಲ ಸೈನ್ಯವನ್ನು ಜಮಾಯಿಸಲು ಸಮಯ ವಿರದ್ದರಿಂದ ಹೀಮರಾಜೆ ಏಳು ಸಾವಿರ ಅಶ್ವಗಳು, ಬಹಳಷ್ಟು ಕಾಲಾಳುಗಳು, ಹಾಗೂ ಮುನ್ನೂರು ಆನೆಗಳೊಂದಿಗೆ ಹೊರಬಿದ್ದ. ಆದಿಲ್ ಶಾ ಅವನ ಕೇಂದ್ರ ಭಾಗದ ಮೇಲೆ ಎಷ್ಟೊಂದು ರಭಸದಿಂದ ಆಕ್ರಮಣ ಮಾಡಿದನೆಂದರೆ ಹೀಮರಾಜೆನಿಗೆ ಆಘಾತ ಸಹಿಸಲಾಗಲಿಲ್ಲ. ವಿಜಯ, ರಾಜಧ್ವಜವನ್ನು ಹಾರಾಡಿಸಿತು, ಮತ್ತು ಕಾಫಿರರು ಇನ್ನೂರು ಆನೆಗಳು, ಸಾವಿರ ಕುದುರೆಗಳು, ಅರವತ್ತು ಲಕ್ಷ ಊನಗಳು[13] ಅನೇಕ ರತ್ನಗಳು ಮತ್ತು ಚರಾಸ್ತಿಯನ್ನು ವಿಜಯಿಗಳಿಗೆ ಬಿಟ್ಟು ಓಡಿದರು. ಹೀಮರಾಜೆ ಮತ್ತು ಚಿಕ್ಕರಾಯ ಬೀಜನಗರಕ್ಕೆ ಓಡಿದರು, ಆದರೆ ಚಿಕ್ಕರಾಯ ಯುದ್ಧದಲ್ಲಿ ತಾಗಿದ ಬಾಣದಿಂದುಂಟಾದ ಗಾಯದಿಂದಾಗಿ ದಾರಿಯಲ್ಲಿಯೆ ಸತ್ತ. ಹೀಮರಾಜೆ ಸರಕಾರ ಮತ್ತು ಪ್ರದೇಶವನ್ನು ಹಿಡಿದುಕೊಂಡ ; ಆದರೆ ಕೆಲವು ಪ್ರಮುಖ ಮನ್ನೆಯರು ಅವನ ದುರಾಕ್ರಮಣವನ್ನು ವಿರೋಧಿಸಲಾಗಿ ಅಂತಃ ಕಲಹಗಳು ತಲೆದೋರಿದವು. ಅದರಿಂದಾಗಿ ಆ ದಿಶೆಯಿಂದ ಆಗಬಹುದಾದ ಯುದ್ಧದಿಂದ ಆದಿಲ್‌ಶಾನಿಗೆ ವಿರಾಮ ದೊರೆಯಿತು."

ಎರಡೂ ನದಿಗಳ ನಡುವಣ ವಾದಗ್ರಸ್ತ ಪ್ರದೇಶ ಪುನಃ ಮಹಮ್ಮದೀಯರ ಕೈಗೆ ಹೋಯಿತು, ಗೋವಾ ಸಹ ಬಿಜಾಪುರದ ಸುಲ್ತಾನನ ವಶದಲ್ಲಿ ಉಳಿಯಿತು.

ಫಿರಿಸ್ತಾ ಹೇಳಿರುವಂತೆ, ಬಿಜಾಪುರದ ಯುಸುಫ್ ಆದಿಲ್ ಶಾಹನ ಆಳಿಕೆ ಯಲ್ಲಿನ ಕೊನೆಯ ಐತಿಹಾಸಿಕ ಘಟನೆ ಕೆಳಗಿನಂತಿದೆ :

"೯೧೫[14] ನೆಯ ವರ್ಷದಲ್ಲಿ ಕ್ರಿಶ್ಚನ್ನರು ಗೋವಾ ಪಟ್ಟಣದ ಮೇಲೆ ಒಮ್ಮಿಂದೊಮ್ಮೇಲೆ ಆಕ್ರಮಣ ಮಾಡಿದರು, ಮತ್ತು ಮಂಡಲಾಧಿಪತಿಯನ್ನೂ ಅನೇಕ ಮುಸಲ್ಮಾನರನ್ನೂ ಕೊಂದರು. ಈ ಸುದ್ದಿ ತಿಳಿದು ಆದಿಲ್ ಶಾಹ ಮೂರು ಸಾವಿರ ಆಯ್ದ ದಖ್ಖನಿಯರು ಮತ್ತು ವಿದೇಶಿಯರೊಂದಿಗೆ ಎಷ್ಟೊಂದು ವೇಗವಾಗಿ ಪ್ರಯಾಣಿಸಿದನೆಂದರೆ ಅವನು ಐರೋಪ್ಯರ ಮೇಲೆ ಅವರಿಗೆ ಗೊತ್ತಾಗದಂತೆ ಏರಿಬಂದ, ಕೋಟೆಯನ್ನು ಪುನರ್ವಶಪಡಿಸಿಕೊಂಡ, ಮತ್ತು ಅನೇಕರನ್ನು ಕೊಂಡ; ಆದರೆ ಕೆಲವರು ಹಡಗ ಏರಿ ಸಮುದ್ರದೊಳಗೆ ಪಾರಾದರು."

ಈ ಕ್ರಿಶ್ಚನ್ನರೆಂದರೆ ಅಲ್ಬುಕರ್ಕ್‌ನ ನೇತೃತ್ವದಲ್ಲಿನ ಪೋರ್ತುಗೀಜರು, ಮತ್ತು ಗೋವಾದಲ್ಲಿ ಅವರ ಪ್ರವೇಶದ ದಿನಾಂಕ ಮಾರ್ಚ್ ೧, ಕ್ರಿ. ಶ. ೧೫೧೦ ಆಗಿತ್ತು.

ಈ ಅವಧಿಯಲ್ಲಿ ನಮ್ಮ ಭಾರತೀಯ ರಂಗದ ಮೇಲೆ ಪ್ರಮುಖ ನಟವರ್ಗದಲ್ಲಿ ಸಂಪೂರ್ಣ ಬದಲಾವಣೆಯಾಗಿತ್ತು. ಅಹಮದನಗರದಲ್ಲಿ ಕ್ರಿ. ಶ. ೧೪೯೦ರಲ್ಲಿ ತಾನು ಸ್ವತಂತ್ರನೆಂದು ಘೋಷಿಸಿಕೊಂಡ ಅಹಮದ ನಿಜಾಮ ಶಾಹ ೧೫೦೮ರಲ್ಲಿ ಸತ್ತ ಮೇಲೆ ಬರ್ಹಾನ್ ಎಂಬ ಅವನ ಏಳು ವರ್ಷದ ಮಗ ಪಟ್ಟಕ್ಕೆ ಬಂದ.

ನಂತರ ಅವನೊಂದಿಗೆ ಪ್ರವಾಸಿ ಗಾರ್ಸಿಯಾದ ಒರ್ಟಾ[15] ಗೆಳೆತನ ಬೆಳೆಸಿದ. ದ ಒರ್ಟಾ ಅವನನ್ನು 'ನನ್ನ ಗೆಳೆಯ'[16] ಎಂದು ಕರೆದಿದ್ದಾನೆ. ಯುಸುಫ್ ಆದಿಲ್ ಶಾಹ ಕ್ರಿ.ಶ. ೧೫೧೦ರಲ್ಲಿ ತೀರಿಕೊಂಡನಂತರ ಬಿಜಾಪುರದ ಸಿಂಹಾಸನದ ಮೇಲೆ ಅವನ ಉತ್ತರಾಧಿಕಾರಿ ಅವನ ಮಗ 'ಇಸ್ಮಾಯಿಲ್ ಆದ. ಕೃಷ್ಣದೇವರಾಯ ೧೫೦೯ರಲ್ಲಿ ವಿಜಯನಗರದ ರಾಯನಾದ. ಈ ಕೊನೆಗೆ ಉಲ್ಲೇಖಿತರಾದ ಇಬ್ಬರು ಒಬ್ಬರೊಂದಿಗೊಬ್ಬರು ಮೇಲಿಂದ ಮೇಲೆ ಯುದ್ಧದಲ್ಲಿ ತೊಡಗಿದ್ದರು, ಮತ್ತು ಕೊನೆಗೆ ನಮ್ಮ ದಿನಚರಿಗಳ ಪ್ರಕಾರ, ಹಿಂದೂ ರಾಜ ಸಂಪೂರ್ಣ ಜಯಶಾಲಿಯಾದ. ಅವನು ರಾಯಚೂರ ಯುದ್ಧದಲ್ಲಿ ಇಸ್ಮಾಯಿಲನಿಗೆ ತಲೆ ಎತ್ತದಂಥ ಪೆಟ್ಟು ಕೊಟ್ಟನೆಂದು ಫಿರಿಸ್ತಾ ಕೂಡ ಒಪ್ಪುತ್ತಾನೆ. ಅದರ ಪೂರ್ಣ ವರ್ಣನೆಯನ್ನು ನೂನಿಜ್ ನೀಡಿದ್ದಾನೆ.

ಕೃಷ್ಣದೇವರಾಯನ ಇತಿಹಾಸ ವಿವರಿಸುವ ಮುನ್ನ ಗೋವಾವನ್ನು ವಶಪಡಿಸಿಕೊಂಡ ಪೋರ್ತುಗೀಜ ಕ್ರಿಶ್ಚನರು ಭಾರತದಲ್ಲಿ ಇರಲು ಮತ್ತು ಅವರಲ್ಲಿ ಕೆಲವರು ಹಿಂದೂ ರಾಜಧಾನಿಯಲ್ಲಿ ವಾಸಿಸಲು ಹೇಗೆ ಬಂದರು ಎಂಬುದನ್ನು ತಿಳಿದುಕೊಳ್ಳುವುದು ಅವಶ್ಯಕ.

**ಪೋರ್ತುಗೀಜರು ಭಾರತಕ್ಕೆ ಬಂದರು**

ಪೋರ್ತುಗಾಲದ ರಾಜ ಜಾನ್ ಕ್ರಿ.ಶ. ೧೪೮೪ರಲ್ಲಿ ಭಾರತದ ಬಗೆಗೆ ಸ್ವಲ್ಪ ಜ್ಞಾನ ಪಡೆದಿದ್ದ, ಮತ್ತು ದೂರ ಪೂರ್ವದಲ್ಲಿರುವ ಶ್ರೀಮಂತ ಹಾಗೂ ಕುತೂಹಲಕರ ದೇಶವನ್ನು ಶೋಧಿಸುವ ಸಾಧ್ಯತೆ ಕುರಿತು ವಿಚಾರಣೆಗಳನ್ನು ಮಾಡಿಸಿ ಮೂರು ಹಡಗಗಳನ್ನು ಸಜ್ಜುಮಾಡಲುದ್ಯುಕ್ತನಾದನು, ಆದರೆ ಅವು ಸಿದ್ಧವಾಗುವ ಮುನ್ನ ಸತ್ತ. ಅವನ ಉತ್ತರಾಧಿಕಾರಿ ಡಾಮ್ ಮ್ಯಾನುಎಲ್ ಈ ವಿಷಯದಲ್ಲಿ ಆಸಕ್ತಿ ವಹಿಸಿ ಕೇಪ್ ಆಫ್ ಗುಡ್ ಹೋಪ್ ಅನ್ನು ಪ್ರಯತ್ನ ಮಾಡಿ ಬೆಳೆಸಬೇಕೆಂಬ ಆಜ್ಞೆಯಿತ್ತು. ಈ ಹಡಗಗಳನ್ನು ವಾಸ್ಕೊದ ಗಾಮಾ ಮತ್ತು ಅವನ ಸಹೋದರ ಪೌಲೊನ ನೇತೃತ್ವದಲ್ಲಿ ಕಳಿಸಿಕೊಟ್ಟ. ಅವರು ಮಾಡಿದ ಅಸಾಮಾನ್ಯ ಯಾನದ ಪೂರ್ತಿ ವೃತ್ತಾಂತವನ್ನು ಹ್ಯಾಕ್ಲುಟ್ ಆವೃತ್ತಿಯಲ್ಲಿ ಅನುವಾದಿಸಲಾದ ಹಾಗೂ ಪ್ರಕಟಿಸಲ್ಪಟ್ಟ "ಥ್ರೀ ವಾಯೆಜಿಸ್ ಆಫ್ ವಾಸ್ಕೊದ ಗಾಮಾ"ದಲ್ಲಿ ಕೊಡಲಾಗಿದೆ; ಅದು ಕೊರಿಯಾನ "ಲೆಂಡಸ್ ದ ಇಂಡಿಯಾ"ದ ಕೆಲವು ಭಾಗಗಳ ಅನುವಾದವಾಗಿದೆ. ದ ಗಾಮಾ ಜುಲೈ ೮. ಕ್ರಿ.ಶ. ೧೪೯೭ರಲ್ಲಿ ಹೊರಟು ಅಗಸ್ಟ ೨೬, ೧೪೯೮[17]ರಲ್ಲಿ ಕಾಲಿಕತ್ತದ ಸಮೀಪಕ್ಕೆ ಬಂದ. ಕಾಲಿಕತ್ತದ ಸಮುರಿ ಅಥವಾ ರಾಜ ಮೊದಲು ಸ್ನೇಹ ತೋರಿದ, ಆದರೆ ಪೋರ್ತುಗೀಜರಲ್ಲಿಯೆ ಮನಸ್ತಾಪಗಳಿದ್ದವು, ಮತ್ತು ಅವರು ವ್ಯಾಪಾರದಲ್ಲಾಗಲಿ ಹಿಂದೂಗಳೊಂದಿಗೆ ಸೌಹಾರ್ದಮಯ ಸಂಬಂಧ ಸ್ಥಾಪಿಸುವಲ್ಲಾಗಲಿ ಯಾವುದೆ ಪ್ರಗತಿ ಮಾಡಲಿಲ್ಲ. ದ ಗಾಮಾ ಸ್ವಲ್ಪ ಕಾಲಾನಂತರ ಪೋರ್ತುಗಾಲಿಗೆ ಮರಳಿದ. ಕ್ರಿ.ಶ. ೧೫೦೦ರ

ತರುಣದಲ್ಲಿ ಕಬ್ರಾಲ್ ಇನ್ನೊಂದು ದೊಡ್ಡ ಹಡಗುಪಡೆ ತೆಗೆದುಕೊಂಡು ಸಪ್ಟಂಬರ ೧೩ರಂದು ಕಾಲಿಕಟ್ ತಲುಪಿದ. ಅವನು ಕೂಡಲೆ ಸಮುರಿ ಜೊತೆಗೆ ಜಗಳ ಕಾಯ್ದು ಮತ್ತು ಶಾಂತಿಯುತ ವ್ಯಾಪಾರದ ಬದಲು, ಮರಳಿ ಪಡೆಯಲಾಗದಂತೆ ವಿಶ್ವಾಸ ಕಳೆದುಕೊಳ್ಳುವ ರೀತಿಯಲ್ಲಿ ಪೋರ್ತುಗೀಜರು ಆಕ್ರಮಣ ಪ್ರತ್ಯಾಕ್ರಮಣಗಳನ್ನು ಮಾಡಿದ ಬಗೆಗೆ ಓದುತ್ತೇವೆ. ಹಾಗಿದ್ದರೂ ಕೆಲವು ಐರೋಪ್ಯರು ಆ ಪ್ರದೇಶದಲ್ಲಿ ನೆಲೆಸಿದರು. ಅವರಲ್ಲಿ ಆ ಕಾಲದ ಪ್ರಖ್ಯಾತ ದಿನಚರಿಗಾರ ಡು ಆರ್ಟ್ ಬರ್ಬೋಸಾ ಇದ್ದ.

ದ ಗಾಮಾ ೧೫೦೨ರಲ್ಲಿ ಭಾರತಕ್ಕೆ ಪುನಃ ಬಂದ, ಪೋರ್ತುಗಾಲದ ರಾಜನನ್ನು ಸಮುದ್ರಗಳ ಒಡೆಯನೆಂದು ಘೋಷಿಸಿದ, ಭಾರತೀಯ ಕರಾವಳಿಯ ಸಮೀಪವಿದ್ದ, ಹಲವು ನೂರು ಪ್ರಯಾಣಿಕರಿದ್ದ ದೊಡ್ಡ ನೌಕೆಯೊಂದನ್ನು ಅದರ ಎಲ್ಲ ನಾವಿಕ ರೊಂದಿಗೆ ಬೇಕೆಂತಲೆ ನಾಶಪಡಿಸಿದ. ಅವನು ಅಕ್ಟೋಬರ ೨೯ರಂದು ಕಾಲಿಕತ್ ತಲುಪಿದ ಕೂಡಲೆ ನಗರದ ಮೇಲೆ ಗುಂಡಿನ ಮಳೆಗರೆದು, ಬಂದರಿನಲ್ಲಿದ್ದ ನಿರಾಕ್ಷೇಪ ಮೀನುಗಾರರನ್ನು ಸೆರೆಹಿಡಿದು ಅವರಲ್ಲಿ ಎಂಟುನೂರು ಜನರನ್ನು ಪಾಶವೀ ಕ್ರೂರತೆ ಯಿಂದ ಉದ್ದೇಶಪೂರ್ವಕವಾಗಿ ಕೊಂದ. ಕೋಚಿನ್‌ನಲ್ಲಿ ಒಂದು ಕಾರಖಾನೆ ಸ್ಥಾಪಿಸಿ ಅವನು ೧೫೦೩ರಲ್ಲಿ ಪುನಃ ಯುರೋಪಿಗೆ ತೆರಳಿದ. ಅವನು ಗೈದ ಹಿಂಸೆಯ ಪರಿಣಾಮ ವಾಗಿ ಕೋಚಿನ್ ಮತ್ತು ಕಾಲಿಕತ್ ಮಧ್ಯೆ ಯುದ್ಧ ಆರಂಭವಾಯಿತು. ೧೫೦೪ರಲ್ಲಿ ಲೊಪೊ ಸೆ ಆರಿಸ್ ಹದಿನಾಲ್ಕು ಚಿಕ್ಕ ನಾವೆಗಳ ಪಡೆಯೊಂದಿಗೆ ಬಂದು ಅಲ್ಲಿನ ರಾಜ ಪೋರ್ತುಗೀಜರಿಗೆ ಯಾವಾಗಲೂ ಒಳ್ಳೆಯ ಪ್ರೀತಿ ಮತ್ತು ಆದರಾತಿಥ್ಯ ನೀಡಿದ್ದನ್ನೂ ಲೆಕ್ಕಿಸದೆ ಕೋಚಿನ್ ಬಂದರಿನ ತಡೆಗಟ್ಟನ್ನು ಸಾರಿದ.

ಮರುವರ್ಷ ೧೫೦೫ರಲ್ಲಿ ಅಲ್ಮೈಡಾನನ್ನು ಭಾರತದ ಕರಾವಳಿಯಲ್ಲಿ ಪೋರ್ತುಗಾಲ ರಾಜನ ರಾಜಪ್ರತಿನಿಧಿಯಾಗಿ ನಿಯಮಿಸಲಾಯಿತು. ಅವನು ತನ್ನೊಂದಿಗೆ ದೊಡ್ಡ ಹಡಗುಪಡೆಯನ್ನು ಮತ್ತು ೧೫೦೦ ಸೈನಿಕರನ್ನು ತೆಗೆದು ಕೊಂಡು ಬಂದ. ಹೊನಾವರದಲ್ಲಿ ಆರಂಭದ ಕಾದಾಟದನಂತರ ಪೋರ್ತುಗೀಜರ ನಿಜವಾದ ಹಿತಾಸಕ್ತಿಗಳು ಸ್ಥಳೀಯರ ಮೇಲೆ ರಕ್ತಪಾತದ ಮತ್ತು ದುಬಾರಿಯ ಆಕ್ರಮಣಗಳಲ್ಲಿ ಅಡಗಿರದೆ ಶಾಂತಿಯುತ ವ್ಯಾಪಾರದಲ್ಲಿ ಅಡಗಿದೆಯೆಂಬುದನ್ನು ಅಲ್ಮೈಡಾ ಮೊಟ್ಟ ಮೊದಲ ಬಾರಿಗೆ ಕಂಡುಕೊಂಡ. ಒಬ್ಬ ಪ್ರಭಾವಿ ಸ್ಥಳೀಯ ನಿಂದ ವಿಜಯನಗರದ ಸರ್ವೋತ್ತಮ ರಾಜ್ಯದ ಅಸ್ತಿತ್ವ ಹಾಗೂ ಅದರ ರಾಜ ನರಸಿಂಹ (ಅಥವಾ ನರಸ)ನ ಬಲದ ಬಗೆಗೆ ತಿಳಿದುಕೊಂಡ. ಕಣ್ಣನೂರಿನಲ್ಲಿ ೧೫೦೬ ರಲ್ಲಿ ರಾಜಪ್ರತಿನಿಧಿಯ ಮಗ ತಾರೆಂಕೊ, ಇಟಾಲಿಯನ್ ಪ್ರವಾಸಿ ವಾರ್ಥೀಮಾ ನಿಂದ ಆ ದೇಶದ ಸ್ಥಿತಿಗತಿಗಳ ಬಗೆಗೆ ಇನ್ನೂ ಹೆಚ್ಚು ಮಾಹಿತಿ ಪಡೆದ, ಮತ್ತು

ಆದರ ಪರಿಣಾಮದಿಂದಾಗಿ ಆಲ್ಮೈಡಾ ರಾಜಾ ನರಸನನ್ನು ಭಟ್ಕಳದಲ್ಲಿ ಒಂದು ಕೋಟೆ ಕಟ್ಟಿಕೊಳ್ಳಲು ಅನುಮತಿಗಾಗಿ ಕೋರಿದ, ಆದರೆ ಯಾವ ಉತ್ತರವೂ ಬರಲಿಲ್ಲ.

ವಾರ್ಥಿಮಾ ಈ ಅವಧಿಯ ತನ್ನ ಅನುಭವಗಳ[18] ಅಮೂಲ್ಯ ವೃತ್ತಾಂತವನ್ನು ಹಿಂದೆ ಬಿಟ್ಟು ಹೋಗಿದ್ದಾನೆ. ಅವನು ಗೋವಾ "ಸವೈನ್" ಅಧಿಪತ್ಯದಲ್ಲಿತ್ತೆಂದು ಹೇಳುತ್ತಾನೆ. ಅದು ಪೋರ್ತುಗೀಜರಿಗೆ "ಸಬಾಯೊ"[19] ಎಂದು ಪರಿಚಿತವಿದ್ದ ರಾಜನನ್ನು ಲೇಖಕ ಬಣ್ಣಿಸುವ ಪರಿ. ಅವನು ಬಿಜಾಪುರದ ಆದಿಲ್ ಶಾಹನ ಕೆಳಗೆ ಮಂಡಲಾಧಿಪತಿಯಾಗಿದ್ದ. ಆಗ ಸಬಾಯೊ ವಿಜಯನಗರದ ನರಸಿಂಹನೊಂದಿಗೆ ಯುದ್ಧದಲ್ಲಿ ತೊಡಗಿದ್ದ.

ಅವನು ವಿಜಯನಗರವನ್ನು "ಬಲು ವಿಶಾಲ ಮತ್ತು ಭದ್ರ ಗೋಡೆಗಳುಳ್ಳ" ಮಹಾ ನಗರವೆಂದು ವರ್ಣಿಸುತ್ತಾನೆ. "ಅದು ಗುಡ್ಡದ ಬದಿಯಲ್ಲಿ ಸ್ಥಾಪಿತವಾಗಿದೆ[20] ಮತ್ತು ಅದರ ಸುತ್ತಳತೆ ಏಳು ಮೈಲು ಇದೆ. ಅದಕ್ಕೆ ಗೋಡೆಗಳ ಮುಮ್ಮಡಿ ವೃತ್ತಕವಿದೆ." ಅದು ಬಹಳ ಶ್ರೀಮಂತ ಹಾಗೂ ಒಳ್ಳೆಯ ದಾಸ್ತಾನುಳ್ಳದ್ದಾಗಿದೆ· ಸುಂದರ ನಿವೇಶನದ ಮೇಲೆ ಸ್ಥಾಪಿತವಾಗಿದೆ ಮತ್ತು ಉತ್ಕೃಷ್ಟ ಹವಾಮಾನವುಳ್ಳದ್ದಾಗಿದೆ. ರಾಜ "ಯಾವಾಗಲೂ ४೦,೦೦೦ ಅಶ್ವಯೋಧರನ್ನು" ಮತ್ತು ४೦೦ ಆನೆಗಳನ್ನು "ಭರ್ತಿಯಾಗಿಯೇ ಇಟ್ಟಿರುತ್ತಾನೆ." ಆನೆಗಳು ಆರು ಜನರನ್ನು ಹೊತ್ತೊಯ್ಯುತ್ತವೆ ಮತ್ತು ಅವುಗಳ ಸೊಂಡಿಲುಗಳಿಗೆ ಯುದ್ಧದಲ್ಲಿ ಉದ್ದ ಕತ್ತಿಗಳನ್ನು ಬಿಗಿಯಲಾಗಿರುತ್ತದೆ. ಈ ವರ್ಣನೆ ನಿಕಿಟಿನ್ ಮತ್ತು ಪ್ಯಾಸ್‌ರ ವರ್ಣನೆಗಳೊಂದಿಗೆ ಒಮ್ಮತವುಳ್ಳದ್ದಿದೆ. "ಸಾಮಾನ್ಯ ಜನರು ತಮ್ಮ ಟೊಂಕದ ಸುತ್ತಲೂ ಒಂದು ಬಟ್ಟೆಯ ತುಂಡನ್ನು ಬಿಟ್ಟರೆ ಬತ್ತಲಾಗಿಯೆ ಅಡ್ಡಾಡುತ್ತಾರೆ. ರಾಜ ಎರಡು ಗೇಣು ಉದ್ದವಿರುವ ಬಂಗಾರದ ಕಿನ್‌ಕಾಪಿನ ಟೊಪ್ಪಿಗೆಯನ್ನು ಧರಿಸುತ್ತಾನೆ.... ಆದರ ಮೇಲೆ ಹಾಕಲಾದ ಅಲಂಕಾರಗಳಿಂದಾಗಿ ಅವನ ಕುದುರೆ ನಮ್ಮ ಕೆಲವು ನಗರಗಳಿಗಿಂತಲೂ ಹೆಚ್ಚು ಬೆಲೆಯುಳ್ಳದ್ದಾಗಿದೆ.[21] ಪೋರ್ತುಗೀಜರೊಂದಿಗಿನ ಯುದ್ಧಗಳಿಂದಾಗಿ ಕಾಲಿಕತ್ ನಾಶವಾಯಿತೆಂದು ಅವನು ಹೇಳುತ್ತಾನೆ.

ಮುಸಲ್ಮಾನರಿಂದ ಕಾಲಿಕತ್ತದಲ್ಲಿ ನಲವತ್ತೇಳು ಪೋರ್ತುಗೀಜ ವರ್ತಕರು ಕೊಲೆಯಾದುದನ್ನು ವಾರ್ಥಿಮಾ ಕಂಡ. ಅಲ್ಲಿ ಇದ್ದ ಅಪಾಯಕರ ಪರಿಸ್ಥಿತಿಯಿಂದಾಗಿ ಅವನು ನಗರವನ್ನು ಬಿಟ್ಟು ನಡೆದ ಮತ್ತು ಕರಾವಳಿಯ ಸುತ್ತ ದಕ್ಷಿಣಕ್ಕೆ ಪ್ರಯಾಣ ಬೆಳೆಸಿದ. ಇಲ್ಲಿಗೆ ನಾವು ಅವನನ್ನು ಕೈಬಿಡಬಹುದು.

ಮಾರ್ಚ್ ೧೫೦೬ರಲ್ಲಿ ಪೋರ್ತುಗೀಜ ಹಡಗುಪಡೆ ಕಾಲಿಕಾತ್‌ದ ರಾಜನಿಗೆ ಸೇರಿದ ಚಿಕ್ಕ ದೋಣಿಗಳ ತಂಡವನ್ನು ವಿಪುಲ ಪ್ರಾಣಹಾನಿಯೊಂದಾಗಿ ನಾಶಪಡಿಸಿತು.

ಮರುವರ್ಷ ಪೋರ್ತುಗೀಜರು ಎಸಗಿದ ಅತ್ಯಾಚಾರ ಕಣ್ಣನೂರಿನಲ್ಲಿರುವ ಅವರ ಕಾರಖಾನೆಯ ಮುತ್ತಿಗೆಯಲ್ಲಿ ಪರಿಣಮಿಸಿತು, ಆದರೆ ತಾಯ್ನಾಡಿನಿಂದ ಹೊಸ ಪಡೆಯೊಂದಿಗೆ ಟ್ರಿಸ್ಟನ್ ದ ಕುನ್ಹಾನ ಸಕಾಲಿಕ ಆಗಮನ ಮುತ್ತಿಗೆ ಹಾಕಲ್ಪಟ್ಟ ಠಾಣ್ಯವನ್ನು ಬಿಡುಗಡೆಗೊಳಿಸಿತು. ೧೫೦೭ರ ಕೊನೆಯಲ್ಲಿ ಆಲ್ಮೈಡಾ ಮತ್ತು ದ ಕುನ್ಹಾ ತಮ್ಮ ಬಲಗಳನ್ನು ಒಟ್ಟುಗೂಡಿಸಿ ಪುನಃ ಕಾಲಿಕತ್‌ದ ಮೇಲೆ ಕೊಂಚ ಯಶಸ್ವಿಯಾಗಿ ದಾಳಿ ಮಾಡಿದರು.

ಅಲ್ಫೊನ್ಸೊ ದ ಅಲ್ಬುಕರ್ಕ್ ಈಗ ಪರ್ಷಿಯನ್ ಸಮುದ್ರಗಳಲ್ಲಿ ತನಗೆ ಸಿಕ್ಕ ಎಲ್ಲ ಮುಸಲ್ಮಾನರೊಂದಿಗೆ ಕಾದುತ್ತಿದ್ದ. ೧೫೦೯ರ ಕೊನೆಗೆ ಅವನು ಆಲ್ಮೈಡಾನ ಉತ್ತರಾಧಿಕಾರಿಯಾಗಿ "ಭಾರತದ ಮಂಡಲಾಧಿಪತಿ" ಅರ್ಥಾತ್ ಪೋರ್ತುಗೀಜ ಭಾರತದ ಆದ ಡಿಯೊಗೊ ಲೊಪ್ಸ್‌ದ ಸಿಕ್ವೆರಾ ಪೋರ್ತುಗಾಲದ ರಾಜನ ಅಧಿಪತ್ಯದಲ್ಲಿ ಕೇಪ್ ಕಾಮರಿನ್‌ದ ಪೂರ್ವಕ್ಕಿರುವ ಸಮುದ್ರಗಳ ಮಂಡಲಾಧಿಪತ್ಯ ಪಡೆದ.

ಕ್ರಿ.ಶ. ೧೫೦೯ ರಲ್ಲಿ ವಿಜಯನಗರದ ಸಿಂಹಾಸನದ ಮೇಲೆ ಕೃಷ್ಣದೇವರಾಯನ ಆರೋಹಣದಿಂದ ನಾವು ಮತ್ತೊಮ್ಮೆ ಕಡಿಮೆ ಗೋಜಲಾಗಿರುವ ಈ ಪ್ರದೇಶದ ಇತಿಹಾಸದ ಕಾಲಾವಧಿಯನ್ನು ಪ್ರವೇಶಿಸುತ್ತೇವೆ, ಮತ್ತು ಗಂಭೀರ ಅಡಚಣೆಯಿಲ್ಲದೆ ಘಟನಾವಳಿಯನ್ನು ಗುರುತಿಸಬಲ್ಲೆವು. ಇದು ವಿಜಯನಗರದ ಅತ್ಯಂತ ಮಹಾ ಯಶಸ್ಸಿನ ಕಾಲ. ಆಗ ಅದರ ಸೈನ್ಯಗಳು ಎಲ್ಲೆಡೆ ವಿಜಯಶಾಲಿಗಳಾಗಿದ್ದವು, ಮತ್ತು ನಗರ ಅತ್ಯಂತ ಸಮೃದ್ಧವಾಗಿತ್ತು.

---

1 ಮಹಾಮಂಡಲೇಶ್ವರ ಮೇದಿನೀಶ್ವರ ಗಂಡನ್ ಕಟ್ಟಾರಿ ಸಾಳುವ ಧರಣಿವರಾಹ ನರಸಿಂಹ ರಾಯ ಒಡೆಯರ. ಇವುಗಳು ರಾಜನ ಪದವಿಗಳಲ್ಲ (ಹುಲ್ಟ್ಜ್, "ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್," i, ೧೩೧, ಸಂ. ೧೧೬.)

2 ಮೇಲೆ ಹೇಳಿದ ಕೃತಿ, ಪು. ೧೩೨, ಸಂ. ೧೧೯.

3 ಮೇಲೆ ಹೇಳಿದ ಕೃತಿ, ಪು. ೧೩೧

4 ಸ್ಕಾಟ್‌ನ "ಫಿರಿಸ್ತಾ", i. ಪು. ೧೯೦, ೨೧೦ ; ಬ್ರಿಗ್ಸ್, ii, ೫೩೭, iii, ೧೦.

5 ಬ್ರಿಗ್ಸ್ ಅವನನ್ನು "ತಿಮ್ರಾಜ್" (ii, ೫೩೮) ಎಂದು ಎಲ್ಲ ಕಡೆಗೂ ಕರೆದಿದ್ದಾನೆ. ಆದ್ದರಿಂದ, ಈ ಅವತರಣಿಕೆಯಲ್ಲಿ ಸ್ಕಾಟ್‌ನ "ರಾಮರಾಜೆ" ಲೆಕ್ಕಣಿಕೆಯ ಕೈ ತಪ್ಪು ಎಂದು ನಾನು ತೀರ್ಮಾನಿಸುತ್ತೇನೆ. ಅದು ಪುನಃ ಜರುಗುವುದಿಲ್ಲ. ಮೊದಲ ಅನುವಾದಕ ಎರಡು ಅವತರಣಿಕೆಗಳಲ್ಲಿ ಎರಡನೆಯದರಲ್ಲಿ "ತಿಮ್ಮರಾಜ"ನನ್ನು ವಿಜಯನಗರದ ರಾಜನ ದಂಡನಾಯಕನೆಂದು ಕರೆಯುತ್ತಾನೆ.

6 ಸ್ಕಾಟ್, i, ಪು. ೨೨೮.
7 ಸ್ಕಾಟ್, i, ಪು. ೨೬೨.
8 ವಿರುಪಾಕ್ಷನ ಎರಡು ಮಕ್ಕಳ ಬಗೆಗೆ ನೂನಿಜ್ ಹೇಳಿದ ಕತೆಗೆ ಇದು ತೀರ ಸಾದೃಶವಾಗಿದೆ.
9 ಇದು ಕೂಡ ನೂನಿಜ್ ಹೇಳುವ ಮಂತ್ರಿ ನರಸ ಹಾಗೂ ಇಬ್ಬರು ಚಿಕ್ಕ ರಾಜರ ಕತೆಗೆ ಸಾದೃಶವಾಗಿದೆ.
10 ಸ್ಕಾಟ್, i. ಪು. ೨೫೨ ; ಬ್ರಿಗ್ಸ್ iii. ೬೬.
11 ಈ ಮೊದಲಿನ ಪರಿಚ್ಛೇದದಲ್ಲಿ ಫಿರಿಸ್ತಾ "ಕಲಹಗಳು ಬೀಜನಗರದಲ್ಲಿದ್ದವು" ಎಂದ ಹೇಳಿದ್ದಾನೆ.
12 ಏಪ್ರಿಲ್ ಕ್ರಿ.ಶ. ೧೪೯೩.
13 "ಸುಮಾರು ಒಂದು ದಶಲಕ್ಷ ಎಂಟನೂರು ಸಾವಿರ ಪೌಂಡುಗಳು" ಎಂದು ಇದಕ್ಕೆ ಸ್ಕಾಟ್‌ನ ಟಿಪ್ಪಣಿಯಿದೆ.
14 ಏಪ್ರಿಲ್ ೧೫೦೯ ರಿಂದ ಏಪ್ರಿಲ್ ೧೫೧೦.
15 ದ ಓರ್ಟಾ ನಮ್ಮ ದಿನಚರಿಗಾರ ನೂನಿಜ್ ಇದ್ದ ಕಾಲಕ್ಕೇ ೧೫೩೪ರಲ್ಲಿ ವಿಜಯನಗರದಲ್ಲಿದ್ದ.
16 ಅದುಮಾತು., x.
17 ಬ್ಯಾರೊಸ್‌ನ ಅಭಿಪ್ರಾಯದಲ್ಲಿ ಮೇ ೨೦.
18 ಇಂಗ್ಲೆಂಡ್‌ದ ಹ್ಯಾಕ್ಲುಟ್ ಸೊಸಾಟಿಯಿಂದ ಪ್ರಕಾಶಿತ.
19 'ಸಬಾಯೊ' ಎಂಬ ಹೆಸರಿನ ಮೂಲವನ್ನು ಬಹಳ ಸಲ ಚರ್ಚಿಸಲಾಗಿದೆ ಮತ್ತು ನನಗೆನಿಸುವಂತೆ, ಅದನ್ನು ಸಮಾಧಾನಕರವಾಗಿ ಸ್ಪಷ್ಟೀಕರಿಸಲಾಗಿಲ್ಲ. ಹಲವು ಹಳೆಯ ಲೇಖಕರು ವಿಷಯದ ಬಗೆಗೆ ತಮ್ಮ ಜಾಣ್ಮೆ ತೋರಿದ್ದಾರೆ. ಬ್ಯಾರೊಸ್ (Dco ii. I·v. Cap l) ಹೀಗೆ ಬರೆಯುತ್ತಾನೆ : "ನಾವು ಭಾರತ ತಲುಪಿದಾಗ ಗೋವಾ ನಗರದ ಒಡೆಯ ಮುಸಲ್ಮಾನನಾಗಿದ್ದ. ನಾವು ಸಾಮಾನ್ಯವಾಗಿ ಸಬಾಯೊ ಎಂದು ಕರೆಯುವ ದಖ್ಖನದ ರಾಜನ ದಳವಾಯಿಯಾಗಿದ್ದ ಅವನ ಹೆಸರು ಸೊಆಐ." ಆದರೆ ಭಾರತೀಯ ಹೆಸರುಗಳ ವಿಷಯದಲ್ಲಿ ಬ್ಯಾರೊಸ್‌ನನ್ನು ಯಾವಾಗಲೂ ಅವಲಂಬಿಸುವಂತಿಲ್ಲ. "ಸಬಾಯೊ" ಶಬ್ದ ಪರ್ಶಿಯನ್ "ಸಬಾ" ಅಥವಾ "ಸವಾ"ದಿಂದ ವ್ಯುತ್ಪತ್ತಿಯಾಗಿದೆ ಎಂದು ತಿಳಿಸಿ ಹೇಳುತ್ತ ಆದಿಲ್ ಶಾಹ ಸಬಾಯಿನ ಮಗನಾಗಿದ್ದನೆಂದು ಹೇಳುತ್ತಾನೆ. ಗ್ರಾಸಿಯಾ ದ ಓರ್ಟಾ ಅದನ್ನು "ಸಾಹಿಬ್" ಶಬ್ದದಿಂದ ವ್ಯುತ್ಪತ್ತಿಸುತ್ತಾನೆ. ಅದು "ಸಿಪಹದಾರ" ಅಥವಾ "ಸೈನಿಕ ಮಂಡಲಾಧಿಪತಿ"ಯ ಅಪಭ್ರಂಶವೆಂದು ಬರ್ಟನ್ ಬಗೆಯುತ್ತಾನೆ (ಲೂಸಿಯಡ್ಸ್, iii, ಪು. ೨೯೦).

20 ನಾನು ಮೂಲಕೃತಿ ನೋಡಿಲ್ಲ ಮತ್ತು ಇಲ್ಲಿ ಅನುವಾದ ದೋಷವನ್ನು ಶಂಕಿಸುತ್ತೇನೆ.

21 ಮಹಾನವಮಿ ಹಬ್ಬದಲ್ಲಿ ಮತ್ತು ಅದರ ನಂತರದ ಪ್ರದರ್ಶನದಲ್ಲಿ ತಾನು ನೋಡಿದ ಈ ಕುದುರೆಯ ಬಗೆಗೆ ಪ್ಯಾಸ್ ನೀಡಿರುವ ವರ್ಣನೆಯೊಂದಿಗೆ ಹೋಲಿಸಿರಿ (ಮುಂದೆ ಪು, ೨೭೨, ೨೭೮).

## ಅಧ್ಯಾಯ ೧೦

# ಕೃಷ್ಣದೇವರಾಯನ ಆಳಿಕೆ
## (ಕ್ರಿ.ಶ. ೧೫೦೯ ರಿಂದ ೧೫೩೦)

**ಅವನ ಸ್ವಭಾವ ಮತ್ತು ವ್ಯಕ್ತಿತ್ವ—ಬಂಕಾಪುರ – ಆಲ್ಮೈಡಾ ಮತ್ತು ಫಾದರ್ ಲೂಯಿಸ್‌ನ ಉದ್ದಿಷ್ಟ ಕಾರ್ಯ—ಡುಆರ್ಟ್ ಬರ್ಬೋಸಾ—ಅವನಿಂದ ನಗರದ ವರ್ಣನೆ – ರಾಜನ—ಆರಂಭಿಕ—ಯುದ್ಧಗಳು—ಕೊಂಡಪಲ್ಲಿ—ರಾಜಹಮಂದ್ರಿ —ಕೊಂಡವೀಡು—ಉದಯಗಿರಿ–ತೆಲಂಗಾಣದಲ್ಲಿ ಗೋಲ್ಕೊಂಡದ ಕುತುಬ್ ಶಾಹನ ಯುದ್ಧಗಳು.**

ಕೃಷ್ಣದೇವರಾಯನ ಪಟ್ಟಾಭಿಷೇಕದ ಸ್ಮರಣಾರ್ಥವಾಗಿ ಆಚರಿಸಲಾದ ಉತ್ಸವದ ಸಂದರ್ಭದಲ್ಲಿ ರಾಜನು ಅಲ್ಲಿ ಒಂದು ಸಭಾಭವನ ಮತ್ತು ಗೋಪುರ ಕಟ್ಟಿಸಿದನೆಂದು ಹಂಪಿಯ ಪಂಪಾಪತಿ ದೇವಾಲಯದಲ್ಲಿನ ಶಾಸನ ಹೇಳುತ್ತದೆ ; ದಿನಾಂಕವನ್ನು "ಶುಕ್ಲ[1]" ಆವರ್ತ ವರ್ಷದ, ಮುಕ್ತಾಯವಾದ ೧೪೩೦ ಶಕ ವರ್ಷದ ಚಂದ್ರಮಾಸ ಮಾಘದ ಪ್ರಥಮಾರ್ಧದ ೧೪ನೆಯದೆಂದು ಕೊಡಲಾಗಿದೆ. ಆದರೆ ಆಗಿರುವುದೇನೆಂದರೆ ಆವರ್ತ ವರ್ಷ ಶುಕ್ಲ ಮುಗಿದ ೧೪೩೦ನೆಯ ಶಕದೊಂದಿಗೆ ತಾಳೆಹೊಂದದೆ ಮುಗಿದ ೧೪೩೧ನೆಯ ಶಕದೊಡನೆ ಹೊಂದುತ್ತದೆ; ಈ ದುರದೃಷ್ಟಕರ ತಪ್ಪು ಆ ಮಹತ್ವದ ಘಟನೆಯ ದಿನಾಂಕದ ಬಗೆಗೆ ನಮ್ಮಲ್ಲಿ ಸಂದೇಹ ಉಂಟು ಮಾಡುತ್ತದೆ. ಬಹುಶಃ ದಿನಾಲು ಬಳಕೆಯಲ್ಲಿದ್ದ ವರ್ಷದ ಹೆಸರಿನಲ್ಲಿ ಪ್ರಮಾದವಾಗಿರದೆ ಶತವರ್ಷದ ಸಂಖ್ಯೆಯಲ್ಲಿ ಆಗಿದೆಯೆಂದು ನಾವು ಗ್ರಹಿಸುವುದಾದರೆ ಆ ದಿನಾಂಕ ೨೩ನೆಯ ಅಥವಾ ೨೪ನೆಯ ಜನವರಿ, ಕ್ರಿ.ಶ. ೧೫೧೦ಕ್ಕೆ ತಾಳೆ ಹೊಂದುತ್ತದೆ; ಆದರೆ ಶಕವರ್ಷದ ಸಂಖ್ಯೆ ಸರಿಯಿದ್ದು ಅದರ ಹೆಸರು ತಪ್ಪಾಗಿದ್ದರೆ ಆವರ್ತ ವರ್ಷ ನಿಜವಾಗಿ 'ವಿಭವ'ವಾಗಿದ್ದು ಆ ದಿನ ಫೆಬ್ರುವರಿ ೪, ೧೫೦೯ ಆಗಿರಬಹುದು. ಆದರೂ ಸಹ ಈ ಉತ್ಸವ ಪಟ್ಟಾಭೀಷೇಕದ ದಿನದಂದು ಜರುಗಿತೊ ಅಥವಾ ಆ ಘಟನೆಯ ವಾರ್ಷಿಕದಂದೊ ಎನ್ನುವದು ಖಚಿತವಿಲ್ಲ; ಮತ್ತು ರಾಜನ ಆರೋಹಣ ಮತ್ತು ಪಟ್ಟಾಭಿಷೇಕದ ಮಧ್ಯೆ ಗಮನಾರ್ಹ ಕಾಲಾಂತರ ಗತಿಸಿರಬಹುದು. ಬಹುಶಃ ನೂತನ ರಾಜ ಕ್ರಿ.ಶ. ೧೫೦೯ರಲ್ಲಿ[2] ಪಟ್ಟಕ್ಕೆ ಬಂದನೆಂದು ಗ್ರಹಿಸಿದರೆ ತಪ್ಪಾಗಲಾರದು.

ಅವನನ್ನು ೧೫೨೦ರ ಸುಮಾರಿಗೆ ನೋಡಿದ ಪ್ಯಾಸ್‌ನ ಉಜ್ವಲ ವರ್ಣನೆಯಿಂದ ನಿರ್ಣಯಿಸುವುದಾದರೆ ಕೃಷ್ಣರಾಯ ಬಲು ಪ್ರಭಾವಿ ವ್ಯಕ್ತಿತ್ವ ಪಡೆದಿದ್ದನೆಂದು ತೋರುತ್ತದೆ. ಅವನು ನೀಡಿದ ವೃತ್ತಾಂತ ಇನ್ನೂ ಅಧಿಕ ಸ್ವಾರಸ್ಯಕರ ಮತ್ತು ಅಮೂಲ್ಯವಾದುದೇಕೆಂದರೆ ಅದಿಲ್ಲದೆ ಹೋಗಿದ್ದರೆ ಈ ರಾಜ ಆ ಶಬ್ದದ ಸಾಮಾನ್ಯ ಅರ್ಥದಲ್ಲಿ ಆಳಿದ್ದನೊ ಅಥವಾ ಅವನ ಮಂತ್ರಿಯ ಕೈಯಲ್ಲಿ ಸಂಪೂರ್ಣ ಕೈಗೊಂಬೆ, ಬಹುಶಃ ನಿಜವಾದ ಸೆರೆಯಾಳು ಆಗಿದ್ದನೊ ಎಂಬ ಬಗೆಗೆ ಪ್ರಪಂಚಕ್ಕೆ ನ್ಯಾಯವಾದ ಸಂದೇಹವುಂಟಾಗುತ್ತಿತ್ತು. ಏಕೆಂದರೆ, ಫಿರಿಸ್ತಾ ಅವನನ್ನು ಹೆಸರೆತ್ತಿ ಪ್ರಸ್ತಾಪಿಸುವುದಿಲ್ಲ, ಮತ್ತು ಅವನ ವಿಜಯಗಳಿಗೆ ಸಂಬಂಧಿಸಿದ ಶಾಸನಗಳು ಅವುಗಳು ಅವನ ಆಳಿಕೆಯ ಕಾಲದಲ್ಲಿ ಜರುಗಿದವೆಂಬುದರಾಚೆ ಏನನ್ನೂ ಸಿದ್ಧಪಡಿಸುವುದಿಲ್ಲ. ನಮಗೆ ತಿಳಿದಮಟ್ಟಿಗೆ, ಅದು ಹೆಸರಿಗೆ ಮಾತ್ರ ಆಳಿಕೆಯಾಗಿದ್ದು ನಿಜವಾದ ಅಧಿಕಾರ ಮನ್ನೆಯರ ಕೈಯಲ್ಲಿ ಇದ್ದಿರಲೂಬಹುದಿತ್ತು. ಆದರೆ ಪ್ಯಾಸ್‌ನ ವರ್ಣನೆ ನಮ್ಮ ಕೈಯಲ್ಲಿರುವಾಗ ಸಂದೇಹದ ಛಾಯೆಯೂ ಸುಳಿಯದು. ಕೃಷ್ಣದೇವ ಹಕ್ಕಿನಿಂದ ಮಾತ್ರ ಅರಸನಾಗಿರದೆ ವಾಸ್ತವಿಕವಾಗಿಯೂ ವ್ಯಾಪಕ ಅಧಿಕಾರ ಹಾಗೂ ಪ್ರಬಲ ವೈಯುಕ್ತಿಯ ಪ್ರಭಾವವುಳ್ಳ ಪರಮ ಪ್ರಭುವಾಗಿದ್ದ. ಅವನು ನಿಜವಾದ ರಾಜನಾಗಿದ್ದ. ಅವನು ಹರೆಯದಲ್ಲಿ ದೈಹಿಕವಾಗಿ ಬಲಶಾಲಿಯಾಗಿದ್ದು ಕಠಿಣ ದೈಹಿಕ ವ್ಯಾಯಾಮದಿಂದ ತನ್ನ ಶಕ್ತಿಯನ್ನು ಅತ್ಯುನ್ನತಮಟ್ಟದಲ್ಲಿ ಕಾಯ್ದುಕೊಂಡುಬಂದಿದ್ದ. ಅವನು ಬೇಗನೆ ಎದ್ದು ಭಾರತೀಯ ಗದೆ ಮತ್ತು ಕತ್ತಿಯ ಬಳಕೆಯಿಂದ ತನ್ನೆಲ್ಲ ಸ್ನಾಯುಗಳನ್ನು ಬಲಪಡಿಸಿಕೊಳ್ಳುತ್ತಿದ್ದ; ಅವನು ಉತ್ತಮ ಸವಾರನಾಗಿದ್ದ, ತನ್ನ ಸಂಪರ್ಕದಲ್ಲಿ ಬಂದವರೆಲ್ಲರ ಮೇಲೆ ಒಳ್ಳೆಯ ಪ್ರಭಾವ ಬೀರುವಂಥ ಗಂಭೀರಾಕೃತಿ ಅವನದಾಗಿತ್ತು. ಅವನು ತನ್ನ ಬೃಹತ್ ಸೈನ್ಯಗಳ ಆಧಿಪತ್ಯ ಸ್ವತಃ ತಾನೆ ವಹಿಸುತ್ತಿದ್ದ. ಸಮರ್ಥನೂ ಶೂರನೂ ಮುತ್ಸದ್ದಿಯೂ ಆಗಿದ್ದುದಲ್ಲದೆ ಅಂತರ್ಯದಲ್ಲಿ ಮೃದು ಹಾಗೂ ಉದಾರ ಸ್ವಭಾವದವನಾಗಿದ್ದ. ಅವನನ್ನು ಎಲ್ಲರೂ ಪ್ರೀತ್ಯಾದರಗಳಿಂದ ಕಾಣುತ್ತಿದ್ದರು. ಅವನು "ಪ್ರತಾಪಶಾಲಿ ಹಾಗೂ ಎಲ್ಲ ವಿಷಯಗಳಲ್ಲಿ ಪರಿಪೂರ್ಣ"ನಾಗಿದ್ದನೆಂದು ಪ್ಯಾಸ್ ಬರೆಯುತ್ತಾನೆ. ಅವನ ವಂಶಚಿಹ್ನೆಯ ಢಾಲಿನ ಮೇಲೆ ಒಂದೇ ಒಂದು ಕುಂದ ಎಂದರೆ ಮಹಮ್ಮದೀಯ ರಾಜನ ವಿರುದ್ಧ ಪಡೆದ ಮಹಾ ಯಶಸ್ಸಿನ ನಂತರ ಅವನು ತನ್ನ ಬೇಡಿಕೆಗಳಲ್ಲಿ ಗರ್ವಿಷ್ಠ ಹಾಗೂ ದುರಹಂಕಾರಿಯಾದ. ಜಯಶಾಲಿ ವೈರಿಯ ಪಾದವನ್ನು ಮುತ್ತಿಡಬೇಕೆಂಬ ಶಾಂತಿಕರಾರಿನ ಇಂಗಿತವಾದ ಅವಮರ್ಯಾದೆಯನ್ನು ಆದಿಲ್ ಶಾಹನತಂಹ ಯಾವ ದೊರೆಯೂ ಒಂದು ಕ್ಷಣವೂ ಸಹಿಸಲು ಸಾಧ್ಯವಿಲ್ಲ; ಅನುಕ್ರಮಿಕ ಹಿಂದೂ ರಾಜರು ಗೈದ ಇದು ಮತ್ತು ಇದರಂತಹ ಉದ್ಧತ ದುರಹಂಕಾರಗಳೇ ಮುಂದೆ ನಲವತ್ತು ವರ್ಷಗಳ ತರುವಾಯ ಹಿಂದೂ ಸಾಮ್ರಾಜ್ಯದ ಅವನತಿಗೆ ನಿಸ್ಸಂದೇಹವಾಗಿಯೂ ಕಾರಣವಾದವು.

ಇಡಿ ದಕ್ಷಿಣ ಭಾರತ ಕೃಷ್ಣದೇವರಾಯನ ಅಧಿಪತ್ಯದಲ್ಲಿತ್ತು, ಮತ್ತು ಹಲವಾರು ಅರೆ-ಸ್ವತಂತ್ರ ದೊರೆಗಳು ಅವನ ಸಾಮಂತರಾಗಿದ್ದರು. ನೂನಿಜ್‌ನ ಪ್ರಕಾರ ಸೆರಿಂಗಪಟಮ್,ಬಂಕಾಪುರ,[3] ಗಾಸೊರ್ಪಾ, ಕಾಲಿಕತ್, ಭಟ್ಕಲ್ ಮತ್ತು ಬಾಕರ್ೂರಗಳ ದೊರೆಗಳೇ ಅವರು. ಪೋರ್ತುಗೀಜರು ಈ ಕಡಿಮೆ ದರ್ಜೆಯ ದೊರೆಗಳನ್ನು ರಾಜರೆಂದೆ ಪರಿಗಣಿಸಿದರು, ಅವರನ್ನು ಹಾಗೆಯೆ ಕರೆದರು ಮತ್ತು ಅವರಿಗೆ ನಿಸ್ಸಂದೇಹವಾಗಿಯೂ ಮೆಚ್ಚಿಗೆಯಾದಂತೆ ಅವರಲ್ಲಿಗೆ ರಾಯಭಾರಗಳನ್ನು ಕಳಿಸಿದರು.

ಹಂಪೆ ದೇವಾಲಯದ ಬ್ರಾಹ್ಮಣ ಸಂಸ್ಥೆಯ ಪ್ರಸ್ತುತ ಮುಖ್ಯಸ್ಥ ನನಗೆ ತಿಳಿಸಿದುದೇನೆಂದರೆ ಕೃಷ್ಣದೇವರಾಯ ದೇವಾಲಯದ ದ್ವಾರದಲ್ಲಿರುವ ದೊಡ್ಡ ಗೋಪುರವನ್ನು ಕಟ್ಟಿಸಿ ತನ್ನ ಆರೋಹಣವನ್ನಾಚರಿಸಿದ ಮತ್ತು ಮುಂದಿನ ಅತ್ಯಂತ ದೊಡ್ಡ ಗೋಪುರವನ್ನು ಸ್ವಲ್ಪ ಸಮಯಾನಂತರ ಕಟ್ಟಿಸಿದ. ಅಧಿಕಾರಕ್ಕೆ ಬರುತ್ತಲೆ ರಾಜನು ಸಾಳುವ ತಿಮ್ಮನನ್ನು ಮಂತ್ರಿಯಾಗಿ ನಿಯಮಿಸಿ, ಹಿಂದಿನ ರಾಜನ ದೊರೆಯ ಮಗ ಹಾಗೂ ಸೋದರಳಿಯನನ್ನು ಹಾಗೂ ತನ್ನ ಮೂವರು ಸ್ವಂತ ಸಹೋದರರನ್ನು ತನ್ನ ಅಧಿಕ ಸುರಕ್ಷಿತೆಗಾಗಿ ಇನ್ನೂರು ಮೈಲು ಆಗ್ನೇಯಕ್ಕಿರುವ ಚಂದ್ರಗಿರಿ ಕೋಟೆಗೆ ಕಳಿಸಿ ತಾನು ಮಾತ್ರ ಸ್ವಲ್ಪ ಕಾಲ ರಾಜಧಾನಿಯಲ್ಲಿಯೆ ಉಳಿದನೆಂದು ನೂನಿಜ್ ಹೇಳುತ್ತಾನೆ. ಇದು ಇತರ ಪೋರ್ತುಗೀಜರ ಬರಹಗಳೊಂದಿಗೆ ಸಹಮತ ಹೊಂದುತ್ತದೆ. ಅವರು ಹೇಳುವುದೇನೆಂದರೆ ಫಾದರುಗಳಾದ ಲುಯಿಸ್ ಮತ್ತು ಚನೋಕಾರ ನಿಯೋಗಗಳು ಕಾಲಿಕತ್‌ದಿಂದ ಮತ್ತು ಗೋವಾದಿಂದ ಕಳಿಸಲ್ಪಟ್ಟಾಗ ಏನಿಲ್ಲೆಂದರೂ ಎರಡು ಸಂದರ್ಭಗಳಲ್ಲಿ ರಾಯಭಾರಿಗಳು ಖುದ್ದಾಗಿ ವಿಜಯನಗರದಲ್ಲಿ ರಾಜನನ್ನು ನೋಡಿದರು.

ಮೇಲೆ ಹೇಳಿರುವಂತೆ, ಕೃಷ್ಣನ ಆಳಿಕೆಯ ಆರಂಭಕ್ಕೆ ಆಲ್ಮೈಡಾ ಕರಾವಳಿಯಲ್ಲಿನ ಪೋರ್ತುಗೀಜ ವಸಾಹತುಗಳ ವೈಸ್‌ರಾಯ್ ಆಗಿದ್ದ, ಆದರೆ ೧೫೦೯ನೆಯ ವರ್ಷದ ಕೊನೆಗೆ ಅಲ್ಬುಕರ್ಕ್ ಅವನ ನಂತರ ಪ್ರಾಂತಾಧಿಪತಿ ಎಂಬ ಹೆಸರಿನಲ್ಲಿ ಬಂದ. ಅಲ್ಬುಕರ್ಕ್ ಕಾಲಿಕತ್‌ದಲ್ಲಿ ಘೋರ ಅಪಜಯ ಅನುಭವಿಸಿ ಸೇಂಟ್ ಫ್ರಾನ್ಸಿಸ್ ಸಂಘದ ಫಾದರ್ ಲುಯಿಸ್‌ನನ್ನು ವಿಜಯನಗರಕ್ಕೆ ರಾಯಭಾರಿಯಾಗಿ ಕಳಿಸಿ, ತಾನು ಸ್ವತಃ ಅದೇ ಕಾಲಕ್ಕೆ ಸಮುದ್ರದಿಂದ ಆಕ್ರಮಣ ಮಾಡುವ ವಚನವಿತ್ತು, ರಾಯನನ್ನು ಭೂಮಾರ್ಗವಾಗಿ ಬಂದು ಕಾಲಿಕತ್ತದ ಸಮೂರಿಯನ್ನು ಅಡಗಿಸಬೇಕೆಂದು ಯಾಚಿಸಿದ[4] ಮುಸಲ್ಮಾನರ ವಿರುದ್ಧ ಯುದ್ಧ ಮಾಡಬೇಕಲ್ಲದೆ ಹಿಂದೂಗಳ ವಿರುದ್ಧ ಅಲ್ಲ ಎಂದು ತನಗೆ ತನ್ನ ಒಡೆಯ ಪೋರ್ತುಗಾಲದ ರಾಜನಿಂದ ಆಜ್ಞೆಯಿದೆ, ಪ್ರಾಂತಾಧಿಪತಿ ಕಾಲಿಕತ್ತನನ್ನು ನಾಶಪಡಿಸಿದ್ದ ಮತ್ತು ಆದರ ರಾಜ ಒಳನಾಡಿನೊಳಕ್ಕೆ ಓಡಿಹೋಗಿದ್ದ, ತಾನು ಆ ಸ್ಥಳದ ವಿಜಯಕ್ಕಾಗಿ ತನ್ನ ಹಡಗು ಪಡೆಯನ್ನು ವಿಜಯನಗರದ ರಾಜನ ನೆರವಿಗೆ ನೀಡುವನು, ಕಾಲಿಕತ್ ಸ್ವಾಧೀನ

ಪಡಿಸಿಕೊಂಡ ತಕ್ಷಣ ಮುಸಲ್ಮಾನರನ್ನು ಅಲ್ಲಿಂದ ಹೊರದಬ್ಬಲಾಗುವುದು, ಮತ್ತು ಪೋರ್ತುಗೀಜರು ವಿಜಯನಗರದ ರಾಜನಿಗೆ ಅವನ ವೈರಿಗಳಾದ ದಖ್ಖನದ ಮುಸಲ್ಮಾನರ ವಿರುದ್ಧ ನೆರವು ನೀಡುವರು ಎಂದು ಮುಂತಾಗಿ ಘೋಷಿಸಿದ. ಅರಬ್ಬಿ ಮತ್ತು ಪರ್ಶಿಯನ್ ಕುದುರೆಗಳನ್ನು ಇನ್ನು ಮುಂದೆ ವಿಜಯನಗರಕ್ಕೆ ಮಾತ್ರವೆ ಪೂರೈಸುವದಾಗಿಯೂ ಬಿಜಾಪುರಕ್ಕೆ ಕಳಿಸುವುದಿಲ್ಲವೆಂದೂ ವಚನವಿತ್ತ. ಯಾವ ಉತ್ತರವೂ ಬರಲಿಲ್ಲ.

ಆಗ ಆದಿಲ್ ಶಾಹನ ಅಧೀನದಲ್ಲಿದ್ದ ಗೋವಾದ ಮೇಲೆ ಅಲ್ಬುಕರ್ಕ್ ನಂತರ ಆಕ್ರಮಣ ಮಾಡಿದ, ಆ ಸ್ಥಳವನ್ನು ವಶಪಡಿಸಿಕೊಂಡು ಮಾರ್ಚ್ ಕ್ರಿ.ಶ. ೧೫೧೦ ರಲ್ಲಿ ಅದರಲ್ಲಿ ವಿಜಯೋತ್ಸವದ ಪ್ರವೇಶ ಮಾಡಿದ. ಅದಾದ ಕೂಡಲೆ ಗಾಸ್ಪರ್ ಚನೋಕಾನನ್ನು ನಿಯೋಗದ ಮೇಲೆ ವಿಜಯನಗರಕ್ಕೆ ಕಳಿಸಿ ಪೋರ್ತುಗೀಜ ವ್ಯಾಪಾರದ ಸಂರಕ್ಷಣೆಗಾಗಿ ಭಟ್ಕಳದಲ್ಲಿ ಕೋಟೆ ಕಟ್ಟಲು ಮಾಡಿಕೊಳ್ಳಲಾಗಿದ್ದ ಅಲ್ಮೈಡಾನ ಮನವಿಯನ್ನು ಪುನರುಚ್ಚರಿಸಿದ. ತನ್ನನ್ನು ವಿದ್ಯುಕ್ತವಾಗಿ ಬರಮಾಡಿ ಕೊಳ್ಳಲಾಯಿತಾದರೂ ಕೃಷ್ಣದೇವರಾಯ ಸೌಜನ್ಯಪೂರ್ಣ ಪದಗಳಲ್ಲಿ ಸಾಮಾನ್ಯ ಉತ್ತರ ನೀಡಿದನೆ ಹೊರತು ಪ್ರಾಂತಾಧಿಪತಿಯ ಮನವಿಯನ್ನು ನಿರ್ದಿಷ್ಟವಾಗಿ ಮಾನ್ಯ ಮಾಡಲಿಲ್ಲ, ಆಗ ರಾಜನು ಆದಿಲ್ ಶಾಹನೊಂದಿಗೆ ಶಾಂತಿ ಒಪ್ಪಂದ ಮಾಡಿ ಕೊಂಡಿದ್ದುದೆ ಅದಕ್ಕೆ ಕಾರಣವಾಗಿತ್ತು ಎಂದು ಮುಂತಾಗಿ ಚನೋಕಾ ವರದಿ ಮಾಡಿ ರುವುದಾಗಿ ಬ್ಯಾರೋಸ್ ಹೇಳುತ್ತಾನೆ.[5] ಎಣಿಸಿಕೊಂಡಂತೆ ಆದಿಲ್ ಶಾಹ ಗೋವಾ ವನ್ನು ಮರಳಿ ಪಡೆಯುವಂತೆ ಮಾಡಲೋಸುಗವೆ ಈ ಒಪ್ಪಂದವನ್ನು ಮಾಡಿಕೊಳ್ಳ ಲಾಗಿತ್ತು.[6]

ಇದಾದ ಮೇಲೆ ಪೋರ್ತುಗೀಜರಿಂದ ಗೋವಾ ಸ್ವಾಧೀನಕ್ಕೆ ಅಲ್ಬುಕರ್ಕ್‌ನನ್ನು ಅಭಿನಂದಿಸುವ ಮತ್ತು ಆದಿಲ್ ಶಾಹ್‌ನ ವಿರುದ್ಧ ಅವರಿಗೆ ನೆರವು ನೀಡುವ ಸಂದೇಶವನ್ನು ವಿಜಯನಗರದಿಂದ ಕಳಿಸಲಾಯಿತು. ಆದರೆ ಈ ನೆರವನ್ನು ಕೊಟ್ಟಂತೆ ತೋರುವುದಿಲ್ಲ. ಮುಹಮ್ಮದೀಯ ಸೈನ್ಯ ಮೇದಲ್ಲಿ ಗೋವಾದ ಮೇಲೆ ದಾಳಿ ಮಾಡಿದರು ಮತ್ತು ಘೋರ ಕದನದ ನಂತರ ಯಶಸ್ವಿಯಾದರು. ಅಲ್ಲಿನ ನೂರೈವತ್ತು ಮುಹಮ್ಮದೀಯ ಪ್ರಮುಖರ ತಲೆ ಕತ್ತರಿಸಿದ ಮತ್ತು ಅವರ ಹೆಂಡಂದಿರು ಮಕ್ಕಳನ್ನು ಕೊಲೆ ಮಾಡಿದ ನಂತರ ಅಲ್ಬುಕರ್ಕ್ ಆ ಸ್ಥಳ ತೆರವು ಮಾಡಿದ.[7]

ಅದೇ ವರ್ಷ ನವಂಬರನಲ್ಲಿ ಇಸ್ಮಾಯಿಲ್ ಆದಿಲ್ ಶಾಹನ ಗಮನವನ್ನು ಬಿಜಾಪುರದಲ್ಲಿನ ಕಲಹ ಸೆಳೆಯಲಾಗಿ ಅಲ್ಬುಕರ್ಕ್ ಗೋವಾದಲ್ಲಿ ಇಸ್ಮಾಯಿಲ್‌ನ ಪ್ರತಿನಿಧಿಯಾಗಿದ್ದ ರಸೂಲ ಖಾನ ಮತ್ತು ಅವನ ಅಧಿಪತ್ಯದಲ್ಲಿನ ಎಂಟುಸಾವಿರ ಯೋಧರ ಮೇಲೆ ಆಕ್ರಮಣ ಮಾಡಿ, ಅವರನ್ನು ಸೋಲಿಸಿ, ಆ ಸ್ಥಳವನ್ನು

ಡಿಸೆಂಬರ ೧ ರಂದು ಮರಳಿ ವಶಪಡಿಸಿಕೊಂಡ ಮತ್ತು ಮಹಮ್ಮದೀಯರ ಆರುಸಾವಿರ ಪುರುಷರು, ಮಹಿಳೆಯರು ಮತ್ತು ಮಕ್ಕಳನ್ನು ಕೊಂದ. ಇದಾದ ನಂತರ ತರುಣ ಆದಿಲ್ ಶಾಹನ ಮಂತ್ರಿ ಕುಮ್ಮಲ್ ಖಾನ್ ಐರೋಪ್ಯರೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡ ಮತ್ತು ಅವರು ಗೋವಾದಲ್ಲಿ ಭದ್ರವಾಗಿ ನೆಲೆಸಲು ಬಿಟ್ಟ ಎಂದು ಫಿರಿಸ್ತಾ ಹೇಳುತ್ತಾನೆ. ಆದರೆ ಇದು ಸರಿಯಲ್ಲ, ಏಕೆಂದರೆ, ರಸೂಲ ಖಾನ ೧೫೧೨ರಲ್ಲಿ ಆ ಸ್ಥಳವನ್ನು ಮರಳಿ ವಶಪಡಿಸಿಕೊಳ್ಳಲು ಉಗ್ರ ಪ್ರಯತ್ನ ಮಾಡಿದ. ಆದರೆ ಘೋರ ಕದನದ ನಂತರ ವಿಫಲನಾದ.[೪]

ಡಿಸೆಂಬರ ೧೫೧೦ರಲ್ಲಿ ಅಲ್ಬುಕರ್ಕ್‌ನ ಯಶಸ್ಸಿನ ಸುದ್ದಿ ವಿಜಯನಗರ ತಲುಪಿದ ತಕ್ಷಣ ಕೃಷ್ಣದೇವರಾಯ ಗೋವಾಕ್ಕೆ ರಾಯಭಾರಿಗಳನ್ನು ಕಳಿಸಿದ, ಮತ್ತು ಅವರ ಮೂಲಕ ಫಾದರ್ ಲುಯಿಸ್ ತನ್ನ ಉದ್ದಿಷ್ಟ ಕಾರ್ಯದ ಫಲ ವಿವರಿಸಿ ಅಲ್ಬುಕರ್ಕ್‌ನಿಗೆ ಪತ್ರ ಕಳಿಸಿದ. ಅವನನ್ನು "ರಾಜನ ಹೊರತಾಗಿ ಎಲ್ಲರೂ ಚನ್ನಾಗಿ ಆದರಿಸಿದ್ದರು," ಆದರೆ ಹಾಗಿದ್ದರೂ ಸಹ ಭಟ್ಕಳದಲ್ಲಿ ಕೋಟೆ ಕಟ್ಟಲು ಪೋರ್ತುಗೀಜರಿಗೆ ಅನುಮತಿ ನೀಡಿದ್ದ. ಬಡಪಾಯಿ ಫಾದರ್ ಲುಯಿಸ್ ತನ್ನ ರಾಯಭಾರದಿಂದ ಮರಳಲೆ ಇಲ್ಲ. ಅವನಿಗೆ ಏನಾಯಿತು ಅಥವಾ ದುರಂತಕ್ಕೆ ಏನು ಕಾರಣ ಎಂಬುದರ ಬಗೆಗೆ ಇತಿಹಾಸ ಮೌನವಾಗಿದೆ, ಆದರೆ ಒಂದು ದಿನ ವಿಜಯನಗರ ನಗರದಲ್ಲಿ ಅವನನ್ನು ಕೊಲೆ ಮಾಡಲಾಗಿತ್ತು.

ಅವನ ರವಾನೆ ವಿಜಯನಗರ ಮತ್ತು ಬಿಜಾಪುರದ ಸುಲ್ತಾನನ ಬಗೆಗೆ ಮಾಹಿತಿ ಒಳಗೊಂಡಿರುವುದರಿಂದ ಸ್ವಾರಸ್ಯಕರವಾಗಿದೆ. ಅದರ ಕೆಲವು ಭಾಗ ಖಂಡಿತವಾಗಿಯೂ ನಿಷ್ಕೃಷ್ಟವಾಗಿದೆ. ಕೆಲವು ಭಾಗ ಈ ಕಾಲದಲ್ಲಿ ಕೃಷ್ಣದೇವ ರಾಯನ ವ್ಯವಹಾರಗಳ ಬಗೆಗೆ ವಿವರಿಸುತ್ತದೆ. ಅವುಗಳ ಬಗೆಗೆ ನಮಗೆ ಯಾವ ಮೂಲದಿಂದಲೂ ಏನೂ ತಿಳಿಯದು. ಆದಿಲ್ ಶಾಹ ಬಿಜಾಪುರದ ಮೇಲೆ ದಾಳಿ ಮಾಡಿದ, ಮತ್ತು ಎರಡು ತಿಂಗಳ ಮುತ್ತಿಗೆಯ ನಂತರ ಅದನ್ನು ವಶಪಡಿಸಿಕೊಂಡ, ಆಗ ನಾಲ್ಕು ಜನ ವರಿಷ್ಠರು ಅವನ ವಿರುದ್ಧ ಬಂಡೆದ್ದರು, ಏಕೆಂದರೆ ಅವನು ಡೆಕ್ಕನದ ರಾಜನನ್ನು ಸೆರೆಯಾಳಾಗಿ ತೆಗೆದುಕೊಂಡು ಹೋಗಿದ್ದ" ಎಂದು ಫಾದರ್ ಲುಯಿಸ್ ಅಲ್ಬುಕರ್ಕ್‌ನಿಗೆ ಬರೆದ. ಈ ರಾಜನೆಂದರೆ ಬಾಹಮನಿ ರಾಜ ಮತ್ತು ಆದಿಲ್ ಶಾಹ ಮತ್ತು 'ನಾಲ್ವರು ವರಿಷ್ಠರು' ಎಂದರೆ ಬಂಡೆದ್ದ ಮಹಮ್ಮದೀಯ ರಾಜರು. ಬೆಳಗಾಂವಿಯ ಜನರು ಆದಿಲ್ ಶಾಹನ ವಿರುದ್ಧ ಬಂಡೆದ್ದು ಹಿಂದೂ ರಾಜನಿಗೆ ಅಧೀನರಾದರು ಎಂದು ಅವನು ಸೇರಿಸಿದ. ವಿಜಯನಗರದ ಬಗೆಗಾದರೊ, ಪೆರುಗಂಡ (? ಪೆನ್ನಕೊಂಡ) ಹಕ್ಕಿನಿಂದ ತನಗೇ ಸೇರಿದ್ದೆಂದು ಹೇಳುತ್ತ ಅದನ್ನು ವಶಪಡಿಸಿಕೊಂಡು ಬಂಡೆದ್ದಿದ್ದ ತನ್ನ ಸಾಮಂತನೊಬ್ಬನ ವಿರುದ್ಧ ಕಳಿಸಲೋಸುಗ ರಾಜ ಏಳು ಸಾವಿರ ಯೋಧರ ದಂಡಯಾತ್ರೆಯನ್ನು ಸನ್ನದ್ಧಗೊಳಿಸುತ್ತಿದ್ದನು

ಮತ್ತು ಬಂಡುಕೋರರನ್ನು ಅಡಗಿಸಿದ ಮೇಲೆ ರಾಜನು ಸಮುದ್ರ ಕರಾವಳಿಯ ಮೇಲಿರುವ ಕೆಲವು ಸ್ಥಳಗಳಿಗೆ ಹೋಗಬಯಸಿದ್ದನು ಎಂದು ಅವನು ಹೇಳುತ್ತಾನೆ. ಈ ಎರಡನೆಯ ಸಂಚಿನ ಅನಿಶ್ಚಿತ ಪ್ರವೃತ್ತಿಯನ್ನು ತಿಳಿದುಕೊಳ್ಳಲು ತನಗೆ ಸಾಧ್ಯವಾಗಲಿಲ್ಲವೆಂದು ಒಪ್ಪಿಕೊಂಡ ಫಾದರ್ ಲುಯಿಸ್ ಜಾಗರೂಕನಾಗಿ ಮಾತ್ರ ಇರಬೇಕೆಂದು ಅಲ್ಬುಕರ್ಕ್‌ನಿಗೆ ಎಚ್ಚರಿಕೆ ನೀಡಿದನು. ರಾಜನೊಂದಿಗೆ ಮೈತ್ರಿಯುತ ಸಂಪರ್ಕವಿರಿಸಿಕೊಳ್ಳಲು ಮತ್ತು ಹೊಸದಾಗಿ ಬಂದವರೊಂದಿಗೆ ಸ್ನೇಹ ಬೆಳೆಸಿದ ಪೋರ್ತುಗೀಜರು ಎಲ್ಲ ನಂಬಿಕೆ ಇಟ್ಟಿದ್ದ ತಿಮೋಜ[10] ಎಂಬವನ ಮೇಲೆ ಯಾವುದೆ ವಿಶ್ವಾಸವನ್ನಿಡಬಾರದೆಂದು ಸಲಹೆ ನೀಡಿದ್ದ. ತಿಮೋಜ ತಮ್ಮ ದ್ರೋಹಿಯೆಂದು ಮತ್ತು ಕೃಷ್ಣದೇವರಾಯ ಆ ಸ್ಥಳವನ್ನು ವಶಪಡಿಸಿಕೊಳ್ಳಲು ಒಂದು ಸುಸಜ್ಜಿತ ಸೈನ್ಯ ಕಳಿಸುವುದಾದರೆ ಪೋರ್ತುಗೀಜರು ಅಲ್ಲಿನ ತಮ್ಮ ಸ್ವಾಧೀನಗಳನ್ನು ಬಲಪಡಿಸಿಕೊಳ್ಳುವ ಮೊದಲೆ ಗೋವಾವನ್ನು ಅವನಿಗೆ ಒಪ್ಪಿಸುವುದಾಗಿ ಗಾರ್ಸೋಪಾದ ರಾಜನೊಂದಿಗೆ ವಚನವಿತ್ತಿದ್ದ ಎಂದು ಪಾದ್ರಿ ಘೋಷಿಸಿದ.

ಅಲ್ಬುಕರ್ಕ್ ಗೋವಾವನ್ನು ಎರಡನೆಯ ಸಲ ವಶಪಡಿಸಿಕೊಂಡ ನಂತರ ಬಂಕಾಪುರದ ದೊರೆ ಪೋರ್ತುಗೀಜರಿಗೆ ಅಭಿನಂದನ ಸಂದೇಶ ಕಳಿಸಿದ ಮತ್ತು ಪ್ರತಿ ವರ್ಷ ಮುನ್ನೂರು ಕುದುರೆಗಳನ್ನು ಆಮದು ಮಾಡಿಕೊಳ್ಳಲು ಅನುಮತಿ ಕೋರಿದ. ಆ ಊರು ವಿಜಯನಗರದ ದಾರಿಯಲ್ಲಿದ್ದುದರಿಂದ ಮತ್ತು ಅದರ ದೊರೆ ಐರೋಪ್ಯರೊಂದಿಗೆ ಮೈತ್ರಿಯುತ ಸಂಬಂಧ ಹೊಂದಿರಬೇಕಾದುದು ಮಹತ್ವದ್ದಾಗಿದ್ದುದರಿಂದ ಕೋರಿಕೆಯನ್ನು ಮನ್ನಿಸಲಾಯಿತು. ಮೇಲಾಗಿ ಬಂಕಾಪುರದಲ್ಲಿ ಅನೇಕ ಉತ್ಕೃಷ್ಟ ಜೀನುಗಾರರಿದ್ದರು.[11]

ಕೃಷ್ಣದೇವರಾಯನ ಕಾತರ ಕುದುರೆಗಳನ್ನು ಪಡೆಯುವುದೆ ಆಗಿತ್ತು. ಕರಾವಳಿಯಲ್ಲಿದ್ದ ವಿದೇಶಿ ವಸಾಹತುಗಳನ್ನು ರಾಜಕೀಯ ಶಕ್ತಿಯೆಂದೇನೂ ಅವನು ಪರಿಗಣಿಸಿರಲಿಲ್ಲ. ಆದರೆ ಆದಿಲ್ ಶಾಹ್‌ನೊಂದಿಗೆ ತನ್ನ ನಿರಂತರ ಯುದ್ಧಗಳಿಗಾಗಿ ಹೆಚ್ಚು, ಇನ್ನೂ ಹೆಚ್ಚು ಕುದುರೆಗಳು ಅವನಿಗೆ ಬೇಕಿದ್ದವು ; ಮತ್ತು ಅಲ್ಬುಕರ್ಕ್ ಮಹಮ್ಮದೀಯನೊಂದಿಗೆ ಸ್ವಲ್ಪ ಚೆಲ್ಲಾಟವಾಡಿ ಹಿಂದೂನನ್ನು ಒಂದು ಸಂದೇಶ ಕಳಿಸಿ ಸಂತೋಷಪಡಿಸಿದನು. ದಂಡು ಕುದುರೆಗಳನ್ನು ಬಿಜಾಪುರದ ಸುಲ್ತಾನನಿಗೆ ಪೂರೈಸುವುದಕ್ಕಿಂತ ಅವನಿಗೇ ಕಳಿಸಲು ಹೆಚ್ಚು ಇಷ್ಟಪಡುವುದಾಗಿ ಅದರಲ್ಲಿ ಘೋಷಿಸಲಾಗಿತ್ತು.

೧೫೧೨ರ ಸುಮಾರಿಗೆ ಪರಿಸ್ಥಿತಿಯ ಪ್ರಯೋಜನ ಪಡೆದು ಕೃಷ್ಣದೇವರಾಯ ಸುಲ್ತಾನನ ಪ್ರದೇಶಗಳ ಮೇಲೆ ದಾಳಿಯಿಟ್ಟು ರಾಯಚೂರ ಕೋಟೆಯ ಮೇಲೆ ಆಕ್ರಮಣ ಮಾಡಿದ. ಅದನ್ನು ಕೊನೆಗೆ ರಾಣ್ಯ ಅವನಿಗೆ ಬಿಟ್ಟುಕೊಟ್ಟಿತು ; ಸರಕಾರದ ಆಂತರಿಕ ವ್ಯವಹಾರಗಳತ್ತ ಗಮನ ನೀಡಲು ತೀರ ನಿರತನಾಗಿದ್ದ

ಇಸ್ಮಾಯಿಲ್ ಆದಿಲ್‌ನಿಗೆ ಆದಕ್ಕೆ ಸಕಾಲಿಕ ನೆರವು ಕಳಿಸಲಾಗಲಿಲ್ಲ. ಹೀಗೆಂದು ಫಿರಿಸ್ತಾ ಹೇಳುತ್ತಾನೆ.[12] ಈ ಘಟನೆಯನ್ನು ನೂನಿಜ್ ಗಮನಿಸಿಲ್ಲ. . ಆಗ ಶಾಹನ ವಶದಲ್ಲಿದ್ದ ರಾಯಚೂರಿನ ಮೇಲೆ ಆಕ್ರಮಣ ಮಾಡಲು ೧೫೨೦ರಲ್ಲಿ ನಡೆದುದೇ ಆದಿಲ್‌ಶಾಹನ ವಿರುದ್ಧ ರಾಯನ ಪ್ರಥಮ ದಂಡಯಾತ್ರೆ ಎಂಬಂತೆಯೆ ಅವನು ಬರೆದಿದ್ದಾನೆ, ಇಲ್ಲಿ ನೂನಿಜ್ ಮತ್ತು ಫಿರಿಸ್ತಾರ ಕಥೆಗಳ ನಡುವೆ ವ್ಯತ್ಯಾಸವನ್ನು ನಾವು ಗಮನಿಸುತ್ತೇವೆ. ಏಕೆಂದರೆ, ಎರಡನೆಯವನು ಅದೇ ಘಟನೆಯ ಅಂದರೆ ೧೫೨೦ರ ದಂಡಯಾತ್ರೆಯ ಬಗೆಗೆ ಬರೆಯುತ್ತ ಹೇಳುವುದೇನೆಂದರೆ, ಮೇಲೆ ಹೇಳಿದಂತೆ ರಾಯ ಈ ನಗರಗಳನ್ನು ೧೫೧೨ರ ಸುಮಾರಿಗೆ ವಶಪಡಿಸಿಕೊಂಡಿದ್ದರಿಂದ "ಇಸ್ಮಾಯಿಲ್ ಆದಿಲ್ ಶಾಹ ಬೀಜನಗರದ ರಾಯನಿಂದ ಮುದಕಲ್ ಮತ್ತು ರಾಯಿಚೋರ್‌ಗಳನ್ನು ಪುನಃ ವಶಪಡಿಸಿಕೊಳ್ಳಲು ದಂಡೆತ್ತಿ ಹೋಗುವ ಸಿದ್ಧತೆ ಮಾಡಿಕೊಂಡನು."[12] ಯಾವ ವೃತ್ತಾಂತ ಸರಿಯಾದುದೆಂದು ನಾನು ಹೇಳಲಾರೆ.

ಕ್ರಿ.ಶ. ೧೫೧೪ರಲ್ಲಿ ಕೃಷ್ಣದೇವರಾಯ ಕುದುರೆ ವ್ಯಾಪಾರದ ವ್ಯಾವರ್ತಕ ಹಕ್ಕಿಗಾಗಿ ಅಲ್ಬುಕರ್ಕ್‌ನಿಗೆ ೨೦,೦೦೦ ಪೌಂಡುಗಳನ್ನು ಕೊಡುವುದಾಗಿ ಹೇಳಿದಂತೆ ತೋರುತ್ತದೆ, ಆದರೆ ತೀಕ್ಷ್ಣ ವ್ಯವಹಾರ ದೃಷ್ಟಿಯಿಂದ ಪೋರ್ತುಗೀಜ ಪ್ರಾಂತಾಧಿಪತಿ ನಿರಾಕರಿಸಿದನೆಂದು[13] ಸ್ವಲ್ಪ ಕಾಲಾನಂತರ ಹಿಂದೂ ರಾಜ ಆದಿಲ್‌ಶಾಹನ ವಿರುದ್ಧ ಯುದ್ಧ ಮಾಡುವ ಉದ್ದೇಶ ಪ್ರಸ್ತಾಪ ಮಾಡಿದ; ಈ ಸುದ್ದಿ ತಿಳಿದ ಆದಿಲ್ ಶಾಹ ತಾನೇ ಗೋವಾಕ್ಕೆ ರಾಯಭಾರ ಕಳಿಸಿದ. ಈಗ ಒಂದಿಷ್ಟು ರಾಜಕೀಯ ಮಹತ್ವದ ಸ್ಥಾನದಲ್ಲಿದ್ದ ಅಲ್ಬುಕರ್ಕ್ ಮೊದಲು ವಿಜಯನಗರಕ್ಕೆ ಬರೆದ ಪತ್ರದ ಒಕ್ಕಣೆ ಹೀಗಿತ್ತು : ರಾಯ ಪೂರೈಕೆಗಾಗಿ ಪ್ರತಿ ವರ್ಷ ೩೦,೦೦೦ ಕ್ರುಜೆಡೊಗಳನ್ನು ಕೊಡುವುದಾದರೆ ಮತ್ತು ಕುದುರೆಗಳನ್ನು ತರಲು ಗೋವಾಕ್ಕೆ ತನ್ನದೇ ಆಳುಗಳನ್ನು ಕಳಿಸುವುದಾದರೆ ರಾಯನಿಗೆ ತನ್ನೆಲ್ಲ ಕುದುರೆಗಳನ್ನು ಕೊಳ್ಳುವ ಇಲ್ಲವೆ ಬಿಡುವ ಹಕ್ಕನ್ನು ನೀಡಲಾಗುವುದು ಹಾಗೂ ತನ್ನ ಸೈನಿಕರ ಖರ್ಚು ವಹಿಸುವುದಾದರೆ ತಾನು ರಾಜನಿಗೆ ಯುದ್ಧದಲ್ಲಿ ನೆರವಾಗುವನು. ತದನಂತರ ಅವನು ಬಿಜಾಪುರದ ಸುಲ್ತಾನನಿಗೆ ಈ ರೀತಿ ಬರೆದ : ಸುಲ್ತಾನನು ಪೋರ್ತುಗಾಲದ ರಾಜನಿಗೆ ದ್ವೀಪದ ಎದುರಿಗಿರುವ ವಿಸ್ತೃತ ಭೂಭಾಗದ ಕೆಲವು ಭಾಗವನ್ನು ಬಿಟ್ಟುಕೊಡುವುದಾದರೆ ಗೋವೆಗೆ ಬರುವ ಎಲ್ಲ ಕುದುರೆಗಳನ್ನು ಕೊಳ್ಳುವ ಇಲ್ಲವೆ ಬಿಡುವ ಹಕ್ಕನ್ನು ಸುಲ್ತಾನನಿಗೆ ನೀಡಲಾಗುವುದು. ಆದರೆ ಈ ವಿಷಯ ಇತ್ಯರ್ಥವಾಗುವ ಮುನ್ನ ಅಲ್ಬುಕರ್ಕ್ ತೀರಿಕೊಂಡ.

ಈ ವೃತ್ತಾಂತದಿಂದ ನಮಗೆ ತಿಳಿದುಬರುವುದೇನೆಂದರೆ ಕೃಷ್ಣದೇವರಾಯ ರಾಯಚೂರಿಗೆ ದಾವಿಸುವುದಕ್ಕಿಂತ ಐದು ವರ್ಷ ಮುಂಚೆಯೆ—ಉದಯಗಿರಿ ಮತ್ತು ಪೂರ್ವದಲ್ಲಿರುವ ಕೋಟೆಗಳ ಮೇಲಿನ ದಂಡಯಾತ್ರೆಗಿಂತಲೂ (ಈ ಕಥೆಯನ್ನು ನಮ್ಮ

ದಿನಚರಿಯಲ್ಲಿ ಹೇಳಲಾಗಿದೆ) ಒಂದು ವರ್ಷ ಮುಂಚೆ—ಮಹಮ್ಮದೀಯರ ಮೇಲೆ ದೊಡ್ಡ ಆಕ್ರಮಣವನ್ನು ಯೋಚಿಸಿದ್ದ.

ಕ್ರಿ.ಶ. ೧೫೦೪-೧೪ರಲ್ಲಿ ವಿಜಯನಗರ ಹೇಗಿತ್ತೆಂಬ ವರ್ಣನೆ ನಮಗೆ ಮ್ಯಾಗೆಲನ್‌ನ ಸೋದರ ಸಂಬಂಧಿಯೂ ಆ ಕಾಲಾವಧಿಯಲ್ಲಿ ವಿಜಯನಗರವನ್ನು ಸಂದರ್ಶಿಸಿದವನೂ ಆಗಿದ್ದ ಡುಆರ್ಟ್ ಬರ್ಬೋಸಾನ ಕಥಾನಕದಲ್ಲಿ ದೊರೆಯುತ್ತದೆ.

ಪೋರ್ತುಗೀಜರಿಗೆ ಎಂದಿಗೂ 'ನರಸಿಂಗನ ರಾಜ್ಯ'ವೆಂದೇ ಪರಿಚಿತವಿದ್ದ ವಿಜಯನಗರದ ಪ್ರದೇಶಗಳ ಬಗೆಗೆ ಹೇಳುತ್ತಾ ಬರ್ಬೋಸಾ ಹೀಗೆ ಬರೆಯುತ್ತಾನೆ[14] : "ಅದು ಬಹಳ ಶ್ರೀಮಂತವಾಗಿದೆ ಮತ್ತು ಆಹಾರಧಾನ್ಯಗಳಿಂದ ಸಮೃದ್ಧವಾಗಿದೆ ಮತ್ತು ನಗರಗಳು ಹಾಗೂ ದೊಡ್ಡ ಪಟ್ಟಣಗಳಿಂದ ತುಂಬಿದೆ."

ಅವನು ಆದರ ಪಶ್ಚಿಮ ಕರಾವಳಿಯಲ್ಲಿನ ಭಟಕಲ್ ರೇವಿನ ಬೃಹತ್ ವ್ಯಾಪಾರವನ್ನು ಬಣ್ಣಿಸುತ್ತಾನೆ : ಲೋಹ, ಮಸಾಲೆ, ಔಷಧಿ, ಅಳಲೆಕಾಯಿ ಅಲ್ಲಿನ ನಿರ್ಯಾತಗಳು ಮತ್ತು ಕುದುರೆ ಹಾಗೂ ಮುತ್ತುಗಳು ಅಲ್ಲಿನ ಆಯಾತಗಳು. ಆದರೆ, ಕೊನೆಯ ಎರಡು ವಸ್ತುಗಳ ಬಗೆಗೆ ಅವನು ಹೀಗೆನ್ನುತ್ತಾನೆ, "ಪೋರ್ತುಗೀಜರಿಂದಾಗಿ ಅವು ಈಗ ಗೋವಾಕ್ಕೆ ಹೋಗುತ್ತವೆ." ಭಟಕಲ್‌ನ ಪ್ರಾಂತಾಧಿಪತಿ ದೊರೆ ಕೃಷ್ಣದೇವರಾಯನ ಸೋದರನ ಮಗನಾಗಿದ್ದ. "ಅವನ ವೈಭವದ ಜೀವನ ಸಾಗಿಸುತ್ತಾನೆ ಮತ್ತು ತನ್ನನ್ನು ದೊರೆ ಎಂದು ಕರೆದುಕೊಳ್ಳುತ್ತಾನೆ, ಆದರೆ ತನ್ನ ಕಕ್ಕನಿಗೆ ವಿಧೇಯನಾಗಿದ್ದಾನೆ."

ಕರಾವಳಿ ಬಿಟ್ಟು ಒಳಪ್ರದೇಶ ಪ್ರವೇಶಿಸುತ್ತಾ ಬರ್ಬೋಸಾ ಘಟ್ಟಗಳ ಮೂಲಕ ಮೇಲ್ಗಡೆ ಸಾಗಿದ.

ಈ ಪರ್ವತಗಳಿಂದ ನಲವತ್ತೈದು ಹರದಾರಿ ದೂರದಲ್ಲಿ ಬಿಜನಗರ ಎಂಬ ಬಹು ದೊಡ್ಡ ನಗರವಿದೆ. ಅದು ವಿಪುಲ ಜನಸಂಖ್ಯೆಯುಳ್ಳದ್ದು, ಒಂದು ಬದಿಯಲ್ಲಿ ಉತ್ತಮ ಗೋಡೆಯಿಂದ, ಇನ್ನೊಂದು ಬದಿಯಲ್ಲಿ ನದಿಯಿಂದ, ಮತ್ತೊಂದು ಬದಿಯಲ್ಲಿ ಪರ್ವತದಿಂದ ಸುತ್ತುವರಿಯಲ್ಪಟ್ಟಿದೆ. ನಗರವು ಸಮತಲ ನೆಲದ ಮೇಲಿದೆ ; ನರಸಿಂಗದ ರಾಜ ಅದರಲ್ಲಿ ಯಾವಾಗಲೂ ವಾಸಿಸುತ್ತಾನೆ. ಅವನು ಮೂರ್ತಿಪೂಜಕ ಮತ್ತು ಅವನನ್ನು ರಹೆನಿ[15] ಎಂದು ಕರೆಯಲಾಗುತ್ತದೆ. ಇಲ್ಲಿ ಅನೇಕ ಓಲಗಗಳುಳ್ಳ ಅವನ ಅರಮನೆಗಳಿವೆ....ದೊಡ್ಡ ಅಧಿಪತಿಗಳು ವಾಸಿಸುವ ಅನೇಕ ಅರಮನೆಗಳೂ ಇಲ್ಲಿವೆ. ಆ ಸ್ಥಳದ ಇತರ ಎಲ್ಲ ಮನೆಗಳು ಚಾವಣಿ ಹೊದಿಸಿದವುಗಳು. ಓಣಿಗಳು ಮತ್ತು ಚೌಕಗಳು ಬಲು ವಿಶಾಲವಾಗಿವೆ. ಅವುಗಳು ಎಲ್ಲ ದೇಶದ ಮತ್ತು ಮತಗಳ ಅಸಂಖ್ಯ ಜನರಿಂದ ಸದಾ ತುಂಬಿರುತ್ತವೆ....ಈ ನಗರದಲ್ಲಿ ಅತುಲ ವ್ಯಾಪಾರ ನಡೆಯುತ್ತದೆ—ಈ ನಗರದಲ್ಲಿ ಪೆಗು ಮತ್ತು ಸೆಲಾನಿ

(ಸಿಲೋನ)ಗಳಿಂದ ತರಲಾಗುವ ಅನೇಕ ರತ್ನಗಳಿವೆ ಮತ್ತು ಈ ದೇಶದಲ್ಲಿಯೆ ವಜ್ರಗಳು ದೊರೆಯುತ್ತವೆ. ಏಕೆಂದರೆ, ನರಸಿಂಗನ ರಾಜ್ಯದಲ್ಲೊಂದು ಡೆಕ್ಕನಿ ರಾಜ್ಯದಲ್ಲಿ ಇನ್ನೊಂದು ಗಣಿಗಳಿವೆ. ಅಲ್ಲಿ ಆರ್ಮುಜ್ ಮತ್ತು ಕ್ಯಾಲ್‌ಗಳಿಂದ ತರಲಾದ ಅನೇಕ ಮುತ್ತುಗಳು ಮತ್ತು ಬೀಜಮುತ್ತುಗಳು ಕಾಣಸಿಗುತ್ತವೆ.... ರೇಷ್ಮೆ ಜರತಾರಿ ಬಟ್ಟೆ, ಕಡುಗೆಂಪು ಬಟ್ಟೆ ಮತ್ತು ಹವಳ ಸಹ.

"ರಾಜ ಯಾವಾಗಲೂ ಉಪರೋಕ್ತ ಅರಮನೆಗಳಲ್ಲಿ ವಾಸಿಸುತ್ತಾನೆ, ಮತ್ತು ಕ್ವಚಿತ್ತಾಗಿ ಅವುಗಳ ಹೊರಗೆ ಹೋಗುತ್ತಾನೆ...."

"ರಾಜನ ಎಲ್ಲ ಸೇವೆ ಸ್ತ್ರೀಯರಿಂದಲೆ ಜರಗುತ್ತದೆ, ಅವರು ಒಳಗೆ ರಾಜನ ಸೇವೆಗೆ ಅಣಿಯಾಗಿ ನಿಂತಿರುತ್ತಾರೆ; ಅವರಲ್ಲಿ ರಾಜನ ಪರಿವಾರದ ಎಲ್ಲ ಸೇವಕಿಯರೂ ಇರುತ್ತಾರೆ; ಮತ್ತು ಇವರೆಲ್ಲ ಸ್ತ್ರೀಯರಿಗೆ ಈ ಅರಮನೆಗಳೊಳಗೆ ಕೋಣೆಗಳು ಲಭ್ಯವಿದ್ದು ಅವರು ಅವುಗಳಲ್ಲಿ ವಾಸಿಸುತ್ತಾರೆ....

"ಈ ರಾಜನಿಗೆ ಒಂದು ಮನೆಯಿದೆ.[16] ಅದರಲ್ಲಿ ರಾಜ್ಯದ ವ್ಯವಹಾರಕ್ಕೆ ಸಂಬಂಧಿಸಿದ ಸಭೆಗಳಲ್ಲಿ ಅವನು ತನ್ನ ಮಂಡಲಾಧಿಪತಿಗಳನ್ನು ಅಧಿಕಾರಿಗಳನ್ನು ಭೇಟಿಯಾಗುತ್ತಾನೆ....ಅವರು ಮನುಷ್ಯರು ಹೊತ್ತ ಬೆಲೆಯುಳ್ಳ ಮೇಣೆಗಳಲ್ಲಿ ಕುಳಿತು ಬರುತ್ತಾರೆ....ಅನೇಕ ಮೇಣೆಗಳು ಮತ್ತು ಅನೇಕ ಅಶ್ವಾರೋಹಿಗಳು ಅರಮನೆಯ ಬಾಗಿಲಲ್ಲಿ ನಿಂತಿರುತ್ತಾರೆ, ರಾಜನು ಸದಾ ಒಂಬೈನೂರು ಆನೆಗಳನ್ನು ಮತ್ತು ಇಪ್ಪತ್ತು ಸಾವಿರ ಕುದುರೆಗಳನ್ನು ಸಿದ್ಧವಾಗಿರಿಸಿರುತ್ತಾನೆ. ಅವುಗಳನ್ನೆಲ್ಲ ತನ್ನ ದುಡ್ಡಿನಿಂದಲೆ ಕೊಂಡಿದ್ದಾನೆ....ಅಶ್ವ ಹಾಗೂ ಕಾಲ್ದಳ ಸೇರಿ ಒಂದು ನೂರು ಸಾವಿರ ಸಂಬಳ ಪಡೆಯುವ ಸೈನಿಕರು ಈ ರಾಜನಲ್ಲಿ ಇದ್ದಾರೆ....

"ರಾಜ ಸತ್ತಾಗ ಅವನೊಂದಿಗೆ ನಾನೂರು ಐನೂರು ಸ್ತ್ರೀಯರು ಚಿತೆಯೇರು ತ್ತಾರೆ....ನರಸಿಂಗದ ರಾಜ ತನ್ನಿಂದ ಬಹಳ ಪ್ರದೇಶ ಕಿತ್ತುಕೊಂಡ ದಕ್ಕನಿಯ ರಾಜನೊಂದಿಗೆ ಮತ್ತು ಒಳನಾಡಿನಲ್ಲಿರುವ ಒಟೆರಾ (ಸ್ವಾಭಾವಿಕವಾಗಿ ಒಡಿಸಾ) ರಾಜ್ಯದ ಇನ್ನೊಬ್ಬ ಮೂರ್ತಿಪೂಜಕ ರಾಜನೊಂದಿಗೆ ಮೇಲಿಂದ ಮೇಲೆ ಯುದ್ಧದಲ್ಲಿ ತೊಡಗಿರುತ್ತಾನೆ."

ಗೋವಾದ ಮೇಲೆ ಪೋರ್ತುಗೀಜರ ದಾಳಿಗೆ ಮುನ್ನ "ಸಬಾಯುಮ್ ಡೆಲ್ಕನಿ" ಅರ್ಥಾತ್ ದಕ್ಖನ್‌ದ ರಾಜನು ಗೋವಾದ ದೊರೆಯಾಗಿದ್ದನೆಂದು ಬರ್ಬೋಸಾ ಉಲ್ಲೇಖಿಸುತ್ತಾನೆ. ಮತ್ತು ಅಲ್ಬುಕರ್ಕ್‌ನಿಂದ ೨೫ನೆಯ ಫೆಬ್ರವರಿ ೧೫೧೦ರಂದು ಅದರ ಪ್ರಥಮ ಹಾಗೂ ಅದೇ ವರ್ಷ ೨೫ನೆಯ ನವಂಬರದಂದು ಎರಡನೆಯ ಸ್ವಾಧೀನವನ್ನು ಉಲ್ಲೇಖಿಸುತ್ತಾನೆ.

ಈ ಸುಮಾರಿಗೆ ಕೃಷ್ಣದೇವರಾಯ ಮೈಸೂರು ಪ್ರದೇಶದ ಅಂಕೆಗೊಳಪಡದ ಸಾಮಂತನಾದ ಉಮ್ಮತ್ತೂರಿನ ಗಂಗರಾಜನೊಂದಿಗೆ ಯುದ್ಧದಲ್ಲಿ ತೊಡಗಿದ್ದನು ಮತ್ತು ಸಂಪೂರ್ಣ ಯಶಸ್ವಿಯಾದನೆಂದು ಬೇರೆ ಮೂಲಗಳಿಂದ ತಿಳಿದುಬರುತ್ತದೆ. ಅವನು ಶಿವಸಮುದ್ರದ ಭದ್ರ ಕೋಟೆ ಹಾಗೂ ಶ್ರೀರಂಗಪಟ್ಟಣ ಅಥವಾ ಸೆರಿಂಗ ಪಟಮ್‌ದ ಕೋಟೆಯನ್ನು ವಶಪಡಿಸಿಕೊಳ್ಳುವ ಮೂಲಕ ಇಡಿ ಪ್ರಾಂತವನ್ನು ವಿಧೇಯವನ್ನಾಗಿಸಿದ.

ಕ್ರಿ.ಶ. ೧೫೧೩ರಲ್ಲಿ ಈಗಿನ ನೆಲ್ಲೂರು ಜಿಲ್ಲೆಯಲ್ಲಿರುವ ಆಗ ಒರಿಸ್ಸಾದ ರಾಜನ ವಶವಲ್ಲಿದ್ದ ಅತ್ಯಂತ ಭದ್ರವಾದ ಗುಡ್ಡದ ಮೇಲಿನ ಕೋಟೆ ಉದಯಗಿರಿಯ ಮೇಲೆ ದಂಡೆತ್ತಿ ನಡೆದ[17] ಮತ್ತು ಯುದ್ಧದ ಯಶಸ್ವಿ ಮುಕ್ತಾಯದ ನಂತರ ಆ ಗುಡ್ಡದ ಮೇಲಿದ್ದ ಗುಡಿಯಿಂದ ಶ್ರೀಕೃಷ್ಣನ ವಿಗ್ರಹ ತಂದು ವಿಜಯನಗರದಲ್ಲಿ ಪ್ರತಿಷ್ಠಾಪಿಸಿ ಅದಕ್ಕೆ ಭೂದತ್ತಿಯನ್ನು ನೀಡಿದ. ಇದನ್ನು ಈಗಲೂ ರಾಜಧಾನಿಯಲ್ಲಿ ಅಸ್ತಿತ್ವದಲ್ಲಿ ರುವ ದೀರ್ಘ ಶಾಸನದಿಂದ ಚಿರಸ್ಮರಣೀಯಗೊಳಿಸಲಾಗಿದೆ. ಕೃಷ್ಣಸ್ವಾಮಿಯ ಬೃಹತ್ ದೇವಾಲಯ ಕಟ್ಟಿಸಿದ್ದು ಆಗ. ಈಗ ಅದು ಪಾಳು ಬಿದ್ದಿದ್ದರೂ ಸಹ ನಗರದಲ್ಲಿನ ಅತಿ ಕುತೂಹಲಕರವಾದ ವಸ್ತುಗಳಲ್ಲೊಂದು. ಇನ್ನೂ ಸುರಕ್ಷಿತ ವಾಗಿರುವ ದೀರ್ಘ ಶಾಸನವೊಂದರಿಂದ ಇದು ದೃಢೀಕೃತವಾಗಿದೆ. ಅದೇ ಸಮಯಕ್ಕೆ ರಾಜ ಹಜಾರರಾಮಸ್ವಾಮಿ ದೇವಾಲಯವನ್ನು ತನ್ನ ಅರಮನೆ ಆವರಣದಲ್ಲಿ ಅಥವಾ ಹತ್ತಿರ ಕಟ್ಟಿಸಿದ.

ಉದಯಗಿರಿಯಲ್ಲಿ ಕೃಷ್ಣದೇವರಾಯ ಒರಿಸಾದ ರಾಜನ ಕಕ್ಕಿಯನ್ನು ಸೆರೆಹಿಡಿದು ಅವಳನ್ನು ಬಂಧಿಯಾಗಿ ವಿಜಯನಗರಕ್ಕೆ ತಂದನೆಂದು ನೂನಿಜ್ ಹೇಳುತ್ತಾನೆ. ತರುವಾಯ ಅವನು ಒರಿಸಾದ ರಾಜನ ವಶದಲ್ಲಿದ್ದ ಇನ್ನೊಂದು ಗುಡ್ಡದ ಮೇಲಿನ ಅತಿ ಭದ್ರ ಕೋಟೆಯಾಗಿದ್ದ ಕೊಂಡವೀಡಿನ ಮೇಲೆ ದಂಡೆತ್ತಿ ಸಾಗಿದ. ಅಲ್ಲಿ ಛಲ ಯುದ್ಧದಲ್ಲಿ ಆ ರಾಜನನ್ನು ಸ್ವತಃ ಎದುರಿಸಿ, ಸೋಲಿಸಿ ಎರಡು ತಿಂಗಳ ಮುತ್ತಿಗೆಯ ನಂತರ ದುರ್ಗವನ್ನು ವಶಪಡಿಸಿಕೊಂಡನು. ಗೆದ್ದ ಪ್ರಾಂತಗಳ ಪ್ರಾಂತಾಧಿಕಾರಿಯಾಗಿ ಸಾಳುವ ತಿಮ್ಮನನ್ನು ಬಿಟ್ಟು ಉತ್ತರ ದಿಕ್ಕಿನಲ್ಲಿ ವೈರಿಗಳನ್ನು ಬೆನ್ನಟ್ಟಿ ನಡೆದ. ಸಾಳುವ ತಿಮ್ಮ ತನ್ನ ಸೋದರನನ್ನು ಕೊಂಡವೀಡಿನ ದಳಪತಿ ಯನ್ನಾಗಿ ನಿಯಮಿಸಿದನೆಂದು ನೂನಿಜ್ ಹೇಳುತ್ತಾನೆ, ಆದರೆ ಅಲ್ಲಿನ ಒಂದು ಶಾಸನ ಆ ಮನುಷ್ಯನ ಹೆಸರು ನಾದೆಂಡ್ಲ ಗೋಪಮಂತ್ರಿ ಎಂದು ಹೇಳುತ್ತದೆ ಮತ್ತು ಅವನನ್ನು ತಿಮ್ಮನ ಸೋದರನ ಮಗನೆಂದು ಕರೆಯುತ್ತದೆ. ಕೊಂಡವೀಡು ಕ್ರಿ.ಶ. ೧೫೧೪ರಿಂದಲೆ ಒರಿಸ್ಸಾದ ರಾಜರ ವಶದಲ್ಲಿದ್ದಂತೆ ತೋರುತ್ತದೆ ; ಕೃಷ್ಣದೇವನಿಂದ ಅದರ ಸ್ವಾಧೀನ ೧೫೧೫ರಲ್ಲಿ ಜರುಗಿತು.[1] ನಮ್ಮ ಚರಿತ್ರೆಗಾರನ ವೃತ್ತಾಂತದಲ್ಲಿ ಬರುವ ರಾಜನ ಉತ್ತರ ದಿಕ್ಕಿನ ಪ್ರಯಾಣವನ್ನು ಖಚಿತಪಡಿಸಲು ಕೃಷ್ಣಾ ತೀರದ ಮೇಲಿರುವ

ಬೆಜವಾಡಾದ ಆಗ್ನೇಯದಲ್ಲಿ ಇಪ್ಪತ್ತೆರಡು ಮೈಲುಗಳ ಮೇಲಿರುವ ಮೇದೂರು ಪಟ್ಟಣದಲ್ಲಿ ಒಂದು ಶಾಸನವಿರುವುದನ್ನು ನೋಡಬಹುದು. ಅದರಲ್ಲಿ ಕೃಷ್ಣದೇವ ಮತ್ತು ಹೆಸರು ಆಳಿಸಲಾಗಿರುವ ಶತ್ರುವೊಬ್ಬನ ನಡುವೆ ೧೫೧೬ರಲ್ಲಿ ಯುದ್ಧ ನಡೆದುದು ಮತ್ತು ಕೃಷ್ಣದೇವ ವಿಜಯಿಯಾದುದು ಉಲ್ಲಿಖಿತವಾಗಿದೆ.

ರಾಜ ಕೊಂಡಪಲ್ಲಿಗೆ ಸಾಗಿ ಮೂರು ತಿಂಗಳ ಮುತ್ತಿಗೆಯ ನಂತರ ಅದನ್ನು ವಶಪಡಿಸಿಕೊಂಡು ಅಲ್ಲಿ ಒರಿಸಾದ ರಾಜನ ಹೆಂಡತಿ ಮತ್ತು ಮಗನನ್ನು ಸೆರೆಹಿಡಿದ. ಒರಿಸಾದ ರಾಜನ ದಾರುಣ ವಿಧಿಯನ್ನು ದಿನಚರಿಯಲ್ಲಿ ಹೇಳಲಾಗಿದೆ. ಅಲ್ಲಿಂದ ಅವನು ರಾಜಮಂದ್ರಿಗೆ ದಂಡೆತ್ತಿ ನಡೆದು ಅಲ್ಲಿ ಆರು ತಿಂಗಳು ನಿಂತನು. ತದನಂತರ ಅಲ್ಪ ಕಾಲದಲ್ಲಿಯೆ ಶಾಂತಿ ಸ್ಥಾಪಿತವಾಯಿತು ಮತ್ತು ಕೃಷ್ಣದೇವ ಒರಿಸಾದ ರಾಜನ ಮಗಳನ್ನು ಮದುವೆಯಾದ.[2] ಈ ಮದುವೆಯ ತರುವಾಯ ದೊರೆ ಕೃಷ್ಣ ಕೋರಮಂಡಲದ ಕಡೆಗೆ ಇರುವ ನೂನಿಜ್ 'ಕಾಟೂರ್' ಎಂದು ಕರೆಯುವ ಒಂದು ಸ್ಥಳದ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡ. ಈ ಸ್ಥಳ ಎಲ್ಲಿದೆಯೆಂದು ನನಗೆ ಗುರುತಿಸಲಾಗಿಲ್ಲ.

ಈ ವಿಜಯಗಳಿಂದ ಅವನ ಪೌರ್ವಾತ್ಯ ರಾಜ್ಯಗಳೆಲ್ಲ ಚಕ್ರಾಧಿಪತಿಯ ಸಂಪೂರ್ಣ ಅಧೀನದಲ್ಲಿ ಬಂದುವು.

ಉದಯಗಿರಿ, ಕೊಂಡವೀಡು, ಮತ್ತು 'ಕಾಟೂರ್'ಗಳ ಮೇಲಿನ ದಂಡಯಾತ್ರೆಯನ್ನು ರಾಯಚೂರಿನ ಮೇಲಿನ ಆಕ್ರಮಣ ಹಿಂಬಾಲಿಸಿತೇನೋ ಎಂಬಂತೆ ನೂನಿಜ್ ಬರೆಯುತ್ತಾನೆ. ಆದರೆ, ಶಾಸನಗಳು ನೀಡುವ ಆಧಾರದನ್ವಯ ಈ ದಂಡಯಾತ್ರೆಗಳು ೧೫೧೫ರಲ್ಲಿ ಕೊನೆಗೊಂಡವು, ಮತ್ತು ರಾಯಚೂರಿನ ಯುದ್ಧ ಕನಿಷ್ಠ ಐದು ವರ್ಷಗಳ ತರುವಾಯದವರೆಗಂತೂ ನಡೆಯಲಿಲ್ಲ.

ಗೋಲ್ಕೊಂಡದ ಸುಲ್ತಾನ ಖುಲಿ ಕುತುಬ್‌ಶಾಹ ಮತ್ತು ಅವನ ನೆರೆಯವರ (ಮುಸಲ್ಮಾನ ಹಾಗೂ ಹಿಂದೂ ಇಬ್ಬರೂ) ಮಧ್ಯೆ ದಕ್ಷನ್ ಪ್ರದೇಶದ ಆಗ್ನೇಯದಲ್ಲಿ ನಡೆದ ಯುದ್ಧಗಳ ವೃತ್ತಾಂತವನ್ನು ಕರ್ನಲ್ ಬ್ರಿಗ್ಸ್‌ನ 'ಫಿರಿಸ್ತಾ'ದ[3] ಮೂರನೆಯ ಸಂಪುಟದಲ್ಲಿ ನೀಡಲಾಗಿದೆ. ಅದನ್ನು ಫಿರಿಸ್ತಾನಿಂದ ನೇರವಾಗಿ ತೆಗೆದುಕೊಳ್ಳದೆ ಒಬ್ಬ ಮಹಮ್ಮದೀಯ ಇತಿಹಾಸಕಾರನಿಂದ ಭಾಷಾಂತರಿಸಲಾಗಿದೆ ; ಇದು ನಿಶ್ಚಿತವಾಗಿಯೂ ಕೃಷ್ಣದೇವನ ಆಳಿಕೆಯ ಕಾಲಾವಧಿಯ ಒಂದು ಭಾಗವನ್ನಂತೂ ಒಳಗೊಂಡಿರುವುದರಿಂದ ಅದರ ಸಾರಾಂಶವನ್ನು ನೀಡುವುದೊಳಿತು. ಆದರೆ, ನನಗೆ ಇದುವರೆಗೂ ಉಲ್ಲೇಖಿತವಾಗಿರುವ ದಿನಾಂಕಗಳನ್ನು ನಿಕರವಾಗಿ ನಿರ್ಧರಿಸಲಾಗಿಲ್ಲ. ಮತ್ತು ಆ ಕಥಾನಕ ಹಿಂದೂ ಮತ್ತು ಪೋರ್ತುಗೀಜ ವೃತ್ತಾಂತಗಳಿಂದ ದೊರಕಿದ ಕಥಾನಕಕ್ಕಿಂತ ಭಿನ್ನವಾಗಿದೆ. ಇವೆರಡೂ ದಿನಾಂಕಗಳು ಶಾಸನದ ದಾಖಲೆಗಳಿಂದ ದೃಢಪಟ್ಟಿವೆ.

ಸುಲ್ತಾನ ಖುಲಿ ೧೫೧೨ರಲ್ಲಿ ತನ್ನನ್ನು ಸ್ವತಂತ್ರ ಸಾರ್ವಭೌಮನೆಂದು ಘೋಷಿಸಿಕೊಂಡ. ಇದಾದ ಸ್ವಲ್ಪ ಕಾಲಾನಂತರದಲ್ಲಿಯೆ ಖುಲಿ ತೆಲಂಗಾಣದಲ್ಲಿರುವ ಹೈದರಾಬಾದಿನ ಅನುಕ್ರಮವಾಗಿ ಆಗ್ನೇಯ ಮತ್ತು ದಕ್ಷಿಣ–ಆಗ್ನೇಯಕ್ಕಿರುವ ರಾಜುಕೊಂಡ ಮತ್ತು ದೇವರಕೊಂಡ ಕೋಟೆಗಳ ಮೇಲೆ ಆಕ್ರಮಣ ಮಾಡಿ ಅವುಗಳನ್ನು ವಶಪಡಿಸಿಕೊಂಡನೆಂದು ಉಲ್ಲೇಖಿತವಾಗುತ್ತಿರುವ ಇತಿಹಾಸಕಾರ ಹೇಳುತ್ತಾನೆ. ಇವುಗಳಲ್ಲಿ ಎರಡನೆಯದು ಪತನವಾದ ಮೇಲೆ ವಿಜಯನಗರದ ಕೃಷ್ಣರಾಯ ಬೃಹತ್ ಸೈನ್ಯದೊಂದಿಗೆ ಸುಲ್ತಾನನ ಮೇಲೆ ಏರಿಹೋಗಿ ಅವನ ಪ್ರಾಂತಗಳ ಮೇಲೆ ದಾಳಿ ಮಾಡಿದನು. ಇದು ಸುಮಾರು ೧೫೧೩ನೆಯ ವರ್ಷವನ್ನು ಸೂಚಿಸುತ್ತದೆ. ಹಿಂದೂ ಸೈನ್ಯ ಬಹುಮಟ್ಟಿಗೆ ರಾಯಚೂರಿನ ಪೂರ್ವ ದಿಕ್ಕಿಗಿರುವ ಕೃಷ್ಣಾನದಿಯ ಕೋನದಲ್ಲಿರುವ ಪಾಂಗಲ್‌ನಲ್ಲಿ ಬಿಡಾರ ಹೂಡಿತು, ಮತ್ತು ಇಲ್ಲಿ ಯುದ್ಧ ಜರುಗಿ ಕುತುಬ್‌ಶಾಹ ಜಯಶಾಲಿಯಾದ. ಆ ಸ್ಥಳಕ್ಕೆ ಮುತ್ತಿಗೆ ಹಾಕಲಾಯಿತು ; ಅದು ಶರಣಾಗತವಾಯಿತು, ಮತ್ತು ಮಹಮ್ಮದೀಯರು ಇಪ್ಪತ್ತು ಮೈಲು ಉತ್ತರಕ್ಕಿರುವ ಘಾನಪುರಕ್ಕೆ ಸಾಗಿದರು. ಈ ಕೋಟೆಯನ್ನು ವಿಪುಲ ಹಾನಿಯಾದ ಮೇಲೆ ವಶಪಡಿಸಿಕೊಳ್ಳಲಾಯಿತು. ಮತ್ತು ಸುಲ್ತಾನನು ಅಲಾಉದ್ದೀನ ಇಮಾದ್ ಶಾಹನ ಇಲಾಖೆಯಾದ ಬೀದರ ರಾಜ್ಯದ ಗಡಿಯಲ್ಲಿ ವಾಯುವ್ಯಕ್ಕೆ ಇಪ್ಪತ್ತು ಮೈಲು ದೂರವಿರುವ ಕೋವಿಲಕೊಂಡಕ್ಕೆ ತನ್ನ ಸೈನ್ಯ ತೆಗೆದುಕೊಂಡು ನಡೆದ. ಈ ಸ್ಥಳವೂ ಪತನವಾಯಿತು.

ಆ ಮೇಲೆ ಇಮಾದ್ ಶಾಹನೊಂದಿಗೆ ಯುದ್ಧ ನಡೆಯಿತು. ಅದರಲ್ಲಿ ಸುಲ್ತಾನ್ ಖುಲಿ ಪುನಃ ಜಯಶಾಲಿಯಾದ. ತರುವಾಯ ಶೀಘ್ರದಲ್ಲಿಯೆ ಗೋಲ್ಕೊಂಡ ಪ್ರದೇಶಗಳ ಪೂರ್ವಕ್ಕೆ ಗಲಭೆಗಳಾದವು. ವಾರಂಗಲ್ಲು ಮತ್ತು ಕೃಷ್ಣೆಯ ದಕ್ಷಿಣಕ್ಕಿರುವ ಬೆಲ್ಲಮ್‌ಕೊಂಡ ಕೋಟೆಯೂ ಸೇರಿದಂತೆ ವ್ಯಾಪಕ ಪ್ರದೇಶಗಳನ್ನು ಹೊಂದಿದ್ದ, ಮುನಿವರ್ ನದೀತೀರದ ಮೇಲಿರುವ ಕಂಬಂಪೇಟದ ರಾಜನಾದ ಸೀತಾಪತಿ ಮಹಮ್ಮದೀಯರ ವಿರುದ್ಧ ದಂಗೆಯೆದ್ದ ಮತ್ತು ಸುಲ್ತಾನನು ಬೆಲ್ಲಮ್‌ಕೊಂಡದ ಮೇಲೆ ಏರಿಬಂದ. ಅದನ್ನು ಅವನು ದೀರ್ಘ ಮುತ್ತಿಗೆಯ ನಂತರ ವಶಪಡಿಸಿಕೊಂಡ. ಆಮೇಲೆ ಸೀತಾಪತಿ ಛಲಯುದ್ಧ ಹೂಡಿ ಸೋತು ಕಾಲ್ದೆಗೆಯಲು ಖುಲಿ ಗೋಲ್ಕೊಂಡಕ್ಕೆ ಹಿಂತಿರುಗಿದ, ಆಗ ರಾಜನು ಅನೇಕ ನೆರೆಯ ಮುಖಂಡರನ್ನು ಹುರಿದುಂಬಿಸಿ ಕಂಬಂಪೇಟದಲ್ಲಿ ದೊಡ್ಡ ಸೈನ್ಯವನ್ನು ಜಮಾಯಿಸಿದ. ಇದನ್ನು ಕೇಳಿ ಗೋಲ್ಕೊಂಡದ ಸೈನ್ಯಗಳು ಅವರ ಮೇಲೆ ದಾಳಿಯಿಡಲು ಮುನ್ನುಗ್ಗಿದವು ಮತ್ತು ಸಂಪೂರ್ಣ ಯಶಸ್ಸು ಪಡೆದವು. ಕೊಂಡಪಲ್ಲಿಯಲ್ಲಿ ಒಡ್ಡೋಲಗ ನಡೆಸುತ್ತಿದ್ದ ಮತ್ತು ಒರಿಸಾದ ರಾಜ ಗಜಪತಿಯ ಮಗನೂ ಆಗಿದ್ದ ರಾಮಚಂದ್ರದೇವನ ಆಶ್ರಯಕ್ಕೆ ಸೀತಾಪತಿ ಓಡಿದ. ಸುಲ್ತಾನನು ಮುಂದೆ ನಡೆದು ಕಂಬಂಪೇಟದ ಮೇಲೆ ಆಕ್ರಮಣ ಮಾಡಿದ. ಅದನ್ನು ವಶಪಡಿಸಿಕೊಂಡನಂತರ ಅಲ್ಲಿ ನಗರದಲ್ಲಿನ ಪ್ರತಿಯೊಬ್ಬ

ಪುರುಷ, ಸ್ತ್ರೀ, ಮಗುವನ್ನು ಕೊಂದು ಸೀತಾಪತಿಯ ಕುಟುಂಬದ ಎಲ್ಲ ಸ್ತ್ರೀಯರನ್ನು ತನ್ನ ಜನಾನಾಕ್ಕೆ ಸೇರಿಸಿಕೊಂಡ. ಏತನ್ಮಧ್ಯೆ, ಒರಿಸಾದ ರಾಜನ ನೇತೃತ್ವದಲ್ಲಿ ಸುತ್ತಮುತ್ತಲಿನ ಎಲ್ಲ ರಾಜ್ಯಗಳ ಭಾರಿ ಹಿಂದೂ ಸೈನ್ಯ ತಮ್ಮ ದೇಶಕ್ಕಾಗಿ ಯುದ್ಧ ಮಾಡಲು ಸನ್ನದ್ಧರಾದರು. ಪಾಲಿಂಚಿನೂರಿನಲ್ಲಿ ನದಿಯ ಹತ್ತಿರ ನಿರ್ಣಾಯಕ ಯುದ್ಧ ಜರುಗಿ ಹಿಂದೂಗಳು ಸಂಪೂರ್ಣವಾಗಿ ಸೋತರು. ಆ ಮೇಲೆ ಖುಲಿ ಕೊಂಡಪಲ್ಲಿ, ಎಲ್ಲೋರ, ಮತ್ತು ರಾಜಮುಂದ್ರಿಗಳನ್ನು ವಶಪಡಿಸಿಕೊಂಡನು. ಅವನ ಮತ್ತು ಒರಿಸಾದ ನಡುವೆ ಒಪ್ಪಂದವಾಗಿ ಗೋದಾವರಿ ನದಿ ಗೋಲ್ಕೊಂಡದ ಪೂರ್ವ ಗಡಿಯೆಂದು ನಿರ್ಧರಿಸಲಾಯಿತು. ಇದರಿಂದ ಸುಲ್ತಾನನು ತನ್ನ ಅಧಿಪತ್ಯಕ್ಕೆ ಎಲ್ಲೋರ ಮತ್ತು ಬೆಜವಾಡ ಜಿಲ್ಲೆಗಳನ್ನು ಸೇರಿಸಿಕೊಂಡನು.

ಆಗ ರಕ್ಷಣೆಗಾಗಿ ಕೃಷ್ಣರಾಯ ಧಾವಿಸಿದನು ಮತ್ತು ಸುಲ್ತಾನನು ಕೊಂಡ ವೀಡಿಗೆ ಸಾಗಿದ. ಅವನು ಅದಕ್ಕೆ ಮುತ್ತಿಗೆ ಹಾಕಿದ, ಆದರೆ ಬೆಲ್ಲಂಕೊಂಡ ಮತ್ತು ವಿನುಕೊಂಡಗಳಿಂದ ಅವನ ಮೇಲೆ ಮಾಡಲಾದ ದಾಳಿಗಳಿಂದಾಗಿ ಹಿಂದೆ ಸರಿಯ ಬೇಕಾಯಿತು. ಬಹಳ ಹಾನಿಯ ನಂತರ ಇವೆರಡರಲ್ಲಿ ಮೊದಲನೆಯ ಕೋಟೆಯನ್ನು ಅಂಕೆಯಲ್ಲಿಟ್ಟುಕೊಳ್ಳುವಲ್ಲಿ ಯಶಸ್ವಿಯಾದ. ಇದಾದ ನಂತರ ಅವನು ಕೊಂಡಪಲ್ಲಿ ಯತ್ತ ಹಿಂದೆ ನಡೆದ. ಈಗ ಕೃಷ್ಣರಾಯ ಬಂದು ಬೆಲ್ಲಂಕೊಂಡದಲ್ಲಿನ ಮಹಮ್ಮದೀಯ ಠಾಣ್ಯದ ಮೇಲೆ ದಾಳಿಯಿಟ್ಟ. ಇದಕ್ಕೆ ಉತ್ತರವಾಗಿ ಸುಲ್ತಾನನು ಹಿನ್ನಡೆದು ಒಮ್ಮೆಲೆ ಹಿಂದೂ ಸೈನ್ಯದ ಹಿಂಬದಿಯಲ್ಲಿ ಕಾಣಿಸಿಕೊಂಡ. ಮುಂದುವರಿದ ಯುದ್ಧದಲ್ಲಿ ಅವನು ಜಯಶಾಲಿಯಾದುದರಿಂದ ಮುತ್ತಿಗೆಯನ್ನು ಕೀಳಲಾಯಿತು. ನಂತರ ಅವನು ಕೊಂಡವೀಡಿಗೆ ಮರಳಿ ಅದನ್ನು ವಶಪಡಿಸಿಕೊಂಡ. ಕೊಂಡವೀಡಿನ ಪತನ ಕೇಳಿ ಕೃಷ್ಣರಾಯ ೧೦೦,೦೦೦ ಕಾಲಾಳು ಮತ್ತು ೮೦೦೦ ಅಶ್ವಯೋಧರೊಂದಿಗೆ ಮಹಮ್ಮದೀಯರ ಮೇಲೆ ದಾಳಿ ಮಾಡಲು ತನ್ನ "ದಂಡನಾಯಕ ಮತ್ತು ಅಳಿಯ ಸೀವರಾಯ"[18]ನನ್ನು ಕಳಿಸಿಕೊಟ್ಟ. ಸುಲ್ತಾನ ಹಿಂದೆ ಸರಿದು ಕೃಷ್ಣಾ ತೀರಗಳಲ್ಲಿ ಬಿಡಾರ ಹೂಡಿ ಕೊಂಡವೀಡನ್ನು ಹಿಂದೂಗಳಿಗೆ ಬಿಟ್ಟುಕೊಟ್ಟ.[19] ಆ ಸ್ಥಳವನ್ನು ಸ್ತಿಮಿತಕ್ಕೆ ತದನಂತರ ವಿಜಯನಗರದ ಸೈನ್ಯಗಳು ಸುಲ್ತಾನನನ್ನು ಬೆನ್ನಟ್ಟಿದವು. ಆವನ ದಾಳಿಗೆ ತುತ್ತಾಗಿ ಸೋತು ಕೊಂಡವೀಡಿಗೆ ಹಿಂದಿರುಗಿದರು. ಅದನ್ನು ಎರಡನೆಯ ಬಾರಿ ಗೋಲ್ಕೊಂಡದ ಸೈನ್ಯ ಮುತ್ತಿತು. ಹಿಂದೂಗಳು ಆಗ ಶರಣಾಗತ ರಾಗಿ ಮಾಂಡಲಿಕರಾಗಲು ಒಪ್ಪಿಕೊಂಡರು.

ಸುಲ್ತಾನನು ತನ್ನ ರಾಜಧಾನಿಯತ್ತ ಹಿಂದಿರುಗುವಾಗ ಬಿಜಾಪುರದ ಇಸ್ಮಾಯಿಲ್ ಆದಿಲ್ ಶಾಹ "ಬೀಜನಗರದ ರಾಜನ ಸೂಚನೆಯಂತೆ"[20] ಕೋವಿಲ ಕೊಂಡವನ್ನು ಮುತ್ತುವವನಿದ್ದಾನೆಂದು ತಿಳಿದುಬಂತು. ಅವನು ಅವನ ವಿರುದ್ಧ ದಂಡೆತ್ತಿ ನಡೆದ. ಸಾಲಾಗಿ ಯುದ್ಧಗಳು ಜರುಗಿ ದಂಡಯಾತ್ರೆ ಹನ್ನೊಂದು ತಿಂಗಳು

ನಡೆಯಿತು. ಅದರ ಕೊನೆಗೆ ಇಸ್ಮಾಯಿಲ್ ಜ್ವರದಿಂದ ಸತ್ತು ಅವನ ಮಗ ನಾಲು ಅಧಿಕಾರಕ್ಕೆ ಬಂದ. ಈ ಯುದ್ಧಗಳಲ್ಲೊಂದರಲ್ಲಿ ಸುಲ್ತಾನ ಖುಲಿಯು ಮುಖದ ಮೇಲೆ ಬಾಗುಕತ್ತಿಯಿಂದ ತೀವ್ರ ಘಾಯವಾಗಿ ಅವನು ಜೀವನದುದ್ದಕ್ಕೂ ಕುರೂಪಿಯಾದ.[21]

ನಾನು ಈ ಕತೆಯನ್ನು ಇಡಿಯಾಗಿ ಇಲ್ಲಿ ಕೊಟ್ಟಿರುವೆ. ಏಕೆಂದರೆ, ಅದು ಮೂಲ ಮುಹಮ್ಮದೀಯ ವೃತ್ತಾಂತದೊಂದಿಗೆ ಅನುಕ್ರಮಿಕವಾಗಿ ನಡೆಯುವ ಘಟನಾವಳಿಯಾಗಿ ಸಾಗುತ್ತದೆ. ಆದರೆ ಅದು ನಿಜವಾಗಿ ಕನಿಷ್ಠ ಇಪ್ಪತ್ತೊಂದು ವರ್ಷಗಳ ಅವಧಿಯನ್ನು ಆವರಿಸುತ್ತದೆ ; ಏಕೆಂದರೆ, ವೃತ್ತಾಂತ ಖುಲಿಯು ಆಳಿಕೆಯ (೧೫೧೨) ಆರಂಭದ ಅನತಿ ಕಾಲದ ತರುವಾಯದಲ್ಲಿ ಪ್ರಾರಂಭಿಸಿ ಇಸ್ಮಾಯಿಲನ ಮರಣ (೧೫೩೪)ದೊಂದಿಗೆ ಕೊನೆಗೊಳ್ಳುತ್ತದೆ. ಆದುದರಿಂದ, ಉಲ್ಲೇಖಿತ ವರ್ಷಗಳ ಬಗೆಗೆ ನಾವು ಪೂರ್ಣ ಕತ್ತಲಲ್ಲಿ ಇದ್ದೇವೆ. ಆದರೆ, ನಮ್ಮ ಪಂಡಿತರಲ್ಲಿ ಕೆಲವು ಅಂಶಗಳ ಬಗೆಗೆ ಸಹಮತವುಂಟು. ಕೃಷ್ಣದೇವ ಕ್ರಿ.ಶ. ೧೫೧೫ರಲ್ಲಿ ಕೊಂಡವೀಡನ್ನು ವಶಪಡಿಸಿಕೊಂಡುದೂ ಮತ್ತು ಮುಂದಿನ ವರ್ಷ ಅದರ ನೆರೆಹೊರೆಯಲ್ಲಿ ಯುದ್ಧ ಮಾಡಿದುದೂ ನಿಶ್ಚಿತ ; ಅವನು ಒರಿಸಾದ ರಾಜನಿಂದ ಕೊಂಡವೀಡನ್ನು ಗೆದ್ದು ಕೊಂಡನೆಂದು ನೂನಿಜ್ ದೃಢವಾಗಿ ಹೇಳುತ್ತಾನಾದರೂ ಹಿಂದೂಗಳಿಗೆ ವಿರುದ್ಧ ವಾಗಿದ್ದ ಆ ಪ್ರದೇಶದಲ್ಲಿ ಮುಹಮ್ಮದೀಯ ಸಶಸ್ತ್ರ ಪಡೆಗಳ ಉಪಸ್ಥಿತಿಯನ್ನೂ ಪ್ರಸ್ತಾಪಿಸುತ್ತಾನೆ.

ಈ ಹೇಳಿಕೆಗಳೊಂದಿಗೆ ನಾವು ವಿಜಯನಗರದ ಇತಿಹಾಸಕ್ಕೆ ಹಿಂತಿರುಗೋಣ.

೧೫೧೬ ರಿಂದ ೧೫೨೦ರವರೆಗೆ ರಾಜಧಾನಿಯ ಘಟನೆಗಳ ಬಗೆಗೆ ಮಾರ್ಗದರ್ಶನ ವೀಯಬಲ್ಲ ಹಿಂದೂ ಮೂಲಗಳ ಯಾವ ದಾಖಲೆಗಳೂ ನಮಗೆ ಲಭಿಸಿಲ್ಲ.

ಪೋರ್ತುಗೀಜರು ಕರಾವಳಿಯಲ್ಲಿ ವ್ಯಾಪಾರ ಮಾಡಿದರು ಮತ್ತು ನೆರೆಯ ಹಿಂದೂ ದೊರೆಗಳೊಂದಿಗೆ ಯುದ್ಧಗಳಾದವು. ಆದರೆ ಅವು ರಾಜಧಾನಿಯ ಮೇಲೆ ಏನೂ ಪರಿಣಾಮ ಬೀರಲಿಲ್ಲ ; ವಿದೇಶಿಯರು ವಿಜಯನಗರದ ಪ್ರಭುಗಳೊಂದಿಗೆ ಸಾಮಾನ್ಯವಾಗಿ ಮೈತ್ರಿಯುತವಾಗಿ ಇದ್ದರು. ಅವನ ಮಟ್ಟಿಗೆ ಹೇಳುವದಾದರೆ ಅವರು ತಮ್ಮ ವ್ಯಾಪಾರವನ್ನು ಧಾರಾಳವಾಗಿ ಸುಭದ್ರಗೊಳಿಸಿಕೊಳ್ಳಬಹುದಿತ್ತು. ಏಕೆಂದರೆ, ಅಶ್ವಗಳು ಮತ್ತು ಇತರ ಅಗತ್ಯಗಳ ಆಮದಿನಿಂದ ಅವನಿಗೆ ಅನುಕೂಲ ವಿತ್ತು. ಅವನ ಇತರ ಪ್ರದೇಶಗಳು ಶಾಂತವಾಗಿದ್ದು ಅಲ್ಲಿನ ನಿವಾಸಿಗಳು ಅವನ ಆಳಿಕೆಗೆ ವಿಧೇಯರಾಗಿದ್ದರು.

ಇಡಿ ರಾಜ್ಯವನ್ನು ಪ್ರಾಂತಾಧಿಪತ್ಯಗಳಲ್ಲಿ ವಿಭಜಿಸಲಾಗಿತ್ತೆಂದು ನೂನಿಜ್ ಹೇಳುತ್ತಾನೆ, ಮತ್ತು ಅವನ ವೃತ್ತಾಂತವನ್ನು ಇತರ ಆಧಾರಗಳು ಪುಷ್ಟೀಕರಿಸುತ್ತವೆ.

ಪ್ರತಿಯೊಬ್ಬ ದೊರೆ ಅಶ್ವ, ಕಾಲಾಳು, ಆನೆಗಳ ತನ್ನ ಪಾಲನ್ನು ಉಳಿಸಿಕೊಂಡು ಬರುವ ಹಾಗೂ ಸಾರ್ವಭೌಮನಿಗೆ ವಾರ್ಷಿಕ ಕಪ್ಪ ಸಲ್ಲಿಸುವ ತನಕ ತನಗೆ ವಹಿಸಿ ಕೊಟ್ಟ ಪ್ರದೇಶದಲ್ಲಿ ಸ್ವತಂತ್ರನಾಗಿದ್ದನು. ಕ್ಷಿಪ್ರ ಕಾರ್ಯಾಚರಣೆಗಾಗಿ ಪೂರ್ಣ ಸನ್ನದ್ಧತೆಯಲ್ಲಿರುವಂತೆ ಸೈನ್ಯವನ್ನು ಇಟ್ಟಿರುವುದೇ ಒಡೆತನದ ಬೆಲೆಯಾಗಿತ್ತು. ಇವುಗಳಲ್ಲಿ ತಪ್ಪಿದರೆ ಅವನು ತಕ್ಷಣ ಕಿತ್ತಿಹಾಕಿಸಿಕೊಳ್ಳಲು ಬದ್ಧನಾಗುತ್ತಾನೆ. ಏಕೆಂದರೆ, ರಾಜನು ಎಲ್ಲರ ಅಧಿಪತಿಯಾದುದರಿಂದ ಎಲ್ಲ ಮಾಂಡಲಿಕರು ಅವನ ವಿಶ್ವಾಸ ಪಾತ್ರರಿರುವವರೆಗೆ ಮಾತ್ರ ಮುಂದುವರಿಯುತ್ತಿದ್ದರು.

ಆದರೆ, ಈ ಶಾಂತಿಕಾಲದಲ್ಲಿ ರಾಜನು ನದಿಗಳ ನಡುವಿನ ಪ್ರದೇಶಗಳ ಮೇಲೆ ಬೃಹದಾಕ್ರಮಣಕ್ಕೆ ವ್ಯಾಪಕ ಸಿದ್ಧತೆ ಮಾಡಿಕೊಂಡ. ಸದಾ ವಾದಗ್ರಸ್ತವಾಗಿದ್ದ ಆ ನೆಲ ಅವನ ಪೂರ್ವಜರು ಮತ್ತು ಉತ್ತರದ ನೆರೆಯವರ ಮಧ್ಯೆ ಸುಮಾರು ಎರಡು ಶತಮಾನಗಳ ವರೆಗೆ ಜಗಳದ ವಿಷಯವಾಗಿತ್ತು. ಅವನ ಗುರಿ ಆಗ ಮುಹಮ್ಮದೀಯರ ವಶದಲ್ಲಿದ್ದ ರಾಯಚೂರು ನಗರವಾಗಿತ್ತು[22] ಮತ್ತು ಎಲ್ಲ ಸಿದ್ಧವಾದಾಗ ಭಾರಿ ಸೈನ್ಯದೊಂದಿಗೆ ಅವನು ಆಕ್ರಮಣಕ್ಕೆ ಮುನ್ನಡೆದ.

ಈ ಘಟನೆಗೇ ಒಂದು ಅಧ್ಯಾಯ ಬೇಕು.

---

1 ಎಪಿಗ್ರಾಫಿಯಾ ಇಂಡಿಕಾ. i, ೩೬೬, ಇಂಡಿಯನ್ ಆಂಟಿಕ್ವಿಟಿಜ್,xxiv, ೨೦೫.

2 ಇಂಗ್ಲೆಂಡ್‌ನ ಎಂಟನೆಯ ಹೆನ್ರಿ ಅದೇ ವರ್ಷದ ಫೆಬ್ರುವರಿ ೨೨ರಂದು ಸಿಂಹಾಸನ ವೇರಿದ. ಕೃಷ್ಣದೇವರಾಯನ ಆಸ್ಥಾನದ ವೈಭವದ ವರ್ಣನೆಯನ್ನು ನೂನಿಜ್‌ನ ವೃತ್ತಾಂತದಲ್ಲಿ ಓದುವಾಗ ಪಶ್ಚಿಮ ಯುರೋಪದಲ್ಲಿ ಅದೇ ಕಾಲಕ್ಕೆ ಪ್ರದರ್ಶನದ ಭವ್ಯತೆ ಮತ್ತು ವೈಯಕ್ತಿಕ ಅಲಂಕಾರ ತನ್ನ ಅತ್ಯುನ್ನತ ಮಟ್ಟವನ್ನು ತಲುಪಿತ್ತೆಂದು ಸ್ಮರಿಸುವುದು ಸ್ವಾರಸ್ಯಕರ.

3 ಬಂಕಾಪುರದ ದೊರ ಮರಾತಾ ಆಗಿದ್ದನೆಂದು ತೋರುತ್ತದೆ. ನೂನಿಜ್ ಅವನನ್ನು "ಗಾಯಿಮರ್‌ದ ಬೆಂಗಾಪೊರ್" ಎಂದು ಕರೆಯುತ್ತಾನೆ. ಅಲ್ಬುಕರ್ಕ್ ಅವನನ್ನು ಕ್ರಿ.ಶ. ೧೫೧೨ರ ಸುಮಾರಿಗೆ "ವೆಂಗಾಪೊರ್‌ದ ದೊರೆ" ಎಂದು ಹೆಸರಿಸುತ್ತಾನೆ (ಹ್ಯಾಕ್ಲುಟ್ ಆವೃತ್ತಿ, iii, ೧೮೭).

ಆಗ ಗೋವಾದ ಗವರ್ನರ್ ಜನರಲ್ ಆಗಿದ್ದ ಅಲ್ಬುಕರ್ಕ್ ಒಂದು ವಿಜಯ ನಗರಕ್ಕೆ, ಇನ್ನೊಂದು ಅದು ಸ್ವತಂತ್ರವಾಗಿದೆಯೇನೊ ಎಂಬಂತೆ "ವೆಂಗಾಪೊರ್"ಗೆ ಹೀಗೆ ಎರಡು ರಾಯಭಾರಗಳನ್ನು ಕಳಿಸಿದನೆಂದು ಕಾಸ್ಟನ್ಹೆಡಾ ಹೇಳುತ್ತಾನೆ ; ಮತ್ತು ವೆಂಗಾಪೊರ್‌ದ ದೊರೆಯ ಬಗೆಗೆ ಇನ್ನೂ ಹೀಗೆ ಹೇಳುತ್ತಾನೆ ; "ಅವನ ರಾಜ್ಯ ನರಸಿಂಗನಿಗೆ ಸಹಜವಾದ ಮತ್ತು ಸುರಕ್ಷಿತ ಮಾರ್ಗ ಮತ್ತು ಆಹಾರಧಾನ್ಯ ಗಳಿಂದ ಸಮೃದ್ಧವಾದುದು."

ಆ ಊರನ್ನು "ಬೆಂಗಾಪೂರ್" ಎಂದು ಕರೆಯುವ ಬ್ಯಾರೊಸ್‌ನೂ ಅದೇ ಘಟನೆಯ ಬಗೆಗೆ ಹೇಳುತ್ತ ಅದರ ರಾಜ ನರಸಿಂಗನ (ಅಥವಾ ವಿಜಯನಗರದ) ಸಾಮಂತ" ನಾಗಿದ್ದನೆಂದು ಸ್ಪಷ್ಟವಾಗಿ ವಿವರಿಸುತ್ತಾನೆ (ಡಿಸೆಂಬರ, iii, i, iv, ಕ್ಯಾಪ್ ೫), ತದನಂತರ, ಅದೇ ನೆರಹೊರೆಯಲ್ಲಿನ ದೊರೆಗಳ ಬಗೆಗೆ ಬರೆಯುತ್ತ ಬ್ಯಾರೊಸ್" "ಕೊಮೊಗಿಜ್" ಮತ್ತು "ಅಪ್ಪಾಗಿಜ್" (ಡಿ.ಸೆ. iii, l, iv. ಕ್ಯಾಪ್ ೩) ಎಂಬಿಬ್ಬರು ಸಹೋದರರನ್ನು ಪ್ರಸ್ತಾಪಿಸುತ್ತಾನೆ, ಕೃಷ್ಣದೇವರಾಯನ ದಂಡಯಾತ್ರೆಯನ್ನು ವರ್ಣಿಸುತ್ತ-ನೂನಿಜ್ ನೀಡಿದ ಕಥೆ ಮತ್ತು ವಿವರಗಳನ್ನು ಪುನಃ ಸಂಗ್ರಹಿಸಿ ಹೇಳುತ್ತ—ಅವನು ಬೆಂಗಾಪೂರ್ ನಗರದ ಗಿಮ್"ನ ಬಗೆಗೆ ಹೇಳುತ್ತಾನೆ. ಅದೇ ದಶಕದ i.v. ಕ್ಯಾಪ್ ೩ರಲ್ಲಿ ಬ್ಯಾರೊಸ್ "ಬೆಂಗಾಪೂರ್" ವಿಜಯನಗರದ "ಮಾರ್ಗದಲ್ಲಿತ್ತು" ಎಂದು ಹೇಳುತ್ತಾನೆ. "ಗಿಮ್" ಮತ್ತು "ಗಾಯಿಮ್" ಮತ್ತು ಇತರ ಹೆಸರುಗಳು ಗೌರವ ಸೂಚಕ ಮರಾಠಿ "ಜಿ"ಯ ರೂಪಾಂತರಗಳೆಂದು ತೋರುತ್ತವೆ.

ಹೊನಾವರದಿಂದ ವಿಜಯನಗರಕ್ಕಿರುವ ನೇರ ಮಾರ್ಗದಲ್ಲಿ ಧಾರವಾಡದ ದಕ್ಷಿಣಕ್ಕೆ ನಲವತ್ತು ಮೈಲುಗಳ ಮೇಲಿರುವ ಬಂಕಾಪುರ ಕರ್ನಾಟಕ ನಾಡಿನ ಅತ್ಯಂತ ಮಹತ್ವದ ಕೋಟೆಗಳಲ್ಲೊಂದು. ಮೆಚ್ಚಿನ ಇಳಿದಾಣವಾಗಿದ್ದ ಭಟ್ಕಳದಿಂದ ಹೋಗುವ ಮಾರ್ಗ ಮೊದಲು ಉತ್ತರದತ್ತ ಹೊನಾವರಕ್ಕೆ, ಆ ಮೇಲೆ ಒಳ ನಾಡಿನಲ್ಲಿ ಬಂಕಾಪುರಕ್ಕೆ ಮತ್ತು ಅಲ್ಲಿಂದ ಬನವಾಸಿ, ರಾಣೆಬೆನ್ನೂರುಗಳಿಗೆ ಮತ್ತು ಬಯಲು ಪ್ರದೇಶದಲ್ಲಿ ಹಾಯ್ದು ಹೊಸಪೇಟೆ ಮತ್ತು ವಿಜಯನಗರಕ್ಕೆ ಹೋಗುತ್ತದೆ. ಅದನ್ನು ಕ್ರಿ.ಶ. ೮೪೮ರಷ್ಟು ಬೇಗನೆ ಅರಿಯಲಾಗಿತ್ತು ಮತ್ತು ಹಿಂದೂ ಅರಸರ ಸ್ವಾಧೀನದಲ್ಲಿ ೧೫೭೩ರವರೆಗೆ ಉಳಿಯಿತು. ಆಗ ಅದನ್ನು ಅಲಿ ಆದಿಲ್ ಶಾಹ ವಶಪಡಿಸಿಕೊಂಡ ಮತ್ತು ಅದರ ಸುಂದರ ದೇವಾಲಯವನ್ನು ನಾಶಪಡಿಸಿದ, ಫಿರಿಸ್ತಾ ಆ ಊರನ್ನು "ಬೀಕಾಪೂರ್" ಮತ್ತು "ಬಿಂಕಾಪುರ್" ಎಂದು ಕರೆಯುತ್ತಾನೆ (ಸ್ಕಾಟ್‌ನ ಆವೃತ್ತಿ, i, ೪೭, ೬೯, ೮೬, ೧೧೯, ೩೦೧ ಇತ್ಯಾದಿ).

4 "ಕಾಮೆಂಟರೀಜ್ ಆಫ್ ಅಫೊನ್ಸೊ ದಾಲ್ಬುಕರ್ಕ್" (ಹ್ಯಾಕ್ಲುಟ್ ಆವೃತ್ತಿ ii. ಪು. ೭೩). ಫಾದರ್ ಲುಯಿಸ್ ಕೋಚಿನ್‌ದಿಂದ ಹೊರಟು ಭಟ್ಕಳಕ್ಕೆ, ಅಲ್ಲಿಂದ ವಿಜಯನಗರಕ್ಕೆ ಪಯಣಿಸಿದ.

5 ಡಿಸೆ ii.i.v. ಕ್ಯಾಪ್ ೩.

6 ೧೫೪೫ರಲ್ಲಿ ಭಾರತದಲ್ಲಿದ್ದ ಕಾಸ್ಪನ್ ಹೆಡಾನನ್ನೂ ನೋಡಿರಿ (ಲೈಬ್ iii ಕ್ಯಾಪ್ ೧೨)

7 ಈ ಮೊದಲು ಹೇಳಿದಂತೆ, ಫಿರಿಸ್ತಾ ಈ ಘಟನೆಯನ್ನು ವಿವರಿಸುತ್ತಾನೆ (ಸ್ಕಾಟ್, i, ೨೨೫).

8 ಗೋವಾವನ್ನು ಪೋರ್ತುಗೀಜರು ಗೆದ್ದುಕೊಂಡ ಬಗೆಗಿನ ಪರ್ಚಸ್‌ನ ಸಾರಾಂಶ ಹೀಗೆ ಮುಂದುವರಿಯುತ್ತದೆ : "ಸಬಾಯಸ್ (ಅರ್ಥಾತ್ "ಸಬಾಯೊ") ತೀರಿಕೊಂಡಾಗ ಅವನ ಮಗ ಇದಲ್‌ಕಾನ್ (ಆದಿಲ್‌ಖಾನ್) ತೀರ ಚಿಕ್ಕವನಿದ್ದ ;

ಆದುದರಿಂದ ಅವನ ಪ್ರಜೆಗಳು ಬಂಡೆದ್ದರು, ಮತ್ತು ಅವನ ಪ್ರದೇಶವನ್ನು ಕಿತ್ತು ಕೊಳ್ಳಲು ರಾಜ ನರಸಿಂಗ ಅವನ ಮೇಲೆ ಯುದ್ಧ ಮಾಡಿದ. ಈ ಸುಸಂಧಿಯನ್ನು ಬಳಸಿಕೊಂಡು ಮುತ್ತಿಗೆ ಹಾಕಿದನು ಮತ್ತು...ದ್ವೀಪದೊಂದಿಗೆ ಗೋವಾವನ್ನು ವಶಪಡಿಸಿಕೊಂಡ. ಮುಂದೆ ಶೀಘ್ರದಲ್ಲಿಯೇ ಇದಲ್‌ಖಾನ್ ಪ್ರಬಲ ಸೈನ್ಯದೊಂದಿಗೆ ಬಂದು ಅದನ್ನು ಮರುವಶಪಡಿಸಿಕೊಳ್ಳಲಾಗಿ ಪೋರ್ತುಗೀಜರು ರಾತ್ರಿಯಲ್ಲಿ ಓಡಿ ಹೋದರು. ಆವರೆ ರಾಜ ನರಸಿಂಗ ಪುನಃ ಇದಲ್‌ಕಾನನ ಮೇಲೆ ಆಕ್ರಮಣ ಮಾಡಿದಾಗ ಅವನು ಹೆಚ್ಚು ಅಪಾಯಕಾರಿ ವೈರಿಯನ್ನು ಎದುರಿಸಬೇಕಾಗಿ ಬಂದು ಗೋವಾದಲ್ಲಿ ಬಲಶಾಲಿ ಠಾಣ್ಯ ಬಿಟ್ಟುಹೋದ. ಅದನ್ನು ಸಹ ಅಲ್ಬುಕರ್ಕ್ ಗೆದ್ದನು, ಮತ್ತು ನಗರವನ್ನು ನಾಶಪಡಿಸಿದ." ಪರ್ಚ್‌ಸ್‌ನ ಕೃತಿ (ಫೋಲಿಯೊ) ೧೬೨೬ರಲ್ಲಿ ಪ್ರಕಟಿತವಾಯಿತು. ಅವನು ಬ್ಯಾರೊಸ್‌ನನ್ನು ಮಾತ್ರ ಅನುಸರಿಸುತ್ತಾನೆ (ಡಿಸೆ. i.i.viii. ಕ್ಯಾಪ್, ೧೦).

9 "ಕಾಮೆಂಟರಿಜ್ ಆಫ್ ಆಫೊನ್ಸೊ ದಾಲ್ಬುಕರ್ಕ್" (ಹ್ಯಾಕ್ಲುಟ್ ಆವೃತ್ತಿ iii. ೩೫).

10 ಈ ಹೆಸರು "ತಿಮ್ಮರಾಜ"ನನ್ನು ಪ್ರತಿನಿಧಿಸುತ್ತಿರಬಹುದು.

11 "ಕಾಮೆಂಟರೀಜ್ ಆಫ್ ದಾಲ್ಬುಕರ್ಕ್," iii ಪು. ೨೪೬-೨೪೭.

12 ಫಿರಿಸ್ತಾ (ಸ್ಕಾಟ್), i. ಪು. ೨೩೬.

13 "ಕಾಮೆಂಟರೀಜ್ ಆಫ್ ಡಾಲ್ಬುಕರ್ಕ್," iv, ೧೨೧.

14 "ಈಸ್ಟ್ ಆಫ್ರಿಕಾ ಆ್ಯಂಡ್ ಮಲಬಾರ್" (ಹ್ಯಾಕ್ಲುಟ್ ಆವೃತ್ತಿ, ಪು. ೭೮ ಇತ್ಯಾದಿ). ಬರ್ಬೋಸಾ ೧೫೦೧ರಲ್ಲಿ ಜೋಆ ದ ನೋವಾನ ನೇತೃತ್ವದಲ್ಲಿ ಕಳಿಸ ಲಾಗಿದ್ದ ಪ್ರಥಮ ನೌಕಾಪಡೆಯಲ್ಲಿ ಯಾನಮಾಡಿದ ಡಿಎಗೊ ಬರ್ಬೋಸಾನ ಮಗ. "ತನ್ನ ಯೌವನದ ಬಹುಭಾಗವನ್ನು ಈಸ್ಟ್ ಇಂಡೀಜ್‌ಗಳಲ್ಲಿ ಸಮುದ್ರಯಾನ ಕೈಗೊಂಡು ಕಳೆದ" ನಂತರ ತನ್ನ ಕೃತಿಯನ್ನು ೧೫೧೬ (ಮುನ್ನುಡಿ)ರಲ್ಲಿ ಮುಕ್ತಾಯಗೊಳಿಸಿದ್ದನ್ನಾದರು ಅವನು ತನ್ನ ಬರಹಗಳಲ್ಲಿ ದಿನಾಂಕಗಳನ್ನು ನೀಡುವುದಿಲ್ಲ. ಪ್ರಾಯಶಃ ಅದನ್ನು ೧೫೧೪ರಲ್ಲಿ ಆರಂಭಿಸಿರಬೇಕು. ಅವನು ನಿಶ್ಚಿತವಾಗಿಯೂ ೧೫೦೮-೯ರಲ್ಲಿ ಹಿಂದೂ ಮಹಾಸಾಗರದಲ್ಲಿದ್ದ. ಕೃತಿಯ ಶೀರ್ಷಿಕೆ "೧೫೧೪ರಲ್ಲಿ ಹಿಂದೂ ಮಹಾಸಾಗರ ಕರಾವಳಿಯ ಮೇಲಿನ ದೇಶಗಳ ಹಾಗೂ ಈಸ್ಟ್ ಇಂಡೀಜ್‌ಗಳ ವರ್ಣನೆ" ಎಂಬುದಾಗಿದೆ. ಅದನ್ನು ೧೫೧೪ರಲ್ಲಿ ಸ್ಪ್ಯಾನಿಶ್ (ಪೋರ್ತುಗೀಜ್‌ನಿಂದ ಭಾಷಾಂತರಿಸಿ)ನಲ್ಲಿ ಪ್ರಕಟಿಸಲಾಗಿತ್ತು. ಬಾರ್ಸೆಲೋನಾದ ಗ್ರಂಥಾಲಯದಲ್ಲಿನ ಪ್ರತಿ ಲಭ್ಯವಿರುವ ಅತ್ಯಂತ ಹಳೆಯದೆಂದು ಹೇಳಲಾಗುತ್ತದೆ.

15 ಈ ಹೆಸರು ಇಂದಿಗೂ ಸ್ಪಷ್ಟೀಕರಣಕ್ಕಾಗಿ ಕಾಯ್ದಿದೆ.

16 ಇದು ಬಹುಶಃ ಬಲು ಅಲಂಕೃತವಾದ ಕಟ್ಟಡಕ್ಕೆ ಅನ್ವಯಿಸುತ್ತದೆ. ಅದರ ಒಳಗಡೆ ನಿರೀಕ್ಷಣಾಗೋಪುರಗಳುಳ್ಳ ಉನ್ನತ ಗೋಡೆಯಿಂದ ಆವೃತವಾದ ಮತ್ತು ಬಹುತೇಕವಾಗಿ "ಝುನಾನಾ" ಎಂದು ಕರೆಯಲ್ಪಡುತ್ತಿದ್ದ ಸರಕಾರಿ ಕಚೇರಿಗಳಿದ್ದ

ವೆಂದು ನಾವು ಬಗೆಯುತ್ತೇವೆ. ಗಜಶಾಲೆಗಳು ಅದರ ಪೂರ್ವಕ್ಕೆ ಇವೆ. ಪ್ರಸ್ತಾಪಿಸಲಾಗುತ್ತಿರುವ ಕಟ್ಟಡ ಸರಕಾರಿ ನಕ್ಷೆಯ ಮೇಲೆ "ನಂ, ೨೯, ಸಭಾಗೃಹ" ಎಂದಿದೆ.

17 ಕ್ರಿ.ಶ. ೧೫೧೪ರಲ್ಲಿ ಬರ್ಬೋಸಾ ಈ ದಂಡಯಾತ್ರೆಯನ್ನು ಹೆಸರಿಸುತ್ತಾನೆ.

18 ೧೫೧೫ರಲ್ಲಿ ಕೃಷ್ಣರಾಯ ಕೇವಲ ಇಪ್ಪತ್ತೊಂಬತ್ತು ವರ್ಷದವನಿದ್ದ, ಆದರೆ ಇನ್ನೂ ಕೂಸಿರುವಾಗಲೆ ಹುಡುಗಿಯರ ಲಗ್ನವಾಗುತ್ತಿದ್ದ ಹಿಂದೂ ಪದ್ಧತಿಯನ್ನು ನಾವು ಮರೆಯಬಾರದು.

19 ಇದು ೧೫೧೫ರಲ್ಲಿ ಕೃಷ್ಣರಾಯನಿಂದ ಆ ಸ್ಥಳದ ಸ್ವಾಧೀನವನ್ನು ಉಲ್ಲೇಖಿಸುತ್ತಿರುವುದಾದರೆ, ಆ ಸ್ಥಳವನ್ನು ಮುಹಮ್ಮದೀಯರಿಂದಲ್ಲ, ಒರಿಸಾದ ರಾಜನಿಂದ ವಶಪಡಿಸಿಕೊಳ್ಳಲಾಯಿತೆಂದು ನೂನಿಜ್ ದೃಢವಾಗಿ ಹೇಳುವುದನ್ನು ಇಲ್ಲಿ ಗಮನಿಸಬೇಕು.

20 ಇದರ ಬಗೆಗೆ ಫಿರಿಸ್ತಾನ ವೃತ್ತಾಂತವೇನೆಂದರೆ ಇಸ್ಮಾಯಿಲ್ ಆದಿಲ್ ತೆಲಂಗಾಣದ ದಾಳಿಗಾಗಿ ಅಮೀರ್ ಬಾರಿದ್‌ನ ಜೊತೆಗೂಡಿದನು ಮತ್ತು ಕೋವಿಲಕೊಂಡಕ್ಕೆ ಮುತ್ತಿಗೆ ಹಾಕಿದನು. ಆ ದಂಡಯಾತ್ರೆಯ ಕಾರಣಗಳಲ್ಲಿ ವಿಜಯನಗರದ ಪಾತ್ರವಿರಲಿಲ್ಲ.

21 ಫಿರಿಸ್ತಾ ಈ ಕತೆಯನ್ನು ಖುಲಿಯ ಉತ್ತರಾಧಿಕಾರಿ ಜಮಶಿದ್ ಕುತುಬ್ ಶಾಹ (೧೫೪೩-೫೦)ನ ಬಗೆಗೆ ಹೇಳುತ್ತಾನೆ.

22 ಹೀಗೆ ನೂನಿಜ್ ಹೇಳುತ್ತಾನೆ, ಆದರೆ, ಮೇಲೆ ಹೇಳಿದಂತೆ, ಫಿರಿಸ್ತಾ ಭಿನ್ನಾಭಿಪ್ರಾಯ ಹೊಂದಿದ್ದಾನೆ. ನನ್ನ ಅಭಿಪ್ರಾಯದಲ್ಲಿ ಮೊದಲನೆಯದೆ ಸರಿಯೆಂದು ನಾವು ಸ್ವೀಕರಿಸಬೇಕು. ಏಕೆಂದರೆ, ಅವನ ವೃತ್ತಾಂತ ಇಷ್ಟು ಸ್ಪಷ್ಟವೂ ವಿವರವಾದುದೂ ಇದೆಯಲ್ಲ, ಅವನು ತಪ್ಪು ಮಾಡಿರುವನೆಂದು ನಂಬುವುದು ಅಸಾಧ್ಯ. ಫಿರಿಸ್ತಾ ಬರೆದುದು ಅನೇಕ ವರ್ಷಗಳ ನಂತರ, ಹೀಗಾಗಿ ಅವನು ತಪ್ಪು ಮಾಡುವ ಸಾಧ್ಯತೆ ಹೆಚ್ಚು, ಅನೇಕ ಪೋರ್ತುಗೀಜರು ಮುತ್ತಿಗೆಯ ಕಾಲಕ್ಕೆ ಉಪಸ್ಥಿತರಿದ್ದರು. ನನ್ನ ಎಣಿಕೆ ತಪ್ಪಾಗಿಲ್ಲವಾದರೆ ಸ್ವತಃ ನೂನಿಜ್ ಉಪಸ್ಥಿತನಿದ್ದ. ಇಲ್ಲವೆ ಉಪಸ್ಥಿತರಿದ್ದವರಿಂದ ಮಾಹಿತಿ ಸಂಗ್ರಹಿಸಿದ. ಆ ಕತೆ ವೈಯಕ್ತಿಕ ವೃತ್ತಾಂತದ ಎಲ್ಲ ಲಕ್ಷಣಗಳನ್ನೂ ಹೊಂದಿದೆ.

## ಅಧ್ಯಾಯ ೧೧

# ರಾಯಚೂರ ದಾಳಿ ಮತ್ತು ಯುದ್ಧ, ಮತ್ತು ಕೃಷ್ಣನ ಆಳಿಕೆಯ ಕೊನೆ
## (ಕ್ರಿ.ಶ.೧೫೨೦ ರಿಂದ ೧೫೩೦)

**ದಾಳಿಯ ಕಾಲ–ಕ್ಯಾಸ್ಟನ್ಹೆಡಾ, ' ಕೊರಿಯಾ ಬ್ಯಾರೊಸ್, ಫಾರಿಯಾಯಿ ಸೌಜಾ, ಒಸಾರಿಯಾ, ಲಾಫಿತೊ, ಫಿರಿಸ್ತಾರ (evidence) ಆಧಾರ–ರಾಯ್ ದ ನೆಲೊ ಮತ್ತು ಗೋವಾದ ವಿಸ್ತಾರವಾದ ಭೂಭಾಗ–ವಿಪುಲ ಸಂಖ್ಯೆಯಲ್ಲಿ ಯುದ್ಧನಿರತರು–ಯುದ್ಧ ಕುರಿತು ಫಿರಿಸ್ತಾನ ಕಥನ–ಪೋರ್ತುಗೀಜರ ಉಪಸ್ಥಿತಿ–ಕ್ರಿಸ್ಟೊವಾಒ ದ ಫಿಗ್ವೆರೆಡೊ–ಹಿಂದೂ ವಿಜಯದ ರಾಜಕೀಯ ಪರಿಣಾಮಗಳು ಮತ್ತು ನಂತರ ಜರುಗಿದ ಘಟನೆಗಳು–ಗೋವಾದ ವಿಸ್ತಾರವಾದ ಭೂಭಾಗ**

ರಾಯಚೂರಿನ ಮಹಾಯುದ್ಧ ಮತ್ತು ದಾಳಿಯ ವೃತ್ತಾಂತಕ್ಕಾಗಿ ನೂನಿಜ್[1]ನ ಕಥಾನಕದತ್ತ ಹೊರಳಲು ನಾನು ಓದುಗರನ್ನು ಕೇಳಿಕೊಳ್ಳುತ್ತೇನೆ. ಅವನ ವರ್ಣನೆ ಎಷ್ಟೊಂದು ಸಂಪೂರ್ಣ ಹಾಗೂ ಕಣ್ಣಿಗೆ ಕಟ್ಟುವಂತಿದೆಯೆಂದರೆ ಅದನ್ನು ಇದ್ದಂತೆಯೆ ಇಡುವುದೆ ಲೇಸು. ನನಗೆ ಕೆಲವು ಟಿಪ್ಪಣಿಗಳನ್ನು ಸೇರಿಸುವುದಷ್ಟೇ ಅಗತ್ಯವಿದೆ.

ಆ ಕಥಾನಕದ ಸಂಕ್ಷಿಪ್ತ ಸಂಗ್ರಹ ಕೆಳಗಿನಂತಿದೆ :

ಆದಿಲ್ ಶಾಹನ ಮೇಲೆ ಆಕ್ರಮಣ ಮಾಡಲು ಮತ್ತು ರಾಯಚೂರಿನ ವಾದಗ್ರಸ್ತ ಕೋಟೆಯನ್ನು ಕಡೆಯದಾಗಿ ವಶಪಡಿಸಿಕೊಳ್ಳಲು ನಿರ್ಧರಿಸಿ ಕೃಷ್ಣದೇವರಾಯ ತನ್ನ ಎಲ್ಲ ಸೈನ್ಯ ಶೇಖರಿಸಿದನು ಮತ್ತು ಅಪಾರ ದಂಡಿನೊಂದಿಗೆ ವಿಜಯನಗರದಿಂದ ಹೊರಟು ಈಶಾನ್ಯ ದಿಕ್ಕಿನಲ್ಲಿ ಸಾಗಿದನು. ಅದು ಒಣಹವೆಯ ಋತುವಾಗಿತ್ತು, ಮತ್ತು ಅವನು ಬಹುಶಃ ಫೆಬ್ರುವರಿ ಅಥವಾ ಮಾರ್ಚ್ ತಿಂಗಳಲ್ಲಿ ಹೊರಟನು. ಅವನ ಮುನ್ನಡೆಯ ಕಾಲದಲ್ಲಿ ಹವೆ ಅತೀವ ಉಷ್ಣವಾಗಿದ್ದಿರಲಿಕ್ಕೆ ಸಾಕು. ದಂಡಯಾತ್ರೆಯ ಸಮಯಕ್ಕೆ ಅದು ಇನ್ನೂ ಉಷ್ಣವಾಗಿರಬೇಕು. ಆದರೆ ದಂಡಯಾತ್ರೆ ಹಾಗೂ ವಾಪಸಾತಿಯ ಮಾರ್ಗದಲ್ಲಿದ್ದ ಹತ್ತಿಯ ಬಯಲುಗಳು ಅವನ ಸೈನ್ಯ, ತೋಪು ಮತ್ತು ಸರಂಜಾಮುಗಳ ಸಾಗಣೆಗೆ ಅತ್ಯುತ್ತಮ ಸ್ಥಿತಿಯಲ್ಲಿದ್ದವು. ಸೇನಾನುಚರರೂ ಸೇರಿದಂತೆ ಅವನ ಬೃಹತ್ ಸೈನ್ಯ ಒಂದು ದಶಲಕ್ಷ

ಜನರನ್ನು ಹೊಂದಿತ್ತು; ಏಕೆಂದರೆ, ನೂನಿಜ್‌ನ ಪ್ರಕಾರ, ಯುದ್ಧಾಳುಗಳೆ ಸುಮಾರು ೭೩೬,೦೦೦ ಇದ್ದರಲ್ಲದೆ ೫೫೦ ಆನೆಗಳಿದ್ದವು. ಸೈನ್ಯ ಏಳು ದಳಗಳಲ್ಲಿ ಮುನ್ನಡೆಯಿತು, ಮತ್ತು ಇತರ ಸೈನ್ಯಗಳೂ ರಾಯಚೂರು ತಲುಪುವ ಮುನ್ನ ಬಂದು ಸೇರಿದವು.

ಅವನು ಆ ದುರ್ಗದ ಪೂರ್ವ ಬದಿಗೆ ಬಿಡಾರ ಹೂಡಿದ, ಆ ಸ್ಥಳಕ್ಕೆ ಮುತ್ತಿಗೆ ಹಾಕಿದನು, ಮತ್ತು ಕ್ರಮವಾದ ದಾಳಿ ಆರಂಭಿಸಿದನು. ಕೆಲ ಕಾಲದ ನಂತರ, ವಿಜಾಪುರದಿಂದ ೧,೪೦,೦೦೦ ಅಶ್ವಾಳು ಮತ್ತು ಕಾಲಾಳುಗಳೊಂದಿಗೆ ಕೃಷ್ಣೆಯ ಉತ್ತರಕ್ಕೆ ಆದಿಲ್ ಶಾಹ ತನ್ನ ವಿರುದ್ಧ ಯುದ್ಧ ಮಾಡಲು ಬಂದ ಸುದ್ದಿ ಅವನಿಗೆ ತಲುಪಿತು.

ತನ್ನ ಸೈನ್ಯಕ್ಕೆ ಕೆಲವು ದಿನಗಳ ವಿಶ್ರಾಂತಿ ನೀಡಿ ಸುಲ್ತಾನನು ನದಿಯನ್ನು ದಾಟಿ (ನೂನಿಜ್ ಪ್ರಕಾರ)ರಾಯಚೂರಿನಿಂದ ಒಂಬತ್ತು ಮೈಲು ದೂರದವರೆಗೆ ಸಾಗಿ, ನದಿಯನ್ನು ಐದು ಮೈಲು ತನ್ನ ಹಿಂದೆ ಬಿಟ್ಟು, ಅಲ್ಲಿ ತಳವೂರಿದ[2]. ಆದರೆ ಎದುರು ದಡದಲ್ಲಿ ಬೀಡುಬಿಟ್ಟಿದ್ದ ಹಿಂದೂ ಸೈನ್ಯದ ಎದುರುಗಡೆ ನೇರವಾಗಿಯೆ ಮುಹಮ್ಮದೀಯ ಸೈನ್ಯ ನದಿ ದಾಟಿತೆಂದು ಫಿರಿಸ್ತಾ ಭಿನ್ನ ಅಭಿಪ್ರಾಯ ತಾಳಿದ್ದಾನೆ.

ನನ್ನ ಊಹನದಂತೆ ಕ್ರಿ.ಶ.೧೫೨೦, ಮೇ ೧೯, ಶನಿವಾರ ಬೆಳಿಗ್ಗೆ ಸೈನ್ಯಗಳು ಯುದ್ಧದಲ್ಲಿ ತೊಡಗಿದವು ಮತ್ತು ನಿರ್ಣಾಯಕ, ಛಲ ಯುದ್ಧವಾಯಿತು. ವೈರಿಯನ್ನು ಸುತ್ತುಗಟ್ಟಲೆತ್ನಿಸಿದ ಕೃಷ್ಣದೇವ ತನ್ನ ಎರಡೂ ಮುಂದಳಗಳನ್ನು ತನ್ನ ನೇರ ಮುಂಭಾಗಕ್ಕೆ ಮುನ್ನಡೆಯಲು ಆಜ್ಞಾಪಿಸಿದ. ಅವುಗಳ ಆಕ್ರಮಣ ಮುಹಮ್ಮದೀಯರನ್ನು ತಮ್ಮ ಕಂದಕಗಳಿಗೆ ಹಿಮ್ಮೆಟ್ಟಿಸುವಷ್ಟು ಯಶಸ್ವಿಯಾಯಿತು. ರಾಯನು ಹಾಗೆಯೆ ಮಾಡುವನೆಂದು ನಿರೀಕ್ಷಿಸಿ ಸುಲ್ತಾನನು ತನ್ನ ಸೈನ್ಯವನ್ನು ತೀರ ವ್ಯಾಪಕ ಪ್ರದೇಶದಲ್ಲಿ ಹರಡಿದ್ದ. ಆದರೆ, ಮಧ್ಯದಲ್ಲಿ ತಾನು ದುರ್ಬಲನಾಗಿರುವುದನ್ನು ತಿಳಿದು ಈ ಮೊದಲು ಕಾಯ್ದಿರಿಸಿದ್ದ ತೋಪುಗಳನ್ನು ಹಾರಿಸಿದ. ಆ ಉಪಾಯದಿಂದ ಹಿಂದೂಗಳ ನಿಕಟ ಸೈನ್ಯ ಸಾಲುಗಳಲ್ಲಿ ಬಹಳ ನಷ್ಟ ಉಂಟುಮಾಡಿದ. ಈ ಬಿರುಸಾದ ಗುಂಡಿನ ಸುರಿಮಳೆಯ ಸಮ್ಮುಖದಲ್ಲಿ ರಾಯನ ಸೈನ್ಯಗಳು ಹಿಂದೆ ಸರಿದವು ಮತ್ತು ವೈರಿಗಳು ತಕ್ಷಣ ಅವರ ಮೇಲೆ ಬಿದ್ದರು. ಹಿಮ್ಮೆಟ್ಟುವಿಕೆ ದಿಕ್ಕೆಟ್ಟ ಓಟವಾಗಿ ಬದಲಾಯಿತು, ಮತ್ತು ಮುಸಲ್ಮಾನ ಅಶ್ವದಳ ತಮ್ಮ ನೇರ ಮುಂದಿನ ಒಂದೂವರೆ ಮೈಲಿನವರೆಗೆ ಕೃಷ್ಣದೇವರಾಯನ ಪ್ರಥಮ ಸಾಲಿನ ಓಡುತ್ತಿದ್ದ ಸೈನಿಕರನ್ನು ಬೆನ್ನಟ್ಟಿದಳು. ಎರಡನೆಯ ಸಾಲಿನ ಅಧಿಪತ್ಯ ವಹಿಸಿದ್ದ ರಾಜನಾದರೋ ವಿಜಯದ ಬಗೆಗೆ ನಿರಾಶೆ ಹೊಂದಿದನಾದರೂ ತನ್ನ ಸೈನ್ಯಗಳನ್ನು ಪುನಃ ವ್ಯೂಹಕಟ್ಟಿದ, ಅನೇಕ ಸರದಾರರನ್ನು ತನ್ನ ಸುತ್ತ ಒಟ್ಟುಗೂಡಿಸಿ ತನಗೆ ಯಾವಾಗಲೂ ಸಹಜವಾಗಿದ್ದ ಧೈರ್ಯದಿಂದ ಮೃತ್ಯುವನ್ನೆದುರಿಸಲು ನಿರ್ಧರಿಸಿದನು. ತನ್ನ ಕುದುರೆ ಏರಿ ತನ್ನ

ಅಳಿದುಳಿದ ದಳಗಳನ್ನೆಲ್ಲ ಮುನ್ನುಗ್ಗುವಂತೆ ಆಜ್ಞಾಪಿಸಿದ, ಮತ್ತು ಈಗ ಅಸ್ತವ್ಯಸ್ತ ವಾಗಿದ್ದ ಮುಸಲ್ಮಾನ ಸಾಲುಗಳ ಮೇಲೆ ದಾಳಿಯಿಟ್ಟ. ಇದು ಸಂಪೂರ್ಣ ಯಶಸ್ಸಾಗಿ ಪರಿಣಮಿಸಿತು. ಏಕೆಂದರ, ಹರಡಿ ಹೋಗಿದ್ದ ವೈರಿಗಳ ವ್ಯೂಹ ರಚಿಸಲು ಅಸಮರ್ಥರಾಗಿ ಅವನ ರಭಸದ ಮೇಲ್ನುಗ್ಗಿನಿಂದಾಗಿ ಪಲಾಯನ ಗೈದರು. ಅವನು ಅವರನ್ನು ದಾರಿಯುದ್ದಕ್ಕೂ ಹೊಡೆದೋಡಿಸುತ್ತ ಮರಳಿ ನದಿಯೊಳಕ್ಕೆ ಅಟ್ಟಿದ. ಅಲ್ಲಿ ಭಯಂಕರ ಸಂಹಾರ ನಡೆದು ಅವರ ಇಡಿ ಸೈನ್ಯವನ್ನು ಅಟ್ಟಿ ಓಡಿಸಲಾಯಿತು.

ತರುವಾಯ ರಾಯ ನದಿ ದಾಟಿ ಶಾಹನ ಠಾಣ್ಯವನ್ನು ವಶಪಡಿಸಿಕೊಂಡ.ಆದರೆ ಮುಂದೆ ಬಹಳ ಪ್ರಸಿದ್ಧನಾದ ಅಸದ ಖಾನನ ಸಲಹೆ ಹಾಗೂ ನೆರವಿನ ಮೇರೆಗೆ ಶಾಹ ತನ್ನ ಜೀವ ಉಳಿಸಿಕೊಂಡು ಪಾರಾದ ಮತ್ತು ಆನೆಯ ಮೇಲೆ ಕುಳಿತು ರಣರಂಗದಿಂದ ಓಡಿಹೋದ.

ನದಿಯತ್ತ ಹಿಂದೆ ಅಟ್ಟಲ್ಪಡುತ್ತಿದ್ದಾಗ ಶಾಹನ ದಂಡನಾಯಕ ಸಲಾಬತ್ ಖಾನ ಅಂದಿನ ಅದೃಷ್ಟವನ್ನು ಮರಳಿ ಪಡೆಯಲು ಧೀರ ಪ್ರಯತ್ನ ಮಾಡಿದ. ಅವನ ಅಂಗರಕ್ಷಣೆಗಾಗಿ ಇದ್ದ ೫೦೦ ಪೋರ್ತುಗೀಜ "ಸ್ವಪಕ್ಷ ದ್ರೋಹಿ"ಗಳು ಅವನೊಂದಿಗೆ ಹಿಂದೂಗಳ ಮುನ್ನುಗ್ಗುತ್ತಿದ್ದ ಪಡೆಗಳ ಮೇಲೆ ಮುಗಿಬಿದ್ದರು. ಅವರು "ಎಂಥ ಅದ್ಭುತ ಕಾರ್ಯಗಳನ್ನೆಸಗಿದರೆಂದರೆ"ಅವರನ್ನು ಮುಂದೆ ಎಂದೆಂದೂ ಸ್ಮರಿಸಲಾಯಿತು. ಅವರು ಅರಸನ ದಂಡನ್ನು ಭೇದಿಸಿ ಹೆಚ್ಚುಕಡಿಮೆ ಅವನನ್ನು ತಲುಪುವವರೆಗೆ ಚೆಂಡರಿಸುತ್ತ ದಾರಿ ಮಾಡಿಕೊಂಡರು. ಇಲ್ಲಿ ಸಲಾಬತ್ ಖಾನ ಕುದುರೆ ಕಳೆದು ಕೊಂಡ, ಆದರೆ, ಕೂಡಲೆ ಇನ್ನೊಂದನ್ನೇರಿ ಮುನ್ನುಗಿದ, ಆದರೆ, ಅಲ್ಪ ಸೈನ್ಯವನ್ನು ಸುತ್ತುಗಟ್ಟಿ ನಾಶಪಡಿಸಲಾಯಿತು. ದಂಡನಾಯಕ ಎರಡನೆಯ ಸಲ ಕುದುರೆಯಿಂದ ಕೆಳಕ್ಕೆ ಬಿದ್ದು ಕುದುರೆಯೊಂದಿಗೆ ಸೆರೆಸಿಕ್ಕ.

ಸೂರೆ ವಿಪುಲವಾಗಿತ್ತು, ಪರಿಣಾಮ ನಿರ್ಣಾಯಕವಾಗಿತ್ತು. ನಂತರ ಅನೇಕ ವರ್ಷಗಳವರೆಗೆ ಮುಸಲ್ಮಾನರು ಕೃಷ್ಣರಾಯ ಮತ್ತು ಅವನ ಶೂರ ಸೈನಿಕರೆಂದರೆ ಬಲು ಭಯಪಡುತ್ತಿದ್ದರು. ಭೀತಿಗ್ರಸ್ತ ಸುಲ್ತಾನನು ತನ್ನ ವೈರಿಯ ಜೀವಿತ ಕಾಲದಲ್ಲಿ ಇನ್ನೊಮ್ಮೆ ಎಂದೂ ವಿಜಯನಗರದ ಒಳರಾಷ್ಟ್ರಗಳ ಮೇಲೆ ಆಕ್ರಮಣ ಮಾಡಲೆತ್ನಿಸಲಿಲ್ಲ. ಗೆಲವಿನಿಂದ ಹೂರುಪಿಗೆದ್ದ ಕೃಷ್ಣದೇವ ಕೂಡಲೆ ರಾಯಚೂರಿನ ಆಕ್ರಮಣಕ್ಕೆ ಮರಳಿದ ಮತ್ತು ಅಲ್ಪ ಕಾಲದ ನಂತರ ಆ ದುರ್ಗವನ್ನು ವಶಪಡಿಸಿ ಕೊಳ್ಳಲಾಯಿತು.

ಅದರ ಪತನಕ್ಕೆ ಕ್ರಿಸ್ತೊವಾಒ ದ ಫಿಗ್ಯೆರೆಡೊನ ನೇತೃತ್ವದಲ್ಲಿ ಕೆಲವು ಪೋರ್ತುಗೀಜರು ನೀಡಿದ ನೆರವು ಬಹುಮಟ್ಟಿಗೆ ಕಾರಣವಾಯಿತು. ಕೋಟೆಗೋಡೆಗಳ ಮೇಲಿದ್ದ ರಕ್ಷಕರನ್ನು ಅವರು ತಮ್ಮ ತುಬಾಕಿಗಳಿಂದ ಒಬ್ಬೊಬ್ಬರಾಗಿ ಗುಂಡಿಕ್ಕಿ ಕೊಂಡು ದಾಳಿಗಾರರು ಕೋಟೆ ಗೋಡೆಸಾಲುಗಳ ತೀರ ಹತ್ತಿರ ಸಾಗಿ ಅವುಗಳ

ಕಲ್ಲುಗಳನ್ನು ಕೆಡವಲು ಸಾಧ್ಯವಾಗಿಸಿದರು. ತಮ್ಮ ದುರ್ಗಪತಿ ಕೊಲ್ಲಲ್ಪಟ್ಟುದರಿಂದ ಹತಾಶೆಗೊಂಡು ಕಾವಲುದಂಡು ಶರಣಾಯಿತು.

## ಯುದ್ಧದ ಕಾಲ

ಈಗ ಯುದ್ಧದ ಕಾಲದ ಕುರಿತು.

ನೂನಿಜ್ ಮಹಾಯುದ್ಧದ ಕಾಲವನ್ನು ಕ್ರಿ.ಶ. ೧೫೨೨, ಮೇ ತಿಂಗಳಿನ ಅಮವಾಸ್ಯೆಯ ದಿನವೆಂದು ನಿರ್ಧರಿಸುವಾಗ ಅವನು ಇಸ್ವಿಯಲ್ಲಿ ತಪ್ಪು ಎಸಗಿದನು ಮತ್ತು ೧೫೨೦ ಬರೆಯಬೇಕಿತ್ತು ಎಂದು ನಂಬುವಷ್ಟು ಮತ್ತು ಸಮರ್ಥಿಸಿಕೊಳ್ಳುವಷ್ಟು ಧೈರ್ಯ ನನಗಿದೆ.

ಕೃಷ್ಣದೇವ ಶುಕ್ರವಾರ ಯುದ್ಧಮಾಡಲು ಸಿದ್ಧನೆಂತಲೂ ಆದರೆ ಶುಕ್ರವಾರ ಅಶುಭವೆಂದು ಮಂತ್ರಿಗಳು ಮನವೊಲಿಸಿದ್ದರಿಂದ ಯುದ್ಧವನ್ನು ಮರುದಿನಕ್ಕೆ ಮುಂದೂಡಿದನೆಂತಲೂ ಚರಿತ್ರೆಕಾರ ಹೇಳುತ್ತಾನೆ. ಅದರಂತೆ ಯುದ್ಧ ಅಮವಾಸ್ಯೆಯ ದಿನವಾಗಿದ್ದ ಶನಿವಾರ ಜರುಗಿತು.

ತಿಂಗಳು ಮತ್ತು ದಿನ ಪರಿಶೀಲಿಸುವ ಮುನ್ನ ಯುದ್ಧದ ಕ್ರಿ.ಶ. ಇಸ್ವಿಯನ್ನು ಪರಿಗಣಿಸೋಣ.

ರಾಜಧಾನಿಯಲ್ಲಿನ ಎರಡು ಭವ್ಯ ಉತ್ಸವಗಳನ್ನು ಪ್ಯಾಸ್ ವರ್ಣಿಸುತ್ತಾನೆ. ಅವನು ಅವುಗಳನ್ನು ಪ್ರತ್ಯಕ್ಷ ನೋಡಿದ್ದ ಮತ್ತು ಕ್ರಿಸ್ಟೊವಾಒದ ಫಿಗ್ವೆರೈಡೊ ಕೂಡ ಉಪಸ್ಥಿತನಿದ್ದ. ಅವುಗಳು ಜರುಗಿದ ದಿನಗಳನ್ನು ಖಚಿತವಾಗಿ ನಿರ್ಣಯಿಸುತ್ತಾನೆ. ಮೊದಲನೆಯದು ಒಂಬತ್ತು ದಿನಗಳ ಮಹಾನವಮಿ ಉತ್ಸವ, ಎರಡನೆಯದು ಹೊಸ ವರ್ಷದ ದಿನ. ತಾನು ಉಪಸ್ಥಿತನಿದ್ದ ಸಂದರ್ಭದಲ್ಲಿ ಮಹಾನವಮಿ ಸಪ್ಟಂಬರ ೧೨[3]ರಂದು ಆರಂಭವಾಯಿತು ಮತ್ತು ಎರಡನೆಯದು ಅಕ್ಟೋಬರ ೧೨[4] ರಂದು ಆರಂಭವಾಯಿತು ಎಂದು ಪ್ಯಾಸ್ ಹೇಳುತ್ತಾನೆ. ಇದಕ್ಕಿಂತ ಪೂರ್ವದಲ್ಲಿ ರಾಯಚೂರು ಕುರಿತು ಬರೆಯುವಾಗ ಪ್ಯಾಸ್ ಆ ಊರನ್ನು[5] "ಈ ಮೊದಲು ನರಸಿಂಗ (i.e, ವಿಜಯನಗರ)ದ ರಾಜನಿಗೆ ಸೇರಿದ ನಗರ; ಅದರ ಸಲುವಾಗಿ ಬಹಳ ಯುದ್ಧವಾಗಿದೆ, ಮತ್ತು ಈ ರಾಜ ಅದನ್ನು ಯಿಡಲಿ ಕಾಒ (ಆದಿಲ್ ಶಾಹ)ನಿಂದ ಕಿತ್ತುಕೊಂಡ" ಎಂದು ವರ್ಣಿಸಿದ್ದಾನೆ. ಆದುದರಿಂದ, ಕೃಷ್ಣದೇವನ ರಾಯಚೂರು ವಿಜಯದ ತರುವಾಯ ಜರುಗಿದ ಈ ಉತ್ಸವಗಳಲ್ಲಿ ಚರಿತ್ರೆಕಾರ ಉಪಸ್ಥಿತನಿದ್ದ.

ಈ ಪ್ರದೇಶಗಳಲ್ಲಿ ಮಹಾನವಮಿ ಉತ್ಸವ ಆಶ್ವಿನದ ಮೊದಲ ತಿಂಗಳಲ್ಲಿ ಆರಂಭವಾಗುತ್ತದೆ ಮತ್ತು ಪ್ಯಾಸ್‌ನ ಕಾಲಕ್ಕೆ ಹೊಸ ವರ್ಷದ ದಿನವನ್ನು ಹಿಂದಿನ ಕಾಲದಲ್ಲಿ ರೂಢಿಯಿದ್ದಂತೆ ಕಾರ್ತಿಕ ತಿಂಗಳ ಮೊದಲ ದಿನದಂದು ಆಚರಿಸಲಾಗುತ್ತಿತ್ತು. ಇವೆರಡೂ ದಿನಗಳು ಅಮವಾಸ್ಯೆಯ ದಿನದ ಮರುದಿನಗಳಾಗಿದ್ದವು.

ಅಂದಮೇಲೆ, ಕೃಷ್ಣದೇವರಾಯನ ಆಳಿಕೆಯ ಕಾಲದಲ್ಲಿ ಆಶ್ವಿನದ ಮೊದಲ ದಿನ ಮತ್ತು ಕಾರ್ತಿಕದ ಮೊದಲ ದಿನ ಅನುಕ್ರಮವಾಗಿ ಸಪ್ಟಂಬರ ೧೨ ಮತ್ತು ಅಕ್ಟೋಬರ್ ೧೨ರಂದು ಸಂಭವಿಸುತ್ತವೆ ? ಅವನ ಆಳಿಕೆಯ ಎಲ್ಲ ವರ್ಷಗಳಲ್ಲಿಯೂ ಈ ತಾರೀಖುಗಳನ್ನು ನಾನು ಲೆಕ್ಕ ಹಾಕಿರುವೆ. ಮತ್ತು ಕ್ರಿ.ಶ. ೧೫೨೦ ನ್ನುಳಿದು ಬೇರಾವ ವರ್ಷದಲ್ಲೂ ಹಾಗೆ ಸಂಭವಿಸವಿಲ್ಲವೆಂಬುದನ್ನು ಕಂಡುಹಿಡಿದಿದ್ದೇನೆ. ೧೫೨೧ರಲ್ಲಿ ಮಹಾನವಮಿ ಸಪ್ಟಂಬರ ೨ರಂದು ಬಂತು, ಮತ್ತು ಹೊಸ ವರ್ಷ ದಿನ ಅಕ್ಟೋಬರ್ ೧ರಂದು ಬಂತು; ೧೫೨೨ರಲ್ಲಿ ಮೊದಲನೆಯದು ಸಪ್ಟಂಬರ್ ೨೦ ಮತ್ತು ಎರಡನೆಯದು ಅಕ್ಟೋಬರ್ ೨೦ರಂದು ಬಂದವು. ಇದರಿಂದ ಪ್ಯಾಸ್ ಕ್ರಿ.ಶ. ೧೫೨೦ರ ಉತ್ಸವಗಳಲ್ಲಿ ನೆರವಾದ ಮತ್ತು ಆದ್ದರಿಂದ ರಾಯಚೂರಿನ ಯುದ್ಧ ಮತ್ತುಸ್ವಾಧೀನ ಆ ವರ್ಷದ ಸಪ್ಟಂಬರ್ ತಿಂಗಳಿಗಿಂತ ಪೂರ್ವದಲ್ಲಿ ಜರುಗಿರಬೇಕೆಂದು ಗೊತ್ತಾಗುತ್ತದೆ.

ಕ್ರಿಸ್ಟೋವಾಒ ದ ಫಿಗ್ವೆರೆಡೊನಿಗೆ ರಾಜ ನೀಡಿದ ಭವ್ಯ ಸ್ವಾಗತ ಮತ್ತು ಈ ಉತ್ಸವಗಳ ಕಾಲಕ್ಕೆ ರಾಜ ಪೋರ್ತುಗೀಜರಿಗೆ ತೋರಿದ ಅಸಾಧಾರಣ ಪ್ರೀತಿ[6] ಇವುಗಳ ಮೇಲೆ ಇದು ಹೊಸ ಬೆಳಕು ಚೆಲ್ಲುತ್ತದೆ. ನಗರದ ಮುತ್ತಿಗೆಯ ಕಾಲಕ್ಕೆ ಅವನ ಅಮೂಲ್ಯ ನೆರವು ಹಾಗೂ ಅವನಿಲ್ಲದಿದ್ದರೆ ಯುದ್ಧ ಇನ್ನೂ ಬಹಳ ಕಾಲ ಮುಂದುವರಿಯುತ್ತಿತ್ತೆಂಬ ಕಾರಣಕ್ಕಾಗಿ ಕೃಷ್ಣರಾಯ ಕ್ರಿಸ್ಟೋವಾಒನೊಂದಿಗೆ ವಿಶೇಷ ಪ್ರೀತಿ ಹೊಂದಿದ್ದ.

ನಾವೀಗ ಇತರ ಪೋರ್ತುಗೀಜ ಬರಹಗಾರರತ್ತ ತಿರುಗೋಣ ಮತ್ತು ರಾಯಚೂರಿನ ಪತನಕ್ಕೆ ನಮ್ಮ ೧೫೨೦ರ ಕಾಲವನ್ನು ಅವರು ದೃಢೀಕರಿಸುತ್ತಾರೊ ಹೇಗೆಂದು ನೋಡೋಣ.

ಈ ಪ್ರಶ್ನೆಯ ನಿರ್ಣಯ ಪೋರ್ತುಗೀಜರು ಗೋವಾ ದ್ವೀಪದ ಎದುರಿಗಿನ ಸ್ಯಾಲ್‌ಸೆಟ್, ಪೊಂಡಾ, ಮತ್ತು ಬಾರ್ಡ್ಸ್ ಪ್ರದೇಶಗಳನ್ನೊಳಗೊಂಡ ವಿಸ್ತೃತ ಭೂಭಾಗವನ್ನು ಪಡೆದ ಕಾಲವನ್ನೆ ಮುಖ್ಯವಾಗಿ ಅವಲಂಬಿಸಿದೆ. ಮಹಾ ಮಂಡಲಾಧಿಪತಿ ಡಿಒಗೊ ಲೋಪ್ಸ್ ದ ಸಿಕ್ವೈರಾ ಕೆಂಪು ಸಮುದ್ರದಲ್ಲಿದ್ದಾಗ ಮತ್ತು ರಾಯ್‌ದ ಮೆಲೊ ಗೋವಾದ ಮಂಡಲಾಧಿಪತಿಯಾಗಿದ್ದಾಗ, ರಾಯಚೂರಿನ ಪತನಾನಂತರ ಕೂಡಲೆ ಕೃಷ್ಣದೇವನ ಪರೋಕ್ಷ ಸಮ್ಮತಿಯೊಂದಿಗೆ ವಿಸ್ತೃತ ಭೂಭಾಗದ ಈ ಸ್ವಾಧೀನ ನಡೆದುದು ಖಚಿತ. ಸಿಕ್ವೈರಾ ಗೋವಾ ಬಿಟ್ಟು ಕೆಂಪು ಸಮುದ್ರದೆಡೆ ಹೊರಟಿದ್ದು ಫೆಬ್ರುವರಿ ೧೩, ಕ್ರಿ.ಶ. ೧೫೨೦ರಂದು, ಮತ್ತು ಭಾರತ ದಲ್ಲಿ ದೀವ್ ಎದುರು ಪುನಃ ಆಗಮಿಸಿದ್ದು ಫೆಬ್ರುವರಿ ೯, ೧೫೨೧ರಂದು.

ಕ್ಯಾಪ್ಟನ್ ಹೆಡಾ (ಅವನು ೧೫೨೪ರಲ್ಲಿ ಭಾರತದಲ್ಲಿದ್ದುದರಿಂದ ಒಳ್ಳೆಯ ಆಧಾರವಾಗಿದ್ದಾನೆ) ಹೇಳುವದೇನೆಂದರೆ ಸಿಕ್ವೈರಾ ಕೆಂಪು ಸಮುದ್ರದಲ್ಲಿರುವಾಗ

ವಿಜಯನಗರದ ರಾಜ ಮತ್ತು ಆದಿಲ್ ಶಾಹ[7]ರ ಮಧ್ಯೆ ಯುದ್ಧ ಆರಂಭವಾಯಿತು, ಅದರ ಅಂತ್ಯಸಮಯದಲ್ಲಿ ಆದಿಲ್ ಶಾಹ ಸೋತು ಓಟ ಕಿತ್ತ ಮತ್ತು ಹಿಂದೂಗಳು ರಾಯಚೂರು ಹಾಗೂ ಇತರ ಸ್ಥಳಗಳನ್ನು ವಶಪಡಿಸಿಕೊಂಡರು.

"ಅದರ ಪರಿಣಾಮವಾಗಿ ಗೋವಾದ ಹತ್ತಿರವಿದ್ದ ಭೂಖಂಡದ ಮೇಲಣ ಠಾಣೆ-ದಾರಿಗಳಲ್ಲ[8]ನೇಕ ಅಸಂರಕ್ಷಿತವಾಗುಳಿದವು. ಮತ್ತು ನರಸಿಂಗದ ರಾಜ ಬಹಳ ಶ್ರೀಮಂತನಿದ್ದುದರಿಂದ, ಮತ್ತು ಅವನಿಗೆ ಈ ಭೂಮಿಗಳ ಅಗತ್ಯವಿಲ್ಲದಿದ್ದುದರಿಂದ ಮತ್ತು ಗೋವಾಕ್ಕೆ ಬಂದ ಎಲ್ಲ ಕುದುರೆಗಳು ತನಗೆ ಬರಬೇಕಲ್ಲದೆ ಹಿಡಲ್ ಸಾವೊನಿಗೆ ಒಂದೂ ಹೋಗಕೂಡದೆಂಬ ಇಚ್ಛೆಯುಳ್ಳವನಾದುದರಿಂದ ಅವನು ಗೋವಾದ ದಳವಾಯಿ ರಾಯ್‌ದ ಮೆಲೊನಿಗೆ ತಾನು ಹಿಡಲ್ ಸಾವೊನಿಂದ ಶಸ್ತ್ರಾಸ್ತ್ರ ಬಲ ಪ್ರಯೋಗಿಸಿ ಬೆಳಗಾವಿ ಮತ್ತು ಅದಕ್ಕೆ ಸಂಬಂಧಿಸಿದ ಸಮುದ್ರದವರೆಗಿನ ಭೂಮಿಯನ್ನು ಗೆದ್ದಿರುವುದಾಗಿಯೂ ಅದರಲ್ಲಿ ೫೦೦,೦೦೦ಕ್ಕಿಂತ ಅಧಿಕ ಸುವರ್ಣ ಪರ್ದಾಒಗಳನ್ನು ನೀಡುವ ಠಾಣೆದಾರಿಗಳಿವೆಯೆಂದೂ, ಅವುಗಳನ್ನು ಪೋರ್ತುಗಾಲದ ರಾಜನಿಗೆ ಕಾಣಿಕೆ ನೀಡಲು ಬಯಸಿರುವುದಾಗಿಯೂ....ಗೋವಾಕ್ಕೆ ಬಂದ ಎಲ್ಲ ಕುದುರೆಗಳೂ ತನಗೆ ಬೇಕೆಂದೂ ಹೇಳಿ ಕಳುಹಿಸಿದ. ಆದುದರಿಂದ, ಗೋವಾದ ದಳವಾಯಿ ಠಾಣೆದಾರಿಗಳನ್ನು ಪ್ರವೇಶಿಸಿ ಅವುಗಳನ್ನು ಸ್ವಾಧೀನಪಡಿಸಿಕೊಳ್ಳಬಹುದೆಂದು ಅವನು ಹೇಳಿದ."

ಇದನ್ನು ಕೂಡಲೇ ಮಾಡಲಾಯಿತು, ಮತ್ತು ರಾಯ್‌ದ ಮೆಲೊ ಹತ್ತು ದಿನಗಳಲ್ಲಿ ಸ್ಯಾಲ್ಸೆಟೊ ಸೇರಿದಂತೆ ಗೋವಾದ ಭೂಖಂಡವನ್ನು ವಶಕ್ಕೆ ತೆಗೆದುಕೊಂಡ.

ಆ ಕಾಲಕ್ಕೆ ಭಾರತದಲ್ಲಿದ್ದ ಕೊರಿಯಾ ೧೫೧೨ ಅಥವಾ ೧೫೧೪ರಲ್ಲಿ ಅಲ್ಲಿಗೆ ಹೋಗಿದ್ದುದರಿಂದ ದ ಸಿಕ್ವೈರಾ ಗೋವಾದಿಂದ ಕೆಂಪು ಸಮುದ್ರಕ್ಕೆ ಜನವರಿ ೧೫೨೦ರಲ್ಲಿ ಹೊರಟ ಮತ್ತು "ಆ ಸಮಯಕ್ಕೆ" ವಿಜಯನಗರ ಮತ್ತು ಬಿಜಾಪುರ ಮಧ್ಯೆ ಯುದ್ಧ ಹಬ್ಬಿತು ಎಂದು ಹೇಳುತ್ತಾನೆ.[9] ಅದರ ಕೊನೆಗೆ ಹಿಂದೂ ರಾಜ ಮಹಾಮಂಡಲಾಧಿಪತಿ ಅನುಪಸ್ಥಿತನಿದ್ದುದರಿಂದ ಗೋವಾದ ದಳವಾಯಿ ರಾಯ್‌ದ ಮೆಲೊನಿಗೆ ಗೋವಾದ ಭೂಖಂಡದ ಬಗೆಗೆ ಸಂದೇಶ ಕಳಿಸಿದ. ಕೊರಿಯಾ ಇದು ಜರುಗಿದ ವರ್ಷವನ್ನು ಸ್ಪಷ್ಟವಾಗಿ ಹೇಳುವುದಿಲ್ಲ, ಆದರೆ, ೧೮೬೦ರ ಆವೃತ್ತಿಯ ಪುಟದ ಶಿರೋಭಾಗದ ಮೇಲೆ "೧೫೨೦" ಇಸ್ವಿ ಇದೆ. ಆದರೆ, ಇದು ಸಂಪಾದಕ ಎಸಗಿದ ತಪ್ಪಾಗಿರಬೇಕು. ಏಕೆಂದರೆ, ಮೇ ೧೫೨೧ರಲ್ಲಿ ಸಿಕ್ವೈರಾ ಗೈರುಹಾಜರಾಗಿರಲಿಲ್ಲ ಮತ್ತು ಆದುದರಿಂದ ಉಲ್ಲೇಖಿತ ವರ್ಷ ೧೫೨೧ ಆಗಿರಲು ಸಾಧ್ಯವಿಲ್ಲ ; ಮೇ ೧೫೨೨ರಲ್ಲಾದರೊ ಗೋವಾದ ಮಹಾಮಂಡಲಾಧಿಪತಿ ಡಾಮ್ ಡು ಅರ್ಟ್‌ದ ಮೆನೆಜಿಸ್ ಆಗಿದ್ದನಲ್ಲದೆ ಸಿಕ್ವೈರಾ ಅಲ್ಲ.[10]

ಸಿಕ್ವೈರಾ ಪೋರ್ತುಗಾಲಿಗೆ ಜನವರಿ ೨೨, ಕ್ರಿ.ಶ. ೧೫೨೨ರಂದು ಸಮುದ್ರಯಾನ ಮಾಡಿದ.

ಬ್ಯಾರೋಸ್ ಫೆಬ್ರವರಿ ೧೩, ೧೫೨೦ರಂದು ಭಾರತದಿಂದ ಕೆಂಪು ಸಮುದ್ರಕ್ಕೆ ಸಿಕ್ವೈರಾನ ಹೊರಡಿಕೆಯನ್ನು ವರ್ಣಿಸುತ್ತಾನೆ, ಮತ್ತು ಅವನ ಅನುಪಸ್ಥಿತಿಯಲ್ಲಿ ಸಿಕ್ವೈರಾನ ಪ್ರತಿನಿಧಿ ಅಲೆಕ್ಸೊ ದ ಮೆನೆಜಿಸ್‌ನ ಕೈಕೆಳಗೆ ರಾಯ್ ದ ಮೆಲೊ ಮಂಡಲಾಧಿಪತಿಯಾಗಿದ್ದನೆಂದು ಹೇಳುತ್ತಾನೆ. ರಾಯ್ ದ ಮೆಲೊ ರಾಯಚೂರಿನ ಯುದ್ಧದ ನಂತರ ಗೋವಾದ ಭೂಖಂಡವನ್ನು ವಶಪಡಿಸಿಕೊಂಡ,[11] ಮತ್ತು ಆ ಸಮಯದಲ್ಲಿ ಗೈರುಹಾಜರಿದ್ದ ದ ಸಿಕ್ವೈರಾ ಕೆಂಪು ಸಮುದ್ರದಲ್ಲಿದ್ದ. ರಾಯಚೂರಿನ ಮುತ್ತಿಗೆ ಮತ್ತು ಅದರ ನೆರೆಯಲ್ಲಿ ನಡೆದ ಯುದ್ಧ ಕುರಿತು ಅವನು ನೀಡಿರುವ ವರ್ಣನೆ ನೂನಿಜ್‌ನ ವೃತ್ತಾಂತದಿಂದ ತೆಗೆದುಕೊಂಡದ್ದೆಂದು ಸ್ಪಷ್ಟವಾಗಿ ತೋರುತ್ತದೆ. ಅದು ನೂನಿಜ್‌ನನ್ನು ಹೆಸರುಗಳ ಅಶುದ್ಧ ಬಗಹದಲ್ಲೂ ಸಹ ಕಣ್ಣುಮುಚ್ಚಿ ಅನುಸರಿಸುತ್ತದೆ. ಆದುದರಿಂದ, ನಿಜವಾದ ಮಹತ್ವವುಳ್ಳದ್ದಲ್ಲ. ಆದರೆ ಬ್ಯಾರೋಸ್ ಗೋವಾದ ಭೂಖಂಡಗಳನ್ನು ಸ್ವಾಧೀನಪಡಿಸಿಕೊಳ್ಳುವ[12] ಕುರಿತು ಬರೆಯುವಾಗ ಇತರ ಮಾಹಿತಿಯನ್ನು ಅವಲಂಬಿಸಿದ್ದಾನೆ ಮತ್ತು ಬಹಳ ವಿವರವಾದ ವೃತ್ತಾಂತ ನೀಡಿದ್ದಾನೆ. ಕಾಲವನ್ನು ಸ್ಪಷ್ಟವಾಗಿ ನಿರ್ಧರಿಸಲಾಗಿದೆ. ಯುದ್ಧ ಮತ್ತು ಆದಿಲ್ ಶಾಹನ ಪಲಾಯನದ ತರುವಾಯ ಎರಡೂ ಪ್ರತಿಸ್ಪರ್ಧಿಗಳ ಮಧ್ಯೆ ಸಂಬಂಧ ಬಹಳ ಕೆಟ್ಟಿತ್ತು, ಮತ್ತು ಇದರಿಂದ "ಗೋವಾದ ಭೂಖಂಡಗಳನ್ನು ವಶಪಡಿಸಿಕೊಳ್ಳಲು ಗೋವಾದ ದಳವಾಯಿ ರಾಯ್ ದ ಮೆಲೊನಿಗೆ ಸಾಧ್ಯವಾಯಿತು". ಸಿಕ್ವೈರಾ ಕೆಂಪು ಸಮುದ್ರದಲ್ಲಿದ್ದ ಮತ್ತು ಮೆನೆಜಿಸ್ ಕೊಚಿನ್‌ದಲ್ಲಿದ್ದ. ನನ್ನ ಪ್ರಸ್ತುತ ಉದ್ದೇಶದ ದೃಷ್ಟಿಯಿಂದ ಬಲು ಮಹತ್ವದ ವಾಕ್ಯವೃಂದ ಬ್ಯಾರೊಸ್‌ನ ಕೃತಿಯಲ್ಲಿ ಸ್ವಲ್ಪ ಮುಂದೆ ಬರುತ್ತದೆ.[13]

"ಗೋವಾಕ್ಕೆ (ಕೆಂಪು ಸಮುದ್ರದಿಂದ) ಬಂದ ಕೂಡಲೆ ನಗರದ ಮತ್ತು ಮುಖ್ಯವಾಗಿ ರಾಯ್ ದ ಮೆಲೊ ವಶಪಡಿಸಿಕೊಂಡಿದ್ದ ಭೂಖಂಡಗಳ ಆಡಳಿತಕ್ಕೆ ಆಗತ್ಯವಾದ ಎಲ್ಲ ಏರ್ಪಾಟುಗಳನ್ನು ಮಾಡಿದುವನ್ನು ಕಂಡು....ಡಿ ಒಗೊ ಲೋಪ್ಸ್‌ದ ಸಿಕ್ವೈರಾ ಕೊಚಿನ್‌ಗೆ ಹೋದ," ಮತ್ತು ಅಲ್ಲಿಂದ ದೀವ್‌ಗೆ ಹೊರಟು ಅದನ್ನು ಫೆಬ್ರವರಿ ೯, ೧೫೨೧ [14]ರಂದು ತಲುಪಿದ. ಬ್ಯಾರೋಸ್‌ನ ವೃತ್ತಾಂತದಲ್ಲಿ ಇನ್ನೂ ಮುಂದೆ ಬರುವ ಇನ್ನೊಂದು ವಾಕ್ಯವೃಂದ ಕೂಡ ಸಿಕ್ವೈರಾನ ಕೆಂಪು ಸಮುದ್ರದಲ್ಲಿದ್ದಾಗಿನ ಗೈರುಹಾಜರಿಯಲ್ಲಿ ರಾಯ್ ದ ಮೆಲೊ ಭೂಖಂಡಗಳನ್ನು ವಶಪಡಿಸಿಕೊಂಡನೆಂಬ ಸಂಗತಿಯನ್ನು ಸ್ಥಾಪಿಸುತ್ತದೆ.[15]

ಈ ಘಟನೆಗಳು ಜರುಗಿದ ಒಂದು ಶತಮಾನದ ತರುವಾಯ ಪ್ರಕಟಗೊಂಡ ಕೃತಿಯ ಸ್ಪ್ಯಾನಿಶ್ ಲೇಖಕ, ಫಾರಿಯಾ ಯಿ ಸೌಜಾ ಸಿಕ್ವೈರಾನ ಕೆಂಪು

ಸಮುದ್ರದಲ್ಲಿನ ಉಪಸ್ಥಿತಿಯು ಫೆಬ್ರವರಿ ೧೫೨೦ ರಿಂದ ಫೆಬ್ರವರಿ ೧೫೨೧ರ ಅವಧಿ ಯನ್ನು ದೃಢೀಕರಿಸುತ್ತಾನೆ, ಮತ್ತು ಹೀಗೆ ಬರೆಯುತ್ತಾನೆ :

"ಮಂಡಲಾಧಿಪತಿ[16] ಕೆಂಪು ಸಮುದ್ರದಲ್ಲಿದಾಗ ಬಿಸನಗದ ರಾಜ ಕ್ರಿಷ್ಣಾ ಓ ರಾವ್ ಮೂವತ್ತೈದು ಸಾವಿರ ಅಶ್ವಾಳು, ಏಳುನೂರು ಮೂವತ್ತೂರು ಸಾವಿರ ಕಾಲಾಳು ಮತ್ತು ನಾಲ್ಕು ಜನರುಳ್ಳ ಅಂಬಾರಿಗಳುಳ್ಳ ಐದುನೂರಾ ಎಂಬತ್ತಾರು ಆನೆಗಳು ಮತ್ತು ಹನ್ನೆರಡು ಸಾವಿರ ಅಂಬಿಗರೊಂದಿಗೆ ಬಯಲುಗಳನ್ನು ಮತ್ತು ಗುಡ್ಡಗಳನ್ನು ಆವರಿಸಿದನು ಮತ್ತು ನದಿಗಳ ಪ್ರವಾಹವನ್ನು ತಡೆಹಿಡಿದ[17].... ಸರಂಜಾಮು ಎಷ್ಟು ದೊಡ್ಡ ಪ್ರಮಾಣದಲ್ಲಿತ್ತೆಂದರೆ ಬರಿ ವಾರಾಂಗನೆಯರೆ ಇಪ್ಪತ್ತು ಸಾವಿರಕ್ಕೂ ಮಿಕ್ಕಿದ್ದರು.[18]

ನೂನಿಜ್‌ನಂತೆಯೇ ಸೌಜಾ ಕೂಡಾ ಹೇಳುವದೇನೆಂದರೆ ಆದಿಲ್ ಶಹನ ಅಪಜಯಾನಂತರ ಶಾಂತಿಯು ಬೆಲೆಯೆಂದು ಕೃಷ್ಣದೇವರಾಯು ಆದಿಲ್‌ಶಹ ತನ್ನನ್ನು ಬಂದು ಕಾಣಬೇಕು ಮತ್ತು ತನ್ನ ಕಾಲನ್ನು ಚುಂಬಿಸಬೇಕು ಎಂಬ ಬೇಡಿಕೆಯಿಟ್ಟ. ಮತ್ತು ಆದಿಲ್ ಶಹನ ತೊಂದರೆಗಳ ಪ್ರಯೋಜನ ಪಡೆದು ರಾಯ್ ದ ಮೇಲೋ ಗೋವಾದ ಭೂಖಂಡಗಳನ್ನು ವಶಪಡಿಸಿಕೊಂಡ.[19] ಇಬ್ಬರೂ ಲೇಖಕರು ಅದೇ ಘಟನೆಯ ಬಗೆಗೆ ಬರೆಯುತ್ತಿದ್ದಾರೆಂಬುದು ಸ್ಪಷ್ಟವಿದೆ.

ನಂತರದ ಲೇಖಕ ಒಸೊರಿಯೊ ಅದರ ಬಹುತೇಕ ವಿವರಗಳಲ್ಲಿ ಈ ವೃತ್ತಾಂತ ವನ್ನು ದೃಢೀಕರಿಸುತ್ತ ಹೇಳುವುದೇನೆಂದರೆ ಆದಿಲ್ ಶಹನ ಪರಾಭವದ ನಂತರ ಕೃಷ್ಣರಾಯ ಭೂಖಂಡಗಳನ್ನು ನೀಡುವುದಾಗಿಯೂ ಸಿಕ್ವೈರಾ ಮರಳಿದ ನಂತರ ಗಂಭೀರ ಒಪ್ಪಂದವನ್ನು ಪೂರ್ತಿಗೊಳಿಸಲು ನಿಯಮಿತ ರಾಯಭಾರವನ್ನೂ ಕಳಿಸು ವದಾಗಿಯೂ ರಾಯ್ ದ ಮೇಲೋ ("ರೊಡರಿಗೊ ಮಿಲೊಸ್")ನಿಗೆ ಸಂದೇಶ ಕಳಿಸಿದ. ಅದರನ್ವಯ ದ ಮೆಲೊ ಭೂಖಂಡಗಳನ್ನು ವಶಪಡಿಸಿಕೊಂಡ.

ಲಾಫಿಟೊ[20] ಕೂಡ ಯುದ್ಧ ಸಿಕ್ವೈರಾ ಕೆಂಪು ಸಮುದ್ರಕ್ಕೆ ಹೋಗಿದ್ದ ಸಮಯದಲ್ಲಿ ಜರುಗಿತೆಂದೂ ಆದಿಲ್ ಶಹನ ಪರಾಭವದ ನಂತರ ಭೂಖಂಡಗಳನ್ನು ಸ್ವಾಧೀನಪಡಿಸಿಕೊಳ್ಳಲಾಯಿತೆಂದೂ ಹೇಳುತ್ತಾನೆ.[21]

ಫಿರಿಸ್ತಾನನ್ನು ನೋಡಿದರೆ ನನಗೊಂದು ವ್ಯತ್ಯಾಸ ಕಾಣುತ್ತದೆ. ರಾಯಚೂರಿನ ಯುದ್ಧ ಹಿಜಿರಾ ೯೨೭ (ಡಿಸೆಂಬರ್ ೧೨, ೧೫೨೦ ರಿಂದ ಡಿಸೆಂಬರ್ ೧, ೧೫೨೧ ಕ್ರಿ.ಶ.ದವರೆಗೆ) ರಲ್ಲಿ ಜರುಗಿತೆಂದು ಅವನು ಹೇಳುತ್ತಾನೆ. ನೂನಿಜ್ ಸಾರುವಂತೆ ಅದು ಮೇ ನಲ್ಲಿ ಜರುಗಿದ್ದರೆ ಕಾಲ ಮೇ ೧೫೨೧ ಎಂದು ನಿರ್ಧರಿತ ವಾಗುತ್ತದೆ. ಅವನು ನೀಡಿದ ವಿವರಗಳಿಂದ ಅವನು ಅದೇ ಘಟನೆಯ ಬಗೆಗೆ ಹೇಳುತ್ತಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಉದಾಹರಣೆಗೆ, ಹಿಂದೂ ಸೈನ್ಯದಲ್ಲಿದ್ದ

ಅಪಾರ ದಂಡು, ಕೃಷ್ಣಾ ನದಿಗೆ ಶಹನ ಸೈನ್ಯ ಮುಂದುವರಿದದ್ದು, ಅತಿ ಅವಸರದಿಂದ ನದಿ ದಾಟಿದ್ದು, ಮುಹಮ್ಮದೀಯರ ದಿಟ್ಟ ಹೋರಾಟ, ಅವರ ಸೋಲು ಮತ್ತು ಪಲಾಯನ, ಆದಿಲ್ ಶಹನ ಪಡೆಗಳು ನದಿಯತ್ತ ಹಿಂದೂಡಲ್ಪಟ್ಟಿದ್ದು ಮತ್ತು ಅದನ್ನು ಪುನಃ ದಾಟುವ ಯತ್ನದಲ್ಲಿ ಅಧಿಕ ಸಂಖ್ಯೆಯಲ್ಲಿ ಅವಸಾನವಾದದ್ದು ಶಹನ ಸ್ವಲ್ಪದರಲ್ಲಿಯೆ ಪಾರಾಗುವಿಕೆ, ಮತ್ತು ಅಸದಖಾನನ ಮೇಲೆ ಅವನ ಅವಲಂಬನ ಇವುಗಳನ್ನು ಫಿರಿಸ್ತಾ ಉಲ್ಲೇಖಿಸುತ್ತಾನೆ. ಇದೆಲ್ಲ ಅನುಮಾನಕ್ಕೆ ಅವಕಾಶವನ್ನೆ ನೀಡುವದಿಲ್ಲ. ಒಂದೇ ಒಂದು ವ್ಯತ್ಯಾಸವಿದೆ : ರಾಯಚೂರ ಕೋಟೆ ಮುಹಮ್ಮದೀಯರ ವಶದಲ್ಲಿತ್ತೆಂದು, ಬೇರೆ ಆಧಾರಗಳಿಂದ ನಮಗೆ ಗೊತ್ತಿದೆ ; ಆದರೆ, ಆ ಸ್ಥಳಗಳು ಆಗ ಅವನ ವಶದಲ್ಲಿದ್ದವೆಂಬಂತೆ, ಆದಿಲ್ ಶಹ "ಮುದಕಲ್ ಮತ್ತು ರಾಯಚೋರ್‌ಗಳನ್ನು ಬೀಜನಗರದ ರಾಯನಿಂದ ಮರಳಿ ಪಡೆಯಲು ದಂಡೆತ್ತಿ ಸಾಗಲು ಸಿದ್ಧತೆ ನಡೆಸಿದುದರಿಂದ ಯುದ್ಧ ಸಂಭವಿಸಿತೆಂದು ಫಿರಿಸ್ತಾ ಹೇಳುತ್ತಾನೆ. ಫಿರಿಸ್ತಾ ಹೇಳಿದ ಕಾಲವಾದರೊ ಮೇಲ್ಕಾಣಿಸಿದ ಕಾರಣಗಳಿಗಾಗಿ ಅದು ಒಂದು ವರ್ಷದಿಂದ ತಪ್ಪಾಗಿದೆಯೆಂದು ನಾನು ನಂಬುತ್ತೇನೆ. ಅವನು ಘಟನೆ ಜರುಗಿದ ಅನೇಕ ವರ್ಷಗಳ ತರುವಾಯ ಬರೆದನೆಂಬುದನ್ನು ನೆನಪಿಡಬೇಕು.

ಹೀಗೆ ತೃಪ್ತಿಕರವಾಗಿದೆಯೆಂಬ ಹಾರೈಕೆಯೊಂದಿಗೆ, ನೂನಿಜ್ ನೀಡಿದ ರಾಯಚೂರಿನ ಯುದ್ಧದ ಕಾಲ ಎರಡು ವರ್ಷಗಳಿಂದ ತಪ್ಪಾಗಿದೆಯೆಂದು ಮತ್ತು ಅದು ೧೫೨೦ ಆಗಿರಬೇಕೆಂದು ಸಿದ್ಧಪಡಿಸಿ ನಾನೀಗ ಅದರ ದಿನ ಮತ್ತು ತಿಂಗಳುಗಳನ್ನು ಶೋಧಿಸಲುದ್ಯುಕ್ತನಾಗುತ್ತೇನೆ. ನೂನಿಜ್‌ನ ಪ್ರಕಾರ ಅದು ಮೇ ತಿಂಗಳಿನ ಅಮಾವಾಸ್ಯೆಯ ದಿನ ಹಾಗೂ ಶನಿವಾರವಾಗಿತ್ತು. ಕೃಷ್ಣದೇವರಾಯ ಶುಕ್ರವಾರದಂದು ಯುದ್ಧಕ್ಕೆ ಸನ್ನದ್ಧನಾಗಿದ್ದ, ಆದರೆ ಶುಕ್ರವಾರ ಅಶುಭ ದಿನವೆಂದು ಪರಿಗಣಿತವಾದುದರಿಂದ ಆಕ್ರಮಣವನ್ನು ಮರುದಿನಕ್ಕೆ ಮುಂದೂಡಿದ.

ಮೇ ೧೫೨೦ ರಲ್ಲಿ ಅಮಾವಾಸ್ಯೆ ಸಂಭವಿಸಿದ್ದು ಗುರುವಾರ ಮೇ ೧೭ರ ಬೆಳಿಗ್ಗೆ ೨-೨೭ಕ್ಕೆ. ನೂನಿಜ್ ಈ ಸಂಗತಿಗಳನ್ನು ಸ್ಥಳೀಯ ಪಂಚಾಂಗಗಳಿಂದ ಅಥವಾ ಜ್ಯೋತಿಷಿಗಳ ಲೆಕ್ಕಾಚಾರಗಳಿಂದ ಖಚಿತಪಡಿಸಿಕೊಂಡನೊ ಅಥವಾ ತಾನೇ ಮಾಡಿದ ಇಲ್ಲವೆ ಉಪಸ್ಥಿತನಿದ್ದ ಇನ್ನಾವನೊ ಮಾಡಿದ ಅವಲೋಕನದಿಂದ ಖಚಿತಪಡಿಸಿಕೊಂಡನೊ ತಿಳಿಯದು ; ಆದರೆ ನಮಗೆ ತಿಳಿದಮಟ್ಟಿಗೆ ನೂನಿಜ್ ಸಾಮಾನ್ಯ ಮನುಷ್ಯನಾಗಿದ್ದನೆ ಹೊರತು ಜೋಯಿಸನಾಗಿರಲಿಲ್ಲ, ಮತ್ತು ಸೂರ್ಯಾಸ್ತವಾದ ಕೂಡಲೆ ನವಚಂದ್ರನ ಬಾಲಚಂದ್ರಾಕೃತಿ ಪ್ರಥಮ ದರ್ಶನ ನೀಡಿದ ದಿನವನ್ನೆ 'ಅಮಾವಾಸ್ಯೆಯ ದಿನ'ವೆಂದು ಅವನು ಕರೆದಿರಬಹುದು. ಪ್ರಥಮ ದರ್ಶನ ಪ್ರತ್ಯಕ್ಷವಾಗಿ ಆದುದು ಮುಂದಿನ ಶನಿವಾರದಂದು. ಆ ಸಂದರ್ಭದಲ್ಲಿ ಚಂದ್ರನ ಸೌರೋದಯದೊಂದಿಗೆ ತಾಳೆ ಹೋಗುವ ಮುಹಮ್ಮದೀಯ ತಿಂಗಳು ಜಮಾದೆ

ಲಖೀರ್‌ನ ಪ್ರಥಮ ದಿನ ಶನಿವಾರ, ಮೇ ೧೯ ಆಗಿತ್ತು. ಆದುದರಿಂದ, "ಸುವರ್ಣ ವಸ್ತ್ರದ ಕೊಲ"ದ ದಿನದೊಂದಿಗೆ ಬಹುತರ ಮೇಳೈಸುವ ದಿನವಾದ ಶನಿವಾರ ಮೇ ೧೯, ೧೫೨೦[22] ರಂದು ಈ ಮಹಾಯುದ್ಧ ಜರುಗಿತೆಂದು ನಾನು ನಂಬುತ್ತೇನೆ.

**ಯುದ್ಧದಲ್ಲಿ ತೊಡಗಿದ ಸೈನಿಕರ ಸಂಖ್ಯೆ**

ನೂನಿಜ್ ನೀಡಿದಂತೆ ವಿಜಯನಗರದಿಂದ ದಂಡಯಾತ್ರೆ ನಡೆದ ಸೈನ್ಯ ಸಾಲುಗಳನ್ನು ಬೇರೀಜು ಮಾಡಿದರೆ ಸಂಖ್ಯೆ ಎಷ್ಟು ದೊಡ್ಡದಾಗುತ್ತದೆಂದರೆ ಅದು ನಿಜವಾಗಿರುವ ಯಾವುದೆ ಸಾಧ್ಯತೆ ಉಂಟೇ ಎಂದು ಸಹಜವಾಗಿ ಸಂದೇಹಪಟ್ಟು ನಿಲ್ಲುತ್ತೇವೆ : ೭೦೩,೦೦೦ ಕಾಲಾಳು, ೩೨,೦೦೦ ಅಶ್ವ, ಮತ್ತು ೫೫೧ ಗಜಗಳು ಅಲ್ಲದೆ ಸೇನಾನುಚರರು, ವರ್ತಕರು ಇತ್ಯಾದಿ, ಮತ್ತು ರಾಯಚೂರಿನ ಸಮೀಪದ ಊರಲ್ಲಿ ಬಂದು ಸೇರಿದ "ಅಸಂಖ್ಯ ಜನ !" ಇದು ನಿಜಕ್ಕೂ ನಮ್ಮ ನಂಬಿಕೆಗೆ ಹೊರೆಯಾಗುತ್ತದೆ.

ಪ್ರತಿಯೊಬ್ಬ ತನ್ನದೇ ಅಭಿಪ್ರಾಯ ತಾಳಲಿ. ಭಾರತದಲ್ಲಿ ಯಾವಾಗಲೂ ದೊಡ್ಡ ಸೈನ್ಯಗಳ ಪರಿಪಾಠವಿದ್ದಿರಬಹುದೆಂದು ಮತ್ತು ಕೃಷ್ಣದೇವರಾಯ ಉಲ್ಲೇಖಿತವಾದಷ್ಟು ಜಮಾಯಿಸಿದನೊ ಹೇಗೆಂಬುದು ಬೇರೆ ಪ್ರಶ್ನೆಯಾಗಿರುವುದಾದರೂ, ನಿಜವಾಗಿಯೂ ಅವನು ಬೃಹತ್ ಸಂಖ್ಯೆಯಲ್ಲಿ ಸೈನ್ಯ ಜಮಾಯಿಸಬಲ್ಲವನಾಗಿದ್ದನೆಂಬ[23] ಸಂಗತಿಯತ್ತ ನಾನು ಗಮನ ಸೆಳೆಯಬಲ್ಲೆನಷ್ಟೆ. ಹಾಗೆ ಮಾಡುವ ಅವನ ಶಕ್ತಿ ಅವನ ಆಡಳಿತ ಪದ್ಧತಿಯಲ್ಲಿ ಅಡಗಿತ್ತು. ಇದನ್ನು ಈಗಾಗಲೆ ಪ್ರಸ್ತಾಪಿಸಲಾಗಿದೆ. ಮತ್ತು ನೂನಿಜ್ ಸ್ವಾರಸ್ಯಕರ ವಿವರಗಳನ್ನು ನೀಡುತ್ತಾನೆ. ಇಡಿ ಸಾಮ್ರಾಜ್ಯವನ್ನು ಪ್ರಾಂತ ಹಾಗೂ ನೆಲೆಗಳಲ್ಲಿ ವಿಂಗಡಿಸಲಾಗಿತ್ತು. ತಕ್ಷಣ ಸೇವೆಗೆ ಯೋಗ್ಯವಾದ ಸೈನಿಕ ಸಮೂಹಗಳನ್ನು ಇಟ್ಟುಕೊಂಡಿರಲೇಬೇಕಾಗಿದ್ದ ಪಾಳೆಯಗಾರರು ಅವುಗಳನ್ನು ಆಳುತ್ತಿದ್ದರು. ಈ ಮಹಾ ಯುದ್ಧದಲ್ಲಿ ರಾಜ ತನ್ನೆಲ್ಲ ಶಕ್ತಿಯನ್ನು ಹೂಡಿದ್ದನೆಂದು ಭಾವಿಸುವುದು ತೀರ ಸಹಜ.

ಭಾರತೀಯ ರಾಜರು ಬೃಹತ್ ಸೈನ್ಯಗಳನ್ನು ತೊಡಗಿಸುತ್ತಿದ್ದುದನ್ನು ಮನಗಾಣಿಸಲು ನಾವು ಲೇಖಕರ ಅನುಕ್ರಮವನ್ನು ನೋಡಬೇಕಷ್ಟೆ. ವಿಜಯನಗರದ ಸಾಮ್ರಾಟನ ಮಹಾ ಬಲವನ್ನು ಮತ್ತು ನಂಬಿಕೆಯನ್ನು ಮೀರಿಸುವ ಅವನ ಶ್ರೀಮಂತಿಕೆಯನ್ನು ಬ್ಯಾರೊಸ್ ಗಮನಿಸುತ್ತಾನೆ, ಮತ್ತು "ತನ್ನ ಕಥನ ನಂಬದೆ ಹೋಗದಿರಲೆಂಬ ದೃಷ್ಟಿಯಿಂದ," ಈ ದೈತ್ಯ ಪ್ರಮಾಣದ ಸೈನ್ಯಗಳನ್ನು ಹೇಗೆ ಕಟ್ಟಲಾಗುತ್ತಿತೆಂಬ ವೃತ್ತಾಂತ ನೀಡಲು ಶ್ರಮಿಸುತ್ತಾನೆ.

ಸ್ಕಾಟ್‌ನ "ಹಿಸ್ಟರಿ ಆಫ್ ದ ಡೆಕ್ಕನ್"ದ ಎರಡನೆಯ ಸಂಪುಟದಲ್ಲಿ ಔರಂಗಜೇಬನ ಆಳಿಕೆಯಲ್ಲಿ ಕ್ರಿ.ಶ. ೧೬೯೦ರಲ್ಲಿ 'ದುಲ್ಪುತ ರಾಯ'ನ ಕೆಳಗೆ ಸೇವೆ ಸಲ್ಲಿಸಿದ ಬುಂದೇಲ ಅಧಿಕಾರಿಯೊಬ್ಬನು ಬರೆದಿಟ್ಟಿದ್ದ ದಿನಚರಿಯ ಭಾಷಾಂತರವನ್ನು

ಕೊಡಲಾಗಿದೆ. ತನ್ನ ವೈಭವ ಮತ್ತು ಮಹತ್ವದ ಶಿಖರದಲ್ಲಿದ್ದಾಗಿನ ವಿಜಯನಗರದ ಗತಕಾಲದ—ಬಗೆಗೆ ಬರೆಯುತ್ತ "ಅವರು ೩೦,೦೦೦ ಅಶ್ವಾಳು, ಒಂದು ದಶಲಕ್ಷ ಕಾಲಾಳುಗಳ ಸೈನ್ಯವನ್ನು ಇಟ್ಟಿರುತ್ತಿದ್ದರು, ಮತ್ತು ಅವರ ಸಂಪತ್ತು ಎಣಿಕೆ ಮೀರಿದ್ದು" ಎಂದು ಆತ ಹೇಳುತ್ತಾನೆ.

ಪ್ರಸ್ತುತ ಯುದ್ಧಕ್ಕಿಂತ ಒಂದು ಶತಮಾನ ಮುಂಚೆ ಭಾರತದಲ್ಲಿದ್ದ ಕಾಂಟಿ ವಿಜಯನಗರದ ಸೈನ್ಯ "ಒಂದು ದಶಲಕ್ಷ ಜನರಿಗಿಂತಲೂ ಅಧಿಕ"ವಾಗಿತ್ತೆಂದು ಬ್ರಾಕಿಯೊಲಿನಿಗೆ ಹೇಳಿದನು.

ಸಂಖ್ಯೆಯನ್ನು ೧೦೦೦ ಆನೆಯೊಂದಿಗೆ ೧,೧೦೦,೦೦೦ ಎಂದು ಕೊಡುವ ಅಬ್ದುರ್ ರಜಾಕ್ (ಕ್ರಿ.ಶ. ೧೪೪೩) ಅದೇ ಕತೆಯನ್ನು ಹೇಳುತ್ತಾನೆ.

ಇಪ್ಪತ್ತು ವರ್ಷಗಳ ನಂತರ ನಿಕಿಟಿನ್ ಹಿಂದೂಗಳ ಮೇಲೆ ಏರಿ ಹೋದ ಕಲಬರ್ಗಾದ ಸೈನ್ಯಗಳು ೯೦೦,೦೦೦ ಕಾಲಾಳು, ೧೯೦,೦೦೦ ಅಶ್ವಾಳು, ಮತ್ತು ೫೭೫ ಗಜಗಳಷ್ಟಾಗಿತ್ತೆಂದು ಹೇಳುತ್ತಾನೆ.

ತನ್ನ ಸರದಾರರ ಬಲಗಳಲ್ಲದೆ ಸುಲ್ತಾನನು ತನ್ನ ಸ್ವಂತ ೩೦೦,೦೦೦ ಯೋಧರೊಂದಿಗೆ ರಣರಂಗ ಪ್ರವೇಶಿಸಿದ, ಮತ್ತು ಬರಿ ಶಿಕಾರಿಯಾತ್ರೆಗೆ ಹೊರಡುವುದಿದ್ದರೂ ಅವನು ತನ್ನೊಂದಿಗೆ ೧೦,೦೦೦ ಅಶ್ವಾಳು, ೫೦೦,೦೦೦ ಕಾಲಾಳು ಮತ್ತು ೨೦೦ ಗಜಗಳ ಪರಿವಾರವನ್ನು ಒಯ್ಯುತ್ತಿದ್ದನು. ಒಂದು ನಗರದ ಮುತ್ತಿಗೆಯಲ್ಲಿ ಮಲಿಕ್ ಉಲ್ ತುಜರ್ ಒಬ್ಬನೆ ೨೦೦,೦೦೦ ಜನರ ಸೈನ್ಯವನ್ನು ತೊಡಗಿಸಿದ್ದನೆಂದು ಅವನು ಹೇಳುತ್ತಾನೆ. ಹಿಂದೂಗಳು ಬಹುತರ ಬೆತ್ತಲೆಯಾಗಿ ಕಾದುತ್ತಿದ್ದರು, ಮತ್ತು ಢಾಲು ಹಾಗೂ ಕತ್ತಿಗಳೊಂದಿಗೆ ಸಜ್ಜಿತರಾಗಿದ್ದರು.

ಅಲೆಕ್ಸ್ಯಾಂಡರ್ ಮಹಾಶಯ (ಕ್ರಿ.ಪೂ. ೩೨೦)ನ ಕಾಲದಷ್ಟು ಹಿಂದೆ ಸಹ, ಕ್ವಿಂಟಸ್ ಕರ್ಟಿಯಸ್ ಅಧಿಕ ಮಿತವಾದ ಅಂದಾಜು ಮಾಡುತ್ತಾನಾದರೂ, ಮಗಧದ ಸೈನ್ಯ ೬೦೦,೦೦೦ ಕಾಲಾಳುಗಳು, ೩೦,೦೦೦ ಅಶ್ವಾಳು ಮತ್ತು ೯೦೦೦ ಗಜಗಳಿಂದ ಕೂಡಿತ್ತೆಂದು ಗ್ರೀಕರು ಲೆಕ್ಕ ಹಾಕಿದ್ದರು.

ಕ್ರಿ.ಶ. ೧೧೯೩ ರಲ್ಲಿ ಮಹಮ್ಮದೀಯ ದಾಳಿಯ ವಿರುದ್ಧ ಉತ್ತರ ಭಾರತದ ಸಂರಕ್ಷಣೆಗಾಗಿ ಕೂಡಿಸಲಾಗಿದ್ದ ಹಿಂದೂ ಒಕ್ಕೂಟ ರಾಜ್ಯಗಳ ಸೈನ್ಯದಲ್ಲಿ, "ಅತ್ಯಂತ ಮಿತವಾದ ಅಂದಾಜಿನಂತೆ," ೩೦೦,೦೦೦ ಅಶ್ವಾಳು, ೩,೦೦೦ ಗಜಗಳು ಮತ್ತು ಅಪಾರ ಸಂಖ್ಯೆಯ ಕಾಲಾಳುಗಳಿದ್ದರೆಂದು ಟ್ಯಾಟನ್ ದ ಲಾರ್ಡ್ ಎಗರ್ಟನ್[24] ಹೇಳುತ್ತಾನೆ.

ಕ್ರಿ.ಶ. ೧೨೫೯ರಲ್ಲಿ ಮೊಗಲ ರಾಯಭಾರವೊಂದನ್ನು ದಿಲ್ಲಿಯಲ್ಲಿ ೫೦,೦೦೦ ಬೆಂಗಾವಲು ಅಶ್ವಾಳುಗಳೊಂದಿಗೆ ಬರಮಾಡಿಕೊಂಡು ಸಾಲಾಗಿ ನಿಂತಿದ್ದ ೨೦೦,೦೦೦ ದಷ್ಟು ಪದಾತಿಗಳ ಸಾಲುಗಳ ಮುಂದೆ ಹಾಯ್ದು ಕರೆತರಲಾಯಿತು.

ಫಿರಿಸ್ತಾನ ಪ್ರಕಾರ, ದಿಲ್ಲಿಯ ಮೊಹಮ್ಮದ ತುಘಲಕ[25] ಪರ್ಶಿಯಾದ ಸ್ವಾಧೀನಕ್ಕಾಗಿ ೩೭೦,೦೦೦ ಯೋಧರ ಸೈನ್ಯವನ್ನು ಹೇಗೆ ಜಮಾಯಿಸಿದನೆಂಬು ದನ್ನೂ ಯಾವುದೊಂದು ಪ್ರದೇಶದ ನಿವಾಸಿಗಳನ್ನು ಸಾಸಗೊಳಿಸಬೇಕೆಂದಾಗ ಅವನು "ಶಿಕಾರಿಗಾಗಿ ಹೋಗುತ್ತಿರುವನೊ ಏನೊ ಎಂಬಂತೆ ತನ್ನ ಸೈನ್ಯ ಹೊರಡಲು ಆಜ್ಞೆ ನೀಡುತ್ತಿದ್ದ," ಆ ಪ್ರದೇಶವನ್ನು ಸುತ್ತುಗಟ್ಟುತ್ತಿದ್ದ, ಆ ಮೇಲೆ ಕೇಂದ್ರದತ್ತ ಒಳಗೆ ಒತ್ತಿ ಬಂದು ಅದರೊಳಗಿನ ಎಲ್ಲ ನಿವಾಸಿಗಳ ಕೊಲೆಗೈಯುತ್ತಿದ್ದ ಎಂಬುದನ್ನು ಜ್ಞಾಪಿಸಿಕೊಳ್ಳಬೇಕು. ಕೇವಲ ಶಿಕಾರಿಗೆ ಹೋಗುವಾಗಲೂ ತನ್ನೊಂದಿಗೆ ಅತುಲ ಯೋಧರನ್ನು ಒಯ್ಯುತ್ತಿದ್ದನೆಂಬುದನ್ನು ಇದು ಸೂಚಿಸುತ್ತದೆ. ಶಹಾಬುದ್ದೀನ ನಂತೂ ಮೊಹಮ್ಮದ ತುಘಲಕ್ ೯೦೦,೦೦೦ ಅಶ್ವಾಳುಗಳ ಸೈನ್ಯ ಹೊಂದಿದ್ದನೆಂದು ಸಾರುತ್ತಾನೆ[26] ; ಮತ್ತು ಸುಲ್ತಾನನು ಬಾಲಾಘಾಟ್ ಮೇಲೆ ೮೦೦,೦೦೦ ಅಶ್ವಾಳುಗಳೊಂದಿಗೆ ದಾಳಿಯಿಟ್ಟನೆಂದು ನೂನಿಜ್ ತನ್ನ ಚರಿತ್ರೆಯ ಆರಂಭ ಪುಟ ದಲ್ಲಿ ಹೇಳುತ್ತಾನೆ.[27] ಈ ಅಂದಾಜು ಇದ್ದುದು ಮಾತ್ರ ೧೫೩೫ರಲ್ಲಿ ಪ್ರಚಲಿತವಿದ್ದ ವಾಡಿಕೆಯನ್ನವು.

ಹದಿನೇಳನೆಯ ಶತಮಾನದಲ್ಲಿ ಬರೆದ ಘಾರಿಯಾ ಯಿ ಸೌಜಾ ೧೫೩೪ರಲ್ಲಿ ಕ್ಯಾಂಬೆದ ರಾಜನಾಗಿದ್ದ ಬಹಾದುರನ ಸೈನ್ಯ ೧೦೦,೦೦೦ ಅಶ್ವಾಳು, ೪೧೫,೦೦೦ ಪದಾತಿ, ಮತ್ತು ೬೦೦ ಗಜಗಳಿಂದ ಕೂಡಿದುದಾಗಿತ್ತೆಂದು ಅಂದಾಜು ಮಾಡು ತ್ತಾನೆ.

೧೭೬೨ ರಷ್ಟು ಇತ್ತೀಚಿಗೆ ಮರಾಠರು ೧೦೦,೦೦೦ ಅಶ್ವಾಳುಗಳ ಸೈನ್ಯ ಪಡೆದಿದ್ದರೆಂದು ಹೇಳಲಾಗುತ್ತದೆ.

ವಿಜಯನಗರ ಸಾಮ್ರಾಜ್ಯವು ವಿಂಗಡಿತವಾಗಿದ್ದ ಒಟ್ಟು ಇನ್ನೂರು ಸಾಮಂತ ರಲ್ಲಿ ಕಡ್ಡಾಯವಾಗಿ ಸೈನ್ಯವನ್ನು ಕಾಯ್ದಿಟ್ಟುಕೊಳ್ಳಬೇಕಿದ್ದ ಹನ್ನೊಂದು ಜನರ ಪ್ರಾಂತೀಯ ಸೈನ್ಯಗಳ ವಿವರಗಳನ್ನು ನೂನಿಜ್ ಒದಗಿಸುತ್ತಾನೆ[28] ಮತ್ತು ಈ ಹನ್ನೊಂದು ಜನರ ಒಟ್ಟು ಸೈನ್ಯ ಬಲಗಳು ೧೯,೦೦೦ ಅಶ್ವಾಳು, ೧,೭೧,೭೦೦ ಕಾಲಾಳು, ಮತ್ತು ೬೩೩ ಗಜಗಳಷ್ಟು ಇತ್ತು.

ದೇಶವು ಬಲು ವಿಸ್ತಾರವಾದುದು ಹಾಗೂ ಜನನಿಬಿಡವಾಗಿದ್ದು ರಾಜನು ಬೇಕೆಂದಾಗ ಒಂದು ದಶಲಕ್ಷ, ಅದೇಕೆ, ಎರಡು ದಶಲಕ್ಷ ಯೋಧರನ್ನು ಕೂಡಿಸ ಬಹುದಾದುದರಿಂದ ವಿಜಯನಗರದ ಪದಾತಿ ಸೈನ್ಯ ಅಗಣಿತವಾಗಿತ್ತೆಂದು ಹೇಳುತ್ತ ಕ್ಯಾಸ್ಟನ್ ಹೆಡಾ ಈ ವಿಷಯದಲ್ಲಿ ಇತರ ಲೇಖಕರನ್ನು ದೃಢೀಕರಿಸುತ್ತಾನೆ.[29] ಈ ಲೇಖಕ ಕೃಷ್ಣದೇವರಾಯನ ಆಳಿಕೆಯ ಕೊನೆಗಷ್ಟೆ ಭಾರತಕ್ಕೆ ಬಂದಿದ್ದ. ರಾಜನು ತನ್ನ ಖರ್ಚಿನಿಂದಲೆ ೧೦೦,೦೦೦ ಅಶ್ವಾಳು ಮತ್ತು ೪೦೦೦ ಗಜಗಳ ಸಿಬ್ಬಂದಿಯನ್ನು ಸಲಹಿದ್ದನೆಂದು ಅವನು ಹೇಳುತ್ತಾನೆ.

ಇದೆಲ್ಲದರ ಬಗೆಗೆ ಪ್ರತಿಯೊಬ್ಬನೂ ತನ್ನದೇ ಅಭಿಪ್ರಾಯ ತಾಳಲು ಸ್ವತಂತ್ರ ನಿರುವನೆಂದು ನಾನು ಪುನರುಚ್ಚರಿಸುತ್ತೇನೆ. ಆದರೆ ಇಷ್ಟು ಮಾತ್ರ ನಿಜ. ವಿಜಯನಗರದ ರಾಜ ಬೇಕೆಂದಾಗ ರಣರಂಗದಲ್ಲಿ ಸಶಸ್ತ್ರ ಯೋಧರ ಬೃಹತ್ ಸಮೂಹಗಳನ್ನು ತೊಡಗಿಸಬಲ್ಲವನಾಗಿದ್ದನೆಂದು ಎಲ್ಲ ಚರಿತ್ರಕಾರರು ನಂಬಿರುವುದು ಖಚಿತವೆಂದು ತೋರುತ್ತದೆ. ಅವರೆಲ್ಲ ಬಹುಶಃ ಚೆನ್ನಾಗಿ ಸುಸಜ್ಜಿತರು ಅಥವಾ ತರಬೇತಿ ಪಡೆದವರು ಅಥವಾ ಶಿಸ್ತುಳ್ಳವರು ಆಗಿರಲಿಲ್ಲ. ಆದರೆ ಬೃಹತ್ ಸಂಖ್ಯೆಯ ಬಗೆಗೆ ಮಾತ್ರ ಯುಕ್ತಾಯುಕ್ತ ಸಂದೇಹವಿಲ್ಲ. ಇದರ ಪಳೆಯುಳಿಕೆಯನ್ನು ನಿಜಾಮನ ರಾಜಧಾನಿಯಾಗಿರುವ ಆಧುನಿಕ ಹೈದರಾಬಾದಿನಲ್ಲಿ ಪ್ರತಿ ವರ್ಷ ನೋಡ ಬಹುದು. ಅಲ್ಲಿ "ಲಂಗರ್" ಎಂಬ ವಾರ್ಷಿಕೋತ್ಸವದಲ್ಲಿ ಅಧಿಕ ಸಂಖ್ಯೆಯ ಸಶಸ್ತ್ರ ಅನಿಯತ ಸೈನಿಕರು ಪ್ರಮುಖ ಬೀದಿಗಳಲ್ಲಿ ಸಾಲುಗಟ್ಟಿ ನಡೆಯುತ್ತಾರೆ. ಅವರು ಬಲುಮಟ್ಟಿಗೆ ಆಯುಧ ಹೊತ್ತ ಜನಜಂಗುಳಿ ಮಾತ್ರ ಮತ್ತು ರಾಜ್ಯದ ಸೈನಿಕ ರೆಂದು ಸಲಹಲ್ಪಟ್ಟವರಲ್ಲ. ಆದರೆ ಅವರನ್ನು ಪ್ರತ್ಯೇಕ ತಂಡಗಳಲ್ಲಿ ಬೇರೆ ಬೇರೆ ಸರದಾರರು ತಂದಿರುತ್ತಾರೆ. ಪ್ರತಿ ಸಾಮಂತ ತನ್ನ ಆನುವಂಶಿಕ ತಡೆದಂಡನ್ನೆಲ್ಲ ಕೂಡಿಸಿ ಅದನ್ನು ಸ್ಥೂಲವಾದ ಪಡೆ ಅಥವಾ ದಳಗಳನ್ನಾಗಿ ರಚಿಸಿರುತ್ತಾನೆ.

ತಮ್ಮ ಸೊಂಡಿಲುಗಳಿಗೆ ಕಟ್ಟಲಾದ ಕುಡುಗೋಲಿನಂತಹ ಉದ್ದ ಕತ್ತಿಗ ಳೊಂದಿಗೆ ಯುದ್ಧದಲ್ಲಿ ತೊಡಗಿದ್ದವೆಂದು ಹೇಳಲಾದ ಗಜಗಳ ಆಕ್ರಮಣೋ ದ್ದೇಶದ ಯುದ್ಧಕವಚದ ಬಗೆಗೆ ನೂನಿಜ್ ನೀಡಿರುವ ವರ್ಣನೆಯನ್ನಾದರೊ ಇತರ ಅನೇಕ ಲೇಖಕರು ಆ ವೃತ್ತಾಂತವನ್ನು ದೃಢೀಕರಿಸಿದ್ದಾರೆ.

### ಫಿರಿಸ್ತಾನ ಕಥನ

ಫಿರಿಸ್ತಾನ ರಾಯಚೂರು ಯುದ್ಧದ ಕಥನ ವೈರಿಯ ದೃಷ್ಟಿಕೋನದಿಂದ ಘಟನೆಯನ್ನು ವರ್ಣಿಸುವುದರಿಂದ ಸ್ವಾರಸ್ಯಕರವಾಗಿದೆ.

### ಇಸ್ಮಾಯಿಲ್ ಆದಿಲ್‌ಶಾಹ:

"ಬೀಜನಗರದ ರಾಯನಿಂದ ಮುದಕಲ್ ಮತ್ತು ರಾಯಚೋರಗಳನ್ನು ಮರಳಿ ಪಡೆಯಲು ದಂಡೆತ್ತಿ ನಡೆದನು. ಅವನ ಹಂಚಿಕೆಗಳ ಸುಳಿವು ದೊರೆತು ರಾಯ ದೊಡ್ಡ ದಂಡಿನೊಂದಿಗೆ ನಡೆದು ಕಿಸ್ಟ್‌ನಾದ ದಂಡೆಯ ಮೇಲೆ ಬಿಡಾರ ಹೂಡಿದ. ಅಲ್ಲಿ ಅವನ ಅನೇಕ ಸಾಮಂತರು ಬಂದು ಕೂಡಿದರು. ಅದರಿಂದಾಗಿ ಸೈನ್ಯ ಕನಿಷ್ಠ ಪಕ್ಷ ಅಪಾರ ಕಾಲುದಂಡಲ್ಲದೆ ೫೦,೦೦೦ ಅಶ್ವಾಳುಗಳಷ್ಟಾಯಿತು. ವೈರಿ ಕಿಸ್ಟ್‌ನಾದ ಎಲ್ಲ ದೋಣಿಗಳನ್ನು ಪಡೆದದ್ದರಿಂದ ಸುಲ್ತಾನನಿಗೆ ಈಗ ತನ್ನ ದಂಡಯಾತ್ರೆ ತಡಮಾಡುವ ಮನಸ್ಸಿತ್ತು. ಆದರೆ ತನ್ನ ಡೇರೆಗಳನ್ನು ನೆಡಲಾಗಿದುದ

ರಿಂದ ಘೋಷಣೆಗಳಿಂದ ಹಿಂತೆಗೆಯುವುದು ಅವಮಾನಕರವಾಗಿತ್ತು. ಆದುದರಿಂದ ಅವನು ಎಲ್ಲ ವಿದೇಶೀಯ ೭೦೦೦ ಅಶ್ವಾಳುಗಳೊಂದಿಗೆ ಮುನ್ನಡೆದು ವೈರಿಯ ಎದುರುದಡದ ಮೇಲೆ ಬಿಡಾರ ಹೂಡಿ ವೈರಿಯ ಮೇಲೆ ಆಕ್ರಮಣ ಮಾಡಲೋಸುಗ ನದಿ ದಾಟಲು ತೆಪ್ಪಗಳನ್ನು ಸಿದ್ಧಪಡಿಸಲು ಕಾಯುತ್ತ ನಿಂತ.

"ತನ್ನ ಆಗಮನದ ಕೆಲವು ದಿನಗಳ ನಂತರ ತನ್ನ ಡೇರೆಯಲ್ಲಿ ಒರಗಿರುತ್ತ ತನ್ನೊಬ್ಬ ಆಸ್ಥಾನಿಕ ತೆರೆಯಾಚೆ 'ಎದ್ದೇಳು, ಬಟ್ಟಲ ತಾನೇ ಮಣ್ಣುಗೂಡುವ ಮುನ್ನ ಸುವರ್ಣಪಾನಪಾತ್ರೆಯನ್ನು ಹಿಗ್ಗಿನ ಮದ್ಯದಿಂದ ತುಂಬಿಸು' ಎಂಬ ಪದ್ಯ ಪಠಿಸುತ್ತಿದ್ದುದನ್ನು ಆಲಿಸಿದ. ಆ ಪದ್ಯದಿಂದ ಸ್ಫೂರ್ತಿಗೊಂಡ ಸುಲ್ತಾನ ತನ್ನ ಆಪ್ತಮಿತ್ರರನ್ನು ಕರೆದು ಆನಂದದ ರತ್ನಗಂಬಳಿ ಹಾಸಿ ಸಂಗೀತ ಮದ್ಯಗಳೊಂದಿಗೆ ಮನಸ್ಸನ್ನು ರಮಿಸಿಕೊಂಡ. ಸಂತೋಷಕೂಟ ಉಚಿತವಾದುದಕ್ಕಿಂತ ಹೆಚ್ಚು ಕಾಲ ನಡೆದಾಗ ಮತ್ತು ಮದ್ಯದ ಆವಿ ತನ್ನ ಪ್ರಭಾವ ಬೀರಿದಾಗ ಸುಲ್ತಾನನಿಗೆ ನದಿ ದಾಟಿ ವೈರಿಯ ಮೇಲೆ ಅಕ್ರಮಣ ಮಾಡುವ ಖಯಾಲು ಉಂಟಾಯಿತು.... ಮದ್ಯದ ಕಾವಿನಲ್ಲಿ ತಕ್ಷಣ ನದಿ ದಾಟಲು ನಿರ್ಧರಿಸಿದ ತನ್ನ ಆನೆಯನ್ನೇರಿ ತನ ಸಂಕಲ್ಪವನ್ನು ತಿಳಿಯಗೊಡದೆ, ಬೇಹು ನೋಡಲು ಎಂಬಂತೆ, ನದಿಯತ್ತ ಸಾಗಿದ. ಆದರೆ, ಸಾಧ್ಯವಿದ್ದಷ್ಟು ಯೋಧರು ತೆಪ್ಪಗಳನ್ನೇರುವಂತೆ ಮತ್ತು ಮಿಕ್ಕವರು ಆನೆಗಳ ಮೇಲೆ ನದಿ ದಾಟುವಂತೆ ಒಮ್ಮಿಂದೊಮ್ಮೆಲೆ ಆಜ್ಞಾಪಿಸಿದ. ಅಧಿಕಾರಿಗಳು ದುಡುಕಿನ ಮೂರ್ಖತನ ಮತ್ತು ಅಪಾಯವನ್ನು ನಿವೇದಿಸಿದರು. ಆದರೆ ಸುಲ್ತಾನ ಉತ್ತರ ನೀಡದೆ ತನ್ನ ಆನೆಯನ್ನು ಪ್ರವಾಹದಲ್ಲಿ ಧುಮುಕಿಸಿದ ಮತ್ತು ಸುಮಾರು ೨೫೦ ಆನೆಗಳ ಮೇಲೆ ಅಮ್ರರು ಮತ್ತು ಅವರ ಅನುಯಾಯಿಗಳು ಮನಸ್ಸಿಲ್ಲದ ಮನಸ್ಸಿನಿಂದ ಅವನನ್ನು ಹಿಂಬಾಲಿಸಿದರು.

"ಅತಿ ಸುದೈವದಿಂದ ಎಲ್ಲರೂ ಸುರಕ್ಷಿತವಾಗಿ ಎದುರು ದಡ ಸೇರಿದರು ಮತ್ತು ವೈರಿ ಯುದ್ಧಕ್ಕೆ ಸಾಗಿಬಂದಾಗ ಎರಡು ಬಾರಿ ತೆಪ್ಪಗಳ ಮೇಲೆ ದಾಟುವಷ್ಟು ಯೋಧರು ಬಂದಿಳಿದಿದ್ದರು. ಆದರೆ ವೈರಿ, ಎಂಥ ದೊಡ್ಡ ಬಲದೊಂದಿಗೆ ಬಂದಿದ್ದ ರೆಂದರೆ ಸುಲ್ತಾನನಿಗೆ ಪಾರಾಗುವ ಯಾವ ಸಂಭವವೂ ಇರಲಿಲ್ಲ. ೩೦,೦೦೦ ವೈರಿಗಳನ್ನೆದುರಿಸಲು ಅವನಲ್ಲಿ ೨೦೦೦ಕ್ಕಿಂತ ಹೆಚ್ಚು ಜನರಿರಲಿಲ್ಲ. ಇಸ್ಲಾಮ ವೀರರು ಏಕಾತ್ಮರಾಗಿ ಸ್ಫೂರ್ತಿ ಪಡೆದು ಎಂಥ ದಿಟ್ಟ ಪ್ರತಿರೋಧ ಒಡ್ಡಿದರೆಂದರೆ ಬೀಜನಗರದ ಮಹಾ ದಂಡನಾಯಕ ಸಂಜೀತರಾಯ ಕೂಡ ಸೇರಿದಂತೆ ಸುಮಾರು ಒಂದು ಸಾವಿರ ಕಾಫಿರರು ಸತ್ತುಬಿದ್ದರು. ಆದರೆ, ಕೊನೆಗೆ ತೋಪುಗುಂಡುಗಳು, ತುಬಾಕಿಗಳು ಮತ್ತು ಆಕಾಶ ಬಾಣಗಳಿಂದ ತಮ್ಮ ಪ್ರತಿರೋಧ ಶಕ್ತಿ ಮೀರಿ ಪೀಡಿತರಾಗಿ ತಮ್ಮ ಸುಮಾರು ಅರ್ಧ ಜನ ನಾಶಪಟ್ಟು, ಬದುಕುಳಿದವರು ಪಾರಾಗುವ ಆಶೆಯಿಂದ ನದಿಯಲ್ಲಿ ಧುಮುಕಿದರು. ಇಸ್ಮಾಯಿಲ್ ಆದಿಲ್‌ಶಹ

ನೊಂದಿಗೆ ಅದೇ ಆನೆಯ ಮೇಲಿದ್ದ ನರಸೂ ಬಹಾದುರ ಮತ್ತು ಇಬ್ರಾಹಿಮ ಬೇ ಆನೆಯನ್ನು ನದಿಯಲ್ಲಿ ಓಡಿಸಿದರು. ಪ್ರವಾಹ ಎಷ್ಟು ಜೋರಾಗಿತ್ತೆಂದರೆ ರಾಜನ ಆನೆ ಮತ್ತು ಏಳು ಯೋಧರನ್ನು ಹೊರತುಪಡಿಸಿ ಮಿಕ್ಕೆಲ್ಲರು ಮುಳುಗಿದರು. ಸುಲ್ತಾನನ ದುಡುಕುತನಕ್ಕೆ ಇಷ್ಟೊಂದು ದೊಡ್ಡ ನಷ್ಟದ ತಕ್ಕ ಶಾಸ್ತಿಯಾಯಿತು. ತನ್ನ ಸೋಲಿನ ಸೇಡು ತೀರಿಸಿಕೊಳ್ಳುವವರೆಗೆ ಮದ್ಯಲೋಲುಪನಾಗುವುದಿಲ್ಲೆಂದು ಅವನು ಗಂಭೀರ ಶಪಥಗೈದ; ಕೂಡಲೆ ನಿರಾಶೆಯನ್ನು ಕಿತ್ತೆಸೆದು ಈ ದುರದೃಷ್ಟದ ಕಾರ್ಯಭಂಗವನ್ನು ಸರಿಪಡಿಸುವಲ್ಲಿ ಉದ್ಯುಕ್ತನಾದ.

"ಮಿರ್ಜಾ ಜಹಾಂಗೀರ ಯುದ್ಧದಲ್ಲಿ ಅಸುನೀಗಿದ್ದರಿಂದ ಸುಲ್ತಾನನು ತನ್ನ ವ್ಯವಹಾರಗಳ ಪ್ರಸ್ತುತ ವಿಷಮ ಸ್ಥಿತಿಯಲ್ಲಿ ತೆಗೆದುಕೊಳ್ಳುವ ಯೋಗ್ಯ ಕ್ರಮಗಳಾವು ವೆಂಬುದರ ಬಗೆಗೆ ಅಸದ ಖಾನನೊಂದಿಗೆ ಆಲೋಚನೆ ಮಾಡಿದ. ನಷ್ಟ ಬಹಳ ವಾಗಿದ್ದು ಯೋಧರು ಉತ್ಸಾಹಗುಂದಿದ್ದರಿಂದ ಸಧ್ಯಕ್ಕೆ ಬೀಜಪೂರಿಗೆ ಹಿಂತಿರುಗುವುದು ವಾಸಿಯೆಂದು ಅಸದಖಾನ ಉತ್ತರ ನೀಡಿದ. ಆ ಸಲಹೆಯನ್ನು ಮನ್ನಿಸಿ ಸುಲ್ತಾನ ಕಿಸ್ಟ್ನಾದಿಂದ ಬೀಜಪೂರಿಗೆ ನಡೆದ. ಅಸದಖಾನನಿಗೆ ಸಿಪಹ ಸಾಲಾರ[30] ಎಂಬ ಗೌರವವನ್ನಿತ್ತು ಅವನ ಜಾಗೀರಿಗೆ ಹಲವು ಜಿಲ್ಲೆಗಳನ್ನು ಸೇರಿಸಿ ತನ್ನ ಎಲ್ಲ ಮುಖ್ಯ ವ್ಯವಹಾರಗಳ ಬಗೆಗೆ ಅವನನ್ನು ಪ್ರಧಾನ ಸಲಹೆಗಾರನನ್ನಾಗಿ ಮಾಡಿಕೊಂಡ."

## ವೃತ್ತಾಂತಗಳ ತುಲನೆ

ಈ ವೃತ್ತಾಂತವನ್ನು ನೂನಿಜ್ ನೀಡಿರುವುದರೊಂದಿಗೆ ಹೋಲಿಸಿ ನೋಡಿದಾಗ ಹಲವಾರು ವ್ಯತ್ಯಾಸಗಳು ಇರುವುದು ನಿಜವಾದರೂ ಕೂಡ ಎರಡೂ ಕಥನಗಳು ಅದೇ ಘಟನೆಯನ್ನು ಉಲ್ಲೇಖಿಸುವ ಬಗೆಗೆ ಸಂದೇಹ ಉಂಟಾಗದೆಂದು ನನ್ನ ಅನಿಸಿಕೆ. ಯುದ್ಧದ ಮೂಲವನ್ನು ಭಿನ್ನವಾಗಿ ಕಥಿಸಲಾಗಿದೆ. ನದಿತೀರದಲ್ಲಿ ಬಂದಾಗ ಸುಲ್ತಾನನು ಹಿಂದೂ ಸೈನ್ಯ ಎದುರು ತೀರದಲ್ಲಿ ಬಿಡಾರ ಬಿಟ್ಟುದನ್ನು ಕಂಡ, ಕೆಲವು ದಿನ ವಿಳಂಬ ಮಾಡಿ ಚಿಕ್ಕ ಬಲದೊಂದಿಗೆ ನದಿ ದಾಟಿದ. ಮತ್ತು ನದಿಯಲ್ಲಿ ನೂಕಲ್ಪಟ್ಟ ಎಂದು ಫಿರಿಸ್ತಾ ಹೇಳುತ್ತಾನೆ. ತಾನು ಹದಿನೈದು ಮೈಲು ದೂರದ ರಾಯಚೂರಿನಲ್ಲಿ ಬೀಡು ಬಿಟ್ಟಿರುವಾಗ ಕೃಷ್ಣದೇವರಾಯ ನದಿತೀರದ ಮೇಲೆ ಇಸ್ಮಾಯಿಲ್ ಆದಿಲ್‌ಶಹನ ಆಗಮನದ ಸುದ್ದಿ ಕೇಳಿದ, ಮುಂದೆ ಸಾಗಿ ನದಿಯಿಂದ ಒಂಬತ್ತು ಮೈಲು ದೂರದ ಮೇಲೆ ಯುದ್ಧ ಹೂಡಿದ, ಕೊನೆಗೆ ವೈರಿಯನ್ನು ಆಚೆಗೆ ತಳ್ಳಿದ ಎಂದು ನೂನಿಜ್ ಹೇಳುತ್ತಾನೆ. ಎರಡೂ ವೃತ್ತಾಂತಗಳನ್ನು ಒಟ್ಟಿಗೆ ನೋಡಲಾಗಿ, ಎಷ್ಟೊಂದು ತಾರ್ಕಣೆಗಳಿವೆಯೆಂದರೆ ; ಪ್ರತಿಯೊಬ್ಬ ಚರಿತ್ರ ಕಾರ ಅದೇ ಘಟನೆ ಕುರಿತು ಬರೆಯುತ್ತಿರುವ ಬಗೆಗೆ ಎಳ್ಳಷ್ಟೂ ಸಂದೇಹ ಮೂಡದು.

ಇಬ್ಬರಲ್ಲಿ ಯಾರು ಅಧಿಕ ಖಚಿತವೆಂಬುದು ಈಗ ನಿರ್ಣಯಿಸಲು ಆಗದ ವಿಷಯ. ಅರುವತ್ತು ವರ್ಷಾಂತರದವರೆಗೆ ತನ್ನ ಕೃತಿಯನ್ನು ಸಂಕಲಿಸದ ಮುಹಮ್ಮದೀಯ ಚರಿತ್ರಕಾರನಿಗಿಂತ ನೂನಿಜ್‌ನನ್ನು ನಂಬುವುದು ಮಿಗಿಲು. ಏಕೆಂದರೆ, ಅವನು ಕೇವಲ ಹದಿನೈದು ವರ್ಷಗಳ ತರುವಾಯ ಬರೆದ ಮತ್ತು ಯುದ್ಧದಲ್ಲಿ ಹಾಜರಿದ್ದ ಪೋರ್ತುಗೀಜರಲ್ಲಿ ಕೆಲವರನ್ನಾದರೂ ಏನು ಜರುಗಿತೆಂಬುದರ ಬಗೆಗೆ ಕೇಳಿ ತಿಳಿದುಕೊಂಡಿದ್ದಿರಬಹುದು. ಮೇಲಾಗಿ, ಫಿರಿಸ್ತಾನ ವೃತ್ತಾಂತದಲ್ಲಿ ಕೆಲವು ಅಂತರ್ಗತ ಅಸಂಗತಿಗಳಿವೆ.

ಈ ಘಟನೆಗಳು ಜರುಗುತ್ತಿದ್ದಾಗ ಹಿಂದೂ ಬಿಡಾರದಲ್ಲಿ ಸ್ವತಃ ತಾನಾಗಲಿ ಅಥವಾ ತನ್ನ ಮಾಹಿತಿಗಾರನಾಗಲಿ ಉಪಸ್ಥಿತನೆಂದು ನಂಬಹಚ್ಚುವ ವಿಪುಲ ಅಂಶಗಳು ವೃತ್ತಾಂತದ ಈ ಭಾಗದಲ್ಲಿ ನೂನಿಜ್‌ನ ಕಥೆಯುದ್ದಕ್ಕೂ ಇರುವುದು ಗಮನಾರ್ಹ. ಚರಿತ್ರೆಯ ಮಿಕ್ಕ ಭಾಗಕ್ಕಿಂತ ತೀರ ಭಿನ್ನವಾಗಿ ದಂಡಯಾತ್ರೆಯ ಕಥನ ಪ್ರತ್ಯಕ್ಷದರ್ಶಿಯ ವೃತ್ತಾಂತದಂತೆ ಓದಿಸಿಕೊಳ್ಳುತ್ತದೆ ; ವಿಶೇಷತಃ ರಾಯಚೂರಿನ ಕೋಟೆ[31] ಮತ್ತು ಬಿಡಾರ ವರ್ಣಿಸುವ ವಾಕ್ಯವೃಂದಗಳಲ್ಲಿ—ಅಲ್ಲಿ ಸರಬರಾಜು ಎಷ್ಟು ವಿಪುಲವಾಗಿತ್ತೆಂದರೆ "ಕೇಳಿದುದೆಲ್ಲ ಲಭ್ಯವಿತ್ತು[32] ಅಕ್ಕಸಾಲಿಗರು ಕುಶಲ ಕರ್ಮಿಗಳು ನಗರದಲ್ಲಿಯೆ ಎಂಬಂತೆ ಕಾರ್ಯನಿರತರಾಗಿರುತ್ತಿದ್ದುದು ಕಂಡು ಬರುತ್ತಿತ್ತು[33] ಮಾರಾಟಕ್ಕಾಗಿ ಎಲ್ಲ ತರಹದ ಬೆಲೆಯುಳ್ಳ ಹರಳುಗಳನ್ನು ಇಟ್ಟುದು ಕಂಡುಬರುತ್ತಿತ್ತು.[34] "ತಾನು ನೋಡಿದುದನ್ನು ಅರ್ಥ ಮಾಡಿಕೊಳ್ಳಲಾರದ ಯಾರೂ ಯುದ್ಧ ನಡೆಯುತ್ತಿದೆಯೆಂದು ತಿಳಿಯುವ ಬದಲು ತಾನೊಂದು ಸಮೃದ್ಧ ನಗರದಲ್ಲಿ ಇರುವನೆಂದು ಭಾವಿಸುತ್ತಿದ್ದ" ನಗಾರಿಗಳು, ತುತ್ತೂರಿಗಳು ಮತ್ತು ಜನರ ಕೂಗು ಹುಟ್ಟಿಸುತ್ತಿದ್ದ ಅಸಾಧಾರಣ ಸದ್ದಿನ ವರ್ಣನೆ ಕೊಟ್ಟಿರುವದನ್ನು ಗಮನಿಸಿರಿ. ಪಕ್ಷಿಗಳು ಸಹ ಭಯಗ್ರಸ್ತರಾಗಿ ಯೋಧರ ಕೈಗಳಲ್ಲಿ ಬೀಳುತ್ತಿದ್ದವು ಮತ್ತು "ಆಕಾಶವೆ ಕಳಚಿ ಭೂಮಿಯ ಮೇಲೆ ಬೀಳುವದೇನೊ ಎಂಬಂತೆ ಭಾಸ ವಾಗುತ್ತಿತ್ತು" ಮತ್ತು "ನೀನು ಏನನ್ನಾದರೂ ಕೇಳಬೇಕಿದ್ದರೆ ನೀನು ಮಾತಾಡುವುದು ನಿನಗೇ ಕೇಳಿಸುತ್ತಿದ್ದಿಲ್ಲ, ಸಂಜ್ಞೆಗಳಿಂದ ಕೇಳಬೇಕಿತ್ತು." ಅನೇಕ ಇಂಥ ಉದಾಹರಣೆಗಳನ್ನು ನೀಡಬಹುದು, ಆದರೆ ಬೇಜಾರು ಮಾಡದಂತಿರಲೋಸುಗ ನಾನು ಮೂರರತ್ತ ಮಾತ್ರ ಗಮನ ಸೆಳೆಯುತ್ತೇನೆ. ಅವಾವುವೆಂದರೆ, ಅದರ ಶರಣಾಗತಿಯ ನಂತರ ನಗರದ ಜನರನ್ನು ತನ್ನ ಸ್ವಾಧೀನಕ್ಕೆ ಒಪ್ಪಿಸಿಕೊಳ್ಳುವಾಗ ರಾಜನು "ಕ್ರಿಸ್ಟೊವಾಓ ದ ಫಿಗ್ಯೆರೆಡೊನತ್ತ ದೃಷ್ಟಿ ಬಿರುತ್ತ ಜನರೆಡೆ ಹೊರಳಿ ಒಬ್ಬ ಒಳ್ಳೆಯ ಮನುಷ್ಯ ಏನೆಲ್ಲ ದೊಡ್ಡ ಕೆಲಸ ಮಾಡಬಲ್ಲನೆಂಬುದನ್ನು ಗಮನಿಸಲು ತನ್ನ ಜನರಿಗೆ ಹೇಗೆ ಹೇಳುತ್ತಿದ್ದ"ನೆಂಬುದನ್ನು ಕುರಿತು ನೂನಿಜ್ ನೀಡಿದ ವೃತ್ತಾಂತ[35] ; ಕೃಷ್ಣದೇವ ನಗರದಲ್ಲಿ ವಿಜಯದ ಪ್ರವೇಶ ಮಾಡಿದಾಗ ಪರಾಜಿತ ನಾಗರಿಕರ ವರ್ತನೆ

ಕುರಿತ ಅವನ ವರ್ಣನೆ ; ದಂಡಯಾತ್ರೆಯ ಮುಕ್ತಾಯದ ನಂತರ ವಿಜಯನಗರದಲ್ಲಿ ರಾಜ ರಾಯಭಾರಿಯನ್ನು ಬರಮಾಡಿಕೊಂಡ ವರ್ಣನೆ.[36] ನಮ್ಮ ಇನ್ನೊಬ್ಬ ಚರಿತ್ರಕಾರ ಡೊಮಿಂಗೊಪ್ಯಾಸ್ ರಾಯಚೂರಿನ ಯುದ್ಧದಲ್ಲಿ ಸ್ವತಃ ಉಪಸ್ಥಿತ ನಿರದಿದ್ದರೂ ಸಹ ಯುದ್ಧವಾದ ಕೆಲವು ತಿಂಗಳ ತರುವಾಯ ಕ್ರಿಸ್ಟೊವಾಒ ದ ಫಿಗೈರೆಡೊನೊಂದಿಗೆ ವಿಜಯನಗರದಲ್ಲಿದ್ದ ಎಂಬುದನ್ನು ನೆನಪಿಡಬೇಕು.

ನೂನಿಜ್‌ನ ವೃತ್ತಾಂತದ ದೊಡ್ಡ ಸ್ವಾರಸ್ಯ, ಉಪಲಬ್ಧವಿರುವ ಸವಿವರ ವೃತ್ತಾಂತ ಅದೊಂದೇ ಎಂಬ ಸಂಗತಿಯಲ್ಲಡಗಿದೆ. ಸಂಗತಿಗಳನ್ನು ಇದೇ ಚರಿತ್ರೆ ಯಿಂದ ತೆಗೆದುಕೊಂಡು ಬ್ಯಾರೊಸ್ ಈ ಘಟನೆಗಳನ್ನು ಐತಿಹಾಸಿಕ ರೀತಿಯಲ್ಲಿ ಕಥಿಸುತ್ತಾನೆ. ಆದರೆ ಅವನು ಭಾರತಕ್ಕೆ ಎಂದೂ ಬಂದಿರಲಿಲ್ಲ ಮತ್ತು ಅವನ ಸಂಕ್ಷಿಪ್ತ ಸಂಗ್ರಹದಲ್ಲಿ ನೂನಿಜ್‌ನ ಕಣ್ಣಿಗೆ ಕಟ್ಟುವಂತಹ ಕತೆಯಲ್ಲಿನ ಸತ್ವ ಮತ್ತು ಪ್ರಭಾವದ ಲವಲೇಶವೂ ಇಲ್ಲ. ಇತರ ಪೋರ್ತುಗೀಜ ಲೇಖಕರು ಯುದ್ಧದ ಬಗೆಗೆ ಲಘುವಾಗಿ ಹೇಳಿಸಿಕೊಂಡು ಹೋಗುತ್ತಾರೆ. ಗೋವಾದ ಹತ್ತಿರದ ಭೂಖಂಡಗಳನ್ನು ರಾಯ್ ದ ಮೆಲೊ ಯುದ್ಧದ ಕೊನೆಗೆ ಸ್ವಾಧೀನಪಡಿಸಿಕೊಂಡ ನೆಂಬುದಕ್ಕಿಂತ ಮಿಗಿಲಾಗಿ ಯುದ್ಧದ ಬಗೆಗೆ ಅವರಿಗೆ ಆಸಕ್ತಿ ಹುಟ್ಟಲೇ ಇಲ್ಲವೆಂದು ತೋರುತ್ತದೆ.

## ಯುದ್ಧದ ರಾಜಕೀಯ ಪರಿಣಾಮಗಳು

ಯುದ್ಧ ದೂರಗಾಮಿ ಪರಿಣಾಮಗಳನ್ನು ಬೀರಿತು. ಹಿಂದೂಗಳ ವಿಜಯ ಆದಿಲ್‌ಶಾಹನ ಶಕ್ತಿ ಪ್ರತಿಷ್ಠೆಗಳನ್ನು ಎಷ್ಟು ದುರ್ಬಲಗೊಳಿಸಿತೆಂದರೆ ಅವನು ಸಧ್ಯದಲ್ಲಿ ದಕ್ಷಿಣವನ್ನು ಗೆಲ್ಲುವ ಕನಸನ್ನು ಸಂಪೂರ್ಣವಾಗಿ ಕೈಬಿಟ್ಟ ಮತ್ತು ತನ್ನ ನೆರೆಯ ಇತರ ಮುಹಮ್ಮದೀಯ ಅರಸರೊಂದಿಗೆ ಮೈತ್ರಿ ಬೆಸೆಯುವತ್ತ ಲಕ್ಷ್ಯ ಹರಿಸಿದ. ವಿಜಯ, ದೇಶದ ರಾಜಕೀಯ ಪರಿಸ್ಥಿತಿಯನ್ನು ದಕ್ಖನದ ಇತರ ಎಲ್ಲ ಮುಹಮ್ಮದೀಯ ಬಲಗಳು ಗಂಭೀರವಾಗಿ ಪರಿಗಣಿಸುವಂತೆ ಮಾಡಿತು. ಅದಿಲ್ಲದೆ ಏನೂ ಸಾಧ್ಯವಿಲ್ಲದ ಮತ್ತು ಯಾವುದರ ಸಹಾಯದಿಂದಲೆ ಅಂತಿಮವಾಗಿ ವಿಜಯನಗರ ಸಾಮ್ರಾಜ್ಯ ಉರುಳಿಸಲ್ಪಟ್ಟು ದಕ್ಷಿಣಕ್ಕೆ ದಾರಿ ತೆರೆಯಿತೊ ಅಂಥ ಒಕ್ಕೂಟಕ್ಕೆ ಈ ಯುದ್ಧ ಮಾರ್ಗ ತೋರಿಸಿತು. ಇದೂ ಅಲ್ಲದೆ ಅದು ಹಿಂದೂಗಳಲ್ಲಿ ಗರ್ವ ಮತ್ತು ಅಹಂಕಾರ ಗಳ ಸ್ವಭಾವವನ್ನು ಹುಟ್ಟಿಸುವ ಮೂಲಕ ಅವರ ಮೇಲೆ ಬಹಳ ಪರಿಣಾಮ ಬೀರಿತು. ಇದರಿಂದ ಬೆಂಕಿಗೆ ತುಪ್ಪ ಸುರುವಿದಂತಾಗಿ ಅವರು ತಮ್ಮ ನೆರೆಹೊರೆಯ-ವರಿಗೆ ಖಂಡಿತವಾಗಿಯೂ ದುಸ್ಸಹನೀಯರಾಗುವಂತೆ ಮಾಡಿ ತಮ್ಮದೆ ಪತನವನ್ನು ತ್ವರಿತ ಗೊಳಿಸಿತು.

ಅದು ಅದೇ ಪ್ರಮಾಣದಲ್ಲಿ ಕರಾವಳಿಯಲ್ಲಿ ಪೋರ್ತುಗೀಜರ ಭವಿಷ್ಯದ ಮೇಲೂ ಪರಿಣಾಮ ಬೀರಿತು, ಗೋವಾ ಎರಡನೆಯ ವಿಜಯನಗರ ರಾಜವಂಶದ ಏಳು ಬೀಳುಗಳೊಂದಿಗೆಯೆ ಏಕಕಾಲಿಕವಾಗಿ ಏಳುಬೀಳು ಕಂಡಿತು ; ಅದರ ಇಡಿ ವ್ಯಾಪಾರ ಹಿಂದೂ ಬೆಂಬಲವನ್ನು ಅವಲಂಬಿಸಿತ್ತೆಂಬುದನ್ನು ನೋಡಿದಾಗ ಹಾಗೆ ಆಗುವುದು ಅನಿವಾರ್ಯವಾಗಿತ್ತು. ಏಕೆಂದರೆ, ಪೋರ್ತುಗಾಲದ ರಾಜ ತನ್ನ ಪರಂಪರಾಗತ ವೈರಿಗಳಾದ "ಮೂರ"ರೊಂದಿಗೆ ಅನುಕೂಲ ಮನೋಭಾವ ತಳೆದಿರಲಿಲ್ಲ. ಈ ಅಂಶವನ್ನು ಪೋರ್ತುಗೀಜ ವಸಾಹತು ಚರಿತ್ರೆಯ ಲೇಖಕರು ಅನೇಕ ವೇಳೆ ಗಮನಿಸದೆ ಬಿಟ್ಟಿದ್ದಾರೆ. ಯಾವುದರ ಗಡಿಗಳಲ್ಲಿ ಮಾತ್ರ ಪೋರ್ತುಗೀಜರು ನೆಲೆಸಿದರೊ ಮತ್ತು ಯಾವುದರ ಕರಾವಳಿಯಲ್ಲಿ ಅವರ ಹಡಗುಗಳು ಬಂದುಹೋಗುತ್ತಿದ್ದವೊ ಆ ಮಹಾ ದೇಶದ ಆಂತರಿಕ ರಾಜಕಾರಣದ ಕಡೆಗೆ ಈ ವಿಷಯದ ಮೇಲಿನ ಇಬ್ಬರು ತೀರ ಇತ್ತೀಚಿನ ಗ್ರಂಥಕರ್ತರಾದ ಶ್ರೀ ಡ್ಯಾನ್ವರ್ಸ್ (ಪೋರ್ತುಗೀಜ್ ಇನ್ ಇಂಡಿಯಾ) ಮತ್ತು ಶ್ರೀ ವ್ಹೈಟ್‌ವೇ (ದ ರೈಜ್ ಆಫ್ ಪೋರ್ತುಗಿಜ್ ಇನ್ ಇಂಡಿಯಾ) ತೀರ ಅಲ್ಪ ಗಮನ ನೀಡಿದ್ದಾರೆ ಶ್ರೀ ಡ್ಯಾನ್ವರ್ಸ್, ರಾಯಚೂರ ಯುದ್ಧಕ್ಕೆ[37] ಒಂದು ಮತ್ತು ವಿಜಯನಗರದ ವಿನಾಶಕ್ಕೆ[38] ಇನ್ನೊಂದು ಚಿಕ್ಕ ಪರಿಚ್ಛೇದವನ್ನು ಮೀಸಲಿಟ್ಟಿದ್ದಾನೆ. ಶ್ರೀ ವ್ಹೈಟ್‌ವೇ ಮೊದಲ ಘಟನೆಯನ್ನು ಉಲ್ಲೇಖಿಸಿಲ್ಲ ಕೂಡ ಮತ್ತು ಎರಡನೆಯದರ ಕಾಲವನ್ನು ನಿರ್ಧರಿಸದೆ ತನ್ನ ಚರಿತ್ರೆಯನ್ನು ಮುಕ್ತಾಯಗೊಳಿಸುತ್ತಾನೆ. ಆದಾಗ್ಯೂ, ಯಾವ ಸಾಮ್ರಾಜ್ಯಕ್ಕೆ ಪೂರೈಕೆ ಮಾಡಲು ಆ ವ್ಯಾಪಾರ ಸ್ಥಾಪಿಸಲ್ಪಟ್ಟಿತ್ತೊ ಆ ಸಾಮ್ರಾಜ್ಯದ ಪ್ರಚಲಿತ ಸ್ಥಿತಿಗತಿಗಳನ್ನೆ ಯಾವುದೊಂದು ಕರಾವಳಿಯ ಕಡಲ ವ್ಯಾಪಾರದ ಸಫಲತೆ ಅಥವಾ ವಿಫಲತೆ ಅವಲಂಬಿಸಿರುತ್ತದೆಂಬುದನ್ನು ಮನಗಾಣುವುದು ಸುಲಭ. ವಿಜಯನಗರ ತನ್ನ ವೈಭವ, ಸುಖಭೋಗ, ಪ್ರದರ್ಶನಪ್ರಿಯತೆ, ಅಪಾರ ಸಂಪತ್ತು ಮತ್ತು ಬೃಹತ್ ಸೈನ್ಯಗಳೊಂದಿಗೆ ತನ್ನ ಸಾಮರ್ಥ್ಯದ ಶಿಖರದಲ್ಲಿದ್ದಾಗ ವಿದೇಶಿ ವ್ಯಾಪಾರಿಗಳು ಘನ ಯಶಸ್ಸು ಪಡೆದರು ; ವಿಜಯನಗರ ಬಿದ್ದಾಗ ಮತ್ತು ನಗರ ಪಾಳುಬಿದ್ದು ನಿರ್ಜನಗವಾದಾ ವಿದೇಶಿ ವ್ಯಾಪಾರಿಗಳಿಗೆ ತಮ್ಮ ಸರಕುಗಳಿಗಾಗಿ ಮಾರುಕಟ್ಟೆ ಇರದೆ ವ್ಯಾಪಾರ ನಶಿಸಿತು. ಆದುದರಿಂದ, ರಾಯಚೂರ ಮೇಲಿನ ಈ ಮಹಾ ಹಿಂದೂ ವಿಜಯ ಅದು ಅಲ್ಪ ಮಹತ್ವದ ಘಟನೆಯೇನೊ ಎಂಬಂತೆ ಚರಿತ್ರೆಕಾರರ ಕೈಲಿ ತೇಲಿಸಿಕೊಂಡು ಹೋಗುವುದಕ್ಕಿಂತ ಉತ್ತಮ ಪಾಡಿಗೆ ಅರ್ಹವಾಗಿತ್ತು.

## ಯುದ್ಧಾನಂತರದ ಘಟನೆಗಳು

ನೂನಿಜ್ ಕೃಷ್ಣದೇವರಾಯನ ವಿಜಯಾನಂತರದ ಘಟನೆಗಳ ವೃತ್ತಾಂತವನ್ನು ಸವಿವರವಾಗಿ ನೀಡಿದ್ದಾನೆ. ಮತ್ತು ಘಟನೆ ಜರುಗಿದ ಕೇವಲ ಸುಮಾರು

ಹದಿನೈದು ವರ್ಷಗಳ ನಂತರ ಅವನು ಬರೆದನೆಂಬುದನ್ನು ನೋಡಿದಾಗ ಅವನ ವೃತ್ತಾಂತವನ್ನು ಬಹುಮಟ್ಟಿಗೆ ಮುಖ್ಯಾಂಶಗಳಲ್ಲಿ ನಿಜವಾದುದೆಂದು ತಿಳಿಯುವುದೆ ಮೇಲು. ಫಿರಿಸ್ತಾ ಬಹುಶಃ ಸಹಜವಾಗಿ,ಈ ವಿಷಯದ ಮೇಲೆ ಸಂಪೂರ್ಣ ಮೌನ ತಳೆದಿದ್ದಾನೆ.

ರಾಯಚೂರ ನಗರ ಶರಣಾಗತವಾದಾಗ ಹಿಂದೂ ರಾಜ ಅದರಲ್ಲಿ ವಿಜಯೋತ್ಸವದ ಪ್ರವೇಶ ಮಾಡಿದ ಮತ್ತು ಠಾಣ್ಯದೊಂದಿಗೆ ಪ್ರೀತಿ ಆರಯ್ಕೆಗಳಿಂದ ನಡೆದುಕೊಂಡನಾದರೆ ಅವನ ಯಶ ತಿಳಿದು ದೂತರನ್ನು ಕಳಿಸಿದ ಇತರ ಮುಹಮ್ಮ ದೀಯ ರಾಜರು ಕೃಷ್ಣದೇವರಾಯನಿಂದ ಸೊಕ್ಕಿನ ಮತ್ತು ಮನ ನೋಯಿಸುವ ಉತ್ತರ ಪಡೆದರು ಎಂದು ನೂನಿಜ್ ಹೇಳುತ್ತಾನೆ. ಆ ಮೇಲೆ ಕೃಷ್ಣದೇವ, ವಿಜಯ ನಗರಕ್ಕೆ ಹಿಂತಿರುಗಿ ದೊಡ್ಡ ಉತ್ಸವ ಆಚರಿಸಿದ. ಅದಾದ ಅಲ್ಪ ಕಾಲದಲ್ಲಿಯೇ ಸೋತ ಶಹನಿಂದ ರಾಯಭಾರಿಯೊಬ್ಬ ಬಂದ, ಮತ್ತು ಒಂದು ತಿಂಗಳವರೆಗೆ ಕಿಂಚಿತ್ ಸೌಜನ್ಯ ತೋರಿಸಲ್ಪಟ್ಟ ನಂತರ ಅವನನ್ನು ಓಲಗಕ್ಕೆ ಕರೆಯಲಾಯಿತು. ಆಗ, ಆದಿಲ್‌ಶಹ ತನ್ನಲ್ಲಿಗೆ ಬಂದು ನಮಸ್ಕರಿಸಿ ತನ್ನ ಕಾಲನ್ನು ಚುಂಬಿಸುವುದಾದರೆ ಅವನ ಭೂಮಿ ಮತ್ತು ಕೋಟೆಗಳನ್ನು ಅವನಿಗೆ ಹಿಂತಿರುಗಿಸಲಾಗುವುದೆಂದು ರಾಜನು ದೂತನ ಮೂಲಕ ತನ್ನ ವೈರಿಗೆ ಹೇಳಿಕಳಿಸಿದ. ಇದಕ್ಕೆ ಲಕ್ಷ್ಯ ನೀಡದಿದ್ದುದನ್ನು ಕಂಡು ರಾಯ ಕೇಳಿದ ರೀತಿಯಲ್ಲಿ ಗೌರವ ನೀಡಲು ಪ್ರೇರೇಪಿಸಬಹುದೆಂಬ ಆಸೆಯಿಂದ ಮತ್ತು ತನ್ಮಾವನೊಬ್ಬನ ಯೋಚಿತ ಕಡು ಅಪಮಾನದಿಂದ ಆವಶ್ಯಕ ವಾಗಿಯೇ ದಕ್ಷನದ ಇತರ ರಾಜರ ಮನಸ್ಸಿನ ಮೇಲೆ ಯಾವ ಪರಿಣಾಮ ಉಂಟಾದೀ ತೆಂಬ ಪರಿವೆ ಇಲ್ಲದೆ ಶಹನ ಶೋಧನೆಯಲ್ಲಿ ಹೊರಟ. ಶರಣಾಗತಿ ಜರುಗಲಿಲ್ಲ, ಕೃಷ್ಣ ತನ್ನ ಸೈನ್ಯವನ್ನು ಆದಿಲ್‌ಶಹನ ರಾಜಧಾನಿ ವಿಜಾಪುರದಷ್ಟು ದೂರ ಉತ್ತರದ ವರೆಗೆ ತೆಗೆದುಕೊಂಡು ಹೋದ. ಆದಿಲ್‌ಸಹ ಅದನ್ನು ಅಲ್ಪಕಾಲ ಹಿಡಿದುಕೊಂಡಿದ್ದು ಅತೀವ ಗಾಯಗೊಂಡು ಬಿಟ್ಟುಹೋದ. ತರುವಾಯ ಶಹನ ಕುಯುಕ್ತಿಯ ಅಸ್ಥಾನಿಕನಾಗಿದ್ದ ಅಸದಖಾನ ತನ್ನ ವೈಯಕ್ತಿಕ ವೈರಿ ಸಲಾಬತ್‌ಖಾನನ ಶಿರಚ್ಛೇದನ ಮಾಡುವಂತೆ ರಾಯನನ್ನು ಪ್ರೇರೇಪಿಸಿ ಅವನ ಮರಣವನ್ನು ಸಾಧಿಸಿದ. ತನ್ನ ಸ್ವಾರ್ಥೋದ್ದೇಶಗಳಿಗಾಗಿ ತನ್ನ ದೊರೆಯ ಹಿತಾಸಕ್ತಿಗಳಿಗಿಂತ ಮಹತ್ವ ನೀಡಿದ ಮಹಾಸಂಚುಗಾರನ ಕುತಂತ್ರ, ರಾಜ ಆಕೃತ್ಯ ಎಸಗುವಂತೆ ಮಾಡಿತು,

ರಾಜಾ ಕೃಷ್ಣ ವಿಜಾಪುರ ನಗರದಲ್ಲಿ ಆದಿಲ್‌ಶಾಹ ಕೈದಿನಲ್ಲಿಟ್ಟಿದ್ದ ಮೊದಲಿನ ಬಹುಮನಿ ರಾಜನ ಮೂವರು ಮಕ್ಕಳನ್ನು ಸೇರೆಹಿಡಿದಿದ್ದ. ಅವರಲ್ಲಿ ಹಿರಿಯನಾದ ವನನ್ನು ದಕ್ಷನದ ರಾಜನೆಂದು ಘೋಷಿಸಿದ.[39] ಒಂದೇ ದಕ್ಷನ ಪ್ರಭುತ್ವದ ಅವಶೇಷಗಳ ಮೇಲೆ ತಮ್ಮನ್ನು ಸ್ಥಾಪಿಸಿಕೊಂಡಿದ್ದ ಐವರು ರಾಜರ ಆಳಿಕೆಯನ್ನು ಕಿತ್ತೊಗೆಯುವ ಈ ಭಗ್ನ ಪ್ರಯತ್ನ ಸಹಜವಾಗಿಯೆ ಕೈಗೂಡಲಿಲ್ಲ, ಮತ್ತು ಇದು

ತಮ್ಮ ಸಾಮಾನ್ಯ ವೈರಿಯ ವಿಷಯದಲ್ಲಿ ಈ ರಾಜರು ತಳೆದಿದ್ದ ಹಗೆಯನ್ನು ಇನ್ನಷ್ಟು ಗಟ್ಟಿಗೊಳಿಸುವಲ್ಲಿ ಪರಿಣಮಿಸಿತು.

ಅಲ್ಪ ಕಾಲದ ನಂತರ, ಕೃಷ್ಣರಾಯ ತನ್ನ ಕಿರೀಟವನ್ನು ಯಾರಿಗೆ ಕೊಡ ಬಯಸಿದ್ದನೊ ಮತ್ತು ಯಾರ ಸಲುವಾಗಿ ಬಹಿರಂಗವಾಗಿ ಸಿಂಹಾಸನ ತ್ಯಜಿಸುವಷ್ಟರ ಮಟ್ಟಿಗೆ ಸಹ ಹೋಗಿದ್ದನೊ ಆ ಯುವರಾಜನಾದ ಕೃಷ್ಣರಾಯನ ಮಗ ಒಮ್ಮಿಂದೊಮ್ಮೆಲೆ ವಿಷದ ಪರಿಣಾಮವಾಗಿ ಸತ್ತ. ಆಗ ತಾನೂ ಸಾಯುವ ಸ್ಥಿತಿಯಲ್ಲಿದ್ದ ರಾಜ ತನ್ನ ಮಂತ್ರಿ ಸಾಳುವ ತಿಮ್ಮ ಮತ್ತು ಅವನ ಕುಟುಂಬದ ವರನ್ನು ಬಂಧಿಸಿ ಸೆರೆಯಲ್ಲಿಟ್ಟ. ಇದರಲ್ಲಿ ಅವನಿಗೆ ದರಬಾರದಲ್ಲಿ ಉಪಸ್ಥಿತರಿದ್ದ ಕೆಲವು ಪೋರ್ತುಗೀಜರು ನೆರವಾದರು. ಸಾಳುವ ತಿಮ್ಮನ ಮಗ ಪರ್ವತಶ್ರೇಣಿಗೆ— ಬಹುಶಃ ಈಗ ರಾಮನದುರ್ಗವೆಂದು ಗೊತ್ತಿರುವ ಅತ್ಯಂತ ಉನ್ನತ ಗುಡ್ಡದ ತುದಿಯ ಮೇಲೆ ಕಟ್ಟಲಾಗಿದ್ದ ದೈತ್ಯಾಕಾರದ ಕಲ್ಲು ಕೆಲಸದ ಭದ್ರ ಕೋಟೆಯ ಅವಶೇಷಗಳು ಇಂದಿಗೂ ಕಂಡುಬರುವ, ರಾಜಧಾನಿಯ ದಕ್ಷಿಣಕ್ಕಿರುವ, ಸಂಡೂರು —ಪಾರಾಗಿ ಹೋಗಲಾಗಿ, ರಾಜನು ತಿಮ್ಮ ಹಾಗೂ ಅವನ ತಮ್ಮ ಮತ್ತು ಮಗನನ್ನು ಹಿಡಿದು ತರಿಸಿ ಅವರ ಕಣ್ಣು ಕೀಳಿಸಿದನು.

ಈ ಸಮಯದ ಸುಮಾರಿಗೆ ಆದಿಲ್‌ಶಾಹ ತನ್ನ ಮುರಿದ ಅದೃಷ್ಟವನ್ನು ಮರಳಿ ಪಡೆಯಲು ಪುನಃ ಮುಂದೆ ಸಾಗಿದ. ಆದರೆ ಕೃಷ್ಣದೇವ ತನ್ನನ್ನು ಎದುರಿಸಲು ಸ್ವತಃ ಬರುತ್ತಿದ್ದಾನೆಂಬ ಸುದ್ದಿ ಕೇಳಿ ಅವಸರದಿಂದ ಕಾಲ್ದೆಗೆದ. ತೀವ್ರವಾಗಿ ಅಸ್ವಸ್ಥನಾಗಿದ್ದರೂ ಉಲ್ಲಿಖಿತ ರೀತಿಯಲ್ಲಿ ನಿಜವಾಗಿಯೂ ಸಾಗಿದನೆಂಬುದು ಮಾರ್ಗ ದಲ್ಲಿ ಪೋರ್ತುಗೀಜರಿಂದ ಆರುನೂರು ಕುದುರೆಗಳನ್ನು ಕೊಂಡುಕೊಂಡನೆಂಬ ನೂನಿಜ್‌ನ ಹೇಳಿಕೆಯಿಂದ ಖಚಿತವಾಗುತ್ತದೆ. ಆಗ ಆದಿಲ್‌ಶಾಹನ ವಶದಲ್ಲಿದ್ದ ಬೆಳಗಾಂವಿಯ ಮೇಲೆ ಆಕ್ರಮಣ ಮಾಡಲು ಕೃಷ್ಣ ಸಿದ್ಧತೆ ಮಾಡತೊಡಗಿದ. ಆದರೆ ತನ್ನ ಯೋಜನೆ ಪೂರೈಸಲಾರದಷ್ಟು ತೀವ್ರ ಅನಾರೋಗ್ಯಕ್ಕೆ ತುತ್ತಾಗಿ ಅಲ್ಪ ಕಾಲದ ತರುವಾಯ ನಲವತ್ತೆರಡರಿಂದ ನಲವತ್ತೈದರ ವಯದಲ್ಲಿ ತೀರಿಕೊಂಡ. ಅದು ಕ್ರಿ.ಶ. ೧೫೩೦.

ಅಚ್ಯುತ ಅವನ ಉತ್ತರಾಧಿಕಾರಿಯಾದ.

ಇಷ್ಟು ನೂನಿಜ್‌ನದು ಬೇರೆ ಲೇಖಕರಿಂದ ಇನ್ನೂ ಹೆಚ್ಚಿಗೆ ಗೊತ್ತಾಗುತ್ತದೆ. ೧೫೨೩ರ ಸುಮಾರಿಗೆ ರಾಜನ ಮಂತ್ರಿ ಸಾಳುವ ತಿಮ್ಮ, ರಾಯ್ ದ ಮೆಲೊನ ನೇತೃತ್ವದಲ್ಲಿ ಇತ್ತೀಚೆಗೆ ಪೋರ್ತುಗೀಜರು ವಶಪಡಿಸಿಕೊಂಡಿದ್ದ ಗೋವಾದ ಸಮೀಪದ ಭೂಖಂಡಗಳ ಮೇಲೆ ಆಕ್ರಮಣ ಮಾಡಿದನೆಂದೂ ಚಿಕ್ಕ ಬಲದೊಂದಿಗೆ ಪೊಂಡಾದತ್ತ ಮುಂದುವರಿದನೆಂದೂ ಆದರೆ ಆಕ್ರಮಿತನಾಗಿ ಹಿಂದೂಡಲ್ಪಟ್ಟನೆಂದೂ ಬ್ಯಾರೊಸ್ ಹೇಳುತ್ತಾನೆ[40]. ಇದಾದ ಅಲ್ಪ ಕಾಲಾನಂತರದಲ್ಲಿ ಅಂದರೆ ಏಪ್ರಿಲ್

೧೫೩೪ರಲ್ಲಿ ಡಾಮ್ ಡ್ಯೂರಾಂಟ ದ ಮೆನೆಜಿಸ್ ರಾಜ ಪ್ರತಿನಿಧಿಯಾಗಿದ್ದ ಕಾಲದಲ್ಲಿ ಬಿಜಾಪುರದ ಮಹಮ್ಮದೀಯರು ಇವೇ ಭೂಖಂಡಗಳ ಮೇಲೆ ಯಶಸ್ವಿಯಾಗಿ ದಾಳಿಯಿಟ್ಟರು. ಆ ವರ್ಷದ ಅಕ್ಟೋಬರ ೩೧ರಂದು ಗೋವಾದ ಮಂಡಲಿ ಪೋರ್ತುಗಾಲದ ರಾಜನಿಗೆ ಕೆಳಗಿನ ವಾಕ್ಯವೃಂದವಿರುವ ವರದಿಯನ್ನು ಬರೆದರು :

"ಈ ನಗರದ ದಳಪತಿಯಾಗಿದ್ದ ರಾಯ್‌ದ ಮೆಲೊ ಗೆದ್ದುಕೊಂಡಿದ್ದ ಭೂಖಂಡ ವನ್ನು ಹಿಂದೆ ಹಿಡಿದಿಟ್ಟುಕೊಂಡಿದ್ದ 'ಮೂರ'ರು ಐದುನೂರು ಇಪ್ಪತ್ನಾಲ್ಕರ ಏಪ್ರಿಲ್‌ನಲ್ಲಿ ಪ್ರವೇಶಿಸಿದರು, ಅವರು ಅದನ್ನು ತಮ್ಮದೆಂದು ಸಾಧಿಸುತ್ತಾರೆ, ಅವರು ಪಡೆದುಕೊಂಡ ಪ್ರಥಮ ಠಾಣೆದಾರರ ಜಿಲ್ಲೆಯೆಂದರೆ ಸಮುದ್ರತೀರದಲ್ಲಿರುವ ಪರ್ನಾ. ಅಲ್ಲಿ ಅವರು ಠಾಣೆದಾರನೂ ಸೇರಿದಂತೆ ಇಬ್ಬರು ಪೋರ್ತುಗೀಜರನ್ನು ಸೆರೆಹಿಡಿದರು. ಇವರು ಸುಫಿಲಾರಿಮ್ ದಳವಾಯಿಯಾಗಿರುವ ಬಿಲ್ಲನ್ (ಬೆಳಗಾಂವಿ) ಕೋಟೆಯಲ್ಲಿ ಸೆರೆಯಾಳುಗಳಾಗಿದ್ದರೆ.[41]

ಆದುದರಿಂದ ಮೂರರು ಯಶಸ್ವಿಯಾದರೆಂಬುದು ಸ್ಪಷ್ಟವಿದೆ. ಆದಾಗ್ಯೂ ಈ ಸಂದರ್ಭದ ಬಗೆಗೆ ಇತರ ಚರಿತ್ರೆಕಾರರು ತೀರ ಕಡಿಮೆ ಉಲ್ಲೇಖ ಮಾಡಿರುವುದು ಕುತೂಹಲಕರ. ಫಿರಿಸ್ತಾ ಅದನ್ನು ಉಲ್ಲೇಖಿಸುವುದಿಲ್ಲ. ಆದುದರಿಂದ, ಪ್ರಸ್ತುತ ಮೂರರು ಸುಲ್ತಾನನ ಆಜ್ಞೆಯಡಿ ಕಾರ್ಯವೆಸಗಿದ ರಾಜ್ಯ ಸೈನಿಕರಾಗಿರದೆ ಆಗ ಬೆಳಗಾಂವಿಯ ಪಾಳೆಯಗಾರನಾಗಿದ್ದ ಅಸದ್‌ಖಾನನ ಸ್ಥಳೀಯ ದಳಕ್ಕೆ ಸೇರಿದವ ರಾಗಿದ್ದರೆಂದು ತರ್ಕಯುತವಾಗಿ ಊಹಿಸಬಹುದು.

ಫಿರಿಸ್ತಾನ ಪ್ರಕಾರ, ರಾಯಚೂರಿನ ಸೋಲಿನ ನಂತರ ಇಸ್ಮಾಯಿಲ್ ಆದಿಲ್‌ಶಾಹ ಅಹಮದನಗರದ ಬರಹಾನ್ ನಿಝಾಮ್ ಶಾಹನಿಗೆ ತನ್ನ ತಂಗಿಯನ್ನು ಮದುವೆ ಮಾಡಿಕೊಟ್ಟ, ಅವನೊಂದಿಗೆ ಜಗಳ ಕಾಯ್ದು ಯುದ್ಧ ಮಾಡಿದ (ಕ್ರಿ.ಶ.೧೫೨೩); ಅವನೊಂದಿಗೆ ಯುದ್ಧ ಮಾಡಿದ (೧೫೨೮); ಇನ್ನೊಬ್ಬ ತಂಗಿಯನ್ನು ಬಿರಾರಿನ ಅಲಾಉದ್ದೀನ ಉಮದ್‌ನಿಗೆ ಮದುವೆ ಮಾಡಿಕೊಟ್ಟ; ಆಗ ಮುದುಕನಾಗಿದ್ದ ಬೀದರಿನ ಸುಲ್ತಾನ ಅಮೀರ ಬರಿದನೊಡನೆ ಯುದ್ಧ ಮಾಡಿ ಅವನನ್ನು ಸಂಪೂರ್ಣವಾಗಿ ಸೋಲಿಸಿ ಸೆರೆಹಿಡಿದ, ಕೃಷ್ಣದೇವ ಮೃತಪಟ್ಟ ಮೇಲೆ ಇಸ್ಮಾಯಿಲ್ ಹಿಂದೂಗಳಲ್ಲಿ ಉಂಟಾಗಿದ್ದ ಗೊಂದಲದ ಪ್ರಯೋಜನ ಪಡೆದು ಮುದಕಲ್ ಮತ್ತು ರಾಯಚೂರುಗಳನ್ನು ಪುನಃ ವಶಪಡಿಸಿ ಕೊಂಡ.

ಮೇಲೆ ಉಲ್ಲೇಖಿಸಿದ ಎರಡು ಕೊನೆಯ ಘಟನೆಗಳಿಗೆ ಫಿರಿಸ್ತಾ ಕಾಲವನ್ನು ಸೂಚಿಸುವುದಿಲ್ಲ, ಆದರೆ, ಆದಿಲ್‌ಶಾಹನಿಗೆ ಅಮೀರ ಬರೀದ್‌ನ ಶರಣಾಗತಿ, ಮೇಲೆಯೆ ತೋರುವಂತೆ, ೧೫೨೯ರವರೆಗೆ ಸಂಭವಿಸಲಿಲ್ಲ. ಏಕೆಂದರೆ, ಅದು ೧೫೨೯

ಕ್ಕಿಂತ ಮುಂಚೆ ಜರುಗಿರಲಾರದ ಘಟನೆಯ ನಂತರ ಸಂಭವಿಸಿತೆಂದು ಬ್ಯಾರೊಸ್[42] ಸೂಚಿಸುತ್ತಾನೆ. ಅದಾವುದೆಂದರೆ, ಗೋವಾದ ಅಂದಿನ ಮಂಡಲಾಧಿಪತಿಯಾಗಿದ್ದ ನೂನೊ ದ ಕುನ್ಹಾನಿಗೆ ನೆರವು ನೀಡಲು ನಿವಾಸಿಗಳು ಕೇಳುವಂತೆ ಮಾಡಿದ ಘಟನೆಯಾದ ಮೂವರು ಹಿಂದೂ ಪಾಳೆಯಗಾರರ ಪೊಂಡಾದ ಮೇಲಿನ ಆಕ್ರಮಣ. ದ ಕುನ್ಹಾ ೧೫೩೮ರವರೆಗೆ ಮಂಡಲಾಧಿಪತಿಯಾಗಿರಲಿಲ್ಲ. "ಈ ಸಮಯಕ್ಕೆ ಮಾದ್ರೆ ಮಲುಕೊ ಮತ್ತು ಕೋಟಾ ಮಲುಕೊ ಇವರುಗಳ ಸಲಹೆಯ ಮೇರೆಗೆ ಮೆಲೀಕ್ ವೆರಿದೊ[43] ಹಿಡಲ್‌ಚ್ಯಾನ್‌ನಿಗೆ ಶರಣಾಗತನಾದ ಮತ್ತು ಮಾಸಿದ ವೇಷದಲ್ಲಿ ಅವನ ಬಿಡಾರಕ್ಕೆ ಬಂದು ಅವನ ಕಾಲ ಮೇಲೆ ಬಿದ್ದ" ಎಂದು ಚರಿತ್ರಕಾರ ಬರೆಯುತ್ತಾನೆ. ಫಿರಿಸ್ತಾನ ಕಥೆ ನಿಜವಿದ್ದರೆ[44] ಇದು ಆದಿಲ್‌ಶಾಹನಿಂದ ಬರೀದನ ಸೆರೆಹಿಡಿಯುವಿಕೆಯ ನಂತರ ಸಂಭವಿಸಿದುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

ಆ ಸಂಗತಿ ಈ ಕಾಲದ ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿರದಿದ್ದರೂ ಬಾಬರ ಚಕ್ರವರ್ತಿ ೧೫೨೬ರಲ್ಲಿ ದಿಲ್ಲಿಯನ್ನು ವಶಪಡಿಸಿಕೊಂಡ ಮತ್ತು ಶ್ರೇಷ್ಠ ಮೊಘಲ ವಂಶದ ಪ್ರಥಮ ರಾಜನೆಂದು ತನ್ನನ್ನು ಸ್ಥಾಪಿಸಿಕೊಂಡನೆಂಬುದನ್ನು ನೆನಪಿಡಬೇಕು. ೧೫೩೦ರಲ್ಲಿ ಹುಮಾಯೂನ ಅವನ ಉತ್ತರಾಧಿಕಾರಿಯಾದ ಮತ್ತು ೧೫೫೬ರಲ್ಲಿ ಹುಮಾಯೂನನ ಮರಣಾನಂತರ ಘನ ಅಕಬರ ಸಿಂಹಾಸನವನ್ನೇರಿದ.

---

1 ಮುಂದೆ ಪು. ೩೨೩ ರಿಂದ ೩೪೭

2 [illegible] ನದಿತೀರದ ಮೇಲೆ ರಾಯಚೂರಿನ ಉತ್ತರ-ಈಶಾನ್ಯಕ್ಕೆ ಒಂದು ದೊಡ್ಡ ಭದ್ರಪಡಿಸಿದ ಠಾಣ್ಯದಂತೆ ತೋರುವುದರ ಯೋಜನೆ ಇದೆ. ಅದರ ನೆಲೆ ನದಿಯ ಮೇಲಿದ್ದು ಅದರ ಪಶ್ಚಿಮ, ದಕ್ಷಿಣ, ಪೂರ್ವ ಮುಖಗಳು ಪ್ರತಿಯೊಂದು ಸರಾಸರಿ ಒಂದು ಮೈಲು ಇದೆ. ಅದು ಭೀಮಾ ಮತ್ತು ಕೃಷ್ಣಾ ನದಿಗಳ ಸಂಗಮದಲ್ಲಿ ಮತ್ತು ಕೃಷ್ಣಾ ನದಿಯ ಮೇಲಣ ಈಗಿನ ರೇಲ್ವೆ ನಿಲ್ದಾಣದ ಪಶ್ಚಿಮಕ್ಕೆ ಎರಡು ಮೈಲಿನ ಮೇಲೆ ಇದೆ. ಇದು ಏನಾಗಿದ್ದಿರಬಹುದೊ ನಾನರಿಯೆ. ಆದರೆ ಅದು ಹಿಂದೆ ಕಟ್ಟಿದ ಎಂದೂ ಕಟ್ಟಿದ ಕಂದಕ-ಠಾಣ್ಯದ ಅವಶೇಷಗಳಂತೆ ಕಾಣುತ್ತದೆ. ಯಾರಾದರೂ ಆ ಸ್ಥಳವನ್ನು ಪರೀಕ್ಷಿಸಬೇಕು.

3 ಮುಂದೆ, ಪು. ೨೬೩. "ಈ ಉತ್ಸವಗಳು ಸೆಪ್ಟಂಬರ್ ಹನ್ನೆರಡರಂದು ಆರಂಭವಾಗುತ್ತವೆ ಮತ್ತು ಒಂಬತ್ತು ದಿನ ನಡೆಯುತ್ತವೆ".

4 ಮುಂದೆ ಪು. ೨೮೧ "ಅಕ್ಟೋಬರ್ ತಿಂಗಳ ಆದಿಯಲ್ಲಿ ಅದರ ಹನ್ನೊಂದು ದಿನ ಗತಿಸಿದ ಮೇಲೆ...ಈ ದಿನದಂದು ಅವರ ವರ್ಷ ಆರಂಭಿಸುತ್ತದೆ: ಅದು ಅವರ ಹೊಸ ವರ್ಷ ದಿನ....ಅವರು ವರ್ಷವನ್ನು ಈ ತಿಂಗಳ ಅಮಾವಾಸ್ಯೆಯಂದು ಆರಂಭಿಸುತ್ತಾರೆ, ಮತ್ತು ಅವರು ತಿಂಗಳುಗಳನ್ನು ಚಂದ್ರನಿಂದ ಚಂದ್ರನವರೆಗೆ ಎಣಿಸುತ್ತಾರೆ".

5 ಮುಂದೆ, ಪು. ೨೪೩.

6 ಎತ್ತರದ ವೇದಿಕೆಯ ಮೇಲೆ ರಾಜನ ಹತ್ತಿರದಲ್ಲಿಯೆ ಕ್ರಿಸ್ಟೊವಾಒದ ಫಿಗ್ಯೆರೆಡೊ ತನ್ನೊಂದಿಗೆ ಬಂದಿದ್ದ ನಮ್ಮೆಲ್ಲರೊಂದಿಗೆ ಕುಳಿತಿದ್ದ. ಏಕೆಂದರೆ, "ಅವನು ಉತ್ಸವಗಳು ಮತ್ತು ವೈಭವ ಚನ್ನಾಗಿ ಕಾಣಿಸುವಂತಹ ಸ್ಥಳದಲ್ಲಿರಬೇಕೆಂದು ರಾಜ ಆಜ್ಞಾಪಿಸಿದ್ದ" (ಪ್ಯಾಸ್, ಪು. ೨೬೪ ಮುಂದೆ).

7 ಗ್ರಂಥ, v.c. ೫೭

8 ಠಾಣೆದಾರಿಗಳೆಂದರೆ ಪ್ರತಿಯೊಂದೂ ಒಬ್ಬ ಚಿಕ್ಕ ಅಧಿಕಾರಿಯ ಆಡಳಿತದಲ್ಲಿರುವ ರಾಜ್ಯದ ಚಿಕ್ಕ ಸ್ಥಳೀಯ ವಿಭಾಗಗಳು. ಆಧುನಿಕ ಭಾಷೆಯಲ್ಲಿ 'ಠಾಣೆ' ಎಂದರೆ ಪೊಲೀಸ್ ಕಚೇರಿ ಎಂದಾಗುತ್ತದೆ. ಅದಕ್ಕೆ ಸರಿಯಾಗಿ ತಕ್ಕುದಾದ ಇಂಗ್ಲಿಷ್ ಪದ ನನಗೆ ತೋಚದು.

9 ಲೆಂಡಸ್ ದ ಇಂಡಿಯ, ii ೫೮೧

10 ಮೆನೆಜಿಸ್ ವೈಸ್‌ರಾಯರ್‌ಗಿರಿಯನ್ನು ೨೨, ೧೫೨೨ ರಂದು ವಹಿಸಿಕೊಂಡ. ಸಿಕ್ವೈರಾನ ಜೀವಯಾತ್ರೆಯ ಸಂಕ್ಷಿಪ್ತ ಸಂಗ್ರಹವನ್ನು **Livro das Fortalezas da India** ಎಂಬ ಸ್ವಾರಸ್ಯಕರ ಹಸ್ತಪ್ರತಿಯಲ್ಲಿ ನೀಡಲಾಗಿದೆ. ಅದರ ಪಠ್ಯವನ್ನು ಅಂಟೋನಿಯೊ ಬೊಕಾರೊ ಬರೆದಿದ್ದಾನೆ, ಮತ್ತು ಅನೇಕ ಚಿತ್ರಗಳನ್ನು ಮತ್ತು ನಕ್ಷೆಗಳನ್ನು ಪೆರೊ ಬ್ಯಾರೆಟೊದ ರೆಸೆಂಡೊ ತೆಗೆದು ಬಣ್ಣ ಕೊಟ್ಟಿದ್ದಾನೆ. ಬ್ರಿಟಿಶ್ ವಸ್ತುಸಂಗ್ರಹಾಲಯದಲ್ಲಿರುವ ಪ್ರತಿ ಸ್ಲೋನ್ ಸಂಗ್ರಹದಲ್ಲಿವೆ, ಮತ್ತು '೧೯೭' ಸಂಖ್ಯೆ ಹೊತ್ತಿದೆ.

11 ಡೆಕಡಾ III. I. iv ಅಧ್ಯಾಯ ೪

12 ಅದೇ ಅಧ್ಯಾಯ ೫

13 ಅದೇ ಅಧ್ಯಾಯ ೮

14 ಅದೇ ಅಧ್ಯಾಯ ೯

15 ಅದೇ ಅಧ್ಯಾಯ ೧೦

16 ಫಾರಿಯಾ ಯಿ ಸೌಜಾಸ "ಏಶಿಯಾ ಪೋರ್ತುಗೀಜಾ", I ಭಾಗ iii, ಅಧ್ಯಾಯ ೪ (ಸ್ಟೀವನ್ಸ್‌ನ ಭಾಷಾಂತರ)

17 ನೂನಿಜ್‌ನೊಂದಿಗೆ ಹೋಲಿಸಿರಿ (ಪಠ್ಯ. ಪು. ೩೨೦)

18 ನೂನಿಜ್‌ನನ್ನು ಅನುಕರಿಸಿದ ಬ್ಯಾರೊಸ್‌ನಿಂದ ಬಹುಶಃ ಈ ಅಂಕಿಗಳನ್ನು ತೆಗೆದುಕೊಳ್ಳಲಾಗಿದೆ.

19 "ಏಶಿಯಾ ಪೋರ್ತುಗೀಜಾ", I Pt. iii. cap 4, sec 5.

30 "Histoire des Descouvertes et Conquestes des Portugais" (Paris, 1733).

21 ಪ್ಯಾನ್ಸರ್‌ನ "ದ ಪೊರ್ತುಗೀಜ್ ಇನ್ ಇಂಡಿಯಾ", i, ೩೪೭ ಸಿಕ್ವೈರಾನ ಅನುಪಸ್ಥಿತಿಗೆ ಅದೇ ದಿನಾಂಕಗಳನ್ನು ನೀಡುತ್ತದೆ ಮತ್ತು ರಾಯಚೂರಿನ ಯುದ್ಧದಲ್ಲಿ ದ ಫಿಗ್ವೆರೆಡೊನ ಉಪಸ್ಥಿತಿಯನ್ನು ಉಲ್ಲೇಖಿಸುತ್ತದೆ.

22 ತಾಳಿಹೋಗುವ ಮೇ ೧೫೨೦ರ ಪ್ರತ್ಯಕ್ಷ ಅಮಾವಾಸ್ಯೆಯ ದಿನ ಸೋಮವಾರ, ಮೇ ೬ ಆಗಿತ್ತು, ಮತ್ತು ಹೊಸ ಚಂದ್ರ ಬುಧವಾರ ಕಾಣುತ್ತಿದ್ದ. ೧೫೨೨ರಲ್ಲಿ ಪ್ರತ್ಯಕ್ಷ ಅಮಾವಾಸ್ಯೆಯ ದಿನ ರವಿವಾರ, ಮೇ ೨೫ ಆಗಿತ್ತು ಮತ್ತು ಅದು ಪ್ರಥಮತಃ ಕಾಣಿಸಿದ್ದು ಮಂಗಳವಾರದಂದು.

23 ಜರೂರು ಸಂದರ್ಭದಲ್ಲಿ ಅವನು ಎರಡು ದಶಲಕ್ಷ ಕೂಡ ಜಮಾಯಿಸಬಲ್ಲವನಾಗಿದ್ದನೆಂದು ಪ್ಯಾಸ್ ಹೇಳುತ್ತಾನೆ.

24 'ಹ್ಯಾಂಡ್‌ಬುಕ್ ಆಫ್ ಇಂಡಿಯನ್ ಆರ್ಮ್ಸ್' ಪುಟ. ೧೫-೧೬

25 ಮೇಲಿನದೆ, ಪು. ೧೨

26 ಉಲ್ಲೇಖಿತ ಕೃತಿ ಪು. ೧೮

27 ಮುಂದೆ, ಪು. ೨೯೨

28 ಮುಂದೆ, ಪು. ೩೮೪ ರಿಂದ ೩೮೯

29 ಗ್ರಂಥ ii. c. ೧೬

30 ಮಹಾ ದಂಡನಾಯಕ

31 ಮುಂದೆ ಪು. ೩೩೩

32 "Omde achaveis....ho que avieis mister".

33 "Vericis"

34 "Achareis"

35 ಮುಂದೆ, ಪು. ೩೪೬, ೩೪೭

36 ಮುಂದೆ, ಪು. ೩೫೧

37 ಸಂಪುಟ i ಪು. ೩೪೭

38 ಸಂಪುಟ i ಪು. ೫೩೩

39 ಫಿರಿಸ್ತಾ ಇದರ ಬಗೆಗೆ ಏನನ್ನೂ ಹೇಳುವದಿಲ್ಲ. ಆದರೆ ೧೫೧೮ರಲ್ಲಿ ತೀರಿಕೊಂಡ ಬಾಹಮನಿ ಸುಲ್ತಾನ ಎರಡನೆಯ ಮಹಮೂದನಿಗೆ ಅಹಮದ, ಅಲಾಉದ್ದೀನ ಮತ್ತು ವಲಿಉಲ್ಲಾಹ ಎಂಬ ಮೂವರು ಮಕ್ಕಳಿದ್ದರೆಂದೂ ಮೊದಲನೆಯವ ಡಿಸೆಂಬರ್ ೧೫೧೭ರಲ್ಲಿ ಎರಡನೆಯವ ೧೫೨೧ ಮತ್ತು ಮೂರನೆಯವನೂ ಅದೇ ವರ್ಷ ಸುಲ್ತಾನರಾದರೆಂದೂ ಮತ್ತು ಎಲ್ಲರೂ ನಾಮಮಾತ್ರ ಸುಲ್ತಾನರಾಗಿದ್ದರೆಂದೂ ನಾವು ತಿಳಿದಿದ್ದೇವೆ.

40 ಡೆಕಡಾ, III. l. iv. c. ೧೦

41 ಕೋರಿಯಾ, ಸ್ಟ್ಯಾನ್ಲಿಯ ಭಾಷಾಂತರ (ಹ್ಯಾಕ್ಲುಟ್ ಆವೃತ್ತಿ), ಪು. ೩೮೭ ಟಿಪ್ಪಣಿ, ಡ್ಯಾನ್ವರ್ಸ್, 'ಪೋರ್ಚುಗೀಜ್ ಇನ್ ಇಂಡಿಯಾ', i, ೩೬೩, "ಸುಫಿಲಾರಿಮ್" ಎಂದರೆ ಅಸದ್‌ಖಾನ.

ಎಪ್ರಿಲ್ ೧೯೦೦ರ "ಜರ್ನಲ್ ಆಫ್‌ದ ರಾಯಲ್ ಏಶಿಯಾಟಿಕ್ ಸೊಸಾಯಿಟಿ" ಯಲ್ಲಿ ಶ್ರೀ ಬೆಡನ್‌ಪಾವೆಲ್ ಪೋರ್ತುಗಾಲದ ರಾಜನ ಹೊಸದಾಗಿ ಪಡೆದುಕೊಂಡ ಪ್ರದೇಶಗಳ ಬಗೆಗೆ ನಿಯಮುಗಳು ಮತ್ತು ಆ ಪ್ರದೇಶದಲ್ಲಿನ ಗೋವಾದಲ್ಲಿ ಕ್ರಿ.ಶ. ೧೫೨೬ ಎಂದು ನಿರ್ಣೀತವಾದ ಸುಂಕಗಳ ದಾಖಲೆ ಕುರಿತು **Foral dos usos ecostumes** ಎಂಬ ಸ್ವಾರಸ್ಯಕರ ಪ್ರಬಂಧವನ್ನು ಪ್ರಕಟಿಸಿದ್ದಾನೆ.

42 ಡೆಕಡಾ **iv. l. vii. c. I**

43 ಮಲಿಕ್‌ಬರೀದ್. ಹಿಡಲ್‌ಚ್ಯಾನ್ ಎಂದರೆ ಆದಿಲ್‌ಖಾನ ಅಥವಾ ಆದಿಲ್‌ಶಾಹ; ನೂದ್ರೆ ಮಲುಕೊ ಎಂದರೆ ಇಮದ್‌ಶಾಹ, ಮತ್ತು ಕೋಟಾ ಮಲುಕೊ ಎಂದರೆ ಕುತುಬ್‌ಶಾಹ.

44 ಬಹುಶಃ ಈ ಸಂಗತಿ ಅಚ್ಯುತರಾಯನ ಆಳ್ವಿಕೆಯ ಕೆಳಗೆ ಅವಕಾಶ ಪಡೆಯಬೇಕು. ಆದರೆ ಅದು ಕೃಷ್ಣದೇವನ ಮೃತ್ಯುವಿಗಿಂತ ಮುಂಚೆ ಸಂಭವಿಸಿರಬಹುದಾದುದರಿಂದ ನಾನು ಅದನ್ನಿಲ್ಲಿ ಉಲ್ಲೇಖಿಸಿರುವೆ.

ಅಧ್ಯಾಯ ೧೨

# ಕೃಷ್ಣದೇವನ ಕಟ್ಟಡಗಳು, ನಿರ್ಮಾಣಗಳು ಮತ್ತು ಶಾಸನಗಳು

**ದೇವಾಲಯಗಳು—ನೀರಾವರಿ ಕೆಲಸಗಳು—ನರಸಿಂಹನ ಮೂರ್ತಿ—ಕಮಲಾಪುರಮ್—ಶಾಸನಗಳು**

ಶ್ರೇಷ್ಠ ನಗರವಾಗಿದ್ದ ವಿಜಯನಗರದ ಈ ಕಾಲದ ಸ್ಥಿತಿಯ ವರ್ಣನೆಯನ್ನು ಅದಕ್ಕೆ ಏನೂ ಹೆಚ್ಚು ಸೇರಿಸುವ ಅಗತ್ಯವಿಲ್ಲದಂತೆ, ಕಣ್ಣಿಗೆ ಕಟ್ಟುವಂತೆ ನೂನಿಜ್ ಮತ್ತು ಪ್ಯಾಸ್ ನಮಗೆ ನೀಡಿರದಿದ್ದರೆ ಆ ಕೊರತೆಯನ್ನು ಪೂರೈಸುವುದು ನನ್ನ ಕರ್ತವ್ಯವೆಂದು ನಾನು ಭಾವಿಸುತ್ತಿದ್ದೆ. ಆದರೆ ನಮ್ಮೆದುರು ತನ್ನೆಲ್ಲ ಮೂಲ ನವೀನತೆಯೊಂದಿಗೆ ಅದರ ವೃತ್ತಾಂತವಿರುವಾಗ ಅದಕ್ಕಿಂತ ಹೆಚ್ಚಿನದಕ್ಕಾಗಿ ಪ್ರಯತ್ನಿಸುವುದು ನಿರರ್ಥಕ. ನೂನಿಜ್‌ನ ಕಾಲಕ್ಕೆ ಅದರ ರಾಜಕೀಯ ಅವನತಿ ಆರಂಭವಾಗಿದ್ದಾಗ್ಯೂ ಇವರಿಬ್ಬರೂ ಲೇಖಕರು ಆ ನಗರದ ಅತ್ಯುನ್ನತ ವೈಭವ ಮತ್ತು ಸಮೃದ್ಧಿ ಕಾಲದಲ್ಲಿ ಅಲ್ಲಿ ಉಪಸ್ಥಿತರಿದ್ದರು. ಅವರ ವರ್ಣನೆಗಳಲ್ಲಿ ನಾನು ಹಸ್ತಕ್ಷೇಪ ಮಾಡಬಯಸಲಾರೆ.

ಆದರೂ ಸಹ ಕೃಷ್ಣದೇವ ರಾಜಧಾನಿಯಲ್ಲಿ ಮಾಡಿದ ಕೆಲವು ಕೆಲಸಗಳು ಮತ್ತು ಅವನ ಆಳ್ವಿಕೆಯ ಕೆಲವು ಕೆತ್ತಿದ ದಾಖಲೆಗಳತ್ತ ಗಮನ ಸೆಳೆಯದೆ ಅಚ್ಯುತನ ಆಳ್ವಿಕೆಗೆ ನಾನು ಹೋಗಲಾರೆ.

ವಿಜಯನಗರದ ಭಾಗ್ಯವಿಧಾತನಾಗಿದ್ದ ಮಾಧವಾಚಾರ್ಯರ ಗೌರವಾರ್ಥ ಮೊದಲು ರಾಜರು ಕಟ್ಟಿದ್ದ ಹಂಪಿ ದೇವಾಲಯದಲ್ಲಿ ಕೃಷ್ಣ ತನ್ನ ಆಳ್ವಿಕೆಯ. ಆರಂಭದಲ್ಲಿ ಒಂದು ಗೋಪುರವನ್ನು ಕಟ್ಟಿದ, ಇನ್ನೊಂದನ್ನು ದುರಸ್ತಿ ಮಾಡಿದ ಪೂರ್ವದಲ್ಲಿ ಯಶಸ್ವಿ ದಂಡೆಯಾತ್ರೆಯಿಂದ ಮರಳಿದ ನಂತರ ೧೫೧೩ರಲ್ಲಿ ಅವನು ಶ್ರೇಷ್ಠ ಕೃಷ್ಣಸ್ವಾಮಿ ದೇವಾಲಯ ಕಟ್ಟಿದ. ಅದೇ ವರ್ಷ ಅರಮನೆಯಲ್ಲಿ ಹಜಾರ ರಾಮಸ್ವಾಮಿ ದೇವಾಲಯ ಕಟ್ಟಲು ಆರಂಭಿಸಿದ. ಅದರ ವಾಸ್ತುಶಿಲ್ಪ, ಅದು ತರುವಾಯದ ಕಲಾವಧಿಯ ವರೆಗೆ ಮುಕ್ತಾಯಗೊಳ್ಳಲಿಲ್ಲ ಎಂದು ಶ್ರೀ ರಿಯಾರನ್ನು[1] ವಿಚಾರಮಾಡಹಚ್ಚಿತು.

ರಾಜ ತನ್ನ ಆಳ್ವಿಕೆಯಲ್ಲಿ ಮುಂದೆ ವಿಜಯನಗರದ ಸುತ್ತುಮುತ್ತಣ ಖುಷ್ಕಿ ಭೂಮಿಗಳ ನೀರಾವರಿ ಸುಧಾರಿಸುವಲ್ಲಿ ಮಗ್ನನಾದ. ೧೫೨೧ರಲ್ಲಿ ಕೊರಗಲ್‌ನಲ್ಲಿನ

ದೊಡ್ಡ ಆಣೆಕಟ್ಟು ಮತ್ತು ಕಾಲುವೆಯನ್ನು ಮತ್ತು ಬಸವಣ್ಣ ಕಾಲುವೆಯನ್ನು ಕಟ್ಟಿದ. ಅವೆರಡೂ ಇಂದಿಗೂ ಬಳಕೆಯಲ್ಲಿದ್ದು ಆ ಪ್ರದೇಶಕ್ಕೆ ಬಹಳ ಉಪಯುಕ್ತ ವಾಗಿವೆ.[2]

ಅವನ ಇನ್ನೊಂದು ದೊಡ್ಡ ಕೆಲಸವೆಂದರೆ ರಾಜಧಾನಿಯಲ್ಲಿ ಬೃಹತ್ ಕೆರೆ ಅಥವಾ ಅಚ್ಚುಕಟ್ಟು ಸರೋವರದ ನಿರ್ಮಾಣ. ಅದನ್ನವನು ಪೋರ್ತುಗೀಜ ಅಭಿಯಂತ ಜೊಆಒ ದ ಲಾ ಪಾಂಟೆಯ ನೆರವಿನಿಂದ ಮಾಡಿದ. ಅವನ ಸೇವೆಯನ್ನು ಗೋವಾದ ಮಹಾಮಂಡಲಾಧಿಪತಿ ಎರವಲು ನೀಡಿದ್ದ. ಪ್ಯಾಸ್ ಮತ್ತು ನ್ಯೂನಿಜ್ ಇಬ್ಬರೂ ಈ ಸರೋವರವನ್ನು ಉಲ್ಲೇಖಿಸುತ್ತಾರೆ. ಪ್ಯಾಸ್ ಅದು ನಿರ್ಮಾಣ ವಾಗುತ್ತಿರುವುದನ್ನು ಪ್ರತ್ಯಕ್ಷವಾಗಿ ಕಂಡಿದ್ದರಿಂದ ಅದನ್ನು ಕ್ರಿ.ಶ. ೧೫೨೦ರಲ್ಲಿ ಪ್ರಾರಂಭಿಸಲಾಗಿರಬಹುದು. ಹೊಸಪೇಟೆಯ ನೈರುತ್ಯಕ್ಕೆ ಸಂಡೂರ ಗುಡ್ಡಗಳನ್ನು ಪ್ರವೇಶಿಸುವ ಕೊಳ್ಳದ ವಾಯುವ್ಯ ಮುಖದಲ್ಲಿ ಕಾಣುವ, ಈಗ ಬತ್ತಿರುವ, ದೊಡ್ಡ ಸರೋವರವೇ ಇದೆಂದು ನನ್ನ ತಿಳುವಳಿಕೆ ಅದರ ವಿಶಾಲ ದಡವನ್ನು ಹೊಸಪೇಟೆ ಯಿಂದ ದಕ್ಷಿಣ ತಾಲೂಕುಗಳಿಗೆ ಹೋಗುವ ಹೆದ್ದಾರಿಯನ್ನು ಒಯ್ಯಲು ಉಪಯೋಗಿಸಿ ಕೊಳ್ಳಲಾಗಿದೆ. ಹಾಗಿದ್ದ ಪಕ್ಷದಲ್ಲಿ, ಅದರ ಮೂಲ ವೈಫಲ್ಯ ನಮಗೆ ಸ್ವಾರಸ್ಯಕರ ವಾಗಿದೆ. ಏಕೆಂದರೆ, ಕಳೆದ ಅನೇಕ ವರ್ಷಗಳಿಂದ ಈ ವಿಶಾಲ ನಿರ್ಮಾಣ ಪೂರ್ತಿ ನಿರುಪಯುಕ್ತವಾಗಿದೆ. ನೂನಿಜ್ ನೀಡಿದ ವರ್ಣನೆ ಈ ಕೆರೆ ಇರುವ ಜಾಗದೊಂದಿಗೆ ಒಡಂಬಡುತ್ತದೆ. ಈಗ ಹೊಸಪೇಟೆ ಎಂದು ಹೆಸರಿರುವ, ರಾಜನ ಪ್ರಿಯ ವಾಸ ಸ್ಥಾನವಾದ ಹೊಸ ನಗರ ನಾಗಲಾಪುರಕ್ಕೆ ನೀರು ಸರಬರಾಜು ಮತ್ತು ನೀರಾವರಿ ಹೇತುಗಳಿಗಾಗಿ ಈ ಕೆರೆಯನ್ನು ಭಾಗಶಃ ಉದ್ದೇಶಿಸಿದ್ದು ನಿಸ್ಸಂದೇಹವಾದುದು• ಚರಿತ್ರಕಾರ ಎರಡೂ ಬದಿಯಲ್ಲಿ ಎತ್ತರವಾದ ದಿಬ್ಬಗಳು ದೃಢವಾದ ಬಾಗಿಲುಗಳು ಮತ್ತು ದ್ವಾರವನ್ನು ಸಂರಕ್ಷಿಸುವ ಗೋಪುರಗಳು ಇದ್ದುದನ್ನು ಉಲ್ಲೇಖಿಸುತ್ತಾನೆ. ಮತ್ತು ಇದು ದಕ್ಷಿಣದಿಂದ ರಾಜಧಾನಿ ಪ್ರವೇಶಿಸಲು ಪ್ರಮುಖ ಮಾರ್ಗವಾಗಿತ್ತೆಂದು ಹೇಳುತ್ತಾನೆ. ಇದೆಲ್ಲ ವಿವರ ಪ್ರಸ್ತುತ ಕೆರೆಯು ಮತ್ತು ರಸ್ತೆಯು ಜಾಗದೊಂದಿಗೆ ಸರಿಹೊಂದುತ್ತದೆ. ಪೋರ್ತುಗೀಜ ಪ್ರವಾಸಿಗಳು ವಿಜಯನಗರವನ್ನು ಪ್ರವೇಶಿಸಿದ್ದು ಈ ದ್ವಾರಗಳ ಮೂಲಕವೇ. ಈ ಅಭಿಪ್ರಾಯವನ್ನು ಪ್ಯಾಸ್ ನೀಡಿದ ವೃತ್ತಾಂತ ಸಮರ್ಥಿಸುತ್ತದೆ. ಪಶ್ಚಿಮ ಕರಾವಳಿಯಿಂದ ವಿಜಯನಗರಕ್ಕೆ ಮಾರ್ಗದ ಬಗೆಗೆ ಬರೆಯುತ್ತ ಮತ್ತು ಪ್ರಥಮ ಶ್ರೇಣಿ ಅರ್ಥಾತ್ ಬಯಲಿನಿಂದ ಮೇಲೆ ಸಾಗುವಾಗ ಮೊದಲು ಕಾಣುವ ಶ್ರೇಣಿಯನ್ನು ವರ್ಣಿಸುತ್ತ ಈ ಗುಡ್ಡಗಳಲ್ಲಿ ಆ ಬದಿಯಿಂದ ಮುಖ್ಯ ಪ್ರವೇಶ ಮಾರ್ಗವಿತ್ತೆಂದು ಹೇಳುತ್ತಾನೆ. ರಾಜಾ ಕೃಷ್ಣ ಕಟ್ಟಿದ ದ್ವಾರ ಮತ್ತು ಗೋಡೆ ಮತ್ತು ನಾಗಲಾಪುರ ನಗರಗಳನ್ನು ಅವನು ಉಲ್ಲೇಖಿಸುತ್ತಾನೆ. ಆಮೇಲೆ ಅವನು "ರಾಜ ಅಲ್ಲಿ ಕೆರೆ ಕಟ್ಟಿದ", ಅಂದರೆ ಎರಡೂ ಗುಡ್ಡಗಳ ಬಾಯಿಯಲ್ಲಿ

ಹೊಸಪೇಟೆಗೆ ಸಮೀಪ, ಮತ್ತು ಈ ಉದ್ದೇಶಕ್ಕಾಗಿ "ಗುಡ್ಡವನ್ನು ಒಡೆದ" ಎಂದು ಬರೆಯುತ್ತಾನೆ. ಕೆರೆಕಟ್ಟಲು ಅಸಂಖ್ಯ ಜನರಿದ್ದುದನ್ನು ಅವನು ಕಂಡ. ಅಣೆಕಟ್ಟಿನ ಸುರಕ್ಷಿತವನ್ನು ಕಾಯ್ದುಕೊಳ್ಳಲು ಅರುವತ್ತು ಮನುಷ್ಯರನ್ನು ಬಲಿಕೊಟ್ಟ ಕತೆಯನ್ನು ನೂನಿಜ್ ದೃಢೀಕರಿಸುತ್ತಾನೆ. ಆದುದರಿಂದ ಇಬ್ಬರೂ ಲೇಖಕರು ಅದೇ ಕೆರೆಯನ್ನು ವರ್ಣಿಸುತ್ತಿದ್ದಾರೆ ಮತ್ತು ಎರಡೂ ವೃತ್ತಾಂತಗಳನ್ನು ಒಟ್ಟಿಗೆ ನೋಡಲಾಗಿ ನನ್ನ ಗುರುತಿಸುವಿಕೆಯ ಸಮಂಜಸತೆಯ ಬಗೆಗೆ ನನಗೆ ಯಾವುದೇ ಸಂದೇಹವಿಲ್ಲ.

ಇದೀಗ ಉಲ್ಲೇಖಿಸಿದ, ದೂರದಲ್ಲಿರುವ ನಾಗಲಾಪುರ ನಗರವನ್ನು ಕೃಷ್ಣದೇವ ರಾಯ ೧೫೨೦ಕ್ಕಿಂತ ಮುಂಚೆ ಕಟ್ಟಿದ. ಹಿಂದೆ ವೇಶ್ಯಾಂಗನೆಯಾಗಿದ್ದ ತನ್ನ ಪ್ರೀತಿಯ ಪತ್ನಿ ನಾಗಲಾದೇವಿಯ ಗೌರವಾರ್ಥ ಅದನ್ನು ಕಟ್ಟಲಾಯಿತು ಮತ್ತು ರಾಜನು ಅದನ್ನು ತನ್ನ ಪ್ರೀತಿಯ ವಾಸಸ್ಥಳವನ್ನಾಗಿ ಮಾಡಿಕೊಂಡ.

ರಾಜ್ಯದ ಎಲ್ಲ ಧಾರ್ಮಿಕ ಕಟ್ಟಡಗಳಲ್ಲಿಯೇ ಅತ್ಯಂತ ಅಲಂಕಾರಮಯವಾದ, ನದಿತೀರದ ಮೇಲಿರುವ ವಿಠ್ಠಲಸ್ವಾಮಿ ದೇವಾಲಯದ ನಿರ್ಮಾಣವನ್ನು ಅವನು ಆರಂಭಿಸಿದ್ದನೆಂದು ತೋರುತ್ತದೆ. ಈಗಾಗಲೆ ಉಲ್ಲೇಖಿಸಿರುವ ಲೇಖನದಲ್ಲಿ ಶ್ರೀ ರಿಯಾ "ಅದು ಆ ಶೈಲಿ ಮುಂದುವರಿಸಿಕೊಂಡು ಬಂದ ಅತ್ಯಲಂಕಾರದ ಭವ್ಯತೆಯ ಕಟ್ಟಕಡೆಯ ಮೇರೆಯನ್ನು ಪ್ರದರ್ಶಿಸುತ್ತದೆ" ಎಂದು ಬರೆಯುತ್ತಾರೆ. ಕೃಷ್ಣದೇವನ ಉತ್ತರಾಧಿಕಾರಿಗಳಾದ ಅಚ್ಯುತ ಮತ್ತು ಸದಾಶಿವರ ಆಳ್ವಿಕೆಯಲ್ಲೂ ನಿರ್ಮಾಣ ಕಾರ್ಯ ಮುಂದುವರಿಯಿತು, ಮತ್ತು ಬಹುಶಃ ೧೫೬೫ರಲ್ಲಿ ನಗರ ನಾಶವಾದಾಗಲೇ ನಿಂತಿತು. ಶಾಸನವೊಂದು ದೇವಾಲಯಕ್ಕೆ ೧೫೬೧ರಲ್ಲಿ ನೀಡಿದ ದತ್ತಿಯನ್ನು ದಾಖಲಿಸುತ್ತದೆ.

ನಗರದಲ್ಲಿ ಕಾಣುವ ಅತ್ಯಂತ ಕುತೂಹಲಕಾರಕ ಮತ್ತು ಸ್ವಾರಸ್ಯಕರವಾದ ಸ್ಮಾರಕಗಳಲ್ಲೊಂದನ್ನು ೧೫೨೮ರಲ್ಲಿ ಕಟ್ಟಲಾಯಿತು. ಇದಾವುದೆಂದರೆ ನರಸಿಂಹನ ಅವತಾರದ ವಿಷ್ಣು ದೇವತೆಯ ಬೃಹದಾಕಾರದ ಮೂರ್ತಿ. ಕೃಷ್ಣಸ್ವಾಮಿ ದೇವಾಲಯದ ನೈರುತ್ಯ ಕೋನದಲ್ಲಿ ಬಿದ್ದಿದ್ದ ಬೆಣಚುಕಲ್ಲಿನ ಒಂದೇ ಬಂಡೆಯಲ್ಲಿ ಅದನ್ನು ಕಡೆಯಲಾಯಿತು. ಮತ್ತು ಆದರ ಸಂರಕ್ಷಣೆಗಾಗಿ ರಾಜನು ಭೂದತ್ತಿ ನೀಡಿದ. ೧೫೬೫ ಅಥವಾ ತರುವಾಯದಲ್ಲಿ ಬಹುಶಃ ಮೂರ್ತಿಭಂಜಕರಾದ ಮಹಮ್ಮದೀಯರಿಂದ ಘೋರವಾಗಿ ಒಡೆಯಲ್ಪಟ್ಟಿದ್ದರೂ ಅದು ಇನ್ನೂ ಅತ್ಯಂತ ಗಮನ ಸೆಳೆದು ನಿಲ್ಲಿಸುವ ವಸ್ತುವಾಗಿದೆ.

ತನ್ನ ಪಟ್ಟಾಭಿಷೇಕೋತ್ಸವ ಸಂದರ್ಭದಲ್ಲಿ ಹಂಪೆಯಲ್ಲಿನ ಶ್ರೇಷ್ಠ ವಿರೂಪಾಕ್ಷ ದೇವಾಲಯಕ್ಕೆ ಕೃಷ್ಣದೇವ ನೀಡಿದ ದತ್ತಿಗಳನ್ನು ನಾನು ಈಗಾಗಲೇ ಉಲ್ಲೇಖಿಸಿರುವೆ. ವಿರಿಂಚಿಪುರಮ್‌ದಲ್ಲಿನ ದೇವಾಲಯದ ಮುಂಭಾಗದ ಗೋಪುರದ ಒಳಬದಿಯ ಪೀಠದ

ಮೇಲೆ ಕ್ರಿ.ಶ. ೧೫೧೩-೧೪ರ ಕಾಲ ಸೂಚಿಸುವ ಅವನ ಆಳ್ವಿಕೆಯ ಶಾಸನವೊಂದಿದೆ; ಮಂಗಳವಾರ, ಸೆಪ್ಟೆಂಬರ ೨೦, ೧೫೧೩ರ ಕಾಲ ಸೂಚಿಸುವ, ಅರಮನೆ ಆವರಣ ದಲ್ಲಿರುವ ಗಣಪತಿ ದೇವಾಲಯಕ್ಕೆ ಆ ಗ್ರಾಮದ ಭೂಮಿಗಳ ದತ್ತಿಯನ್ನು ದಾಖಲಿಸುವ ಇನ್ನೊಂದು ಶಾಸನ ರಾಜಧಾನಿಯ ಹತ್ತಿರದಲ್ಲಿ ಸಂಕಲಾಪುರದಲ್ಲಿದೆ.[3] ಶ್ರೀ ಫ್ಲೀಟ್[4] ಕ್ರಿ.ಶ. ೧೫೦೯-೧೦, ೧೫೧೨-೧೩, ೧೫೧೪-೧೫, ೧೫೨೨-೨೩, ಮತ್ತು ೧೫೨೭-೨೮ರ ಅವನ ಆಳ್ವಿಕೆಯ ಇತರ ಶಾಸನಗಳನ್ನು ಹೆಸರಿಸುತ್ತಾನೆ.

ಈಗ ಗೊತ್ತಿರುವಂತೆ ಅವನ ಆಳ್ವಿಕೆಯ ಕೊನೆಯ ಶಾಸನವೆಂದರೆ ಶುಕ್ರವಾರ, ಏಪ್ರಿಲ್ ೨೬, ಕ್ರಿ.ಶ. ೧೫೨೯[5]ನೆಯ ತಾರೀಖಿಗೆ ಸರಿಹೊಂದುವ ತಾರೀಖು ಹೊಂದಿರು ವಂತಹದು. ಅದು ಮೇಲೆ ವರ್ಣಿಸಿದ ಉಗ್ರ ನರಸಿಂಹನ ಬೃಹತ್ ಮೂರ್ತಿಯ ಮುಂದೆ ಇದೆ.

---

1 ಡಿಸೆಂಬರ, ೧೮೮೬ರ "ಮದ್ರಾಸ್ ಕ್ರಿಶ್ಚಿಯನ್ ಕಾಲೇಜ್ ಮ್ಯಾಗಜಿನ್"ನಲ್ಲಿನ 'ವಿಜಯನಗರ' ಲೇಖನ.

2 "ಬೆಳ್ಳಾರಿ ಡಿಸ್ಟ್ರಿಕ್ಟ್ ಮ್ಯಾನುಅಲ್" (ಕೆಲ್ಸಾಲ್), ಪು. ೨೩೧.

3 "ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್" (ಹುಲ್ಟಜ್) ಪು. ೧೩೨ ; ಮತ್ತು ಅದೇ ಲೇಖಕನ "ಎಪಿಗ್ರಾಫಿಯಾ ಇಂಡಿಕಾ", iv, ೨೬೬

4 ಜರ್ನಲ್ ಬಾಂಬೆ ಬ್ರಾಂಚ್, ರಾಯಲ್ ಏಶಿಯಾಟಿಕ್ ಸೊಸಾಯಿಟಿ, xii, ೩೩೬ ಇತ್ಯಾದಿ

5 ಎಪಿಗ್ರಾಫಿಯಾ ಇಂಡಿಕಾ, i, ೩೯೮ : iv, ಪು. ೩, ಟಿಪ್ಪಣಿ ೪.

ಅಧ್ಯಾಯ ೧೩

# ಅಚ್ಯುತರಾಯನ ಆಳ್ವಿಕೆ

**ಅಚ್ಯುತರಾಯ–ರಾಯಚೂರು ಮತ್ತು ಮುದಕಲ್ ಪತನ–ಅಸದ ಖಾನ್ ಮತ್ತು ಗೋವಾ–ಬಿಜಾಪುರದ ದೊಂಬಿಗಳು–ಹಿಂದೂ ರಾಜಧಾನಿಯಲ್ಲಿ ಇಬ್ರಾಹಿಮ್ ಶಾಹ – ವಿಜಯನಗರ ವ್ಯವಹಾರಗಳನ್ನು ಕುರಿತು ಫಿರಿಸ್ತಾ–ರಾಮರಾಯ ಮತ್ತು ಅವನ ಸಹೋದರರ ಏಳ್ಗೆ–'ಹೋಜೆ' ತಿರುಮಲ–ಭಿನ್ನ ಭಿನ್ನ ಕತೆಗಳು-ಅದೋನಿ ಹತ್ತಿರ ಅಸದ ಖಾನನಿಂದ ವೆಂಕಟಾದ್ರಿಯ ಸೋಲು–ಅಸದ ಖಾನನ ಪುರೋವೃದ್ಧಿ–ಬೆಳಗಾಂವಿ ಮತ್ತು ಗೋವಾ–ಅಸದನ ಇಬ್ಬಗೆಯ ವಹಿವಾಟು–ಪೋರ್ತುಗೀಜ ಆಕ್ರಮಣ-ಅಚ್ಯುತನಿಂದ ಧಾರ್ಮಿಕ ದತ್ತಿ ಮತ್ತು ಅವನಿಗೆ ಸಂಬಂಧಿಸಿದ ಶಾಸನಗಳು.**

ನೂನಿಜ್ ಮತ್ತು ಇತರ ಆಧಾರಗಳನ್ವಯ ಅಚ್ಯುತ ದಿವಂಗತ ರಾಜನ ಸಹೋದರನಾಗಿದ್ದ[1], ಮತ್ತು ರಾಜ್ಯದಲ್ಲಿ ಕಚ್ಚಾಟ ನಿವಾರಿಸಲು ಇನ್ನಿಬ್ಬರು ಸಹೋದರರು ಹಾಗೂ ಸೋದರಳಿಯನೊಂದಿಗೆ ಚಂದ್ರಗಿರಿ ಕೋಟೆಯಲ್ಲಿ ಕೃಷ್ಣದೇವನಿಂದ ಬಂಧನದಲ್ಲಿಡಲ್ಪಟ್ಟಿದ್ದರು. ಹೊಸ ರಾಜನನ್ನು ಕೃಷ್ಣದೇವ ವಿಶೇಷವಾಗಿ ಆಯ್ಕೆ ಮಾಡಿದ್ದನೆಂದು ನೂನಿಜ್ ಹೇಳುತ್ತಾನೆ. ಹಾಗಿದ್ದರೆ, ಆಯ್ಕೆ ಅತ್ಯಂತ ದುರದೃಷ್ಟಕರವಾಗಿತ್ತು. ಏಕೆಂದರೆ ಅಚ್ಯುತ ಹೇಡಿಯಾಗಿದ್ದ ಮತ್ತು ಅವನ ಆಳ್ವಿಕೆಯಲ್ಲಿ ಹಿಂದೂ ಸಾಮ್ರಾಜ್ಯ ನುಚ್ಚುನೂರಾಗ ತೊಡಗಿತು.

ರಾಜಾ ಕೃಷ್ಣನ ಮಂತ್ರಿಯಾಗಿದ್ದ ತಿಮ್ಮನ ಸಾಳುವ ಕುಟುಂಬದ ಬಲಶಾಲಿಯೊಬ್ಬ ಅವನ ಮಂತ್ರಿಯಾಗಿದ್ದ. ನೂನಿಜ್ ಅವನನ್ನು 'ಸಾಲ್ವನೆ' ಎಂದು ಕರೆಯುತ್ತಾನೆ. ಅಚ್ಯುತನ ಆಳ್ವಿಕೆಯ ಗೊತ್ತಿರುವ ಅತ್ಯಂತ ಹಳೆಯ ದಿನಾಂಕವನ್ನು ಸೋಮವಾರ ಅಗಸ್ಟ ೧೫ ಕ್ರಿ.ಶ. ೧೫೩೦[2] ರೊಂದಿಗೆ ಸರಿ ಹೊಂದುವ ದಿನಾಂಕ ಹೊಂದಿದ ಶಾಸನದಿಂದ ಪಡೆಯಲಾಗಿದೆ.

ಮುದಕಲ್ ಮತ್ತು ರಾಯಚೂರುಗಳ ಗಡಿನಾಡ ಕೋಟೆಗಳ ನಷ್ಟದ ಅನಿಷ್ಟಕಾರಕ ವೈಶಿಷ್ಟ್ಯ ಅವನ ಆಳ್ವಿಕೆಗೆ ನಾಂದಿ ಹಾಡಿತು. ಕೃಷ್ಣದೇವನ ಮರಣಕ್ಕಿಂತ ತುಸು ಮುಂಚೆಯೆ ಆದಿಲ್ ಶಾಹ ಈ ನಗರಗಳ ಪುನರ್ ಸ್ವಾಧೀನಕ್ಕಾಗಿ ಸಿದ್ಧತೆ ಮಾಡಿಕೊಂಡಿದ್ದನೆಂದು ಹೇಳುತ್ತ ಫಿರಿಸ್ತಾ[3] ಹೀಗೆ ಮುಂದುವರಿಯುತ್ತಾನೆ :

"ಸುಲ್ತಾನ....ತಮ್ಮ ಸೈನ್ಯಗಳೊಂದಿಗೆ ಸಂಗಡವಿದ್ದ ಉಮದ್ ಶಾ ಮತ್ತು ಅಮೀರ್ ಬರೀದ್‌ರೊಂದಿಗಿನ ತನ್ನ ಸೈನ್ಯವನ್ನು ಹೊರಡಿಸಿದ; ಹೀಮರಾಜೆಯ ಮರಣದಿಂದಾಗಿ ವಿಜಯನಗರದ ವ್ಯವಹಾರಗಳು ಗೊಂದಲಮಯವಾಗಿದ್ದವು. ಅವನ ನಂತರ ಹೊಸದಾಗಿ ಅಧಿಕಾರಕ್ಕೆ ಬಂದಿದ್ದ ರಾಮರಾಜೆ[4]ಯ ವಿರುದ್ಧ ಹಲವಾರು ರಾಯರು ದಂಗೆಯೆದ್ದಿದ್ದ ಕಾರಣ ಸುಲ್ತಾನನ ಸೈನ್ಯಕ್ಕೆ ಯಾವುದೆ ತಡೆಯುಂಟಾಗಲಿಲ್ಲ. ಹದಿನೇಳು ವರ್ಷ ಕಾಫಿರರ ವಶದಲ್ಲಿದ್ದ ರಾಯಚೋರ್ ಮತ್ತು ಮುದಕಲ್‌ಗಳನ್ನು ಮೂರು ತಿಂಗಳ ಮುತ್ತಿಗೆಯ ನಂತರ ಕರಾರುನಾಮೆಯ ಮೇರೆಗೆ ವಶಪಡಿಸಿಕೊಳ್ಳಲಾಯಿತು.[5]"

ಈ ಯಶಸ್ಸುಗಳಿಂದ ಮತ್ತು ತನ್ನ ಬದ್ಧವೈರಿ ಕೃಷ್ಣನ ಮರಣದಿಂದ ಸುಲ್ತಾನನಿಗೆ ಬಲು ನೆಮ್ಮದಿ ಮತ್ತು ಸಂತೋಷವಾಯಿತು. "ಇವೆರಡು ಕೋಟೆಗಳನ್ನು ನೆಲೆಗೊಳಿಸುವವರೆಗೆ ಮದ್ಯ ಮುಟ್ಟುವದಿಲ್ಲೆಂದು ಪ್ರತಿಜ್ಞೆ ಮಾಡಿದ್ದ ಸುಲ್ತಾನನು ಈಗ ತನ್ನ ಸರದಾರರ ವಿನಂತಿಯ ಮೇರೆಗೆ ಒಂದು ಮಹಾ ಸಂತೋಷ ಗೋಷ್ಠಿ ಏರ್ಪಡಿಸಿದ ಮತ್ತು ಅದರಲ್ಲಿ ತಾನೂ ಮದ್ಯ ಸೇವಿಸಿದುದಲ್ಲದೆ ಅಡೆತಡೆಯಿಲ್ಲದ ವಿನೋದೋಲ್ಲಾಸಗಳಲ್ಲಿ ಮುಳುಗಿದ" ಎಂದು ಫಿರಿಸ್ತಾ ವರ್ಣಿಸುತ್ತಾನೆ. ರಾಯಚೂರು ಮತ್ತು ಮುದಕಲ್ಲು ಮುಂದೆಂದೂ ಹಿಂದೂ ರಾಜರ ಅಧೀನಕ್ಕೊಳಪಡಲಿಲ್ಲ.

ವಿಜಯನಗರದ ನೂತನ ರಾಜನ ಸ್ವಭಾವದ ಒಳನೋಟ ಪಡೆಯಲಿಚ್ಛಿಸುವವರು ನೂನಿಜ್‌ನ ವೃತ್ತಾಂತ ನೋಡಬೇಕು. ಅವನು ತನ್ನ ಹಿಂಸಾತ್ಮಕ ನಿರಂಕುಶ ಪ್ರಭುತ್ವದಿಂದ ತನ್ನ ನೆಚ್ಚಿನ ಗೆಳೆಯರನ್ನು ದೂರಮಾಡಿಕೊಂಡನಾದರೂ ಇಡಿ ಸಾಮ್ರಾಜ್ಯಕ್ಕೆ ತಾನೊಬ್ಬ ಅಂಜುಗುಳಿ ಎಂಬುದನ್ನು ಸಿದ್ಧಪಡಿಸಿ ತೋರಿಸಿದ ಎಂದು ಇಲ್ಲಿ ಹೇಳಿದರೆ ಸಾಕು ಅವನ ವರ್ತನೆ ಮತ್ತು ಆಡಳಿತದ ವೈಖರಿ ದಕ್ಷಿಣ ಭಾರತದಲ್ಲಿ ಹಿಂದೂ ಧ್ಯೇಯವನ್ನು ಹಾಳು ಮಾಡಿದವು, ಮತ್ತು ತಾನು ಅಂತ್ಯವನ್ನು ಕಾಣಲು ಬದುಕುಳಿಯದಿದ್ದರೂ ಇಡಿ ದೇಶವನ್ನು ಆಕ್ರಮಣಕಾರನಿಗೆ ತೆರೆದಿಟ್ಟ.

ರಾಯಚೂರು ಮತ್ತು ದೋಆಬ್‌ಗಳ ಪತನಾನಂತರ ತನ್ನ ಅಹಮದನಗರದ ವೈರಿಯೊಂದಿಗೆ ಇನ್ನೊಂದು ಯುದ್ಧ (೧೫೩೧) ಮಾಡಿ ಅವನನ್ನು ಸೋಲಿಸಿದ. ಅದಾದ ತರುವಾಯ ಇಬ್ಬರೂ ಮೈದುನರು ಒಂದು ಬಲಿಷ್ಠ ಮೈತ್ರಿಯನ್ನು ಗಟ್ಟಿಗೊಳಿಸಿಕೊಂಡರು. ಮೂರು ವರ್ಷಗಳ ಬಳಿಕ ಗೋಲ್ಕೊಂಡದ ಕುತುಬ್ ಶಾಹನಿಗೆ ಸೇರಿದ ಕೋಟೆಯೊಂದಕ್ಕೆ ಮುತ್ತಿಗೆ ಹಾಕಿದಾಗ ಜ್ವರ ತಗುಲಿ ಇಸ್ಮಾಯಿಲ್ ಸತ್ತ. ಅವನ ಮರಣ ಗುರುವಾರ ಆಗಸ್ಟ ೧೩, ೧೫೩೪[6] ರಂದು ಸಂಭವಿಸಿತು. ಮತ್ತು ಅವನ ಮಗ ಮಾಲು ಅವನ ಉತ್ತರಾಧಿಕಾರಿಯಾದ. ಅಸದ್ ಖಾನನನ್ನು ಬಿಜಾಪುರದ

ರಾಜ ಪ್ರತಿನಿಧಿಯಾಗಿ ನೇಮಿಸಲಾಯಿತು ಮತ್ತು ತಾನು ಅಧಿಕಾರಕ್ಕೆ ಬಂದ ಕ್ಷಿಪ್ರದಲ್ಲಿಯೆ ಹೊಸ ಪ್ರಭು ತನ್ನ ಬಲಶಾಲಿ ಪ್ರಜೆಯನ್ನು ಎಷ್ಟು ರೇಗಿಸಿದನೆಂದರೆ ಅವನು ಬೆಳಗಾಂವಿಗೆ ಹಿಂದಿರುಗಿದ. ಎಲ್ಲ ಅತಿರೇಕಗಳಿಗೆ ಬಲಿಯಾದ ಸುಲ್ತಾನ ಮಾಲೂ ಕೇವಲ ಆರು ತಿಂಗಳ ಆಳ್ವಿಕೆಯ ನಂತರ ಪದಚ್ಯುತನಾದ. ಅವನ ಅಜ್ಜಿಯ ಆಜ್ಞೆಯನುಸಾರ ಮಾಲೂನ ಕಣ್ಣು ಕೀಳಲಾಯಿತು ಮತ್ತು ಅವನ ತಮ್ಮ ಇಬ್ರಾಹಿಮ್ ಆದಿಲ್‌ನನ್ನು ಪಟ್ಟಕ್ಕೆ ಏರಿಸಲಾಯಿತು. ಅದು ೧೫೩೫.

ಗೋವೆಯ ಪೋರ್ತುಗೀಜ ಮಂಡಲಾಧಿಪತಿ ದ ಕುನ್ಹಾ ಈ ಘಟನೆಗಳ ಪ್ರಯೋಜನ ಪಡೆದು ದೀವ್‌ನಲ್ಲಿ ಒಂದು ಕೋಟೆ ಕಟ್ಟಿಸಿದ ಮತ್ತು ೧೫೩೬ರ ಆದಿಯಲ್ಲಿ ಹತ್ತು ವರ್ಷ ಅಸದ್‌ಖಾನನ ವಶದಲ್ಲಿದ್ದ ಗೋವಾದ ಭೂಖಂಡಗಳನ್ನು ಪುನಃ ಹಿಡಿದುಕೊಂಡ. ಖಾನನು ಈ ಭೂಮಿಗಳನ್ನು ಮರಳಿ ವಶಪಡಿಸಿಕೊಳ್ಳಲು ಸೈನ್ಯ ಕಳಿಸಿದ. ಫೆಬ್ರವರಿಯಲ್ಲಿ ಯುದ್ಧವಾಗಿ ಪೋರ್ತುಗೀಜರು ಜಯಶಾಲಿಗಳಾದರು. ಮುಸಲ್ಮಾನರ ಎರಡನೆಯ ಆಕ್ರಮಣವನ್ನೂ ಅದೇ ರೀತಿ ಹಿಮ್ಮೆಟ್ಟಿಸಲಾಯಿತು. ಜುಲೈನಲ್ಲಿ ಮೂರನೆಯ ಯುದ್ಧವಾಗಿ ಮಹಮ್ಮದೀಯರನ್ನು ಪುನಃ ಸೋಲಿಸಲಾಯಿತು ; ಆದರೆ ಅಸದ್‌ಖಾನ ಆ ಮೇಲೆ ದೊಡ್ಡ ಸೈನ್ಯವನ್ನು ಸೇರಿಸಿದ ಮತ್ತು ವಿದೇಶಿಯರು ತಮ್ಮ ಕೋಟೆಯನ್ನು ಸಿಡಿಸಿದ ಬಳಿಕ ಹಿಂದೆ ಸರಿಯಬೇಕಾಯಿತು.

ಈ ಸುಮಾರಿಗೆ[7] ಖುಲಿ ಕುತುಬ್ ಶಾಹ ಅದು ಕಪ್ಪ ಕೊಡುವದನ್ನು ತಡೆಹಿಡಿದದ್ದರಿಂದ ಕೊಂಡವೀಡಿನ ಮೇಲೆ ದಾಳಿಯಿಟ್ಟು ಅದನ್ನು ವಶಪಡಿಸಿಕೊಂಡು ಅದನ್ನು ಅಡಗಿಸಿದ ಸ್ಮರಣಾರ್ಥ ಕೋಟೆಯ ಮಧ್ಯದಲ್ಲಿ ಒಂದು ಗೋಪುರ ಕಟ್ಟಿಸಿದನೆಂದು ಹೇಳಲಾಗುತ್ತದೆ.

ಆ ಸಮಯಕ್ಕೆ ರಾಜಾ ಅಚ್ಯುತ ತಿನ್ನೆವೆಲಿ ಸಮೀಪದ ಪ್ರದೇಶವನ್ನು ಅಡಗಿಸಿದನೆಂದು ಅನುಕ್ರಮವಾಗಿ ೧೫೩೨ ಮತ್ತು ೧೫೩೩[8]ರ ವೆಂದು ಕಾಲ ನಿರ್ದೇಶಿತವಾದ ಕಾಂಜೀವರಮ್‌ನ ಎರಡು ಶಾಸನಗಳು ಸೂಚಿಸುತ್ತದೆ. ಆದರೆ, ಮೇಲೆಯೆ ತೋರುವಂತೆ, ಅವನು ಪ್ರತ್ಯಕ್ಷವಾಗಿ ಉಪಸ್ಥಿತನಿರಲಿಲ್ಲ, ಮತ್ತು ಅದಕ್ಕಿಂತ ಹೆಚ್ಚು ಈ ದಂಡಯಾತ್ರೆಯ ಬಗೆಗೆ ತಿಳಿದುಬಂದಿಲ್ಲ.

ವಿವಿಧ ಲೇಖಕರ ಕೃತಿಗಳಲ್ಲಿನ ಆಧಾರದಿಂದ ತಾಕಲಾಟದಿಂದಾಗಿ ತೃಪ್ತಿಕರವಾಗಿ ನಿರೂಪಿಸಲು ಬಲು ಕಠಿಣವಾದ ಕಾಲ ಖಂಡವನ್ನು ನಾವೀಗ ಪ್ರವೇಶಿಸುತ್ತೇವೆ.

"ಅಚ್ಯುತನ ಸಿಂಹಾಸನಾರೋಹಣದ ಒಂದು ವರ್ಷದ ಬಳಿಕ ಅವನ ವಿನಂತಿಯ ಮೇರೆಗೆ ಇಬ್ರಾಹಿಮ್ ಆದಿಲ್ ತನ್ನ ಸೈನ್ಯವನ್ನು ಬೀಜನಗರಕೆ ನಡೆಸಿಕೊಂಡೊಯ್ದ" ಎಂದು ಫಿರಿಸ್ತಾ[9] ಬರೆಯುತ್ತಾನೆ. ಇದು ಕ್ರಿ.ಶ. ೧೫೩೬ ಆಗುತ್ತದೆ. ಆದರೆ ವ್ಯವಹಾರಗಳು ಇಷ್ಟು ಅಸಾಮಾನ್ಯವಾಗಿ ಜಟಿಲವಾಗಲು ಏನು ಕಾರಣ ? ತನ್ನ ದೇಶದ ಪರಂಪರಾಗತ ಶತ್ರುವನ್ನು ನೆರವಿಗೆ ಕರೆಯುವುದು

ಅನಿವಾರ್ಯವಾಗುವಷ್ಟು ಅಚ್ಯುತನ ಸೊಕ್ಕಡಗಿ ಅವನು ಸಂದಿಗ್ಧದಲ್ಲಿದ್ದುದು ನಿಜವಾಗಿರಬಹುದೆ ?

ನೂನಿಜ್ ಘಟನೆಯನ್ನು ಒಪ್ಪುತ್ತಾನಾದರೂ ಅದರ ಕಾರಣದ ಬಗೆಗೆ ಮೌನ ತಾಳಿದ್ದಾನೆ. ಫಿರಿಸ್ತಾನ ಅಭಿಪ್ರಾಯ ಸರಿಯಿರುವುದು, ನಿರಂಕುಶ ರಾಜರು ಪ್ರಜೆಗಳನ್ನು ವಿಶ್ವಾಸದಲ್ಲಿ ತೆಗೆದುಕೊಳ್ಳದಿದ್ದುದು, ಮತ್ತು ರಾಜಾ ಅಚ್ಯುತನ ವಿನಂತಿಯ ಮೇರೆಗೆ ಬಿಜಾಪುರದ ಸೈನ್ಯ ಹಿಂದೂ ರಾಜಧಾನಿಗೆ ಸಾಗಿದುದು ತೀರ ಸಾಧ್ಯವಿದೆ. ಅವರು ಪ್ರತ್ಯಕ್ಷವಾಗಿ ಅಲ್ಲಿಗೆ ಬಂದರೆಂಬುದು ತೀರ ಖಚಿತವೆಂದು ತೋರುತ್ತದೆ ಮತ್ತು ನೂನಿಜ್ ಆ ವೇಳೆಯಲ್ಲಿ ವಿಜಯನಗರದಲ್ಲಿದ್ದುದು ಸಂಭವನೀಯವಾಗಿದೆ. ಆದರೆ ಅವನ ಕತೆಯಲ್ಲಿ ಒಂದು ಲೋಪವಿದ್ದು ಫಿರಿಸ್ತಾಗೆ ಗಮನ ಕೊಡದೆ ಅದನ್ನು ತುಂಬಲಿಕ್ಕಿಲ್ಲ. ಫಿರಿಸ್ತಾನನ್ನು ಒಪ್ಪಿಕೊಂಡು ಅವನು ಹಾಗೆ ಮಾಡಿದನೆಂದು ನೂನಿಜ್ ಪ್ರಕಟಿಸುವಂತೆ ರಾಜಾ ಅಚ್ಯುತ ಬಾಹ್ಯ ವಿರೋಧವಿಲ್ಲದೆ ಸುಲ್ತಾನ ಮತ್ತು ಅವನ ಸೈನ್ಯವನ್ನು ಏಕೆ ಬರಮಾಡಿಕೊಂಡ ಮತ್ತು ಮುಹಮ್ಮದೀಯ ರಾಜ ಹಿಂತಿರುಗುವ ಮುನ್ನ ಅದ್ಭುತ ಕಾಣಿಕೆಗಳನ್ನು ಪಡೆದ ಎಂಬುದನ್ನು ನಾವು ಸುಲಭವಾಗಿ ಗ್ರಹಿಸಬಹುದು. ಆದರೆ, ಅಚ್ಯುತನ ಹೇಡಿತನ ಮತ್ತು ಅತ್ಯಂತ ಅಯೋಗ್ಯತನದ ಆಧಾರ ಬಿಟ್ಟರೆ ಅವನ ನಡತೆ ವಿವರಿಸಲಾರದ್ದಾಗಿ ನೂನಿಜ್‌ನಿಗೆ ಕಂಡಿತು.[10] ಸುಲ್ತಾನನು ನಾಗಲಾಪುರ ಅಥವಾ ಹೊಸಪೇಟೆಯನ್ನು ಪ್ರವೇಶಿಸಿ "ಅದನ್ನು ನೆಲಸಮ ಮಾಡಿದನು" ಎಂಬ ನೂನಿಜ್‌ನ ಪ್ರತಿಪಾದನೆ ಕುರಿತು ವಿಚಾರಿಸುವಾಗ ಬಿಜಾಪುರ ನಗರದೊಂದಿಗೆ ಕೃಷ್ಣದೇವರಾಯನ ನಡವಳಿಕೆಯನ್ನು[11] ನೆನಪಿಸಿಕೊಳ್ಳಬಹುದು ಮತ್ತು ಮುಸಲ್ಮಾನ ಯೋಧರು ಉರುವಲು ಶೋಧನೆಯಲ್ಲಿ ವಿಜಯನಗರದ ಹೊರವಲಯಗಳಲ್ಲಿನ ಮನೆಗಳನ್ನು ಕೆಡವಿರಬಹುದೆಂದು ಊಹಿಸಬೇಕಾಗುತ್ತದೆ. ಇದು ಹೇಗೊ ಇರಲಿ, ನನ್ನ ಓದುಗರ ಮುಂದೆ ತನ್ನ ಚರಿತ್ರೆಯ ೨೦ನೆಯ ಅಧ್ಯಾಯದಲ್ಲಿ ನೂನಿಜ್ ಕೊಟ್ಟ ಕತೆ ಇದೆ, ಮತ್ತು ಆ ಘಟನೆ ಕುರಿತ ಫಿರಿಸ್ತಾನ ವೃತ್ತಾಂತ ಕೆಳಗಿದೆ :[12]

'ಹೀಮ' ರಾಜ, ಅಥವಾ ಬ್ರಿಗ್ಸ್ ಆ ಹೆಸರನ್ನು ನಿರೂಪಿಸುವಂತೆ 'ತಿಮ್' ರಾಜ—'ತಿಮ್ಮ'ನಿಗೆ ಸಂವಾದಿಯಾಗಿರುವ ಮತ್ತು ನಿಸ್ಸಂದೇಹವಾಗಿ ಕೃಷ್ಣದೇವರಾಯನ ಘನ ಮಂತ್ರಿ ಸಾಳುವ ತಿಮ್ಮನನ್ನು ಸೂಚಿಸುವ—ನಲವತ್ತು ವರ್ಷಗಳ ಹಿಂದೆ ಮೊದಲಿನ ರಾಜ 'ಸೇಓ' ರಾಯನ ಎರಡೂ ಮಕ್ಕಳ ಮರಣಾನಂತರ ವಸ್ತುತಃ ವಿಜಯನಗರದ ಪ್ರಭುವಾಗಿದ್ದ. ಈ ಮಕ್ಕಳಲ್ಲಿ ಚಿಕ್ಕವನ ಗಂಡುಕೂಸಿಗೆ ಅವನು ವಿಷ ಉಣಿಸಿ ರಾಜ್ಯದ ಮುಖ್ಯಸ್ಥನಾಗುವಲ್ಲಿ ಯಶಸ್ವಿಯಾಗಿದ್ದ. ಅವನ ಮರಣಾನಂತರ ಅವನ ಮಗ ರಾಮರಾಜ ದೊರೆಯಾದ. "ಸೇಓ ರಾಯನ ಮಗನ ಮಗಳೊಂದಿಗೆ"[13] ರಾಮನ ವಿವಾಹ, ಘನತೆ ಮತ್ತು ಬಲವನ್ನು ಬಹಳ ಹೆಚ್ಚಿಸಿದ್ದವು,

ಮತ್ತು ಈಗ ಅವನು ತನಗಾಗಿ ಮತ್ತು ಕುಟುಂಬದವರಿಗಾಗಿ ಸಿಂಹಾಸನವನ್ನು ಪಡೆಯಲೆತ್ನಿಸಿದ. ಆದರೆ, "ಸ್ತ್ರೀ ಪೀಳಿಗೆಯ ಕೂಸನ್ನು" ರಾಜನೆಂದು ಮನ್ನಿಸಲು ಮನ್ನೆಯರು ಅವನ ಮೇಲೆ ಒತ್ತಾಯ ಹೇರಿದರು. ಸಂಪೂರ್ಣ ಹುಚ್ಚನಾಗಿರದಿದ್ದರೂ ದುರ್ಬಲ ಬುದ್ಧಿಯ, ಕೂಸಿನ ಕಕ್ಕನಾದ, 'ಹೋಜೆ' ತಿರುಮಲ ರಾಯನಿಗೆ[14] ಕೂಸಿನ ಯೋಗಕ್ಷೇಮವನ್ನು ಒಪ್ಪಿಸಿದ. ಐದಾರು ವರ್ಷಗಳಲ್ಲಿ ರಾಮ ತನ್ನನ್ನು ವಿರೋಧಿಸಿದ್ದ ಬಹುತೇಕ ದೊರೆಗಳನ್ನು ವಿಶ್ವಾಸಘಾತುಕತನದಿಂದ ಕತ್ತರಿಸಿಹಾಕಿದ.[15] ಅದಾದ ಮೇಲೆ ಮಲಬಾರದೊಳಗೆ ದಂಡಯಾತ್ರೆ ಕೈಗೊಂಡ ಮತ್ತು ನಂತರ ವಿಜಯನಗರದ ದಕ್ಷಿಣಕ್ಕಿದ್ದ ಬಲಿಷ್ಠ ಜಮೀನುದಾರನ ಮೇಲೆ ಏರಿ ಹೋದ. ಅವನು ಆರು ತಿಂಗಳವರೆಗೆ ಪಟ್ಟಾಗಿ ಹಿಡಿದುಕೊಂಡು ಕೊನೆಗೆ ರಾಮ ರಾಯನ ಸೈನ್ಯವನ್ನು ಹೊಡೆದೋಡಿಸಿದ. ರಾಮರಾಯ ಉನ್ನತ ಪದವಿಗೇರಿಸಿದ್ದ ಗುಲಾಮನೊಬ್ಬನು ಆಗ ವಿಜಯನಗರವನ್ನು ಆಳುತ್ತಿದ್ದ. ರಾಜಧಾನಿಯಿಂದ ಅಗತ್ಯ ವಸ್ತುಗಳ ಪೂರೈಕೆಗಾಗಿ ಮಂತ್ರಿಯಿಂದ ಯಾಚಿಸಲ್ಪಟ್ಟ ಈತನು ರಾಜಬೊಕ್ಕಸದಲ್ಲಿನ ಸಂಪತ್ತನ್ನು ಕಂಡು ಎಷ್ಟೊಂದು ಆಶ್ಚರ್ಯಚಕಿತನಾದನೆಂದರೆ ಅದನ್ನು ಪಡೆಯಲು ಪ್ರಯತ್ನಿಸಲು ನಿರ್ಧರಿಸಿದ. ಆದುದರಿಂದ, ಅವನು ಬಾಲರಾಜನನ್ನು ಬಿಡುಗಡೆ ಮಾಡಿ, ಹೋಜೆ ತಿರುಮಲನ ಸಹಕಾರ ಪಡೆದು ಮಂತ್ರಿ ಹುದ್ದೆಯನ್ನು ವಹಿಸಿಕೊಂಡು ಸೈನ್ಯ ಕಟ್ಟಲು ಪ್ರಾರಂಭಿಸಿದ. "ರಾಮರಾಜನಿಂದ ಬೇಸರಗೊಂಡಿದ್ದ ಹಲವಾರು ಸಾಮಂತರಾಯರು ತಮ್ಮ ನ್ಯಾಯಸಮ್ಮತವಾದ ರಾಜನ ಆಜ್ಞೆ ಪಾಲಿಸಲು ಬೀಜನಗರಕ್ಕೆ ಧಾವಿಸಿದರು ; ಮತ್ತು ಅಲ್ಪಸಮಯದಲ್ಲಿಯೆ ನಗರದಲ್ಲಿ ಅವನ ಪತಾಕೆಯಡಿ ಮೂವತ್ತು ಸಾವಿರ ಅಶ್ವಾಳು ಮತ್ತು ಅಪಾರ ಕಾಲಾಳುಗಳನ್ನು ಕೂಡಿಸಲಾಯಿತು". ಗುಲಾಮ–ಮಂಡಲಾಧಿಪತಿಯನ್ನು ತಿರುಮಲ ಕೊಲೆ ಮಾಡಿಸಿದ. ರಾಮರಾಜ ಕೂಡಲೆ ರಾಜಧಾನಿಗೆ ಹಿಂತಿರುಗಿದ. ಆದರೆ ಆ ಸಮಯದಲ್ಲಿ ತನ್ನ ಅಧಿಕಾರ ಪ್ರತಿಷ್ಠಾಪಿಸಲು ಅಸಮರ್ಥನಾದ. ತನ್ನ ಅನೇಕ ಸರದಾರರು ತನ್ನನ್ನು ಕೈಬಿಟ್ಟಿದ್ದನ್ನು ಕಂಡು ತನ್ನ ನ್ಯಾಯಸಮ್ಮತ ರಾಜನೊಂದಿಗೆ ಒಪ್ಪಂದ ಮಾಡಿಕೊಂಡು ತನ್ನ ಪ್ರಾಂತಕ್ಕೆ ಹಿಂತಿರುಗಿದ. ಒಪ್ಪಂದದಂತೆ ಅದನ್ನವನು ತನ್ನದೇ ಸ್ವತಂತ್ರ ರಾಜ್ಯವನ್ನಾಗಿ ಇಟ್ಟುಕೊಳ್ಳಲು ಅವಕಾಶ ನೀಡಲಾಗಿತ್ತು. ಅದಾದ ಅಲ್ಪ ಕಾಲದಲ್ಲಿಯೆ ತಿರುಮಲ, ರಾಜನ ಕತ್ತು ಹಿಸುಕಿ ಕೊಂದು ಸಿಂಹಾಸನವನ್ನು ಹಿಡಿದುಕೊಂಡ. ಅವನು ರಾಜರಕ್ತದವನು ಮತ್ತು ಅವರ ಅಭಿಪ್ರಾಯದಲ್ಲಿ ರಾಮರಾಜನಿಗಿಂತ ಉತ್ತಮನಾದುದರಿಂದ ಸರದಾರರು ಅವನಿಗೆ ವಿಧೇಯತೆ ತೋರಿದರು ; ಆದರೆ ನಂತರ ಅವನ ಕ್ರೂರತನ ಮತ್ತು ದಬ್ಬಾಳಿಕೆ ಸಹಿಸಲಾರದಷ್ಟಾದಾಗ ಅವರು ಸಿಡಿದೆದ್ದು ರಾಮರಾಜನನ್ನು ವಾಪಸಾಗಲು ಆಹ್ವಾನಿಸಿದರು.

ಆಗ ಭಾರಿ ಇಕ್ಕಟ್ಟಿನಲ್ಲಿ ಸಿಲುಕಿಕೊಂಡ ತಿರುಮಲ ದೊಡ್ಡ ಕಾಣಿಕೆಗಳೊಂದಿಗೆ ಇಬ್ರಾಹಿಮ್ ಆದಿಲ್‌ಶಾಹನಲ್ಲಿಗೆ ರಾಯಭಾರಿಗಳನ್ನು ಕಳಿಸಿ ಅವನು ತನ್ನ ಸಹಾಯಕ್ಕೆ

ಬರಬೇಕೆಂದೂ ವಿಜಯನಗರ ರಾಜ್ಯವನ್ನು ಬಿಜಾಪುರದ ಅಧೀನ ರಾಜ್ಯವೆಂದು ಘೋಷಿಸಲಾಗುವದೆಂದೂ ಮಾತು ಕೊಡುವದಾಗಿಯೂ ಬೇಡಿಕೊಂಡ. ಮೇರೆಯಿಲ್ಲದ ಸಂತಸಗೊಂಡ ಇಬ್ರಾಹಿಮನು ಅಸದ್‌ಖಾನನೊಂದಿಗೆ ಸಮಾಲೋಚಿಸಿ ಕರಾರುಗಳನ್ನು ಒಪ್ಪಿಕೊಂಡು ಜುಲೈ ೨, ಕ್ರಿ.ಶ. ೧೫೩೫ ರಿಂದ ಜೂನ್ ೨೦, ೧೫೩೬[16]ರ ಕಾಲಾವಧಿಯೊಂದಿಗೆ ಸರಿಹೊಂದುವ "೯೪೨ ನೆಯ ವರ್ಷದಲ್ಲಿ" ತನ್ನ ರಾಜಧಾನಿಯಿಂದ ಸಾಗಿ ವಿಜಯನಗರದ ಮುಂದೆ ಆಗಮಿಸಿದ. "ಅವನನ್ನು ನಗರದಲ್ಲಿ ಕರೆದೊಯ್ದು ಹೋಜೆ ತಿರುಮಲರಾಯ ರಾಜನ ಮಸನದ್ ಮೇಲೆ ಅವನನ್ನು ಕುಳ್ಳಿರಿಸಿ ಏಳು ದಿನ ಸಂತೋಷ ಸಂಭ್ರಮಗಳನ್ನು ಆಚರಿಸಿದ". ಈ ನಡವಳಿಕೆ ರಾಮರಾಜ ಮತ್ತು ಅವನ ಬೆಂಬಲಿಗರನ್ನು ಹೊಸ ದಾರಿ ಹಿಡಿಯಹಚ್ಚಿತು. ದೇಶದ ಸಲುವಾಗಿ ಸುಲ್ತಾನನನ್ನು ತನ್ನ ರಾಜ್ಯಕ್ಕೆ ಮರಳಿ ಕಳಿಸುವಂತೆ ಅವರು ತಿರುಮಲನನ್ನು ಬೇಡಿಕೊಂಡರು ಮತ್ತು ಹಾಗೆ ಮಾಡಿದಲ್ಲಿ ತಾವು ಅಧೀನರೂ ವಿಧೇಯರೂ ಆಗುವದಾಗಿಯೂ ವಚನವಿತ್ತರು. ತನಗೀಗ ಮಿತ್ರರ ಅಗತ್ಯವಿಲ್ಲೆಂದು ಬಗೆದು ತಿರುಮಲ ಮರಳಿ ಹೋಗುವಂತೆ ಸುಲ್ತಾನನ್ನು ಅರಿಕೆ ಮಾಡಿಕೊಂಡ. ಅವನು ಎರಡು ದಶಲಕ್ಷ ಪೌಂಡು ಎಂದು ಅಂದಾಜು ಮಾಡಲಾದ, ಒಪ್ಪಲಾಗಿದ್ದ ಸೈನಿಕ ಸಹಾಯ ದ್ರವ್ಯವನ್ನು ಇನ್ನೂ ಅನೇಕ ಕಾಣಿಕೆಗಳನ್ನೂ ನೀಡಿದ. ಆ ಕತೆ ದುರಂತದಲ್ಲಿ ಮುಕ್ತಾಯಗೊಳ್ಳುತ್ತದೆ.

"ಇಬ್ರಾಹಿಮ್ ಆದಿಲ್ ಶಾಹ ಇನ್ನೂ ಕಿಸ್ಟ್ನಾ ದಾಟಿರಲಿಲ್ಲ. ನಗರದಲ್ಲಿನ ಅನೇಕ ಸೈನಿಕರಿಗೆ ಲಂಚ ಕೊಟ್ಟಿದ್ದ ರಾಮರಾಜ ಮತ್ತು ಒಕ್ಕೂಟದವರು ಹೊಸದಾಗಿ ಮಾಡಿದ ತಮ್ಮ ಪ್ರತಿಜ್ಞೆಗಳನ್ನು ಮುರಿದು, ಬೀಜನಗರಕ್ಕೆ ಧಾವಿಸಿ ತನ್ನ ಪೂರ್ವಾಧಿಕಾರಿಯನ್ನು ಕೊಲೆಗೈದುದಕ್ಕಾಗಿ ರಾಯನನ್ನು ಕೊಲ್ಲಲು ನಿರ್ಧರಿಸಿದರು ; ತನಗೆ ವಿಶ್ವಾಸಘಾತುಕತನ ಮಾಡಿದುದನ್ನು ಕಂಡುಕೊಂಡ ಹೋಜೆ ತಿರುಮಲರಾಯ ತನ್ನ ಅರಮನೆಯನ್ನು ಭದ್ರವಾಗಿ ಮುಚ್ಚಿಕೊಂಡು ನಿರಾಶೆಯಿಂದ ಹುಚ್ಚನಾಗಿ ಅವು ವೈರಿಗಳಿಗೆ ಉಪಯೋಗವಾಗದಿರಲೆಂದು ರಾಜನ ಎಲ್ಲ ಆನೆ ಕುದುರೆಗಳ ಕಣ್ಣು ಕಳೆದನಲ್ಲದೆ ಅವುಗಳ ಬಾಲ. ಕತ್ತರಿಸಿದ ಅನೇಕ ತಲೆಮಾರುಗಳಲ್ಲಿ ಸಂಗ್ರಹಿಸಲಾಗಿದ್ದ ವಜ್ರ, ಮಾಣಿಕ್ಯ, ಪಚ್ಚೆ, ಇತರ ಅಮೂಲ್ಯ ಹರಳು ಮತ್ತು ಮುತ್ತುಗಳನ್ನು ಬೀಸುವ ಕಲ್ಲುಗಳ ಮಧ್ಯೆ ಇಟ್ಟು ಪುಡಿ ಪುಡಿ ಮಾಡಿ ನೆಲದ ಮೇಲೆ ಹರಡಿದ. ಆ ಮೇಲೆ ತನ್ನ ನಿವಾಸದ ಕಂಬವೊಂದಕ್ಕೆ ಕತ್ತಿಯ ಅಲಗನ್ನು ಕಟ್ಟಿ ವೇಗದಿಂದ ಓಡಿಬಂದು ಅದರ ಮೇಲೆ ಎರಗಿದ ಪರಿಣಾಮವಾಗಿ ಅದು ಅವನ ದೇಹದೊಳಗೆ ಹಾಯ್ದು ಬೆನ್ನಿನ ಹೊರಗೆ ಬಂತು. ತನ್ನ ವೈರಿಗಳಿಗೆ ಅರಮನೆಯ ದ್ವಾರಗಳನ್ನು ತೆರೆಯಲಾಗುತ್ತಿದ್ದಂತೆಯೆ ಅವನು ಅಸುನೀಗಿದ. ರಾಮರಾಜ ಈಗ ಪ್ರತಿಸ್ಪರ್ಧಿಯಿಲ್ಲದೆ ಬೀಜನಗರದ ರಾಯನಾದ".

ಫಿರಿಸ್ತಾನ ವೃತ್ತಾಂತದ ಈ ಭಾಗದ ನಂತರ ಎರಡನೆಯ ರಾಜವಂಶದ 'ಯುವ ರಾಯರು' ಅಥವಾ ಬಂಧಿತ ರಾಜರ ಬಗೆಗೆ ಕೇಳಿಬರುವದಿಲ್ಲ. 'ರಾಮರಾಜ' ಒಬ್ಬನನ್ನೇ ರಾಜನೆಂದು ಪ್ರಸ್ತಾಪಿಸಲಾಗಿದೆ, ಮತ್ತು ಅಚ್ಯುತ ಮತ್ತು ಸದಾಶಿವ ರಾಜರನ್ನು—ಬಂಧನದಲ್ಲಿಡಲಾಗಿದ್ದರೂ ಎರಡನೆಯವನು ಕೆಲವು ವರ್ಷಗಳವರೆಗೆ ನಿಸ್ಸಂದೇಹವಾಗಿ ರಾಜನೆಂದು ಒಪ್ಪಿಕೊಳ್ಳಲಾಗಿತ್ತು—ಹೆಸರಿಸಲಾಗಿಲ್ಲ ಕೂಡ.

ಹೀಗೆ, ಇಬ್ರಾಹಿಮ್ ಆದಿಲ್ ವಿಜಯನಗರ ಪಟ್ಟಣದವರೆಗೆ ಸಾಗಿಬಂದ ಮತ್ತು ಅಪಾರ ಧನ ಮತ್ತು ಅಸಂಖ್ಯ ಬೆಲೆಬಾಳುವ ಕಾಣಿಕೆಗಳನ್ನು ಪಡೆದ ನಂತರ ಹಿಂತಿರುಗಿದನೆಂದು ಫಿರಿಸ್ತಾ ಮತ್ತು ನೂನಿಜ್ ಇಬ್ಬರೂ ಒಪ್ಪುತ್ತಾರೆ. ಅದು ಕ್ರಿ.ಶ. ೧೫೩೫-೩೬ರ ಕಾಲವಾಗಿತ್ತು. ಈ ದಿನಾಂಕದೊಂದಿಗೆ—ನೂನಿಜ್‌ನ ದಿನಚರಿಯ ಐತಿಹಾಸಿಕ ಭಾಗ ಮುಕ್ತಾಯಗೊಳ್ಳುತ್ತದೆ.[17]

ಫಿರಿಸ್ತಾಸಿಂದ[18] ಸಂಗ್ರಹಿಸಿದಂತೆ ಅಚ್ಯುತನ ಆಳ್ವಿಕೆಯ ಕಥಾನಕವನ್ನು ಮುಂದುವರಿಸೋಣ. ಹೋಜೆ ತಿರುಮಲನ ಮರಣ ಮತ್ತು 'ರಾಮರಾಜ'ನಿಂದ ಸಿಂಹಾಸನ ಗ್ರಹಣದ ಸುದ್ದಿ ತಿಳಿದ ಇಬ್ರಾಹಿಮ್ ಆದಿಲ್ ಶಾಹ ನಿಸ್ಸಂದೇಹ ವಾಗಿಯೂ ವಿಜಯನಗರ ಪ್ರದೇಶದಲ್ಲಿದ್ದ ಮಹತ್ವದ ಅದೋನಿ ಕೋಟೆಯನ್ನು ವಶಪಡಿಸಿಕೊಳ್ಳಲು ಅಸದ್‌ಖಾನನನ್ನು ಕಳಿಸಿದ. ಅದರ ನೆರವಿಗೆ ರಾಮರಾಜ ತನ್ನ ತಮ್ಮ ವೆಂಕಟಾದ್ರಿಯನ್ನು ಕಳಿಸಿದ ಮತ್ತು ಅವನು ದೊಡ್ಡ ಸೈನ್ಯದೊಂದಿಗೆ ಅಲ್ಲಿಗೆ ಧಾವಿಸಿದ.

"ಅವನು ಆಗಮಿಸಿದಾಗ ಅಸದ್‌ಖಾನ ಮುತ್ತಿಗೆಯನ್ನು ತೆಗೆದು ಅವನತ್ತ ಸಾಗಿದ. ಘೋರ ಕದನವಾಯಿತು. ವೈರಿಗಳ ಸಂಖ್ಯಾಶ್ರೇಷ್ಠತೆಯಿಂದಾಗಿ ತನ್ನ ಮೇಲೆ ದುಷ್ಪರಿಣಾಮವಾಗುವದನ್ನು ಅರಿತ ಅಸದ್‌ಖಾನ ಸುಸ್ಥಿತಿಯಲ್ಲಿ ಹಿಂತಿರುಗಿದ, ಆದರೆ ಅವನು ರಾಣೆ ಹೂಡಿದಾಗ ವಿಜೇತರು ಅವನನ್ನು ಹದಿನಾಲ್ಕು ಮೈಲು ಬೆನ್ನಟ್ಟಿದ್ದರು : ಮತ್ತು ಮರುದಿನದ ಹಿಮ್ಮೆಟ್ಟುವಿಕೆಗೆ ಉಪದ್ರವ ಕೊಡುವಂತೆ ಸಿದ್ಧವಾಗಿರಲು ವೆಂಕಟಾದ್ರಿ[19] ಸಂಪೂರ್ಣ ಸುರಕ್ಷತೆಯಲ್ಲಿ ಅವನಿಂದ ಎರಡು ಮೈಲು ಅಂತರದಲ್ಲಿ ನಿಂತ. ಇಂಥ ಘಟನೆಯನ್ನೆ ತೀವ್ರವಾಗಿ ಬಯಸಿದ್ದ ಅಸದ್‌ಖಾನ ಬೆಳಕು ಹರಿಯುತ್ತಿರುವಾಗ ನಾಲ್ಕು ಸಾವಿರ ಆಯ್ದ ಅಶ್ವಾಳುಗಳೊಂದಿಗೆ ವೆಂಕಟಾದ್ರಿಯ ಠಾಣ್ಯದ ಮೇಲೆ ಅನಿರೀಕ್ಷಿತವಾಗಿ ಏರಿಹೋದ. ಇಂಥ ಜಾಣ ಉಪಾಯವನ್ನು ನಿರೀಕ್ಷಿಸದೆ ಇದ್ದ ಅವನ ಆತ್ಮವಿಶ್ವಾಸ ಅವನನ್ನು ಸಂಪೂರ್ಣವಾಗಿ ವ್ಯಾಮರೆಸಿತ್ತು. ಅವನಿಗೆ ಎಚ್ಚರಿಕೆಯ ಸುದ್ದಿ ಮುಟ್ಟುವ ಮೊದಲೆ ಅಸದ್‌ಖಾನ ಅವನ ಡೇರೆಗಳಿಗೆ ನುಗ್ಗಿದ, ಮತ್ತು ವಿಜೇತರ ಕರುಣೆಗೆ ತನ್ನ ಸಂಪತ್ತು, ಕುಟುಂಬ, ಮತ್ತು ಆನೆಗಳನ್ನು ಬಿಟ್ಟು ಓಡಿಹೋಗಲು ಮಾತ್ರ ಅವನಿಗೆ (ವೆಂಕಟಾದ್ರಿಗೆ) ಸಮಯವಿತ್ತು.

ಪೂರ್ಣ ಬೆಳಗಾದಾಗ ವೆಂಕಟಾದ್ರಿ ತನ್ನ ಚೆಲ್ಲಾಪಿಲ್ಲಿಯಾಗಿದ್ದ ಸೈನ್ಯ ಒಟ್ಟುಗೂಡಿಸಿ ಯುದ್ಧ ಹೂಡಲೆಂಬಂತೆ ವ್ಯೂಹ ರಚಿಸಿದ ; ಆದರೆ ಅಸದ್ ಖಾನ ತನಗೆ ದೊರೆತ ಪ್ರಯೋಜನವನ್ನು ಮುಂದುವರಿಸಲು ದೃಢವಾಗಿ ಬಯಸಿದುದನ್ನು ಕಂಡು ಮತ್ತು ತನ್ನ ಹೆಂಡತಿ ಮಕ್ಕಳ ವೈಯಕ್ತಿಕ ಸುರಕ್ಷಿತತೆಯ ಬಗೆಗೆ ಭೀತನಾಗಿ ಅವನು ಯುದ್ಧ ಮಾಡುವ ಸಾಹಸ ಕೈಗೊಳ್ಳಲಿಲ್ಲ ಮತ್ತು ಕೆಲವು ಮೈಲು ಹಿಂದೆ ಸಂದು ಠಾಣ್ಯ ಹೂಡಿದ ; ಅಲ್ಲಿಂದ ರಾಮರಾಜನಿಗೆ ತನಗಾದ ವಿಪತ್ತಿನ ವೃತ್ತಾಂತ ಕಳಿಸಿ ಅದನ್ನು ಸುಧಾರಿಸಿಕೊಳ್ಳಲು ಹೆಚ್ಚಿಗಿನ ಸೈನ್ಯ ಕಳಿಸುವಂತೆ ಕೇಳಿಕೊಂಡ, ರಾಮರಾಜ ಕೂಡಲೆ ಯೋಧರು ಮತ್ತು ಧನವನ್ನು ಪೂರೈಸಿ ಯುದ್ಧ ಮಾಡುವ ತನ್ನ ಉದ್ದೇಶವನ್ನು ಬಹಿರಂಗವಾಗಿ ಘೋಷಿಸಿದ, ಆದರೆ ಇಬ್ರಾಹಿಮ್ ಆದಿಲ್ ಶಾಹ ಊಡ್ನೀಯ ಮೇಲೆ ಧಾಳಿಯಿಡಲು ತನ್ನ ಇಷ್ಟದಿಂದ ಮಾತ್ರವೇ ಪ್ರೇರಿತವಾಗಿರಲಿಲ್ಲವೆಂದೂ ಆ ಪ್ರದೇಶದ ಜಮೀನುದಾರರು ಅವನನ್ನು ಯುದ್ಧ ಮಾಡಲು ಆಹ್ವಾನಿಸಿದ್ದರೆಂದೂ ಮತ್ತು ಬಹುತೇಕ ಸರದಾರರು ಗುಪ್ತವಾಗಿ ಅವನ ಹಿತೈಷಿಗಳಾಗಿದ್ದರೆಂದೂ ಆದುದರಿಂದ ಅವನು ಮುಸಲ್ಮಾನರೊಂದಿಗೆ ಸಧ್ಯ ಶಾಂತಿ ಮಾಡಿಕೊಂಡು ಅಸದ್ ಖಾನನಿಂದ ತನ್ನ ಹೆಂಡತಿ ಮತ್ತು ಕುಟುಂಬದ ಬಿಡುಗಡೆ ಪಡೆಯುವಂತೆ ಜಾಣತನದಿಂದ ನಡೆದುಕೊಳ್ಳುವನೆಂದು ತಾನು ಭಾವಿಸಿರುವುದಾಗಿಯೂ ಖಾಸಗಿ ಯಾಗಿ ತನ್ನ ತಮ್ಮನಿಗೆ ತಿಳಿಸಿದ. ತನ್ನ ಅಣ್ಣನ ಇಷ್ಟದಂತೆ ಅಸದ್ ಖಾನನ ಮಧ್ಯಸ್ಥಿಕೆ ಮತ್ತು ಪ್ರಭಾವ ಪಡೆದುಕೊಂಡು ವೆಂಕಟಾದ್ರಿ ಶಾಂತಿಗಾಗಿ ಸುಲ್ತಾನನಿಗೆ ಮೊರೆಯಿಟ್ಟ. ಅದನ್ನು ನೀಡಲಾದ ಮತ್ತು ಎಲ್ಲ ವ್ಯವಹಾರಗಳನ್ನು ಎರಡೂ ರಾಜ್ಯಗಳಿಗೆ ತೃಪ್ತಿಯಾಗುವಂತೆ ಬಗೆಹರಿಸಿದ ಮೇಲೆ ಇಬ್ರಾಹಿಮ್ ಆದಿಲ್ ಶಾಹ ಅಸದ್ ಖಾನ ಮತ್ತು ತನ್ನ ಇತರ ಸರದಾರರು ಮತ್ತು ಸೈನ್ಯದೊಂದಿಗೆ ಬೀಜಪೂರಕ್ಕೆ ಹಿಂತಿರುಗಿದ."

ಇದಾದ ನಂತರ, ತನ್ನ ವಿರುದ್ಧ ಅವನು ಸಂಚುಗಳನ್ನು ಚೋದಿಸಿದ್ದರೂ ಕೂಡ ಸುಲ್ತಾನನು ಅಸದ್ ಖಾನನನ್ನು ಬಹುವಾಗಿ ಗೌರವಿಸಿದ. ಆದಾಗ್ಯೂ ಬಿಜಾಪುರ ಪ್ರಾಂತ್ಯಗಳಲ್ಲಿ ೧೫೪೨ನೆಯ ವರ್ಷದುದ್ದಕ್ಕೂ ಜಗಳ ದೊಂಬಿಗಳು ಸಂಭವಿಸಿದವು ; ಅದೇ ವರ್ಷ ರಾಜಾ ಅಚ್ಯುತ ಸತ್ತ ಮತ್ತು ಸದಾಶಿವ ನಾಮ ಮಾತ್ರಕ್ಕೆ ಅವನ ಉತ್ತರಾಧಿಕಾರಿಯಾದ. ಅವನ ಆಳ್ವಿಕೆಯಲ್ಲಿ ವಿಜಯನಗರ ವಸ್ತುತಃ ರಾಮ ರಾಜಾ ಮತ್ತು ಅವನಿಬ್ಬರು ಸಹೋದರರಾದ ತಿರುಮಲ ಮತ್ತು ವೆಂಕಟಾದ್ರಿ ಕೈಯಲ್ಲಿತ್ತು.

ಫಿರಿಸ್ತಾ ಅಸದ್ ಖಾನನ ಅಭಿಮಾನಿ ಮತ್ತು ಅವನು ಮಾಡಿದುದನ್ನೆಲ್ಲವನ್ನು ಸಮರ್ಥಿಸುತ್ತಾನೆ.[20] ತುರ್ಕನಾಗಿದ್ದ ಅಸದ್, ಇಬ್ರಾಹಿಮ್ ಆದಿಲ್ ಶಾಹನ

ಸೇವೆಯಲ್ಲಿ ಖುಸ್ರೂ ಎಂಬ ಸಾದಾ ಹೆಸರಿನಲ್ಲಿ ತೊಡಗಿ, ಸುಲ್ತಾನನ ಕಕ್ಕೆ ದಿಲ್‌ಶಾದ ಆಘಾತ ಶೂರ ನಡತೆಯಿಂದಾಗಿ ಪ್ರಖ್ಯಾತವಾದ ಸಂರಕ್ಷಣೆಯಾಗಿದ್ದ ೧೫೧೧ರ ಬಿಜಾಪುರದ ಆಕ್ರಮಣದ ಕಾಲಕ್ಕೆ ತನ್ನ ಪ್ರಭುವಿನ ಸಂರಕ್ಷಣೆಯ ಹೆಸರು ಪಡೆದ. ಇಸ್ಮಾಯಿಲ್ 'ಅಸದ್ ಖಾನ' ಎಂಬ ಬಿರುದನ್ನಿತ್ತು ಖುಸ್ರೂನನ್ನು ಗೌರವಿಸಿದ. ಆ ಹೆಸರನ್ನು ಅವನು ತನ್ನ ಜೀವಮಾನದುದ್ದಕ್ಕೂ ತಾಳಿದುದಲ್ಲದೆ ಬೆಳಗಾಂವಿಯ ಜಹಗೀರನ್ನೂ ಪಡೆದ. ಅವನು ತನ್ನ ಪ್ರಭುವಿನ ಪ್ರಧಾನ ಮಂತ್ರಿ ಮತ್ತು ಮಹಾದಂಡನಾಯಕನಾಗಿ ಉನ್ನತಿ ಪಡೆದ ಮತ್ತು ಕ್ರಿ.ಶ. ೧೫೪೯ರಲ್ಲಿ ತುಂಬು ವಯಸ್ಸು ಮತ್ತು ಗೌರವಗಳೊಂದಿಗೆ ಕಾಲವಾದ.

ಗೋವಾದಲ್ಲಿದ್ದ ಪೋರ್ತುಗೀಜರು ಅಸದನ ವ್ಯಕ್ತಿತ್ವದ ಬಗೆಗೆ ತೀರ ಕೀಳು ಅಭಿಪ್ರಾಯ ತಳೆದಿದ್ದರು. ಹಾಗೆ ಮಾಡಿದರೆ ತನ್ನ ಸ್ವಂತದ ಸ್ವಾರ್ಥ ಸಾಧಿಸುವುದೆಂದು ತಿಳಿದರೆ ಯಾವುದೆ ಕ್ಷಣ ತನ್ನ ಆತ್ಮೀಯ ಗೆಳೆಯರಿಗೆ, ತನ್ನ ದೊರೆಗೆ ಸಹ, ದ್ರೋಹ ಬಗೆಯಲು ಸಿದ್ಧನಾಗಿದ್ದ ಆಳವಾದ ಸಂಚುಗಾರನೆಂದು ಅವರು ಅವನ ಬಗೆಗೆ ಅಭಿಪ್ರಾಯ ತಳೆದಿದ್ದರು ; ಮತ್ತು ಇದರಲ್ಲಿ, ಅವನ ಪರಿಪೂರ್ಣ ಕೌಶಲ ಮತ್ತು ನಾನು ಮಾರ್ಗಗಳಿಂದಾಗಿ, ಅವನು ತಪ್ಪದೆ ಯಶಸ್ವಿಯಾಗುತ್ತಿದ್ದ. ಸ್ಥಳಾವಕಾಶವಿದ್ದಿದ್ದರೆ, ಅಂದಿನ ವಿವಿಧ ಬರಹಗಳಿಂದ ಅವನ ಅನೇಕ ಸ್ವಾರಸ್ಯಕರ ಕತೆಗಳನ್ನು ಆಯ್ದು ಹೇಳಬಹುದಿತ್ತು.[21]

ಬ್ಯಾರೊಸ್ ಅವನನ್ನು "ಸುಫೊ ಲಾರಿಜ್"[22] ಎಂದು ಕರೆದಿದ್ದಾನೆ. ಆ ಹೆಸರು "ಯುಸುಫ್ ಆಫ್ ಲಾರ್"ನಿಂದ ಉತ್ಪತ್ತಿಯಾದುದಾಗಿದೆ. ಕ್ಯಾಸ್ಟನ್‌ಹೆಡಾ ಆ ಹೆಸರನ್ನು 'ಸುಫೊಲಾರಿಮ್"ಎಂದು ಬರೆಯುತ್ತಾನೆ.

ಅಸದ್ ಖಾನ ತನಗಾಗಿಯೆ ಒಂದು ಪೂರ್ತಿ ಅಧ್ಯಾಯಕ್ಕೆ ಅರ್ಹನಾಗಿದ್ದಾನೆ. ಆದರೆ ಪದಬಾಹುಳ್ಯ ತಪ್ಪಿಸಲು ಬ್ಯಾರೊಸ್‌ನ "ಏಶಿಯಾ"ದಿಂದ ಒಂದು ಅವತರಣಿಕೆಯನ್ನು ಮಾತ್ರ ಕೊಡುವೆ,[23] ಪೊಂಡಾ ಮುತ್ತಲ್ಪಟ್ಟಾಗ ಮೂವರು ಹಿಂದೂ ದೊರೆಗಳು ಗೋವಾದ ಭೂಖಂಡಗಳ ಮೇಲೆ ಮಾಡಿದ ಆಕ್ರಮಣವನ್ನು ಪ್ರಸ್ತಾಪಿಸಲಾಗಿದೆ. ನಿವಾಸಿಗಳು ಮಹಾಮಂಡಲಾಧಿಪತಿ ನುನೊ ದ ಕುನ್ಹಾನಿಗೆ ಮೊರೆಯಿಟ್ಟರು. ಅವನು ಆದಿಲ್‌ಶಾಹನೊಂದಿಗೆ ಯುದ್ಧವಾದೀತೆಂಬ ಭಯದಿಂದ ಹಸ್ತಕ್ಷೇಪ ಮಾಡಲು ಹಿಂಜರಿದ. ಬೆಳಗಾಂವಿಯ ಪ್ರಭು ಅಸದ್ ಖಾನನೆ ಪ್ರಮುಖ ಅಪಾಯವಾಗಿದ್ದ.

"ಸುರಕ್ಷಿತ ಮತ್ತು ಎತ್ತರದ ಸ್ಥಳದಲ್ಲಿ ಕುಳಿತು ಕೆಳಗೆ ಬಯಲುಗಳಲ್ಲಿ ಹರಡುತ್ತಿರುವ ದೊಡ್ಡ ಬೆಂಕಿಯನ್ನು ನೋಡುತ್ತಿರುವವನಂತೆ ಅಸದ್ ಖಾನ

ಜರುಗುತ್ತಿರುವ ಘಟನೆಗಳನ್ನು ತನ್ನ ಬೆಳಗಾಂವಿ ನಗರದಿಂದ ನೋಡುತ್ತಿದ್ದ;" ಆದರೆ ಭಿನ್ನಾಭಿಪ್ರಾಯದಿಂದಾಗಿ ತಾನು ತಾತ್ಪೂರ್ತಿಕವಾಗಿ ಬಿಟ್ಟುಬಂದಿದ್ದ ಬಿಜಾಪುರಕ್ಕೆ ಮರಳುವಂತೆ ಮತ್ತು ರಾಜ್ಯಾಡಳಿತದಲ್ಲಿ ತನಗೆ ನೆರವು ನೀಡುವಂತೆ ಬಯಸಿ ಆದಿಲ್‌ಶಾಹ ಬರೆಯುವತನಕ ಅವನು ಏನೂ ಮಾಡಲಿಲ್ಲ. ತಾನು ಈ ಲೋಕದ ವ್ಯವಹಾರಗಳನ್ನು ಮುಗಿಸಿರುವುದಾಗಿಯೂ ಮೆಕ್ಕಾಗೆ ಹೋಗಿ ಅಲ್ಲಿ ಕೊನೆಯುಸಿರೆಳೆಯಬಯಸಿರುವುದಾಗಿಯೂ ಅಸದ್‌ಖಾನ ಧೂರ್ತತನದಿಂದ ಉತ್ತರ ಕಳಿಸಿದ. ಇದರಿಂದ ಇಸ್ಮಾಯಿಲ್ ಕುಪಿತನಾಗಿ ತನ್ನ ಬಲಿಷ್ಠ ಪ್ರಜೆಯ ಮೇಲೆ ಸೇಡು ತೀರಿಸಿಕೊಳ್ಳಲು ನಿಶ್ಚಯಿಸಿದ. ಅವನಾದರೊ ಪೋರ್ತುಗೀಜರೊಂದಿಗೆ ಶುದ್ಧ ಮೈತ್ರಿ ಪ್ರತಿಪಾದಿಸುತ್ತ ಭೂಖಂಡದ ಕೆಲವು ಪ್ರದೇಶಗಳನ್ನು ವಶಕ್ಕೆ ತೆಗೆದು ಕೊಳ್ಳಲು ಅವರನ್ನು ಆಹ್ವಾನಿಸಿ ಮತ್ತು ತನ್ನ ಒಡೆಯ ಸುಲ್ತಾನ ವಿಜಯನಗರದ ಸೈನ್ಯಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಅಶಕ್ತನಾಗಿದ್ದನೆಂದು ಸಾರಿದ ಕುಸ್ತಾನಿಗೆ ಪತ್ರ ಬರೆದ. ಇದು ರಾಯಚೂರು ಮೇಲಣ ಹಿಂದೂ ವಿಜಯದ ಬಹುಕಾಲದ ನಂತರ ಆದದ್ದೆಂಬುದನ್ನು ಲಕ್ಷದಲ್ಲಿಡಬೇಕು. ದಕುನ್ಹಾ ಕೃಷ್ಣದೇವನ ವೀರ ಮಿತ್ರನಾದ ಕ್ರಿಸ್ಟೊವಾಒ ದ ಫಿಗೈರೆಡೊನೊಂದಿಗೆ ತನ್ನ ಉತ್ತರ ಕಳಿಸಿಕೊಟ್ಟ. ಏಕೆಂದರೆ, ಕೃಷ್ಣದೇವ ಬೆಳಗಾಂವಿಯ ದೊರೆಯೊಂದಿಗೆ ಗೆಳೆತನ ಹೊಂದಿದ್ದ. ಮಾತು ಕತೆ ನಡೆದು, ತನ್ನ ಅಸ್ಥಿರ ಹಾಗೂ ಚಂಚಲ ಮನಸ್ಸಿನ ಒಡೆಯನ ಬಗೆಗೆ ತನಗೆ ಅಂಜಿಕೆಯಾಗಿದೆಯೆಂದೂ ಎಲ್ಲಕ್ಕಿಂತ ಹೆಚ್ಚಾಗಿ ತಾನು ಪೋರ್ತುಗೀಜರೊಂದಿಗೆ ಮೈತ್ರಿ ಉಳಿಸಿಕೊಂಡು ಹೋಗಬಯಸಿರುವುದಾಗಿಯೂ ಅಸದ್‌ಖಾನ ಒತ್ತಿ ಹೇಳಿದ ಆದುದರಿಂದ ಅವನು ಗೋವಾ ಸಂದರ್ಶಿಸಿ ಮಹಾಮಂಡಲಾಧಿಪತಿಯೊಂದಿಗೆ ಒಪ್ಪಂದ ಬೆಸೆಯಲು ಅನುಮತಿ ಕೋರಿದ. ಪ್ರಸ್ತುತ ಭೂಮಿಗಳು ಪೋರ್ತುಗಾಲದ ರಾಜನ ಖಾಯಂ ಆಸ್ತಿಯಾಗುವುದೆಂದು ಅವನು ಮಹಾಮಂಡಲಾಧಿಪತಿಗೆ ವಿಧೇಯನಾಗಿ ವಚನವಿತ್ತ. ಅದೇ ಪ್ರಕಾರ ದಕುನ್ಹಾ ಆ ಭೂಮಿಗಳನ್ನು ಹಿಡಿದುಕೊಂಡ.

ಆದಾದ ಕ್ಷಿಪ್ರ ತರುವಾಯದಲ್ಲಿ ಅಸದ್‌ಖಾನ ವಿಜಯನಗರದ ರಾಜನೊಂದಿಗೆ ಸಂಚು ಆರಂಭಿಸಿದ. ಮಹತ್ತರವಾದ ಮಹಾನವಮಿ ಉತ್ಸವವೊಂದರ ಸಂದರ್ಭದಲ್ಲಿ ಆಮಂತ್ರಿತನಾದ ಅವನು ೧೩,೦೦೦ ಯೋಧರು ಮತ್ತು ೨೦೦ ಆನೆಗಳೊಂದಿಗೆ ಬೆಳಗಾಂವಿಯಿಂದ ಹೊರಟ. ಹೊರಡುವ ಮುನ್ನ ದಕುನ್ಹಾಗೆ ಬರೆದು ತನ್ನ ಜೊತೆಗಾಗಿ ಫಿಗೈರೆಡೊನನ್ನು ಕಳಿಸಬೇಕೆಂದು ಕೇಳಿದ, ಮತ್ತು ಈ ಮೊದಲು ರಾಯನ ವಶದಲ್ಲಿದ್ದ ಕೆಲವು ಭೂಮಿಗಳನ್ನು ಅವನಿಂದ ಪೋರ್ತುಗೀಜರಿಗೆ ಖಚಿತ ವಾಗಿಯೂ ಬಿಡಿಸಿ ಕೊಡುವದಾಗಿ ಭರವಸೆಯಿತ್ತ. ಆ ಪ್ರಕಾರ ಫಿಗೈರೆಡೊ ವಿಜಯನಗರದತ್ತ ನಡೆದ, ಆದರೆ ಖಾನನು ಆಗಲೆ ಬಂದು ರಾಜನನ್ನು ಸೇರಿಕೊಂಡಿದ್ದ

ನೆಂದು ಅವನಿಗೆ ತಿಳಿಯಿತು. ರಾಯ ಅಸದನನ್ನು ಪ್ರೀತಿಯಿಂದ ಬರಮಾಡಿಕೊಂಡ ಮತ್ತು ಸುಲ್ತಾನನ ವಿರುದ್ಧ ತನಗೆ ಅವನ ನೆರವು ಸಿಗುವ ನಿರೀಕ್ಷೆಯಿದ್ದುದರಿಂದ ಅವನಿಗೆ "ತುಂಗೆ ಮತ್ತು ತುರುಗಲ್"[24] ಎಂಬ ಎರಡು ಪಟ್ಟಣಗಳನ್ನು ಕಾಣಿಕೆಯಾಗಿ ನೀಡಿದ.

ಸುಲ್ತಾನನು ಅಸದ್ ಖಾನನ ಪಕ್ಷಾಂತರದ ಸುದ್ದಿ ಕೇಳಿದಾಗ ತಾನು ಕಳೆದು ಹೋದೆನೆಂದೇ ಕೈಚಲ್ಲಿದ, ಆದರೆ ಸೈನ್ಯ ಜಮಾಯಿಸಿ ರಾಜನ ಠಾಣ್ಯದಿಂದ ಹನ್ನೆರಡು ಹರದಾರಿಗಿಂತ ಹತ್ತಿರ ಸಾಗಿದ. ಅಲ್ಲಿಯೆ ಹಿಂದೂ ದೊರೆಗಳಿಗಿಂತ ಸ್ವಲ್ಪ ದೂರ ದಲ್ಲಿ ಅಸದ್‌ಖಾನ ತನ್ನ ಡೇರೆಗಳನ್ನು ನಿಲ್ಲಿಸಿದ್ದ. ತಂದನಂತರ ಸುಲ್ತಾನ ತನ್ನ ಅವಿಧೇಯ 'ಗುಲಾಮು' ನನ್ನು ತನಗೊಪ್ಪಿಸಬೇಕೆಂದು ಕೇಳಿ ರಾಯನಿಗೆ ಬರೆದ. ಅವನು ಅದನ್ನು ಅಸದ್ ಖಾನನಿಗೆ ಕಳಿಸಿಕೊಟ್ಟ. ಅವನಾದರೂ ಇನ್ನೆಂದೂ ಮಹಮ್ಮದೀಯರನ್ನು ಸೇರಿಕೊಳ್ಳುವುದಿಲ್ಲೆಂದೂ ವಿಜಯನಗರಕ್ಕೆ ವಿಧೇಯ ನಾಗುಳಿಯುವುದಾಗಿಯೂ ರಾಜನಿಗೆ ಹೇಳಿದ. ಕೊಂಚ ವಿರಾಮ ಸಂಭವಿಸಿತು. ಆ ಅವಧಿಯಲ್ಲಿ ಸುಲ್ತಾನ ಮತ್ತು ಅಸದ್ ಖಾನರ ಠಾಣ್ಯಗಳ ನುಧ್ಯೆ ಸತತವಾಗಿ ಸಂದೇಶಗಳು ವಿನಿಮಯವಾಗುತ್ತಿದ್ದುದನ್ನು ರಾಯ ತಿಳಿದ. ಆ ಮೇಲೆ ಎರಡೂ ಸೈನ್ಯಗಳು ರಾಯಚೂರಿನತ್ತ ಸಾಗಿದವು. ರಾಯ ಸುಲ್ತಾನನಿಂದ ಅದನ್ನು ಪಡೆದುಕೊಳ್ಳಲು, ಸುಲ್ತಾನ ರಾಯನ ಮೇಲೆ ಆಕ್ರಮಣ ಮಾಡುವ ಅವಕಾಶಕ್ಕಾಗಿ ಕಾಯಲು.

ಮೂರನೆಯ ದಿನ ಅಸದ್ ಖಾನ ತನ್ನ ಬಲಗಳೊಂದಿಗೆ ರಾಜಸೈನ್ಯಗಳಿಗಿಂತ ಎರಡು ಘಂಟೆ ಮುಂಚಿತವಾಗಿ ಹೊರಟು ಮೊದಲು ನದಿ ದಾಟಿ ಸುಲ್ತಾನನ್ನು ಸೇರಿಕೊಳ್ಳಲು ಧಾವಿಸಿದ. ಆದಿಲ್ ಶಾಹ ಅವನನ್ನು ಬಹಳ ಸ್ಪಷ್ಟವಾದ ಪ್ರೀತಿ ಯಿಂದ ಬರಮಾಡಿಕೊಂಡ ಮತ್ತು ಕೊನೆಗೆ ಸಂಪೂರ್ಣವಾಗಿ ಕ್ಷಮಿಸಿದ. ಏಕೆಂದರೆ, ಪೋರ್ತುಗೀಜರು ಮತ್ತು ವಿಜಯನಗರದೊಂದಿಗಿನ ಸಂಚುಗಳು ಸುಲ್ತಾನನ ಹಿತಾಸಕ್ತಿಗಳ ಮುಂದುವರಿಕೆಗಾಗಿ ಹೂಡಲಾದ ಆಟದಲ್ಲಿನ ಚಲನೆಗಳು ಎಂದು ಶಾಹ ಧೃಢವಾಗಿ ಹೇಳಿದ. ಇದಕ್ಕೆ ಮುನ್ನ ಖಾನ ಫಿಗ್ವೆರೆಡೊನೊಂದಿಗೆ ಸಂಭಾಷಣೆ ನಡೆಸಿ ತನ್ನ ಉದ್ದೇಶಗಳ ಬಗೆಗೆ ಅವನನ್ನು ಸಂಪೂರ್ಣವಾಗಿ ಮೋಸಗೊಳಿಸುವಲ್ಲಿ ಯಶಸ್ವಿಯಾಗಿದ್ದ ಮತ್ತು ತಾನು ಆತ್ಮೀಯ ಮೈತ್ರಿ ಹೊಂದಿರುವನೆಂದು ಸಾಧಿಸು ತ್ತಿದ್ದ ರಾಯನಿಂದ ಭೂಖಂಡಗಳ ಸ್ವಾಧೀನ ಕೊಡಿಸುವ ಭರವಸೆಗಳನ್ನು ಪುನರುಚ್ಚರಿ ಸಿದ.

ಕೊನೆಯಲ್ಲಿ, ಅಸದ್‌ಖಾನನ ಇಬ್ಬಗೆಯ ನಡತೆಗಾಗಿ ಗುಪ್ತಭೀತಿ ಹೊಂದಿದ್ದ ಆದಿಲ್‌ಶಾಹನು ಮಹಮ್ಮದೀಯರು ರಾಯಚೂರನ್ನು ಇಟ್ಟುಕೊಂಡು ಬೇರೆ

ಕೆಲವು ಪ್ರದೇಶಗಳನ್ನು ಬಿಟ್ಟುಕೊಡುವ ಶಾಂತಿ ಒಡಂಬಡಿಕೆಯನ್ನು ರಾಯನೊಂದಿಗೆ ಮಾಡಿಕೊಂಡ ಎಂದು ಬ್ಯಾರೊಸ್ ಹೇಳುತ್ತಾನೆ.

ಈ ಕತೆ ಫಿರಿಸ್ತಾನದಕ್ಕಿಂತ ಪ್ರತಿ ಅಂಶದಲ್ಲಿ ಭಿನ್ನವಾಗಿದ್ದರು ಸುಲ್ತಾನನು ವಿಜಯನಗರಕ್ಕೆ ಭೇಟಿಯಿತ್ತಾಗಿನ ೧೫೩೫ರ ಘಟನೆಗಳಿಗೆ ಇದು ಸಂಬಂಧಿಸಿದೆ ಎಂದು ಗ್ರಹಿಸುವುದು ಅಂಗೀಕಾರಾರ್ಹವಾಗಿದೆ; ಏಕೆಂದರೆ, ತನ್ನ ವೃತ್ತಾಂತವನ್ನು ಮುಂದುವರಿಸುತ್ತ ಬ್ಯಾರೊಸ್ ಸ್ವಲ್ಪ ತರುವಾಯ ೧೫೩೬ನೆಯ ವರ್ಷವನ್ನು ಹೆಸರಿಸುತ್ತಾನೆ. ನೂನಿಜ್, ಬ್ಯಾರೊಸ್, ಮತ್ತು ಫಿರಿಸ್ತಾರ ಪರಸ್ಪರ ವಿರೋಧಾತ್ಮಕ ಕತೆಗಳನ್ನು ಸರಿಹೊಂದಿಸಲೆತ್ನಿಸುವುದು ನಿಷ್ಪ್ರಯೋಜಕ. ಆದರೆ ಅಸದ ಖಾನನ ಸ್ವಭಾವಕ್ಕೆ ಒಳನೋಟ ಒದಗಿಸಲು ಸಾಕಷ್ಟು ಹೇಳಲಾಗಿದೆ. ಕ್ರಿ.ಶ.೧೫೨೦ರಲ್ಲಿ ರಾಯಚೂರಿನಲ್ಲಿ ಸೋತನಂತರ ಆದಿಲ್‌ಶಾಹನ ರಕ್ಷಣೆಯನ್ನು ಖಾನ ಮಾಡಿದದು ತನ್ನ ಉದ್ದೇಶ ಸಾಧನೆಗಾಗಿ ಠಕ್ಕತನದಿಂದಲೇ ಎಂದು ಬರೆಯುವಾಗ ಮತ್ತು ಅಸದ್ ಸುಳ್ಳಿನ ಸರಮಾಲೆಯಿಂದ ಕೃಷ್ಣದೇವನ ಕೈಲಿ ಸಲಾಬತ್ ಖಾನನ ಶಿರಚ್ಛೇದ ಮಾಡಿಸುವ ಯುಕ್ತಿ ಮಾಡಿದನೆಂದು ವರ್ಣಿಸುವಾಗ ನೂನಿಜ್ ಸರ್ವಸಾಮಾನ್ಯ ಭಾವನೆಯನ್ನೆ ಪ್ರತಿಧ್ವನಿಸುತ್ತಾನೆ.

ಈ ಆಳ್ವಿಕೆಯಲ್ಲಿ ಪೋರ್ತುಗೀಜರು ಕರಾವಳಿಯಲ್ಲಿನ ವಿವಿಧ ಸ್ಥಳಗಳಲ್ಲಿ ನೆಲೆಯೂರುವಲ್ಲಿ ನಿರತರಾಗಿದ್ದರು, ಮತ್ತು ಅವರು ಅಲ್ಲಿ ತಮ್ಮ ವ್ಯಾಪಾರದ ರಕ್ಷಣೆಗಾಗಿ ಹಲವಾರು ಕೋಟೆಗಳನ್ನು ನಿರ್ಮಿಸಿದರು. ಕಾಲಿಕತ್ತದ ಸಾಮೂರಿ ಮತ್ತು ವಿಜಯನಗರದ ಇತರ ಸಾಮಂತರೊಂದಿಗೆ ಅವರು ಯಾವಾಗಲೂ ಕದನ ನಿರತರಾಗಿದ್ದರು; ಆದರೆ ರಾಯನೊಂದಿಗಾದರೂ ಅವರು ಮೈತ್ರಿ ಸಂಬಂಧ ಹೊಂದಿದ್ದರು ಮತ್ತು ೧೫೪೮ರಲ್ಲಿ ಬಿಜಾಪುರ ಮತ್ತು ಅಹಮದನಗರಗಳ ರಾಜರೊಡನಲ್ಲದೆ ಸಾಮೂರಿ ಜೊತೆಗೂ ಶಾಂತಿ ಒಡಂಬಡಿಕೆಯನ್ನು ಸ್ಥಿರೀಕರಿಸಿದರು.

ಪೋರ್ತುಗೀಜರೊಂದಿಗಿನ ವ್ಯವಹಾರಗಳುದ್ದಕ್ಕೂ ಹಿಂದೂ ರಾಜರು ವಚನ ಮುರಿದ ಒಂದು ಪ್ರಸಂಗವನ್ನೂ ನಾನು ಕಾಣೆ,[25] ಆದರೆ ಅದೇ ಮಾತನ್ನು ಇನ್ನೊಂದು ಬದಿಯವರ ವಿಷಯದಲ್ಲಿ ಹೇಳಲಾಗದು. ಭಾರತೀಯರನ್ನು ಲೂಟಿ, ದರೋಡೆ, ಕೊಲೆ ಮಾಡಲು ತಮಗೆ ದೈವದತ್ತ ಹಕ್ಕು ಇತ್ತೆಂದು ಐರೋಪ್ಯರು ಭಾವಿಸಿದಂತೆ ತೋರುತ್ತದೆ. ಉಪ್ಪು ಖಾರ ಹಚ್ಚದೆ ಹೇಳುವುದಾದರೆ, ಅವರ ಇಡಿ ದಾಖಲೆ ದುಷ್ಕೃತ್ಯಗಳ ಸರಮಾಲೆಯಾಗಿದೆ. ಪ್ಯಾಸ್ ಕೊಟ್ಟಿರುವ ಆ "ವೀರ ಹಾಗೂ ಪರಿಪೂರ್ಣ" ರಾಜಾ ಕೃಷ್ಣದೇವ ಪೋರ್ತುಗೀಜರೊಂದಿಗೆ, ವಿಶೇಷತಃ ಕ್ರಿಸ್ಟೊವಾಓ ದ ಫಿಗೈರೆಡೊನೊಂದಿಗೆ ತಳೆದ ಮೈತ್ರಿಯ ವರ್ಣನೆಯಿಂದ ಹೊರಳಿ ಆ ಘನ ಹಿಂದೂ ಸರಕಾರದೊಂದಿಗೆ ರಾಜಪ್ರತಿನಿಧಿಯ ವಿಶ್ವಾಸಘಾತುಕತನದ ಬಗೆಗೆ

ಓದಲು ಕೆಡುಕೆನಿಸುತ್ತದೆ. ಪೋರ್ತುಗೀಜರು ಮೈತ್ರಿ, ಒಪ್ಪಂದಗಳನ್ನು ಮಾಡಿಕೊಂಡುದು ಇವರೊಂದಿಗೇನೇ ಹಾಗೂ ಬಹಿರಂಗವಾಗಿ ಗೆಳೆತನ ಪ್ರಕಟಿಸುತ್ತಿದ್ದುದೂ ಇವರೊಂದಿಗೇನೇ. ಹೀಗೆ, ಒಂದೇ ಒಂದು ಉದಾಹರಣೆ ನೀಡುವುದಾದರೆ, ೧೫೪೫ರಲ್ಲಿ ಗೋವಾದ ಮಂಡಲಾಧಿಪತಿ ದೊಡ್ಡ ಹಡಗುಪಡೆಯನ್ನು ಮತ್ತು ೩,೦೦೦ ಸೈನಿಕರನ್ನು ಸಿದ್ಧಗೊಳಿಸಿದ, ಆದರೆ ಒಳ್ಳೆಯ ಕಾರಣಕ್ಕಾಗಿಯೆ ತನ್ನೆಲ್ಲ ಸಿದ್ಧತೆಗಳನ್ನು ಗುಪ್ತವಾಗಿಟ್ಟ. ಮದ್ರಾಸದ ಹತ್ತಿರವಿರುವ ಸ್ಯಾನ್ ಥೋಮೆಗೆ ಕರಾವಳಿಗುಂಟ ಹಡಗುಪ್ರಯಾಣ ಬೆಳೆಸಿ, ತನ್ನ ಸೈನಿಕರನ್ನು ಅಲ್ಲಿ ಇಳಿಸಿ ಒಳನಾಡಿನಲ್ಲಿ ಸಾಗಿ ಕೇವಲ ತನ್ನ ದುರಾಶೆಗಾಗಿ ತಿರುಮಲ ಅಥವಾ ತಿರುಪತಿ ಮಹಾ ದೇವಾಲಯವನ್ನು ನಾಶಮಾಡುವುದು ಅವನ ಹೇತುವಾಗಿತ್ತು. ಅದೃಷ್ಟವಶಾತ್ ತೀವ್ರ ಬಿರುಗಾಳಿ ಅವನು ಸಮುದ್ರಯಾನ ಬೆಳೆಸದಂತೆ ತಡೆಗಟ್ಟಿತು, ಆದರೆ ಅವನು ಪಶ್ಚಿಮ ಕರಾವಳಿಯಲ್ಲಿನ ಕೆಲವು ಶ್ರೀಮಂತ ದೇವಾಲಯಗಳನ್ನು ನಾಶಮಾಡಿ ಕೊಳ್ಳೆ ಹೊಡೆದು ಆ ಲೂಟಿಯಿಂದ ತನ್ನನ್ನು ಶ್ರೀಮಂತನನ್ನಾಗಿಸಿಕೊಂಡ. ಇದು ವಿಜಯನಗರ ಸಾಮ್ರಾಜ್ಯದ ಸಾಮಂತರ ಆಸ್ತಿಯ ಮೇಲೆ ಮಾಡಿದ ಸ್ವೈರ ಆಕ್ರಮಣವಾಗಿತ್ತು. ಏಕೆಂದರೆ, ಈ ದೇವಾಲಯಗಳಿಗೆ ಸೇರಿದ ಶಾಂತಿಪ್ರಿಯ ಬ್ರಾಹ್ಮಣರು ಪೋರ್ತುಗೀಜರನ್ನು ಯಾವುದೆ ರೀತಿಯಲ್ಲಿ ರೇಗಿಸಿದ ಅಥವಾ ಹಸ್ತಕ್ಷೇಪ ಮಾಡಿದ ನೆಪ ಕೂಡ ಇರಲಿಲ್ಲ.

ಅಚ್ಯುತನ ಕಾಲದಲ್ಲಿ ದಕ್ಷಿಣ ಭಾರತದಲ್ಲೆಲ್ಲ ಇದ್ದ ದೇವಾಲಯಗಳಿಗೆ ಮನ್ನೆಯರು ಅನೇಕ ದತ್ತಿಗಳನ್ನು ನೀಡಿದರು, ಮತ್ತು ಈ ಉದಾರ ಮತ್ತು ಧಾರ್ಮಿಕ ದತ್ತಿಗಳಿಗೆ ಸಂಬಂಧಿಸಿದ ಅನೇಕ ಶಿಲಾಶಾಸನಗಳೂ ತಾಮ್ರಪಟಗಳೂ ಅಸ್ತಿತ್ವದಲ್ಲಿವೆ. ಅತಿ ಮಹತ್ವದವುಗಳಲ್ಲೊಂದನ್ನು ಪ್ರೊಫೆಸರ್ ಕೀಲ್ ಹಾರ್ನ್ ಪ್ರಕಟಿಸಿದ್ದಾನೆ.[26] ರಾಜನು ೧೩ನೆಯ ಆಕ್ಟೋಬರ ಕ್ರಿ.ಶ. ೧೫೪೦ರಂದು ತುಂಗಭದ್ರೆಯ ತೀರದಲ್ಲಿರುವ ವಿಠ್ಠಲಸ್ವಾಮಿ ಅಥವಾ ವಿಠ್ಠಲೇಶ್ವರ ದೇವಾಲಯದಲ್ಲಿದ್ದು—ಇಂದಿಗೂ ಉಳಿದು-ಬಂದಿರುವ ಅದರ ಉತ್ಕೃಷ್ಟವಾಗಿ ಕಡೆದ ಮಂಡಪಗಳು ತಮ್ಮ ಪಾಳುಬಿದ್ದ ಸ್ಥಿತಿಯಲ್ಲೂ ನೋಟಕರ ಆಶ್ಚರ್ಯ ಅಭಿಮಾನಗಳ ವಸ್ತುವಾಗಿವೆ-ಮದ್ರಾಸದಿಂದ ಅನತಿ ದೂರದಲ್ಲಿರುವ ಗ್ರಾಮವೊಂದನ್ನು ವೇದಗಳಲ್ಲಿ ಪಾರಂಗತರಾದ ಬ್ರಾಹ್ಮಣರಿಗೆ ದತ್ತಿಯಾಗಿ ನೀಡಿದನೆಂದು ಆ ಶಾಸನ ಹೇಳುತ್ತದೆ.

ಈಗ ಶಾಸನಪಂಡಿತರಿಗೆ ಗೊತ್ತಿರುವಂತೆ ಅಚ್ಯುತನ ಕೊನೆಯ ದಿನಾಂಕ ಜನವರಿ ೨೫, ಕ್ರಿ.ಶ. ೧೫೪೧ಕ್ಕೆ ಸರಿಹೊಂದುವ ದಿನಾಂಕ ಹೊಂದಿರುವ ಶಾಸನದಲ್ಲಿ[27] ಸಿಗುತ್ತದೆ; ಅದೇ ರೀತಿ, ಅವನ ಉತ್ತರಾಧಿಕಾರಿ ಸದಾಶಿವನಿಗೆ ಸಂಬಂಧಿಸಿದ ಅತಿ ಮೊದಲಿನ ದಿನಾಂಕ ಜುಲೈ ೨೭, ಕ್ರಿ.ಶ. ೧೫೪೨.

1 ನಾನು ಈ ಸಂಬಂಧವನ್ನು ಸ್ಥೂಲವಾಗಿ ಪ್ರಕಟಿಸಿರುವೆ. ಆದರೆ, ವಸ್ತುತಃ ; ದೇಶದಲ್ಲಿನ ಸುಮಾರು ಪ್ರತಿ ಶಾಸನ ಮತ್ತು ಸಾಹಿತ್ಯ ಕೃತಿ ಈ ಕಾಲದಿಂದ ಮುಂದೆ ಆಳಿದ ಪ್ರಭುಗಳ ವಂಶಾವಳಿ ಬಗೆಗೆ ಭಿನ್ನಾಭಿಪ್ರಾಯ ತಳೆದಿದೆ. ಆದರೆ, ರಾಜಧಾನಿಯಲ್ಲಿ ವಾಸವಾಗಿದ್ದ ಸಮಕಾಲೀನ ಲೇಖಕನೆಂದು ನೂನಿಜ್ ಉತ್ಕೃಷ್ಟ ಆಧಾರವಾಗಿದ್ದಾನೆ.

2 ಎಪಿ. ಇಂಡಿಕಾ, iv, ೩, ಟಿಪ್ಪಣಿ ೪ (ಪ್ರೊಫೆಸರ್ ಕಿಎಲ್ಹಾರ್ನ್).

3 ಸ್ಕಾಟ್‌ನ ಆವೃತ್ತಿ, i, ೨೫೨.

4 ಈ ಹೆಸರುಗಳನ್ನು ಕೆಳಗೆ ಚರ್ಚಿಸಲಾಗಿದೆ.

5 ಇದು ಸ್ಪಷ್ಟವಾಗಿಯೆ ತಪ್ಪು. ಆ ಅವಧಿ ಕೇವಲ ಹತ್ತು ವರ್ಷ.

6 ೧೬ನೆಯ ಸಫರ್, ಹಿ.ಶ. ೯೪೧ (ಫಿರಿಸ್ತಾ)

7 ಫಿರಿಸ್ತಾ, ಬ್ರಿಗ್ಸ್, iii ೩೭೪–೩೭೫

8 "ಲಿಸ್ಟ್ಸ್ ಆಫ್ ಆ್ಯಂಟಿಕ್ವಿಟಿಜ್, ಮದ್ರಾಸ್," ಸಂ. ೧, ಪು. ೧೮೧ (ನಂ. ೮೬), ಮತ್ತು ಪುಟ ೧೮೨ (೧೧೫).

9 ಸ್ಕಾಟ್‌ನ ಅನುವಾದ, ೧. ಪು. ೨೬೨.

10 ಮುಂದೆ, ಪು. ೩೬೭.

11 ಅದೇ, ಪು. ೩೫೪.

12 ಸ್ಕಾಟ್, ೧. ಪುಟ ೨೬೨ ff ; ಬ್ರಿಗ್ಸ್, ೩. ಪು. ೮೧.

13 "ಶೇವ್ ರಾಯನ ಮಗಳು" ಎಂದು ಬ್ರಿಗ್ಸ್‌ನಲ್ಲಿದೆ. ಮೊದಲನೆಯ ನರಸಿಂಹನ ಮಗನಾದ ಕೃಷ್ಣದೇವನ ಮಗಳನ್ನು ರಾಮ ಮದುವೆಯಾದ.

14 ಈ ಕಾಲಾವಧಿಯ ಹೆಣ್ಣು ವಂಶಾವಳಿಯ ಯಾವ ರಾಜಪುತ್ರನ ಹೆಸರನ್ನೂ ಶಾಸನಗಳು ನೀಡುವುದಿಲ್ಲ. ಬ್ರಿಗ್ಸ್ ಕಕ್ಕನನ್ನು "ಭೋಜ" ತಿರುಮಲನೆಂದು ಕರೆಯುತ್ತಾನೆ. ಕೌಟೊ (Dec VI. I.V. Cap. 5) ಆ ಹೆಸರನ್ನು 'ಕಕ್ಕ ತಿಮ್ಮ' ಎಂದು ಕೊಡುತ್ತಾನೆ ಮತ್ತು 'ಉಚೆ' ಎಂದರೆ ಹುಚ್ಚ ಎಂದು ಹೇಳುತ್ತಾನೆ.

15 ಇಲ್ಲಿ ಬಹುಶಃ ನಾವು ಅಚ್ಯುತನ ಆಳ್ವಿಕೆಗೆ ಪ್ರಸ್ತಾಪ ಕಾಣುತ್ತೇವೆ. ಮುಂದೆ ಬಲು ಪ್ರಖ್ಯಾತರಾಗಲಿದ್ದ ಮೂವರು ಸಹೋದರರಲ್ಲಿ ರಾಮ ಹಿರಿಯ. ಅವನು ಮತ್ತು ಸಹೋದರ ತಿರುಮಲ ಇಬ್ಬರೂ ಕೃಷ್ಣದೇವರಾಯನ ಮಕ್ಕಳನ್ನು ಮದುವೆಯಾದರು. ನೂನಿಜ್‌ನ ಗ್ರಹಿಕೆಯಲ್ಲಿ, ಅಚ್ಯುತರಾಯ ನಂತರದ ರಾಜನ ಸಹೋದರನಾದುದರಿಂದ ಚರಿತ್ರಕಾರ ಇವರಿಬ್ಬರೂ ಸಹೋದರರನ್ನು ರಾಜಾ ಅಚ್ಯುತನ ಭಾವರೆಂದು ಕರೆಯುತ್ತಾನೆ. (ಮುಂದೆ, ಪು. ೩೬೭), ರಾಜಾ ಅಚ್ಯುತ "ರಾಜ್ಯದ ಪ್ರಮುಖ ಜನರನ್ನು ನಾಶ ಮಾಡಿದ ಮತ್ತು ಅವರ ಮಕ್ಕಳನ್ನು ಕೊಂದ" (ಪು ೩೬೯) ಎಂದು ನೂನಿಜ್ ಹೇಳುತ್ತಾನೆ.

16 ಅಚ್ಯುತ ಸಿಂಹಾಸನವೇರಿ ಆಗಲೆ ಸುಮಾರು ಆರು ವರ್ಷಗಳಾಗಿದ್ದವು.

17 ವಿಜಯನಗರದತ್ತ ಸುಲ್ತಾನನ ಪ್ರಯಾಣ ೧೫೩೫-೩೬ರಲ್ಲಿ ಪ್ರಾರಂಭಿಸಿದ್ದರೆ ನೂನಿಜ್‌ನ ದಿನಚರಿಯನ್ನು ೧೫೩೬-೩೭ಕ್ಕೆ ಗೊತ್ತುಪಡಿಸುವಲ್ಲಿ ಬಹುಶಃ ಬಹಳ ತಪ್ಪೇನಿಲ್ಲ. ಏಕೆಂದರೆ, ಲೇಖಕ ರಾ[illegible]ರ ಬಗೆಗೆ ಸರದಾರರ ಮತ್ತು ಇತರರ ಅಸಮಾಧಾನ ಮತ್ತು ಜುಗುಪ್ಸೆಗಳನ್ನು ಉಲ್ಲೇಖಿಸುತ್ತಾನೆ. ಮುಸಲ್ಮಾನ ಸೈನ್ಯ ನಿರ್ಗಮಿಸಿದಂದಿನಿಂದ ಒಂದು ಮಧ್ಯಂತರವಿದ್ದುದು ಇದರಿಂದ ಪೂರ್ವ ಸೂಚಿತವಾಗುತ್ತದೆ.

18 ಸ್ಕಾಟ್‌ನ ಆವೃತ್ತಿ, i ೨೬೫.

19 ಸ್ಕಾಟ್ ಆ ಹೆಸರನ್ನು 'ನೆಗಟಾದ್ರಿ' ಎಂದು ಬರೆಯುತ್ತಾನೆ, ಆದರೆ ನಾನು ಕಡಿಮೆ ಗೋಜಲು ಉಂಟು ಮಾಡುವ, ಬ್ರಿಗ್ಸ್‌ನ ಅವತರಣಿಕೆ "ವೆಂಕಟಾದ್ರಿ" ಯನ್ನು ಬದಲಿಯಾಗಿ ಕೊಟ್ಟಿರುವೆ.

20 ಫಿರಿಸ್ತಾ, ಅಸದ್ ಖಾನನ ವೈಭವದ ಬಗೆಗೆ ಆವೇಶದಿಂದ ಬರೆಯುತ್ತಾನೆ. (ಸ್ಕಾಟ್ ೧, ೨೭೭). ಅವನು "ತನ್ನ ನ್ಯಾಯ ನಿರ್ಣಯ ಮತ್ತು ವಿವೇಕಕ್ಕೆ ಪ್ರಸಿದ್ಧನಾಗಿದ್ದ. ಸುಮಾರು ನಲವತ್ತು ವರ್ಷ ಅವನು ದಕ್ಖನದ ಸರದಾರರು ಮತ್ತು ವಿಖ್ಯಾತರ ಆಶ್ರಯದಾತ ಮತ್ತು ಸಂರಕ್ಷಕನಾಗಿದ್ದ. ತನ್ನ ಸಮಕಾಲೀನ ಸರದಾರರೆಲ್ಲರನ್ನು ಮೀರಿಸುವ ವೈಭವಾಡಂಬರಗಳೊಂದಿಗೆ ಅವನು ಅತ್ಯಂತ ಉನ್ನತ ಗೌರವ ಮರ್ಯಾದೆಗಳೊಂದಿಗೆ ಬಾಳಿದ. ಬೀಜನಗರದ ಮತ್ತು ಅವನ ದೊಡ್ಡ ಯೋಗ್ಯತೆಗಳ ಬಗೆಗೆ ಗೌರವ ತಾಳಿದ್ದ ಎಲ್ಲ ದೇಶಗಳ ರಾಜರುಗಳು ಆಗಿಂದಾಗ ಪತ್ರಗಳು ಹಾಗೂ ಬೆಲೆಯುಳ್ಳ ಕಾಣಿಕೆಗಳಿಂದ ಅವನನ್ನು ಗೌರವಿಸುತ್ತಿದ್ದರು. ಅವನ ಮನೆಯ ಸೇವಕರು...೨೫೦ ರಷ್ಟಿದ್ದರು. ಅವನಲ್ಲಿ ೬೦ ಅತಿ ದೊಡ್ಡ ಮತ್ತು ೧೫೦ ಚಿಕ್ಕ ಗಾತ್ರದ ಆನೆಗಳಿದ್ದವು. ಅವನ ಲಾಯಗಳಲ್ಲಿ ಭಾರತದಲ್ಲಿ ಮರಿ ಹಾಕಿಸಲಾದ ಮಿಶ್ರ ತಳಿ ಹೊರತುಪಡಿಸಿ ಅರೇಬಿಯಾ ಮತ್ತು ಪರ್ಷಿಯಾದ ೪೦೦ ಕುದುರೆಗಳಿದ್ದವು. ಅವನ ಸಂಪತ್ತು ಮತ್ತು ಧನ ಎಣಿಕೆಗೆ ಮೀರಿದ್ದವು" ಇತ್ಯಾದಿ .

21 ಅಸದ್ ಖಾನನ ಜೀವನ ಕುರಿತು ಫಿರಿಸ್ತಾನ ಕತೆ ಸ್ಕಾಟ್‌ನ ಆವೃತ್ತಿ ೧, ಪು, ೨೪೬ ೨೭೮ ಮತ್ತು ಬ್ರಿಗ್ಸ್ ೩, ಪು. ೪೫-೧೦೨ರಲ್ಲಿದೆ.

22 ಡೆಕಡಾ III i. iv CAP 5

23 ಡೆಕಡಾ IV 1 CAP 6

24 ತುರಗೆಲ್ ಬಹುಶಃ ಗೋವಾದ ಉತ್ತರಕ್ಕಿರುವ ತಿರಕೋಳ.

25 ೧೫೫೫ ರಲ್ಲಿ ರಾಮರಾಯ ಮದ್ರಾಸದ ಹತ್ತಿರವಿರುವ ಸ್ಯಾನ್ ಥೊಮೆಯ ಕ್ರಿಶ್ಚನ್ ನಿವಾಸಿಗಳ ವಿರುದ್ಧ ದಂಡಯಾತ್ರೆಗೈದ, ಆದರೆ ಬಹಳ ನಷ್ಟ ಉಂಟುಮಾಡದೆ ಹಿಂತಿರುಗಿದ ಎಂದು ಕೌಟೊ (ಡೆಕಡಾ Vii. l.Vii C.l) ಹೇಳುತ್ತಾನೆ. ಸ್ಯಾನ್ ಥೋಮೆ ಮತ್ತು ಗೋವಾ ನಡುವೆ ಯಾವ ಸಂಬಂಧವನ್ನೂ ರಾಜ ಗುರುತಿಸಿರಲಿಲ್ಲವೆಂಬ ಸಾಧ್ಯತೆಯುಂಟು.

26 ಎಪಿಗ್ರಾಫಿಯಾ ಇಂಡಿಕಾ, ೩, ೧೪೭.

27 ಎಪಿಗ್ರಾಫಿಯಾ ಕಾರ್ನಾಟಿಕಾ (ರೈಸ್). ಭಾಗ ೧, ಪುಟ ೧೭೬, ನಂ. ೧೨೦

ಅಧ್ಯಾಯ ೧೫

# ಅಂತ್ಯದ ಆದಿ

**ಸದಾಶಿವನ ಆಳ್ವಿಕೆ—ರಾಜ ಬಂಧಿತ ಆದರೆ ಅಂಗೀಕೃತ–ರಾಮರಾಯ–ಆದಿಲ್‌ಶಾಹ ಪುನಃ ವಿಜಯನಗರದಲ್ಲಿ—ಬಿಜಾಪುರ ಅಪಾಯದಲ್ಲಿ—ಅಸದಖಾನನಿಂದ ರಕ್ಷಿತ—ರಾಜಕುಮಾರ ಅಬ್ದುಲ್ಲಾನ ಬಂಡು—ರಾಜನ ಕೃತಜ್ಞತೆ—ಬೆಳಗಾಂವಿಯಲ್ಲಿ ಅಸದನ ಮರಣ—ಪೋರ್ತುಗೀಜರು ಅಬ್ದುಲ್ಲಾನನ್ನು ಬೆಂಬಲಿಸುತ್ತಾರೆ—ಒಪ್ಪಂದಗಳು—ಐನ್—ಉಲ್ ಮುಲ್ಕ್-ಗೋವಾದ ಹತ್ತಿರ ಯುದ್ಧಗಳು—ರಾಮರಾಯನ ಮೈಲಾಪುರ ದಂಡಯಾತ್ರೆಯು ಬೆದರಿಕೆ—ಅವನು ಆದಿಲ್‌ಶಾಹನನ್ನು ಸೇರಿಕೊಂಡು ಅಹಮದನಗರ ಪ್ರದೇಶಗಳನ್ನು ಹಾಳೆಬ್ಬಿಸುವನು—ಮಲಬಾರ ಕರಾವಳಿಯ ಮೇಲೆ ಪೋರ್ತುಗೀಜರ ಹಿಂಸೆ—ಗೋವಾದ ಮತೀಯ ನ್ಯಾಯಸ್ಥಾನ.**

ಸದಾಶಿವ ಕ್ರಿ.ಶ. ೧೫೪೧ ಅಥವಾ ೧೫೪೨ರಲ್ಲಿ ಆಳಲಾರಂಭಿಸಿದನು. ಆದರೆ ನಾಮಮಾತ್ರಕ್ಕೆ ರಾಜನಾಗಿದ್ದು ರಾಜ್ಯದ ಎಲ್ಲ ಅಧಿಕಾರ ರಾಮರಾಯ ಮತ್ತು ಅವನ ಇಬ್ಬರು ಸಹೋದರರಾದ ತಿರುಮಲ ಮತ್ತು ವೆಂಕಟಾದ್ರಿಯರ ಕೈಯಲ್ಲಿತ್ತು. ಸದಾಶಿವನನ್ನು ಪ್ರತಿಯೊಬ್ಬನೂ ನಿಜವಾದ ಸಾರ್ವಭೌಮನೆಂದು ಅಂಗೀಕರಿಸಿದ್ದು ೧೫೪೨ ರಿಂದ ೧೫೬೮ರ ವರೆಗಿನ ಅಧಿಕ ಸಂಖ್ಯೆಯ ಶಾಸನಗಳಿಂದ ವ್ಯಕ್ತವಾಗುತ್ತದೆ; ಆದರೆ, ಅವುಗಳಲ್ಲಿ ಬಹುಪಾಲು ಸರಿಯಾಗಿ ಪರೀಕ್ಷಿಸಲ್ಪಟ್ಟಿಲ್ಲ. ಡಾ. ಹುಲ್ಟ್ಜ್ ಇವುಗಳಲ್ಲೊಂದರ ಲಕ್ಷ್ಯಪೂರ್ವಕ ಅಭ್ಯಾಸ ಮಾಡಿದ್ದಾರೆ. ತಾಳಿಕೋಟೆಯಲ್ಲಿ ಹಿಂದೂಗಳ ಮಹಾ ಪರಾಜಯ ಮತ್ತು ರಾಜಧಾನಿಯ ನಾಶದ ಸುಮಾರು ಬಂದು ವರ್ಷದ ನಂತರ ಅಂದರೆ ಕ್ರಿ.ಶ. ೧೫೬೬-೬೭ ಎಂದು ಅದರ ಕಾಲ ನಿರ್ಧರಿತವಾಗಿದೆ. ಇದು ವಿಶೇಷತಃ ಸ್ವಾರಸ್ಯಕರವಾಗಿರುವುದೇಕೆಂದರೆ ರಾಜನಿಗೆ ಅಧಿಕಾರವಿಲ್ಲದಂತೆ ಬಂಧನದಲ್ಲಿಡಲಾಗಿದ್ದರೂ ಮೂವರು ಸಹೋದರರು ಸಹ ಸದಾಶಿವನನ್ನು ರಾಜನೆಂದು ಅಂಗೀಕರಿಸಿದ್ದರೆಂಬ ನನ್ನ ಪ್ರತಿಪಾದನೆಯನ್ನು ಸಮರ್ಥಿಸುತ್ತದೆ. ಈ ದಾಖಲೆಯಲ್ಲಿ ರಾಮರಾಜನ ಸಹೋದರ ತಿರುಮಲ ಮಹತ್ವದ ವ್ಯಕ್ತಿ. ಆದರೆ ಸದಾಶಿವನನ್ನು ಸಾರ್ವಭೌಮನೆಂದು ಉಲ್ಲೇಖಿಸಲಾಗಿದ್ದರೆ ತಿರುಮಲನು ಮಹಾಮಂಡಲೇಶ್ವರ ಎಂಬ ಉಪಪದವಿಯನ್ನು ಒಪ್ಪಿಕೊಂಡಿದ್ದಾನೆ. ಯಾವನೊ ಒಬ್ಬ “ಮಹಾಮಂಡಲೇಶ್ವರ ರಾಮರಾಜ ತಿರುಮಲರಾಜ”ನಿಗೆ ಮನವಿ ಮಾಡಿಕೊಂಡನೆಂದೂ

ಅವನು "ಸದಾಶಿವದೇವ ಮಹಾರಾಜನ ಪಾದದಡಿಯಲ್ಲಿ ಮಂಜೂರಿ ಪಡೆದು" ವೆಲ್ಲೂರಿನ ಮಹಾದೇವಾಲಯಕ್ಕೆ ಒಂದು ಗ್ರಾಮವನ್ನು ದತ್ತಿ ನೀಡಿದ. ಆ ಸಮಯಕ್ಕೆ ರಾಮರಾಜ ಮತ್ತು ವೆಂಕಟಾದ್ರಿ ಇಬ್ಬರೂ ಸತ್ತಿದ್ದರು ಮತ್ತು ತಿರುಮಲ ವಸ್ತುತಃ ರಾಜನಾಗಿದ್ದ. ಮೂವರೂ ಸಹೋದರರು ಪ್ರತಿ ವರ್ಷ ಒಂದು ನಿಶ್ಚಿತ ದಿನದಂದು ತಮ್ಮ ಮೇಲಿರುವ ಅವನ ಅಧಿಕಾರದ ಸಂಕೇತವೆಂದು ತಮ್ಮ ನ್ಯಾಯಸಮ್ಮತ ಸಾರ್ವಭೌಮನಿಗೆ ಸಾಷ್ಟಾಂಗ ಹಾಕುತ್ತಿದ್ದರು" ಎಂದು ಹೇಳುವಷ್ಟು ಮಟ್ಟಿಗೆ ಕೌಟೊ[3] ಮುಂದುವರಿಯುತ್ತಾನೆ. ಆದರೆ ಕೃಷ್ಣನೊಂದಿಗೆ ಅಚ್ಯುತನ ಮತ್ತು ಇಬ್ಬರೊಂದಿಗೆ ಸದಾಶಿವನ ನಿಜವಾದ ಸಂಬಂಧದ ಬಗೆಗೆ ಮಾತ್ರ ನಾವಿನ್ನೂ ಸಂಪೂರ್ಣ ಸಂದೇಹದಲ್ಲಿದ್ದೇವೆ.

ನೂನಿಜ್‌ನ ಪ್ರಕಾರ, ಕೃಷ್ಣದೇವ ತನ್ನ ಸಿಂಹಾಸನಾರೋಹಣವಾದ ಕೂಡಲೆ ತನ್ನ ಮೂವರು ಸಹೋದರರನ್ನೂ ಆಗ ಎಂಟು ವರ್ಷದವನಿದ್ದ. ದಿವಂಗತ ರಾಜನ ಮಗ ಮತ್ತು ಭ್ರಾತ್ರೀಯ "ಬುಜಬಲರಾವ್"ನನ್ನೂ ಬಂಧನದಲ್ಲಿರಿಸಿದನೆಂಬುದನ್ನು ನೋಡಿದೆವು. ಇದು ಕ್ರಿ.ಶ. ೧೫೦೯ರಲ್ಲಿ ಮತ್ತು ಆಗ ಕೃಷ್ಣ ಇಪ್ಪತ್ತು ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನವನಾಗಿದ್ದ. ಇತರ ಮೂಲಗಳಿಂದ "ಬುಜಬಲರಾವ್" ಅಥವಾ ಅಂಥ ಯಾವುದೇ ಹೆಸರಿನ ರಾಜನಿದ್ದುದನ್ನು ನಾವು ಕೇಳರಿಯೆವು; ನೂನಿಜ್ ನೀಡಿದ[4] ಕೃಷ್ಣನ ಮೂವರು ಸಹೋದರರ ಹೆಸರುಗಳೂ ಕೆಲವು ಶಾಸನಗಳಲ್ಲಿ ಉಲ್ಲೇಖಿಸಲಾದ ಇಬ್ಬರು ಅರೆಸಹೋದರರ ಹೆಸರುಗಳಂತೇನೂ ಇಲ್ಲ.

ಒಂದಕ್ಕಿಂತ ಹೆಚ್ಚು ಶಾಸನ ದಾಖಲೆ ಕೆಳಗಿನ ವಂಶಾವಳಿಯನ್ನು ಹೊಂದಿದೆ:-




ತಿಮ್ಮ
(ಹೆಂ. ದೇವಕಿ)
|
ಈಶ್ವರ
(ಹೆಂ. ಬುಕ್ಕಮ್ಮ)
|
ನರಸ ಅಥವಾ ನರಸಿಂಹ
(ಮೂವರು ಹೆಂಡತಿಯರು)
(ಸಿಂಹಾಸನವನ್ನು ಕ್ರಿ.ಶ. ೧೪೯೦ರ ಸುಮಾರಿಗೆ ಬಲಪ್ರಯೋಗಿಸಿ ಆಕ್ರಮಿಸಿದ)

- (ತಿಪ್ಪಾಜಿಯಿಂದ)
  - ವೀರ ನರಸಿಂಹ
    ೧೫೦೯-೧೦ರ ವರೆಗೆ
    ಕೆಲವು ವರ್ಷ ರಾಜ (?)
- (ನಾಗಲಾಳಿಂದ)
  - ಕೃಷ್ಣದೇವ
    (೧೫೦೯-೧೦ರಿಂದ ೧೫೩೦ರ
    ವರೆಗೆ ರಾಜ)
    - ಮಗಳು
      (ರಾಮರಾಯನ ಹೆಂಡತಿ)
    - ಮಗಳು
      (ತಿರುಮಲರಾಯನ ಹೆಂಡತಿ)
- (ಒಬಾಂಬಿಕಾಳಿಂದ)
  - ರಂಗಾ
    (ಹೆಂ. ತಿಮ್ಮಾಂಬಾ)
    - ಸದಾಶಿವ
      (ಹೆಸರಿಗೆ ಮಾತ್ರ ರಾಜ
      ಕ್ರಿ.ಶ. ೧೫೪೨-೬೭)
  - ಅಚ್ಯುತ
    (ಕ್ರಿ.ಶ. ೧೫೩೦ರಿಂದ
    ೧೫೪೧-೪೨ರ
    ವರೆಗೆ ರಾಜ)
    - ವೆಂಕಟ

ಇಲ್ಲಿ ರಂಗ ಮತ್ತು ಅಚ್ಯುತ ಎಂಬ ಹೆಸರಿನ ಕೃಷ್ಣದೇವನ ಇಬ್ಬರು ಅಣ್ಣನ ಸಹೋದರರು (ಎರಡನೆಯವನನ್ನು ರಾಜನೆಂದು ಆಯ್ಕೆ ಮಾಡಲಾಯಿತು) ಮತ್ತು ಭ್ರಾತ್ರೀಯನಾದ ಸದಾಶಿವ ಇದ್ದಾರೆ.

ನನ್ನ 'ಸ್ಕೆಚ್ ಆಫ್‌ದ ಡೈನ್ಯಾಸ್ಟೀಜ್ ಆಫ್ ಸದರ್ನ್ ಇಂಡಿಯಾದಲ್ಲಿ'[5] ಗಮನಿಸಿದ ಎರಡು ಶಾಸನಗಳು ಅಚ್ಯುತ ಕೃಷ್ಣದೇವನ ಮಗನೆಂದು ಹೇಳುತ್ತವೆ. ಆದರೆ ತೆಲುಗು ಕೃತಿ **ಮನುಚರಿತ್ರಂ** ಅವನನ್ನು ಎರಡನೆಯ ನರಸಿಂಹನ ಮಗನನ್ನಾಗಿಸುತ್ತದೆ. ಅವನು ಕೃಷ್ಣದೇವನ ಸೋದರಳಿಯನೆಂದು ಕೌಟೊ[6] ಹೇಳುತ್ತಾನೆ.

ಸದಾಶಿವನನ್ನಾದರೊ ಮೇಲೆ ಹೇಳಿದಂತೆ ಕೆಲವು ಪ್ರಮಾಣಗಳು ಕೃಷ್ಣದೇವನ ಭ್ರಾತ್ರೀಯ ಮತ್ತು ರಂಗನ ಮಗನನ್ನಾಗಿಸುತ್ತವೆಯಾದರೆ ಅವನು ಅಚ್ಯುತನ ಮಗನೆಂದು ಇನ್ನೊಂದು ಹೇಳುತ್ತದೆ.

ಕಾಂಜೀವರಮ್‌ದಲ್ಲಿನ ಶಾಸನವೊಂದು[7] ಅಚ್ಯುತನಿಗೆ ವರದಾದೇವಿ ಎಂಬ ಹೆಂಡತಿಯಿದ್ದಳು ಮತ್ತು ಅವಳು ವೆಂಕಟನೆಂಬ ಮಗನನ್ನು ಹೆತ್ತಳು ಎಂದು ಹೇಳುತ್ತದೆ. ವೆಂಕಟನನ್ನು ಪ್ರತ್ಯಕ್ಷವಾಗಿ ಸಿಂಹಾಸನಕ್ಕೇರಿಸಲಾಯಿತು. ಆದರೆ ಅವನು ಅಲ್ಪ ಕಾಲ ಬಾಳಿದ ಮತ್ತು ನಂತರ ತರುಣ ಸದಾಶಿವನನ್ನು ರಾಜನನ್ನಾಗಿ ಮಾಡಲಾಯಿತು.

ಈ ಗೋಜಲಿನ ಮಧ್ಯೆ ಏನಾದರೂ ಆಯ್ಕೆ ಮಾಡುವ ಅಗತ್ಯವಿದ್ದರೆ ನಾನ ಓದುಗರಿಗೆ ಮೇಲಿನ ಪಟ್ಟಿಯಲ್ಲಿನ ವಂಶಾವಳಿಯನ್ನು ತಾತ್ಪೂರ್ತಿಕವಾಗಿ ಸ್ವೀಕರಿಸಲು ಶಿಫಾರಸು ಮಾಡುತ್ತೇನೆ. ಭವಿಷ್ಯದಲ್ಲಿನ ಸಂಶೋಧನೆ ವಿಷಯವನ್ನು ಅಂತಿಮವಾಗಿ ಬಗೆಹರಿಸಲು ಬಿಡೋಣ.

ರಾಮರಾಯನ ಬಗೆಗಾದರೊ ಅವನು ಮತ್ತು ಅವನಿಬ್ಬರು ಸಹೋದರರು ರಂಗರಾಯನೆಂಬವನ ಮಕ್ಕಳಾಗಿದ್ದರೆಂದು ಹಲವಾರು ಶಾಸನಗಳು ಉಲ್ಲೇಖಿಸುತ್ತವೆ. ಅವನ ವಂಶಾವಳಿಯನ್ನು ಕೊಡಲಾಗಿದೆ. ರಾಮಕೃಷ್ಣದೇವನ ಮಗಳನ್ನು ಮದುವೆಯಾದುದು ಸ್ಥಿರಪಟ್ಟ ವಿಷಯವೆಂದು ಪ್ರೊಫೆಸರ್ ಕಿಎಲ್‌ಹಾರ್ನ್ ಪರಿಗಣಿಸುತ್ತಾನೆ.[8] ಅವಳು ಬಹುಶಃ ವಿವಾಹಸಮಯದಲ್ಲಿ ಕೂಸಾಗಿದ್ದಳು. ಕೃಷ್ಣದೇವನ ಮರಣ ಸಮಯಕ್ಕೆ ಅವಳಿಗೊಬ್ಬ ಹದಿನೆಂಟು ತಿಂಗಳಿನ ಸಹೋದರ ನಿದ್ದ—ನೂನಿಜ್ ಹೀಗೆ ಹೇಳುತ್ತಾನೆ—ಆದರೆ ಅವನ ಬಗೆಗಾಗಲಿ ಅಥವಾ ಅವನಿಗೇನಾಯಿತೆಂಬುರ ಬಗೆಗಾಗಲಿ ಇದಕ್ಕಿಂತ ಹೆಚ್ಚು ತಿಳಿಯದು. ಕೃಷ್ಣದೇವನ ಇನ್ನೊಬ್ಬ ಮಗಳನ್ನು ರಾಮರಾಯನ ಸಹೋದರ ತಿರುಮಲನಿಗೆ ಮದುವೆ ಮಾಡಿ ಕೊಡಲಾಗಿತ್ತೆಂದು ಹೇಳಲಾಗುತ್ತದೆ. ರಾಮನ ಹೆಂಡತಿ ಸದಾಶಿವನ ಸಹೋದರಿ ಯಾಗಿದ್ದಳೆಂದು ಕೆಲವು ಪಂಡಿತರ ಅಭಿಮತ.[9]

೧೫೪೨ರಲ್ಲಿ ಅಚ್ಯುತನ ಮರಣ ಸಮಯಕ್ಕೆ ರಾಜಧಾನಿಯಲ್ಲಿ ದೊಂಬಿ ಗಳೆದ್ದುದು ಸ್ಪಷ್ಟ ; ಹಾಗೆ ನೋಡಿದರೆ ಅದು ಭಿನ್ನವಾಗಿರಲು ಸಾಧ್ಯವಿರಲಿಲ್ಲ. ಏಕೆಂದರೆ, ಅವನು ಇಡಿ ಸಾಮ್ರಾಜ್ಯದ ಕೀಲು ತಪ್ಪಿಸಿದಂತೆ, ಯಾರನ್ನು ದೇಶದ ಸಂರಕ್ಷಣೆ ಅವಲಂಬಿಸಿತ್ತೊ, ಆ ಮನ್ನೆಯರನ್ನು ದೂರ ಮಾಡಿದಂತೆ ಮತ್ತು ಅವರಲ್ಲಿ ಅರಸನ ವಿರುದ್ಧ ಬಂಡಾಯ ಮನೋಭಾವವನ್ನು ಕೆರಳಿಸಿದಂತೆ ತೋರುತ್ತದೆ.

ಗ್ಯಾಸ್ಪರ್ ಕೊರಿಯಾ ಆ ಸಮಯಕ್ಕೆ ವಿಜಯನಗರದಲ್ಲಿ ಏನಾಯಿತೆಂಬುದರ ವೃತ್ತಾಂತವನ್ನು ಬಿಟ್ಟುಹೋಗಿದ್ದಾನೆ, ಮತ್ತು ಅದರ ಅರ್ಹತೆ ಏನಿದ್ದರೂ ನಾನು ಅವನ ಕತೆಯನ್ನು ಪುನರುಕ್ತಿಗೊಳಿಸುತ್ತೇನೆ. ಅವನು ತಪ್ಪು ಮಾಡಿ ಅದರ ಕತೆಯನ್ನು ಈಗಾಗಲೆ ಹೇಳಿದ ೧೫೩೫-೩೬ರ ವ್ಯವಹಾರಗಳನ್ನು ಈ ವರ್ಷಕ್ಕೆ ತಂದಿಟ್ಟ. ಏಕೆಂದರೆ, ಅವನು ವಿಜಯನಗರಕ್ಕೆ ಆದಿಲ್‌ಶಾಹನ ಭೇಟಿಯನ್ನು ಪ್ರಸ್ತಾಪಿಸುತ್ತಾನೆ, ಮತ್ತು ಇಂಥ ಎರಡು ಭೇಟಿಗಳಿರದಿದ್ದರೆ ಕೊರಿಯಾ ತಪ್ಪು ಮಾಡಿದಂತೆ ಕಾಣುತ್ತಾನೆ. ಏಕೆಂದರೆ, ಫಿರಿಸ್ತಾನ ದಿನಾಂಕ ನೂನಿಜ್‌ನಿಂದ ದೃಢೀಕೃತವಾಗಿದೆ ಮತ್ತು ಅವನ ಕಾಲದಲ್ಲಿ ರಾಜಾ ಅಚ್ಯುತ ಬದುಕಿದ್ದ.

೧೫೪೨ರಲ್ಲಿ ವಿಜಯನಗರದ ರಾಜ ಅಚ್ಯುತ, ಮೃತರಾಜನ ತಮ್ಮನೂ ಹಕ್ಕಿಲ್ಲದೆ ರಾಜನಾಗಿದ್ದವನೂ ಆದ ಕಕ್ಕನ ವಶದಲ್ಲಿ ತನ್ನ ಚಿಕ್ಕ ಮಗನನ್ನು ಬಿಟ್ಟು ತೀರಿಕೊಂಡ[10] ಎಂದು ಕೊರಿಯಾ[11] ಹೇಳುತ್ತಾನೆ. ಮನ್ನೆಯರು ಆಡಳಿತ ನೋಡಿಕೊಳ್ಳಲು ಇಬ್ಬರು ಮಂತ್ರಿಗಳನ್ನು ನೇಮಿಸಿ ಹುಡುಗನನ್ನು ಸ್ವತಂತ್ರ ವಾಗಿರಿಸಲು ಬಯಸಿದರು ; ಆದರೆ, ಹಾಗೆ ಮಾಡುವುದರಿಂದ ತಾನು ಎಲ್ಲ ಅಧಿಕಾರ ಕಳೆದುಕೊಳ್ಳಲಿದ್ದುದರಿಂದ ಕಕ್ಕನು ಅದಕ್ಕೆ ಒಪ್ಪಲಿಲ್ಲ, ಮತ್ತು ತನ್ನ ಪಕ್ಷಕ್ಕೆ ಕೆಲವು ಸಂಗಡದವರನ್ನು ಒಲಿಸಿಕೊಳ್ಳಲು ಹಂಚಿಕೆ ಮಾಡಿದನು. ಬೇಸರ ಪಟ್ಟುಕೊಂಡ ಮನ್ನೆಯರು ಪ್ರತ್ಯೇಕವಾದರು, ತಮ್ಮ ನೆಲೆಗಳಿಗೆ ಮರಳಿದರು ಮತ್ತು ಒಳ್ಳೆಯ ಆಡಳಿತದ ಆಸೆ ಅಳಿದು ಪ್ರತಿಯೊಬ್ಬನೂ ತನ್ನ ಪ್ರಾಂತ್ಯದಲ್ಲಿ ಸ್ವತಂತ್ರನಾಗ ತೊಡಗಿದ. ಬಾಲಕನ ರಾಣಿಮಾತೆ ತನ್ನ ನೆರವಿಗೆ ಬಂದು ತನ್ನ ಮಗನಿಗೆ ರಾಜ್ಯ ಕೊಡಿಸುವಂತೆ ಆದಿಲ್ ಶಾಹನನ್ನು ಬೇಡಿಕೊಂಡಳು ಮತ್ತು ಈ ಅನುಗ್ರಹಕ್ಕೆ ಪ್ರತಿಯಾಗಿ ಅಪಾರ ಸಂಪತ್ತು ನೀಡುವ ವಚನವಿತ್ತಳು. ಸುಲ್ತಾನನು ಈ ಉದ್ದೇಶಕ್ಕಾಗಿ ವಿಜಯನಗರಕ್ಕೆ ಭೇಟಿ ನೀಡುವುದಕ್ಕಾಗಿ ಹೊರಟ, ಆದರೆ ದಾರಿಯಲ್ಲಿ ಮಂತ್ರಿಯ ಗುಪ್ತದೂತರು ಅವನನ್ನು ಕಂಡು ವಿಪುಲ ಕಾಣಿಕೆಗಳಿಂದ ಅವನನ್ನು ಕೊಂಡುಕೊಂಡರು. ಕೋಟೆಯೊಂದರಲ್ಲಿ ಬಂಧನದಲ್ಲಿರಿಸಲಾಗಿದ್ದ ನಿಜವಾದ ಹಕ್ಕುಳ್ಳ ರಾಜ (ಬಹುಶಃ ಕಕ್ಕ ರಂಗ)ನನ್ನು ಆಗ ಸ್ವತಂತ್ರಗೊಳಿಸ ಲಾಯಿತು. ಮತ್ತು ಅವನೂ ಬಿಜಾಪುರದ ಸುಲ್ತಾನನ ನೆರವನ್ನು ಕೋರಿದ. ನೆಪಮಾತ್ರಕ್ಕೆ ನಿಜವಾದ ರಾಜನಿಗೆ ನೆರವು ನೀಡಲೋಸುಗ ಆದರೆ ನಿಜವಾಗಿ

ರಾಜ್ಯವನ್ನು ತಾನೇ ಪಡೆದುಕೊಳ್ಳಲು ಸುಲ್ತಾನನು ಈ ಅವಕಾಶದ ಪ್ರಯೋಜನ ಪಡೆದು ಪುನಃ ಹೊರಟ. ತಮ್ಮ ಸುರಕ್ಷಿತತೆಯ ಬಗೆಗೆ ಭಯಗೊಂಡ ಹಿಂದೂಗಳು ಮೃತರಾಜನ ಸಹೋದರನನ್ನು ಸಿಂಹಾಸನದ ಮೇಲಿರಿಸಿ ವಿಜಯನಗರದ ಬಳಿ ಆದಿಲ್ ಶಾಹನನ್ನು ಸೋಲಿಸುವಲ್ಲಿ ಯಶಸ್ವಿಯಾದರು. ನೂತನ ರಾಜ ಭವಿಷ್ಯದಲ್ಲಿ ತನ್ನ ಸ್ಥಾನವನ್ನು ಭದ್ರಗೊಳಿಸಿಕೊಳ್ಳಲೋಸುಗ ತನ್ನ ಪ್ರತಿಸ್ಪರ್ಧಿಯಾದ ಹುಡುಗನನ್ನೂ ಅವನ ಕಕ್ಕರಲ್ಲಿಬ್ಬರನ್ನೂ ಮೃತರಾಜ (ಅಚ್ಯುತ)ನ ಭ್ರಾತ್ರೀಯನನ್ನೂ ಕೊಲ್ಲಿಸಿದ.[12] ಆ ಮೇಲೆ, ಪ್ರಮುಖ ಮನ್ನೆಯರ ಶಕ್ತಿಗೆ ಭಯಪಟ್ಟು ಅವರನ್ನು ದರಬಾರಿಗೆ ಕರೆದು ಮೊದಲು ಆಗಮಿಸಿದವರ ಕಣ್ಣು ಕೀಳಿಸಿದ. ಇದರಿಂದಾಗಿ ಮಿಕ್ಕವರು ಬಲು ಕೋಪಗೊಂಡ ತಮ್ಮ ಮನೆಗಳಿಗೆ ಹಿಂತಿರುಗಿ ಸುಲ್ತಾನನೊಂದಿಗೆ ಸಂಚು ಹೂಡಲಾರಂಭಿಸಿದರು. ತಮ್ಮ ನೆರವಿನ ಭರವಸೆಯಿತ್ತು ದೇಶ ಈ ರಾಕ್ಷಸನಿಂದ ಮುಕ್ತವಾದರೆ ಸಾಕು ರಾಜ್ಯವನ್ನು ತಾನೇ ಇಟ್ಟುಕೊಂಡರೂ ಸರಿಯೆ ಎಂದು ಹೇಳಿ ಅವರು ಕ್ರೂರ ರಾಜನನ್ನು ಪದಚ್ಯುತಗೊಳಿಸುವಂತೆ ಸುಲ್ತಾನನನ್ನು ಆಗ್ರಹಪಡಿಸಿದರು. ಆದುದರಿಂದ ಆದಿಲ್‌ಶಾಹ ಮುಂದೆ ಸಾಗಿ ವಿಜಯನಗರ ರಾಜ್ಯವನ್ನು ಪ್ರವೇಶಿಸಿದ ಮತ್ತು ಅನೇಕರು ಅವನನ್ನು ಸಾರ್ವಭೌಮನೆಂದು ಬರಮಾಡಿಕೊಂಡರು. ಆದರೆ ಅವನೂ ಸಹ ಎಂಥ ಅಸಹನೀಯ ಮತ್ತು ದರ್ಪದ ಠೀವಿ ವಹಿಸಿಕೊಂಡನೆಂದರೆ ಕೊನೆಗೆ ತನ್ನ ಸುರಕ್ಷಿತತೆಯ ಬಗೆಗೆ ಭಯಪಟ್ಟು ಬಿಜಾಪುರಕ್ಕೆ ಮರಳಬೇಕಾಯಿತು. "ಏತನ್ಮಧ್ಯೆ, ಮೃತರಾಜನ[13] ಪೂರ್ವಾಧಿಕಾರಿಯಾಗಿದ್ದ ರಾಜನ ಸಹೋದರಿಯನ್ನು ಮದುವೆಯಾಗಿದ್ದ, ಪಾಲಿಕೇತ್‌ನ ಮಹಾಮನ್ನೆಯನೊಬ್ಬ ವಿಜಯನಗರ ಸಿಂಹಾಸನವನ್ನು ಹಿಡಿದುಕೊಂಡು ನೂತನ ರಾಜನಾದ ಮತ್ತು ಕೊನೆಗೆ ರಾಜ್ಯವನ್ನೂ ಪಡೆದುಕೊಂಡ."[14]

ಸೆನ್ಹೊರ್ ಲೋಪ್ಸ್ ಸರಿಯಾಗಿಯೆ ಅಭಿಪ್ರಾಯ ಪಡುವಂತೆ ಈಗ ಸಧ್ಯ ಇದೆಲ್ಲದರ ಸತ್ಯವನ್ನು ಅರಿಯುವುದು ಅಸಾಧ್ಯವೆಂದು ತೋರುತ್ತದೆ, ಮತ್ತು ಈ ವಿಷಯ ಕೈಬಿಟ್ಟು, ೧೫೪೨ ರಿಂದ ೧೫೬೭ರ ವರೆಗಿದ್ದ ಸದಾಶಿವನ ಆಳ್ವಿಕೆಯ ಘಟನೆಗಳನ್ನು ಪರಿಗಣಿಸುವತ್ತ ಹೊರಳುವುದು ಒಳ್ಳೆಯದೆಂದು ನನಗೆನಿಸುತ್ತದೆ. ಪ್ರತಿಯೊಬ್ಬ ಚರಿತ್ರಕಾರನೂ "ಬಾಯಿಂದ ಬಾಯಿಗೆ ಹರಡಿದ ಮತ್ತು ಆ ವಿಧಾನದಲ್ಲಿ ವಿಕೃತವಾದ ಕತೆಗಳಿಂದ"[15] ತನ್ನ ತಿಳಿವಳಿಕೆ ಪಡೆದನೆಂಬುದು ಸಾಕಷ್ಟು ಸ್ಪಷ್ಟವಿದೆ.

೧೫೪೩ರಲ್ಲಿ ಬರಹಾನ್ ನಿಜಾಮ್ ಶಾಹ ರಾಮರಾಜನೊಂದಿಗೆ ಮತ್ತು ಗೋಲ್ಕೊಂಡದ ಸುಲ್ತಾನ ಜಮ್‌ಶಿದ್ ಕುತುಬ್ ಶಾಹನೊಂದಿಗೆ ಮೈತ್ರಿ ಮಾಡಿಕೊಂಡು ಆದಿಲ್ ಶಾಹನ ಮೇಲೆ ಆಕ್ರಮಣ ಮಾಡಿದ. ಅಷರಿಂದಾಗಿ, ಆದಿಲ್ ಶಾಹನ ತೊಂದರೆಗಳ ಪ್ರಯೋಜನ ಪಡೆದು, "ಏಕಕಾಲಕ್ಕೆ ಮೂರು ಬಲಿಷ್ಠ

ರಾಜರಿಂದ ಮೂರು ಪ್ರತ್ಯೇಕ ಎಡೆಗಳಲ್ಲಿ ಆಕ್ರಮಣ ಮಾಡಲ್ಪಟ್ಟ ಬೀಜಪೂರ ತುಂಬಾ ಅಪಾಯ ಮತ್ತು ಅವ್ಯವಸ್ಥೆಗೊಳಗಾಗುವುದೆಂದು"[16] ರಾಮರಾಜ ರಾಯಚೂರು ಮತ್ತು ದೋಆಬಗಳನ್ನು ನೆಲೆಗೊಳಿಸಲು ವೆಂಕಟಾದ್ರಿಯನ್ನು ಕಳಿಸಿದ. ತನ್ನ ಪೂರ್ವಾಧಿಕಾರಿಗಳ ಪರಂಪರೆಗನುಗುಣವಾಗಿಯೇ ಬಿಜಾಪುರದ ಹೊಸ ಸುಲ್ತಾನನು "ಬೆಳಗಾಂವಿಯಿಂದ ಅಸದಖಾನನನ್ನು ತನ್ನಲ್ಲಿಗೆ ಕರೆಸಿಕೊಂಡು ಗಾಬರಿಪಡಿಸುವ ಬಗೆಗೆ ಅವನ ಸಲಹೆ ಕೇಳಿದ. ತತ್ಪರಿಣಾಮವಾಗಿ ಅವನು ಸೊಲ್ಲಾಪುರದ ಸುತ್ತಲಿನ ಫಲವತ್ತಾದ ಜಿಲ್ಲೆಗಳನ್ನು ಬರಹನನಿಗೆ ಬಿಟ್ಟುಕೊಟ್ಟು ಶಾಂತಿ ಒಪ್ಪಂದ ಮಾಡಿಕೊಂಡು ವಿಜಯನಗರದೊಂದಿಗೆ ಒಪ್ಪಂದ ಮಾಡಿಕೊಳ್ಳಲೋಸುಗ ರಾಯಭಾರಿಗಳನ್ನು ಕಳುಹಿಸಿದ. ಇದಾಗಿ ಮಿತ್ರರಾಜರು ಹಿಂತಿರುಗಿದನಂತರ ಅಸದಖಾನ ಗೋಲ್ಕೊಂಡದ ಕುತುಬ್ ಶಾಹನ ವಿರುದ್ಧ ದಂಡೆತ್ತಿ ಹೋಗಿ ಅವನ ರಾಜಧಾನಿಯ ಗೋಡೆಯೊಳಗೇ ಅವನನ್ನು ಸೋಲಿಸಿ ವೈಯುಕ್ತಿಕ ಹೋರಾಟದಲ್ಲಿ ತನ್ನ ಕುಡುಗತ್ತಿಯಿಂದ ಅವನ ಮುಖದಲ್ಲಿ ತೀವ್ರ ಗಾಯವನ್ನುಂಟುಮಾಡಿದ.[17]

ಈ ಕಾಲಾವಧಿಯಲ್ಲಿ ಪೋರ್ತುಗೀಜರು ಬಹಳ ಕಾರ್ಯಶೀಲರಾಗಿದ್ದರು, ಮತ್ತು ಇತರ ಹೆಚ್ಚೂಕಡಿಮೆ ಯಶಸ್ವಿ ಸಾಹಸಗಳು ಸೇರಿದಂತೆ ಮಂಡಲಾಧಿಪತಿ ಅಫೊನ್ಸೊದ ಸೌಸಾ ಅವಳು ಪೋರ್ತುಗಾಲದ ರಾಜನಿಗೆ ಸಲ್ಲಬೇಕಿದ್ದ ಕಪ್ಪ ತಡೆಹಿಡಿದಳೆಂಬ ನೆಪದ ಮೇಲೆ ಭಟ್ಕಳದ ರಾಣಿಯ ಪ್ರದೇಶದ ಮೇಲೆ ಆಕ್ರಮಣ ಮಾಡಿದ ಮತ್ತು ನಾಡನ್ನು ಬೆಂಕಿ ಮತ್ತು ಕತ್ತಿಯಿಂದ ನಾಶಮಾಡಿದ. ಅವಳ ನಗರವನ್ನು ಸುಡಲಾಯಿತು, ಹಿಂದೂಗಳನ್ನು ದೊಡ್ಡ ಸಂಖ್ಯೆಯಲ್ಲಿ ಕೊಲ್ಲಲಾಯಿತು ಮತ್ತು ರಾಣಿಯನ್ನು ಶರಣಾಗತವಾಗುವ ಸ್ಥಿತಿಗೆ ಇಳಿಸಲಾಯಿತು.

೧೫೪೮ನೆಯ ವರ್ಷದ ಸುಮಾರಿಗೆ—ಈ ಕಾಲ ಇನ್ನೂ ಅನಿಶ್ಚಿತವಿದೆ—ಸುಲ್ತಾನ ಬರಹಾನ್ ರಾಮರಾಜನ ಚಿತಾವಣೆಯ ಮೇರೆಗೆ ಪುನಃ ಇಬ್ರಾಹಿಮ್ ಆದಿಲ್‌ನ ಮೇಲೆ ಆಕ್ರಮಣ ಮಾಡಿದ, ಆದರೆ ಸಂಪೂರ್ಣವಾಗಿ ಸೋಲಿಸಲ್ಪಟ್ಟ.

"ಈ ವಿಜಯದ ನಂತರ ಸುಲ್ತಾನನು (ಇಬ್ರಾಹಿಮ್) ಸೊಕ್ಕಿನವನೂ ದರ್ಪದವನೂ ಆಗಿ ನಿಜಾಮ್‌ಶಾಹನ ರಾಯಭಾರಿಗಳೊಂದಿಗೆ ತಿರಸ್ಕಾರಯುತವಾಗಿ ವ್ಯವಹರಿಸಿದ, ಮತ್ತು ತನ್ನ ಪ್ರಜೆಗಳೊಂದಿಗೂ ಕ್ರೂರವಾಗಿ ನಡೆದುಕೊಂಡ. ತನ್ನ ಪ್ರಮುಖ ಸರದಾರರಲ್ಲಿ ಅನೇಕರನ್ನು ಚಿಕ್ಕ ಅಪರಾಧಗಳಿಗಾಗಿ ಕೊಲ್ಲಿಸಿದ ಮತ್ತು ಇತರರನ್ನು ಘೋರವಾಗಿ ಶಿಕ್ಷಿಸಿದ. ಇದು ಅವನ ಆಡಳಿತದ ಬಗೆಗೆ ಅಸಮಾಧಾನವನ್ನುಂಟುಮಾಡಿತು."

ಬರಹಾನ್ ಪುನಃ ಬಿಜಾಪುರ ನಾಡಿನ ಮೇಲೆ ಆಕ್ರಮಣ ಮಾಡಲಾಗಿ ಇಬ್ರಾಹಿಮನನ್ನು ಪದಚ್ಯುತಗೊಳಿಸಲಾಗಿ ಅವನ ಸಹೋದರ ಅಬ್ದುಲ್ಲಾನನ್ನು ಸಿಂಹಾಸನವೇರಿಸಲು ಒಂದು ಸಂಗಡ ಹುಟ್ಟಿಕೊಂಡಿತು. ಈ ರಾಜಕುಮಾರ ಸಂಚು

ಪತ್ತೆಯಾದುದನ್ನು ಕಂಡು ಗೋವಾಕ್ಕೆ ಸುರಕ್ಷಿತತೆಗಾಗಿ ಓಡಿಹೋದ. ಅಲ್ಲಿ ಅವನನ್ನು ಚನ್ನಾಗಿ ಬರಮಾಡಿಕೊಳ್ಳಲಾಯಿತು. ಆದರೆ, ಬಿಜಾಪುರದ ಪ್ರಾಂತಗಳ ಶಾಂತಿಯನ್ನು ಇನ್ನು ಮುಂದೆ ಅವನು ಭಂಗಗೊಳಿಸದಂತಹ ದೂರದ ಸ್ಥಳಕ್ಕೆ ಅಬ್ದುಲ್ಲಾನನ್ನು ಕಳಿಸಿಕೊಟ್ಟದಾದರೆ ಪೋರ್ತುಗೀಜರಿಗೆ ಕೆಲವು ಪ್ರಾಂತಗಳನ್ನು ಕೊಡುವ ಭರವಸೆಯನ್ನು ಇಬ್ರಾಹಿಮ್ ನೀಡಿದಾಗ ದ ಸೌಸಾ ಕರಾರುಗಳನ್ನು ಒಪ್ಪಿಕೊಂಡ. ಹಾಗೂ ಪೋರ್ತುಗಾಲದ ರಾಜನಿಗೆ ಸ್ಯಾಲ್ಸೆಟ್ ಮತ್ತು ತನಗೆ ವೈಯಕ್ತಿಕ ಕಾಣಿಕೆಯಾಗಿ ಅಸದಖಾನ ಬೆಳಗಾಂವಿಯಲ್ಲಿ ಕೂಡಿಹಾಕಿದ್ದ ಅಪಾರ ಸಂಪತ್ತನ್ನೆಲ್ಲ ಪಡೆದ. ಆದರೆ, ಸಾಧ್ಯವಿದ್ದಷ್ಟೆಲ್ಲ ಲಂಚ ಜೇಬಿಗಿಳಿಸಿ ಅವನು ಅಬ್ದುಲ್ಲಾನನ್ನು ಕಣ್ಣನೋರಿನವರೆಗೆ ಮಾತ್ರ ಒಯ್ದು ಮತ್ತು ಆ ಮೇಲೆ ಗೋವಾಕ್ಕೆ ಹಿಂತಿರುಗಿ ಕರೆತಂದ. ದ ಸೌಸಾನ ಉತ್ತರಾಧಿಕಾರಿಯಾಗಿ ದ ಕ್ಯಾಸ್ಟ್ರೊ ಮಂಡಲಾಧಿಪತಿಯಾದಾಗ ಬಂಡುಕೋರ ರಾಜಕುಮಾರನನ್ನು ಒಪ್ಪಿಸಲು ಒಪ್ಪಲಿಲ್ಲ. ಈ ಇಬ್ಬಗೆತನದಿಂದ ಸುಲ್ತಾನನಿಗೆ ಬಹಳ ತೊಂದರೆಯಾಗಿ ಅವನು ೧೫೪೮ರ ಫೆಬ್ರವರಿಯಲ್ಲಿ ಶಾಂತಿ ಒಪ್ಪಂದವನ್ನು ಮಾಡಿಕೊಂಡ. ಆದರ ಕರಾರುಗಳಲ್ಲೊಂದು ಹೀಗಿದೆ; ವಿಶೇಷವಾಗಿ ಹೆಸರಿಸದ ಇತರರೂ ಸೇರಿದಂತೆ ದಕ್ಖನಿಗೆ ಇಲ್ಲವೆ ನಿಜಾಮ್ ಶಾಹನ ಪ್ರದೇಶಗಳಿಗೆ ಇಲ್ಲವೆ ವಿಜಯನಗರ ರಾಜನ ಪ್ರದೇಶಗಳಿಗೆ ಸಂಬಂಧಿಸಿದ ಯಾವುದೆ ವ್ಯಕ್ತಿಯನ್ನು ಅಬ್ದುಲ್ಲಾನೊಂದಿಗಾಗಲಿ ಅವನ ಕುಟುಂಬದೊಂದಿಗಾಗಲಿ ಯಾವುದೆ ಸಂಪರ್ಕವನ್ನು ಬೆಳೆಸಲು ಆದಿಲ್‌ಶಾಹ ಕಳಿಸಬೇಕೆಂದು ಯೋಚಿಸಿದ್ದ ರಾಯಭಾರಕ್ಕೆ ಪೋರ್ತುಗಾಲದ ರಾಜನಿಂದ ಉತ್ತರ ಬರುವವರೆಗೆ ಅನುಮತಿಸ ಕೂಡದು. ಇನ್ನಿತರ ಕರಾರುಗಳೂ ಇದ್ದವು. ಪೋರ್ತುಗೀಜರು ಇವುಗಳನ್ನು ಪಾಲಿಸದಿದ್ದಾಗ ಸುಲ್ತಾನನು ೧೫೫೭ರಲ್ಲಿ ಸ್ಯಾಲ್ಸೆಟ್ ಮತ್ತು ಬಾರ್ಡ್ಸ್ ಪ್ರಾಂತಗಳಲ್ಲಿ ಕಳಿಸಿಕೊಟ್ಟ ಕೆಲವು ಸೈನ್ಯದಳಗಳನ್ನು ಘೋರ ಕದನದ ನಂತರ ರಾಜಪ್ರತಿಸಿಧಿ ಹೊರಗೆ ಅಟ್ಟಿದ.

ಆ ಮೇಲೆ ದ ಕ್ಯಾಸ್ಟ್ರೊ ೧೯ನೆಯ ಸಪ್ಟಂಬರ ೧೫೪೭ರಂದು ವಿಜಯನಗರದೊಂದಿಗೆ ಮತ್ತು ಅದೇ ವರ್ಷದ ಆರನೆಯ ಅಕ್ಟೋಬರದಂದು ಅಹಮದನಗರದೊಂದಿಗೆ ಒಪ್ಪಂದಗಳನ್ನು ಮಾಡಿಕೊಂಡ. ಮೊದಲನೆಯದರಿಂದ ಗೋವಾದ ಅಶ್ವವ್ಯಾಪಾರದ ಏಕಸ್ವಾಮ್ಯದಲ್ಲಿ ಹಿಂದೂ ರಾಜನನ್ನು ಸುರಕ್ಷಿತಗೊಳಿಸಲಾಯಿತು;[18] ಮತ್ತು ಎರಡನೆಯದರಿಂದ ಪೋರ್ತುಗೀಜರು ಮತ್ತು ನಿಜಾಮ್‌ಶಾಹ ಮಧ್ಯೆ ರಕ್ಷಣೋಪಾಯದ ಮೈತ್ರಿಯನ್ನು ಬೆಸೆಯಲಾಯಿತು. ಇದರಿಂದ ಬಿಜಾಪುರದ ವಿರುದ್ಧ ತ್ರಿಪಕ್ಷೀಯ ಒಕ್ಕೂಟ ರಚಿತವಾಯಿತು.

ಇದಾದ ಕ್ಷಿಪ್ರದಲ್ಲಿಯೆ ಗೋವಾದ ಭೂಖಂಡಗಳ ಮೇಲೆ ಬಿಜಾಪುರದ ಸೈನಿಕದಳಗಳು ಇನ್ನೂ ಅಧಿಕ ನಿರ್ಧಾರಿತ ಆಕ್ರಮಣ ಮಾಡಿದರು ಮತ್ತು

ಸಂಭವಿಸಿದ ಯುದ್ಧದಲ್ಲಿ ಆದಿಲ್ ಶಾಹನ ಪ್ರಧಾನ ದಂಡನಾಯಕರಲ್ಲೊಬ್ಬ ಹತನಾದ.

೧೫೪೮ರಲ್ಲಿ ರಾಜಪ್ರತಿನಿಧಿ ಬಿಜಾಪುರದೊಂದಿಗೆ ಮತ್ತು ಭಟ್ಕಳದ ರಾಣಿಯೊಂದಿಗೆ ಇನ್ನೂ ಅನುಕೂಲವಾದ ಏರ್ಪಾಟು ಮಾಡಿಕೊಂಡ.

ದ ಸೌಸಾ ಮತ್ತು ಅಸದಖಾನ ಇಬ್ಬರೂ ಅಬ್ದುಲ್ಲಾನ ಬೆಂಬಲಿಗ ಪಂಕ್ತಿಗಳನ್ನು ಸೇರಿದರು. ಇಬ್ರಾಹಿಮ್‌ನ ಪತನಾನಂತರ ಕೊಂಕಣದ ಎಲ್ಲ ಪ್ರದೇಶಗಳನ್ನು ಪೋರ್ತುಗಾಲದ ರಾಜನಿಗೆ ಕೊಡುವುದಾಗಿ ಅಸದಖಾನ ಭರವಸೆಯಿತ್ತ, ರಾಜಪ್ರತಿನಿಧಿ ಮನಸ್ಸು ಬದಲಿಸಿ ಹಿಂತೆಗೆದ, ಅಸದ ಖಾನನ ಮರಣ ಆ ಬದಿಯಲ್ಲಿನ ಎಲ್ಲ ಸಂಚುಗಳನ್ನು ಕೊನೆಗಾಣಿಸಿತು ಎಂದು ಪೋರ್ತುಗೀಜ ಚರಿತ್ರಕಾರರು ಹೇಳುತ್ತಾರೆ.

ಆದರೆ, ಈ ಅವಧಿಯಲ್ಲಿನ ಅಸದಖಾನನ ನಡತೆಯ ಬಗೆಗಿನ ಫಿರಿಸ್ತಾನ ವೃತ್ತಾಂತ ಅವನ ದಿನಾಂಕಗಳಂತೆಯೆ ಸಂಪೂರ್ಣ ಭಿನ್ನವಾಗಿದೆ. ತನ್ನ ಯಜಮಾನನ ಉದಾಸೀನ ತನ್ನೊಂದಿಗೆ ಅವನ ಶೀತಲತೆ, ಸಂಶಯದ ಮನೋಭಾವಗಳಿಂದ ವ್ಯಥೆಗೊಳಪಟ್ಟಿದ್ದರೂ ಖಾನನು ಮಾತ್ರ ತನ್ನ ಕ್ರಿಯೆಗಳಲ್ಲಿ ಸ್ಥಿರನಿಷ್ಠೆ ಹೊಂದಿದ್ದ ಮತ್ತು ಸಂಚನ್ನು ಹತ್ತಿಕ್ಕಲು ತನಗೆ ಸಾಧ್ಯವಿದ್ದುದನ್ನೆಲ್ಲ ಮಾಡಿದ ಎಂದು ಅವನು ಹೇಳುತ್ತಾನೆ. ಪೋರ್ತುಗೀಜರ ಬಗೆಗಾದರೂ ಈ ಚರಿತ್ರೆಕಾರ ದೃಢವಾಗಿ ಹೇಳುವುದೇನೆಂದರೆ ಅಬ್ದುಲ್ಲಾನ ಉದ್ದೇಶವನ್ನು ಪರಿತ್ಯಜಿಸುವುದಕ್ಕೆ ತೀರ ವ್ಯತಿರಿಕ್ತವಾಗಿ ಅವರು ನಿಜಾಮು ಶಾಹನ ನೆರವು ಪಡೆದು ಗೋವಾದಿಂದ ಬಿಜಾಪುರದತ್ತ ಪ್ರತ್ಯಕ್ಷವಾಗಿ ದಂಡೆತ್ತಿ ಸಾಗಿದರು ಮತ್ತು ಬೆಳಗಾಂವಿಯ ಸಮೀಪ ತಲುಪಿದರು ಕೂಡ; ಆದರೆ, ಅಸದ ಖಾನನನ್ನು ಭ್ರಷ್ಟವಾಗಿಸುವುದಸಾಧ್ಯವೆಂದು ಸ್ಪಷ್ಟವಾದಾಗ ಬಿಜಾಪುರದ ಸರದಾರರು ತಮ್ಮ ಸಾರ್ವಭೌಮನ ನಿಷ್ಠೆಗೆ ಮರಳಿದರು ಮತ್ತು ಒಪ್ಪಂದ ಮುರಿಯಿತು. ಸುಲ್ತಾನ ಇಬ್ರಾಹಿಮ ಫೆಬ್ರುವರಿ ೧೫೪೯[19]ರಲ್ಲಿ ಬೆಳಗಾಂವಿಯತ್ತ ಸಾಗಿದ, ಆದರೆ, ದಾರಿಯಲ್ಲಿ ಅಸದ ಸತ್ತ ಸುದ್ದಿ ಕೇಳಿದ.

ಬೆಳಗಾಂವಿಗೆ ಬಂದಾಗ ಬಿಜಾಪುರದ ಸುಲ್ತಾನನ ನಡತೆಯ ಬಗೆಗಿನ ಫಿರಿಸ್ತಾನ ವೃತ್ತಾಂತ ಹೇಳದಿರಲಾಗದಷ್ಟು ಧ್ವನಿಪೂರ್ಣವಾಗಿದೆ. ಈ ನಿಧಿಗಳು ತನ್ನ ಸುದೀರ್ಘ ಜೀವನದುದ್ದಕ್ಕೂ ಅತ್ಯಂತ ನಿಷ್ಠಾವಂತ, ಧೈರ್ಯಶಾಲಿ ಮತ್ತು ದುಸ್ತರವಾದ ಆಪತ್ತುಗಳಿಂದ ಅನೇಕ ಬಾರಿ ತಾನೆ ಖುದ್ದಾಗಿ ಪಾರುಮಾಡಿದ ತನ್ನ ಪ್ರಭುವಿನ ಅತ್ಯಂತ ಸಮರ್ಪಿತ ಅನುಯಾಯಿಯಾಗಿದ್ದನೆಂದು ಚರಿತ್ರಕಾರ ಕಂಠೋಕ್ತವಾಗಿ ಹೇಳುವ ಮನುಷ್ಯನ ಸಂಚಿತ ಆಸ್ತಿ ಇದ್ದಾಗ್ಯೂ ರಾಜ "ಅವನ (ಅಸದ ಖಾನನ) ದುಃಖಿಸುತ್ತಿರುವ ಕುಟುಂಬದವರಿಗೆ ಖಿಲಾತ್ ಮತ್ತು ರಾಜಾನುಗ್ರಹದ ಭರವಸೆ ನೀಡಿದ. ಆದರೆ ಅವನ ಎಲ್ಲ ಆಸ್ತಿ ಮತ್ತು ಸಂಪತ್ತನ್ನು ತನ್ನ

ಉಪಯೋಗಕ್ಕಾಗಿಯೆ ತೆಗೆದುಕೊಂಡ" ಎಂದು ಅವನು ಹೇಳುತ್ತಾನೆ. ಅಸದ ಖಾನ ಸಂಚಯಿಸಿದ ನಿಧಿಗಳ ಗತಿಯ ಬಗೆಗಿನ ಪೋರ್ತುಗೀಜ ವೃತ್ತಾಂತವನ್ನು ಶ್ರೀ ಡ್ಯಾನ್ವರ್ಸ್ ನೀಡಿದ್ದಾನೆ. ತತ್ವಶೂನ್ಯವಾದ ಬಂಡಕೋರನೆಂದು ಅಸದ ಖಾನನ್ನು ನಿರೂಪಿಸುತ್ತ ಅವನು ಹೀಗೆ ಬರೆಯುತ್ತಾನೆ :

"ಸ್ಯಾಲ್ಸೆಟ್ ಮತ್ತು ಬಾರ್ಡ್ಸ್‌ಗಳನ್ನು ಪೋರ್ತುಗಾಲದ ರಾಜನಿಗೆ ಒಪ್ಪಿಸು ವುದಲ್ಲದೆ ಆದಿಲ್ ಖಾನನು ಮಾರ್ಟಿನ್ ಅಫೊನ್ಸೊ (ರಾಜ ಪ್ರತಿನಿಧಿ ದ ಸೌಸಾ) ನಿಗೆ ಅಸದಖಾನ ತನ್ನ ಬಂಡನ್ನು ಕಾರ್ಯಗತಗೊಳಿಸಲೋಸುಗ ಸಂಗ್ರಹಿಸಿದ್ದ ಅಪಾರ ನಿಧಿಯನ್ನು ಕೊಟ್ಟಿದ್ದ. ಹತ್ತು ದಶಲಕ್ಷ ಡುಕಟ್‌ಗಳಷ್ಟಿತ್ತೆಂದು ಹೇಳಲಾದ ಅದರಲ್ಲಿನ ಒಂದು ದಶಲಕ್ಷ ಮಾತ್ರ ಮಾರ್ಟಿನ್ ಅಫೊನ್ಸೊ ಕೈಗೆ ಬಂತು. ಅವನು ಈ ಮೊತ್ತದ ಸುಮಾರು ಅರ್ಧವನ್ನು ಪೋರ್ತುಗಾಲಕ್ಕೆ ತನ್ನ ಸ್ವಂತ ಉಪಯೋಗಕ್ಕೆ ಕಳಿಸಿದನೆಂದು ಕೆಲವು ವೃತ್ತಾಂತಗಳು ಹೇಳಿದರೆ ಪೋರ್ತುಗಾಲದಲ್ಲಿ ರಾಜನ ಉಪಯೋಗಕ್ಕಾಗಿ ಕೆಲವೊಂದನ್ನು ಸ್ವದೇಶಕ್ಕೆ ಕಳಿಸುವುದಲ್ಲದೆ ಅದರ ಬಹುಭಾಗ ವನ್ನು ಭಾರತದಲ್ಲಿ ಸಾರ್ವಜನಿಕ ಸೇವೆಗಾಗಿ ಬಳಸಿದನೆಂದು ಇನ್ನಿತರ ವೃತ್ತಾಂತಗಳು ಒತ್ತಿ ಹೇಳುತ್ತವೆ."[20]

ಎರಡೂ ವೃತ್ತಾಂತಗಳು ವಿವರಗಳಲ್ಲಿ ಬಹಳ ಭಿನ್ನವಾಗಿವೆಯೆಂಬುದನ್ನು ಕಾಣ ಬಹುದು.

ಈ ಸಮಯದಲ್ಲಿ, ಜಮ್‌ಶಿದ್‌ನ ತಮ್ಮ ಮತ್ತು ಗೋಲ್ಕೊಂಡದ ಸಿಂಹಾಸನಕ್ಕೆ ಸಂಭಾವ್ಯ ಉತ್ತರಾಧಿಕಾರಿಯಾಗಿದ್ದ ಇಬ್ರಾಹಿಮ್ ಕುತುಬ್ ಶಾಹ ವಿಜಯನಗರ ದಲ್ಲಿದ್ದ. ಅವನು ಜಮುಶಿದ್‌ನ ಸ್ವೈರ ಹಾಗೂ ಕ್ರೂರ ಸ್ವಭಾವಕ್ಕಂಜಿ ಅಲ್ಲಿಗೆ ಓಡಿ ಹೋಗಿದ್ದ. ಅವನ ಬಗೆಗೆ ಫಿರಿಸ್ತಾ ಹೇಳುವ ಕತೆ[21] ಇಲ್ಲಿ ಪುನರುಕ್ತಿಗೊಳಿಸಲರ್ಹ ವಾಗಿದೆ. ಹಾಗೆ ಮಾಡಲು ಕೆಲವುಟ್ಟಿನ ಕಾರಣವೆಂದರೆ, ಆ ಘಟನೆ ಹಿಂದೂ ರಾಜಧಾನಿ ಯಲ್ಲಿ ಸಂಭವಿಸಿತೆಂಬುದು ಇನ್ನು ಕೆಲವುಟ್ಟಿನ ಕಾರಣವೆಂದರೆ ನೂನಿಜ್ ಹೇಳುವಂತೆ ಆಗಿನ ಕಾಲದಲ್ಲಿ ಬಹಳ ಪ್ರಚಲಿತವಿದ್ದ ದ್ವಂದ್ವಯುದ್ಧ ಪದ್ಧತಿಯನ್ನು ಉದಾಹರಿಸು ತ್ತದೆಂಬುದು[22] ಕೆಲವುಟ್ಟಿನ ಕಾರಣವೆಂದರೆ ವಿಜಯನಗರದ ರಾಜನಿಗೆ ತನ್ನ ಪ್ರಾಂತ ಗಳ ಆದಾಯಗಳನ್ನು ಇಷ್ಟಬಂದಂತೆ ಖರ್ಚು ಮಾಡುವ ಅಭ್ಯಾಸವಿತ್ತೆಂಬ ನೂನಿಜ್‌ನ ದೃಢೋಕ್ತಿಗಳನ್ನು ಇದು ಸ್ಥಿರೀಕರಿಸುತ್ತದೆ.

ತನ್ನ ಸೇನೆಯಲ್ಲಿದ್ದ ಅಂಬುರ್ ಖಾನನೆಂಬ ಅಬಿಸೀನಿಯನ್ ಅಧಿಕಾರಿಯಿಂದ ರಾಮರಾಯ ಸ್ವೈರದಿಂದ ಅವನ ಆಸ್ತಿಯನ್ನು ಕಿತ್ತುಕೊಂಡು ಅದನ್ನೇ ರಾಜಕುಮಾರ ಇಬ್ರಾಹಿಮನಿಗೆ ತನ್ನ ಬೆಂಬಲಾರ್ಥವಾಗಿ ಕೊಡ ಮಾಡಿದ.

"ತನ್ನ ಆಸ್ತಿಯಿಂದ ಪರಭಾರೆ ಮಾಡಲ್ಪಟ್ಟುದ್ದರಿಂದ ರೊಚ್ಚಿಗೆದ್ದ ಅಂಬುರ್ ಖಾನ್ ಬೀಜನಗರದ ಓಣಿಗಳಲ್ಲಿ ಇಬ್ರಾಹಿಮ್ ಕುತುಬ್ ಶಾಹನನ್ನು ಭೆಟ್ಟಿಯಾಗಿ

ಅದನ್ನು ತನ್ನಿಂದ ಕಿತ್ತುಕೊಂಡುದಕ್ಕಾಗಿ ಅವನನ್ನು ದೂಷಿಸಿದ. ಆವನಾದರೊ ರಾಜರು ತಮ್ಮ ಆಸ್ತಿಯನ್ನು ಹಂಚಲು ಸ್ವತಂತ್ರರಿರುತ್ತಾರೆ ಮತ್ತು ಬೀಜನಗರದ ರಾಜ ಅದನ್ನು ತನಗೆ ಕೊಡಲು ಇಷ್ಟಪಟ್ಟ ಎಂದು ಉತ್ತರಿಸಿದ. ಇಬ್ರಾಹಿಮ್ ಕುತುಬ್ ಶಾಹ ತನ್ನ ದಾರಿ ಹಿಡಿದು ಹೊರಟ ; ಆದರೆ ಅಬಿಸಿನಿಯನ್ ಕತ್ತಿಯಿಂದ ತನ್ನ ಪದವಿಗಾಗಿ ಹೋರಾಡಲೊಲ್ಲದ ಹೇಡಿ ಎಂದು ಆವನನ್ನು ಕರೆದ. ಇಬ್ರಾಹಿಮ್ ಅವನಿಗೆ ಅವನ ಅವಿವೇಕದ ಬಗೆಗೆ ಎಚ್ಚರಿಕೆ ನೀಡಿದ : ಆದರೆ ರಾಜಕುಮಾರನ ಸೌಮ್ಯತೆ ಅಬಿಸೀನಿಯನ್‌ನ ರೋಷವನ್ನುಕ್ಕಿಸಿತು ಮತ್ತು ಅವನು ಅಸಹ್ಯ ಭಾಷೆ ಯಲ್ಲಿ ಬೈಯತೊಡಗಿದ. ಇದರಿಂದ ರಾಜಕುಮಾರ ಕುದುರೆಯಿಂದಿಳಿದು ಕತ್ತಿ ಹಿರಿದ. ಅಬಿಸೀನಿಯನ್‌ನು ಅವನ ಮೇಲೇರಿ ಹೋದ, ಆದರೆ ರಾಜಕುಮಾರನ ಸ್ವಭಾವ ಅವನಿಗೆ ಪ್ರಯೋಜನಕಾರಿಯಾದುದರಿಂದ ಅವನು ತನ್ನ ವೈರಿಯನ್ನು ಕೊಂದ. ಅಲ್ಲಿಯೆ ನಿಂತಿದ್ದ ಅವನ ಸಹೋದರ ವ್ಯಾಜ್ಯ ಕಾರಣವನ್ನು ತಾನು ಕೈಗೆತ್ತಿಕೊಳ್ಳುವದಾಗಿ ಒತ್ತಾಯಿಸಿದ ಮತ್ತು ಅವನೂ ತನ್ನ ದುಡುಕಿಗೆ ಬಲಿಯಾದ."

ರಾಜಕುಮಾರ ಇಬ್ರಾಹಿಮ್ ಗೋಲ್ಕೊಂಡದ ಸಿಂಹಾಸನಕ್ಕೆ ಕಿ.ಶ. ೧೫೫೦ ರಲ್ಲಿ ಉತ್ತರಾಧಿಕಾರಿಯಾದ. ಹಿಂದಿನ ವರ್ಷದಲ್ಲಿ ಬಿಜಾಪುರದ ಸುಲ್ತಾನ ಇಬ್ರಾಹಿಮ ಮತ್ತು ಅಮೀರ ಬರೀದನ ಮಗನೂ ಬೀದರಿನ ನೂತನ ಸಾರ್ವ ಭೌಮನೂ ಆದ ಅಲಿ ಬರೀದರ ಮಧ್ಯೆ ಮೈತ್ರಿ ಬೆಸೆಯಲಾಯಿತೆಂದು ಫಿರಿಸ್ತಾ ಹೇಳುತ್ತಾನೆ.

ಈ ಅವಧಿಯಲ್ಲಿ ನಿಜಾಮ ಶಾಹ ರಾಯಭಾರದೊಂದಿಗೆ ಕಳಿಸಿಕೊಟ್ಟ ಕಾಣಿಕೆ ಗಳನ್ನು ಮತ್ತು ಗೌರವಾದರಗಳನ್ನು ರಾಮರಾಜ ಸ್ವೀಕರಿಸಿದ್ದುದರಿಂದ ಕೋಪಾ ವಿಷ್ಟನಾದ ಸುಲ್ತಾನ ಇಬ್ರಾಹಿಮ ವಿಜಾಪುರಕ್ಕೆ ಬಂದಿದ್ದ ವಿಜಯನಗರದ ರಾಯ ಭಾರಿಗಳನ್ನು ಎಷ್ಟೊಂದು ತಿರಸ್ಕಾರದಿಂದ ನಡೆಸಿಕೊಂಡನೆಂದರೆ ಅವರು ತಮ್ಮ ಜೀವ ಕ್ಕಂಜಿ ಓಡಿ ಹೋದರು. ಇದರಿಂದ ತಾನೂ ಸಿಟ್ಟಿಗೆದ್ದ ರಾಮ ರಾಜ ಇಬ್ರಾಹಿಮನ ಮೇಲೆ ಆಕ್ರಮಣ ಮಾಡಲು ಬರಹಾನ್ ನಿಜಾಮನನ್ನು ಹುರುದುಂಬಿಸಿದ. ಅವನು ಯಶಸ್ವಿಯಾಗಿ ಹಾಗೆ ಮಾಡಿದ ಮತ್ತು ಕಲ್ಯಾಣ ಕೋಟೆಯನ್ನು ವಶಪಡಿಸಿಕೊಂಡ; ಮತ್ತು ಅಹಮದನಗರದ ಕೋಟೆಗಳಲ್ಲೊಂದನ್ನು ವಶಪಡಿಸಿಕೊಂಡು ಇಬ್ರಾಹಿಮ ಸೇಡು ತೀರಿಸಿಕೊಂಡಾಗ ಬರಹಾನ್ ಮತ್ತು ರಾಮರ ಮಧ್ಯೆ ಬಹಿರಂಗ ಒಪ್ಪಂದ ಏರ್ಪಟ್ಟಿತು. ಅವರಿಬ್ಬರೂ ರಾಜರು ೧೫೫೧ರಲ್ಲಿ ರಾಯಚೂರಿನ ಬಳಿ ಸೇರಿ, ಅದಕ್ಕೆ ಮುತ್ತಿಗೆ ಹಾಕಿ ವಶಪಡಿಸಿಕೊಂಡರು. ಮುದಕಲ್ ಕೂಡ ಶರಣಾಗತ ವಾಯಿತು ಮತ್ತು ಹೀಗೆ ದೋ ಆಬ್ ಹಿಂದೂ ಸಾರ್ವಭೌಮನಿಗೆ ಪುನರ್ ಸ್ವಾಧೀನ ವಾಯಿತು.

ಈ ಸುಮಾರಿಗೆ[23] ರಾಮರಾಯನ ಇಬ್ಬರು ಸಹೋದರರು ರಾಜಧಾನಿಯಲ್ಲಿ ಅವನು ಗೈರು ಹಾಜರಿದ್ದಾಗ ಅವನ ಅಧಿಕಾರದ ವಿರುದ್ಧ ದಂಗೆಯೆದ್ದು ಅದೋನಿಯ ಕೋಟೆಯನ್ನು ವಶಪಡಿಸಿಕೊಂಡರು. ಹಾಗೆಂದು ಮಹಮ್ಮದೀಯ ಚರಿತ್ರಕಾರ ನೊಬ್ಬ ಹೇಳುತ್ತಾನೆ. ಇದರಿಂದ ರಾಮ, ಕುತುಬ್ ಶಾಹ ಇಬ್ರಾಹಿಮನ ನೆರ ವನ್ನು ಬೇಡಿದ. ನೆರವು ನೀಡಲಾಗಿ ರಾಮ ಅದೋನಿಯನ್ನು ಆರು ತಿಂಗಳು ಮುತ್ತಿದ. ಕೊನೆಗೆ ಅದು ಶರಣಾಗತವಾಯಿತು, ಮತ್ತು ಸಹೋದರರನ್ನು ಕ್ಷಮಿಸಲಾಯಿತು.

೧೫೫೩ರಲ್ಲಿ ಬರಹಾನ್ ಸತ್ತ, ಮತ್ತು ಪುನಃ ಎರಡೂ ದೊಡ್ಡ ಮಹಮ್ಮದೀಯ ರಾಜ್ಯಗಳು ಅಲ್ಪ ಕಾಲದವರೆಗೆ ಮಿತ್ರರಾದವು ; ಆದರೆ, ವಾತಾವರಣದ ತುಂಬ ಸಂಚು ಮತ್ತು ಅಸೂಯೆ ತುಂಬಿಕೊಂಡಿದ್ದುದರಿಂದ ಮೈತ್ರಿ ದೀರ್ಘಕಾಲ ಬಾಳಲಿಲ್ಲ. ಸುಲ್ತಾನ ಇಬ್ರಾಹಿಮ ವಿಜಯನಗರದೊಂದಿಗೆ ಹೊಂದಾಣಿಕೆ ಮಾಡಿಕೊಂಡ. ಇದು ಯುದ್ಧ ಪುನರಾರಂಭಕ್ಕೆ ನಾಂದಿಯಾಗಿ ಸೊಲ್ಲಾಪುರದಲ್ಲಿ ಜರುಗಿದ ಯುದ್ಧದಲ್ಲಿ ಇಬ್ರಾಹಿಮ ಸೋಲಿಸಲ್ಪಟ್ಟ.

ಆದರೆ ಅವನು ಅನುಭವಿಸಿದ ಅತ್ಯಂತ ಗಂಭೀರ ಅಪಜಯವೆಂದರೆ ತಾನು ಕೃತಘ್ನತೆ ಹಾಗೂ ದುರ್ನಡತೆಗಳಿಂದ ಬಹಿರಂಗವಾಗಿ ದಂಗೆಯೇಳುವಂತೆ ಮಾಡಿದ ಐನ-ಉಲ್-ಮುಲ್ಕ್ ಎಂಬ ಸರದಾರನ ಕೈಯಲ್ಲಿ ಈ ವ್ಯಕ್ತಿಯ ವಿರುದ್ಧ ಅಲ್ಪ ಕಾಲದ ದಂಡಯಾತ್ರೆಯ ಕೊನೆಯಲ್ಲಿ ರಾಜಸೈನ್ಯಗಳು ಸಂಪೂರ್ಣವಾಗಿ ಸೋಲಿಸ ಲ್ಪಟ್ಟು ಸುಲ್ತಾನ ಬಿಜಾಪುರದಲ್ಲಿ ಆಶ್ರಯ ಪಡೆಯಬೇಕಾಯಿತು. ಹತಾಶ ಸ್ಥಿತಿ ಯಲ್ಲಿ ಅವನು ವಿಜಯನಗರದ ರಾಯನನ್ನು ನೆರವಿಗಾಗಿ ಕರೆದ ಮತ್ತು ಯಥಾ ಪ್ರಕಾರ ಕೈಗೊಂಬೆ ಸಾರ್ವಭೌಮನನ್ನು ಪ್ರತಿನಿಧಿಸುತ್ತಿದ್ದ ರಾಮ ಸುಲ್ತಾನನ ರಾಜ್ಯದಿಂದ[24] ವೈರಿಯನ್ನು ಹೊರಹಾಕಲು ದೊಡ್ಡ ಸೈನ್ಯದೊಂದಿಗೆ ತನ್ನ ತಮ್ಮ ವೆಂಕಟಾದ್ರಿಯನ್ನು ಕಳಿಸಿಕೊಟ್ಟ. ವೆಂಕಟಾದ್ರಿಯ ಕೈಯಲ್ಲಿ ಐನ-ಉಲ್-ಮುಲ್ಕ್‌ನ ಪರಾಜಯವನ್ನು ಫಿರಿಸ್ತಾ ಹೀಗೆ ಹೇಳಿದ್ದಾನೆ[25] :—

ಸೈಯುಫ್ ಐನ್ ಅಲ್ ಮೂಲ್ಕ್ ಅಸದಖಾನನ ಅನುಕರಣ ಮಾಡಿ ಕಾಫಿರರಿಗೆ ಆಶ್ಚರ್ಯ ಮಾಡಬೇಕೆಂದು ನಿರ್ಧರಿಸಿದ ; ಆದರೆ, ಅವನ ಹಂಚಿಕೆಯ ಸುಳಿವು ಇದ್ದ ವೆಂಕಟಾದ್ರಿ ತನ್ನ ಸೈನ್ಯಗಳಿಗೆ ಎಚ್ಚರಿಕೆಯಿಂದಿರಲು ಆಜ್ಞಾಪಿಸಿದ್ದ. ಉದ್ದ ಕಟ್ಟಿಗೆಯ ಪೆಂಡಿಗಳನ್ನು ಸಂಗ್ರಹಿಸಿ ಪ್ರತಿಯೊಂದರ ಒಂದು ತುದಿಗೆ ಎಣ್ಣೆ ಯಲ್ಲಿ ಅದ್ದಿದ ಬಟ್ಟೆ ಕಟ್ಟಿ, ಸೂಚನೆ ನೀಡಿದ ಕೂಡಲೆ ಅವುಗಳಿಗೆ ಬೆಂಕಿ ಹಚ್ಚಿ ಅವು ಗಳನ್ನು ಸಾಧ್ಯವಿದ್ದಷ್ಟು ಎತ್ತರವಾಗಿ ಹಿಡಿದು ತಮ್ಮ ಸೈನ್ಯಗಳಿಗೆ ವೈರಿಯ ಸಂಪೂರ್ಣ ನೋಟ ಒದಗಿಸುವಂತೆ ತನ್ನ ಹಿಂಬಾಲಕರಿಗೆ ಆಜ್ಞಾಪಿಸಿದ್ದ. ತನ್ನ ಉದ್ದೇಶದಂತೆ ಐನ್-ಉಲ್-ಮುಲ್ಕ್ ಆ ಉದ್ದೇಶಕ್ಕಾಗಿಯೆ ಆಯ್ದ ಎರಡು ಸಾವಿರ ಸೈನಿಕರನ್ನು

ತೆಗೆದುಕೊಂಡು ಸಲಾಬತ್ ಖಾನನೊಂದಿಗೆ ವೈರಿಠಾಣ್ಯಕ್ಕೆ ಸಾಗಿದ. ಪೀಡೆಗೊಳಗಾಗದೆ ಅದನ್ನು ಪ್ರವೇಶಿಸಲು ಅವನನ್ನು ಬಿಡಲಾಯಿತು ; ಆದರೆ ಸಂಜ್ಞೆ ನೀಡುತ್ತಲೆ ಎಲ್ಲ ಕೊಳ್ಳಿಗಳನ್ನು ಉರಿಸಲಾಗಿ ಏನೂ ಪ್ರತಿರೋಧ ನಿರೀಕ್ಷಿಸಿರದಿದ್ದ ಅಚ್ಚರಿಪಡಿಸಬೇಕೆಂದಿದ್ದವರ ಮೇಲೆ ತನ್ನ ಸೈನ್ಯದೊಂದಿಗೆ ಸಿದ್ಧನಾಗಿ ನಿಂತಿದ್ದ ವೆಂಕಟಾದ್ರಿ ಎಷ್ಟೊಂದು ಯಶಸ್ವಿಯಾಗಿ ನುಗ್ಗಿದನೆಂದರೆ ಆ ದಳ ಠಾಣ್ಯಬಿಡುವುದರೊಳಗೆ ಅವರಲ್ಲಿ ಐನೂರಕ್ಕೂ ಅಧಿಕ ಜನ ಕೊಲ್ಲಲ್ಪಟ್ಟರು. ಐನ-ಉಲ್-ಮುಲ್ಕ್ ಮತ್ತು ಸಲಾಬತ್ ಅತ್ಯಂತ ಕಷ್ಟಪಟ್ಟು ಪಾರಾದರು ; ರಾತ್ರಿಯ ಕತ್ತಲಲ್ಲಿ ದಾರಿ ತಪ್ಪಿಸಿಕೊಳ್ಳಲಾಗಿ ಓಡಿ ಹೋದ ಕೆಲವರು ಹಿಂತಿರುಗಿ ಬಂದಾಗ, ಅವನು ಸತ್ತನೆಂಬ ಸುದ್ದಿ ಅವನ ಪಾಳೆಯದಲ್ಲಿ ಹರಡಿತು ; ಅವನ ಸೈನಿಕರು ಒಮ್ಮೆಲೆ ಭಯಗ್ರಸ್ತರಾಗಿ ಬೇರ್ಪಟ್ಟು ಭಿನ್ನ ದಿಕ್ಕುಗಳಿಗೆ ಓಡಿದರು. ದಿನ ಬೆಳಕು ಬೀಳುವ ಸಮಯಕ್ಕೆ ಎರಡುನೂರು ಅಶ್ವಗಳೊಂದಿಗೆ ತಮ್ಮ ನೆಲೆಗೆ ಆಗಮಿಸಿದ ಐನ್-ಉಲ್-ಮುಲ್ಕ್ ಮತ್ತು ಸಲಾಬತ್ ಖಾನ್ ಅದು ನಿರ್ಜನವಾಗಿದ್ದುದನ್ನು ಕಂಡು ಗೊಂದಲಗೆಟ್ಟು ಮಾನ್ ಮಾರ್ಗವಾಗಿ ನಿಜಾಮು ಶಾಹನ ರಾಜ್ಯಕ್ಕೆ ಆಶ್ರಯ ಕೋರಿ ಬಂದರು, ಆದರೆ ಅವನ ವಿಶ್ವಾಸಘಾತಕತನದಿಂದ ಕ್ಷುದ್ರವಾಗಿ ಕೊಲ್ಲಲ್ಪಟ್ಟರು."

ಸಂಚುಕಾರರ ಸಂಯುಕ್ತ ಪ್ರಯತ್ನ ಯಶಸ್ವಿಯಾದ ಪಕ್ಷದಲ್ಲಿ ತಮಗೆ ಕೊಡುವದಾಗಿ ಹೇಳಿದ ಭವ್ಯ ಪ್ರಸ್ತಾಪಗಳಿಂದ ವಿದೇಶಿಯರ ಕಣ್ಣು ಕೋರೈಸಿ ೧೫೫೫ರಲ್ಲಿ ತಮ್ಮ ನೂತನ ರಾಜ ಪ್ರತಿನಿಧಿ, ಪೆದ್ರೊ ದ ಮ್ಯಾಸ್ಕರೆನ್ಹಾಸ್ ನೇತೃತ್ವದಲ್ಲಿ ಪೋರ್ತುಗೀಜರು ವಿಜಾಪುರದ ಸಿಂಹಾಸನದ ಮೇಲೆ ರಾಜಕುಮಾರ ಅಬ್ದುಲ್ಲಾನನ್ನು ಪೊಂಡದಲ್ಲಿ ಪ್ರತಿಷ್ಠಾಪಿಸಲಾಯಿತು, ಮತ್ತು ಅವನ ಸಿಂಹಾಸನಾರೋಹಣವನ್ನು ಘೋಷಿಸಲಾಯಿತು. ೧೫೫೫ ರಲ್ಲಿ ದ ಮ್ಯಾಸ್ಕ-ರೆನ್ಹಾಸ್ ನಿಧನಾನಂತರ ಫ್ರಾನ್ಸಿಸ್ಕೊ ಬ್ಯಾರೆಟೊ ಮಂಡಲಾಧಿಪತಿ ಪದವಿಯೊಂದಿಗೆ ಅಧಿಕಾರಕ್ಕೆ ಬಂದ, ಮತ್ತು ರಾಜಕುಮಾರನನ್ನು ಪೊಂಡದಲ್ಲಿ ಪ್ರತಿಷ್ಠಾಪಿಸಿ ಆ ರಾಜ್ಯದ ಆದಾಯವನ್ನು ವಸೂಲು ಮಾಡಲು ಹೊರಟ. ಆದರೆ, ಏಳು ಸಾವಿರ ಸೈನಿಕರ ಬೆಂಬಲವಿದ್ದ ಇಬ್ರಾಹಿಮ್ ಆದಿಲ್ ಅವನನ್ನು ಅಡ್ಡಗಟ್ಟಿದ, ಮತ್ತು ಹಲವಾರು ಕದನಗಳು ಜರುಗಿದವು.

ಏತನ್ಮಧ್ಯೆ ಸ್ವತಃ ಇಬ್ರಾಹಿಮು ಅಲಸಿಯಾಗಿರಲಿಲ್ಲ, ಮತ್ತು ವಿಜಯನಗರದ ಸದಾಶಿವನ ಹದಿನೈದು ಸಾವಿರ ಯೋಧರ ನೆರವಿನಿಂದ ಮಹತ್ವಾಕಾಂಕ್ಷಿ ರಾಜಕುಮಾರನನ್ನು ಪದಚ್ಯುತಗೊಳಿಸಿ ಸೆರೆಹಿಡಿದ ನಂತರ ಪೋರ್ತುಗೀಜ ಸೈನ್ಯಗಳ ಮೇಲೆ ಹಲವಾರು ಆಕ್ರಮಣ ಮಾಡಿದ. ಯುದ್ಧ ೧೫೫೬ರ ಚಳಿಗಾಲದುದ್ದಕ್ಕೂ ನಡೆದಾಗ್ಯೂ ನಿರ್ಣಾಯಕ ಪರಿಣಾಮ ಕಂಡು ಬರಲಿಲ್ಲ. ಮರುವರ್ಷ ಬಿಜಾಪುರದ ಸೈನಿಕರ ಹೊಸ ತಂಡ ಸ್ಯಾಲ್ಸೆಟ್ಟ್ ಮತ್ತು ಬಾರ್ಡ್ಸ್ ಮೇಲೆ ಆಕ್ರಮಣ ಮಾಡಿತು.

ಆದರೆ, ಪೊಂಡಾದ ಬಳಿ ಚಿಕ್ಕ ಪೋರ್ತುಗೀಜ ಸೈನ್ಯದಿಂದ ಸೋಲಿಸಲ್ಪಟ್ಟು ಕೆಲಕಾಲ ಯುದ್ಧ ಕಾರ್ಯಾಚರಣೆಗಳು ನಿಂತವು.

ಇದಾದ ಕ್ಷಿಪ್ರದಲ್ಲಿಯೆ, ಅಂದರೆ ೧೫೩೫ರಲ್ಲಿ, ಸುಲ್ತಾನ ಇಬ್ರಾಹಿಮ ತೀರಿಕೊಂಡ. "ತನ್ನ ಅನಾರೋಗ್ಯದ ಕಾಲದಲ್ಲಿ ತನ್ನನ್ನು ಗುಣಪಡಿಸಲಾಗದ ಹಲವಾರು ವೈದ್ಯರನ್ನು ಕೊಲ್ಲಿಸಿದ. ಕೆಲವರ ತಲೆ ಕಡಿಸಿದ, ಇನ್ನು ಕೆಲವರನ್ನು ಆನೆಯಿಂದ ತುಳಿಸಿ ಕೊಲ್ಲಿಸಿದ. ಹಾಗಾಗಿ, ಬದುಕುಳಿದ ಎಲ್ಲ ವೈದ್ಯರು ಭಯಪಟ್ಟು ಅವನ ರಾಜ್ಯದಿಂದ ಕಾಲು ಕಿತ್ತರು." ಆವನ ನಂತರ ಅವನ ಹಿರಿಯ ಮಗ ಅಲಿ ಆದಿಲ್ ಪಟ್ಟಕ್ಕೆ ಬಂದ.

ಪಟ್ಟಕ್ಕೆ ಬಂದ ಕೂಡಲೆ ನೂತನ ಸುಲ್ತಾನ ಹೊಸ ಒಪ್ಪಂದವನ್ನು ಮಾಡಿಕೊಂಡು ಸದಾಶಿವ ಮತ್ತು ರಾಮರಾಜರೊಂದಿಗಿದ್ದ ತನ್ನ ತಂದೆಯ ಮೈತ್ರಿಯನ್ನು ಗಟ್ಟಿಗೊಳಿಸಿದ, ಮತ್ತು ಅಂತಹದೇ ಉದ್ದೇಶ ಹೊತ್ತ ರಾಯಭಾರಿಗಳನು ಅಹಮದನಗರದ ಬರಹಾನ್‌ನ ಉತ್ತರಾಧಿಕಾರಿ ಹುಸೇನ ನಿಜಾಮ ಶಾಹನಲ್ಲಿಗೆ ಕಳಿಸಿಕೊಟ್ಟ. ಆದರೆ, ಇವರನ್ನು ಕೆಟ್ಟ ರೀತಿಯಲ್ಲಿ ಬರಮಾಡಿಕೊಳ್ಳಲಾಯಿತು, ಮತ್ತು ಹಿಂದೂ ರಾಜಧಾನಿಯಲ್ಲಿ ತನ್ನ ಪ್ರತಿನಿಧಿಗಳು ಆತ್ಮೀಯವಾಗಿ ಸ್ವಾಗತಿಸಲ್ಪಟ್ಟುದನ್ನು ಹಾಗೂ ಆದರಾತಿಥ್ಯದಿಂದ ನೋಡಿಕೊಳ್ಳಲ್ಪಟ್ಟುದನ್ನು ಕಂಡುಕೊಂಡ ಸುಲ್ತಾನ ಅಲಿ ಸಾಧ್ಯವಿದ್ದರೆ ವಿಜಯನಗರದೊಂದಿಗೆ ನಿಜವಾದ ಹಾಗೂ ಶಾಶ್ವತ ಮೈತ್ರಿ ಸ್ಥಾಪಿಸಲು ನಿರ್ಧರಿಸಿದ. ಈ ಉದ್ದೇಶಕ್ಕಾಗಿ ಅವನು ಅತ್ಯಂತ ಅಸಾಧಾರಣ ಕ್ರಮ ಕೈಗೊಂಡ. ಅದರ ವೃತ್ತಾಂತವನ್ನು ಫಿರಿಸ್ತಾನ ಮಾತಿನಲ್ಲಿಯೆ ಕೊಡುವುದೊಳಿತು.

"ರಾಮರಾಜೆಯೊಂದಿಗೆ ಮೈತ್ರಿ ಮಾಡಿಕೊಳ್ಳುವ ಮೂಲಕ ತನ್ನ ತಂದೆ ಕಳೆದುಕೊಂಡಿದ್ದ ಪ್ರದೇಶಗಳನ್ನು ಬಿಡಿಸಿಕೊಳ್ಳುವ ಉದ್ದೇಶದಿಂದ ಅಲಿ ಆದಿಲ್ ಶಾಹ ಆ ರಾಜನ[26] ಮಗ ಸತ್ತಾಗ ಅಸಾಧಾರಣ ಜಾಣ್ಮೆ ಮತ್ತು ನಿರ್ಧಾರಗಳಿಂದ ಒಂದು ನೂರು ಅಶ್ವಗಳಿಂದೊಡಗೂಡಿ ಬೀಜನಗರಕ್ಕೆ ಆ ದುಃಖ ಸಂದರ್ಭದಲ್ಲಿ ಸಮಾಧಾನ ಹೇಳಲು ತೆರಳಿದ. ರಾಮರಾಜೆ ಅವನನ್ನು ಅತ್ಯಂತ ಗೌರವಪೂರ್ವಕವಾಗಿ ಬರಮಾಡಿಕೊಂಡ[27] ಮತ್ತು ಸುಲ್ತಾನನು ಅತ್ಯಂತ ಪ್ರೀತಿಯ ಮನವೊಲಿಕೆಯಿಂದ ಆತನು ತನ್ನ ಶೋಕವನ್ನು ತೊರೆಯುವಂತೆ ಮಾಡಿದ. ರಾಮರಾಜೆಯ ಹೆಂಡತಿ ಸುಲ್ತಾನನನ್ನು ತನ್ನ ಮಗನೆಂದು ಸ್ವೀಕರಿಸಿದಳು, ಮತ್ತು ಪ್ರೀತಿಯ ಆಡಿಕೆಗಳ ಪರಸ್ಪರ ವಿನಿಮಯದಲ್ಲಿ ಕಳೆದ ಮೂರು ದಿನಗಳ ಅಂತ್ಯಕ್ಕೆ ಅವನು ವಿದಾಯ ಹೇಳಿ ಹೊರಟ; ಆದರೆ ರಾಮರಾಜೆ ನಗರದ ಹೊರಗಿನವರೆಗೆ ಕಳಿಸಿಕೊಡಲು ಬಾರದ್ದರಿಂದ ಅವನು ರೋಸಿದ, ಮತ್ತು ತತ್ಕಾಲಕ್ಕೆ ಯಾವುದೆ

ಅಸಮಾಧಾನದ ಲಕ್ಷಣಗಳನ್ನು ತೋರಗೊಡದಷ್ಟು ವಿವೇಕಿಯಾಗಿದ್ದರೂ ಸಹ ಆ ಮುಖಭಂಗವನ್ನು ಮನಸ್ಸಿನಲ್ಲಿ ಇಟ್ಟುಕೊಂಡ."[28]

ಈ ಘಟನೆ ತನ್ನ ಉದ್ದೇಶಿತ ಪರಿಣಾಮ ಸಾಧಿಸುವಲ್ಲಿ ಸಂಪೂರ್ಣವಾಗಿ ವಿಫಲವಾಯಿತು. ಅದು ಸುಲ್ತಾನನ ಮನಸ್ಸಿನಲ್ಲಿ ಶಾಶ್ವತ ಕನಲಿಕೆಯನ್ನು ಹುಟ್ಟಿಸಿತು, ಮತ್ತು ತನ್ನನ್ನು ಇಷ್ಟರವರೆಗೆ ವಿನೀತನನ್ನಾಗಿಸಿಕೊಳ್ಳುವತನಕ ತಗ್ಗಿ ನಡೆದನೆಂದ ಮೇಲೆ ತನ್ನ ತಲೆತಲಾಂತರದ ಶತ್ರುವಿನ ಸ್ಥಿತಿ ತೀರ ಕೆಳಕ್ಕೆ ಇಳಿದಿರ ಬೇಕೆಂದು ಗ್ರಹಿಸಿದ ರಾಮರಾಯನಲ್ಲಂತೂ ಬಿಗುಮಾನವನ್ನು ಹುಟ್ಟಿಸಿತು.

ಕೌಟೊನ ಪ್ರಕಾರ,[29] ಮರುವರ್ಷ ೧೫೫೮ರಲ್ಲಿ ರಾಮರಾಯ ರೋಮನ್ ಕ್ಯಾಥಲಿಕ್ ಸನ್ಯಾಸಿಗಳ ಹಾಗೂ ಸಂತ ಥಾಮಸ್‌ನ ಚರ್ಚಿನ ಮಹತ್ವದ ಸಂಘದ ನೆಲೆಯಾಗಿದ್ದ ಮದ್ರಾಸ ಬಳಿಯಿರುವ "ಮೆಲಿಯಾಪುರ" ಅಥವಾ ಮೈಲಾಪುರ ಮೇಲೆ ದಂಡೆತ್ತಿ ಹೋದ. ಸೆನ್ಹೊರ್ ಲೋಪ್ಸ್ "ಕ್ರಾನಿಕಾ ದೊಸ್ ರೈಸ್‌ದ ಬೀಸನಗ"ದ ಪೀಠಿಕೆಯಲ್ಲಿ (ಪು. lxvi) ನೀಡಿದ ಸಂಗ್ರಹದಿಂದ ಈ ವಾಕ್ಯವೃಂದ ವನ್ನು ನಾನು ಉದ್ಧರಿಸುತ್ತೇನೆ. ನೆಗಪಾಟಮ್‌ನಿಂದ ಸ್ಯಾನ್ ಥೊಮೆವರೆಗಿನ ಎಲ್ಲ ಕರಾವಳಿಯನ್ನು ಹಿಡಿದುಕೊಂಡಿದ್ದ ಸಂತ ಫ್ರಾನ್ಸಿಸ್‌ನ ಮಹಿಮೆಯುಳ್ಳ ಸಂಘದ ಬಡ ಪಿತೃಗಳು ಅಲ್ಲಿ ಪವಿತ್ರ ಕ್ರೈಸ್ತವೇದದ ಪ್ರಕಾಶವನ್ನು ಉಪದೇಶಿಸುವಲ್ಲಿ ಮೊದಲಿಗರಾಗಿದ್ದು ಆ ಪ್ರದೇಶದಲ್ಲಿನ ಅನೇಕ ದೇವಾಲಯಗಳನ್ನು ಕೆಡವಿದ್ದರು ಮತ್ತು ಅನೇಕ ಪಗೋಡಾಗಳನ್ನು ನಾಶಪಡಿಸಿದ್ದರು. ಈ ಸಂಗತಿ ಎಲ್ಲ ಬ್ರಾಹ್ಮಣರ ಮನಸ್ಸನ್ನು ತೀವ್ರವಾಗಿ ನೋಯಿಸಿತ್ತು. ಬೀಸನಗದ ರಾಜನಾದ ರಾಮರಾಯನ ಪ್ರಜೆಗಳಾದ ಅವರು ಆ ಸಂಗತಿಗಳನ್ನು ಅವನಿಗೆ ವರದಿ ಮಾಡಿ ತಮ್ಮ ದೇವತೆಗಳು ಘನತೆಗೋಸ್ಕರ ಅವನು ತಮ್ಮ ನೆರವಿಗೆ ಧಾವಿಸಬೇಕೆಂದು ಬೇಡಿಕೊಂಡರು.

ನವಾಗಂತುಕರಲ್ಲಿ ಅಪಾರ ಸಂಪತ್ತು ಇತ್ತೆಂದು ಅವರು ಅವನನ್ನು ಮನಗಾಣಿಸುವಲ್ಲಿ ಯಶಸ್ವಿಯಾದರು ಮತ್ತು ಅನನು ಆ ಸ್ಥಳದ ಮೇಲೆ ಏರಿಬಂದ. ಆದರೆ ಇದು ನಿಜವಲ್ಲ ಮತ್ತು ಅಲ್ಲಿನ ನಿವಾಸಿಗಳು ತನಗೆ ವಿಧೇಯರಾಗಿದ್ದಾರೆ ಎಂದು ನಂತರ ತಿಳಿದು ಅವರಿಗೆ ಕ್ಷಮದೋರಿ ಅವರನ್ನು ಶಾಂತಿಯಿಂದಿರಗೊಟ್ಟು ನಡೆದನು.

ಬಿಜಾಪುರಕ್ಕೆ ಮರಳಿ ಅಲಿ ಆದಿಲ್ ಹುಸೇನ್ ನಿಜಾಮ್ ಶಾಹನಿಂದ ಕಲ್ಯಾಣ ಮತ್ತು ಸೊಲ್ಲಾಪುರ ಕೋಟೆಗಳ ಮರುಸ್ವಾಧೀನದ ಬೇಡಿಕೆಯನ್ನು ಹಠಾತ್ತನೆ ಮಾಡಿದ ; ಅವನ ತಿರಸ್ಕಾರದ (ಅವನು ಹೇಳಲು ಬಾರದಷ್ಟು ಅಸಭ್ಯವಾದ ಶಬ್ದಗಳಲ್ಲಿ ಉತ್ತರ ಕಳಿಸಿದ" ಎಂದು ಫಿರಿಸ್ತಾ ಹೇಳುತ್ತಾನೆ)ದಿಂದಾಗಿ ಇನ್ನೊಂದು ಯುದ್ಧ ಆರಂಭಿಸಿತು.

"೯೬೬ನೆಯ ವರ್ಷ (ಅಕ್ಟೋಬರ್ ೧೪, ಕ್ರಿ.ಶ. ೧೫೫೮ ರಿಂದ ಅಕ್ಟೋಬರ ೩, ೧೫೫೯)ದಲ್ಲಿ ಅಲಿ ಆದಿಲ್ ಶಾಹ ರಾಮರಾಜನನ್ನು ತನ್ನ ನೆರವಿಗೆ ಕರೆಯಲಾಗಿ ಇಬ್ಬರೂ ಪರಸ್ಪರ ಒಪ್ಪಿಗೆಯಿಂದ ಹುಸೇನ್ ನಿಜಾಮ್ ಶಾಹನ ಪ್ರಾಂತಗಳನ್ನು ಹಂಚಿಕೊಂಡು ಅವುಗಳನ್ನು ಯಾವ ರೀತಿ ಹಾಳು ಮಾಡಿದರೆಂದರೆ ಪೋರುಂದೆಯಿಂದ ಖೈಬರ ವರೆಗೆ, ಅಹಮದನಗರದಿಂದ ದೌಲತಾಬಾದವರೆಗೆ ಒಂದು ನರಪಿಳ್ಳೆ ಕೂಡ ನೋಡಸಿಗಲಿಲ್ಲ. ಅನೇಕ ವರ್ಷಗಳಿಂದ ಇಂಥ ಘಟನೆಗಾಗಿ ಹಾತೊರೆಯುತ್ತಿದ್ದ ಬೀಜನಗರದ ಕಾಫಿರರು ಎಲ್ಲ ರೀತಿಯ ಕ್ರೌರ್ಯ ಬಳಸಿದರು. ಅವರು ಮುಸಲ್ಮಾನ ಮಹಿಳೆಯರ ಮಾನಭಂಗ ಮಾಡಿದರು, ಮಸೀದೆಗಳನ್ನು ನಾಶ ಮಾಡಿದರು ಮತ್ತು ಪವಿತ್ರ ಕುರಾನನ್ನೂ ಸಹ ಗೌರವದಿಂದ ಕಾಣಲಿಲ್ಲ."[30]

ಹಿಂದೂಗಳ ಈ ವರ್ತನೆ ವೈರಿಗಳಾಗಿದ್ದ ಗೋಲ್ಕೊಂಡದ ಪ್ರಜೆಗಳಲ್ಲದೆ ಬಿಜಾಪುರ ಸೀಮೆಗಳ ನಿವಾಸಿಗಳು ಹಾಗೂ ಮಿತ್ರ ಸೈನ್ಯಗಳೂ ಸಹ ಸೇರಿದಂತೆ ಇಸ್ಲಾಮದ ಅನುಯಾಯಿಗಳನ್ನು ಎಷ್ಟೊಂದು ರೊಚ್ಚಿಗೆಬ್ಬಿಸಿತೆಂದರೆ ಅದು ವಿಜಯನಗರದ ಅಂತಿಮ ಪತನ ಹಾಗೂ ವಿನಾಶಕ್ಕೆ ಬುನಾದಿ ಹಾಕಿತು.

೧೫೫೮ರಲ್ಲಿ ಡಾಮ್ ಕಾನ್‌ಸ್ಟಂಟಾಯಿನ್‌ದ ಬ್ರ್ಯಾಗಂಜಾ ಗೋವಾದ ರಾಜಪ್ರತಿನಿಧಿಯಾದ, ಮತ್ತು ಅವನ ಆಡಳಿತಾವಧಿ ಎಲ್ಲ ರೀತಿಯ ಹಿಂಸೆ ಮತ್ತು ಆಕ್ರಮಣಗಳಿಂದ ಪ್ರಖ್ಯಾತವಾಗಿತ್ತು. ೧೫೫೯ರಲ್ಲಿ ಲುಯಿಜ್ ದ ಮೆಲೊ ಮಲಬಾರ ಕರಾವಳಿ ಮೇಲಿನ ಪಟ್ಟಣಗಳೊಳಗೆ ಬೆಂಕಿ ಮತ್ತು ಕತ್ತಿ ತೆಗೆದುಕೊಂಡು ಹೋದ. ಅವನು ಮಂಗಳೂರಿನ ಮೇಲೆ ಆಕ್ರಮಣ ಮಾಡಿ ಪಟ್ಟಣಕ್ಕೆ ಬೆಂಕಿಯಿಟ್ಟು ಎಲ್ಲ ನಿವಾಸಿಗಳನ್ನು ಕೊಂದ. ಆ ವರ್ಷದಲ್ಲಿ ನಂತರ ಅದೇ ಕರಾವಳಿಯ ಮೇಲಿನ ಅನೇಕ ಗ್ರಾಮ ಪಟ್ಟಣಗಳನ್ನು ಅದೇ ರೀತಿ ನಾಶಪಡಿಸಿ ಇಡಿ ಸಮುದ್ರತೀರವನ್ನು ಹಾಳುಗೆಡವಿದ.

೧೫೬೦ರಲ್ಲಿ ಗೋವಾದ ಪೀಠವನ್ನು ಅಗ್ರಮಠಾಧಿಪತ್ಯಕ್ಕೆ ಏರಿಸಲಾಯಿತು. ಮತ್ತು ಸ್ಪೇನದ ಮಠೀಯ ನ್ಯಾಯಸ್ಥಾನವನ್ನೂ ಮೀರಿಸುವಂತಹ ಭಯ ಭ್ರಾಂತಿಗಳುಳ್ಳ ಮಠೀಯ ನ್ಯಾಯಸ್ಥಾನವನ್ನು ಸ್ಥಾಪಿಸಲಾಯಿತು. ಗೋವಾದ ಮತ್ತು ಅದರ ಆಶ್ರಿತ ರಾಜ್ಯಗಳ ನಿವಾಸಿಗಳನ್ನು ಕ್ರೈಸ್ತಧರ್ಮ ಸ್ವೀಕರಿಸುವಂತೆ ಒತ್ತಾಯಿಸಲಾಯಿತು. ಮತ್ತು ಒಪ್ಪದಿದ್ದರೆ ಅಥವಾ ಅವಿನಯ ತೋರಿದರೆ ಸೆರೆಯಲ್ಲಿಟ್ಟು ಚಿತ್ರಹಿಂಸೆಗೆ ಗುರಿಪಡಿಸಲಾಗುತ್ತಿತ್ತು. ಈ ವರ್ಷದಲ್ಲಿಯೂ ಮತ್ತು ಮುಂದಿನ ವರ್ಷವೂ ಪೋರ್ತುಗೀಜರ ಕೊಳ್ಳೆಯ ದಂಡಯಾತ್ರೆಗಳು ಮುಂದುವರಿದವು. ೧೫೬೪ರಲ್ಲಿ ರಾಜಪ್ರತಿನಿಧಿ ಮಲಬಾರಿಗಳಿಗೆ ಸೇರಿದ ಅನೇಕ ಹಡಗುಗಳನ್ನು ನಾಶಪಡಿಸಲೋಸುಗ ಮೂರು ಹಡಗುಗಳೊಂದಿಗೆ ಮೆಸ್ಕ್ವೀಟಾನನ್ನು ಕಳಿಸಿದ. ಮೆಸ್ಕ್ವೀಟಾ ಇವುಗಳಲ್ಲಿ ಸಲಕ್ಕೆ ಎರಡೆರಡು ಮೂರುಮೂರರಂತೆ ಇಪ್ಪತ್ತುನಾಲ್ಕನ್ನು ಸೆರೆಹಿಡಿದು,

ಅವುಗಳನ್ನು ಮುಳುಗಿಸಿ, ಅನೇಕ ಸೈನಿಕರ ತಲೆ ಹೊಡೆಸಿದ, ಮತ್ತು ಇತರ ನೂರಾರು ಜನರನ್ನು ಹಾಯಿಗಳಲ್ಲಿ ಹೊಲಿದು ಸಮುದ್ರಕ್ಕೆಸೆದ. ಈ ವಿಧಗಳಲ್ಲಿ ಅವನು ೨೦೦೦ ಜನರನ್ನು ಕೊಂದ.

ಆ ನಾಡಿನ ನತದೃಷ್ಟ ನಿವಾಸಿಗಳು ಹತಾಶೆಗೊಳಪಟ್ಟು ತಮ್ಮ ನೆಲದ ಮೇಲೆ ದಾಳಿ ಮಾಡಿದವರನ್ನು ನಾಶಗೊಳಿಸಲು ಎಷ್ಟೇ ಅಪಾಯ ಬರಲಿ ನಿರ್ಧರಿಸಿದುದ ರಿಂದ ಮಲಬಾರದಲ್ಲಿ ಗಂಭೀರ ಯುದ್ಧ ಪರಿಣಮಿಸಿತು. ಕಣ್ಣನೋರಿನಲ್ಲಿ ಪೋರ್ತುಗೀಜರ ಮೇಲೆ ಹಲ್ಲೆ ಮಾಡಲಾಯಿತು, ಮತ್ತು ಘೋರ ಕದನಗಳ ಸರಣಿ ಸಂಭವಿಸಿತು. ಅವುಗಳಲ್ಲಿ ಅಧಿಪತಿ ನರೊನ್ಹಾ ನಲವತ್ತು ಸಾವಿರ ತೆಂಗಿನ ಮರಗಳನ್ನು ಕಡಿದು ನಾಡನ್ನು ಹಾಳುಗೆಡವಿದ ಮತ್ತು ಅನೇಕ ಜನರನ್ನು ಧ್ವಂಸ ಮಾಡಿದ. ಆದರೆ ಕೊನೆಗೆ ಶಾಂತಿ ಏರ್ಪಟ್ಟಿತು.

---

1 ಇಂತಹ ಎಂಬತ್ತೆಂಟರ ಸ್ಥಳ ಪಟ್ಟಿಯನ್ನು ನಾನು ನನ್ನ "ಲಿಸ್ಟ್ಸ್ ಆಫ್ ಆ್ಯಂಟಿ-ಕ್ವಿಟಿಜ್, ಮದ್ರಾಸ್" (ಸಂ ೨. ಪು. ೧೬೪ರಲ್ಲಿ) ಪ್ರಕಟಿಸಿದ್ದೇನೆ. ಅವುಗಳಲ್ಲಿ ಎಂಬತ್ನಾಲ್ಕರ ಕಾಲ ನಿರ್ಣಯವಾಗಿದೆ.

2 "ಸೌಥ್ ಇಂಡಿಯನ್ ಇನ್‌ಸ್ಕ್ರಿಪ್‌ಶನ್ಸ್", ಸಂ. ೧. ಪು. ೭೦

3 ಡೆಕ್ಕಡಾ VI, I, V ಅಧ್ಯಾಯ ೫

4 'ತೇತಾರಾನ' 'ರಾಮಿಗುಪ' ಮತ್ತು 'ಜೌಮಿಸ್ಸ್ಯ ಆಯ' (ಪಠ್ಯ, ಮುಂದೆ ಪು. ೩೧೪).

5 ಪು. ೧೦೮

6 ಡೆಕಡಾ VI.I.V ಅಧ್ಯಾಯ ೫

7 ಎಪಿಗ್ರಾಫಿಯಾ ಇಂಡಿಕಾ iii ೨೩೬.

8 ರಾಮರಾಯ 'ಸೇವುರಾಯನ ಮಗನ ಮಗಳನ್ನು ಮದುವೆಯಾಗಿ ಆ ನೆಂಟಸ್ತಿಕೆ ಯಿಂದ ತನ್ನ ಪ್ರಭಾವ ಮತ್ತು ಶಕ್ತಿಗಳನ್ನು ಹೆಚ್ಚಿಸಿಕೊಂಡ" ಎಂದು ಫಿರಿಸ್ತಾ (ಸ್ಕಾಟ್, ೧.೨೫೨) ಹೇಳುತ್ತಾನೆ. ಹಾಗಿದ್ದರೆ "ಸೇವುರಾಯ" ಮೊದಲ ನರಸನಾಗಿರಬೇಕು. "ಸೇವುರಾಯ ನಿಧನ ಹೊಂದಿದ ನಂತರ ಪಟ್ಟಕ್ಕೆ ಬಂದ ಅವನ ಅಲ್ಪವಯಿ ಮಗ ಬಹಳ ಕಾಲ ಬದುಕದೆ ಸಿಂಹಾಸನವನ್ನು ತಮ್ಮನಿಗೆ ಬಿಟ್ಟುಹೋದ" ಎಂದು ಚರಿತ್ರಕಾರ ಹೇಳುತ್ತಾನೆ. ಅಂದಮೇಲೆ ಈ ಸಹೋದರರೆಂದರೆ ವೀರ ನರಸಿಂಹನೆಂದೂ ಕರೆಯಲಾದ ಎರಡನೆಯ ನರಸ ಮತ್ತು ಕೃಷ್ಣದೇವ, ಫಿರಿಸ್ತಾನ ವೃತ್ತಾಂತದ ಮಿಕ್ಕ ಭಾಗ ನಮ್ಮ ಮಾಹಿತಿಯ ಇತರ ಮೂಲಗಳೊಂದಿಗೆ ಸರಿಹೊಂದುವುದಿಲ್ಲ. ಕೃಷ್ಣದೇವನ ಅಳಿಯನಾಗಿದ್ದುದರಿಂದ

ರಾಮ 'ಅಳಿಯ' ನೆಂದೇ ಕರೆಯಲ್ಪಡುತ್ತಿದ್ದ ಮತ್ತು ಆ ಹೆಸರಿನಿಂದಲೆ ಅವನು ಯಾವಾಗಲೂ ಪರಿಚಿತನಾಗಿದ್ದಾನೆ.

9 ಇಂಡಿಯನ್ ಆ್ಯಂಟಿಕ್ವಿಟಿಜ್, xiii ೧೫೪.

10 ಮೇಲಿನ ವಂಶಾವಳಿ ನೋಡಿರಿ. ತರುಣ ಮಗ ವೆಂಕಟ, ಮತ್ತು ಕಕ್ಕ ರಂಗ.

11 ಸಂ. ೪. ಪು. ೨೪೭-೨೪೯, ೨೭೬-೨೮೨.

12 ಇವರಾರೆಂಬುದು ನಮಗೆ ತಿಳಿಯದು. ಹುಡುಗ ವೆಂಕಟನ ಕಕ್ಕಂದಿರು ರಂಗನ ಇಲ್ಲವೆ ಅಚ್ಯುತನ ವಿಧವೆ ರಾಣಿಮಾತೆಯ ಸಹೋದರರಾಗಿರಬಹುದು. ಉಲ್ಲೇಖಿತ ವಾದ ಅಚ್ಯುತನ ಭ್ರಾತೀಯ ಸದಾಶಿವನಾಗಿರಲಾರ. ಏಕೆಂದರೆ, ಅವನು ರಾಣಿಯ ಭ್ರಾತ್ರೀಯನಾಗಿದ್ದಿರಬಹುದು. ಬಾಲರಾಜನ ಹತ್ಯೆ ಫಿರಿಸ್ತಾ ಹೇಳುವ 'ಹೋಜಿ' ತಿರುಮಲ ಗ್ರೆದ ಶಿಶುರಾಜಕುಮಾರನ ಹತ್ಯೆಯನ್ನು ಜ್ಞಾಪಿಸುತ್ತದೆ.

13 ಅಂದರೆ, ಕೃಷ್ಣದೇವನ ತಂಗಿ, ಮೇಲೆ ಹೇಳಿದಂತೆ, ಇಲ್ಲಿ ನಿಸ್ಸಂದೇಹವಾಗಿಯೂ ಉಲ್ಲೇಖಿತವಾಗಿರುವ ರಾಮರಾಯ ನಮಗೆ ತಿಳಿದುಬಂದಿರುವ ಮಟ್ಟಿಗೆ ಕೃಷ್ಣದೇವನ ಮಗಳನ್ನು ಮದುವೆಯಾದ, ತಂಗಿಯನ್ನಲ್ಲ.

14 ರಾಮ ಮತ್ತು ಮಂತ್ರಿಯಾಗಿದ್ದ ತಿರುಮಲ ಹಾಗೂ ಮಹಾ ದಂಡನಾಯಕನಾಗಿದ್ದ ವೆಂಕಟಾದ್ರಿ ಅವನ ಇಬ್ಬರೂ ಸಹೋದರರು ೧೫೬೫ರಲ್ಲಿ ತಮ್ಮ ಪತನಕ್ಕೆ ಮುನ್ನ ಮೂವತ್ತು ವರ್ಷಗಳವರೆಗೆ ನ್ಯಾಯಸಮ್ಮತವಾದ ರಾಜರನ್ನು ಬಂದಿಗಳನ್ನಾಗಿ ಇಟ್ಟಿದ್ದರು. ಹಾಗಿದ್ದರೆ ಇದು ಅಚ್ಯುತನ ಆಳ್ವಿಕೆಯನ್ನೂ ಒಳಗೊಳುತ್ತದೆ. ಮತ್ತು ಈ ಕಥನ ರಾಜಾ ಅಚ್ಯುತ ಸ್ವತಂತ್ರನಾಗಿದ್ದ ಆದರೆ ತನ್ನ 'ಭಾವಂದಿರ' ಕೆಟ್ಟ ಪ್ರಭಾವಕ್ಕೊಳಗಾಗಿದ್ದ ಎಂದು ಚಿತ್ರಿಸುವ ನೂನಿಜ್‌ನ ಕಥನದಿಂದ ಭಿನ್ನ ವಾಗಿವೆ. ಇವರಿಬ್ಬರೂ ಕೃಷ್ಣದೇವನ ಇಬ್ಬರು ಮಕ್ಕಳನ್ನು ಮದುವೆಯಾಗಿದ್ದರೆಂದು ಹೇಳಲಾಗುವ ರಾಮ ಮತ್ತು ತಿರುಮಲರನ್ನು ಸೂಚಿಸುತ್ತಾರೆ. ಆದರೆ, ಅವರು ಅಚ್ಯುತನ ನಿಜವಾದ ಭಾವಂದಿರಾಗಿರಲಿಕ್ಕಿಲ್ಲ.

15 ಸೆನ್ಹೊರ್ ಲೋಪ್ಸ್ **Dos Reis de Bisnaga**, ಪ್ರವೇಶ, ಪು.**lxlx**

16 ಫಿರಿಸ್ತಾ (ಸ್ಕಾಟ್, ೧.೨೭೧).

17 ಫಿರಿಸ್ತಾ ಹೀಗೆ. ಬ್ರಿಗ್ಸ್ ಅನುವಾದಿಸಿದ ಗೋಲ್ಕೊಂಡದ ಕುತುಬ್ ಶಾಹಿ ರಾಜ ವಂಶದ ಚರಿತ್ರೆಕಾರ, ಜಮ್‌ಶಿದ್‌ನ ಪೂರ್ವಾಧಿಕಾರಿಯಾದ ಖುಲಿ ಕುತುಬ್ ಶಾಹನ ಬಗೆಗೆ ಈ ಕತೆ ಹೇಳುತ್ತಾನೆ (ಫಿರಿಸ್ತಾ, ಬ್ರಿಗ್ಸ್, ೩, ೩೨೧).

18 ಪೋರ್ತುಗೀಜರು ಈ ಅವಧಿಯಲ್ಲಿ ತಮ್ಮ ನೆರೆಯ ಎರಡು ದೊಡ್ಡ ರಾಜ್ಯಗಳೊಂದಿಗೆ ಹೊಂದಿದ ರಾಜಕೀಯ ಮತ್ತು ವಾಣಿಜ್ಯ ಸಂಬಂಧಗಳ ಮೇಲೆ ಬಹಳ ಬೆಳಕು ಚೆಲ್ಲುವುದರಿಂದ ಈ ಒಪ್ಪಂದದ ಕರಾರುಗಳು ಸ್ವಾರಸ್ಯಕರವಾಗಿವೆ.

ಒಪ್ಪಂದ ಮಾಡಿಕೊಂಡ ಪಕ್ಷಗಳೆಂದರೆ, ತನ್ನ ಪ್ರತಿನಿಧಿ ಕ್ಯಾಪ್ಟನ್-ಜನರಲ್ ಮತ್ತು ಗೋವಾದ ಮಂಡಲಾಧಿಪತಿ ಡಾಮ್ ಜೊಆಒ ದ ಕ್ಯಾಸ್ಟ್ರೊನ

ಮೂಲಕ ಪೋರ್ತುಗಾಲದ ರಾಜ ಮತ್ತು ಬೀಸನಗದ ರಾಜ ಮಹಾ ಹಾಗೂ ಬಲಿಷ್ಠ ರಾಜಾ ಸದಾಶಿವ ಎಂದು ಹೇಳಲಾಗಿದೆ.

(ಅ) ಪ್ರತಿಯೊಂದು ಪಕ್ಷವೂ ಇನ್ನೊಂದರ ಮಿತ್ರರ ಮಿತ್ರ ಹಾಗೂ ಶತ್ರುಗಳ ಶತ್ರು ಆಗುವುದು; ಮತ್ತು ನಿಜಾಮುಶಾಹನನ್ನು ಯಾವಾಗಲೂ ಬಿಟ್ಟು ಭಾರತದ ಇತರ ಎಲ್ಲ ರಾಜರು ಮತ್ತು ಅಧಿಪತಿಗಳ ವಿರುದ್ಧ ಪ್ರಸಂಗ ಬಂದಾಗ ತಮ್ಮೆಲ್ಲ ಶಕ್ತಿಯೊಂದಿಗೆ ಇನ್ನೊಂದಕ್ಕೆ ನೆರವಾಗುವುದು.

(ಬ) ಗೋವಾದಲ್ಲಿ ಬಂದಿಳಿದ ಎಲ್ಲ ಅರಬ್ಬಿ ಮತ್ತು ಪರ್ಶಿಯನ್ ಕುದುರೆಗಳನ್ನು ಯುಕ್ತ ಸೂಚನೆ ಹಾಗೂ ಯೋಗ್ಯ ಹಣಸಂದಾಯದ ಬಳಿಕ ಕೊಳ್ಳಲು ವಿಜಯನಗರದ ರಾಜನಿಗೆ ಗೋವಾದ ಮಂಡಲಾಧಿಪತಿ ಅನುಮತಿ ನೀಡಬೇಕು. ಒಂದನ್ನು ಕೂಡ ಬಿಜಾಪುರಕ್ಕೆ ಕಳಿಸಲು ಅನುಮತಿ ನೀಡಬಾರದು.

(ಕ) ವಿಜಯನಗರದ ರಾಜ ಕರಾವಳಿಯೊಂದಿಗೆ ವ್ಯಾಪಾರ ಮಾಡುವ ತನ್ನ ರಾಜ್ಯದ ಎಲ್ಲ ವರ್ತಕರನ್ನು ತಮ್ಮ ಸರಕುಗಳನ್ನು ಪೋರ್ತುಗೀಜರು ದಳ್ಳಾಳಿಗಳನ್ನು ಹೊಂದಿರುವ ಬಂದರುಗಳ ಮೂಲಕವೆ ಕಳಿಸುವಂತೆ ಕಡ್ಡಾಯಗೊಳಿಸಬೇಕು. ಬಿಜಾಪುರದ ಬಂದರುಗಳಿಗೆ ಸಾಗಲು ಯಾವುದನ್ನೂ ಬಿಡಕೂಡದು.

(ಡ) ವಿಜಯನಗರದ ರಾಜ ತನ್ನ ರಾಜ್ಯದೊಳಗೆ ಲವಣ ಮತ್ತು ಕಬ್ಬಿಣವನ್ನು ವಿಜಾಪುರದ ಯಾವುದೆ ಬಂದರಿನಿಂದ ಆಮದಾಗುವುದನ್ನು ನಿಷೇಧಿಸಬೇಕು ಮತ್ತು ಅವುಗಳ ಖರೀದಿಯನ್ನು ಪೋರ್ತುಗೀಜ ದಳ್ಳಾಳಿಗಳಿಂದಲೆ ಮಾಡುವಂತೆ ಕಡ್ಡಾಯಗೊಳಿಸಬೇಕು.

(ಇ) ಬಟ್ಟೆ, ತಾಮ್ರ, ಸತುವು, ಚೀನಿ ರೇಷ್ಮೆ ಇತ್ಯಾದಿಗಳ ವಿಷಯದಲ್ಲೂ ಹಾಗೆಯೆ.

(ಫ) ವಿಜಯನಗರದ ರಾಜ ಯಾವ ಮಹಮ್ಮದೀಯ ಹಡಗು ಅಥವಾ ಹಡಗು ಪಡೆಯನ್ನು ತನ್ನ ಬಂದರುಗಳಲ್ಲಿ ನಿಲ್ಲಲು ಕೊಡಬಾರದು ಮತ್ತು ಯಾವುದಾದರೂ ಬಂದರೆ ಅವುಗಳನ್ನು ಸೆರೆಹಿಡಿದು ಗೋವಾಕ್ಕೆ ಕಳಿಸಬೇಕು. ಎರಡೂ ಪಕ್ಷಗಳು ಆದಿಲ್‌ಶಾಹನ ಮೇಲೆ ಯುದ್ಧ ಹೂಡಲು ಒಪ್ಪುತ್ತವೆ. ಮತ್ತು ಅವನಿಂದ ವಶಪಡಿಸಿಕೊಂಡ ಎಲ್ಲ ಪ್ರದೇಶ ವಿಜಯನಗರಕ್ಕೆ ಸೇರತಕ್ಕದು. ಆದರೆ, ಉತ್ತರದಲ್ಲಿ ಬಂಡಾದಿಂದ ದಕ್ಷಿಣದಲ್ಲಿ ಸಿಂಟ ಕೋರಾದವರೆಗಿನ ಪಶ್ಚಿಮ ಘಟ್ಟಗಳ ಮೇಲಿರುವ ಪ್ರದೇಶಗಳು ಮಾತ್ರ ಪೋರ್ತುಗಾಲದ ರಾಜನಿಗೆ ಸೇರತಕ್ಕದ್ದು.

19 ಮುಹರಮ್, ಕ್ರಿ.ಶ. ೯೫೬. ಆದರೆ ಅಸದ ಖಾನ್ ೧೫೪೫ರಲ್ಲಿ ತೀರಿಕೊಂಡನೆಂದು ಪೋರ್ತುಗೀಜ ದಾಖಲೆಗಳು ತಿಳಿಸುತ್ತವೆ (ಡ್ಯಾನ್ವರ್ಸ್, ೧,೪೬೫).

20 ಡ್ಯಾನ್ವರ್ಸ್‌ನ್ ಪೋರ್ತುಗೀಜ್ ಇನ್ ಇಂಡಿಯಾ", ೧.೪೬೫, ೪೬೬.

21 ಬ್ರಿಗ್ಸ್. ೩.೩೨೮.

22 ಮುಂದೆ, ಪು. ೩೮೩

23 ಬ್ರಿಗ್ಸ್‌ನ 'ಫಿರಿಸ್ತಾ', ೩.೫೯೭, ಇತ್ಯಾದಿ.

24 ಸೆನ್ಹೊರ ಲೋಪ್ಸ್ ಲಿಸ್ಬನ್‌ನಲ್ಲಿನ **Torne do Tombo** ಪತ್ರಾಗಾರದಲ್ಲಿ ಇತ್ತೀಚೆಗೆ ಕ್ರಿ.ಶ. ೧೫೫೫ ದಿನಾಂಕದ ಒಂದು ಕಾಗದ ಪತ್ತೆಹಚ್ಚಿದ್ದಾನೆ. ವಿಜಯನಗರದ ರಾಜ ೭೦೦,೦೦೦ ಪರ್ದಾಒಗಳ ಕಾಣಿಕೆಗೆ ಪ್ರತಿಯಾಗಿ ಐನೂಲ್ ಮುಲ್ಕ್ ಮತ್ತು 'ಮೀಲ್' (ಪೋರ್ತುಗೀಜರು ರಾಜಕುಮಾರ ಅಬ್ದುಲ್ಲಾನನ್ನು "ಮಿಲ್‌ಖಾನ್" ಎಂದು ಕರೆಯುತ್ತಿದ್ದರು,)ರ ವಿರುದ್ಧ ಇಬ್ರಾಹಿಮ್ ಆದಿಲ್ ಶಾಹನಿಗೆ ನೆರವಾಗಲು ಒಪ್ಪಿಗೆ ನೀಡಿದ್ದನೆಂದು ಈ ಕಾಗದ ತಿಳಿಸುತ್ತದೆ (ಕಾರ್ಪೊ ಕ್ರಾನಾಲಾಜಿಕೊ, ಭಾಗ ೧, ಕಟ್ಟು ೯೭, ನಂ.೪೦).

25 ಸ್ಕಾಟ್‌ನ ಅನ್ವಿತ್ತಿ, ೧.೨೦೪.

26 ಮಹಮ್ಮದೀಯರು ಯಾವಾಗಲೂ ರಾಮ ರಾಜನನ್ನು ರಾಜನೆಂದೇ ಪರಿಗಣಿಸಿದಂತೆ ತೋರುತ್ತದೆ. ಆ ಕಾಲಕ್ಕೆ ಸದಾಶಿವ ಬಹುಶಃ ತೀರ ಚಿಕ್ಕವನಿದ್ದು ಮಗನನ್ನು ಪಡೆದಿರುವ ಸಾಧ್ಯತೆಯಿಲ್ಲ, ಮತ್ತು ಪ್ರಸ್ತಾಪ ಪ್ರಾಯಶಃ ರಾಮನ ಮಗನನ್ನು ಕುರಿತು ಇರಬೇಕು.

27 ರಾಜಾ ಸದಾಶಿವನನ್ನು ತೋರಿಸದಿದ್ದುದು ಸ್ಪಷ್ಟವಿದೆ.

28 ಅಲಿ ಆದಿಲ್ ಈ ಭೆಟ್ಟಿಯನ್ನು ಪತ್ರ್ಯಕ್ಷವಾಗಿ ಮಾಡಿದನೆಂಬುದು ಬ್ರಿಗ್ಸ್ ಅನುವಾದಿಸಿ ಪ್ರಕಟಿಸಿದ ಗೋಲ್ಕೊಂಡದ ಚರಿತ್ರೆಕಾರನೊಬ್ಬನ ಕೃತಿಯ ವೃತ್ತಾಂತದಿಂದ ಸ್ಥಿರಪಟ್ಟಿದೆ (ಫಿರಿಸ್ತಾ, ೩.೪೦೨). ಅದೇ ರೀತಿಯ ಅಂತ್ಯವಿದ್ದ ಮೇಲೆ ಹೇಳಲಾಗಿರುವ ಕ್ರಿ.ಶ. ೧೪೦೬ರಲ್ಲಿ ಫಿರುಜ್ ಶಾಹ ಬಾಹಮನಿ ರಾಜಾ ದೇವರಾಯನಿಗೆ ನೀಡಿದ ಭೆಟ್ಟಿಯ ಕತೆಯೊಂದಿಗೆ ಈ ಕತೆಯನ್ನು ಹೋಲಿಸಿ ನೋಡಬಹುದು.

23 ಡೆಕಡಾ ೭.I.vii ಅಧ್ಯಾಯ I.

30 ಬ್ರಿಗ್ಸ್‌ನ 'ಫಿರಿಸ್ತಾ', ೩.೪೦೩-೪೦೫ ಕೂಡ ನೋಡಿರಿ.

## ಅಧ್ಯಾಯ ೧೫

# ವಿಜಯನಗರದ ವಿನಾಶ (ಕ್ರಿ.ಶ. ೧೫೬೫)

**ರಾಮರಾಯನ ಅಹಂಕಾರ-ಅಹಮ್ಮದನಗರ ಆಕ್ರಮಣ - ವಿಜಯನಗರದ ವಿರುದ್ಧ ಮಹಮ್ಮದೀಯರ ಒಗ್ಗಟ್ಟು-ಐದು ರಾಜರ ಒಕ್ಕೂಟ-ತಾಳಿಕೋಟೆಗೆ ಅವರು ಸಾಗಿದುದು-ನಿರ್ಣಾಯಕ ಯುದ್ಧ, ೧೫೬೫ ಮತ್ತು ಹಿಂದೂಗಳ ಸಂಪೂರ್ಣ ಸೋಲು-ರಾಮರಾಯನ ಮರಣ-ವಿಜಯನಗರದಲ್ಲಿ ಭಯ ಭ್ರಾಂತಿ-ರಾಜ ಕುಟುಂಬದ ಪಲಾಯನ-ಮಹಾನಗರದ ಸುಲಿಗೆ-ಅದರ ಸಂಪೂರ್ಣ ಧ್ವಂಸ-ಫೆಡರಿಚಿಯ ಪ್ರಮಾಣಾಧಾ,೧೫೬೭-ಪೋರ್ತುಗೀಜ ವ್ಯಾಪಾರದ ಅವನತಿ ಮತ್ತು ಗೋವಾದ ಸಮೃದ್ಧಿಯ ಕ್ಷೀಣತೆ.**

ಏತನ್ಮಧ್ಯೆ, ಒಳನಾಡಿನಲ್ಲಿ ಘಟನೆಗಳು ತೀವ್ರವಾಗಿ ಮುಂದುವರಿಯುತ್ತಿದ್ದವು. ಈಗಾಗಲೆ ವರ್ಣಿಸಿದಂತೆ, ಆದಿಲ್ ಶಾಹ ಮತ್ತು ರಾಮರಾಯ ನಿಜಾಮ ಶಾಹನ ಪ್ರದೇಶಗಳನ್ನು ಹಾಳುಗೆಡವಿದ ಮೇಲೆ ಬಿಜಾಪುರಕ್ಕೆ ಕಲ್ಯಾಣವನ್ನು ಹಿಂದಕ್ಕೆ ಕೊಟ್ಟು ಶಾಂತಿ ಮಾಡಿಕೊಳ್ಳಲಾಯಿತು[1] ; ಆದರೆ ಮಿತ್ರ ಸೈನ್ಯಗಳು ಮರಳಿದ ಕೂಡಲೆ ಹುಸೇನ ಇಬ್ರಾಹಿಮ್, ಕುತಬ್ ಶಾಹನೊಂದಿಗೆ ಒಪ್ಪಂದ ಮಾಡಿಕೊಂಡು ಪುನಃ ಅಲಿ ಆದಿಲ್‌ನ ಮೇಲೆ ಆಕ್ರಮಣ ಮಾಡಲು ದಂಡೆತ್ತಿ ಬಂದ, ಪುನಃ ಅಲಿ ವಿಜಯನಗರದ ನೆರವು ಕೇಳಿದ, ಮತ್ತು ಪುನಃ ರಾಮರಾಯ ಅವನ ನೆರವಿಗೆ ಬಂದ, ಈ ಸಲ ೫೦,೦೦೦ ಅಶ್ವ ಮತ್ತು ಅಪಾರ ಕಾಲಾಳು ಬಲದೊಂದಿಗೆ ವಿರೋಧಿ ಬಲಗಳು ಕಲ್ಯಾಣದಲ್ಲಿ ಕೂಡಿದಾಗ ಕುತಬ್ ಶಾಹ ಪಕ್ಷತ್ಯಾಗ ಮಾಡಿ ಅಲಿ ಆದಿಲ್‌ನನ್ನು ಸೇರಿಕೊಂಡ, ಮತ್ತು ಹುಸೇನ ಅಹಮದನಗರಕ್ಕೆ ಹಿಂತಿರುಗಲೇಬೇಕಾಯಿತು. ತನ್ನ ರಾಜಧಾನಿಯಲ್ಲಿಯೆ ಆಕ್ರಮಣಕ್ಕೀಡಾದ ಅವನು ಹಿಂತೆಗೆದ.

"ಮೂರು ಸಾರ್ವಭೌಮರು ಅಹಮದನಗರದ ಮೇಲೆ ಮುತ್ತಿಗೆ ಹಾಕಿದರು, ಮತ್ತು ಸುತ್ತಲಿನ ನಾಡನ್ನೆಲ್ಲ ವಿಧ್ವಂಸಗೊಳಿಸಲು ವಿವಿಧ ದಿಕ್ಕುಗಳಲ್ಲಿ ದಳಗಳನ್ನು ಕಳಿಸಿದರು. ಬೀಜನಗರದ ಹಿಂದೂಗಳು ಕಟ್ಟಡಗಳನ್ನು ಸುಡುವ ಮತ್ತು ನೆಲಸಮ ಮಾಡುವ, ಮಸೀದೆಗಳಲ್ಲಿ ತಮ್ಮ ಕುದುರೆ ಕಟ್ಟುವ ಮತ್ತು ಪವಿತ್ರ ಸ್ಥಳಗಳಲ್ಲಿ ತಮ್ಮ ಮೂರ್ತಿಪೂಜೆ ಮಾಡುವ ಘೋರ ಕೃತ್ಯಗಳನ್ನು ಎಸಗಿದರು ; ಆದರೆ ಇದನ್ನು ಲೆಕ್ಕಿಸದೆ, ಮುತ್ತಿಗೆಯನ್ನು ಅತಿ ಜೋರಿನಿಂದ ಮುಂದುವರಿಸಲಾಯಿತು. ಮಳೆಗಾಲ ಬಂದಾಗ ವೈರಿ ಮುತ್ತಿಗೆ ತೆರವು ಮಾಡಲೇಬೇಕಾಗುತ್ತದೆಂಬ ಆಸೆಯಿಂದ ಕಾವಲುದಂಡು ಪಟ್ಟಾಗಿ ಹಿಡಿದುಕೊಂಡಿತ್ತು."

"ಮಳೆ ಪ್ರಾರಂಭವಾದಾಗ ಮಿತ್ರ ಸೈನ್ಯಗಳ ಠಾಣೆಯಲ್ಲಿ ನೆರೆ, ಜೌಗು ಮತ್ತು ಆಹಾರ ಧಾನ್ಯಗಳ ಕೊರತೆಯಿಂದ ಕಷ್ಟ ಸುರುವಾಯಿತು, ಮತ್ತು ಕುತಬ್ ಶಾಹನೂ ಮುತ್ತಿಗೆಗೊಳಗಾದವರೊಂದಿಗೆ ಗುಟ್ಟಾಗಿ ಪತ್ರವ್ಯವಹಾರ ಮಾಡಿದ್ದು ದಲ್ಲದೆ ಅವರಿಗೆ ಗುಪ್ತವಾಗಿ ಕಾಳು ಕಳಿಸಿಕೊಟ್ಟ."[2]

ಆದುದರಿಂದ ಮುತ್ತಿಗೆಯನ್ನು ತೆರವು ಮಾಡಲಾಯಿತು, ಮತ್ತು ಅನತಿ-ಕಾಲದಲ್ಲಿಯೆ ಮಿತ್ರ ಸೈನ್ಯಗಳು ಅಗಲಿದವು, ಮತ್ತು ಹಿಂದೂ ಸೈನ್ಯ ಮರಳಿ ಮನೆಗೆ ಬಂತು.

"ಹುಸೇನ ನಿಜಾಮು ಶಾಹನ ವರ್ತನೆಯಿಂದ ಒತ್ತಡಕ್ಕೊಳಪಟ್ಟು ರಾಮರಾಜ ನನ್ನು ಅಲಿ ಆದಿಲ್ ಶಾಹ ತನ್ನ ನೆರವಿಗೆ ಕರೆಸಿಕೊಂಡ ಪ್ರಥಮ ದಂಡಯಾತ್ರೆಯಲ್ಲಿ ಅಹಮದನಗರದಲ್ಲಿ ಹಿಂದೂಗಳು ಘೋರ ಅತ್ಯಾಚಾರಗಳನ್ನು ಎಸಗಿದರು, ಮತ್ತು ಮಸೀದೆಗಳಲ್ಲಿ ಹಾಡುತ್ತ ಹಾಗೂ ತಮ್ಮ ಮೂಢ ಪೂಜೆ ಮಾಡುತ್ತ ಮಹಮ್ಮದೀ ಯರ ಪವಿತ್ರ ಧರ್ಮಕ್ಕೆ ಯಾವ ಅಗೌರವದ ಲಕ್ಷಣವನ್ನೂ ತೋರಿಯಲಿಲ್ಲ. ತನ್ನ ಧರ್ಮಕ್ಕಾದ ಅಪಮಾನ ಕಂಡು ಸುಲ್ತಾನ ಬಹಳ ನೊಂದುಕೊಂಡ, ಆದರೆ ಅದನ್ನು ತಡೆಯುವ ಶಕ್ತಿ ತನ್ನಲ್ಲಿಲ್ಲದುದರಿಂದ ತಾನು ಅದನ್ನು ಗಮನಿಸಿದ್ದನೆಂದು ತೋರಗೊಡಲಿಲ್ಲ. ಈ ದಂಡಯಾತ್ರೆಯ ಮುಕ್ತಾಯ ಕಾಲಕ್ಕೆ ರಾಮರಾಜ ಸಹ ಇಸ್ಲಾಮ ಸುಲ್ತಾನರನ್ನು ಮಹತ್ವದವರೇನಲ್ಲವೆಂದು ಪರಿಗಣಿಸಿ ಅವರ ರಾಯಭಾರಿ ಗಳಿಗೆ ತಕ್ಕ ಮರ್ಯಾದೆಗಳನ್ನು ನಿರಾಕರಿಸಿದ. ಅವರನ್ನು ತಮ್ಮ ಸಮಕ್ಷಮಕ್ಕೆ ಬರಲು ಅನುಮತಿ ನೀಡಿದಾಗ ಅವರಿಗೆ ಕುಳಿತುಕೊಳ್ಳಲು ಸಹ ಹೇಳಲಿಲ್ಲ ಮತ್ತು ಅವರನ್ನು ಅತ್ಯಂತ ಅವಹೇಳನಕರವಾದ ಅನಾದರ ಮತ್ತು ಜಂಭದಿಂದ ನೋಡಿ ಕೊಂಡ. ತಾನು ತನ್ನ ಪರಿವಾರದೊಂದಿಗೆ ಸಾರ್ವಜನಿಕರ ಮಧ್ಯೆ ಇದ್ದಾಗ ಅವರನ್ನು ಬರಹೇಳಿ ನೆಲದ ಮೇಲೆ ನಿಲ್ಲಿಸಿ ತಾನು ಆಜ್ಞೆ ಮಾಡುವವರೆಗೂ ಕುದುರೆ ಹತ್ತಲು ಕೊಡುತ್ತಿರಲಿಲ್ಲ. ಹಿಂದಿನ ನುಲ್ದಿರುಕ್ ದಂಡಯಾತ್ರೆಯಿಂದ ಮರಳಿದ ನಂತರ ಅವನ ಸೈನ್ಯದ ಅಧಿಕಾರಿಗಳು ಮತ್ತು ಯೋಧರು ಮುಸಲ್ಮಾನರೊಂದಿಗೆ ಸಾಮಾನ್ಯತಃ ಸೊಕ್ಕು, ಹೀಯಾಳಿಕೆ ಮತ್ತು ಉದ್ಧಟ ಭಾಷೆಯಲ್ಲಿ ನಡೆದು ಕೊಂಡರು ; ವಿದಾಯ ಹೇಳದ ರಾಮರಾಜ ಕುತಬ್ ಶಾಹ ಮತ್ತು ಆದಿಲ್ ಶಾಹರ ರಾಜ್ಯಗಳ ಮೇಲೆ ಆಸೆಗಣ್ಣಿಟ್ಟು ಇಬ್ಬರ ಗಡಿಗಳಿಗೂ ಸೈನ್ಯಗಳನ್ನು ಕಳಿಸಿದ.

ಆದುದರಿಂದ, ಇಬ್ಬರೂ ದೊಡ್ಡ ಶಾಹರು ಹಿಂದೂಗಳಿಗೆ ಕೆಲವು ಪ್ರದೇಶ ಗಳನ್ನು ಬಿಟ್ಟುಕೊಟ್ಟರು, ಮತ್ತು ಗೋಲ್ಕೊಂಡದಿಂದ ಘಾನಪುರ ಮತ್ತು ಪಾಂಗಲ್ ಗಳನ್ನು ರಾಮ ಪಡೆದುಕೊಂಡ. ಅದೇ ಕೊನೆಯ ಹಿಂದೂ ಯಶಸ್ಸು.

"ರಾಮರಾಜ ದಿನಾಲು ಮುಸಲ್ಮಾನರ ಪ್ರದೇಶಗಳನ್ನು ಅತಿಕ್ರಮಿಸುತ್ತ ಮುಂದುವರಿಯಲಾಗಿ ಕೊನೆಗೆ ಆದಿಲ್ ಶಾಹ ಸಾಧ್ಯವಿದ್ದರೆ ಅವನ ವಿರುದ್ಧ

ಮುಹಮ್ಮದೀಯರ ಸಾರ್ವತ್ರಿಕ ಒಕ್ಕೂಟದಿಂದ ಅವನ ಸೊಕ್ಕನ್ನು ಶಿಕ್ಷಿಸಲು ಮತ್ತು ಶಕ್ತಿಯನ್ನು ಕುಗ್ಗಿಸಲು ನಿರ್ಧರಿಸಿದ ; ಆ ಉದ್ದೇಶಕ್ಕಾಗಿ ಅವನು ತನ್ನ ಮಿತ್ರರ ಹಾಗೂ ಆಪ್ತ ಸಲಹೆಗಾರರ ಸಭೆ ಕರೆದ."

ಅವರಲ್ಲಿ ಕೆಲವರು, ಬಹು ವಿಶಾಲ ಪ್ರದೇಶಗಳು ಹಾಗೂ ಆಶ್ರಿತರಾಜ್ಯಗಳಲ್ಲದೆ ಅರವತ್ತಕ್ಕೂ ಕಡಿಮೆಯಿರದ ಬಂದರುಗಳಿಂದ ಬರುತ್ತಿದ್ದ ಅಪಾರ ಆದಾಯಗಳಿಂದಾಗಿ ರಾಮರಾಯ ಬಹಳ ಶ್ರೀಮಂತನೂ ಶಕ್ತಿ ಶಾಲಿಯೂ ಆಗಿರುವನು ಮತ್ತು ಅವನ ಸೈನ್ಯಬಲ ಅಪಾರವಾಗಿದ್ದು ಯಾವನೊಬ್ಬ ಮುಹಮ್ಮದೀಯ ರಾಜನಿಗೂ ಒಬ್ಬಂಟಿಗನಾಗಿ ಅವನೊಂದಿಗೆ ಹೋರಾಡುವುದು ಸಾಧ್ಯವಿಲ್ಲ ಎಂದು ಪ್ರತಿಪಾದಿಸಿದರು. ಆದುದರಿಂದ, ದಕ್ಖನದ ಎಲ್ಲ ರಾಜರ ಒಕ್ಕೂಟ ರಚಿಸಿ ಸಂಯುಕ್ತ ಯುದ್ಧ ಹೂಡಬೇಕೆಂದು ಅವರು ಸುಲ್ತಾನನನ್ನು ಆಗ್ರಹಪಡಿಸಿದರು. ಅವರ ಅಭಿಪ್ರಾಯವನ್ನು ಅಲಿ ಆದಿಲ್ ಮನಸಾ ಒಪ್ಪಿದನು, ಮತ್ತು ಇಬ್ರಾಹಿಮ್ ಕುತಬ್ ಶಾಹನಿಗೆ ಗುಪ್ತ ರಾಯಭಾರ ಕಳಿಸುವುದರೊಂದಿಗೆ ಆ ಕೆಲಸ ಆರಂಭಿಸಿದ.

ಇಬ್ರಾಹಿಮ್ ಉತ್ಸುಕತೆಯಿಂದ ಒಪ್ಪಿ ಅಲಿ ಆದಿಲ್ ಮತ್ತು ಅಹಮದನಗರದ ಅವನ ಮಹಾ ವೈರಿಯ ಮಧ್ಯೆ ಮಧ್ಯಸ್ಥಗಾರನಾಗಿ ತನ್ನ ಸೇವೆಯನ್ನು ನೀಡಲು ಮುಂದಾದ. ಆ ರಾಜಧಾನಿಗೆ ಒಬ್ಬ ಪ್ರತಿನಿಧಿಯನ್ನು ಕಳಿಸಲಾಯಿತು ಮತ್ತು ಮುಂದಿಡಲ್ಪಟ್ಟಿದ್ದ ಮಹತ್ವದ ಸೂಚನೆಗಳ ಬಗೆಗೆ ಮುಂದಾಗಿಯೆ ಎಚ್ಚರಿಕೆ ನೀಡಲಾಗಿದ್ದ ಹುಸೇನ ಶಾಹ ಅವನನ್ನು ಏಕಾಂತ ಸಂದರ್ಶನದಲ್ಲಿ ಬರಮಾಡಿಕೊಂಡ. ರಾಯಭಾರಿ ಆಗ ರಾಜನ ಮುಂದೆ ಬಿಜಾಪುರ ಯೋಜನೆಯ ಪರವಾಗಿ ವಾದಗಳನ್ನು ಇಟ್ಟ.

"ಬಾಹಮನಿ ರಾಜರ ಕಾಲಕ್ಕೆ ಮುಸಲ್ಮಾನ ಶಕ್ತಿಯು ಬಲವೆಲ್ಲ ಒಬ್ಬರ ಕೈಯಲ್ಲಿರುತ್ತಿದ್ದುದರಿಂದ ಅದರ ಮತ್ತು ಬೀಜನಗರದ ರಾಯರ ಶಕ್ತಿಯ ಮಧ್ಯೆ ಹೆಚ್ಚು ಕಡಿಮೆ ಸಮತೋಲನವಿತ್ತು : ಈ ಮುಸಲ್ಮಾನ ಶಕ್ತಿ ವಿಭಜಿತವಾಗಿರುವುದರಿಂದ ಎಲ್ಲ ಮುಹಮ್ಮದೀಯ ರಾಜರೂ ಒಂದಾಗಿ ಕೂಡಬೇಕೆಂದು ಮತ್ತು ಅತ್ಯಂತ ಕಟ್ಟುನಿಟ್ಟಾದ ಮೈತ್ರಿ ಆಚರಿಸಬೇಕೆಂದೂ, ಹಾಗೆ ಮಾಡುವ ಮೂಲಕ ತಮ್ಮ ಬಲಶಾಲಿ ಸಾಮಾನ್ಯ ವೈರಿಯ ಆಕ್ರಮಣಗಳಿಂದ ಸುರಕ್ಷಿತವಾಗಿ ಮುಂದುವರಿಯಬಹುದೆಂದು, ಮತ್ತು ಕರ್ನಾಟಕದ ಎಲ್ಲ ರಾಜರನ್ನು ತನ್ನ ನೊಗದಡಿ ತಂದಿದ್ದ ಬೀಜನಗರದ ರಾಯರ ಅಧಿಕಾರ ಕುಗ್ಗಿ ಇಸ್ಲಾಮ ರಾಜ್ಯಗಳಿಂದ ದೂರ ಸರಿಸಬಹುದೆಂದು ; ತಮ್ಮ ಪಾಲನೆಗೆ ವಹಿಸಿಕೊಡಲಾಗಿದ್ದ, ಸರ್ವಶಕ್ತನ ಜವಾಬ್ದಾರಿಯೆಂದು ಪರಿಗಣಿಸಲ್ಪಡಬೇಕಿದ್ದ ತಮ್ಮ ಹಲವಾರು ರಾಜ್ಯಗಳ ಪ್ರಜೆಗಳು ಕಾಫಿರರ ದಬ್ಬಾಳಿಕೆಗಳಿಂದ ಮುಕ್ತರಾಗಿ ಇರಬಹುದೆಂದು ಮತ್ತು ಇನ್ನು ಮುಂದೆ ತಮ್ಮ

ಮಸೀದೆಗಳು ಹಾಗೂ ಪವಿತ್ರ ಸ್ಥಳಗಳು ಕಾಫಿರರ ವಾಸಸ್ಥಾನಗಳಾಗದಿರಬಹುದು
ಎಂದು ಅವನು ಪ್ರತಿಪಾದಿಸಿದ."

ಈ ವಾದಗಳು ತಮ್ಮ ಸಂಪೂರ್ಣ ಪ್ರಭಾವ ಬೀರಿದವು, ಮತ್ತು ಹುಸೇನ
ನಿಜಾಮ ಶಾಹ ತನ್ನ ಮಗಳು ಚಾಂದ ಬೀಬಿಯನ್ನು ಅಲಿ ಆದಿಲ್‌ನಿಗೆ ಮದುವೆ
ಮಾಡಿಕೊಟ್ಟು ಸೊಲ್ಲಾಪುರ ಕೋಟೆಯನ್ನು ಅವಳ ಆಪದ್ನಿಧಿಯೆಂದು ಕೊಡುವ
ಹಾಗೂ ತನ್ನ ಹಿರಿಯ ಮಗ ಮುರ್ತಿಜಾ, ಅಲಿಯ ತಂಗಿಯನ್ನು ಮದುವೆ
ಯಾಗಬೇಕೆಂದು ಏರ್ಪಾಟಾಗಿ ಎರಡೂ ರಾಜ್ಯಗಳು ವಿಜಯನಗರದ ಸ್ವಾಧೀನ ಮತ್ತು
ವಿನಾಶಕ್ಕಾಗಿ ಒಂದುಗೂಡಿದವು. ಕಾಲಾಂತರದಲ್ಲಿ ಮದುವೆಗಳನ್ನು ನೆರವೇರಿಸ
ಲಾಯಿತು ಮತ್ತು ಸುಲ್ತಾನರು ಪವಿತ್ರ ಯುದ್ಧಕ್ಕಾಗಿ ಸಿದ್ಧತೆಗಳನ್ನು ಮಾಡ
ಹತ್ತಿದರು.

"ಯುದ್ಧಕ್ಕೆ ಪೂರ್ವಭಾವಿಯಾಗಿ ತನ್ನ ಮಿತ್ರರಾಜನಿಂದ ಮುರಿದುಕೊಳ್ಳಲು
ತನಗೆ ನೆಪ ದೊರಕಿಸಿಕೊಳ್ಳಲೋಸುಗ ಅಲಿ ಆದಿಲ್ ಶಾಹ ರಾಮರಾಜನಲ್ಲಿಗೆ
ರಾಯಭಾರಿಯನ್ನು ಕಳಿಸಿ ತನ್ನಿಂದ ಕಿತ್ತುಕೊಳ್ಳಲಾಗಿದ್ದ ಕೆಲವು ಜಿಲ್ಲೆಗಳನ್ನು ತನಗೆ
ಪುನರ್ವಶ ಮಾಡಬೇಕೆಂದು ಕೇಳಿದ. ಅವನು ನಿರೀಕ್ಷಿಸಿದ್ದಂತೆಯೆ, ರಾಮರಾಜ
ರಾಯಭಾರಿಯನ್ನು ತನ್ನ ದರಬಾರಿನಿಂದ ಅವಹೇಳನಕರ ರೀತಿಯಲ್ಲಿ ಹೊರಗೆ
ಹಾಕಿದ ; ಮತ್ತು ಒಂದುಗೂಡಿದ ಸುಲ್ತಾನರು ಇಸ್ಲಾಮ ಧರ್ಮದ ಸಾಮಾನ್ಯ
ವೈರಿಯನ್ನು ಹತ್ತಿಕ್ಕಲೋಸುಗ ಸಿದ್ಧತೆಗಳನ್ನು ತೀವ್ರಗೊಳಿಸಿದರು."

ಇಬ್ರಾಹಿಮ್ ಕುತುಬ್ ಶಾಹನೂ ಒಕ್ಕೂಟವನ್ನು ಸೇರಿದನು ಮತ್ತು
ನಾಲ್ವರೂ ರಾಜರು ತಮ್ಮ ತಮ್ಮ ಸೈನ್ಯಗಳೊಂದಿಗೆ ಬಿಜಾಪುರದ ಬಯಲುಗಳಲ್ಲಿ
ಸಂಧಿಸಿದರು. ದಕ್ಷಿಣದತ್ತ ಅವರ ದಂಡುಪ್ರಯಾಣ ಸೋಮವಾರ, ಡಿಸೆಂಬರ ೨೬,
ಕ್ರಿ.ಶ. ೧೫೬೪[3]ರಂದು ಆರಂಭಿಸಿತು. ಅನೇಕ ಸಾವಿರದಷ್ಟಿದ್ದ ಅಶ್ವಪಡೆ ತಮ್ಮ
ಕುದುರೆಗಳನ್ನು ಅಲ್ಲಿನ ಎಳೆಯ ಬೆಳೆಗಳಲ್ಲಿ ಮೇಯಿಸಬಹುದಾದ ದಕ್ಖನ ನಾಡಿನ ಆಗ
ಒಣಗಿದ್ದ ಬಯಲುಗಳ ಮೇಲೆ ಸಾಗುತ್ತ ಮಿತ್ರಸೈನ್ಯಗಳು ದಕ್ಷಿಣ ಭಾರತದ
ಇತಿಹಾಸದಲ್ಲಿ ಅಜರಾಮರವಾಗಬೇಕೆಂದು ದೈವಸಂಕಲ್ಪಿತವಾದ ತಾಳಿಕೋಟೆಯ
ಚಿಕ್ಕ ಕೋಟೆ ಮತ್ತು ಪಟ್ಟಣದ ಬಳಿ ಕೃಷ್ಣಾ ನದಿಯ ನೆರೆಯನ್ನು ತಲುಪಿದವು.[4]

ಅದು ಡೋಣ ನದಿಯ ಮೇಲೆ ಕೃಷ್ಣೆಯೊಂದಿಗೆ ಆ ನದಿಯ ಸಂಗಮದಿಂದ
ಹದಿನಾರು ಮೈಲುಗಳ ದೂರದಲ್ಲಿ ಮತ್ತು ಈಗ ಮುಂಬಯಿ-ಮದ್ರಾಸ ಮಧ್ಯದ
ರೈಲು ನದಿ ದಾಟುವ ಸ್ಥಳದಿಂದ ಆರವತ್ತೈದು ಮೈಲು ಪಶ್ಚಿಮಕ್ಕೆ ಇದೆ. ವರ್ಷದ
ಆ ಕಾಲಕ್ಕೆ ಆ ಪ್ರದೇಶ ದೊಡ್ಡ ಸೈನ್ಯಪಡೆಗಳ ಸಾಗಣೆಗೆ ಅತ್ಯಂತ ಅನುಕೂಲ
ವಾಗಿತ್ತು, ಮತ್ತು ಋತು ತಂಪಾದ ಆಹ್ಲಾದಕರ ಗಾಳಿಯೊಂದಿಗೆ ಕೂಡಿದ
ಉಜ್ವಲ ಬಿಸಿಲುದಿನಗಳದ್ದಾಗಿತ್ತು.

ಆ ನಾಡಿನ ಪ್ರಭುವಾಗಿದ್ದ ಅಲಿ ಆದಿಲ್ ಇಲ್ಲಿ ತನ್ನ ಮಿತ್ರ ರಾಜರಿಗೆ ರಾಜಾತಿಥ್ಯ ಒದಗಿಸಿದ, ಮತ್ತು ಅವರು ಅಲ್ಲಿ ಸೈನ್ಯಗಳ ಸಾಗಣೆ ಹಾಗೂ ಆಹಾರ ಸಾಮಗ್ರಿ ವ್ಯವಸ್ಥೆಗಳನ್ನು ನೋಡಿಕೊಳ್ಳುತ್ತ ಮತ್ತು ನದಿಯನ್ನು ದಾಟಲು ಉತ್ತಮ ಸ್ಥಳದ ಬಗೆಗೆ ವರದಿ ಮಾಡಲು ಅಗ್ರಚಾರರನ್ನು ಕಳಿಸಿಕೊಡುತ್ತ ಹಲವಾರು ದಿನ ತಂಗಿದರು.

ವಿಜಯನಗರದಲ್ಲಿ ಅತ್ಯಂತ ಆತ್ಮವಿಶ್ವಾಸವಿತ್ತು. ಎಷ್ಟು ಬಾರಿ ಮುಸಲ್ಮಾನರು ಮಹಾ ರಾಜಧಾನಿಯನ್ನು ಘಾಸಿಗೊಳಿಸಲು ವಿಫಲ ಯತ್ನ ಮಾಡಿದರು ಮತ್ತು ಹೇಗೆ ಎರಡು ಶತಮಾನಗಳವರೆಗೆ ಅವರು ದಕ್ಷಿಣವನ್ನು ಪ್ರವೇಶಿಸುವಲ್ಲಿ ಯಶಸ್ವಿಯಾಗಿರಲಿಲ್ಲ ಎಂಬುದನ್ನು ಮೆಲುಕು ಹಾಕುತ್ತ "ಅದರ ನಿವಾಸಿಗಳು ಯಾವುದೆ ಭೀತಿ ಅಥವಾ ಆಪತ್ತಿನ ಅರಿವು ಇಲ್ಲದೆ ತಮ್ಮ ದೈನಂದಿನ ವೃತ್ತಿಗಳಲ್ಲಿ ತೊಡಗಿದ್ದರು; ಡ್ಯಾಮೊಕ್ಲಿಜ್‌ನ ಖಡ್ಗ ನತದೃಷ್ಟ ನಗರದ ಮೇಲೆ ತೂಗಾಡುತ್ತಿದ್ದಿಲ್ಲವೆಂಬಂತೆ ಎಲ್ಲ ತರಹದ ಸರಕನ್ನು ಹೊತ್ತ ಹೇರುಎತ್ತುಗಳು ಹಲವಾರು ಬಂದರುಗಳಿಗೆ ಅತ್ತಿಂದಿತ್ತ ಧೂಳುರಸ್ತೆಯ ಮೇಲೆ ಹೋಗಿಬರುತ್ತಿದ್ದವು ; ರಾಜನಾದ ಸದಾಶಿವ ಘನತೆಹೀನ ಏಕಾಂತದಲ್ಲಿ ತನ್ನ ನಿರುಪಯುಕ್ತ ಜೀವನ ಸಾಗಿಸುತ್ತಿದ್ದ, ಮತ್ತು ವಸ್ತುತಃ ರಾಜನಾಗಿದ್ದ ರಾಮರಾಯ ತನ್ನ ವೈರಿಗಳ ಚಲನವಲನಗಳ ಬಗೆಗೆ ಸೊಕ್ಕಿನ ಅನಾಸಕ್ತಿಯ ಮನೋಭಾವವನ್ನು ಒಂದು ಕ್ಷಣವೂ ಸಡಿಲುಗೊಳಿಸಲಿಲ್ಲ. "ಅವರ ರಾಯಭಾರಿಗಳನ್ನು ತಿರಸ್ಕಾರಪೂರ್ಣ ಭಾಷೆಯಲ್ಲಿ ನಡೆಸಿಕೊಂಡ ಮತ್ತು ಅವರ ವೈರ ಏನೂ ಮಹತ್ವದ್ದಲ್ಲ ಎಂದು ಪರಿಗಣಿಸಿದ" ಎಂದು ಫಿರಿಸ್ತಾ ಹೇಳಿದ.

ಆದಾಗ್ಯೂ ಅವನು ಸಾಮಾನ್ಯ ಮುನ್ನೆಚ್ಚರಿಕೆಗಳನ್ನು ನಿರ್ಲಕ್ಷಿಸಲಿಲ್ಲ, ಅವನ ಪ್ರಥಮ ಕ್ರಮವೆಂದರೆ ತನ್ನ ಕಡೆಯ ತಮ್ಮ ತಿರುಮಲ—ಫಿರಿಸ್ತಾನ "ಯೆಲ್ತುಮ ರಾಜ" ಅಥವಾ "ಈಲ್ತುಮರಾಜೆ"—ನನ್ನು ೨೦,೦೦೦ ಕುದುರೆ, ೧೦೦,೦೦೦ ಕಾಲಾಳು. ಮತ್ತು ೫೦೦ ಆನೆಗಳೊಂದಿಗೆ ಚೂಣಿಗೆ ಕಳಿಸಿ ಕೃಷ್ಣಾ ನದಿಯನ್ನು ದಾಟುವ ಎಲ್ಲ ಸ್ಥಾನಗಳನ್ನು ತಡೆಗಟ್ಟುವದಾಗಿತ್ತು. ಆ ಮೇಲೆ, ತನ್ನ ಎರಡನೆಯ ತಮ್ಮ ವೆಂಕಟಾದ್ರಿಯನ್ನು ಇನ್ನೊಂದು ದೊಡ್ಡ ಸೈನ್ಯದೊಂದಿಗೆ ಕಳಿಸಿಕೊಟ್ಟ ; ಅಂತಿಮವಾಗಿ, ಆಕ್ರಮಣದ ಸ್ಥಾನದತ್ತ ವಿಜಯನಗರ ಸಾಮ್ರಾಜ್ಯದ ಎಲ್ಲ ಬಲದೊಂದಿಗೆ ತಾನೆ ಸ್ವತಃ ಸಾಗಿದ. ದಂಡು ಎಲ್ಲ ಪ್ರಾಂತಗಳ ದೊಡ್ಡ ದೊಡ್ಡ ಪಡೆಗಳಿಂದ ಕೂಡಿದುದಾಗಿತ್ತು—ಕನ್ನಡಿಗರು ಮತ್ತು ಗಡಿಯ ತೆಲುಗರು, ಪಶ್ಚಿಮ ಮತ್ತು ಕೇಂದ್ರ ಭಾಗಗಳ ಮೈಸೂರಿಗಳು ಮತ್ತು ಮಲಬಾರಿಗಳೊಂದಿಗೆ ದಕ್ಷಿಣದ ದೂರದ ಜಿಲ್ಲೆಗಳ ತಮಿಳರು ಮಿಳಿತವಾಗಿದ್ದರು ; ಸ್ಥಳೀಯ ನಾಯಕರ ನಿಯಂತ್ರಣದಲ್ಲಿದ್ದ ಪ್ರತಿಯೊಂದು ದಳ ರಾಜ ನೇಮಿಸಿದ್ದ ತಾತ್ಪೂರ್ತಿಕ ಪ್ರಾಂತೀಯ ಮಾಂಡಲಿಕರು ಕೂಡಿಸಿದ ದಂಡುಗಳ ಭಾಗವಾಗಿತ್ತು. ಕೌಟೊ ಹೇಳುವಂತೆ ಅವರು ೬೦೦,೦೦೦

ಕಾಲಾಳು ಮತ್ತು ೧೦೦,೦೦೦ ಅಶ್ವಾಳುಗಳಷ್ಟಾಗಿದ್ದರು. ಅವನ ವೈರಿಗಳಲ್ಲಿ ಅದರ ಅರ್ಧ ಸಂಖ್ಯೆ ಇತ್ತು. ಅವುಗಳ ಚರ್ಯೆ ಮತ್ತು ಶಸ್ತ್ರಾಸ್ತ್ರಗಳು ಹೇಗಿದ್ದವೆಂಬ ಬಗೆಗೆ ನಲವತ್ತೈದು ವರ್ಷ ಹಿಂದೆ ವಿಜಯನಗರದಲ್ಲಿ[5] ನಡೆದ ಮಹಾ ಸೈನ್ಯ ಪರಿವೀಕ್ಷಣೆಯ ಪ್ರತ್ಯಕ್ಷದರ್ಶಿಯಾಗಿದ್ದ ಪ್ಯಾಸ್ ನೀಡುವ ವರ್ಣನೆಗಳನ್ನು ನೋಡಿ ಅರಿಯಬೇಕು. ಇಲ್ಲಿ ಯಾವಾಗಲೂ ನೆನಪಿಡುವ ಮಾತೆಂದರೆ ರಾಜನೊಂದಿಗೆ ಮೆರವಣಿಗೆಯಲ್ಲಿ ಯಾವ ಸಾಲುಗಳ ಮಧ್ಯೆ ಅವನು ಆಗ ಸಾಗಿದನೊ ಅವು ಬಹುಶಃ ಸೈನ್ಯದ ಮೇಲ್ತರಗತಿಯವಾಗಿದ್ದವು ಮತ್ತು ಸಾಮಾನ್ಯ ಯೋಧರು ಅತ್ಯಂತ ಹಗುರವಾದ ಕೆಲಸದ ಬಟ್ಟೆ ತೊಟ್ಟಿದ್ದರು, ಕೆಲವರ ಮೈ ಮೇಲೆ ಬಹುಶಃ ಯಾವುದೆ ಬಟ್ಟೆ ಯಿರಲಿಲ್ಲ, ಮತ್ತು ಭಲ್ಲೆ ಅಥವಾ ಕಠಾರಿಯಿಂದ ಸಜ್ಜಿತರಾಗಿದ್ದರು[6] ಎಂಬುದು.

ಮಿತ್ರಸೈನ್ಯಗಳು ಬಹುಶಃ ಬಹಳ ಕಾಲ ತಂಗಿದ್ದವು. ಅಂತೂ, ನದಿಯ ಎಲ್ಲ ದಾಟುಗಳು ಸಂರಕ್ಷಿತವಾಗಿವೆ ಮತ್ತು ಒಂದೇ ದಾರಿಯೆಂದರೆ ತಮ್ಮ ಮುಂದೆಯೆ ಇರುವ ಹಾಯ್ಗಡವನ್ನು ಬಲವಂತದಿಂದ ದಾಟುವುದು ಎಂಬ ಸುದ್ದಿಯನ್ನು ಅಗ್ರಚರರು ಮರಳಿಬಂದು ತಮ್ಮ ಸಾರ್ವಭೌಮರಿಗೆ ತಿಳಿಸಿದರು. ಅದು ಹಿಂದೂಗಳ ವಶದಲ್ಲಿತ್ತು. ಅವರು ದಕ್ಷಿಣ ಬದಿಯಲ್ಲಿನ ದಡಗಳನ್ನು ಭದ್ರಪಡಿಸಿ ಮಣ್ಣುದಿಬ್ಬ ಗಳನ್ನು ನಿರ್ಮಿಸಿದ್ದರು, ಮತ್ತು ದಾಟು ತಡೆಯಲು ಅನೇಕ ತೋಪುಗಳನ್ನು ಇರಿಸಿದ್ದರು.

ಹಾಯ್ಗಡದ ಸಂರಕ್ಷಕರು ತಮ್ಮ ವೈರಿಯ ಚಲನವಲನಗಳ ಸುದ್ದಿಗಾಗಿ ಆತುರದಿಂದ ಕಾಯ್ದರು ಮತ್ತು ವೈರಿ ಪಾಳೆಯ ಕಿತ್ತುದನ್ನು ಮತ್ತು ನದಿಯ ಗತಿಗುಂಟ ಸಾಗುತ್ತಿದ್ದುದನ್ನು ತಿಳಿದು ತಮ್ಮ ಠಾಣ್ಯ ಬಿಟ್ಟು ನೇರವಾಗಿ ತಮ್ಮ ಮುಂದೆ ದಾಟುವ ಪ್ರಯತ್ನ ಹಿಮ್ಮೆಟ್ಟಿಸುವ ಸಿದ್ಧತೆಯಲ್ಲಿ ಯಾವಾಗಲೂ ದಕ್ಷಿಣ ದಂಡೆಯಲ್ಲಿಯೆ ಹೋಗುತ್ತ ಅವರನ್ನು ಅನುಸರಿಸಿದರು. ಮುಸಲ್ಮಾನರ ಯುಕ್ತಿ ಯಾಗಿದ್ದ ಈ ಸೇನಾಚಾಲನ ಬಿಟ್ಟೂಬಿಡದೆ ಮೂರು ದಿನ ಪುನರಾವರ್ತಿಸಲಾಯಿತು. ಮೂರನೆಯ ರಾತ್ರಿ ಸುಲ್ತಾನರು ಬೇಗ ಬೇಗ ತಮ್ಮ ಬಿಡಾರ ಬಿಟ್ಟು ಹಾಯ್ಗಡಕ್ಕೆ ಮರಳಲಾಗಿ ಅದು ನಿರ್ಜನವಾಗಿದ್ದುದನ್ನು ಕಂಡು ದೊಡ್ಡ ಸೈನ್ಯದೊಂದಿಗೆ ಅದನ್ನು ದಾಟಿದರು. ಈ ಚಲನೆ ಅವರ ಇಡಿ ಸೈನ್ಯದ ಸಾಗಣೆಗೆ ಮರಸು ಆಗಿ ರಾಮರಾಯನ ಪ್ರಧಾನ ಸೈನ್ಯದ ಮೇಲೆ ಆಕ್ರಮಣ ಮಾಡಲೋಸುಗ ದಕ್ಷಿಣಕ್ಕೆ ಸಾಗಲು ನೆರವಾಯಿತು.

ಚಕಿತನಾಗಿದ್ದರೂ ಭೀತಿಗೆಡದ ರಾಮರಾಯ ರಕ್ಷಣೆಗೆ ಸಾಧ್ಯವಿದ್ದ ಎಲ್ಲ ಕ್ರಮಗಳನ್ನೂ ಕೈಕೊಂಡ. ಬೆಳಿಗ್ಗೆ ವೈರಿ ಅವನ ಠಾಣ್ಯದ ಹತ್ತು ಮೈಲಿನೊಳಗೆ ಇದ್ದರು, ಮತ್ತು ವೆಂಕಟಾದ್ರಿ ಮತ್ತು ತಿರುಮಲ ತಮ್ಮ ಅಣ್ಣನೊಂದಿಗೆ ಬಂದು ಕೂಡುವಲ್ಲಿ ಯಶಸ್ವಿಯಾದರು.

ಮರುದಿನ, ಮಂಗಳವಾರ, ಜನವರಿ ೨೩, ೧೫೬೫[7]ರಂದು ಎರಡೂ ಪಕ್ಷಗಳು ತಮ್ಮ ತಮ್ಮ ವ್ಯೂಹ ರಚಿಸಿಕೊಳ್ಳಲಾಗಿ, ಸಂಭವಿಸಿದ ಛಲಯುದ್ಧದಲ್ಲಿ[8] ಎರಡೂ ಪಕ್ಷಗಳ ಲಭ್ಯವಿದ್ದ ಬಲಗಳೆಲ್ಲ ತೊಡಗಿದವು. ತನ್ನ ವರ್ಣನೆಗಳಲ್ಲೊಂದರಲ್ಲಿ ಫಿರಿಸ್ತಾ ವಿಜಯನಗರದ ಸೈನ್ಯವೊಂದೆ ೧೫,೦೦೦ ಸಹಾಯಕ ಸೈನ್ಯವಲ್ಲದೆ ೯೦,೦೦೦ ಕಾಲ್ದಳ, ೪೫,೦೦೦ ಅಶ್ವದಳ, ಮತ್ತು ೨೦೦೦ ಆನೆಗಳಿಷ್ಟಿತ್ತೆಂದು ಅಂದಾಜು ಮಾಡುತ್ತಾನೆ; ಆದರೆ ಅವನೇ ತನ್ನ ವೃತ್ತಾಂತದ ಬೇರೆ ಬೇರೆ ಭಾಗಗಳಲ್ಲಿ ನೀಡುವ ಸಂಖ್ಯೆಗಳಲ್ಲಿ ಎಷ್ಟೊಂದು ವ್ಯತ್ಯಾಸ ಹೊಂದಿದ್ದಾನೆಂದರೆ ಈ ಅಂಕಿಗಳನ್ನು ನಿಖರವಾದವುಗಳೆಂದು ಸ್ವೀಕರಿಸುವ ಅಗತ್ಯವಿಲ್ಲ. ಆದರೆ, ಸಂಖ್ಯೆಗಳು ಬಹಳ ದೊಡ್ಡವಾಗಿದ್ದವೆಂಬ ಬಗೆಗೆ ಮಾತ್ರ ಸಂದೇಹವಿಲ್ಲ. ಪಶ್ಚಿಮಕ್ಕಿರುವ ಹಿಂದೂ ಎಡಪಾರ್ಶ್ವವನ್ನು ತಿರುಮಲನ ಅಧಿಪತ್ಯಕ್ಕೆ ವಹಿಸಿಕೊಡಲಾಗಿತ್ತು; ರಾಮರಾಯ ಸ್ವತಃ ಮಧ್ಯದಲ್ಲಿದ್ದ ಮತ್ತು ಬಲಪಾರ್ಶ್ವ ವೆಂಕಟಾದ್ರಿಯ ಸೈನಿಕರಿಂದ ರಚಿತವಾಗಿತ್ತು. ತಿರುಮಲನಿಗೆ ಎದುರಾಗಿ ತಮ್ಮ ಸುಲ್ತಾನ ಅಲಿ ಆದಿಲ್‌ನ ನೇತೃತ್ವದಲ್ಲಿ ಬಿಜಾಪುರದ ಪಡೆಗಳಿದ್ದವು; ಮುಸಲ್ಮಾನರ ಮಧ್ಯಭಾಗ ಹುಸೇನ ನಿಜಾಮ ಶಾಹನ ಅಧಿಪತ್ಯದಲ್ಲಿತ್ತು; ಮತ್ತು ವೆಂಕಟಾದ್ರಿಯ ಇದಿರಿನಲ್ಲಿದ್ದ ಮಿತ್ರಸೈನ್ಯದ ಎಡಪಾರ್ಶ್ವ ಅಹಮದಾಬಾದ ಮತ್ತು ಗೋಲ್ಕೊಂಡದಿಂದ ಅಲಿ ಬರೀದ್ ಮತ್ತು ಇಬ್ರಾಹಿಮ್ ಕುತುಬ್ ಸುಲ್ತಾನರಿಬ್ಬರೂ ತಂದ ಬಲಗಳಿಂದ ಕೂಡಿತ್ತು. ಮಿತ್ರಸೈನ್ಯಗಳು ಮಧ್ಯದಲ್ಲಿ ಫಿರಂಗಿದಳ ಇಟ್ಟುಕೊಂಡು ಒಂದು ಉದ್ದ ಸಾಲಿನಲ್ಲಿ ಸನ್ನದ್ಧರಾಗಿ ನಿಂತರು, ಮತ್ತು ಮುಂಚೂಣಿಯಲ್ಲಿ ಪ್ರತಿಯೊಂದು ತುಕಡಿಯೂ ಹನ್ನೆರಡು ಇಮಾಮರ ಧ್ವಜಗಳನ್ನು ಹಾರಾಡಿಸುತ್ತ ವೈರಿಯ ಆಕ್ರಮಣಕ್ಕಾಗಿ ಕಾದುನಿಂತರು. ನಿಜಾಮ ಶಾಹನ ಮುಂಭಾಗ ಮೂರು ಸಾಲುಗಳಲ್ಲಿ ನಿಲ್ಲಿಸಿದ ಆರುನೂರು ಫಿರಂಗಿಗಳಿಂದ ಮರೆ ಮಾಡಲ್ಪಟ್ಟಿತ್ತು. ಮೊದಲಿನ ಸಾಲಿನಲ್ಲಿ ಭಾರಿ ಫಿರಂಗಿಗಳು, ಆ ಮೇಲೆ ಚಿಕ್ಕವುಗಳು, ಹಿಂಬದಿಯಲ್ಲಿ ಹಗುರವಾದ ತಿರುಗಣೆ ಫಿರಂಗಿಗಳಿದ್ದವು. ಈ ವ್ಯೂಹರಚನೆಯನ್ನು ಕಾಣದಂತಿಡಲು ಮುಂದೆ ಎರಡು ಸಾವಿರ ವಿದೇಶಿ ಬಿಲ್ಲುಗಾರರನ್ನು ನಿಲ್ಲಿಸಲಾಗಿತ್ತು. ವೈರಿಗಳ ಸಾಲು ಮುಂದೆ ಸಾಗಿಬಂದಂತೆ ಅವರು ಬಾಣಗಳ ಮಳೆಗರೆದರು. ರಾಮನ ತುಕಡಿಯ ಹಿಂದೂಗಳು ಹತ್ತಿರ ಬರುತ್ತಿದಂತೆ ಬಿಲ್ಲುಗಾರರು ಕಾಲ್ದೆಗೆದರು, ಮತ್ತು ಫಿರಂಗಿಗಳು ಎಂಥ ಮರಣಾಂತಿಕ ಪರಿಣಾಮದೊಂದಿಗೆ ಗುಂಡುಸುರಿದವೆಂದರೆ ಆಕ್ರಮಣಕಾರರು ಗೊಂದಲದಲ್ಲಿ ಮತ್ತು ಬಹಳ ನಷ್ಟ ಅನುಭವಿಸಿ ಹಿಂದೆಗೆದರು.

ರಾಮರಾಯ ಈಗ ಬಹಳ ಮುದುಕನಾಗಿದ್ದ—“ಅವನಿಗೆ ತೊಂಬತ್ತಾರು ವರ್ಷ ವಯಸ್ಸಾಗಿತ್ತು, ಆದರೆ, ಮೂವತ್ತರ ಮನುಷ್ಯನಂತೆ ಅವನು ಧೈರ್ಯಶಾಲಿಯಾಗಿದ್ದ” ಎಂದು ಕೌಟೊ ಹೇಳುತ್ತಾನೆ—ಮತ್ತು ತನ್ನ ಅಧಿಕಾರಿಗಳ ಪ್ರಾರ್ಥನೆ

ಗಳಿಗೆ ವ್ಯತಿರಿಕ್ತವಾಗಿ, ಬಹಳ ಹೊತ್ತು ಕುದುರೆಯ ಮೇಲಿರುವ ಬದಲು ಮೇಣೆಯ ಮೇಲಿಂದ ಸೈನಿಕ ಕಾರ್ಯಾಚರಣೆಗಳನ್ನು ಮೇಲ್ವಿಚಾರಿಸಲು ಇಷ್ಟಪಟ್ಟ. ಇದು ಅಪಾಯಕಾರಿ ಕಾರ್ಯವಾಗಿತ್ತು. ಏಕೆಂದರೆ, ಸೋಲು ಸಂಭವಿಸಿದಲ್ಲಿ ತೀವ್ರ ಹಿಂದೆ ಸರಿಯುವುದು ಇದರಿಂದಾಗಿ ಅಸಾಧ್ಯವಾಗುತ್ತಿತ್ತು. ವೈರಿಗಳು ಧೀರರಾಗಿ ತೋರಿದರೂ ಮಕ್ಕಳಿದ್ದಂತಿದ್ದಾರೆ ಮತ್ತು ಬಹುಬೇಗ ಅವರನ್ನು ಓಡಿಸಬಹುದೆಂದು ಅನ್ನುತ್ತಿದ್ದ ಅವನನ್ನು ಮನಸ್ಸು ಬದಲಿಸುವಂತೆ ಒಲಿಸಲಾಗಲಿಲ್ಲ. ವಿಜಯದ ಬಗೆಗೆ ಅವನು ಎಷ್ಟೊಂದು ಆತ್ಮವಿಶ್ವಾಸ ಹೊಂದಿದ್ದನೆಂದರೆ ಹುಸೇನ ನಿಜಾಮನ ತಲೆಯನ್ನು ತರಬೇಕೆಂದು, ಆದರೆ ಅವರನ್ನು ಜೀವನಪರ್ಯಂತ ಲೋಹದ ಪಂಜರ ಗಳಲ್ಲಿ ಇಡಲು ಸಾಧ್ಯವಾಗುವಂತೆ ಆದಿಲ್ ಶಾಹ ಮತ್ತು ಗೋಲ್ಕೊಂಡದ ಇಬ್ರಾಹಿಮರನ್ನು ಸೆರೆಹಿಡಿದು ತರಬೇಕೆಂದು, ತನ್ನ ಸೈನಿಕರಿಗೆ ಆಜ್ಞಾಪಿಸಿದ್ದ.

ಯುದ್ಧ ಹೆಚ್ಚು ಚದುರಿದುದರಿಂದ ಹಿಂದೂಗಳು ಅನೇಕ ಹಗುರ ಫಿರಂಗಿಗಳು ಮತ್ತು ಆಕಾಶಬಾಣಗಳಿಂದ ವಿಧ್ವಂಸಕ ಗುಂಡಿನಾಕ್ರಮಣ ಮಾಡಿದರು. ಎರಡೂ ಬದಿಗಳಲ್ಲಿ ಅನೇಕರು ಸತ್ತ ವಿನಾಶಕ ಕೈ ಕೈ ಯುದ್ಧದ ನಂತರ ಮುಸಲ್ಮಾನರ ಸಾಲಿನ ಎಡ ಮತ್ತು ಬಲ ಪಾರ್ಶ್ವಗಳು ಹಿಂದೆ ನೂಕಲ್ಪಟ್ಟವು. ಈ ಸಂಧಿ ಸಮಯದಲ್ಲಿ ತನ್ನ ಜನರನ್ನು ಹುರಿದುಂಬಿಸುವ ವಿಚಾರದಿಂದ ರಾಮರಾಯ ತನ್ನ ಮೇಣೆಯಿಂದಿಳಿದು "ಬಂಗಾರದಿಂದ ಕಸೂತಿ ಹೆಣೆಯಲಾದ ಮತ್ತು ಮುತ್ತುಗಳ ಜಾಲರಿಯುಳ್ಳ ಚತ್ತರಿಗೆಯ ಕೆಳಗಿರುವ ರತ್ನಖಚಿತವಾದ ಬಹುಬೆಲೆಯ ಸಿಂಹಾಸನದ" ಮೇಲೆ ಕುಳಿತುಕೊಂಡನು. ಮತ್ತು ತನ್ನ ಗಮನಕ್ಕೆ ಅರ್ಹರಾಗುವಂತಹ ಅನುಯಾಯಿ ಗಳಿಗೆ ಪುರಸ್ಕಾರ ನೀಡಲು ಅನುಕೂಲವಾಗುವಂತೆ ತನ್ನ ಸುತ್ತಲೂ ಹಣದ ರಾಶಿ ಯನ್ನು ಇಡಲು ತನ್ನ ಭಂಡಾರಿಗೆ ಆಜ್ಞೆಯಿತ್ತ. "ಅದೇ ಉದ್ದೇಶಕ್ಕಾಗಿ ಇರಿಸಲಾದ ಬಂಗಾರದ ಆಭರಣಗಳು ಮತ್ತು ರತ್ನಗಳು ಸಹ ಇದ್ದವು." ಮಧ್ಯದಲ್ಲಿದ್ದ ಫಿರಂಗಿ ಗಳ ಮೇಲೆ ಹಿಂದೂಗಳ ಎರಡನೆಯ ಆಕ್ರಮಣ ಇಡಿ ಮುಸಲ್ಮಾನ ಸಾಲಿನ ಪತನ ವನ್ನು ಪೂರ್ತಿಗೊಳಿಸುವಂತೆ ತೋರಿತು. ಆಗ ತಾಮ್ರನಾಣ್ಯಗಳ ಚೀಲಗಳಿಂದ ತುಂಬಿದ ಮುಂದಿನ ಸಾಲಿನ ಫಿರಂಗಿಗಳನ್ನು ಸಮೀಪದಿಂದ ಹಾರಿಸಲಾಯಿತು ಮತ್ತು ಇದು ಎಷ್ಟು ನಾಶಕಾರಕವಾಯಿತೆಂದರೆ ರಣದಲ್ಲಿ ಫಿರಂಗಿಪಡೆಯ ಮುಂದೆಯೆ ೫೦೦೦ ಹಿಂದೂಗಳು ಸತ್ತುಬಿದ್ದರು. ಈ ಜೋರಿನ ಯುಕ್ತಿ ಹಿಂದೂ ಮಧ್ಯವನ್ನು ಗೊಂದಲದಲ್ಲಿ ಮುಳುಗಿಸಿದ ಮೇಲೆ ೫೦೦೦ ಮಹಮ್ಮದೀಯ ಅಶ್ವಾಳುಗಳು ಫಿರಂಗಿಗಳ ನಡುವೆ ಹಾಯ್ದು ಆಕ್ರಮಣ ಮಾಡುತ್ತ ಅಸ್ತವ್ಯಸ್ತ ಸಮೂಹದೊಳಕ್ಕೆ ದಾರಿ ಕೊಚ್ಚುತ್ತ ರಾಯ ನಿಂತಿದ್ದ ಸ್ಥಳದತ್ತ ಧಾವಿಸಿದರು. ಅವನು ಪುನಃ ತನ್ನ ಸ್ಥಾನವನ್ನು ಬದಲಿಸಿ ಮೇಣೆಯೇರಿದ್ದನೊ ಇಲ್ಲವೊ ಅಷ್ಟರಲ್ಲಿಯೆ ನಿಜಾಮ ಶಾಹನ ಆನೆಯೊಂದು ಯುದ್ಧಾವೇಶದಿಂದ ಹುಚ್ಚೆದ್ದು ರಾಯನೆಡೆಗೆ ನುಗ್ಗಿತು, ಮತ್ತು

ಮೇಣೆ ಹೊತ್ತವರು ಆ ಪ್ರಾಣಿಯ ಸಮೀಪಾಗಮನದಿಂದ ಭಯಗೊಂಡು ತಮ್ಮ ಅಮೂಲ್ಯ ಹೊರೆಯನ್ನು ಕೆಳಗೆ ಬಿಟ್ಟರು. ಸುಧಾರಿಸಿಕೊಂಡು ಕುದುರೆಯನ್ನೇರುವ ಮುನ್ನ ಮಿತ್ರಸೈನ್ಯದ ಒಂದು ಪಡೆ ಅವನ ಮೇಲೆ ಬಿದ್ದಿತ್ತು ಮತ್ತು ಅವನನ್ನು ಬಂಧಿಸಿ ಸೆರೆಯಾಳನ್ನಾಗಿಸಲಾಯಿತು.

ಈ ಘಟನೆ ಹಿಂದೂಗಳನ್ನು ಗಾಬರಿಗೊಳಿಸಿತು ಮತ್ತು ಅವರು ಹಿಂದಕ್ಕೆ ಹೋದರು. ಹುಸೇನ ನಿಜಾಮನ ಫಿರಂಗಿದಳದ ನೇತೃತ್ವ ವಹಿಸಿದ್ದ ಅಧಿಕಾರಿ ರಾಮ ರಾಯನನ್ನು ಸುಲ್ತಾನನಲ್ಲಿಗೆ ಕರೆದೊಯ್ದ. ಸುಲ್ತಾನನು ತನ್ನ ಸೆರೆಯಾಳಿನ ತಲೆ ಕೂಡಲೆ ಕಡಿದು ಹಿಂದೂ ಸೈನ್ಯಕ್ಕೆ ಕಾಣುವಂತೆ ಉದ್ದವಾದ ಭಲ್ಲೆಗೆ ಚುಚ್ಚಿ ಎತ್ತಿ ಹಿಡಿಯಬೇಕೆಂದು ಆಜ್ಞಾಪಿಸಿದ.

ತಮ್ಮ ನಾಯಕ ಸತ್ತುದನ್ನು ಕಂಡು ವಿಜಯನಗರದ ಸೈನ್ಯಪಡೆಗಳು ಒಡೆದು ಓಡಿಹೋದವು. "ಮಿತ್ರಸೈನ್ಯಗಳು ಅವರನ್ನು ಬೆನ್ನಟ್ಟಿ ಎಷ್ಟು ಯಶಸ್ವಿಯಾಗಿ ಹತ್ಯೆಗೈದರೆಂದರೆ ರಣರಂಗದ ಹತ್ತಿರ ಹರಿಯುತ್ತಿದ್ದ ನದಿ ಅವರ ರಕ್ತದಿಂದ ಕೆಂಪು ಬಣ್ಣ ತಾಳಿತ್ತು. ಯುದ್ಧದಲ್ಲಿ ಮತ್ತು ಬೆನ್ನಟ್ಟಿ ಒಂದು ನೂರು ಸಾವಿರ ಕಾಫಿರರನ್ನು ಕೊಲ್ಲಲಾಯಿತೆಂದು ಅತ್ಯಂತ ಶ್ರೇಷ್ಠ ವಿದ್ವಾಂಸರನ್ನಾಧರಿಸಿ ಲೆಕ್ಕ ಹಾಕಲಾಗಿದೆ."

ಹೀಗೆ ಮುಸಲ್ಮಾನರು ಸಂಪೂರ್ಣವಾಗಿ ವಿಜಯಿಗಳಾದರು ಮತ್ತು ಹಿಂದೂ ಗಳು ರಾಜಧಾನಿಯತ್ತ ಓಡಿದರು ; ಎಷ್ಟೊಂದು ಗೋಜು ಉಂಟಾಗಿತ್ತೆಂದರೆ ನಗರವನ್ನು ಸುತ್ತುವರಿದಿದ್ದ ಗುಡ್ಡಗಳಲ್ಲಿ ಹೊಸ ಮತ್ತು ರಕ್ಷಣಾತ್ಮಕ ನೆಲೆ ಹಿಡಿದು ಕೂಡಲಾಗಲಿ ಅಥವಾ ಗೋಡೆಗಳನ್ನು ಅಥವಾ ಮಾರ್ಗಗಳನ್ನು ರಕ್ಷಿಸಲಾಗಲಿ ಸಹ ಕಿಂಚಿತ್ ಪ್ರಯತ್ನವನ್ನೂ ಮಾಡಲಾಗಲಿಲ್ಲ. ಸೋಲು ಸಂಪೂರ್ಣವಾಗಿತ್ತು.

"ಸುಲ್ತಾನರು ಆನೆಗಳನ್ನು ಮಾತ್ರ ತಮ್ಮ ಉಪಯೋಗಕ್ಕೆ ಇಟ್ಟುಕೊಂಡು ಪ್ರತಿಯೊಬ್ಬನು ಸಂಪಾದಿಸಿದುದನ್ನು ಅವನಿಗೇ ಬಿಟ್ಟುಕೊಟ್ಟುದರಿಂದ ಕೊಳ್ಳೆ ಎಷ್ಟು ದೊಡ್ಡದಾಗಿತ್ತೆಂದರೆ ಮಿತ್ರಸೈನ್ಯದ ಪ್ರತಿಯೊಬ್ಬ ಸಾಮಾನ್ಯ ಸೈನಿಕನೂ ಬಂಗಾರ, ರತ್ನಗಳು, ಚರಾಸ್ತಿ, ಡೇರೆಗಳು, ಆಯುಧಗಳು, ಕುದುರೆಗಳು, ಮತ್ತು ಗುಲಾಮರನ್ನು ಪಡೆಯುವ ಮೂಲಕ ಶ್ರೀಮಂತನಾದನು."

ಹುಸೇನ ನಿಜಾಮ ಶಾಹ "ಈಗ ನಿನ್ನ ಮೇಲೆ ಸೇಡು ತೀರಿಸಿಕೊಂಡೆ! ದೇವರು ನನಗೆ ಏನು ಬೇಕಾದರೂ ಮಾಡಲಿ!" ಎಂದು ಉದ್ಗರಿಸುತ್ತ ತನ್ನ ಕೈಯಿಂದಲೆ ತನ್ನ ವೈರಿಯ ತಲೆ ಕಡಿದನೆಂದು ರಾಮರಾಯನ ಮರಣವನ್ನು ವರ್ಣಿಸುತ್ತ ಕೌಟೊ ಹೇಳುತ್ತಾನೆ.[9] ಆದಕ್ಕೆ ಪ್ರತಿಯಾಗಿ ಆದಿಲ್ ಶಾಹ ರಾಮರಾಯನ ಮರಣಕ್ಕೆ ಬಹಳ ವ್ಯಥೆಪಟ್ಟ.[10]

ಈ ಭಯಂಕರ ದುರ್ದೆಶೆಯ ಕತೆ ವಿಜಯನಗರ ನಗರಕ್ಕೆ ಬೇಗನೆ ತಲುಪಿತು. ಆಪತ್ತನ್ನು ಅರಿಯದ ನಿವಾಸಿಗಳು ಯಾವುದೆ ಗಂಭೀರ ವಿಪರ್ಯಾಸ ಸಂಭವಿಸಿದುದರ

ಬಗೆಗೆ ಸಂಪೂರ್ಣ ಅಜ್ಞಾನದಲ್ಲಿ ಬಾಳುತ್ತಿದ್ದರು ; ಏಕೆಂದರೆ, ತಮ್ಮ ನಾಯಕರು ತಮ್ಮ ಹಿಂದೆ ಅಸಂಖ್ಯ ಸೈನಿಕರೊಂದಿಗೆ ದಂಡೆತ್ತಿಹೋಗಿದ್ದರು ಮತ್ತು ಫಲಿತಾಂಶದ ಬಗೆಗೆ ಸಂಪೂರ್ಣ ವಿಶ್ವಾಸ ತಳೆದಿದ್ದರು. ಆದರೆ, ಒಮ್ಮಿಂದೊಮ್ಮಿಗೆ ಕೆಟ್ಟ ಸುದ್ದಿ ಬಂತು. ಸೈನ್ಯ ಸೋಲು ಕಂಡಿತ್ತು ; ನಾಯಕರು ಕೊಲ್ಲಲ್ಪಟ್ಟಿದ್ದರು ; ಸೈನಿಕರು ಹಿಂದಿರುಗುತ್ತಿದ್ದರು. ಆದರೆ ಇನ್ನೂ ಸೋಲಿನ ಪ್ರಮಾಣವನ್ನು ಅವರು ಗ್ರಹಿಸಿರಲಿಲ್ಲ ; ಹಿಂದಿನ ಎಲ್ಲ ಸಂದರ್ಭಗಳಲ್ಲಿ ವೈರಿಯನ್ನು ಹಿಂದೆ ಅಟ್ಟಲಾಗಿತ್ತು ಇಲ್ಲವೆ ತುಂಬಿ ಹೊರಚೆಲ್ಲುತ್ತಿದ್ದ ರಾಜರ ಭಂಡಾರದಿಂದ ಕಾಣಿಕೆಗಳನ್ನು ನೀಡಿ ಕಾಟ ತಪ್ಪಿಸಿಕೊಳ್ಳಲಾಗಿತ್ತು. ಆದುದರಿಂದ ನಗರಕ್ಕಂತೂ ಭಯವಿರಲಿಲ್ಲ. ಅದು ನಿಜಕ್ಕೂ ಸುರಕ್ಷಿತವಾಗಿತ್ತು. ಆದರೀಗ ಯುದ್ಧದಿಂದ ಅವಸರವಾಗಿ ಹಿಂತಿರುಗುತ್ತಿದ್ದ ವಿಷಣ್ಣರಾದ ಯೋಧರು ಬಂದರು ಮತ್ತು ಅವರಲ್ಲಿ ಎಲ್ಲಕ್ಕೂ ಮುಂಭಾಗದಲ್ಲಿ ರಾಜಮನೆತನದ ಭಯಗ್ರಸ್ತರಾದ ಪುತ್ರರಿದ್ದರು. ಕೆಲವೇ ಗಂಟೆಗಳೊಳಗೆ ಈ ಹೇಡಿ ದೊರೆಗಳು ತಮ್ಮ ಕೈಗೆ ಬಂದ ಎಲ್ಲ ಸಂಪತ್ತನ್ನೂ ಎತ್ತಿಕೊಂಡು ಅವಸರವಸರವಾಗಿ ಅರಮನೆ ಬಿಟ್ಟು ಹೊರಟರು. ಸಿಂಹಾಸನಕ್ಕೆ ನಿಷ್ಠರಾಗುಳಿದ ಸೈನಿಕರ ಪಡೆಗಳ ಬೆಂಗಾವಲಿನಲ್ಲಿ ನೂರು ದಶಲಕ್ಷ ಪೌಂಡುಗಳಿಗಿಂತ ಅಧಿಕ ಬೆಲೆ ಕಟ್ಟಿದ ಬಂಗಾರ, ವಜ್ರಗಳು ಮತ್ತು ಬೆಲೆಯುಳ್ಳ ಹರಳುಗಳನ್ನು, ರಾಜಲಾಂಛನಗಳನ್ನು ಮತ್ತು ರಾಜರ ಪ್ರಖ್ಯಾತ ರತ್ನ ಖಚಿತ ಸಿಂಹಾಸನವನ್ನು ಹೊತ್ತು ಐನೂರೈವತ್ತು ಆನೆಗಳು ಅರಮನೆಯಿಂದ ಹೊರಟವು. ತನ್ನ ಸಹೋದರರ ಮರಣಾನಂತರ ಏಕೈಕ ರಾಜ ಪ್ರತಿನಿಧಿಯಾಗಿದ್ದ ತಿರುಮಲ ತನ್ನ ಬಂದಿಯಾಗಿದ್ದ ರಾಜಾ ಸದಾಶಿವನನ್ನು ತೆಗೆದುಕೊಂಡು ನಡೆದ ಮತ್ತು ರಾಜಕುಟುಂಬದವರು ಮತ್ತು ಅವರ ಅನುಯಾಯಿಗಳು ದೀರ್ಘ ಸಾಲು ಹಿಡಿದು ದಕ್ಷಿಣಕ್ಕೆ ಪೆನುಕೊಂಡ ಕೋಟೆಯತ್ತ ಓಡಿದರು.

ನಗರವನ್ನು ಭಯಂಕರ ಗಾಬರಿ ಆವರಿಸಿತು. ಸತ್ಯ ಕೊನೆಗೆ ಸ್ಪಷ್ಟವಾಯಿತು. ಇದು ಕೇವಲ ಸೋಲಾಗಿರಲಿಲ್ಲ, ವಿಪ್ಲವವಾಗಿತ್ತು. ಎಲ್ಲ ಆಸೆ ತೊಲಗಿತ್ತು. ನಗರದಲ್ಲಿನ ಅಸಂಖ್ಯ ನಿವಾಸಿಗಳು ರಕ್ಷಣೆ ಇಲ್ಲದವರಾಗಿ ಉಳಿದರು. ಕೆಲವರನ್ನುಳಿದು ಹಿಂದೆ ಸರಿಯುವುದು, ಓಡಿಹೋಗುವುದು ಸಾಧ್ಯವಿರಲಿಲ್ಲ. ಏಕೆಂದರೆ, ಸೈನ್ಯಪಡೆಗಳನ್ನನುಸರಿಸಿ ಯುದ್ಧಕ್ಕೆ ಹೋಗಿದ್ದ ಸರಿಸುಮಾರು ಎಲ್ಲ ಹೇರುಎತ್ತುಗಳು ಮತ್ತು ಬಂಡಿಗಳು ಇನ್ನೂ ಹಿಂತಿರುಗಿರಲಿಲ್ಲ. ಎಲ್ಲ ಸಂಪತ್ತನ್ನು ಹೂಳಿ, ತರುಣರ ಕೈಯಲ್ಲಿ ಆಯುಧಕೊಟ್ಟು ಕಾಯುವುದರ ಹೊರತು ಬೇರೇನು ಮಾಡಲೂ ಸಾಧ್ಯವಿರಲಿಲ್ಲ. ಮರುದಿನ ನೆರೆಯ ದರೋಡೆ ಸಂಗಡಗಳು ಮತ್ತು ಅರಣ್ಯವಾಸನವರಿಗೆ ಊರು ಬಲಿಯಾಯಿತು. ಬ್ರಿಂಜಾರಿಗಳು, ಲಂಬಾಡಿಗಳು, ಕುರುಬರು ಮುಂತಾದವರ[11] ತಂಡಗಳು ಹತಭಾಗ್ಯ ನಗರದ ಮೇಲೆ ದಾಳಿಯಿಟ್ಟು ಉಗ್ರಾಣಗಳನ್ನು ಮತ್ತು ಅಂಗಡಿಗಳನ್ನು ಲೂಟಿ ಮಾಡಿ ದೊಡ್ಡ ಪ್ರಮಾಣದಲ್ಲಿ ಸಂಪತ್ತನ್ನು ದೋಚಿಕೊಂಡು

ಒಯ್ದರು. ಆ ದಿನ ಈ ಜನರಿಂದ ಆರು ನಿಶ್ಚಿತ ದಾಳಿಗಳಾದವೆಂದು ಕಾಟೊ ಹೇಳುತ್ತಾನೆ.

ಮೂರನೆಯ ದಿನ ಅಂತ್ಯದ ಆರಂಭವನ್ನು ಕಂಡಿತು.[12] ವಿಜಯಿ ಮುಸಲ್ಮಾನರು ಯುದ್ಧಭೂಮಿಯಲ್ಲಿ ವಿಶ್ರಾಂತಿ ಮತ್ತು ಆಹಾರಕ್ಕಾಗಿ ನಿಂತಿದ್ದರು. ಆದರೆ ಈಗ ಅವರು ರಾಜಧಾನಿಯನ್ನು ತಲುಪಿದ್ದರು. ಅಂದಿನಿಂದ ಐದು ತಿಂಗಳ ಕಾಲ ವಿಜಯನಗರಕ್ಕೆ ವಿಶ್ರಾಂತಿ ಇಲ್ಲದಾಯಿತು. ವೈರಿಗಳು ನಾಶಮಾಡಲು ಬಂದಿದ್ದರು ಮತ್ತು ಅವರು ತಮ್ಮ ಉದ್ದೇಶವನ್ನು ನಿರ್ದಯವಾಗಿ ಈಡೇರಿಸಿದರು. ಅವರು ಜನರನ್ನು ಕರುಣೆಯಿಲ್ಲದೆ ಸಂಹರಿಸಿದರು ; ದೇವಾಲಯಗಳನ್ನು ಮತ್ತು ಅರಮನೆಗಳನ್ನು ಕೆಡವಿದರು ; ಮತ್ತು ರಾಜರ ನಿವಾಸಗಳ ಮೇಲೆ ಎಂಥ ಕಾಡು ಸೇಡು ತೀರಿಸಿಕೊಂಡರೆಂದರೆ ಕೆಲವು ದೊಡ್ಡ ಕಲ್ಲು ನಿರ್ಮಿತ ದೇವಾಲಯಗಳು ಮತ್ತು ಗೋಡೆಗಳನ್ನು ಬಿಟ್ಟರೆ ಹಿಂದೊಮ್ಮೆ ಈ ಭವ್ಯ ಕಟ್ಟಡಗಳು ನಿಂತಿದ ಸ್ಥಳವನ್ನು ಗುರುತಿಸಲು ಭಗ್ನಾವಶೇಷಗಳ ಗುಂಪೆಯ ವಿನಾ ಈಗ ಏನೂ ಉಳಿದಿಲ್ಲ. ಅವರು ವಿಗ್ರಹಗಳನ್ನು ಕೆಡವಿದರು, ಮತ್ತು ಬೃಹತ್ ನರಸಿಂಹ ಅಖಂಡ ಶಿಲಾಕೃತಿಯ ಅಂಗಾಂಗಗಳನ್ನು ಒಡೆಯುವಲ್ಲಿ ಯಶಸ್ವಿಯಾದರು. ರಾಜರು ಉತ್ಸವ ಗಳನ್ನು ವೀಕ್ಷಿಸಲು ಕುಳಿತುಕೊಳ್ಳುತ್ತಿದ್ದ ವಿಶಾಲ ಜಗಲಿಯ ಮೇಲೆ ನಿಂತಿದ್ದ ಮಂಡಪಗಳನ್ನು ಒಡೆದರು, ಮತ್ತು ಎಲ್ಲ ಕೆತ್ತನೆಯ ಕೆಲಸವನ್ನು ಕಿತ್ತೆಸೆದರು. ನದಿಯ ಹತ್ತಿರ ವಿಠ್ಠಲಸ್ವಾಮಿ ದೇವಾಲಯವನ್ನು ರೂಪಿಸುವ ಭವ್ಯವಾಗಿ ಅಲಂಕೃತ ವಾದ ಕಟ್ಟಡಗಳಲ್ಲಿ ಅವರು ದೊಡ್ಡ ಉರಿಗಳನ್ನು ಹೊತ್ತಿಸಿದರು, ಮತ್ತು ಅದರ ಉತ್ಕೃಷ್ಟ ಶಿಲ್ಪಗಳನ್ನು ಒಡೆದುಹಾಕಿದರು. ಬೆಂಕಿ ಮತ್ತು ಕತ್ತಿ, ಹಾರೆ ಮತ್ತು ಕೊಡಲಿಗಳಿಂದ ಅವರು ದಿನೇ ದಿನೇ ತಮ್ಮ ವಿನಾಶಕಾರ್ಯವನ್ನು ಮುಂದುವರಿಸಿ ದರು. ಬಹುಶಃ ಪ್ರಪಂಚದ ಇತಿಹಾಸದಲ್ಲಿಯೆ ಇಂಥ ಭವ್ಯ ನಗರದ ಮೇಲೆ ಇಂಥ ಹಾವಳಿ ಮತ್ತು ಇಷ್ಟು ಒಮ್ಮಿಂದೊಮ್ಮೆಲೆ ಮಾಡಿರಲಿಕ್ಕಿಲ್ಲ. ಒಂದು ದಿನ ಅದು ಹೇರಳ ಸಮೃದ್ಧಿಭರಿತ ಶ್ರೀಮಂತ ಹಾಗೂ ಪರಿಶ್ರಮಿ ಜನಸಂಖ್ಯೆಯಿಂದ ತುಂಬಿತ್ತು. ಮರುದಿನ ವರ್ಣನಾತೀತವಾದ ಅಮಾನುಷ ಕಗ್ಗೊಲೆ ಮತ್ತು ಭಯಭ್ರಾಂತಿಯ ದೃಶ್ಯಗಳ ಮಧ್ಯೆ ಅದನ್ನು ವಶಪಡಿಸಿಕೊಳ್ಳಲಾಯಿತು, ಕೊಳ್ಳೆ ಹೊಡೆಯಲಾಯಿತು ಮತ್ತು ಭಗ್ನ ಸ್ಥಿತಿಗೆ ಇಳಿಸಲಾಯಿತು.

ಇಟಾಲಿಯನ್ ಪ್ರವಾಸಿ ಸ್ಯಾಜರೊ ಫೆಡರಿಚಿ—ಅಥವಾ ಇಂಗ್ಲಿಷರು ಅವನನ್ನು ಅನೇಕ ವೇಳೆ ಕರೆಯುತ್ತಿದ್ದಂತೆ "ಸೀಜರ್ ಫ್ರೆಡರಿಕ್"—ಎರಡು ವರ್ಷಗಳ ತರುವಾಯ ೧೫೬೭ರಲ್ಲಿ ಆ ಊರನ್ನು ಸಂದರ್ಶಿಸಿದ. ವಿನಾಶದನಂತರ ಮಿತ್ರ ಮಹಮ್ಮದೀಯರು ತಮ್ಮ ದೇಶಕ್ಕೆ ಮರಳಿದಾಗ ತಿರುಮಲರಾಯ ನಗರವನ್ನು ಪುನರ್ವಸತಿಗೊಳಿಸಲು ಮಾಡಿದ ಪ್ರಯತ್ನ ಕೆಲವು ಜನರನ್ನು ಅಲ್ಲಿ ತಮ್ಮ ವಾಸ್ತವ್ಯ

ಹೂಡಲು ಮನವೊಲಿಸಲಾಗಿದ್ದರೂ ಸಹ ವಿಫಲವಾಯಿತು ಎಂದು ಅವನು ಹೇಳುತ್ತಾನೆ.

"ಬೆಝನಗರ ಪಟ್ಟಣ ಸಂಪೂರ್ಣವಾಗಿ ನಾಶವಾಗಿಲ್ಲ. ಮನೆಗಳು ನಿಶ್ಚಲ ಆದರೆ ಬರಿದಾಗಿ ನಿಂತಿವೆ, ಮತ್ತು ಅವುಗಳಲ್ಲಿ ಹುಲಿ ಮತ್ತಿತರ ಕಾಡು ಪ್ರಾಣಿಗಳಲ್ಲದೆ ಬೇರೇನೂ ವಾಸಿಸುತ್ತಿಲ್ಲ."[13]

ಕೊಳ್ಳೆ ಅಪಾರವಾಗಿರಬೇಕು. ಇತರ ನಿಧಿಗಳಲ್ಲಿ ದೊರೆತ ಕೋಳಿಮೊಟ್ಟೆಯ ಗಾತ್ರದ ವಜ್ರವನ್ನು ಆದಿಲ್ ಶಾಹ ಇಟ್ಟುಕೊಂಡ ಎಂದು ಕೌಟೊ ಹೇಳುತ್ತಾನೆ.[14]

ಈ ಮಹಾ ಮತ್ತು ಭವ್ಯ ನಗರದ ಗತಿ ಹೀಗಾಯಿತು. ಅದು ಎಂದೂ ಪೂರ್ವ ಸ್ಥಿತಿಗೆ ಬರಲಿಲ್ಲ, ಆದರೆ ಎಂದೆಂದೂ ನಿರ್ಗತಿ ಮತ್ತು ಭಗ್ನತೆಗಳ ದೃಶ್ಯವಾಗುಳಿಯಿತು. ಹಿಂದೊಮ್ಮೆ ಜನನಿಬಿಡವಾಗಿದ್ದ ಪ್ರದೇಶದಲ್ಲಿ ಹರಡಿರುವ ಚಿಕ್ಕ ಚಿಕ್ಕ ಹಳ್ಳಿಗಳ ನಿವಾಸಿಗಳಾದ ಸಣ್ಣ ರೈತರು ಮಾಡುತ್ತಿರುವ ರವಷ್ಟು ಸಾಗುವಳಿ ಮಧ್ಯೆ ಇಂದಿಗೂ ದೊಡ್ಡ ಮತ್ತು ಬಾಳಿಕೆ ಬರುವ ಕಟ್ಟಡಗಳು ತಲೆಯೆತ್ತಿ ನಿಂತಿವೆ. ನಿವಾಸಿಗಳಲ್ಲಿ ಅತ್ಯಂತ ಅಧಿಕ ಸಂಖ್ಯೆಯುವರ ಮನೆಗಳಾಗಿದ್ದ ಮಣ್ಣಿನ ಗುಡಿಸಲುಗಳು ಮಾಯ ವಾಗಿವೆ, ಮತ್ತು ಅವುಗಳ ಘಟಕಾಂಶಗಳು ಕಲ್ಲು ಬಯಲಿನ ಮೇಲೆ ಬಿದ್ದು ಅಲ್ಲೊಂದು ಇಲ್ಲೊಂದು ಬೆಳೆದಿರುವ ಸಸ್ಯಗಳಿಗೆ ಆಧಾರವಾಗಿವೆ. ಆದರೆ ಹಳೆಯ ನೀರುಕಾಲುವೆಗಳು ಇನ್ನೂ ಇದ್ದು ಅವುಗಳ ನೆರವಿನಿಂದ ತೆಗ್ಗು ತೆಳ್ಳಗಳನ್ನು ತೊನೆದಾಡುವ ಭತ್ತ ಮತ್ತು ಕಬ್ಬುಗಳ ಸಂಪೂರ್ಣ ಬೆಳೆಗಳನ್ನು ಹೊಂದಿರುವ ಫಲವತ್ತಾದ ತೋಟ ಮತ್ತು ಹೊಲಗಳನ್ನಾಗಿ ಪರಿವರ್ತಿಸಲಾಗಿದೆ. ನಗರವಾಗಿದ್ದ ವಿಜಯನಗರ ಮಾಯವಾಗಿದೆ, ಪರಿಶ್ರಮಿ ಮತ್ತು ತೃಪ್ತ ಜನಸಂಖ್ಯೆಯುಳ್ಳ ಚಿಕ್ಕ ಕೊಪ್ಪಲುಗಳ ಗುಂಪು ಅದರ ಸ್ಥಾನದಲ್ಲಿದೆ.

ಇಲ್ಲಿಗೆ ವಿಜಯನಗರ ಇತಿಹಾಸದ ನನ್ನ ಚಿತ್ರಣ ಮುಗಿಯಬಹುದಿತ್ತು, ಆದರೆ ತರುವಾಯದಲ್ಲಿ ಜರುಗಿದ ಕೆಲವು ಘಟನೆಗಳ ಬಗೆಗೆ ಕೆಲವು ಟಿಪ್ಪಣಿಗಳನ್ನು ಸೇರಿಸು ವುದು ಉಚಿತವೆಂದು ನಾನು ಭಾವಿಸಿರುವೆ.

ತಿರುಮಲ ಪೆನುಕೊಂಡದಲ್ಲಿ ವಾಸವಾದ, ಮತ್ತು ಕ್ಷಿಪ್ರ ತರುವಾಯದಲ್ಲಿ ತನಗೆ ಕುದುರೆಗಳು ಬೇಕಿವೆ ಎಂದು ಗೋವಾದಲ್ಲಿನ ಪೋರ್ತುಗೀಜ ವರ್ತಕರಿಗೆ ಹೇಳಿ ಕಳಿಸಿದ. ಅಧಿಕ ಸಂಖ್ಯೆಯಲ್ಲಿ ಕುದುರೆಗಳನ್ನು ತಂದುಕೊಡಲಾಯಿತು. ಆದರೆ ಆ ಸ್ವೈರವೃತ್ತಿಯ ರಾಜ ಅವರಿಗೆ ದುಡ್ಡು ಕೊಡದೆ ತಮಗುಚಿತಕಂಡಂತೆ ಗೋವೆಗೆ ಮರಳುವಂತೆ ಅವರನ್ನು ಬರ್ಖಾಸ್ತು ಮಾಡಿದ.

"ಅವನು ವರ್ತಕರಿಗೆ ಅವರ ಕುದುರೆಗಳಿಗೆ ಪ್ರತಿಯಾಗಿ ಏನನ್ನೂ ಕೊಡದೆ ಹೊರಡಲು ಅಪ್ಪಣೆ ಕೊಟ್ಟ. ಇದನ್ನು ನೋಡಿದ ನತದೃಷ್ಟರಾದ ಅವರು

ಹತಾಶರಾದರು ಮತ್ತು ದುಃಖದುಮ್ಮಾನಗಳಿಂದ ತಲೆ ಕೆಟ್ಟಂತಾದರು" ಎಂದು ಫೆಡರಿಚಿ ಬರೆಯುತ್ತಾನೆ. ನಾಡಿನಲ್ಲಿ ಸತ್ತೆಯೆಂಬುದೆ ಉಳಿದಿರಲಿಲ್ಲ ಮತ್ತು ಪ್ರವಾಸಿ ವಿಜಯನಗರದಲ್ಲಿ ಹಲವಾರು ತಿಂಗಳು ಉಳಿಯಬೇಕಾಗುತ್ತಿತ್ತು, "ಏಕೆಂದರೆ, ಆ ಕಾಲಕ್ಕೆ ಇತ್ತಿಂದತ್ತ ಸುತಾಡುತ್ತಿದ್ದ ಕಳ್ಳರಿಂದ ಮಾರ್ಗಗಳು ತೆರವಾಗುವವರೆಗೆ ಅಲ್ಲಿ ಉಳಿದುಕೊಳ್ಳುವ ಅಗತ್ಯವಿತ್ತು." ಏನಾದರೂ, ಗೋವಾಕ್ಕೆ ಹೋಗಲು ಅವನಿಗೆ ಅತಿ ತೊಂದರೆದಾಯಕವಾಗಿತ್ತು. ಏಕೆಂದರೆ, ಯಾವಾಗಲೂ ಕೊಳ್ಳೆಗಾರರ ತಂಡದ ಕೈಯಲ್ಲಿ ಸಿಕ್ಕು ಬೀಳುತ್ತಿದ್ದ ಅವನು ಮತ್ತು ಅವನ ಸಂಗಡಿಗರು ತಮ್ಮ ಬಿಡುಗಡೆ ಗಾಗಿ ಭಾರಿ ತೆರ ಕೊಡಬೇಕಾಗುತ್ತಿತ್ತು ಮತ್ತು ಒಂದು ಸಂದರ್ಭದಲ್ಲಿ ಡಕಾಯಿತರು ಅವರ ಮೇಲೆ ಹಲ್ಲೆ ಮಾಡಿ ಲೂಟಿ ಮಾಡಿದರು.

ತಿರುಮಲ ಈಗ ರಾಜಾ ಸದಾಶಿವನೊಂದಿಗೆ ಪೆನುಕೊಂಡದಲ್ಲಿದ್ದುದರಿಂದ ಸಾಮ್ರಾಜ್ಯದ ಮನ್ನೆಯರು ತಮ್ಮ ನಿಷ್ಠೆಯನ್ನು ಕಿತ್ತೆಸೆಯಲಾರಂಭಿಸಿದರು ಮತ್ತು ಒಬ್ಬರಾದ ಮೇಲೊಬ್ಬರು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿದರು. ನಾಡ ಅರಾಜಕತೆಯ ಸ್ಥಿತಿಯಲ್ಲಿತ್ತು. ಇದೀಗ ಗಟ್ಟಿ ಮತ್ತು ಅಚ್ಚುಕಟ್ಟಾಗಿದ್ದ ಸಾಮ್ರಾಜ್ಯ ಛಿದ್ರವಾಯಿತು ಮತ್ತು ಈ ಕಾಲದಿಂದ ಮುಂದಕ್ಕೆ ಅದು ತೀವ್ರವಾಗಿ ಅವಸಾನ ವಾಯಿತು.

ಪೋರ್ತುಗೀಜರಿಗೆ ಈ ಬದಲಾವಣೆ ಜೀವನಾಧಾರಕ ಮಹತ್ವದ್ದಾಗಿತ್ತು. "ಪರ್ಚಸ್‌ನ ಯಾತ್ರಿಗಳು" ಕೃತಿಯಿಂದ ನಾನು ಎತ್ತಿಕೊಂಡಿರುವ ವಿಜಯನಗರ ದೊಂದಿಗಿನ ಅವರ ವ್ಯಾಪಾರ ಕುರಿತ ಕೆಳಗಿನ ಟಿಪ್ಪಣಿಯನ್ನು ಫೆಡರಿಚಿ ಬಿಟ್ಟು/ ಹೋಗಿದ್ದಾನೆ:-

"ಗೋವಾದಿಂದ ಬಿಜ್ಞನಗರಕ್ಕೆ ಪ್ರತಿವರ್ಷ ಹೋಗುತ್ತಿದ್ದ ಸರಕೆಂದರೆ ಅರಬ್ಬಿ ಕುದುರೆಗಳು, ಮಖಮಲ್ಲು ಚಿತ್ರ ನೆಯ್ದು ಬಟ್ಟೆ, ಸ್ಯಾಟಿನ್, ಪೋರ್ತುಗಾಲದ ಆರ್ಮೆಸಿನ್[15] ಪಿಂಗಾಣಿ ವಸ್ತುಗಳು, ಕೇಸರಿ ಮತ್ತು ಅರುಣವರ್ಣದ ಬಟ್ಟೆ; ಮತ್ತು ಬಿಜ್ಞನಗರದಿಂದ ಟರ್ಕಿಯಲ್ಲಿ ತಮ್ಮ ವಸ್ತುಗಳಾಗಿ ರತ್ನಗಳು ಮತ್ತು ಬಂಗಾರದ ಡುಕಟ್‌ಗಳಾಗಿದ್ದ ಪಗೋಡಾಗಳು[16]; ಬಿಜ್ಞನಗರದಲ್ಲಿ ಅವರು ಬಳಸು ತ್ತಿದ್ದ ಬಟ್ಟೆಯೆಂದರೆ ಆಯಾ ವ್ಯಕ್ತಿಯ ಸ್ಥಾನಮಾನಕ್ಕನುಗುಣವಾಗಿ ಮಖಮಲ್ಲು, ಸ್ಯಾಟಿನ್ ಚಿತ್ರನೆಯ್ದು ಬಟ್ಟೆ, ಅರುಣವರ್ಣದ ಬಟ್ಟೆ ಅಥವಾ ಬಿಳಿ ಬಂಬಾಸ್ಟ್ ಬಟ್ಟೆ, ತಲೆಯ ಮೇಲೆ ಕುಲಾಯಿ[17] ಎಂದು ಕರೆಯಲ್ಪಡುವ ಉದ್ದ ಟೊಪ್ಪಿಗೆ ಇತ್ಯಾದಿ."

ನಗರದ ವಿನಾಶವಾದುದರಿಂದ ಪೋರ್ತುಗೀಜ ವ್ಯಾಪಾರಕ್ಕೆ ಉಂಟಾದ ನಷ್ಟದ ಬಗೆಗೆ, ೧೫೬೭ರಿಂದ ೧೫೮೮ರವರೆಗೆ ಭಾರತದಲ್ಲಿದ್ದ ಸ್ಯಾಸೆತಿ ಇತರರ ಅಭಿಪ್ರಾಯ ವನ್ನು ದೃಢೀಕರಿಸುತ್ತಾನೆ:-

"ಸರಕು ಸಾಗಾಟ ಎಷ್ಟು ಬಹಳವಾಗಿತ್ತೆಂದರೆ ಅದನ್ನು ಊಹಿಸಿಕೊಳ್ಳು ವುದೂ ಕಷ್ಟ; ಊರು ಬಲು ದೊಡ್ಡದು. ಅಲ್ಲಿ ಶ್ರೀಮಂತ ಜನರು ವಾಸಿಸಿದ್ದರು. ಅವರದು ನಮ್ಮಂತಹ ಶ್ರೀಮಂತಿಕೆಯಾಗಿರದೆ/ಕ್ರಾಸಿ ಮತ್ತು ಆ ಹಳೆಯ ದಿನಗಳ ಇತರರ ಶ್ರೀಮಂತಿಕೆಯಾಗಿತ್ತು.... ಮತ್ತು ಎಂಥ ಸರಕು! ವಜ್ರಗಳು, ಮಾಣಿಕ್ಯ ಗಳು, ಮುತ್ತುಗಳು.......ಇದೂ ಅಲ್ಲದೆ ಕುದುರೆ ವ್ಯಾಪಾರ, ನಗರ (ಗೋವಾ) ದಲ್ಲಿ ಅದೊಂದೇ ಉತ್ಪತ್ತಿ ಮಾಡುತ್ತಿದ್ದ ೧೨೦ರಿಂದ ೧೫೦ ಸಾವಿರ ಡುಕಟ್‌ಗಳ ಆದಾಯ ಈಗ ಕೇವಲ ಆರು ಸಾವಿರ ತಲುಪಿದೆ".

ಕೌಟೊ ಸಹ ಅದೇ ಕತೆಯನ್ನು ಹೇಳುತ್ತಾನೆ[18] :-

"ಬೀಸನಗ ರಾಜ್ಯದ ಈ ವಿನಾಶದಿಂದ ಭಾರತ ಮತ್ತು ನಮ್ಮ ದೇಶ ಬಹಳ ತಲ್ಲಣಿಸಿತು ; ಏಕೆಂದರೆ, ಎಲ್ಲರೂ ಕೈಕೊಂಡ ವ್ಯಾಪಾರದ ಬಹುಭಾಗ ಈ ರಾಜ್ಯದ ಸಲುವಾಗಿತ್ತು. ಅವರು ಅಲ್ಲಿಗೆ ಕುದುರೆಗಳು, ಮಖಮಲ್ಲುಗಳು, ಸ್ಯಾಟಿನ್‌ಗಳು ಮತ್ತು ಇತರ ವಿಧದ ಸರಕು ಒಯ್ದು ಬಹಳ ಲಾಭ ಮಾಡಿಕೊಂಡರು; ಮತ್ತು ಗೋವಾದ ಸುಂಕದ ಕಟ್ಟೆಯ ಆದಾಯ ಬಹಳ ಕುಗ್ಗಿತು. ಅದರಿಂದಾಗಿ ಅಂದಿ ನಿಂದ ಇಂದಿನವರೆಗೆ ಗೋವಾದ ನಿವಾಸಿಗಳು ಮೊದಲಿನಷ್ಟು ಒಳ್ಳೆಯ ಜೀವನ ನಡೆಸುತ್ತಿಲ್ಲ; ಪರ್ಶಿಯಾ ಮತ್ತು ಪೋರ್ತುಗಾಲಗಳಿಗೆ ಬಹಳ ಮಹತ್ವದ್ದಾಗಿದ್ದ ಉಣ್ಣೆಯ ಒರಟುಬಟ್ಟೆ ಮತ್ತು ಉತ್ಕೃಷ್ಟ ಬಟ್ಟೆಯ ವ್ಯಾಪಾರ ಆಗ ಕ್ಷೀಣಿಸಿತು, ಪ್ರತಿ ವರ್ಷ ರಾಜ್ಯದ ಹಡಗುಗಳಲ್ಲಿ ೫೦೦,೦೦೦ಕ್ಕೂ ಹೆಚ್ಚು ಹೇರಲ್ಪಡುತ್ತಿದ್ದ ಸುವರ್ಣ ಪಗೋಡಾಗಳು ಅಂದು ೭½ ತಾಂಗಾಗಳಷ್ಟು ಬೆಲೆಯುಳ್ಳವಾಗಿದ್ದರೆ ಇಂದು ೧೧½ ತಾಂಗಾಗಳಷ್ಟು ಬೆಲೆಯುಳ್ಳವಾಗಿವೆ, ಮತ್ತು ಅದೇ ರೀತಿ ಪ್ರತಿಯೊಂದು ರೀತಿಯ ನಾಣ್ಯ."

ಆದರೆ, ಪೋರ್ತುಗೀಜ ವ್ಯಾಪಾರ ಮತ್ತು ಗೋವಾದ ಪ್ರಭಾವದ ಅವಸಾನಕ್ಕೆ ಸ್ವಾಸೆಟಿ ಕೊಡುವ ಇನ್ನೊಂದು ಕಾರಣವನ್ನು ಗಮನಿಸದೆ ದಾಟುವಂತಿಲ್ಲ. ಇದಾವುದೆಂದರೆ ಭಯಂಕರ ಮಠೀಯ ನ್ಯಾಯಾಲಯ ಚರ್ಚಿನ ಪಿತೃಗಳು, ಮೀರಿದರೆ ಭಾರಿ ದಂಡಗಳೆಂಬ ಭಯದಿಂದ ತಮ್ಮ ಪವಿತ್ರ ಗ್ರಂಥಗಳನ್ನು ಬಳಸದಂತೆ ಹಿಂದೂ ಗಳನ್ನು ನಿಷೇಧಿಸಿದರು ಮತ್ತು ತಮ್ಮ ಎಲ್ಲ ಧಾರ್ಮಿಕ ಆಚರಣೆಗಳಿಂದ ಅವರನ್ನು ಪ್ರತಿಬಂಧಿಸಿದರು. ಅವರು ಅವರ ದೇವಾಲಯಗಳನ್ನು ಮತ್ತು ಮಸೀದೆಗಳನ್ನು ನಾಶ ಮಾಡಿದರು ಮತ್ತು ಜನರನ್ನು ಎಷ್ಟೊಂದು ಪೀಡಿಸಿ ಹಸ್ತಕ್ಷೇಪ ಮಾಡಿದ ರೆಂದರೆ ಅವರು ತಮಗೆ ಸ್ವಾತಂತ್ರ್ಯವಿರದ ಮತ್ತು ತಮ್ಮ ಪೂರ್ವಜರ ದೇವರನ್ನು ತಮ್ಮದೇ ರೀತಿಯಲ್ಲಿ ಪೂಜಿಸಿದರೆ[19] ಸೆರೆಮನೆ, ಚಿತ್ರಹಿಂಸೆ, ಮತ್ತು ಮರಣಕ್ಕೆ ಈಡಾಗಬೇಕಿದ್ದ ಊರಿನಲ್ಲಿ ಇನ್ನು ಮುಂದೆ ಇರಬಯಸದೆ ಅಧಿಕ ಸಂಖ್ಯೆಯಲ್ಲಿ ನಗರ ತ್ಯಜಿಸಿ ಹೊರಟರು.

ಈ ಕಾಲಾವಧಿಯ ಸುಮಾರಿಗೆ (೧೫೬೭) ದಕ್ಷಿಣ ಭಾರತದ ರಾಜಕೀಯ ಸ್ಥಿತಿಯನ್ನು ಹೀಗೆ ಸಂಗ್ರಹಿಸಿ ಹೇಳಬಹುದು : ಇನ್ನೂ ಹಿತಾಸಕ್ತಿಯಲ್ಲಿ ವಿಭಕ್ತವಾಗಿದ್ದರೂ ಮತ್ತು ಅವರ ದೇಶ ಒಬ್ಬರಿಗೊಬ್ಬರು ದ್ವೇಷಿಸುತ್ತಿದ್ದ ರಾಜ್ಯಗಳಲ್ಲಿ ಒಡೆದು ಹೋಗಿದ್ದರೂ ದಕ್ಖನದ ಮುಹಮ್ಮದೀಯರು ವಿಜಯಿಗಳಾಗಿದ್ದರು. ದಕ್ಷಿಣದ ಮಹಾ ಸಾಮ್ರಾಜ್ಯ ಕೆಳಕ್ಕೆ ತಳ್ಳಲ್ಪಟ್ಟಿತ್ತು ; ಮತ್ತು ಅದರ ರಾಜಧಾನಿ ಶಾಶ್ವತವಾಗಿ ನಾಶವಾಗಿತ್ತು ; ರಾಜಕುಟುಂಬ ಪೆನ್ನಕೊಂಡದಲ್ಲಿ ನಿರಾಶ್ರಿತವಾಗಿತ್ತು; ರಾಜಾ ಸದಾಶಿವ ಇನ್ನೂ ಬಂಧಿಯಾಗಿದ್ದ ; ಮತ್ತು "ಅಪರಾಜರಾಗಿದ್ದ ಮೂವರು ಸಹೋದರರಲ್ಲಿ"[20] ಉಳಿದವನೊಬ್ಬನೇ ಆಗಿದ್ದ ತಿರುಮಲ ರಾಜ್ಯವನ್ನು ಸಾಧ್ಯವಿದ್ದಷ್ಟು ಆಳುತ್ತಿದ್ದ. ಪ್ರತಿಯೊಬ್ಬನೂ ಸ್ವತಂತ್ರನಾಗುವ ಹವಣಿಕೆಯಲ್ಲಿದ್ದ ಮನ್ನೆಯರು ಕುಪಿತರೂ ನಿರುತ್ಸಾಹಿಗಳೂ ಆಗಿದ್ದರು ; ಕರಾವಳಿಯಲ್ಲಿನ ಪೋರ್ತುಗೀಜರು ತಮ್ಮ ವ್ಯಾಪಾರ ಚೇತರಿಸಿಕೊಳ್ಳಲಾರದಂತೆ ಕೆಟ್ಟದ್ದರಿಂದ ಕೊರಗುತ್ತಿದ್ದರು.

ಆ ಮಹಾ ಯುದ್ಧದ ತಕ್ಷಣ ತರುವಾಯದ ಘಟನೆಗಳನ್ನು ಫಿರಿಸ್ತಾ ಕೆಳಗಿನ ಶಬ್ದಗಳಲ್ಲಿ ಸಂಗ್ರಹಿಸಿ ಹೇಳುತ್ತಾನೆ :

"ಯುದ್ಧದ ಕೆಲ ದಿನಗಳ ನಂತರ ಸುಲ್ತಾನರು ರಾಮರಾಜನ ರಾಜ್ಯದಲ್ಲಿ ಆನಿಸಿಕೊಂಡೆವರೆಗೆ[21] ಮುಂದೆ ಸಾಗಿದರು, ಮತ್ತು ಮುಂಚೂಣಿಯ ಸೈನಿಕರು ಬೀಜನಗರದೊಳಕ್ಕೆ ನುಗ್ಗಿ ಅದನ್ನು ಕೊಳ್ಳೆ ಹೊಡೆದರು, ಪ್ರಮುಖ ಕಟ್ಟಡಗಳನ್ನು ನೆಲಸಮ ಮಾಡಿದರು ಮತ್ತು ಎಲ್ಲ ರೀತಿಯ ಅತ್ಯಾಚಾರ ಎಸಗಿದರು. ಮಿತ್ರ ಸೈನ್ಯಗಳ ಲೂಟಿಗಳು ಸುತ್ತ ಮುತ್ತಲಿನ ನಾಡನ್ನೆಲ್ಲ ನಾಶಪಡಿಸಿದಾಗ ಯುದ್ಧಭೂಮಿಯಿಂದ ದೂರದ ಕೋಟೆಗೆ ಪಾರಾಗಿದ್ದ ವೆಂಕಟಾದ್ರಿ[22] ಅವರಿಂದ ತನ್ನ ಸಹೋದರರು ಕಿತ್ತುಕೊಂಡಿದ್ದ ಸ್ಥಳಗಳನ್ನು ಅವರಿಗೇ ಬಿಟ್ಟುಕೊಟ್ಟು ಶಾಂತಿಯ ನಮ್ರ ಕೋರಿಕೆಗಳನ್ನು ಕಳಿಸಿದ ; ಅದರಿಂದ ತೃಪ್ತರಾದ ವಿಜೇತರು ರಾಯಚೋರ (ರಾಯಚೂರು) ಬಳಿ ಒಬ್ಬರಿಗೊಬ್ಬರು ವಿದಾಯ ಹೇಳಿದರು, ಮತ್ತು ತಮ್ಮ ತಮ್ಮ ರಾಜ್ಯಗಳಿಗೆ ಹಿಂತಿರುಗಿದರು. ಈ ಯುದ್ಧದ ನಂತರ ಬೀಜನಗರದ ರಾಜ ತನ್ನ ಗತವೈಭವವನ್ನು ಮರಳಿ ಪಡೆಯಲಿಲ್ಲ ; ಮತ್ತು ನಗರವನ್ನು ಎಷ್ಟೊಂದು ನಾಶಪಡಿಸಲಾಗಿದೆಯೆಂದರೆ ಅದು ಸಂಪೂರ್ಣ ಭಗ್ನಾವಸ್ಥೆಯಲ್ಲಿದೆ ಮತ್ತು ನಿರ್ಜನವಾಗಿದೆ.[23] ನಾಡನ್ನು ಜಮೀನುದಾರರು (ಚಿಕ್ಕ ಪಾಳೆಯಗಾರರು) ಹಿಡಿದುಕೊಂಡು ಪ್ರತಿಯೊಬ್ಬನೂ ತನ್ನ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೊಂದಿದ್ದಾನೆ."

೧೫೬೮ (ಹಾಗೆ ಹೇಳಲಾಗುತ್ತದೆ)ರಲ್ಲಿ ತಿರುಮಲ ತನ್ನ ಸಾರ್ವಭೌಮ ಸದಾಶಿವನನ್ನು ಕೊಂದು ತಾನೇ ಸಿಂಹಾಸನವನ್ನು ಆಕ್ರಮಿಸಿಕೊಂಡ ; ಆದರೆ ಜನೆಯ ಫೆಬ್ರುವರಿ ಕ್ರಿ.ಶ. ೧೫೭೦ರೊಂದಿಗೆ ಸರಿಹೊಂದುವ ದಿನಾಂಕವುಳ್ಳ ವೆಲ್ಲೂರಿನ

ನಾಲ್ಕು ಶಾಸನಗಳಿಂದ[24] ನಮಗೆ ತಿಳಿದು ಬರುವಂತೆ ಅಲ್ಲಿಯತನಕ ಅವನು ನತದೃಷ್ಟ ರಾಜಕುಮಾರನನ್ನು ತನ್ನ ಒಡೆಯನೆಂದೇ ಮನ್ನಿಸಿದಂತೆ ತೋರುತ್ತದೆ.

ಹೀಗೆ ಅದನ್ನು ರಾಜವಂಶವೆಂದು ಕರೆಯಬಹುದಾದರೆ ಮೂರನೆಯ ರಾಜ ವಂಶ ಸುರುವಾಯಿತು.

---

1 ಅಹಮುದನಗರ ಸುಲ್ತಾನರನ್ನು ಕುರಿತ ತನ್ನ ಚರಿತ್ರೆಯಲ್ಲಿ ಫಿರಿಸ್ತಾ ಒಂದು ಸ್ವಾರಸ್ಯಕರ ಕತೆಯನ್ನು ಹೇಳುತ್ತಾನೆ. ಹುಸೇನ ನಿಜಾಮುಶಾಹ ವಿಜಯನಗರ ದೊಂದಿಗೆ ಶಾಂತಿ ಏರ್ಪಡಿಸಲು ಇಚ್ಛಿಸಿದ, ಮತ್ತು ರಾಮರಾಯ ಕೆಲವು ಕರಾರು ಗಳಿಗೊಳಪಟ್ಟು ಅದನ್ನು ಒಪ್ಪುವುದಾಗಿ ಹೇಳಿದ. ಒಂದು, ಕಲ್ಯಾಣವನ್ನು ಬಿಜಾಪುರಕ್ಕೆ ಹಿಂತಿರುಗಿಸಬೇಕು ; ಎರಡು, ನಿಜಾಮು ಶಾಹ ತನಗೊಂದು ಭೇಟಿ ನೀಡಲೊಪ್ಪಿ ತನ್ನಿಂದ ತಾಂಬೂಲ ಸ್ವೀಕರಿಸಬೇಕು. ಹುಸೇನ ಬಿಕ್ಕಟ್ಟಿನ ಸ್ಥಿತಿ ಯಲ್ಲಿದ್ದುದರಿಂದ ಈ ಕಠಿಣ ಕರಾರುಗಳನ್ನೊಪ್ಪಿ ರಾಮರಾಯನ ಬಿಡಾರಕ್ಕೆ ಹೋದ. "ಇವನು ಅವನ ಡೇರೆ ಪ್ರವೇಶಿಸಿದಾಗ ಅವನು ಎದ್ದು ನಿಂತು (ಅವನನ್ನು ಬರಮಾಡಿಕೊಳ್ಳಲು ಹೊರಕ್ಕೆ ಬರಲಿಲ್ಲ) ಅವನ ಕೈಯನ್ನು ಚುಂಬಿಸಿದ. ಸುಲ್ತಾನನು ಅರ್ಥಹೀನ ಅಭಿಮಾನದಿಂದ ಬೋಗುಣಿ ಮತ್ತು ಹೂಜಿ ತರಿಸಿ ರಾಮ ರಾಜನ ಸ್ಪರ್ಶದಿಂದ ತನ್ನ ಕೈಗಳು ಮಲಿನವಾಗಿವೆಯೇನೋ ಎಂಬಂತೆ ಅವುಗಳನ್ನು ತೊಳೆದುಕೊಂಡ. ಈ ಅವಮಾನದಿಂದ ರೇಗಿದ ರಾಮರಾಜ ತನ್ನ ಭಾಷೆಯಲ್ಲಿಯೆ "ಅವನು ತನ್ನ ಅತಿಥಿಯಾಗಿರದಿದ್ದರೆ ಈ ಅವಮಾನಕ್ಕಾಗಿ ಪಶ್ಚಾತ್ತಾಪ ಪಡ ಬೇಕಾಗುತ್ತಿತ್ತು" ಎಂದು ನುಡಿದ ; ಆ ಮೇಲೆ, ನೀರು ತರಿಸಿಕೊಂಡು ತಾನೂ ತೊಳೆದುಕೊಂಡ. ಆಗ ಹುಸೇನ ಕಲ್ಯಾಣದ ಬೀಗದ ಕೈಗಳನ್ನು ಕೊಟ್ಟ.

2 ಸ್ಕಾಟ್‌ನ "ಫಿರಿಸ್ತಾ", ೧. ೨೯೧ ; ಬ್ರಿಗ್ಸ್, ೩. ೪೦೬

3 ೨೦ನೆಯ ಜಮಾದಾ ಅಲ್ ಅವ್ವಲ್, ಹಿಜರಾ ೯೭೨. ಫಿರಿಸ್ತಾ (ಸ್ಕಾಟ್), ೧.೨೯೫ ; ಬ್ರಿಗ್ಸ್, ೩,೪೧೩.

4 ಹಾಗಾದರೂ ಯುದ್ಧ ಜರುಗಿದ್ದು ಅಲ್ಲಲ್ಲ. ನದಿಯ ದಕ್ಷಿಣಕ್ಕೆ ಅನೇಕ ಮೈಲುಗಳ ದೂರದಲ್ಲಿ, ತಾಳಿಕೋಟೆ ಕೃಷ್ಣೆಯಿಂದ ಇಪ್ಪತ್ತೈದು ಮೈಲು ಇದೆ. ರಾಮರಾಯನ ಠಾಣೆ ಎಲ್ಲಿಯೆ ಇದ್ದಿರಲಿ ಅಲ್ಲಿಂದ ಹತ್ತು ಮೈಲು ದೂರದಲ್ಲಿ ಯುದ್ಧ ಜರುಗಿತು. ಈ ಅಂಶದ ಬಗೆಗೆ ಮಾಹಿತಿ ಲಭ್ಯವಿಲ್ಲ, ಆದರೆ ಯುದ್ಧ ಬಹುಶಃ ಪ್ರಖ್ಯಾತ ಕೋಟೆ ಮುದಕಲ್ಲಿನಲ್ಲಿ ಜರುಗಿತು. ಮಿತ್ರ ಸೈನ್ಯಗಳು ದಾಟಿದ ಗಡು ಇಂಗಳಗಿಯಲ್ಲಿ ನದಿಯ ತಿರುವಿನ ಹತ್ತಿರ ಇದ್ದುದಾಗಿರಬೇಕೆಂದು ತೋರುತ್ತದೆ, ಮತ್ತು ನಿರ್ಣಾ ಯಕ ಯುದ್ಧ ಇಂಗಳಗಿಯಿಂದ ಮುದಕಲ್ಲಿಗೆ ನೇರವಾಗಿ ಹೋಗುವ ದಾರಿಯ ಮೇಲಿರುವ ಚಿಕ್ಕ ಗ್ರಾಮ ಬಾಯಾಪುರ ಅಥವಾ ಭೋಗಾಪುರದ ಬಳಿಯ ಬಯಲು ಗಳಲ್ಲಿ ಜರುಗಿತೆಂದು ತೋರುತ್ತದೆ.

5 ಮುಂದೆ, ಪು. ೨೭೫ ರಿಂದ ೨೭೯.

6 ನಾನು ಹಲವಾರು ಸಂದರ್ಭಗಳಲ್ಲಿ ವಿಜಯನಗರದಲ್ಲಿ ಮತ್ತು ನೆರೆಯಲ್ಲಿ ಜಮಾಯಿಸ ಲ್ಪಟ್ಟ ಸೈನಿಕರ ದಳಗಳು ಅವರು ನನಗೆ ಸಾಂಪ್ರದಾಯಿಕವೆಂದು ಭರವಸೆಯಿತ್ತ

ರೀತಿಯಲ್ಲಿ ಬಟ್ಟೆ ಧರಿಸಿದುದನ್ನು ಮತ್ತು ಶಸ್ತ್ರ ಸಜ್ಜಿತರಾದುದನ್ನು ನೋಡಿರುವೆ. ಅವರು ಗಾಢ ಕೆಂಪು-ಕಂದು ಬಣ್ಣದ ಅರಳಬಟ್ಟೆಯ ಒರಟು ಗಿಡ್ಡ ಅಂಗಿಗಳು ಮತ್ತು ಗಿಡ್ಡ ಇಜಾರಗಳನ್ನು ಧರಿಸಿದ್ದರು. ಆ ಬಣ್ಣ ಅರಣ್ಯಗೆಲಸಕ್ಕೆ ಅತ್ಯಂತ ಯೋಗ್ಯವಾದುದು ಮತ್ತು ನಮ್ಮ ಇಂಗ್ಲಿಷ ಖಾಕಿಗಿಂತ ದಪ್ಪ ಬಣ್ಣದ್ದು. ಗಾಯಗಳಿಂದ ಸುರಿಯುವ ರಕ್ತದ ಕಲೆಗಳನ್ನು ಬಹುಮಟ್ಟಿಗೆ ಆ ಬಣ್ಣ ಮರೆ ಮಾಚುತ್ತದೆ ಎಂದು ಅವರು ನನಗೆ ಗಂಭೀರವಾಗಿ ಭರವಸೆ ನೀಡಿದರು. ಅವರ ಆಯುಧಗಳು ಬಹುಮಟ್ಟಿಗೆ ಭಲ್ಲೆಗಳಾಗಿದ್ದವು. ಕೆಲವರಲ್ಲಿ ಕೇವಲ ಗ್ರಾಮ್ಯ ಕತ್ತಿ ಮತ್ತು ಕಠಾರಿಗಳಿದ್ದವು.

7 ಫಿರಿಸ್ತಾ "ಶುಕ್ರವಾರ, ಜುಮಾದ್ ಊಸ್ ಸಾನಿಯ ೨ಂನೆಯ", ಹಿ.ಶ. ೯೭೨ ಎಂದು ದಿನಾಂಕ ಕೊಡುತ್ತಾನೆ (ಬ್ರಿಗ್ಸ್, ೩, ೪೧೪), ಆದರೆ, ಕೊಡಲಾಗಿದ್ದ ತಿಂಗಳಿನ ದಿನ ಮಂಗಳವಾರಕ್ಕೆ ಸರಿ ಹೊಂದುತ್ತಲ್ಲದೆ, ಶುಕ್ರವಾರಕ್ಕಲ್ಲ.

8 ಮುಂದಿನದನ್ನು ಸಂಪೂರ್ಣವಾಗಿ ಫಿರಿಸ್ತಾನಿಂದ ತೆಗೆದುಕೊಳ್ಳಲಾಗಿದೆ (ಸ್ಕಾಟ್, ೧. ೨೯೬ ಮುಂದೆ, ಬ್ರಿಗ್ಸ್ ೩. ೧೨೮, ೨೪೭).

9 ಡೆಕಡಾ, ೮.c.೧೫.

10 ಫಿರಿಸ್ತಾನ ಈ ಉದ್ಧೃತ ಭಾಗಗಳ ತನ್ನ ಅನುವಾದಕ್ಕೆ ಕರ್ನಲ್ ಬ್ರಿಗ್ಸ್ ಒಂದು ಸ್ವಾರಸ್ಯಕರ ಟಿಪ್ಪಣಿ ಜೋಡಿಸಿದ್ದಾನೆ (೩.೧೩೦). "ರಾಮರಾಜನ ತಲೆಯ ಕಲ್ಲಿನಲ್ಲಿ ಕಡೆದ ಪ್ರತಿಕೃತಿ ಇಂದಿಗೂ ಬೀಜಪುರದ ದುರ್ಗದ ಚರಂಡಿಯೊಂದರ ಬಾಯಿಯನ್ನಾಗಿಸಲಾಗಿದೆ ಎಂಬುದನ್ನು ನೋಡಿದರೆ ಈ ಹಿಂದೂ ರಾಜನ ಬಗೆಗೆ ಮಹಮ್ಮದೀಯರು ಬದ್ಧ ವೈರ ತಳೆದ ಹಾಗೂ ಅದೇ ರೀತಿ ಆ ಕಾಲದ ಹೀನ ಅಭಿರುಚಿಯ ಬಗೆಗೂ ಇದು ಅಚ್ಚೊತ್ತುವ ಉದಾಹರಣೆ ನೀಡುತ್ತದೆ; ಇದುವರೆಗೆ ಆ ತಲೆ ತಮ್ಮಲ್ಲಿ ಉಳಿದಿರುವ ಶಿರಚ್ಛೇದಕನ ವಂಶಜರು ಕಳೆದ ಇನ್ನೂರೈವತ್ತು ವರ್ಷಗಳುದ್ದಕ್ಕೂ ಯುದ್ಧದ ವಾರ್ಷಿಕದಂದು ನಿಜವಾದ ತಲೆಗೆ ಪ್ರತಿವರ್ಷ ಎಣ್ಣೆ ಮತ್ತು ವರ್ಣದ್ರವ್ಯ ಹಚ್ಚಿ ಅದನ್ನು ಅಹಮದನಗರದ ಶ್ರದ್ಧಾ ಭಕ್ತಿಗಳುಳ್ಳ ಮಹಮ್ಮದೀಯರಿಗೆ ಪ್ರದರ್ಶಿಸಲಾಗುತ್ತಿದೆ ಎಂದು ತಿಳಿಯುತ್ತದೆ." ಇದನ್ನು ೧೮೨೯ರಲ್ಲಿ ಬರೆಯಲಾಯಿತು.

11 ಕೌಟೊ ಅವರನ್ನು ಬಹುಶಃ 'Beduinos' ಅಥವಾ 'Bedouins' ಅಥವಾ ಅಲೆಮಾರಿ ಜನಾಂಗವೆಂಬ ಅರ್ಥದಲ್ಲಿ 'Bedues' ಎಂದು ಕರೆಯುತ್ತಾನೆ.

12 ಇದರಲ್ಲಿ ನಾನು ಕೌಟೊನನ್ನು ಅನುಸರಿಸುತ್ತೇನೆ; ಬ್ರಿಗ್ಸ್ ಉದ್ಧರಿಸಿದ ಗೋಲ್ಕೊಂಡದ ಚರಿತ್ರಕಾರ "ಮಿತ್ರ ಸೈನ್ಯಗಳು ಯುದ್ಧ ಭೂಮಿಯಲ್ಲಿ ಹತ್ತು ದಿನ ನಿಂತವು, ಮತ್ತು ನಂತರ ಬೀಜನಗರದ ರಾಜಧಾನಿಗೆ ಹೊರಟವು" ಎಂದು ಹೇಳುತ್ತಾನೆ. ಆದರೆ, ಎರಡೂ ವೃತ್ತಾಂತಗಳೂ ಸರಿಯಿರುವ ಸಾಧ್ಯತೆಯುಂಟು. ಮುಂದೆ ಸಾಗಿದ್ದ ಮಹಮ್ಮದೀಯ ಸೈನಿಕರಂತೂ ಬಹುತೇಕ ನಿಶ್ಚಿತವಾಗಿ ರಾಜಧಾನಿಗೆ ನುಗ್ಗಿದ್ದರು. ಮುಖ್ಯಪಡೆ, ವಿರೋಧ ಒಡ್ಡಲಾಗಿಲ್ಲವೆಂಬ ಸುದ್ದಿಯನ್ನು ಸಾರ್ವಭೌಮರು ಪಡೆದ ನಂತರ ಹತ್ತನೆಯ ದಿನ ಬಿಡಾರ ಕಿತ್ತಿರಬಹುದು.

13 ಪರ್ಚಸ್, ೧೬೨೫ರ ಆವೃತ್ತಿ, ೨, ಪು. ೧೭೧೩.

14 ರಾಜ ತನ್ನ ಕುದುರೆಯ ಹಣೆಪಟ್ಟಿಯ ಗರಿಗಳ ಅಡಿಯಲ್ಲಿ ಜೋಡಿಸಿದ್ದುದೆ ಈ ವಜ್ರ ಎಂದು ಕಾಟಿೊ ಹೇಳುತ್ತಾನೆ (ಡೆಕಡಾ ೮.c.೧೫). (ಅನುಬಂಧ ಅ ನೋಡಿರಿ).

15 ಪೋರ್ತುಗೀಜ್ ಅರ್ಮಜಿನ್ "ಒಂದು ರೀತಿಯ ಬಂಗಾಲದ ಟಾಫೆಟಾ (ವೈಕ್ಯಾಲಿಸ್‌ನ ನಿಘಂಟು).

16 ವಿಜಯನಗರದ ಸುವರ್ಣ ನಾಣ್ಯಗಳು.

17 ಕುಲಾಯಿ ಮುಂದೆ ಪು. ೩೫೨, ೨೮೯, ೩೮೩ ಮತ್ತು ಟಿಪ್ಪಣಿಗಳನ್ನು ನೋಡಿರಿ.

18 ಡೆಕಡಾ, ೮.ಅ ೧೫. ನಾನು ಈ ಮತ್ತು ಮುಂದಿನ ಪ್ಯಾರಾವನ್ನು ಲೋಪ್ಸ್‌ನ ಕ್ರೊನಿಕಾ ದೊಸ್ ರೇಜ್ ದ ಬಿಸನಗ, ಪೀಠಿಕೆ, ಪು. lxviii ದಿಂದ ತೆಗೆದುಕೊಂಡಿದ್ದೇನೆ.

19 ೧೯೬೭ ರಲ್ಲಿ ಬರೆಯುವ ಪ್ರವಾಸಿ ಫ್ರಾಯರ್ ಗೋವಾದಲ್ಲಿ ತಾನು ನೋಡಿದ ಮಠೀಯ ನ್ಯಾಯ ಸ್ಥಾನದ ಬಗೆಗೆ ಹೇಳುತ್ತಾನೆ. ಅವನ ಪತ್ರ iv, ಅಧ್ಯಾಯ ii ರಿಂದ ಕೆಳಗಿನದನ್ನು ಆಯ್ದುಕೊಂಡಿರುವೆ; "ಮರುದಿನ ಬೆಳಿಗ್ಗೆ ಪ್ಯಾಲೆಸ್-ಸ್ಪೇರ್‌ಗೆ ಹೋಗಲಾಗಿ ನಾವು ಮಠೀಯ ನ್ಯಾಯಸ್ಥಾನದ ಭಯಂಕರ ಸೆರೆಮನೆಯಾದ ಸಭಾಭವನವನ್ನು ನೋಡಿದೆವು; ಪ್ರಧಾನ ಮಾರುಕಟ್ಟೆಯಲ್ಲಿ ಎತ್ತರದ ಮೇಲೆ ಒಂದು ಯಂತ್ರವನ್ನು ನಿಲ್ಲಿಸಲಾಗಿದೆ. ಅದು ತುದಿಯಲ್ಲಿ ಗಲ್ಲುಗಂಬದಂತಿದೆ. ಅದಕ್ಕೊಂದು ಗಡಗಡೆಯಿದೆ. ಮತ್ತು ಮನುಷ್ಯನ ಕೀಲುಗಳನ್ನು ತಪ್ಪಿಸುವ ಕೋ-ದಂಡ ಶಿಕ್ಷೆಗೆ ಏರಿ ಹೋಗಲು ಧ್ವಜಸ್ತಂಭಕ್ಕಿದ್ದಂತೆ ಪಾವಟಿಗೆಗಳಿವೆ. ಕ್ರೂರ ಚಿತ್ರಹಿಂಸೆ. ಈ ಪಾವಟಿಗಳಿಗೆ ಎದುರಾಗಿ ಆಚೆ ಅವರು ಸುಡುವ ದ್ವೀಪವಿದೆ....ಮಠೀಯ ನ್ಯಾಯಾಧೀಶ ದಂಡನೆಗೆ ಗುರಿ ಮಾಡಿದವರನ್ನೆಲ್ಲ ಸಾಂಕ್ಟೊ ಆಫೀಸಿಯಾದಿಂದ ಅಲ್ಲಿಗೆ ಮರಿಪಿಶಾಚಿ ಮತ್ತು ಸೈತಾನರ ಭಯಂಕರ ರೂಪದಲ್ಲಿ ವೇಷ ತೊಡಿಸಿ ಕರೆತಂದು ವಧಕಾರನಿಗೆ ಒಪ್ಪಿಸಲಾಗುತ್ತದೆ...ಸೇಂಟ್ ಜ್ಯಾಗೊ ಅಥವಾ ಸೇಂಟ್ ಜೇಮ್ಸ್ ದಿನವೆಂದರೆ 'Aucto de Fie ನ ದಿನ', ಅದೇ ಪತ್ರದ vನೆಯ ಅಧ್ಯಾಯದಲ್ಲಿ ತಾನು ಗೋವಾದಲ್ಲಿದ್ದಾಗ "ಹಂದಿ ಮಾಂಸವೊಂದನ್ನುಳಿದು ಕಟುಕರ ಎಲ್ಲ ಮಾಂಸವನ್ನು ನಿಷೇಧಿಸಲಾಗಿತ್ತು" ಎಂದು ಹೇಳುತ್ತಾನೆ. ಯುರೋಪಿಯನ್, ನಿವಾಸಿಗಳಿಗೂ ತೊಂದರೆದಾಯಕವಾಗಿದ್ದ ಈನಿಯಮ ತಮ್ಮ ಜಾತಿ ನಿಯಮಗಳ ಪ್ರಕಾರ ಮಾಂಸ ತಿನ್ನಲು ಅನುಮತಿಯುಳ್ಳ, ಆದರೆ ಹಂದಿ ಮಾಂಸ ವಿಶೇಷತಃ ಅಸಹ್ಯವಾಗಿದ್ದ ಹಿಂದೂಗಳಿಗಂತೂ ತೀರ ಕೆಟ್ಟದಾಗಿತ್ತು. ೧೫೮೩ ರಿಂದ ೧೫೮೯ರವರೆಗೆ ಭಾರತದಲ್ಲಿದ್ದ ಲಿನ್ಸ್‌ಕಾಟೇನ್, ಮಠೀಯ ನ್ಯಾಯಾಲಯ ಹಿಂದೂಗಳ ಮೇಲೆ ಹೊರಿಸಿದ ಸೆರೆಮನೆವಾಸ ಮತ್ತು ಚಿತ್ರಹಿಂಸೆಗಳನ್ನು ಉಲ್ಲೇಖಿಸುತ್ತಾನೆ.

20 ಸೀಜರ್ ಫ್ರೆಡರಿಕ್.

21 ಅರ್ಥಾತ್, ಮುದಕಲ್, ತಾವರಗಿರಿ ಮತ್ತು ಕನಕಗಿರಿ ಮಾರ್ಗವಾಗಿ ವಿಜಯನಗರ ದಲ್ಲಿರುವ ನದಿಯ ಉತ್ತರ ದಡದಲ್ಲಿರುವ ಆನೆಗುಂದಿಗೆ ಸುಮಾರು ಐವತ್ತೈದು ಮೈಲು ದೂರ ಮುಂದೆ ಸಾಗಿದರು.

22 ವೆಂಕಟಾದ್ರಿ ಯುದ್ಧದಲ್ಲಿ ಕೊಲ್ಲಲ್ಪಟ್ಟನೆಂದೂ ಮೂವರು ಸಹೋದರರಲ್ಲಿ ತಿರುಮಲ ನೊಬ್ಬನೇ ಉಳಿದನೆಂದೂ ಇತರ ವೃತ್ತಾಂತಗಳು ಹೇಳುತ್ತವೆ. ಫಿರಿಸ್ತಾ ಗಾಳಿ ಸುದ್ದಿಯನ್ನಾಧರಿಸಿ ಬರೆದ ಮತ್ತು ಬಹುಶಃ ಅವನಿಗೆ ತಪ್ಪು ಮಾಹಿತಿ ನೀಡ ಲಾಗಿತ್ತು. ಬಹಶಃ 'ವೆಂಕಟಾದ್ರಿ'ಗೆ ಬದಲು 'ತಿರುಮಲ' ಎಂದು ಓದಬೇಕು.

23 ಫಿರಿಸ್ತಾ ಇದನ್ನು ಶತಮಾನದ ಅಂತ್ಯಕ್ಕೆ ಬರೆದ.

24 "ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್", ಹುಲ್ಟ್‌ಶ್ಜ್, i ೬೯ ; **Iml. Anṭ, xxII,** ೧೪೬.

## ಅಧ್ಯಾಯ ೧೬

# ಮೂರನೆಯ ರಾಜವಂಶ

**ವಂಶಾವಳಿ—ಮಹಮ್ಮದೀಯ ರಾಜ್ಯಗಳು—ಬಂಕಾಪುರ, ಕೊಂಡವೀಡು, ಬೆಳಮ್‌ಕೊಂಡ ಮತ್ತು ವಿನುಕೊಂಡಗಳ ಪತನ—ಹೈದರಾಬಾದಿನ ಸ್ಥಾಪನೆ—ಮಹಮ್ಮದೀಯರ ಅಧೀನದಲ್ಲಿ ಅದೋನಿ—ಸಂಕ್ಷಿಪ್ತದಲ್ಲಿ ತರುವಾಯದ ಇತಿಹಾಸ.**

ಈ ಮೂರನೆಯ ಮನೆತನದ ವಂಶಾವಳಿ ಕೆಳಗಿನಂತಿದೆ.[1] ಅವರು ಸ್ಪಷ್ಟವಾಗಿ ಪ್ರಾಚೀನ ರಾಜವಂಶಕ್ಕೆ ಸೇರಿದವರು, ಆದರೆ ಅದರೊಂದಿಗೆ ಅವರ ಖಚಿತ ಸಂಬಂಧವನ್ನು ನಿರ್ಣಾಯಕವಾಗಿ ಬಗೆಹರಿಸಲಾಗಿಲ್ಲ. ಇಲ್ಲಿ ಕೊಡಲಾದ ದಿನಾಂಕಗಳು ಶಾಸನಗಳ ದಿನಾಂಕಗಳಾಗಿವೆಯೆ ಹೊರತು ಆವಶ್ಯಕವಾಗಿ ಆಳ್ವಿಕೆಯ ದಿನಾಂಕಗಳಲ್ಲ.




ಮೂರನೆಯ ಚಿನ್ನವೆಂಕಟ
ವೀರವೆಂಕಟ
ತಿರುಮಲ
ಆರನೆಯ ರಂಗ
(ಗೋಪಾಲ ದತ್ತು ತೆಗೆದುಕೊಂಡವ)
ರಾಮು
(ಬೇರೆಡೆ ರಂಗ ಎಂದು ಕರೆಯಲ್ಪಟ್ಟವ)
ರಂಗ
(ಬೇರೆಡೆ ವೆಂಕಟ ಎಂದು ಕರೆಯಲ್ಪಟ್ಟವ)
ರಾಮು
ತಿರುಮಲ
ವೆಂಗಣ್ಣ
(ಮಕ್ಕಳಿಲ್ಲ)
ಚಿನ್ನರಾಜಾ
ರಾಮು
ಪೆದ್ದದಾಸ
(ಮಕ್ಕಳಿಲ್ಲ)
ಚಿನ್ನದಾಸ
ರಾಮು
(ಮಕ್ಕಳಿಲ್ಲ)
ವೀರವೆಂಕಟ
(ಗೋಪಾಲನ ಮಗ, ಚಿನ್ನದಾಸ ದತ್ತು ತೆಗೆದುಕೊಂಡವ)

- ತಿರುಮಲ
  - ನರಸಿಂಹ
    - ಕೇಶವಮ್ಮ (ಮಗಳು)
      - ಚಿನ್ನತಿರುಮಲ
        - ವೆಂಕಟ (ಇಬ್ಬರು ಪುತ್ರಿಯರು)
        - ಕೃಷ್ಣ (ವಿ. ಕುಪ್ಪಮ್ಮ ಅವಳು ಪಂಪಾಪತಿರಾಯನನ್ನು ದತ್ತು ತೆಗೆದುಕೊಂಡಳು)
        - ಮಗಳು
        - ಕೃಷ್ಣ (ಎಳೆಯದರಲ್ಲಿಯೆ ಮೃತನಾದ)
      - ಲಕ್ಷ್ಮಿದೇವಿ (ಮಗಳು)
        - ನರಸಿಂಹ (ಎಳೆಯದರಲ್ಲಿಯ ಮೃತ
  - ವೀರವೆಂಕಟ (ಅವಿವಾಹಿತನಾಗಿ ಮೃತ)
- ಚೆಲ್ಲಮ್ಮ (ಮಗಳು)
  - ಪೆದ್ದ ಪಂಪಾಪತಿ
    - ರಂಗ (ಇಬ್ಬರು ಪುತ್ರರು ಅವರಿಗೆ ಮಕ್ಕಳಿಲ್ಲ)
  - ಚಿನ್ನ ಪಂಪಾಪತಿ
    - ತಿರುಮಲ (ಮಕ್ಕಳಿಲ್ಲ)
    - ಕುಮಾರ ರಾಘವ
      - ಸದಾಶಿವ (ಮೃತ)
        - ಕುಮಾರ ರಾಘವ
      - ಕೋದಂಡ ರಾಮ (ಮೃತ)
      - ಕುಪ್ಪಮ್ಮ (ಹಿರಿಯ ವಂಶದ ಕೃಷ್ಣನನ್ನು ಮದುವೆಯಾದಳು)
      - ನರಸ (ಮೃತ)
      - ಪಂಪಾಪತಿ ರಾಯ (ಕುಪ್ಪಮ್ಮ ದತ್ತು ತೆಗೆದುಕೊಂಡವ)

ಅವನ ಮನೆತನದ ಹೆಸರು ಪಂಪಾವತಿ ಎಂದಿದೆ ಮತ್ತು ಹೈದರಾಬಾದ ನಿಜಾಮನ ಕೆಳಗೆ ಜಮೀನದಾರನಾಗಿ ಮನೆತನದ ಹಳೆಯ ಆಸ್ತಿಯಲ್ಲಿ ವಾಸಿಸುತ್ತಿರುವ ಆನೆಗುಂದಿಯ ಪ್ರಸ್ತುತ ರಾಜ, ಇಂದಿನವರೆಗಿನ ವಂಶವೃಕ್ಷದ ಮುನ್ನಡೆಯನ್ನು ನನಗೆ ಕೊಟ್ಟು ಉಪಕರಿಸಿದ್ದಾನೆ.

೬ನೆಯ ರಂಗ ಅಥವಾ, ಅವನನ್ನು ಸಾಮಾನ್ಯವಾಗಿ ಕರೆಯುವಂತೆ, ಶ್ರೀರಂಗ ೩ನೆಯ ಚಿನ್ನ ವೆಂಕಟನ ಮೂವರು ಸಹೋದರರಲ್ಲಿ ಎಲ್ಲಕ್ಕೂ ಕಿರಿಯನೆಂದು ಹೇಳಲಾಗುತ್ತಿದೆ. ವೀರವೆಂಕಟಪತಿರಾಯ ಎಲ್ಲಕ್ಕೂ ಹಿರಿಯ ಮನೆತನದ ಕಿರಿಯ ಸದಸ್ಯನಾದ ಗೋಪಾಲ ಸಿಂಹಾಸನಕ್ಕೆ ಬಂದ ಮತ್ತು ಎಲ್ಲಕ್ಕೂ ಹಿರಿಯ ಶಾಖೆಯ ಕಿರಿಯ ಸದಸ್ಯನಾದ ೬ನೆಯ ರಂಗನನ್ನು ದತ್ತು ತೆಗೆದುಕೊಂಡ. ೬ನೆಯ ರಂಗನ ಎಲ್ಲಕ್ಕೂ ಹಿರಿಯ ಸಹೋದರನನ್ನು ಕಿತ್ತೊಗೆಯಲಾಯಿತು.

ಈ ಮಾಹಿತಿ ಸರಿಯಾಗಿದೆಯೆ ಇಲ್ಲವೆ ಎಂಬುದನ್ನು ತಿಳಿದುಕೊಳ್ಳಲು ನನ್ನಲ್ಲಿ ಸಾಧನಗಳಿಲ್ಲ, ಆದರೆ ಎಲ್ಲಕ್ಕೂ ಹಿರಿಯನ ಅನುಕ್ರಮ ಉತ್ತರಾಧಿಕಾರಿಗಳನ್ನು ಮುಂದಿನ ಪುಟದ ಮೇಲೆ ಕೊಡಲಾಗಿದೆ.

ಪಂಪಾಪತಿ ರಾಜನನ್ನು ಅವನ ಸರಕಾರ ಮನೆತನದ ಮುಖ್ಯಸ್ಥನೆಂದು ಎರಡು ಕಾರಣಗಳಿಗಾಗಿ ಅಂಗೀಕರಿಸಿತ್ತು : ಮೊತ್ತಮೊದಲು, ಹಿರಿಯ ಕುಡಿ ಸತ್ತು ಹೋಗಿತ್ತು. ಮತ್ತು ಹಿರಿಯ ಕುಡಿಯು ಕೃಷ್ಣದೇವನ ಹೆಂಡತಿಯಾಗಿದ್ದ ಅವನ ಸೋದರಿ ಕುಪ್ಪಮ್ಮ ಅವನನ್ನು ದತ್ತು ತೆಗೆದುಕೊಂಡಿದ್ದಳು ಎಂಬ ಕಾರಣಕ್ಕಾಗಿ ; ಎರಡನೆಯದಾಗಿ, ಅವನ ಅಣ್ಣಂದಿರು ಅವನ ಪರವಾಗಿ ತಮ್ಮ ಹಕ್ಕನ್ನು ಬಿಟ್ಟು ಕೊಟ್ಟದ್ದರೆಂದು ಹೇಳಲಾಗುತ್ತಿದ್ದ ಕಾರಣಕ್ಕಾಗಿ, ಪ್ರಸ್ತುತ ರಾಜನ ಬಿರುದು "ಶ್ರೀರಂಗ ದೇವರಾಯ" ಎಂಬುದಾಗಿದೆ. ಅವನ ಭ್ರಾತ್ರೀಯ ಕುಮಾರ ರಾಘವನಿಗಿಂತ ಅವನಿಗೆ ಹೆಚ್ಚಿನ ಹಕ್ಕು ಇದೆಯೊ ಇಲ್ಲವೊ ಎಂಬುದನ್ನು ಇಲ್ಲಿ ಚರ್ಚಿಸುವುದು ಬೇಡ. ಪ್ರಾಚೀನ ರಾಜ ಮನೆತನದ ಬದುಕುಳಿದ ಪುರುಷ ವಂಶಜರಂದರೆ ಇವರಿಬ್ಬರೇ ಎಂಬ ಸಂಗತಿಯಲ್ಲಿ ಈ ಇತಿಹಾಸದ ಓದುಗರ ಆಸಕ್ತಿ ಅಡಕವಾಗಿದೆ.

ಆ ಇತಿಹಾಸದತ್ತ ಹೊರಳೋಣ. ಆದರೆ, ವಿಜಯನಗರ ನಾಶವಾದುದನ್ನು ಮತ್ತು ಅದರ ಪ್ರದೇಶಗಳು ರಾಜಕೀಯ ಗೊಂದಲ ಹಾಗೂ ಕ್ಷೋಬೆಯ ಸ್ಥಿತಿಯಲ್ಲಿದ್ದುದನ್ನು ನಾವು ನೋಡಿರುವುದರಿಂದ ಆ ಇತಿಹಾಸವನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಬೇಕಾಗಿದೆ.

ನಮ್ಮ ಉದ್ದೇಶಕ್ಕೆ ಅನವಶ್ಯಕವೆಂದು ಪರ್ಯಾಯ ರಾಜಕೀಯ ಸಂಯೋಜನಗಳು ಮತ್ತು ವಿಘಟನೆಗಳು, ದ್ರೋಹಗಳು, ಜಗಳಗಳು, ೧೫೬೫ರ ನಂತರ ವಿವಿಧ ಮಹಮ್ಮದೀಯ ರಾಜ್ಯಗಳ ಪರ್ಯಾಯ ರಾಜಕೀಯ ಸಂಯೋಜನಗಳು

ಮತ್ತು ವಿಘಟನೆಗಳು, ದ್ರೋಹಗಳು, ಕಲಹಗಳು, ಮತ್ತು ಕಾದಾಟಗಳನ್ನು ನಾನು ಸಂಪೂರ್ಣವಾಗಿ ಕೈಬಿಟ್ಟಿದ್ದೇನೆ. ಪದಬಾಹುಳ್ಯ ನಿವಾರಿಸಲು ಈ ಮೊದಲು ಮಹಾ ಹಿಂದೂ ಸಾಮ್ರಾಜ್ಯದಡಿಯಲ್ಲಿ ಪ್ರದೇಶಗಳಿಗೆ ವಿಶೇಷವಾಗಿ ಸಂಬಂಧಿತ ವಾಗಿರುವ ಕೆಲವೇ ವಿಷಯಗಳನ್ನು ಸಂಗ್ರಹವಾಗಿ ಹೇಳುತ್ತೇನೆ.

ಗೋಲ್ಕೊಂಡ ವೃತ್ತಾಂತಗಳನ್ವಯ, ವಿಜಯನಗರದ ವಿನಾಶದಲ್ಲಿ ಪರಿಣಮಿಸಿದ ಮಹಾಯುದ್ಧದ ಒಂದು ವರ್ಷ ತರುವಾಯ ಕುತಬ್‌ಶಾಹನ ದಂಡನಾಯಕನಾದ ರಫತ್ ಖಾನ್ ಲಾರಿ ಉರ್ಫ್ ಮಲಿಕ್ ನಾಯಿಬ್ ರಾಜಮಂಡ್ರಿ ವಿರುದ್ಧ ದಂಡೆತ್ತಿ ನಡೆದು ಅದನ್ನು ಅಂತಿಮವಾಗಿ ಹಿಂದೂಗಳಿಂದ ಕ್ರಿ.ಶ. ೧೫೭೧-೭೨ (ಹಿ.ಶ. ೯೭೯) ರಲ್ಲಿ ವಶಪಡಿಸಿಕೊಂಡ.

ಅವನು ಬಿಜಾಪುರಕ್ಕೆ ಮರಳಿದ ಕ್ಷಿಪ್ರದಲ್ಲಿಯೆ (ಹೀಗೆಂದು ಫಿರಿಸ್ತಾ ಹೇಳುತ್ತಾನೆ), ಅಲಿ ಆದಿಲ್‌ಶಾಹ ಪುನಃ ಸೈನ್ಯದೊಂದಿಗೆ ವಿಜಯನಗರದತ್ತ ನಡೆದ. ಆದರೆ, ಅಹಮ್ಮದನಗರದ ಸುಲ್ತಾನ ಅವನನ್ನು ವಿರೋಧಿಸಲು ಸಾಗಿಬಂದಾಗ ಹಿಂದೆಗೆದನು: ಮತ್ತು ಅಲ್ಪ ಕಾಲಾನಂತರ ಗೋವಾವನ್ನು ಅಡಗಿಸುವ ನಿಷ್ಫಲ ಪ್ರಯತ್ನ ಮಾಡಿದ. ಕರಾವಳಿಯಿಂದ ಹಿಂದೆ ಸರಿದು ಅದೋನಿಯ ಮೇಲೆ ಆಕ್ರಮಣ ಮಾಡಲು ಸಾಗಿದ. ಆಗ ಅದು ಆ ಪ್ರದೇಶದಲ್ಲಿ ಸ್ವತಂತ್ರನಾಗಿಸಿಕೊಂಡಿದ್ದ ವಿಜಯನಗರದ ಸಾಮಂತ ದೊರೆಗಳಲ್ಲೊಬ್ಬನ ಅಧೀನದಲ್ಲಿತ್ತು. ಆ ಊರನ್ನು ವಶಪಡಿಸಿಕೊಳ್ಳಲಾಯಿತು, ಮತ್ತು ನಿಜಾಮ ಶಾಹ ಬೇರರನ್ನು ವಶಪಡಿಸಿಕೊಳ್ಳಲು ತನ್ನನ್ನು ನಿರುಪಾಧಿಕವಾಗಿ ಬಿಡುವುದಾದರೆ ಕೃಷ್ಣಾದ ದಕ್ಷಿಣಕ್ಕಿರುವ ಪ್ರದೇಶಗಳನ್ನು ಸೇರಿಸಿಕೊಳ್ಳುವ ಬಿಜಾಪುರದ ರಾಜನ ಪ್ರಯತ್ನಗಳಲ್ಲಿ ತಾನು ಕೈ ಹಾಕುವುದಿಲ್ಲೆಂದು ಬಿಜಾಪುರದ ರಾಜನೊಂದಿಗೆ ಒಪ್ಪಂದ ಮಾಡಿಕೊಂಡ.

ಆದುದರಿಂದ, ೧೫೭೩ರಲ್ಲಿ ಅಲಿ ಆದಿಲ್ ಧಾರವಾಡ ಮತ್ತು ಬಂಕಾಪುರಗಳ ವಿರುದ್ಧ ನಡೆದ. ಆಗ ಸ್ವತಂತ್ರನಾಗಿದ್ದ ವೇಲಪ್ಪ ನಾಯಕ ಎಂಬ ಪಾಳೆಯಗಾರನ ಅಧೀನದಲ್ಲಿದ್ದ ಬಂಕಾಪುರದ ಮುತ್ತಿಗೆ ಒಂದು ವರ್ಷ ಆರು ತಿಂಗಳು ಸಾಗಿ ಬಿಕ್ಕಟ್ಟಿಗೊಳಗಾದ ಕೋಟೆ ಶರಣಾಗತವಾಯಿತು. ಆದಿಲ್‌ಶಾಹ ಅಲ್ಲಿದ್ದ ಒಂದು "ಉತ್ಕೃಷ್ಟ ದೇವಾಲಯ"ವನ್ನು ನಾಶಪಡಿಸಿದನು ಮತ್ತು ಆದರ ಬುನಾದಿಯ ಮೇಲೆ ಕಟ್ಟಲಾದ ಮಸೀದೆಯ ಕೋನಶಿಲೆಯನ್ನು ಸ್ವತಃ ತಾನೇ ಇಟ್ಟನೆಂದು ಫಿರಿಸ್ತಾ ಹೇಳುತ್ತಾನೆ[2]. ಕೊಂಕಣದಲ್ಲಿ ಹೆಚ್ಚಿನ ಯಶಸ್ಸುಗಳು ದೊರಕಿದವು. ಮೂರು ವರ್ಷಗಳ ನಂತರ ಬೆಳಮ್‌ಕೊಂಡದ ಮೇಲೆ ಆದೇ ರೀತಿ ಆಕ್ರಮಣ ಮಾಡಲಾಯಿತು. ಮತ್ತು ರಾಯನು ಭಯಪಟ್ಟು ಪೆನುಕೊಂಡದಿಂದ ಚಂದ್ರಗಿರಿಗೆ ಹಿಂತಿರುಗಿದನು. ಆದರೆ, ಈ ದಂಡಯಾತ್ರೆ ಗೋಲ್ಕೊಂಡದ ಶಾಹ ಹಿಂದೂಗಳಿಗೆ ನೆರವು ನೀಡಿದ ಸ್ಪಷ್ಟ ಕಾರಣಕ್ಕಾಗಿ ಅಪಯಶಸ್ಸಿನಲ್ಲಿ ಪರಿಣಮಿಸಿತು. ೧೫೭೯ರಲ್ಲಿ ಗೋಲ್ಕೊಂಡದ

ರಾಜ ತನ್ನ ಒಪ್ಪಂದ ಮುರಿದು ವೆನುಕೊಂಡ ಮತ್ತು ಕೊಂಡವೀಡುಗಳಲ್ಲದೆ ಕಚರ್ಲಕೋಟ ಮತ್ತು ಕಮ್ಮಮ್[3] ಕೋಟೆಗಳ ಮೇಲೂ ಆಕ್ರಮಣ ಮಾಡಿ ಅವುಗಳನ್ನು ಅಂಕೆಯಲ್ಲಿರಿಸಿಕೊಳ್ಳುವ ಮೂಲಕ ಕೃಷ್ಣೆಯ ದಕ್ಷಿಣಕ್ಕಿರುವ ವಿಶಾಲ ಪ್ರದೇಶಗಳನ್ನು ಹಿಡಿದುಕೊಂಡ.

೧೫೮೦ರಲ್ಲಿ ಅಲಿ ಆದಿಲ್ ಕೊಲೆಯಾದ. ತನ್ನ ಕುತುಬ್ ಶಾಹರ ಇತಿಹಾಸದಲ್ಲಿ ಫಿರಿಸ್ತಾ ಆ ದಿನಾಂಕವನ್ನು ಗುರುವಾರ, ೨೩ನೆಯ ಸಫರ್, ಹಿ.ಶ.೯೮೭ ಎಂದು ಉಲ್ಲೇಖಿಸುತ್ತಾನೆ. ಆದರೆ, ನಿಜವಾದ ದಿನಾಂಕ ಸೋಮವಾರ, ಎಪ್ರಿಲ್ ೧೧, ಕ್ರಿ.ಶ. ೧೫೮೦ರೊಂದಿಗೆ ಸರಿಹೊಂದುವ ಸೋಮವಾರ, ೨೪ನೆಯ ಸಫರ್, ಹಿ.ಶ. ೯೮೮ ಇದ್ದಂತೆ ತೋರುತ್ತದೆ. ಇದಂತೂ ಆ ಕಾಲಕ್ಕೆ ದರಬಾರಿನಲ್ಲಿ ಮಹತ್ವದ ಸ್ಥಾನ ಹೊಂದಿದ್ದ ರಫಿ-ಉದ್-ದೀನ್ ಶಿರಾಜಿ ಎಂಬ ಪ್ರತ್ಯಕ್ಷದರ್ಶಿ ನೀಡಿದ. ದಿನಾಂಕ(ಈ ಪ್ರಶ್ನೆಯನ್ನು ಮೇಜರ್ ಕಿಂಗ್ "ಇಂಡಿಯನ್ ಆ್ಯಂಟಿಕ್ವರಿ." ಸಂ. ೧೭. ಪು. ೨೨೧ರಲ್ಲಿ ಚರ್ಚಿಸಿದ್ದಾನೆ). ಗೋಲ್ಕೊಂಡದ ಇಬ್ರಾಹಿಮ್ ಕುತುಬ್ ಶಾಹ ಕೂಡ ೧೫೮೦ರಲ್ಲಿ ತೀರಿಕೊಂಡ ಮತ್ತು ಅವನ ಮೂರನೆಯ ಮಗ ಮೊಹಮ್ಮದ ಖುಲಿ ಉತ್ತರಾಧಿಕಾರಿಯಾದ. ಮೊದಲು ಭಾಗನಗರ ಎಂದು ಕರೆಯಲಾಗುತ್ತಿದ್ದ ಹೈದರಾಬಾದ ನಗರವನ್ನು ೧೫೮೯ರಲ್ಲಿ ಸ್ಥಾಪಿಸಿದ. ಇಂದಿನ ಕರ್ನೂಲು ಮತ್ತು ಕಡಪಾ ಜಿಲ್ಲೆಗಳಲ್ಲಿ ಯಶಸ್ವಿ ಯುದ್ಧಗಳನ್ನು ಮಾಡಿ ಕರ್ನೂಲ, ನಂದ್ಯಾಲ, ಡೋಲೆ ಮತ್ತು ಗಂಡಿಕೋಟೆಗಳನ್ನು ವಶಪಡಿಸಿಕೊಂಡ. ಈ ಯಶಸ್ಸುಗಳ ಬೆನ್ನುಹಿಂದೆಯೆ ನೆಲ್ಲೂರಿನ ಪೂರ್ವ ಜಿಲ್ಲೆಗಳಲ್ಲಿ ಅತಿಕ್ರಮಣ ಮಾಡಿದ.

ಸ್ಪಷ್ಟವಾಗಿರುವಂತೆ ಅವನ ಎರಡನೆಯ ಮಗ, ಎರಡನೆಯ ರಂಗ, ೧೫೭೪ರಲ್ಲಿ ವಿಜಯನಗರದ ರಾಜ ತಿರುಮಲನ ಉತ್ತರಾಧಿಕಾರಿಯಾದ. ಅವನ ತಮ್ಮ ಒಂದನೆಯ ವೆಂಕಟ[4] ಅವನ ಉತ್ತರಾಧಿಕಾರಿಯಾದ (೧೫೮೬). ಕೊನೆಯವನು ಕನಿಷ್ಠ ಇಪ್ಪತ್ತೆಂಟು ವರ್ಷ ಆಳಿದ ಮತ್ತು ೧೬೧೪ರಲ್ಲಿ ಮುದುಕನಾಗಿ ಸತ್ತ. ಮುಂದಿನ ಅಧ್ಯಾಯದಲ್ಲಿ ಕೊಟ್ಟಿರುವ ಬ್ಯಾರಡೊಸ್‌ನ ವೃತ್ತಾಂತದಲ್ಲಿ ನಾವು ಇಪ್ಪರಲ್ಲೆ ನೋಡಲಿರುವಂತೆ ವೆಂಕಟನ ಮರಣ ಕಾಲಕ್ಕೆ ವ್ಯಾಪಕವಾದ ಬಂಡಾಯಗಳು, ದೊಂಬಿಗಳು, ಆಂತರಿಕ ಯುದ್ಧಗಳು ಸಂಭವಿಸಿದವು. ಕ್ರಿ.ಶ. ೧೬೦೧-೨ ಎಂದು ಕಾಲನಿರ್ಣಿತವಾದ ಮತ್ತು ತಾಮ್ರಪಟಗಳ ಮೇಲೆ ದಾಖಲಿಸಲಾದ ಅವನ ಆಳ್ವಿಕೆಯ ಒಂದು ಮಹತ್ವದ ಶಾಸನವನ್ನು ಡಾ. ಹುಲ್ಟ್‌ಜ್[5] ಪ್ರಕಟಿಸಿದ್ದಾರೆ.

೧೫೯೩ರಲ್ಲಿ ಬಿಜಾಪುರದ ಸುಲ್ತಾನ ಇಬ್ರಾಹಿಮ್ ಆದಿಲ್ ಆಗ ರಾಯನಿಗೆ ಸೇರಿದ್ದ ಮೈಸೂರ ಮೇಲೆ ದಾಳಿ ಮಾಡಿದ, ಮತ್ತು ಮೂರು ತಿಂಗಳ ಮುತ್ತಿಗೆಯ ನಂತರ ಅದನ್ನು ಅಡಗಿಸಿದನು. ಅದೇ ವರ್ಷ, ಬೆಳಗಾಂವಿಯಲ್ಲಿ ಸೆರೆಯಲ್ಲಿಡಲಾಗಿದ್ದ ಈ ಸುಲ್ತಾನನ ಸಹೋದರನಾದ ಇಸ್ಮಾಯಿಲ್ ತನ್ನ ಸಾರ್ವಭೌಮನ ವಿರುದ್ಧ

ಬಂಡೆದ್ದ ಮತ್ತು ತಾನು ಆ ಪ್ರದೇಶದ ಸ್ವತಂತ್ರ ರಾಜನೆಂದು ಘೋಷಿಸಿದ. ಆವನನ್ನು ರಾಜನ ಸೈನ್ಯ ಅಲ್ಲಿ ಮುತ್ತಿತ್ತು, ಆದರೆ ಬಿಡಾರದಲ್ಲಿನ ದ್ರೋಹದಿಂದಾಗಿ ಆ ಊರನ್ನು ವಶಪಡಿಸಿಕೊಳ್ಳಲಾಗಲಿಲ್ಲ. ಮತ್ತು ನೆರೆಹೊರೆಯ ನಾಡುಗಳು ಕೆಲವು ಕಾಲ ವಿದ್ರೋಹ ಮತ್ತು ದೊಂಬಿಗಳಿಗೆ ಬಲಿಯಾದವು. ಕೊನೆಯಲ್ಲಿ ಅವುಗಳನ್ನು ವಿಧೇಯತೆಗೆ ತರಲಾಯಿತು ಮತ್ತು ಬಂಡುಖೋರರನ್ನು ಕೊಲ್ಲಲಾಯಿತು. ಈ ಘಟನೆಗಳು ನಡೆದ ಕಾಲಕ್ಕೇ ಸಮಕಾಲೀನವಾಗಿ ಹಿಂದೂಗಳು ಪುನಃ ಅಧೊನಿಯನ್ನು ವಶಪಡಿಸಿಕೊಳ್ಳಲೆತ್ನಿಸಿದರು, ಆದರೆ ಯಶ ದೊರೆಯಲಿಲ್ಲ[6] ; ಮತ್ತು ಶತ್ರುರಾಜ್ಯಗಳಾದ ಬಿಜಾಪುರ ಮತ್ತು ಅಹಮ್ಮದನಗರಗಳ ಮಧ್ಯೆ ಯುದ್ಧ ಆರಂಭವಾಯಿತು.

ಈ ಕಾಲಾವಧಿಯೊಂದಿಗೆ ಬಿಜಾಪುರದ ಸುಲ್ತಾನರಿಗೆ ಸಂಬಂಧಿಸಿದ ಫಿರಿಸ್ತಾನ ವೃತ್ತಾಂತ ಥಟಕ್ಕನೆ ಕೊನೆಗೊಳ್ಳುತ್ತದೆ. ಗೋಲ್ಕೊಂಡ ಇತಿಹಾಸ ಅದರಿಂದ ಬಹಳ ಭಿನ್ನವಾಗಿರುವಂತೆ ತೋರುತ್ತದೆ. ಆದರೆ ಅವೆರಡೂ ಕಥಾನಕಗಳನ್ನು ಹೋಲಿಸಿ ನೋಡುವುದು ಇಲ್ಲಿ ಆವಶ್ಯಕವೆಂದು ನಾನು ಭಾವಿಸಿಲ್ಲ.

ದಕ್ಷಿಣ ಭಾರತದಲ್ಲಿ ಹದಿನೇಳನೆಯ ಶತಮಾನದ ಇತಿಹಾಸ ಗೋಜಲು ಮತ್ತು ಅಶಾಂತಿಯದಾಗಿದೆ. ವಿವಿಧ ಅಧಿಪತಿಗಳು ಸ್ವತಂತ್ರರಾದರು. ಅವನತಿಸುತ್ತಿದ್ದ ಸಾಮ್ರಾಜ್ಯದ ರಾಜರು ತಮ್ಮ ಸಂಪತ್ತನ್ನು ಹಾಳುಮಾಡಿದರು ಮತ್ತು ತಮ್ಮ ಪ್ರದೇಶಗಳನ್ನು ಕಳೆದುಕೊಂಡರು. ಅವರಿಂದಾಗಿ ಕೊನೆಗೆ ಅವರು ನಾಮಮಾತ್ರ ಸಾರ್ವಭೌಮತ್ವ ಪಡೆದಿದ್ದರು. ಮತ್ತು ಹಿಂದೆ ದೊಡ್ಡ ಹೆಸರಾಗಿದ್ದುದರ ನೆರಳು ಮನೆತನದ ಪ್ರತಿಷ್ಠೆ—ಹೊರತಾಗಿ ಬೇರೆ ಏನೂ ಉಳಿಯಲಿಲ್ಲ. ಆದರೂ ಸಹ, ೧೭೯೨ ಮತ್ತು ೧೭೯೩ರಷ್ಟು ತರುವಾಯದಲ್ಲೂ ದಕ್ಷಿಣದಲ್ಲೊಬ್ಬ ನಿಷ್ಠ ರೆಡ್ಡಿ, ದೇವಾಲಯಗಳಿಗೆ ಕೆಲವು ಭೂದತ್ತಿಗಳನ್ನು ತಾಮ್ರಪಟಗಳ ಮೇಲೆ ಕೆತ್ತುವುದನ್ನು ಕಾಣುತ್ತೇವೆ. "ವಿಜಯನಗರದ ವೆಂಕಟಪತಿ ಮಹಾರಾಯ"ನ[7] ಅಪ್ಪಣೆಯಂತೆ ತಾನು ಹಾಗೆ ಮಾಡಿದುದಾಗಿ ಅವನು ಘೋಷಿಸುತ್ತಾನೆ. ಹಳೆಯ ಹಿಂದೂ ರಾಜಮನೆತನವನ್ನು ಇದೇ ರೀತಿ ಮಾನ್ಯ ಮಾಡುವ ಇತರ ಎಂಟು ದತ್ತಿಗಳನ್ನು ನಾನು ಬಲ್ಲೆ. ಅವುಗಳನ್ನು ಹದಿನೆಂಟನೆಯ ಶತಮಾನದಲ್ಲಿ ಕೆತ್ತಲಾಗಿದೆ.[8]

ಇಕ್ಕೇರಿ ಅಥವಾ ಬೇಡನೂರ ದೊರೆಗಳು ೧೬೫೦ರ ವರೆಗೆ ತಮ್ಮನ್ನು ವಿಜಯನಗರದ ಮಾಂಡಲಿಕರೆಂದು ಹೇಳಿಕೊಂಡರು.[9] ವಿಜಯನಗರದ ರಾಜಪ್ರತಿನಿಧಿ ೧೬೧೦ರ ವರೆಗೆ ಮೈಸೂರನ್ನು ಆಳಿದ. ತದನಂತರ ಹಿಂದಿನ ರಾಜಪ್ರತಿನಿಧಿಗಳ ವಂಶಜರು ತಾವೇ ರಾಜರಾದರು. ಮದುರಾ ಮತ್ತು ತಂಜಾವೂರುಗಳಲ್ಲಿ ನಾಯಕರು ೧೬೦೨ರಲ್ಲಿ ಸ್ವತಂತ್ರರಾದರು.

ದಕ್ಖನದ ಎಲ್ಲ ಮಹಮ್ಮದೀಯ ರಾಜವಂಶಗಳು ಹದಿನೇಳನೆಯ ಶತಮಾನದ ಅಂತ್ಯಕ್ಕೆ ದಿಲ್ಲಿಯ ಮೊಗಲ ಸಾಮ್ರಾಟರ ಶಕ್ತಿಯಡಿ ಬಿದ್ದುಹೋದವು, ಮತ್ತು ಶೀಘ್ರವೆ ಇಡಿ ದಕ್ಷಿಣ ಭಾರತದ ಬಹುಮಟ್ಟಿಗೆ ಅವರದಾಯಿತು. ಏತನ್ಮಧ್ಯೆ ಇನ್ನೊಂದು ದೊಡ್ಡ ಶಕ್ತಿ ಉದಯಿಸಿತ್ತು, ಮತ್ತು ಒಂದು ಕಾಲಕ್ಕೆ ಇಡಿ ಭಾರತವನ್ನು ವಶಪಡಿಸಿಕೊಳ್ಳುವ ಭಯವುಂಟು ಮಾಡಿತ್ತು. ಇದು ಮರಾಠ ಪ್ರಭುತ್ವ. ಶಿವಾಜಿ ೧೬೭೩ರ ರಷ್ಟೊತ್ತಿಗೆ ಇಡಿ ಕೊಂಕಣ ನಾಡನ್ನು ವಶಪಡಿಸಿಕೊಂಡಿದ್ದ ಮತ್ತು ಕರ್ನೂಲು, ಗಿಂಗಿ ಮತ್ತು ವೆಲ್ಲೂರುಗಳಲ್ಲಿ ವಿಜಯನಗರ ಸತ್ತೆಯ ಕೊನೆಯ ಲೇಶಗಳನ್ನು ಕಿತ್ತೊಗೆದ. ಅವನ ತಮ್ಮ ಏಕೋಜಿ ೧೬೭೫ರಲ್ಲಾಗಲೆ ತಂಜಾವೂರನ್ನು ವಶಪಡಿಸಿಕೊಂಡು ಸ್ಥಾಪಿಸಿದ ರಾಜವಂಶ ಒಂದು ಶತಮಾನ ಬಾಳಿತು. ಇದನ್ನು ಬಿಟ್ಟರೆ ಮರಾಠರು ತೀರ ದಕ್ಷಿಣದಲ್ಲಿ ನಿಜವಾದ ಪ್ರಭುತ್ವ ಸ್ಥಾಪಿಸಲಿಲ್ಲ.

ಇಬ್ಬರೂ ಸೇರಿ ಸುಮಾರು ನಲವತ್ತು ವರ್ಷ ಆಳಿದ ಹೈದರ್ ಅಲಿ ಮತ್ತು ಅವನ ಉತ್ತರಾಧಿಕಾರಿ ಮಗ ಟಿಪ್ಪೂ ಸಿಂಹಾಸನವನ್ನು ಆಕ್ರಮಿಸುವವರೆಗೆ ಮೈಸೂರು ತನ್ನ ಹಿಂದೂ ರಾಜರ ಪೀಳಿಗೆಯಡಿ ಸ್ವತಂತ್ರವಾಗಿ ಉಳಿಯಿತು. ೧೭೯೯ರಲ್ಲಿ ಶ್ರೀರಂಗಪಟ್ಟಣದಲ್ಲಿ ಟಿಪ್ಪೂನ ಸೋಲು ಮತ್ತು ಮರಣದ ತರುವಾಯ ಇಂಗ್ಲಿಷರು ನಾಡನ್ನು ಹಿಂದೂ ವಂಶಕ್ಕೆ ವಹಿಸಿಕೊಟ್ಟರು.

ಮದ್ರಾಸಿನಲ್ಲಿ ಫೋರ್ಟ್ ಸೇಂಟ್ ಜಾರ್ಜ್ ನಿಂತಿರುವ ನಿವೇಶನವನ್ನು ಮಾರ್ಚ್ ೧೬೩೯ರಲ್ಲಿ ಅಲ್ಲಿ ಇಂಗ್ಲಿಷರ ಮುಖ್ಯ ಕಾರ್ಯಭಾರಿಯಾಗಿದ್ದ ಮಿಸ್ಟರ್ ಫ್ರಾನ್ಸಿಸ್ ಡೇ ಅವರಿಗೆ ಆಗ ಚಂದ್ರಗಿರಿಯಲ್ಲಿ ವಾಸವಾಗಿದ್ದ ರಾಜ ಆರನೆಯ ಶ್ರೀರಂಗದೇವ ಕೊಡಮಾಡಿದ.

ಮದ್ರಾಸಿನಲ್ಲಿ ಇಂಗ್ಲಿಷರ ಪ್ರಥಮ ಫ್ಯಾಕ್ಟರಿ ೧೬೨೦ರಲ್ಲಿ ಸ್ಥಾಪಿತವಾಗಿತ್ತು.

---

1 ವಂಶಾವಳಿಯನ್ನು ಎಪಿಗ್ರಾಫಿಯಾ ಇಂಡಿಕಾ ೪.೨೪೮ ರಿಂದ ತೆಗೆದುಕೊಳ್ಳಲಾಗಿದೆ. ಹೆಸರುಗಳಿಗೆ ಅಂಟಿಸಿದ ಸಂಖ್ಯೆಗೆ ನಾನು ಹೊಣೆಗಾರನಲ್ಲ. ಆದುದರಿಂದ, ೨ನೆಯ ರಾಮರಾಯನನ್ನು ನಾನು '೧ನೆಯ ರಾಮ' ಎಂದು ಕರೆಯಲು ಇಷ್ಟಪಡುವೆ. ಏಕೆಂದರೆ, ಅವನ ಪೂರ್ವಜರು ನಾಮಮಾತ್ರಕ್ಕೂ ಆಳಿದಂತೆ ತೋರುವುದಿಲ್ಲ. ಆದರೆ, ಡಾ. ಹುಲ್ಟ್‌ಶ್ಜ಼ ಕೊಟ್ಟಿರುವಂತೆ ಪಟ್ಟಿಯನ್ನು ತೆಗೆದುಕೊಂಡಿರುವೆ: ೧೬೪೬ರ ಕೊಂಡ್ಯಾಟ ದತ್ತಿ (ಇಂಡಿಯನ್ ಆ್ಯಂಟಿಕ್ವಿಟಿಜ್, ೧೪.೧೨೫). ೧೬೦೧ರ ವಿಲಪಾಕ ದತ್ತಿ (ಅದೇ. ೨. ೪೬೧), ಮತ್ತು ೧೬೪೪ರ ಕಲ್ಲಕುರ್ಸಿ ದತ್ತಿ (ಅದೇ, ೧೪. ೧೫೪) ನೋಡಿರಿ ; ಹಾಗೂ ನನ್ನ 'ಲಿಸ್ಟ್ಸ್ ಆಫ್ ಆ್ಯಂಟಿಕ್ವಿಟಿಜ್ ಮದ್ರಾಸ್,' ೧.೪೫–ಎಲ್ಲೋರಿನಲ್ಲಿರುವ ೧೬೨೪ (ನಂ. ೪೦)ರ ಶಾಸನ ನೋಡಿರಿ.

2 ಸ್ಕಾಟ್, ೧. ೩೦೩.

3 ಬ್ರಿಗ್ಸ್, ೩. ಪು. ೪೩೫-೪೩೮.

4 ಕುಣೆಯೂರ ಪಟಗಳ ಪ್ರಕಾರ (ಎಪಿಗ್‌ಇಂಡ್. ೩. ೨೩೬), ತಿರುಮಲನ ಮೂರನೆಯ ಮಗ, ಮೂರನೆಯ ರಾಮು, ರಾಜನಿರಲಿಲ್ಲ.

5 ಎಪಿಗ್. ಇಂಡ್, ೪-೨೬೯-ವಿಲಪಾಕ ಪತ್ರ.

6 ಸುಮಾರು ಕ್ರಿ.ಶ. ೧೫೬೬ರಲ್ಲಿ ಸುಲ್ತಾನ ಅಲಿ ಆದಿಲ್ ನಿಯಮಿಸಿದ ದುರ್ಗಾಧಿಪತಿ ಮಲಿಕ್ ರಹಿಮಾನ ಖಾನ ಅಲ್ಲಿ ಹೆಚ್ಚು ಕಡಿಮೆ ಮೂವತ್ತೊಂಬತ್ತು ವರ್ಷ ವಾಸಿಸಿದ್ದನೆಂದು ಆಧೋನಿಯಲ್ಲಿನ ಸಾಂಪ್ರದಾಯಿಕ ಇತಿಹಾಸ ಹೇಳುತ್ತದೆ. ಹಳೆಯ ಸಂಪ್ರದಾಯದಂತೆ ಸರಕಾರ ಪ್ರತಿ ವರ್ಷ ನೀಡುತ್ತಿರುವ ದತ್ತಿಯಿಂದ ಅವನ ಗೋರಿಯನ್ನು ಇನ್ನೂ ನೋಡಿಕೊಳ್ಳಲಾಗುತ್ತಿದೆ. ಮತ್ತು ಅದು ಉತ್ತಮ ಸ್ಥಿತಿಯಲ್ಲಿದ್ದು ಒಬ್ಬ ಮುಲ್ಲಾ ಮತ್ತು ಸೇವಕರನ್ನು ಹೊಂದಿದ ಸಂಸ್ಥೆಯಾಗಿದೆ. ಜುಮ್ಮಾ ಮಸಜಿದ್ ಎಂಬ ಮಹಾ ಮಸೀದೆಯನ್ನು ಪೂರ್ತಿಗೊಳಿಸಿದಾಗ (ಕ್ರಿ.ಶ. ೧೬೬೨) ನವಾಬ ಸಿದ್ದಿ ಮಾಸೂದ ಖಾನ ಅಧಿಪತಿಯಾಗಿದ್ದ. ವಂಶದ ಕೊನೆಯವನಾದ ಬಿಜಾಪುರದ ಸುಲ್ತಾನ ಅವನಿಗೆ ಶಾಸನವುಳ್ಳ ಅಮೃತಶಿಲೆಯ ಫಲಕವೊಂದನ್ನು ಮತ್ತು ಸಾವಿರ ಬಂಗಾರದ ನಾಣ್ಯಗಳ ದತ್ತಿಯನ್ನು ಕಳಿಸಿಕೊಟ್ಟ. ಒಳಗಿನ ಕಮಾನುಗಳಲ್ಲೊಂದರ ಮೇಲೆ ಫಲಕವನ್ನು ಇನ್ನೂ ನೋಡಬಹುದು, ಮತ್ತು ಹಣವನ್ನು ಬಂಗಾರದ ಗಿಲೀಟಿಗೆ ಮತ್ತು ಕಟ್ಟಡದ ಅಲಂಕಾರಕ್ಕೆ ಖರ್ಚು ಮಾಡಲಾಯಿತು. ದಿಲ್ಲಿಯ ಔರಂಗಜೇಬ ೧೬೮೬ರಲ್ಲಿ ಬಿಜಾಪುರವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ ಮತ್ತು ನವಾಬ್ ಘಾಝಿ-ಉದ್-ದಿನ್ ಖಾನನನ್ನು ಆಧೋನಿಯ ಅಧಿಪತಿಯಾಗಿ ನಿಯಮಿಸಿದ. ಅವನು ಬಿಜಾಪುರದ ಅಧಿಪತಿ ಸಿದ್ದಿ ಮಸೂದ ಖಾನನಿಂದ ಆ ಊರನ್ನು ಪಡೆದುಕೊಳ್ಳಬೇಕಾಯಿತು. ದಿಲ್ಲಿ ಸೈನ್ಯ ಮಹಾ ಮಸೀದೆಯ ಮೇಲೆ ತಮ್ಮ ತೋಪುಗಳಿಂದ ತೀರ ಹತ್ತಿರದಿಂದ ಗುಂಡಿನ ಮಳೆಗರೆದ ಪರಿಣಾಮವಾಗಿ ಜರುಗಿದ ಯುದ್ಧಾನಂತರ ಇದು ಸಂಭವಿಸಿತು. ಅದರಿಂದಾಗಿ ಜುಮ್ಮಾ ಮಸಜೀದ್ ಅನ್ನು ತನ್ನ ಪ್ರಾಣಕ್ಕಿಂತ ಪ್ರೀತಿಯದೆಂದು ತಿಳಿದಿದ್ದ ಅಧಿಪತಿ ಭಯಗ್ರಸ್ತನಾಗಿ ಶರಣಾಗತನಾದ. ಹೊಸ ಅಧಿಪತಿಯ ಮನೆತನ, ೧೭೫೨ ರಲ್ಲಿ ನಾಡನ್ನು ಹೈದರಾಬಾದಿನ ಬಸಾಲತ್ ಜಂಗ್‌ನಿಗೆ ಕೊಡುವವರೆಗೆ ಆಳಿತು. ಅವನು ಸತ್ತ ಮತ್ತು ಇಲ್ಲಿಯೆ ೧೭೭೭ರಲ್ಲಿ ಅವನನ್ನು ಹೂಳಲಾಯಿತು. ಮತ್ತು ಅವನ ಗೋರಿಯನ್ನು ಇಂದಿಗೂ ನೋಡಿಕೊಳ್ಳಲಾಗುತ್ತಿದೆ. ಈ ಊರನ್ನು ನಿಜಾಮ ೧೮೦೨ರಲ್ಲಿ 'ಬಿಟ್ಟುಕೊಟ್ಟ ಜಿಲ್ಲೆಗಳೊಂದಿಗೆ' ಇಂಗ್ಲಿಷರಿಗೆ ಬಿಟ್ಟುಕೊಟ್ಟ.

7 'ಲಿಸ್ಟ್ಸ್ ಆಫ್ ಆ್ಯಂಟಿಕ್ವಿಟಿಜ್, ಮದ್ರಾಸ್' (ಸೆವೆಲ್), ೨,೬,೭,೯೫,೪೬.

8 ಅದೇ, ೨. ೧೩೯-೧೪೦.

9 ಇಟಾಲಿಯನ್ ಪ್ರವಾಸಿ ಪಿಎಟ್ರೊ ಡೆಲಾವ್ಯಾಲ್ ೧೬೨೩ರ ಕೊನೆಗೆ ಇಕ್ಕೇರಿಯಲ್ಲಿದ್ದ, ಮತ್ತು ಅಲ್ಲಿ ತಾನು ನೋಡಿದುದೆಲ್ಲದರ ಹಾಗೂ ತನಗೆ ಸಂಭವಿಸಿದುದರ

ಸ್ವಾರಸ್ಯಕರ ವೃತ್ತಾಂತವನ್ನು ನೀಡುತ್ತಾನೆ. ಅವನು ಆ ಊರಿಗೆ ಗೋವಾದ ರಾಯಭಾರದೊಂದಿಗೆ ಹೋದ. "ಈ ರಾಜಾ ವೆಂಕಟಪ್ಪನಾಯಕ ಕೆಲವು ಕಾಲ ವಿದಿಯಾನಗರದ ಮಹಾರಾಜನ ಸಾಮಂತ ಹಾಗೂ ಮಂತ್ರಿಗಳಲ್ಲೊಬ್ಬನಾಗಿದ್ದ.... ಆದರೆ ರಾಜನ ಪತನದ ನಂತರ...ವೆಂಕಟಪ್ಪ ನಾಯಕ....ತಾನು ಮಂಡಲಾಧಿಪತಿಯಾಗಿದ್ದ ರಾಜ್ಯದ ಸರ್ವತಂತ್ರ ರಾಜನಾದ. ಒಳ್ಳೆಯ ಯೋಧನಾಗಿದ್ದ ಅವನು ಅದನ್ನು ಬಹಳ ವಿಸ್ತರಿಸಿದ್ದಾನೆ."

## ಅಧ್ಯಾಯ ೧೭

# ಬ್ಯಾರಡಸ್‌ನ ಕಥಾನಕ (೧೬೧೪)

**೧೬೧೪ ರಲ್ಲಿ ಚಂದ್ರಗಿರಿ—ರಾಜಾ ವೆಂಕಟನ ಮರಣ—ಜಗರಾಯನ ಬಂಡಾಯ ಮತ್ತು ರಾಜ ಕುಟುಂಬದ ಹತ್ಯೆ—ಎಚ್ಚಮನಾಯಕನ ನಿಷ್ಠೆ—ಸ್ಯಾನ್ ಥೊಮೆಯಲ್ಲಿ ಪೊರ್ತುಗೀಜರು ಸ್ವತಂತ್ರ—ನಾಟಕದಲ್ಲಿನ ಪಾತ್ರಗಳು—"ಪಾಲಿಯಕೇಟ್"ನಲ್ಲಿನ ವ್ಯವಹಾರಗಳು—ಉತ್ತರಾಧಿಕಾರಿಗಳ ಪಟ್ಟಿ—ಮುಕ್ತಾಯ.**

ಮೊದಲನೆಯ ರಾಜಾ ವೆಂಕಟನ ಮರಣಾನಂತರ ೧೬೧೪ರಲ್ಲಿ ಚಂದ್ರಗಿರಿಯಲ್ಲಿ ಜರುಗಿದ ಘಟನೆಗಳಿಗೆ ಸಂಬಂಧಿಸಿದ ಕೆಳಗಿನ ಟಿಪ್ಪಣಿ ಅತಿ ಸ್ವಾರಸ್ಯಕರವಾಗಿದೆ. ಏಕೆಂದರೆ, ಅದು ಇಂಗ್ಲಂಡಿನ ನಾವು ಇದುವರೆಗೆ ಸಂಪೂರ್ಣ ಅಜ್ಞಾನದಲ್ಲಿದ್ದ ಘಟನೆಗಳನ್ನು ಕುರಿತದ್ದಾಗಿದೆಯೆಂದು ನನ್ನ ಭಾವನೆ. ಅದು ಡಿಸೆಂಬರ ೧೨, ಕ್ರಿ.ಶ. ೧೬೧೬ ರಂದು ಕೊಚಿನ್‌ದಲ್ಲಿ ಮ್ಯಾನುಎಲ್ ಬ್ಯಾರಡಸ್ ಬರೆದ ಪತ್ರದ ಅವತರಣಿಯನ್ನು ಹೊಂದಿದೆ, ಮತ್ತು ಲಿಸ್ಬನ್‌ನ ರಾಷ್ಟ್ರೀಯ ಪತ್ರಾಗಾರದಲ್ಲಿ ಸಂರಕ್ಷಿಸಿ ಇಡಲಾಗಿರುವ ಪತ್ರಗಳ ಕಂತೆಯಲ್ಲಿ ಸೆನ್ಹೊರ್ ಲೋಪ್ಸ್ ಇತ್ತೀಚೆಗೇ ಹುಡುಕಿ ತೆಗೆದಿದ್ದಾನೆ.[1] ಅವನು ಅದನ್ನು ಮೂಲದಿಂದ ನಕಲು ಮಾಡಿ ದಯವಿಟ್ಟು ನನಗೆ ಕಳಿಸಿಕೊಟ್ಟ. ಅನುವಾದ ನನ್ನದೇ:

"ನಾನು ವೆಂಕಟಪತಿ ರಾಯಲು[2] ಎಂಬ ಬೀಸನಗದ ಮುದಿ ರಾಜನ ಮರಣದ ಬಗೆಗೆ ಮತ್ತು ಸಾಮಾನ್ಯವಾಗಿ ಅವನ ಮಗನೆಂದು ನಂಬಿದ ಆದರೆ ನಿಜವಾಗಿ ಹಾಗಿರದ ಇನ್ನೊಬ್ಬನನ್ನು ಕೈಬಿಟ್ಟು ಚಿಕರಾಯನೆಂಬ ತನ್ನ ಭ್ರಾತ್ರೀಯನನ್ನು ತನ್ನ ಉತ್ತರಾಧಿಕಾರಿಯಾಗಿ ಅವನು ಆಯ್ಕೆ ಮಾಡಿದ ಬಗೆಗೆ ಹೇಳುವೆ. ನಿಜ ಸಂಗತಿ ಇಷ್ಟು. ರಾಜನ ಮದುವೆ ಬಾಯಮ್ಮ ಎಂಬ ಜಗರಾಯನ ಮಗಳೊಂದಿಗೆ ಆಗಿತ್ತು. ಅವಳು ಮಗನನ್ನು ಹೆರಲು ಹಾತೊರೆದರೂ ಮತ್ತು ಆ ಉದ್ದೇಶಕ್ಕಾಗಿ ಅವಳು ಯುಕ್ತಾಯುಕ್ತ ಹಂಚಿಕೆಗಳನ್ನು ಬಳಸಿದಾಗ್ಯೂ ಅವಳಿಗೆ ಮಗ ಜನಿಸಲಿಲ್ಲ. ರಾಣಿಯ ತಂದೆಯ ಕುಟುಂಬದ ಬ್ರಾಹ್ಮಣ ಸ್ತ್ರೀಯೊಬ್ಬಳು ಮಗನನ್ನು ಪಡೆಯಲು ರಾಣಿಯ ಹಂಬಲ ಎಷ್ಟು ಜೋರಾಗಿತ್ತೆಂಬುದನ್ನು ಮತ್ತು ದೇವರು ಅವಳಿಗೆ ಪುತ್ರದಾನ ಮಾಡಿರಲಿಲ್ಲವೆಂಬುದನ್ನು ತಿಳಿದು ತಾನು ಒಂದು ತಿಂಗಳ ಗರ್ಭಿಣಿಯೆಂದು ಹೇಳಿ ರಾಜನಿಗೆ ತಾನೇ (ರಾಣಿ) ಗರ್ಭಿಣಿಯಾಗಿರುವೆನೆಂದು ಹೇಳಬೇಕೆಂದೂ ಅದನ್ನು ಎಲ್ಲ ಕಡೆಗೆ ಪ್ರಚಾರ ಮಾಡಬೇಕೆಂದೂ ಆ ಸ್ಥಿತಿಯಲ್ಲಿರುವಂತೆ ನಟಿಸ

ಬೇಕೆಂದೂ ತಾನು (ಬ್ರಾಹ್ಮಣ ಸ್ತ್ರೀ) ಜನ್ಮವಿತ್ತಾಗ ವಿಶ್ವಾಸಿಕನ ಮೂಲಕ ಕೂಸನ್ನು ಗೌಪ್ಯವಾಗಿ ಅರಮನೆಗೆ ಕಳಿಸಿದ ಕೂಡಲೆ ರಾಣಿ ಆ ಹುಡುಗ ತನ್ನ ಮಗನೇ ಎಂದು ಸಾರಬೇಕೆಂದೂ ಸೂಚಿಸಿದಳು. ಈ ಸಲಹೆ ರಾಣಿಗೆ ಒಳ್ಳೆಯದೆನಿಸಿ ಗರ್ಭಿಣಿ ಯಾಗಿರುವಂತೆ ಸೋಗು ಹಾಕಿದಳು, ಮತ್ತು ಬ್ರಾಹ್ಮಣ ಸ್ತ್ರೀ ಮಗನಿಗೆ ಜನ್ಮವಿತ್ತ ಕೂಡಲೆ ಅವನನ್ನು ಅರಮನೆಗೆ ಕಳಿಸಿದಳು, ಮತ್ತು ರಾಣಿ ಬಾಯಮ್ಮ ಮಗನಿಗೆ ಜನ್ಮವಿತ್ತಳೆಂಬ ಸುದ್ದಿ ಹರಡಿತು. ಇದೆಲ್ಲ ಗೊತ್ತಿದ್ದರೂ ರಾಜ ರಾಣಿಗಾಗಿ ತನಗಿದ್ದ ಪ್ರೀತಿಯಿಂದ ಮತ್ತು ವಿಷಯ ಬೆಳಕಿಗೆ ಬರಬಾರದೆಂದು ಮರೆಮಾಚಿದ ಮತ್ತು ಉತ್ಸವ ಏರ್ಪಡಿಸಿ ಸಿಂಹಾಸನದ ವಾರುಸುದಾರನಿಗೆ ಯಾವಾಗಲೂ ನೀಡಲಾಗುತ್ತಿದ್ದ "ಚಿಕ್ಕರಾಯ"[3]ಎಂಬ ಹೆಸರನ್ನು ಹುಡುಗನಿಗೆ ಕೊಟ್ಟ. ಆದರೂ ಅವನನ್ನು ಎಂದೂ ತನ್ನ ಮಗನೆಂದು ಪರಿಗಣಿಸಲಿಲ್ಲ. ತದ್ವಿರುದ್ಧವಾಗಿ, ಅವನನ್ನು ಯಾವಾಗಲೂ ಚಾಂದಿಗ್ರಿಯ[4] ಅರಮನೆಯಲ್ಲಿ ಮುಚ್ಚಿಟ್ಟನಲ್ಲದೆ ತನ್ನ ವಿಶೇಷ ಅಪ್ಪಣೆಯಿಲ್ಲದೆ ಎಂದೂ ಅದರ ಹೊರಗೆ ಹೋಗಲು ಕೊಡಲಿಲ್ಲ. ಅವನು ರಾಣಿಯೊಂದಿಗೆ ಇದ್ದಾಗ ಮಾತ್ರ ಅಪ್ಪಣೆ ನೀಡುತ್ತಿದ್ದ. ಅಲ್ಲದೆ, ಹುಡುಗ ಹದಿನಾಲ್ಕನೆಯ ವಯಸ್ಸು ತಲುಪಿದಾಗ ತನ್ನ ಭ್ರಾತ್ರೀಯಳೊಂದಿಗೆ ಮದುವೆ ಮಾಡಿದ. ತನ್ನ ಷಡ್ಡಕ ಓಬೊರಾಯ[5]ನನ್ನು ತೃಪ್ತಿಗೊಳಿಸಲೋಸುಗ ಹುಡುಗನಿಗೆ ಇಷ್ಟು ಗೌರವ ಮಾಡಿದ.

"ಮರಣಕ್ಕೆ ಮೂರು ದಿನ ಮುಂಚೆ ರಾಜ, ನಾನು ಹೇಳುವಂತೆ, ತನ್ನ ಮಗನೆಂಬ ಪ್ರತೀತಿಯಿದ್ದ ಮಗನನ್ನು ಕೈಬಿಟ್ಟು ಚಿಕರಾಯನನ್ನು ತನ್ನ ರಾಜ್ಯದ ಹಲವಾರು ಮನ್ನೆಯರ ಸಮ್ಮುಖದಲ್ಲಿ ಕರೆಕಳಿಸಿದ, ಮತ್ತು ಅವನು ಅದನ್ನು ತೆಗೆದುಕೊಂಡು ರಾಜ್ಯದಲ್ಲಿ ತನ್ನ ಉತ್ತರಾಧಿಕಾರಿಯಾಗಬೇಕೆಂಬ ಉದ್ದೇಶದಿಂದ ರಾಜಮುದ್ರೆಯುಳ್ಳ ಉಂಗುರವಿರುವ ತನ್ನ ಬಲಗೈಯನ್ನು ಅವನ ಕಡೆಗೆ ಚಾಚುತ್ತ ಅವನ ಸಮೀಪಕ್ಕೆ ಹಿಡಿದ. ಇದರಿಂದ ಭ್ರಾತ್ರೇಯ ಕಣ್ಣೀರು ಸುರಿಸುತ್ತ ತನಗೆ ರಾಜನಾಗುವ ಇಷ್ಟವಿಲ್ಲವೆಂದೂ ಅದನ್ನು ಬೇಕಾದವರಿಗೆ ಕೊಡಬಹುದೆಂದೂ ರಾಜನಲ್ಲಿ ಬೇಡಿಕೊಂಡ, ಮತ್ತು ವೃದ್ಧನ ಪಾದದಲ್ಲಿ ಅಳುತ್ತ ಬಾಗಿದ. ರಾಜ ತನ್ನ ಸುತ್ತಲಿದ್ದವರಿಗೆ ರಾಜಕುಮಾರನನ್ನು ಮೇಲೆತ್ತುವಂತೆ ಸಂಜ್ಞೆ ಮಾಡಿದ ಮತ್ತು ಅವರು ಹಾಗೆಯೆ ಮಾಡಿದರು; ಮತ್ತು ಆಗ ಅವರು ಅವನನ್ನು ರಾಜನ ಬಲಬದಿಗೆ ಇರಿಸಿದರು, ಮತ್ತು ಅವನು ಉಂಗುರವನ್ನು ತೆಗೆದುಕೊಳ್ಳುವಂತೆ ರಾಜ ತನ್ನ ಕೈ ಚಾಚಿದ. ಉಂಗುರ ಎಷ್ಟೊಂದು ಕೆಟ್ಟ ಅದೃಷ್ಟವನ್ನು ತರಬಹುದೆಂದು ಈಗಾಗಲೆ ಮುನ್ನರಿತಿದ್ದವನಂತೆ ರಾಜಕುಮಾರ ತನ್ನ ಕೈಗಳನ್ನು ತಲೆಯ ಮೇಲೆತ್ತಿದ ಮತ್ತು ಅದನ್ನು ತೆಗೆದುಕೊಳ್ಳದಿದ್ದರೆ ತನ್ನನ್ನು ಕ್ಷಮಿಸಬೇಕೆಂದು ರಾಜನನ್ನು ಬೇಡಿಕೊಂಡ. ಆಗ ವೃದ್ಧ ಉಂಗುರವನ್ನು ತೆಗೆದು ತನ್ನ ಬೆರಳ ತುದಿಯಲ್ಲಿ ಹಿಡಿದು ಇನ್ನೊಮ್ಮೆ ಚಿಕ್ಕರಾಯನಿಗೆ ನೀಡಿದನು. ಉಪಸ್ಥಿತರಿದ್ದ ಮುಖಂಡರ ಉಪದೇಶದಂತೆ ಅವನು

ಅದನ್ನು ತೆಗೆದುಕೊಂಡು ಮೊದಲು ತಲೆಯ ಮೇಲೆ ನಂತರ ಬೆರಳ ಮೇಲೆ ಗಳ ಗಳ ಅಳುತ್ತ ಇಟ್ಟುಕೊಂಡ. ಆಗ ರಾಜ ೨೦೦,೦೦೦ ಕ್ರುಜೆಡೊ ಬೆಲೆಯುಳ್ಳ ರಾಜ ವಸ್ತ್ರ, ೬೦೦,೦೦೦ ಕ್ರುಜೆಡೊ ಬೆಲೆಯುಳ್ಳ ತನ್ನ ಕಿವಿಯಲ್ಲಿದ್ದ ವಜ್ರ, ೨೦೦,೦೦೦ಕ್ಕೂ ಮಿಕ್ಕಿ ಬೆಲೆಯುಳ್ಳ ಶ್ರೇಷ್ಠ ಮುತ್ತುಗಳನ್ನು ತರಹೇಳಿದ. ಇವೆಲ್ಲ ಲಾಂಛನಗಳನ್ನು ಅವನು ತನ್ನ ಭ್ರಾತೃಜೇಯ ಚಿಕರಾಯನಿಗೆ ತನ್ನ ಉತ್ತರಾಧಿಕಾರಿ ಯೆಂದು ಕೊಟ್ಟ ಮತ್ತು ಅಂತೆಯೆ ಘೋಷಿಸಲಾಯಿತು. ಕೆಲವರು ಸಂತೋಷ ಪಟ್ಟರೆ ಇನ್ನಿತರರು ಅಸಂತುಷ್ಟರಾದರು.

"ಮೂರು ದಿನ ತರುವಾಯ ರಾಜ ೬೭ನೆಯ ವಯಸ್ಸಿನಲ್ಲಿ ಸತ್ತ. ಅವನ ದೇಹವನ್ನು ಅವನ ಕೋಟೆಯಲ್ಲಿಯೇ ಸುವಾಸನೆಯ ಕಟ್ಟಿಗೆ, ಗಂಧ, ಕತ್ತಾಳೆ ಮುಂತಾದವುಗಳಿಂದ ಸುಡಲಾಯಿತು ; ಮತ್ತು ಕ್ಷಿಪ್ರತರ ವಾಯುವಿನಲ್ಲಿ ಮೂರು ರಾಣಿಯರು ಅಗ್ನಿಗೆ ಅರ್ಪಣೆ ಮಾಡಿಕೊಂಡರು. ಅವರಲ್ಲೊಬ್ಬಳು ರಾಜನಷ್ಟೆ ವಯಸ್ಸಿನವಳು ಇನ್ನಿಬ್ಬರು ೩೫ ವಯಸ್ಸಿನವರು ಆಗಿದ್ದರು. ಅವರು ಬಹಳ ಧೈರ್ಯ ತೋರಿದರು. ಅವರು ಬೆಲೆಯುಳ್ಳ ಉಡುಪು, ಅನೇಕ ರತ್ನಗಳು, ಬಂಗಾರದ ಆಭರಣ ಗಳನ್ನು ಮತ್ತು ಅಮೂಲ್ಯ ಹರಳುಗಳನ್ನು ಧರಿಸಿ ನಡೆದರು. ಚಿತೆಗೆ ಬಂದು ಅವರು ಅವುಗಳನ್ನು ಹಂಚಿದರು. ಕೆಲವನ್ನು ತಮ್ಮ ಸಂಬಂಧಿಗಳಿಗೆ ಕೊಟ್ಟರು. ತಮ್ಮ ಸಲುವಾಗಿ ಪ್ರಾರ್ಥಿಸಲೋಸುಗ ಕೆಲವನ್ನು ಬ್ರಾಹ್ಮಣರಿಗೆ, ಜನರು ಕಚ್ಚಾಡಿ ತೆಗೆದು ಕೊಳ್ಳಲು ಕೆಲವನ್ನು ಅವೆರೆಡೆ ಎಸೆದರು. ಆ ಮೇಲೆ ಅವರು ಎಲ್ಲರಿಗೂ ವಿದಾಯ ಹೇಳಿ ಎತ್ತರದ ಸ್ಥಾನವನ್ನೇರಿ ಬಹಳ ದೊಡ್ಡದಾಗಿದ್ದ ಬೆಂಕಿಯ ಮಧ್ಯದಲ್ಲಿ ಬಿದ್ದರು. ಹೀಗೆ ಅವರು ಅಮರರಾದರು."

"ಆ ಮೇಲೆ ಆಳತೊಡಗಿದ ಹೊಸ ರಾಜ ಕೆಲವು ದಳವಾಯಿಗಳನ್ನು ಕೆಟೋ ಬಿಡುವಂತೆ ಒತ್ತಾಯಿಸಿದ, ಆದರೆ ಇತರರನ್ನು ತನ್ನ ಹತ್ತಿರ ಇಟ್ಟುಕೊಂಡ : ಮತ್ತು ಮೂವರನ್ನುಳಿದು ಎಲ್ಲರೂ ತಮ್ಮ ವಿಧೇಯತೆಯನ್ನು ತೋರಲು ಬಂದರು, ಆ ಮೂವರೆಂದರೆ, ೪೦೦೦ ಕ್ರುಜೆಡೊ ಆದಾಯವಿದ್ದ ಮತ್ತು ಯುದ್ಧಭೂಮಿಯಲ್ಲಿ ೨೦,೦೦೦ ಯೋಧರನ್ನು ವ್ಯವಸ್ಥೆಗೊಳಿಸುವ ಜಗರಾಯ ; ೪೦೦ ಸಾವಿರ ಕ್ರುಜೆಡೊ ಆದಾಯವಿರುವ ಮತ್ತು ೧೨,೦೦೦ ಯೋಧರ ಸೈನ್ಯ ಹೊಂದಿರುವ ತಿಮ್ಮಾನಾಯಿಕ್; ಮತ್ತು ೨೦೦೦ ಕ್ರುಜೆಡೊ ಆದಾಯವಿರುವ ಮತ್ತು ೬೦೦೦ ಯೋಧರನ್ನು ಒಟ್ಟುಗೂಡಿಸುವ ಮಾಕರಾಯ. ಅವರು ಹೊಸ ರಾಜನಿಗೆ ಎಂದೂ ಪ್ರಭುನಿಷ್ಠೆ ತೋರುವುದಿಲ್ಲವೆಂದೂ ಆದರೆ ಅವನ ಸ್ಥಾನದಲ್ಲಿ ಈ ಸಂಚಿನ ಪ್ರಮುಖನಾಗಿದ್ದ ಜಗರಾಯನ ೬ ಭ್ರಾತೃಜೇಯನೂ ಮೃತರಾಜನ ಮಗನೆಂಬ ಪ್ರತೀತಿ ಹೊಂದಿದವನನ್ನು ನಿಲ್ಲಿಸುವುದಾಗಿ ಶಪಥಗೈದರು. ಕೆಲವು ದಿನಗಳಲ್ಲಿಯೆ ಕೆಳಕಂಡ ಅವಕಾಶ ಒದಗಿಬಂತು.

"ಹೊಸ ರಾಜ ತನ್ನ ಮೂವರು ಮನ್ನೆಯರನ್ನು ಅಸಂತುಷ್ಟಗೊಳಿಸಿದ. ಮೊದಲನೆಯವನು ಸೈನ್ಯದ ದಂಡದಾಯಕನಾಗಿದ್ದ ಹಾಗೂ ೫೦೦೦ ಕ್ರುಜೆಡೊಗಳ ಕಪ್ಪ ಕೊಡುತ್ತಿದ್ದ ದಳವಾಯಿ. ಏಕೆಂದರೆ, ರಾಜ ಆವನಿಗೆ ಮೂರು ಕೋಟೆಗಳನ್ನು ಬಿಡಹೇಳಿ ಅವುಗಳನ್ನು ತನ್ನ ಇಬ್ಬರು ಮಕ್ಕಳಿಗೆ ಕೊಡಬಯಸಿದ್ದ. ಎರಡ ನೆಯವನು ತನ್ನ ಮಂತ್ರಿ. ತನ್ನ ಕಕ್ಕ ವೃದ್ಧ ರಾಜನಿಂದ ಅವುಗಳನ್ನು ಕದ್ದಿರುವುದಾಗಿ ಆಪಾದಿಸಿ ೧೦೦೦ ಕ್ರುಜೆಡೊಗಳನ್ನು ಕೊಡುವಂತೆ ಮಂತ್ರಿಗೆ ಹೇಳಿದ. ಮೂರನೆಯವನು ನರ್ಪರಾಯ. ಏಕೆಂದರೆ, ವೃದ್ಧರಾಜನ ಹೆಂಡತಿಯಾಗಿದ್ದ ತನ್ನ ತಂಗಿ ನರ್ಪನಿಗೆ ಕೊಟ್ಟಿದ್ದ ರತ್ನಗಳನ್ನು ಬೇಡಿದ. ಈ ಮೂವರು ಎರಡು ದಿನಗಳಲ್ಲಿ ರಾಜನ ಆಜ್ಞೆ ಪಾಲಿಸುವುದಾಗಿ ಉತ್ತರಿಸಿದರು ; ಆದರೆ, ಅವರು ಗುಪ್ತವಾಗಿ ಜಗರಾಯನೊಂದಿಗೆ ಸೇರಿ ಅವನ ಭ್ರಾತ್ರೀಯನನ್ನು ರಾಜನನ್ನಾಗಿ ಮಾಡುವ ಸಂಚು ಹೂಡಿದ್ದರು. ಮತ್ತು ಅವರು ಅದನ್ನು ಕೆಳಗಿನಂತೆ ಮಾಡಿದರು :—

"ತಾನು ರಾಜನಿಗೆ ಪ್ರಭುನಿಷ್ಠೆ ವ್ಯಕ್ತಪಡಿಸಲು ಬಯಸಿರುವುದಾಗಿ ಜಗರಾಯ ರಾಜನಿಗೆ ಹೇಳಿ ಕಳಿಸಿದ, ಮತ್ತು ತಿಮಾ ನಾಯಿಕ್ ಮತ್ತು ಮಾಕರಾಯ ಕೂಡ ಹಾಗೆಯೆ ಮಾಡಿದರು. ಬಡಪಾಯಿ ರಾಜ ಅವರಿಗೆ ಪ್ರವೇಶಿಸಲು ಅನುಮತಿ ನೀಡಿದ. ಜಗರಾಯ ಐದು ಸಾವಿರ ಯೋಧರನ್ನು ಆಯ್ಕೆ ಮಾಡಿದ ಮತ್ತು ಮಿಕ್ಕವರನ್ನು ನಗರದ ಹೊರಗೆ ಬಿಟ್ಟು ಈ ಆಯ್ದ ಅನುಯಾಯಿಗಳೊಂದಿಗೆ ಕೋಟೆ ಯನ್ನು ಪ್ರವೇಶಿಸಿದ. ಉಳಿದಿಬ್ಬರು ಪಿತೂರಿಗಾರರೂ ಹಾಗೆಯೆ ಮಾಡಿದರು. ಪ್ರತಿಯೊಬ್ಬನೂ ತನ್ನೊಂದಿಗೆ ಆಯ್ದ ಎರಡು ಸಾವಿರ ಯೋಧರನ್ನು ತಂದಿದ್ದ. ಕೋಟೆಗೆ ಎರಡು ಗೋಡೆಗಳಿವೆ. ಅವುಗಳನ್ನು ತಲುಪಿ ಜಗರಾಯ ಮೊದಲ ದ್ವಾರದ ಬಳಿ ಸಾವಿರ, ಎರಡನೆಯ ದ್ವಾರದ ಬಳಿ ಸಾವಿರ ಜನರನ್ನು ಇರಿಸಿದ. ದಳವಾಯಿ ಆ ಬದಿಗಿದ್ದ ಇನ್ನೆರಡು ದ್ವಾರಗಳನ್ನು ಹಿಡಿದುಕೊಂಡ. ಸ್ವಲ್ಪ ಕೋಲಾಹಲ ಮತ್ತು ರಾಜದ್ರೋಹದ ಕೂಗೆದ್ದುದರಿಂದ ರಾಜ ಅರಮನೆಯ ದ್ವಾರ ಗಳನ್ನು ಮುಚ್ಚಲು ಆಜ್ಞೆಯಿತ್ತ, ಆದರೆ ಪಿತೂರಿಗಾರರು ಅವುಗಳನ್ನು ತಲುಪಿ ದೊಡನೆ ಅವುಗಳನ್ನು ಒಡೆಯಲುದ್ಯುಕ್ತರಾದರು. ಮೊದಲಿಗೆ ಯಶಸ್ವಿಯಾದ ಮಾಕರಾಯ ರಾಜನನ್ನು ಅವರಿಗೆ ತಂದುಕೊಡುವುದಾಗಿ ಕೂಗಿದನು. ಶರಣಾಗತ ನಾದರೆ ಅವನಿಗೆ ಏನೂ ಅಪಾಯ ಮಾಡುವುದಿಲ್ಲೆಂಬ ವಚನವೀಯುವುದಾಗಿ ಆದರೆ ಮೃತ ರಾಜನ ಮಗನಾದ ಜಗರಾಯನ ಭ್ರಾತ್ರೀಯ ರಾಜನಾಗಬೇಕೆಂದು ರಾಜನಿಗೆ ಸಂದೇಶ ಕಳಿಸಿ ಅವನು ದ್ವಾರ ಒಡೆಯಲುದ್ಯುಕ್ತನಾದ.

"ಸುತ್ತುಗಟ್ಟಲ್ಪಟ್ಟಿದ್ದ ಬಡಪಾಯಿ ರಾಜ ಅನುಯಾಯಿಗಳಿಲ್ಲದುದನ್ನು ಮತ್ತು ಯಾವ ಉಪಾಯವಿಲ್ಲದುದನ್ನು ಕಂಡು ವಚನವನ್ನು ಸ್ವೀಕರಿಸಿದ ಮತ್ತು ತನ್ನ ಹೆಂಡತಿ ಮಕ್ಕಳೊಂದಿಗೆ ತಾನು ವಾಸಿಸುತ್ತಿದ್ದ ಗೋಪುರದಿಂದ ಹೊರಟ. ಅವನು ಯೋಧರ ಮಧ್ಯದೊಳಗಿಂದ ಗಂಭೀರ ಮುಖ ಹೊತ್ತು ನೆಲದ ಮೇಲೆ

ದೃಷ್ಟಿಯಿಟ್ಟು ಸಾಗಿದ. ಯಾರೂ (ಪದ್ಧತಿಯಂತೆ) ತಲೆಯ ಮೇಲೆ ಕೈಜೋಡಿಸಿ ಅವನಿಗೆ ಗೌರವ ತೋರಲಿಲ್ಲ. ಅವನೂ ಯಾರಿಗೂ ವಂದಿಸಲಿಲ್ಲ.

"ರಾಜ ಹೋದಮೇಲೆ ಜಗರಾಯ ತನ್ನ ಭ್ರಾತ್ರೀಯನನ್ನು ಕರೆದು ಅವನಿಗೆ ಪಟ್ಟಕಟ್ಟಿ ಉಪಸ್ಥಿತರಿದ್ದ ಎಲ್ಲ ಮನ್ನೆಯರೂ ಅವನಿಗೆ ಪ್ರಭುನಿಷ್ಠೆ ತೋರುವಂತೆ ಮಾಡಿದ ; ಮತ್ತು ಅವನು ಈಗ ಅಭಿಷಿಕ್ತ ರಾಜನಾದುದರಿಂದ ಅರಮನೆಯನ್ನು ಪ್ರವೇಶಿಸಿ ಅದನ್ನು ಮತ್ತು ಅದರಲ್ಲಿದ್ದ ಎಲ್ಲ ದ್ರವ್ಯ ಹಾಗೂ ಅಮೂಲ್ಯ ಹರಳು ಗಳನ್ನು ವಶಕ್ಕೆ ತೆಗೆದುಕೊಂಡ. ವರದಿ ನಿಜವಿದ್ದುದಾದರೆ, ವಜ್ರಗಳಲ್ಲೇ ಅವನಿಗೆ ಅತ್ಯುತ್ಕೃಷ್ಟ ಹರಳುಗಳಿಂದ ತುಂಬಿದ ಮೂರು ದೊಡ್ಡ ಪೆಟ್ಟಿಗೆಗಳು ದೊರೆತವು. ಇದಾದ ನಂತರ (ಜಗರಾಯ)ಪದಚ್ಯುತ ರಾಜನನ್ನು ಅತ್ಯಂತ ಕಠಿಣ ಕಾವಲಿನಲ್ಲಿಟ್ಟ. ಮತ್ತು ಅವನನ್ನು ಎಂಟುಸಾವಿರ ಯೋಧರೊಂದಿಗೆ ಕೋಟೆಯ ಹೊರಗಡೆ ನಿಂತ ಮತ್ತು ಜಗರಾಯನೊಂದಿಗೆ ಕೂಡಬಯಸದ ಎಚಮ ನಾಯಿಕ್ ಎಂಬ ಹೆಸರಿನ ಒಬ್ಬನೇ ಒಬ್ಬ ದಳಪತಿಯನ್ನುಳಿದು ಎಲ್ಲರೂ ತೊರೆದರು. ನಿಜವಾಗಿಯೂ, ರಾಜ ದ್ರೋಹದ ಬಗೆಗೆ ಕೇಳಿ ಅವನು ತನ್ನ ಪಾಳೆಯ ಕಿತ್ತು ತನ್ನ ಕೋಟೆಯಲ್ಲಿಯೆ ಮುಚ್ಚಿ ಕುಳಿತು ಅಧಿಕ ಸೈನ್ಯ ಸಂಗ್ರಹಿಸಲಾರಂಭಿಸಿದ."

"ಬಂದು ತನ್ನ ಭ್ರಾತ್ರೀಯನಿಗೆ ಪ್ರಭುನಿಷ್ಠೆ ತೋರುವಂತೆ ಮತ್ತು ಹಾಗೆ ಮಾಡಲು ನಿರಾಕರಿಸಿದರೆ ತಾನು ಅವನನ್ನು ನಾಶಪಡಿಸುವುದಾಗಿಯೂ ಜಗರಾಯ ಈ ಮನುಷ್ಯನಿಗೆ ಸಂದೇಶ ಕಳಿಸಿದ. ಯಾರ ಮಗನೆಂದು ಮತ್ತು ಅವನ ಜಾತಿ ಯಾವುದೆಂದು ಯಾರಿಗೂ ಗೊತ್ತಿರದ ಹುಡುಗನಿಗೆ ಗೌರವ ತೋರಿಸುವವನು ತಾನಲ್ಲ ವೆಂದು ಎಚಮ ನಾಯಿಕ್ ಉತ್ತರ ಕೊಟ್ಟ ; ಮತ್ತು ತನ್ನನ್ನು ನಾಶಪಡಿಸುವ ಬಗೆಗಾದರೂ ಜಗರಾಯ ಹೊರಬಂದು ತನ್ನನ್ನು ಎದುರಿಸುವನೆ ? ಹಾಗಿದ್ದರೆ, ತಾನು ತನ್ನಲ್ಲಿರುವ ಯೋಧರೊಂದಿಗೆ ಅವನಿಗಾಗಿ ಕಾಯುವೆ."

"ಈ ಉತ್ತರ ಬಂದ ಮೇಲೆ ಜಗರಾಯ ಸಾವಿರ ಸವಿಮಾತು ಹೇಳಿದ ಮತ್ತು ಮರ್ಯಾದೆ ಮತ್ತು ಆದಾಯಗಳ ಭರವಸೆಯಿತ್ತ. ಆದರೆ ಯಾವುದೂ ಅವನನ್ನು ಬದಲಿಸಲಿಲ್ಲ. ಅಷ್ಟೇ ಏಕೆ, ಎಚಮ ತನ್ನ ಬಲಗಳೊಂದಿಗೆ ರಣರಂಗಕ್ಕಿಳಿದು ಜಗರಾಯನನ್ನು ಯುದ್ಧಕ್ಕೆ ಆಹ್ವಾನಿಸಿದ ; ಅವನ ಬಳಿ ಎಲ್ಲ ದಳಪತಿಗಳಿದ್ದುದರಿಂದ ಅವನು ಹೊರಬಂದು ಯುದ್ಧ ಮಾಡಿ ಸಾಧ್ಯವಿದ್ದರೆ ತನ್ನನ್ನು ಸೋಲಿಸಲಿ ಮತ್ತು ಹಾಗಾದರೆ ಅವನ ಭ್ರಾತ್ರೀಯ ಅವಿರೋಧವಾಗಿ ರಾಜನಾಗುವನು ಎಂದು ಹೇಳಿದ. ಕೊನೆಗೆ ಜಗರಾಯ ಎಚಮ ನಾಯಿಕ್‌ನ ನಿಷ್ಠೆ ದೊರಕಿಸಿಕೊಳ್ಳುವ ಆಸೆ ಬಿಟ್ಟ, ಆದರೆ ಕಾಣಿಕೆ ಮತ್ತು ಭರವಸೆಗಳಿಂದ ಅನೇಕ ಮನ್ನೆಯರನ್ನು ಒಲಿಸಿಕೊಂಡ.

"ಜಗರಾಯ ಹೀಗೆ ನಿರತನಾಗಿರುವಾಗ ಎಚಮ ನಾಯಿಕ್ ಒಂದಿಲ್ಲೊಂದು ರೀತಿಯಲ್ಲಿ ಬಂಧಿತ ರಾಜನಿದ್ದಲ್ಲಿಗೆ ಪ್ರವೇಶ ದೊರಕಿಸಲೆತ್ನಿಸುತ್ತಿದ್ದ. ಅದು

ಸಾಧ್ಯವಾಗದೆ ಅವನು ಕೊನೆಯ ಪಕ್ಷ ಅವನ ಮಕ್ಕಳಲ್ಲೊಬ್ಬನನ್ನಾದರೂ ಪಡೆಯುವ ಉಪಾಯ ಮಾಡಿದ. ಅವನು ಅದನ್ನು ಈ ರೀತಿ ಮಾಡಿದ. ಬಂಧಿತ ರಾಜನ ಬಟ್ಟೆ ಒಗೆಯುವ ಅಗಸನನ್ನು ಕರೆಕಳಿಸಿ ರಾಜನ ನಡುವಿನ ಮಗನನ್ನು ತಂದುಕೊಟ್ಟರೆ ದೊಡ್ಡ ವಸ್ತುಗಳ ಆಸೆ ತೋರಿದ. ವಿಷಯವನ್ನು ಗೌಪ್ಯವಾಗಿಡುವುದಾದರೆ ಹಾಗೆ ಮಾಡುವುದಾಗಿ ಅಗಸ ಮಾತು ಕೊಟ್ಟ. ರಾಜನಿಗೆ ಒಗೆದ ಬಟ್ಟೆಗಳನ್ನು ಒಯ್ಯುವ ದಿನ ಬಂದಾಗ ಅವನು ಅವುಗಳನ್ನು (ಸೆರೆಮನೆಯೊಳಗೆ) ಮತ್ತು ಅವುಗಳೊಂದಿಗೆ ಎಚಮ ನಾಯಿಕ್‌ನಿಂದ ತಾಳೆಗರಿ ಪತ್ರವನ್ನು ಒಯ್ದ. ಅದರಲ್ಲಿ ಅವನು ತನ್ನೊಂದಿಗಿದ್ದ ಮೂರು ಮಕ್ಕಳಲ್ಲಿ ಒಬ್ಬನನ್ನಾದರೂ ಕಳಿಸಿಕೊಡುವಂತೆಯೂ ಅಗಸನು ಅವನ ಬಿಡುಗಡೆಯನ್ನು ಕಾರ್ಯಗತಗೊಳಿಸುವ ಭರವಸೆಯನ್ನು ತಾನು ನೀಡುವುದಾಗಿಯೂ ರಾಜನಲ್ಲಿ ದೈನ್ಯದಿಂದ ಬೇಡಿಕೊಂಡ. ರಾಜ ಹನ್ನೆರಡು ವರ್ಷದ ಎರಡನೆಯ ತನ್ನ ಮಗನನ್ನು ಬಿಟ್ಟುಕೊಟ್ಟು ಹಾಗೆ ಮಾಡಿದ, ಏಕೆಂದರೆ ಹದಿನೆಂಟು ವರ್ಷದ ಹಿರಿಯ ಮಗನನ್ನು ಅಗಸ ಒಯ್ಯುವ ಧೈರ್ಯ ಮಾಡಲಿಲ್ಲ. ಅವನು ಹುಡುಗನನ್ನು ಒಪ್ಪಿಸಿ ಹೊಲಸು ಬಟ್ಟೆಗಳಲ್ಲಿಡುತ್ತ ಏನೂ ಹೆದರಬೇಡ ಮತ್ತು ಯಾವುದೆ ನೋವು ಉಂಟಾದರೂ ಅಳಬಾರದೆಂಬ ಎಚ್ಚರಿಕೆ ನೀಡಿದ. ರಕ್ಷಕರನ್ನು ಹೆಚ್ಚು ಸುರಕ್ಷಿತವಾಗಿ ಹಾಯ್ದು ಹೋಗಲೋಸುಗ ಅಗಸ ಎಲ್ಲಕ್ಕೂ ಮೇಲೆ ಎಲ್ಲರೂ ದೂರ ಸರಿಯುವಂಥ ಹೊಲಸು ಬಟ್ಟೆಗಳನ್ನಿಟ್ಟ ; ಮತ್ತು "ತಲ್ಲಾ! ತಲ್ಲಾ !" ಎಂದರೆ "ದೂರ ಸರಿಯಿರಿ ! ದೂರ ಸರಿಯಿರಿ !" ಎಂದು ಕೂಗುತ್ತ ಹೊರಕ್ಕೆ ನಡೆದ. ಆದುದರಿಂದ, ಎಲ್ಲರೂ ಅವನಿಗೆ ದಾರಿ ಬಿಟ್ಟರು ಮತ್ತು ಅವನು ದುರ್ಗದಿಂದ ತನ್ನ ಮನೆಗೆ ಬಂದ. ಅಲ್ಲಿ ಅವನು ರಾಜಕುಮಾರನನ್ನು ಮೂರು ದಿನ ಬಚ್ಚಿಟ್ಟು ಮತ್ತು ಅವುಗಳ ಕೊನೆಗೆ ಅವನನ್ನು ಎಚಮ ನಾಯಿಕ್‌ನಿಗೆ ಒಪ್ಪಿಸಿದನು. ಎಚಮನ ಬಿಡಾರ ನಗರದಿಂದ ಒಂದು ಹರದಾರಿ ದೂರವಿತ್ತು ಮತ್ತು ಹುಡುಗನನ್ನು ಆ ಪಾಳೆಯಗಾರ ಮತ್ತು ಅವನ ಎಲ್ಲ ಸೈನ್ಯ ಬಹಳ ಸಂತೋಷ ಸಂಭ್ರಮಗಳಿಂದ ಬರಮಾಡಿಕೊಂಡರು."

"ಈ ಸುದ್ದಿ ಹೊರಗೆಲ್ಲ ಹರಡಿ ಜಗರಾಯನ ಕಿವಿ ತಲುಪಲಾಗಿ ಅವನು ಅರಮನೆಯನ್ನು ಶೋಧಿಸಲು ಆಜ್ಞಾಪಿಸಲಾಗಿ ಅದು ನಿಜವೆಂದು ಕಂಡುಬಂತು. ಅವನ ಮನಸ್ಸು ಎಷ್ಟೊಂದು ಕಲಕಿತೆಂದರೆ ಅವನು ಹಲವಾರು ದಿನ ಮನೆ ಬಿಟ್ಟು ಕದಲಿಲ್ಲ ; ಅವನು ತನ್ನ ಬಂಧಿಯಾಗಿದ್ದ ರಾಜನ ರಕ್ಷಕ ದಳವನ್ನು ಇಮ್ಮಡಿಗೊಳಿಸಿದ, ದ್ವಾರಗಳನ್ನು ಮುಚ್ಚಿಸಿದ ಮತ್ತು ಯಾರೂ ರಾಜನಿಗೆ ಅನ್ನ ಮತ್ತು ಒರಟು ಕಾಯಿಪಲ್ಯೆ ಬಿಟ್ಟು ತಿನ್ನಲು ಬೇರೇನನ್ನೂ ಕೊಡಕೂಡದೆಂದು ಆಜ್ಞಾಪಿಸಿದ.[7]"

"ಎಚಮನಾಯಿಕ್‌ನ ಹತ್ತಿರ ರಾಜನ ಮಗ ಇರುವುದು ಗೊತ್ತಾದ ತಕ್ಷಣ ಜಗರಾಯನ ನಾಲ್ವರು ದಳವಾಯಿಗಳು ಎಂಟು ಸಾವಿರ ಯೋಧರೊಂದಿಗೆ ಅವನ

ಪಕ್ಷ ಸೇರಿದರು ; ಅದರಿಂದ ಅವನಲ್ಲಿ ಒಟ್ಟು ಹದಿನಾರು ಸಾವಿರ ಯೋಧರಾದರು ಮತ್ತು ಈಗ ನ್ಯಾಯವಾದ ರಾಜನನ್ನು ರಕ್ಷಿಸುವ ಒಳ್ಳೆಯ ಭರವಸೆ ಮೂಡಿತು. ಆದುದರಿಂದ, ಅವನು ರಾಜನನ್ನು ಪಾರುಮಾಡಲು ಪರಿಣಾಮಕಾರಿ ಕ್ರಮ ಕೈಕೊಂಡ. ತನ್ನೆಲ್ಲ ಸೈನಿಕರಲ್ಲಿ ರಾಜ ಬಂದೀಖಾನೆಯಲ್ಲಿರುವ ಜಾಗದವರೆಗೆ ಸುರಂಗ ಮಾರ್ಗವನ್ನು ತೋಡಲಿಚ್ಛಿಸುವ ಭರವಸೆ ನೀಡಿದ, ಇಪ್ಪತ್ತು ಮಂದಿಯನ್ನು ಆರಿಸಿದ. ಈ ಸಿಧ್ಧಾರ ಈಡೇರಿಸಲು ಅವರು ದುರ್ಗಕ್ಕೆ ಹೋಗಿ ತಾವು ಅವನ ಸೇನೆ ಸೇರಬಯಸಿರುವುದಾಗಿ ದಳವಾಯಿಗೆ ನಿವೇದಿಸಿ, ಸಂಬಳ ಸ್ವೀಕರಿಸಿದರು ಮತ್ತು ಕೆಲ ದಿನಗಳ ನಂತರ ರಾಜನ ಬಂಧೀಖಾನೆಗೆ ಪ್ರವೇಶ ದೊರಕಿಸುವ ಸುರಂಗ ಮಾರ್ಗ ಅಗೆಯತೊಡಗಿದರು. ತನ್ನ ಕೊಠಡಿಯನ್ನು ಸೈನಿಕರು ಹೀಗೆ ಪ್ರವೇಶಿಸುವುದನ್ನು ಕಂಡು ರಾಜ ಆಶ್ಚರ್ಯಚಕಿತನಾದ ಮತ್ತು ಅವರು ತನ್ನ ಮುಂದೆ ಸಾಷ್ಟಾಂಗ ಹಾಕಿ ಎಚಮ ನಾಯಿಕ್‌ನ ತಾಳೆಗರಿ ಓಲೆಯನ್ನು ಕೊಟ್ಟಾಗ ಇನ್ನೂ ಚಕಿತನಾದ. ಅದರಲ್ಲಿ ರಾಜನು ಈ ಜನರನ್ನು ನಂಬಬೇಕೆಂದೂ ಅವರು ಅವನನ್ನು ದುರ್ಗದ ಹೊರಗೆ ಕರೆತರುವುದಾಗಿಯೂ ಅರಿಕೆ ಮಾಡಿಕೊಳ್ಳಲಾಗಿತ್ತು. ರಾಜ ಸಮ್ಮತಿಸಿದ. ಅವನು ಲಗುಬಗೆಯಿಂದ ತನ್ನ ವಸ್ತ್ರಗಳನ್ನೆಲ್ಲ ಕಳಚಿ ಒಂದೇ ಒಂದು ಬಟ್ಟೆ ಹೊದ್ದು ಕೊಂಡ ; ತನ್ನ ಮಡದಿ ಪುತ್ರ ಪುತ್ರಿಯರಿಗೆ ವಿದಾಯ ಹೇಳುತ್ತ ತಾನು ಸ್ವತಂತ್ರ ನಾದಾಗ ಅವರೆಲ್ಲರನ್ನೂ ಬಿಡುಗಡೆ ಮಾಡಲಿರುವುದರಿಂದ ಭಯಪಡುವ ಕಾರಣವಿಲ್ಲ ವೆಂದೂ ತಿಳಿಸಿದ."

'ಆದರೆ ಸರಿಯಾಗಿ ಇದೇ ಕ್ಷಣಕ್ಕೆ ಆದುದೇನೆಂದರೆ ರಾತ್ರಿ ಪಂಜು ಹಿಡಿದು ಅರಮನೆಯ ಕಾವಲು ಮಾಡುತ್ತಿದ್ದ ಸೈನಿಕರಲೊಬ್ಬ ಗುಂಡಿಯಲ್ಲಿ ಬಿದ್ದ ಮತ್ತು ಅವನ ಕೂಗು ಕೇಳಿ 'ಇತರರು ಓಡಿಬಂದರು ಮತ್ತು ಅಗಿಯಲಾಗಿ ಅವರು ನೆಲ ಮಾರ್ಗವನ್ನು ಕಂಡ-ಹಿಡಿದರು. ಅವರು ಅದನ್ನು ಪ್ರವೇಶಿಸಿ ಅರಮನೆಯವರೆಗೆ ಬಂದರು. ನತದೃಷ್ಟ ರಾಜ ಪಾರಾಗಲು ಅದರಲ್ಲಿಳಿಯುತ್ತಿದ್ದ ಸಮಯಕ್ಕೆ ಅಲ್ಲಿಗೆ ತಲುಪಿದರು. ಅವನನ್ನು ಸೆರೆಹಿಡಿಯ:ಲಾಯಿತು ಮತ್ತು ಜಗರಾಯನಿಗೆ ಅಪಾಯದ ಸೂಚನೆ ನೀಡಲಾಗಿ ಅವನು ರಾಜನನ್ನು ಅಧಿಕ ಕಾವಲುಗಾರರೊಂದಿಗೆ ಇನ್ನೂ ಒಳಗಿರುವ ಮತ್ತು ಚಿಕ್ಕದಾಗಿರುವ ಕೋಣೆಗೆ ಕಳಿಸಿದ. ಹೀಗಾಗಿ ಬಡಪಾಯಿ ಬಂಧಿ ಪಾರಾಗುವ ಆಸೆ ಬಿಟ್ಟ.

"ಈ ಯುಕ್ತಿ ಫಲಿಸದಿದ್ದುದನ್ನು ನೋಡಿ ಎಚಮ ನಾಯಿಕ್ ದುರ್ಗದಲ್ಲಿದ್ದ ಐನೂರು ಯೋಧರ ದಳವಾಯಿಗೆ ಒಳ್ಳೆಯ ಅವಕಾಶ ಸಿಗುತ್ತಲೆ ಕಾವಲುಗಾರರನ್ನು ಕೊಂದು ರಾಜನನ್ನು ಪಾರುಮಾಡಲು ಲಂಚ ಕೊಟ್ಟ. ಇತಿಯೊಬ್ಲೆ ಜಾ ಎಂಬ ಹೆಸರುಳ್ಳ ಈತ ಒಂದು ದಿನ ಶರಣಾಗತನಾದ ಪಾಳೆಯಗಾರನ್ನೊಬ್ಬನನ್ನು ಬರಮಾಡಿಕೊಳ್ಳಲೋಸುಗ ಜಗರಾಯ ತನ್ನ ಎಲ್ಲ ಸೈನಿಕರೊಂದಿಗೆ ಅರಮನೆಯಿಂದ

ಹೋದುದನ್ನು ಮತ್ತು ದುರ್ಗದಲ್ಲಿ ಸುಮಾರು ಐದು ಸಾವಿರ ಜನ ಇದ್ದುದನ್ನು ಕಂಡು ಒಂದು ತಾಸಿನೊಳಗೆ ಕಾವಲುಗಾರರನ್ನು ಕೊಂದು ಮೂರು ದ್ವಾರಗಳನ್ನು ವಶಪಡಿಸಿಕೊಂಡು ಕೂಡಲೆ ಬಂದು ದುರ್ಗ ವಶಪಡಿಸಿಕೊಳ್ಳಲು ಎಚಮ ನಾಯಿಕ್‌ನಿಗೆ ಹೇಳಿಕಳಿಸಿದ. ಆದರೆ ಜಗರಾಯ ಹೆಚ್ಚು ಜಾಗ್ರತೆಯಾಗಿದ್ದ ; ಅವನು ತನ್ನ ಎಲ್ಲ ಬಲಗಳೊಂದಿಗೆ ವಾಪಸು ಬಂದು ಇತಿಯೊಬ್ಬ್ಲೆಜಾನಿಗೆ ಗೊತ್ತಿರದ ದಿಡ್ಡೀಬಾಗಿಲಿನಿಂದ ಪ್ರವೇಶಿಸಿ ದಳವಾಯಿ ಮತ್ತು ಅವನ ಐದುನೂರು ಅನುಯಾಯಿಗಳನ್ನು ಕೊಂದ.

"ಈ ಪ್ರಯತ್ನದಿಂದ ಕೃದ್ಧನಾದ ಜಗರಾಯ ತನ್ನ ಭ್ರಾತ್ರೇಯನ ಪಕ್ಷ ಬಲಪಡಿಸಲು ರಾಜನನ್ನು ಮತ್ತು ಅವನ ಎಲ್ಲ ಕುಟುಂಬವನ್ನು ಕೊಲ್ಲಲು ನಿರ್ಧರಿಸಿದ. ಅವನು ಈ ಕೆಲಸವನ್ನು ಚಿನಾಒಬ್ರಾಯ[9] ಎಂಬ ತನ್ನ ತಮ್ಮನಿಗೆ ಒಪ್ಪಿಸಿ ಅರಮನೆಗೆ ಹೋಗಿ ತನ್ನನ್ನು ತಾನೆ ಕೊಂದುಕೊಳ್ಳಬೇಕೆಂದೂ ಇಲ್ಲದಿದ್ದರೆ ತಾನು ಅವನನ್ನು ತನ್ನ ಕಠಾರಿಯಿಂದ ಇರಿದು ಕೊಲ್ಲುವುದಾಗಿಯೂ ನತದೃಷ್ಟ ರಾಜನಿಗೆ ಹೇಳುವಂತೆ ಆಜ್ಞಾಪಿಸಿದ.

"ತನಗೆ ಪ್ರಯತ್ನಿಸಿದ ಬಂಡಾಯ ಏನೂ ತಿಳಿಯದೆಂದು ಬಂದಿ ತಾನು ತಪ್ಪಿಸಿಕೊಳ್ಳಲೆತ್ನಿಸಿದ. ಆದರೆ, ತನ್ನ ಕೈಯಿಂದಲೆ ಆಗಲಿ ಇಲ್ಲವೆ ಇನ್ನೊಬ್ಬರ ಕೈಲಾಗಲಿ ತಾನು ಸಾಯಲೇಬೇಕೆಂದು—ಅತ್ಯಂತ ಕರುಣಾಜನಕ ಮತ್ತು ನಾನು ಅತ್ಯಂತ ದುಃಖದಿಂದ ಹೇಳುತ್ತಿರುವ ವಿಷಯ !—ಹೇಳಿದ ಚಿನಾಒಬ್ರಾಯನ ನಿರ್ಧಾರ ನೋಡಿ ರಾಜ ತನ್ನ ಹೆಂಡತಿಯನ್ನು ಕರೆದು ಸ್ವಲ್ಪ ಮಾತಾಡಿದ ನಂತರ ಅವಳ ತಲೆ ಕತ್ತರಿಸಿದ. ಆ ಮೇಲೆ ಕಡೆಯ ಮಗನನ್ನು ಕರೆಕಳಿಸಿ ಅವನಿಗೂ ಹಾಗೆಯೆ ಮಾಡಿದ. ತನ್ನ ಚಿಕ್ಕ ಮಗಳನ್ನೂ ಅದೇ ರೀತಿ ಕೊಂದ. ತರುವಾಯ ಅವನು ಆಗಲೆ ವಿವಾಹಿತನಾಗಿದ್ದ ತನ್ನ ಮೊದಲ ಮಗನನ್ನು ಕರೆಕಳಿಸಿ ತನ್ನ ಹೆಂಡತಿಯನ್ನು ಕೊಲ್ಲುವಂತೆ ಆಜ್ಞಾಪಿಸಲಾಗಿ ಅವನು ಅವಳ ತಲೆ ಕತ್ತರಿಸಿ ಹಾಗೆ ಮಾಡಿದ. ಇದಾದ ಮೇಲೆ ನಾಲ್ಕು ಬೆರಳು ಅಗಲದ ಉದ್ದ ಕತ್ತಿ ತೆಗೆದುಕೊಂಡು ಅದರ ಮೇಲೆ ಬಿದ್ದು ಕೊನೆಯುಸಿರೆಳೆದ. ಮತ್ತು ಸಿಂಹಾಸನದ ವಾರಸುದಾರನಾಗಿದ್ದ ಅವನ ಮಗನೂ ತನ್ನ ತಂದೆಯನ್ನು ಅನುಕರಿಸಿ ತನಗೂ ಹಾಗೆಯೆ ಮಾಡಿಕೊಂಡ. ರಾಜ ಕೊಲ್ಲಲು ಮನಸ್ಸಾಗದ ಒಬ್ಬ ಚಿಕ್ಕ ಮಗಳು ಮಾತ್ರ ಉಳಿದಳು ; ಆದರೆ, ರಾಜರಕ್ತದ ಕುಟುಂಬದವರಾರೂ ಉಳಿಯಬಾರದು ಮತ್ತು ಸಿಂಹಾಸನ ತನ್ನ ಭ್ರಾತ್ರೇಯನಿಗೆ ಸುರಕ್ಷಿತವಾಗಬೇಕು ಎಂಬ ಉದ್ದೇಶದಿಂದ ಚಿನಾಒಬ್ರಾಯ ಅವಳನ್ನು ಕೊಂದ.

"ಈ ಘೋರ ಕೃತ್ಯದಿಂದ ಕೆಲವು ಪಾಳೆಯಗಾರರು ಜುಗುಪ್ಸೆಗೊಂಡರು ಮತ್ತು ಅದರ ಕ್ರೂರತನದಿಂದ ರೊಚ್ಚಿಗೆದ್ದು ಎಚಮ ನಾಯಿಕ್‌ನ ಪಕ್ಷ ಸೇರಿ ಅಗಸಸಾರುಮಾಡಿದ ಮತ್ತು ರಾಜಮನೆತನದ ಉಳಿದಿದ್ದ ಒಬ್ಬನೇ ಆದ ರಾಜ

ಕುಮಾರನನ್ನು ರಕ್ಷಿಸಲು ನಿರ್ಧರಿಸಿದರು. ಈ ಲಜ್ಜಾಸ್ಪದ ಅಮಾನುಷತೆಯಿಂದ ಕೆರಳಿದ ಮತ್ತು ತನ್ನ ಧ್ಯೇಯ ನ್ಯಾಯವಾದುದೆಂಬ ವಿಶ್ವಾಸ ತಾಳಿದ ಎಚಮ ನಾಯಿಕ್ ತನ್ನ ಅತ್ಯುತ್ತಮ ಹತ್ತು ಸಾವಿರ ಸೈನಿಕರನ್ನು ಆಯ್ದು ಅರವತ್ತು ಸಾವಿರಕ್ಕಿಂತ ಹೆಚ್ಚು ಯೋಧರು ಮತ್ತು ಅನೇಕ ಆನೆ ಕುದುರೆಗಳಿದ್ದ ಜಗರಾಯನಿಗೆ ಕಾಳಗ ಕೊಟ್ಟ. ಎಚಮ ಅವನಿಗೆ ಈ ರೀತಿಯಲ್ಲಿ ಸಂದೇಶ ಕಳಿಸಿದ :—'ಈಗ ನೀನು ನಿನ್ನ ರಾಜ ಮತ್ತು ಅವನ ಎಲ್ಲ ಕುಟುಂಬ ಕೊಂದು ನಿನ್ನಿಂದ ಪಾರುಮಾಡಿ ತಂದು ನನ್ನಲ್ಲಿಟ್ಟುಕೊಂಡಿರುವ ಈ ಹುಡುಗನೊಬ್ಬನೇ ಉಳಿದಿರುವುದರಿಂದ ನಿನ್ನೆಲ್ಲ ಸೈನಿಕರೊಂದಿಗೆ ಹೊರಗೆ ಬಂದು ಯುದ್ಧ ಮಾಡು ; ಅವನನ್ನು ಮತ್ತು ನನ್ನನ್ನು ಕೊಲ್ಲು, ಆಮೇಲೆ ನಿನ್ನ ಭ್ರಾತ್ರೀಯ ಸಿಂಹಾಸನದ ಮೇಲೆ ಸುರಕ್ಷಿತವಾಗುವನು ;'

"ಜಗರಾಯ ಕೆಲಹೊತ್ತು ಇದರಿಂದ ಜಾರಿಕೊಳ್ಳಲೆತ್ನಿಸಿದ ; ಆದರೆ ಎಚಮ ನಾಯಿಕ್ ಆಗ್ರಹಪಡಿಸಿದ್ದನ್ನು ನೋಡಿ ತನ್ನಲ್ಲಿ ಇಷ್ಟೊಂದು ಸೈನಿಕರಿದ್ದುದರಿಂದ ತಾನು ಸುಲಭವಾಗಿ ಜಯಶಾಲಿಯಾಗುವುದಲ್ಲದೆ ಎಚಮ ನಾಯಿಕ್ ಮತ್ತು ರಾಜಕುಮಾರನನ್ನು ಸೆರೆಹಿಡಿಯಬಲ್ಲೆನೆಂಬ ವಿಶ್ವಾಸ ಹೊಂದಿ ಕಾದಲು ನಿರ್ಣಯಿಸಿದ. ಆದುದರಿಂದ, ಅವನು ತನ್ನೆಲ್ಲ ಸೈನಿಕರೊಂದಿಗೆ ರಣರಂಗಕ್ಕಿಳಿದ. ಎಚಮ ನಾಯಿಕ್ ಒಂದು ಹರಿದಾರಿ ದೂರ ಉಳಿದ ಹತ್ತು ಸಾವಿರ ಯೋಧರಿಗೆ ರಾಜಕುಮಾರನನ್ನು ಒಪ್ಪಿಸಿಕೊಟ್ಟು ಮಿಕ್ಕ ಹತ್ತು ಸಾವಿರದೊಂದಿಗೆ ಅವನು ಕಾಳಗ ಕೊಟ್ಟುದಲ್ಲದೆ ತಾನೆ ಮೊದಲಿಗನಾಗಿ ಕಾದಿದ ; ಅವನು ಎಷ್ಟು ರೊಚ್ಚು ಮತ್ತು ರಭಸದಿಂದ ಕಾದಿದ ನೆಂದರೆ ತನ್ನೆಲ್ಲ ಜನರೊಂದಿಗೆ ತನ್ನ ಭ್ರಾತ್ರೀಯನನ್ನು ಸುತ್ತು ಗಟ್ಟಿದ್ದ, ಜರಾಯಗ ಒಂದು ಬದಿಗೆ ತಳ್ಳಲ್ಪಟ್ಟು ಶತ್ರುವಿಗೆ ಸಂದುಗಳು ಸಿಕ್ಕವು, ಮತ್ತು ಅನೇಕರು ಯುದ್ಧದಲ್ಲಿ ಮರಣವನ್ನಪ್ಪಿದರು. ಎಚಮ ನಾಯಿಕ್ ವಿಜಯೋತ್ಸಾಹದಿಂದ ಜಗರಾಯನ ಡೇರೆಗಳನ್ನು ಹೊಕ್ಕು ಅಲ್ಲಿದ್ದ ಹಿರಿಯ ರಾಜನಿಗೆ ಸೇರಿದ ಎಲ್ಲ ರಾಜ ಮುದ್ರೆಗಳನ್ನು ಚಿಕರಾಯನ ಮಗ ಯುವ ರಾಜಕುಮಾರನಿಗೆ ಕೊಟ್ಟು, ಅವನನ್ನು ನ್ಯಾಯವಾದ ವಾರಸುದಾರ ಮತ್ತು ಎಲ್ಲ ಬೀಸನಗ ಸಾಮ್ರಾಜ್ಯದ ರಾಜ ಎಂದು ಘೋಷಿಸಿದ.

"ಅವನು ಕೊಂಡೊಯ್ದು ಕೊಳ್ಳೆ ವಿಪುಲವಾಗಿತ್ತು. ಏಕೆಂದರೆ, ಬರಿ ಬೆಲೆ ಯುಳ್ಳ ಹರಳುಗಳಲ್ಲಿಯೆ ಅವನಿಗೆ ಎರಡು ದಶಲಕ್ಷ ಮೌಲ್ಯದಷ್ಟು ದೊರೆಯಿತೆಂದು ಹೇಳಲಾಗುತ್ತದೆ.

"ಈ ವಿಜಯದ ನಂತರ ಅನೇಕ ಮನ್ನೆಯರು ತಾವಾಗಿಯೆ ಎಚಮ ನಾಯಿಕ್‌ನ ಪಕ್ಷ ಸೇರಿದರು. ಎಷ್ಟರಮಟ್ಟಿಗೆಂದರೆ ಅಲ್ಪಕಾಲದಲ್ಲಿಯೆ ಅವನ ಠಾಣ್ಯದಲ್ಲಿ ಐವತ್ತು ಸಾವಿರ ಯೋಧರಿದ್ದರೆ ಕೇವಲ ಹದಿನೈದು ಸಾವಿರ ಹೊಂದಿದ ಜಗರಾಯ ಅಡವಿಗೆ ಓಡಿಹೋದ. ಇಲ್ಲಿ ಮಾತ್ರ ಇನ್ನೂ ಕೆಲವರು ಅವನನ್ನು

ಕೂಡಿಕೊಂಡುದರಿಂದ ಯುದ್ಧ ಈ ಎರಡು ವರ್ಷ[10] ಮುಂದುವರಿದು ಅದೃಷ್ಟ ಒಮ್ಮೆ ಈ ಕಡೆಗೆ ಒಮ್ಮೆ ಆ ಕಡೆಗೆ ಒಲಿದಿದೆ. ಆದರೆ ಯುವ ರಾಜಕುಮಾರನ ಪಕ್ಷ ಯಾವಾಗಲೂ ಬಲಗೊಳ್ಳುತ್ತ ಸಾಗಿದೆ. ಮದುರೆಯ ಮಹಾನ್‌ನಾಯಕ್[11] ಬೀಸನಗ ರಾಜನ ಅಡಿಕೆ ಪರಿಚಾರಕನಾಗಿದ್ದ, ಕೆಲವರು ಹೇಳುವಂತೆ ಪ್ರತಿ ವರ್ಷ ೬೦೦೦೦ ಪಗೋಡಾಗಳ ಭೂಗಂದಾಯ ಕೊಡುವ, ಮತ್ತು ತ್ರಾವಣಕೋರಿನವನಂತಹ ಅನೇಕ ರಾಜರು ಹಾಗೂ ಮನ್ನೆಯರನ್ನು ತನ್ನ ಮಾಂಡಲಿಕರನ್ನಾಗಿ ಪಡೆದಿರುವ ಜಗರಾಯನ ಪಕ್ಷವಹಿಸಿ ತಂಜಾವೂರಿನ ನಾಯಕ್‌ನ ವಿರುದ್ಧ ಅವನಿಗೆ ಆಸರೆಯಾಗಿದ್ದರೂ (ಎಚಮ ನಾಯಕ್‌ನ) ಬಲ ಇನ್ನೂ ಅಧಿಕಗೊಳ್ಳುತ್ತ ಸಾಗಿತ್ತು. ಆದರೂ ಸಹ, ಕೊನೆಯವನು ಅಷ್ಟು ಬಲಿಷ್ಠನಾಗಿರದಿದ್ದರೂ ಯುವಕ ರಾಜನ ನೆರವಿನಿಂದ ಕ್ರಮೇಣ ಮೇಲುಗೈ ಸಾಧಿಸುತ್ತಿದ್ದಾನೆ. ವಾಸ್ತವವಾಗಿ ಈಗ ತ್ರಿಂಚಿನೆಪಾಲಿ[12]ಯ ವಿಶಾಲ ಖುಲ್ಲಾ ಮೈದಾನಗಳ ರಣರಂಗದಲ್ಲಿ ಪ್ರತಿಯೊಂದು ಪಕ್ಷ ಪಡೆದಿದ್ದ ನೂರು ಸಾವಿರ ಜನರಲ್ಲದೆ ಒಂದು ದಶಲಕ್ಷದಷ್ಟು ಯೋಧರೂ ನೆರೆದಿದ್ದಾರೆ.

"ಈ ಆಂತರಿಕ ಯುದ್ಧದ ಲಾಭ ಪಡೆದು ಸ್ಯಾನ್ ಥೋಮೆ[13] ನಗರ ಅದು ಇದುವರೆಗೆ ಬೀಸನಗದ ರಾಜನಿಗೆ ಸೇರಿದ್ದು ಅವನಿಗೆ ಭೂಕಂದಾಯ ಮತ್ತು ಸುಂಕಗಳನ್ನು ಕೊಡುತ್ತಿದ್ದಿತು. ಅವುಗಳನ್ನು ಅವನು ಕೆಲವು ಪಾಳೆಯಗಾರರಿಗೆ ಒಪ್ಪೈಸಿ ಕೊಡುತ್ತಿದ್ದ. ಅವರು ಮೇಲಿಂದ ಮೇಲೆ ಪೋರ್ತುಗೀಜರಿಗೆ ತೊಂದರೆ ಕೊಡುತ್ತಿದ್ದರು ತನ್ನನ್ನು ಸ್ವತಂತ್ರಗೊಳಿಸಿಕೊಂಡು ಪ್ರತಿಯೊಂದರಲ್ಲೂ ಮತ್ತು ಪ್ರತಿಯೊಂದಕ್ಕೂ ಪೋರ್ತುಗಾಲದ ರಾಜನ ಸ್ವತ್ತಾಗಲು ನಿರ್ಧರಿಸಿತು. ಈ ಉದ್ದೇಶಕ್ಕಾಗಿ ಅದು ತನ್ನ ಮಹಾಪ್ರಭುವಿನ ಹೆಸರಿನಲ್ಲಿ ತನ್ನಲ್ಲಿಗೆ ಕಳಿಸಿ ವಶಪಡಿಸಿಕೊಳ್ಳುವಂತೆ ರಾಜಪ್ರತಿನಿಧಿಯನ್ನು ಬೇಡಿಕೊಂಡಿತು. ಅವನು ನಾನು ಆಮೇಲೆ ಹೇಳಲಿರುವಂತೆ ಹಾಗೆಯೆ ಮಾಡಿದ. ಏತನ್ಮಧ್ಯೆ, ಪಟ್ಟಣವನ್ನು ಆಳುತ್ತಿದ್ದ ಮ್ಯಾನುಎಲ್‌ದ ಫ್ರಾಯಸ್ ಎಂಬ ಹೆಸರಿನ ದಳವಾಯಿ ಪಟ್ಟಣಕ್ಕೆ ಸಮೀಪ ಅದನ್ನು ಆಳುತ್ತಿದ್ದ, ದುರ್ಗವಿದ್ದುದನ್ನು ಕಂಡು ಮತ್ತು ಅದರ ದಳವಾಯಿ ಶರಣಾಗಲು ನಿರಾಕರಿಸಿದುದರಿಂದ ಅದನ್ನು ಬಲಪ್ರಯೋಗದಿಂದ ವಶಪಡಿಸಿಕೊಳ್ಳಲು ನಿರ್ಧರಿಸಿದ. ಆದುದರಿಂದ ಅವನು ಅದಕ್ಕೆ ಮುತ್ತಿಗೆ ಹಾಕಿ ಯಾರೂ ಹೊರಗೆ ಹೋಗದಂತೆ ಸಮೀಪದಿಂದ ಸುತ್ತುಗಟ್ಟಿದ."

ಅಂತಿಮವಾಗಿ ಪೋರ್ತುಗೀಜರು ಯಶಸ್ವಿಯಾದರು. ದುರ್ಗವನ್ನು ವಶಪಡಿಸಿಕೊಳ್ಳಲಾಯಿತು, ೧೫೦೦ ಜನರ ಅದರ ಕಾವಲುದಂಡು ಬಿಟ್ಟುಕೊಟ್ಟಿತು, ಮತ್ತು ಸ್ವಾಧೀನವನ್ನು ಪೂರ್ಣಗೊಳಿಸಲು ಸಮುದ್ರದಿಂದ ನೌಕಾಪಡೆ ಸುತ್ತಿಬಂದಿತು.

ಮುಂಬರುವ ಕತೆ ನನಗನಿಸುವಂತೆ ಇದುವರೆಗೆ ಇಂಗ್ಲಿಷ್ ಓದುಗರಿಗೆ ತಿಳಿಯಪಡಿಸದ ಘಟನೆಗಳಿಗೆ ಸಂಬಂಧಿಸಿದೆ, ಮತ್ತು ಅಷ್ಟುಮಟ್ಟಿಗೆ ಅತಿ ಸ್ವಾರಸ್ಯಕರ

ವಾಗಿದೆ. ಸದ್ಯ ಅದರ ಖಚಿತತೆಯನ್ನು ಒಪ್ಪಿಕೊಳ್ಳೋಣ ಮತ್ತು ಈಗಾಗಲೆ ಕೊಡಲಾಗಿರುವ ವಂಶಾವಳಿ ಪಟ್ಟಿಯ ದೃಷ್ಟಿಯಲ್ಲಿ ಓದೋಣ.[14]

ಒಂದನೆಯ ರಾಜಾ ವೆಂಕಟನಿಗೆ ಒಬ್ಬ ಸಹೋದರಿಯಿದ್ದಳು. ಅವಳನ್ನು ಬ್ಯಾರಡಸ್ 'ಒಬೊ' (ಬಹುಶಃ ಒಬಳ) ರಾಯನೆಂದು ಕರೆಯುವ ಪಾಳೆಯಗಾರನಿಗೆ ಮದುವೆ ಮಾಡಿಕೊಡಲಾಗಿತ್ತು. ನಮಗೆ ಗೊತ್ತಿರುವಂತೆ ಅವನಿಗಿದ್ದ ಸೋದರಳಿಯ ರೆಂದರೆ ಅವನ ಸಹೋದರ ಮೂರನೆಯ ರಾಮನ ಮಕ್ಕಳಾದ ಎರಡನೆಯ ತಿರುಮಲ ಹಾಗೂ ಮೂರನೆಯ ರಂಗ ಮಾತ್ರ. ಎರಡನೆಯ ತಿರುಮಲನಿಗೆ ಪುತ್ರರಿರಲಿಲ್ಲವೆಂದು ತೋರುವುದರಿಂದ ಮತ್ತು ಮೂರನೆಯ ರಂಗನಿಗೆ 'ಹಲವು ಸಹೋದರಲ್ಲೊಬ್ಬ' ನೆಂದು ಶಾಸನಗಳಲ್ಲಿ ದೃಢಪಡಿಸಲಾಗಿರುವ ನಾಲ್ಕನೆಯ ರಾಮ ಎಂಬ ಪುತ್ರನಿದ್ದುದ ರಿಂದ ೧೬೧೪ರಲ್ಲಿ ಒಂದನೆಯ ವೆಂಕಟನ ಮರಣಾನಂತರ ರಾಜನ ಸ್ಥಾನಕ್ಕೆ ಏರಿಸಿದ ಮತ್ತು ಮೂರು ಪುತ್ರರನ್ನು ಪಡೆದಿದ್ದ, ಬ್ಯಾರಡಸ್ ಉಲ್ಲೇಖಿಸುವ, ಸೋದರಳಿಯ ಮೂಲಪಾಠದಲ್ಲಿ 'ಚಿಕ್ಕರಾಯ' ಅಥವಾ 'ಯುವರಾಜ'ನೆಂದು ಕರೆಯಲಾದ ಮೂರನೆಯ ರಂಗನೇ ಎಂದು ಸಹಜವಾಗಿಯೆ ಭಾವಿಸಬೇಕಾಗುತ್ತದೆ. ಅಂದಮೇಲೆ, ಅವನು ೧೬೧೪ರಲ್ಲಿ ಉತ್ತರಾಧಿಕಾರಿಯಾದ, ಆದರೆ ತರುವಾಯ ಪದಚ್ಯುತಗೊಳಿಸ ಲ್ಪಟ್ಟ ಬಂಧಿಸಲ್ಪಟ್ಟ ಮತ್ತು ತನ್ನ ಪ್ರಾಣವನ್ನು ತಾನೆ ತೆಗೆದುಕೊಳ್ಳುವಂತೆ ಬಲವಂತಗೊಳಿಸಲ್ಪಟ್ಟ. ಅದೇ ಸಮಯಕ್ಕೆ ಅವನ ಮೊದಲ ಮಗ ತನ್ನ ತಂದೆಯ ಉದಾಹರಣೆಯನ್ನು ಅನುಕರಿಸಿದ. ಮತ್ತು ಅವನ ಕಡೆಯ ಮಗ ತನ್ನ ತಂದೆಯಿಂದ ಕೊಲ್ಲಲ್ಪಟ್ಟ. 'ನಡುವಿನ ಮಗ' ಪಾರಾದ, ಮತ್ತು ಎಚಮ ನಾಯಿಕನೆಂಬ ಹಿತೈಷಿ ಪಾಳೆಯಗಾರನಿಂದ ಸಿಂಹಾಸನಕ್ಕೇರಿಸಲ್ಪಟ್ಟ. ಈ ಎರಡನೆಯ ಮಗ ಬಹುಶಃ ನಾಲ್ಕನೆಯ ರಂಗ. ಜಗರಾಯನ ಮಗಳು ಬಾಯಮ್ ಮತ್ತು ನರ್ಪರಾಯನ ಹೆಸರಿಸಲಿಲ್ಲದ ಸಹೋದರಿ ರಾಜಾ ವೆಂಕಟನ ಇಬ್ಬರು ರಾಣಿಯರಾಗಿದ್ದರು. ಬಾಯಮ್ಮ ಗುಟ್ಟಾಗಿ ಅರಮನೆಯಲ್ಲಿ ತಂದು ಅವನು ರಾಜಾ ವೆಂಕಟನ ಮಗ ಎಂಬ ನೆಪದಲ್ಲಿ ಅವನಿಗೆ ಶಿಕ್ಷಣ ಕೊಡಿಸಲಾಗುತ್ತಿದ್ದ ಬ್ರಾಹ್ಮಣ ಹುಡುಗನಿಗೆ ಒಂದನೆಯ ವೆಂಕಟನ ಸೋದರ ಸೊಸೆಯನ್ನು ಮದುವೆ ಮಾಡಿಕೊಡಲಾಗಿತ್ತು. ಅವನನ್ನು ಪಟ್ಟಕ್ಕೆ ತರುವ ಸಂಚು ತಾತ್ಕಾಲಿಕವಾಗಿ ಯಶಸ್ವಿಯಾಯಿತು ಮತ್ತು ಅನಂತರ ಪಟ್ಟಕ್ಕೆ ಬಂದ ನಾಲ್ಕನೆಯ ರಂಗನನ್ನುಳಿದು ಮೂರನೆಯ ರಂಗ ಮತ್ತು ಎಲ್ಲ ರಾಜಕುಟುಂಬವನ್ನು ಕೊಲ್ಲಲಾಯಿತು.

ಹೇಳಲಾಗಿರುವ ಈ ಕತೆ ಎಷ್ಟು ಮಟ್ಟಿಗೆ ನಿಜ ಎಂಬುದನ್ನು ನಾವಿನ್ನೂ ನಿರ್ಣಯಿಸಲಾರೆವು ; ಆದರೆ, ಅದೆಲ್ಲ ಕಟ್ಟು ಕತೆಯಾಗಿರುವುದು ತೀರ ಅಸಂಭವ, ಮತ್ತು ಈ ಘಟನೆಗಳ ಕಾಲ ನಿಶ್ಚಿತವಾಗಿಯೂ ಕ್ರಿ.ಶ. ೧೬೧೪ ಮತ್ತು ೧೬೧೬ರ

ಮಥ್ಯೈ ಬ್ಯಾರಡಸ್‌ನ ಪತ್ರದ ದಿನಾಂಕ ಎರಡನೆಯ ವರ್ಷದ ಡಿಸೆಂಬರ್ ೧೨ ಆಗಿರುವುದರಿಂದ ಎಂದು ನಿಗದಿಗೊಳಿಸಿ ಸಧ್ಯ ನಾವು ಅದನ್ನು ಒಪ್ಪಿಕೊಳ್ಳಬಹುದು.

ಎಪಿಗ್ರಾಫಿಯಾ ಇಂಡಿಕಾದಿಂದ ಆಯ್ದು ಕೊಟ್ಟಿರುವ ಮೇಲಿನ ವಂಶಾವಳಿ ಪಟ್ಟಿಗೆ ಆಧಾರವಾಗಿರುವ ಶಾಸನಗಳು ಕ್ರಿ.ಶ. ೧೬೧೪ ಮತ್ತು ಎರಡನೆಯ ಪೆದ್ದ ವೆಂಕಟರಾಜನೆಂದು ಹೆಸರಿಸಿದ ೧೬೩೪ರ ನಡುವಣ ಯಾವ ದಿನಾಂಕವನ್ನೂ ನೀಡುವುದಿಲ್ಲ. ೧೮೮೩ರಲ್ಲಿ ಆಗ ನನಗೆ ತಲುಪಿದ ಶಾಸನಗಳ ವರದಿಗಳಿಂದ ಸಂಗ್ರಹಿಸಿದ ವಿಜಯನಗರ ಹೆಸರುಗಳ ಪಟ್ಟಿಯನ್ನು ಪ್ರಕಟಿಸಿದೆ.[15] ಅವುಗಳ ಖಚಿತತೆಯ ಬಗೆಗೆ ನನಗೆ ಏನೂ ಖಾತರಿಯಿಲ್ಲ ಮತ್ತು ಅವುಗಳನ್ನೆಲ್ಲ ಇನ್ನು ಮುಂದೆ ಕೂಲಂಕಷವಾಗಿ ಪರಿಶೀಲಿಸಬೇಕೆಂಬುದು ಸ್ಪಷ್ಟವಿದೆ. ಅದು ಇದ್ದ ಮಟ್ಟಿಗೆ ಪಟ್ಟಿ ಹೀಗಿದೆ :—

| | |
|---|---|
| ರಂಗ | ಕ್ರಿ.ಶ. |
| | ೧೬೧೯ |
| ರಾಮ | ೧೬೨೦, ೧೬೨೨ |
| ರಂಗ | ೧೬೨೩ |
| ವೆಂಕಟ | ೧೬೨೩ |
| ರಾಮ | ೧೬೨೯ |
| ವೆಂಕಟ | ೧೬೩೬ |

ಕೊನೆಗೆ ಉಲ್ಲೇಖಿಸಲಾದ ಹೆಸರು ಮತ್ತು ಕಾಲ ಸ್ಪಷ್ಟವಾಗಿ ಸರಿಯಿದೆ.

೧೬೩೩ರಲ್ಲಿ ಇನ್ನೂ ಚಂದ್ರಗಿರಿಯಲ್ಲಿದ್ದ ವಿಜಯನಗರ ರಾಜನಿಂದ ಪ್ರೇರೇಪಿತವಾದ ಪೋರ್ತುಗೀಜರು ಡಚ್‌ರನ್ನು 'ಪ್ಯಾಲಿಯಕೇಟ್' ಅಥವಾ ಪುಲಿಕಟ್‌ನಿಂದ ಹೊರಹಾಕುವ ಪ್ರಯತ್ನ ಮಾಡಿದರು. ಪೋರ್ತುಗೀಜರು ಸಮುದ್ರದಿಂದ ಮತ್ತು ರಾಜ ನೆಲದಿಂದ ಆಕ್ರಮಣ ಮಾಡಬೇಕೆಂದು ನಿರ್ಣಯಿಸಲಾಯಿತು. ಒಪ್ಪಿದಂತೆ ತನ್ನ ಹನ್ನೆರಡು ನೌಕೆಗಳನ್ನು ರಾಜಪ್ರತಿನಿಧಿ ಕಳಿಸಿದ. ಆದರೆ, ತನ್ನ ಸೈನ್ಯವನ್ನು ಆಂತರಿಕ ಗಲಭೆಗಳನ್ನು ಹತ್ತಿಕ್ಕಲು ಬಳಸಬೇಕಾಯಿತೆಂಬ ಸ್ಪಷ್ಟೀಕರಣ ನೀಡಿ ರಾಜ ಆಕ್ರಮಣ ಮಾಡಲಿಲ್ಲ. ರಾಜನ ಪಾಲಿನ ಒಪ್ಪಂದ ಈಡೇರದಿದ್ದುದರಿಂದ ಪೋರ್ತುಜರ ಯೋಜನೆ ಪುನಃ ತಲೆಕೆಳಗಾದ ಎರಡನೆಯ ದಂಡಯಾತ್ರೆಗೂ ಹೆಚ್ಚಿನ ಯಶ ದೊರೆಯಲಿಲ್ಲ. ನೌಕಾಪಡೆ ತೆರಳಿದ ಮೇಲೆ ರಾಜ ಡಚ್ ವಸಾಹತುವಿನ ಮೇಲೆ ಆಕ್ರಮಣ ಮಾಡಿದ. ಆದರೆ, ಬಹಳ ಹಣ ಕೊಟ್ಟು ಕಾಟ ತಪ್ಪಿಸಿಕೊಂಡ ಹಾಲಂಡಿನವರು ತದನಂತರ ತೊಂದರೆಗೊಳಗಾಗದೆ ಉಳಿದರು.

ಟೋರ್‌ದ ಟೊಂಬೊದಲ್ಲಿನ ರಾಷ್ಟ್ರೀಯ ಪತ್ರಾಗಾರದಲ್ಲಿದ್ದ "ಲಿವ್ರೊಸ್ ದಾಸ್ ಮಾಂಕೊಜ್"ನಲ್ಲಿ ಈ ವಿಷಯಕ್ಕೆ ಸಂಬಂಧಪಟ್ಟ ಅನೇಕ ಕಾಗದಗಳನ್ನು ಹುಡುಕಿ

ರುವುದಾಗಿ ಸೆನ್ಹೊರ್ ಲೋಪ್ಸ್ ನನಗೆ ಹೇಳುತ್ತಾನೆ. ೩೪ನೆಯ ಸಂಪುಟ (ಫೊಲಿಯೊ ೯೧-೯೯)ದಲ್ಲಿರುವುವು ಅತ್ಯಂತ ಸ್ವಾರಸ್ಯಕರವಾಗಿವೆ. ಇವುಗಳನ್ನು ಮೆಲಿಯಾಪುರ (ಸ್ಯಾನ್ ಥೊಮೆ)ದ ಕ್ಯಾಪ್ಟನ್-ಜನರಲ್, ಕಂಪನಿ ಆಫ್ ಜೀಸಸ್‌ನ ಪಾದರ್ ಪೆರೊ ನೆಕ್ಸಿಯಾ ಮತ್ತು ಬಿಶಪ್ ಬರೆದಿರುವರು. ಮಿಕ್ಕ ದಸ್ತೈವಜುಗಳಲ್ಲಿ ಆಗ ವೆಲ್ಲೋರಿನಲ್ಲಿದ್ದ ವಿಜಯನಗರ ರಾಜನ ಎರಡು ತಾಳೆಗರಿ ಓಲೆಗಳ ಅನುವಾದಗಳು ನೋಡಸಿಗುತ್ತವೆ. ಇವುಗಳಿಂದ ರಾಜ ಶಕ್ತಿಗುಂದಿದ್ದ ಮತ್ತು ತಿಮ್ಮರಾಯ ನೆಂಬವನು ಅವನ ವಿರುದ್ಧ ಬಂಡೆದ್ದಿದ್ದ ಎಂದು ತೋರುತ್ತದೆ.

೧೬೩೯ರಲ್ಲಿ ವಿಜಯನಗದ ರಾಜನಿಗೆ ರಂಗ ಅಥವಾ ಶ್ರೀರಂಗ ಎಂದು ಕರೆದರು. ಮತ್ತು ಆವನು ಆ ಕಾಲಕ್ಕೆ ಚಂದ್ರಗಿರಿಯಲ್ಲಿ ವಾಸಿಸುತ್ತಿದ್ದನೆಂದು ನಮಗೆ ತಿಳಿದು ಬರುತ್ತದೆ. ಏಕೆಂದರೆ, ಆ ವರ್ಷ ಮದ್ರಾಸದಲ್ಲಿ ಇಂಗ್ಲಿಷ ವ್ಯಾಪಾರ ನಿಲ್ದಾಣದ ಮುಖ್ಯಸ್ಥನಾಗಿದ್ದ ಮಿಸ್ಟರ್ ಡೇ ಆ ಊರಿನಲ್ಲಿ ಒಂದು ಮೈಲು ಅಗಲ ಐದು ಮೈಲು ಉದ್ದವಿರುವ ಭೂಮಿಯನ್ನು ರಾಜನಿಂದ ದಾನವಾಗಿ ಪಡೆದ. ಸೇಂಟ್ ಜಾರ್ಜ್ ಕೋಟೆ ನಂತರ ನಿರ್ಮಿತವಾದುದು ಇದರ ಮೇಲೆಯೆ. ಮದ್ರಾಸ ಬಳಿಯ ನಾಡನ್ನು ಆಗ ಒಬ್ಬ ಮಂಡಲಾಧಿಪತಿ ಅಥವಾ ನಾಯಕ ಆಳುತ್ತಿದ್ದ. ಅವನು ತನ್ನ ನಾಮ ಮಾತ್ರದ ಸಾರ್ವಭೌಮನ ಇಚ್ಛೆ ಅಥವಾ ಆಜ್ಞೆಗಳನ್ನು ಎಷ್ಟೊಂದು ನಿರ್ಲಕ್ಷಿ ಸುತ್ತಿದ್ದನೆಂದರೆ ರಾಯ ಹೊಸ ಪಟ್ಟಣಕ್ಕೆ 'ಶ್ರೀರಂಗರಾಯಲಪಟ್ನಮ್' (ಶ್ರೀರಂಗರಾಯನ ಪಟ್ಟಣ) ಎಂದು ಹೆಸರಿಡಬೇಕೆಂದು ಆದೇಶಿಸಿದ್ದರೂ ನಾಯಕನು ತನ್ನ ತಂದೆಯ ಹೆಸರಾದ ಚೆನ್ನನ ದ್ಯೋತಕವಾಗಿ ಅದಕ್ಕೆ 'ಚೆನ್ನರಾಯಪಟ್ನಮ್' ಎಂದೇ ಹೆಸರಿಟ್ಟ. ಅದು ಇಂದಿಗೂ ಹಿಂದೂಗಳಿಗೆ ಅದೇ ಹೆಸರಿನಿಂದ ಪರಿಚಿತವಿದೆ. ಏನಿದ್ದರೂ ಸ್ಥಳೀಯ ಪರಂಪರಾಭಿಪ್ರಾಯ ಮಾತ್ರ ಈ ರಾಜ ಬಹುಶಃ ಕ್ರಿ.ಶ.೧೬೪೪ರಲ್ಲಿ ಜೀವಿಸಿದ್ದನೆಂದು ಹೇಳಲಾಗಿರುವ ಎಪಿಗ್ರಾಫಿಯಾ ಪಟ್ಟಿಯಲ್ಲಿನ ಆರನೆಯ ರಂಗನಾಗಿದ್ದ.

ಈ ದಿನಾಂಕದ ತರುವಾಯ ನನ್ನ (ಸಂದೇಹಾಸ್ಪದ ಮತ್ತು ಪರಿಶೀಲಿಸದ) ಶಾಸನಗಳು ಕೆಳಗಿನ ಹೆಸರುಗಳು ಮತ್ತು ದಿನಾಂಕಗಳನ್ನು ಕೊಡುತ್ತವೆ.

| ರಂಗ | ಕ್ರಿ.ಶ. |
|---|---|
| | ೧೬೪೩, ೧೬೪೭, ೧೬೫೫, ೧೬೬೨, |
| | ೧೬೬೩, ೧೬೬೫, ೧೬೬೭, ೧೬೭೮ |
| ವೆಂಕಟ | ೧೬೭೮, ೧೬೮೦ |
| ರಂಗ | ೧೬೯೨ |
| ವೆಂಕಟ | ೧೭೦೬ |
| ರಂಗ | ೧೭೧೬ |

| | |
|---|---|
| ಮಹಾದೇವ | ೧೭೨೪ |
| ರಂಗ | ೧೭೨೯ |
| ವೆಂಕಟ | ೧೭೩೨ |
| ರಾಮ | ೧೭೩೯ (?) |
| ವೆಂಕಟ | ೧೭೪೪ |
| ವೆಂಕಟ | ೧೭೯೧, ೧೭೯೨, ೧೭೯೩ |

ಆನೆಗುಂದಿಯ ಹಳೆಯ ಮನೆತನದ ಆಸ್ತಿಯ ನೆರೆಹೊರೆಯ ಪ್ರದೇಶವನ್ನು ಹದಿನೆಂಟನೆಯ ಶತಮಾನದ ಆದಿಯಲ್ಲಿ ರಾಯರು ದಿಲ್ಲಿಯ ಮೊಗಲ ಸಾಮ್ರಾಟನ ಸಾಮಂತ ರಾಜ್ಯವಾಗಿ ಪಡೆದಿದ್ದರೆಂದು ಸರ್ ಥಾಮಸ್ ಮನ್ರೊನ ಕಾಗದಗಳಿಂದ ನಾನು ಗ್ರಹಿಸಿದ್ದೇನೆ. ೧೭೪೯ರಲ್ಲಿ ಅದನ್ನು ಮರಾಠರು ಹಿಡಿದುಕೊಂಡರು. ಮತ್ತು ೧೭೭೫ರಲ್ಲಿ ಮೈಸೂರಿನ ಹೈದರಲಿ ಅದನ್ನು ಅಡಗಿಸಿದ. ಆದರೆ ಅದು ಟಿಪು (ಟಿಪ್ಪೂ ಸುಲ್ತಾನ)ನ ಕಾಲದವರೆಗೆ ಅರೆಸ್ವತಂತ್ರ ಸಾಮಂತ ರಾಜ್ಯವಾಗಿ ಮುಂದು ವರಿಯಿತು. ತನ್ನ ಹಿತಾಸಕ್ತಿಗಳ ಪ್ರಶ್ನೆಯಿದ್ದಾಗ ಅನುತಾಪ ಅಥವಾ ಅನುಕಂಪದ ಆಧಿಕ್ಯಕ್ಕೇನೂ ಈಡಾಗದ ಟಿಪು ೧೭೮೬ರಲ್ಲಿ ಆ ಆಸ್ತಿಯನ್ನು ಇಡಿಯಾಗಿ ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಹದಿಮೂರು ವರ್ಷ ತರುವಾಯ ಅವನ ಸೆರಿಂಗ ಪಟ್ನಮ್‌ನಲ್ಲಿ ಕೊಲ್ಲಲ್ಪಟ್ಟ ಮತ್ತು ಅದನ್ನನುಸರಿಸಿ ಜರುಗಿದ ಆಸ್ತಿ ವರ್ಗಾವಣೆಯಲ್ಲಿ ಆ ಚಿಕ್ಕಪ್ರದೇಶವನ್ನು ಹೈದರಾಬಾದ ನಿಜಾಮನಿಗೆ ವಹಿಸಿಕೊಡಲಾಯಿತು. ಮತ್ತು ಇಂಗ್ಲಿಷ ಸರಕಾರ ತುಂಗಭದ್ರೆಯ ತಮ್ಮ ಬದಿಯಲ್ಲಿನ ಭೂಮಿಗಳನ್ನು ಇಟ್ಟು ಕೊಂಡರು. ಈ ಭೂಮಿನಷ್ಟಕ್ಕೆ ಕೆಲಮಟ್ಟಿನ ಪರಿಹಾರವೆಂದು ಸರಕಾರ ತೀರ ಇತ್ತೀಚಿನವರೆಗೆ ಆನೆಗುಂದಿ ಮನೆತನದ ಮುಖ್ಯಸ್ಥನಿಗೆ ವರ್ಷಾಶನ ನೀಡಿದೆ. ಅದನ್ನೀಗ ರದ್ದುಗೊಳಿಸಲಾಗಿದೆ.

---

1 ಕಾರ್ಟೊರಿಯೊ ದೊಸ್ ಜೆಸುಟೊಸ್ (ಕಂತೆ ೩೬, ಕಟ್ಟು ೬೫ ನಂ. ೨೨, ಲಿಸ್ಬಿನ್‌ನ ರಾಷ್ಟ್ರೀಯ ಪತ್ರಾಗಾರ. ಆರ್ಕೈವೊ ದ ಟೊರ್ ದೊ ಟೊಂಬೊದಲ್ಲಿ). ಅಂಟೊನಿಯೊ ಬಾಕರೊ, ಡೆಕಡಾ, ೧೩. ಪು. ೨೯೬ ರೊಂದಿಗೆ ಹೋಲಿಸಿ. ಅದೇ ದಾರುಣ ಘಟನೆಗಳಿಗೆ ಸಂಬಂಧಿಸಿದವೆಂದು ಹೇಳುವ ಇನ್ನೂ ಪರಿಷ್ಕರಿಸದ ಹಸ್ತಪ್ರತಿಯಾದ "ಡೊಕುಮೆಂಟೊಜ್ ಎಮೆಟಿಡೊಸ್ ದ ಇಂಡಿಯಾ, ಅಥವಾ ಲಿವ್ರೊಸ್ ದೇಸ್‌ಮಾಂಕೊಜ್, t.i. ೩೪೯ ಮತ್ತು t.i. ೩೭೮-೩೭೧, ರತ್ತ ಮಿಸ್ಟರ್ ಲೋಪ್ಸ್ ನನ್ನ ಗಮನ ಸೆಳೆಯುತ್ತಾನೆ.

2 ಪು. ೨೧೭ ಅ ಮೇಲಿನ ವಂಶಾವಳಿ ಪಟ್ಟಿಯನ್ನು ನೋಡಿ. ಒಂದನೆಯ ವೆಂಕಟ ನಾಲ್ಕನೆಯ ರಾಜವಂಶದ ಪ್ರಥಮ ವಾಸ್ತವಿಕ ರಾಜನಾದ ತಿರುಮಲನ ಮಗ. ಬ್ಯಾರಡೊಸ್ ಹೇಳುವಂತೆ 'ಚಿಕ್ಕ' ಎಂಬುದು ಸಾಮಾನ್ಯತಃ ಸಿಂಹಾಸನದ ವಾರಸು ದಾರನಿಗೆ ನೀಡಲಾಗುತ್ತಿದ್ದ ಹೆಸರಾದುದರಿಂದ ಭ್ರಾತ್ರೀಯ ಚಿಕ್ಕರಾಯ

ಮೂರನೆಯ ರಂಗ ಆಗಿರಬಹುದು. ಹಾಗಿದ್ದ ಪಕ್ಷದಲ್ಲಿ 'ಹಲವು ಸಹೋದರರ ಲ್ಲೊಬ್ಬನಾದ' ಹಾಗೂ ರಂಗನ ಮಗನಾದ ನಾಲ್ಕನೆಯ ರಾಮ, ಪತ್ರದಲ್ಲಿ ಹೇಳಿದ ಸಗಟು ಸಂಹಾರದಿಂದ ಪಾರಾದ ಬಾಲಕನಾಗುತ್ತಾನೆ.

3 ಕನ್ನಡದಲ್ಲಿ 'ಚಿಕ್ಕರಾಯ' ಎಂದರೆ 'ಚಿಕ್ಕ' ಅಥವಾ 'ಯುವ'ರಾಯ ಎಂದರ್ಥ.

4 ಚಂದ್ರಗಿರಿ.

5 ಇದು ಯಾರಿಗೆ ಅನ್ವಯಿಸುತ್ತದೆಂಬುದು ಗೊತ್ತಿಲ್ಲ. ಆ ಹೆಸರು ಬಹುಶಃ 'ಓಬಳ'.

6 ಈ ಯುವಕ ಇಮ್ಮಡಿ ವಿವಾಹದಿಂದ ಜಗರಾಯನ ಭ್ರಾತ್ರೀಯನಾಗಿದ್ದ. ಅವನ ಹೆಂಡತಿ ರಾಜಾ ವೆಂಕಟನ ಭ್ರಾತ್ರೀಯಳಾಗಿದ್ದಳು ಮತ್ತು, ಅದುದರಿಂದ, ವಿವಾಹ ದಿಂದ ರಾಣಿ ಬಾಯಮ್ಮನ ಭ್ರಾತ್ರೀಯಳು. ಬಾಯಮ್ಮ ಜಗರಾಯನ ಮಗಳು.

7 ಬ್ರಿಡೊಸ್, ಟಿಪ್ಪಣಿ ನೋಡಿರಿ. ಪು. ೨೪೫.

8 ಬಹುಶಃ ಇತ ಓಬಳೇಶ್ವರ.

9 ಚಿನ್ನ ಓಬಳರಾಯ.

10 ಇದನ್ನು ಬರೆದುದು ೧೬೧೬ರಲ್ಲಿ.

11 ಇವನು ೧೬೦೯ ರಿಂದ ೧೬೨೩ ರಿಂದ ಮದುರಾದ ನಾಯಕ್ಕ (ನಾಯಕ)ನಾಗಿದ್ದ ಮುತ್ತು ವೀರಪ್ಪ, ಅವನ ಆಳ್ವಿಕೆಯಲ್ಲಿ ತಂಜಾವೂರಿನೊಂದಿಗೆ ಯುದ್ಧವಾಗಿತ್ತೆಂದು ಮಿಸ್ಟರ್ ನೆಲ್ಸನ್ ('ಮದುರಾ ಕಂಟ್ರಿ') ಉಲ್ಲೇಖಿಸುತ್ತಾನೆ. ೧೫೩೫ರಲ್ಲಿ ಬರೆದ ನೂನಿಜ್ ವಿಜಯನಗರ ರಾಜ್ಯದ ಮಹತ್ವದ ವಿಭಾಗಗಳಲ್ಲಿ ಮದುರೆಯನ್ನು ಉಲ್ಲೇಖಿಸುವುದಿಲ್ಲ ; ಮತ್ತು ಇದು ಇತರ ಮೂಲಗಳಿಂದ ಪಡೆದ ಚರಿತ್ರೆ ಯೊಂದಿಗೆ ಸರಿ ಹೊಂದುತ್ತದೆ. ಆದರೆ ೧೬೧೪ ರಷ್ಟೊತ್ತಿಗೆ ಮದುರೆಯ ನಾಯಕ ಬಹಳ ಬಲಿಷ್ಠನಾಗಿದ್ದ. ಆದಾಗ್ಯೂ ಜನರು ತಮ್ಮ ಹಳೆಯ ಸಾರ್ವಭೌಮರಾಗಿದ್ದ ಪಾಂಡ್ಯನ್‌ರನ್ನು ಇನ್ನೂ ಆಗಾಗ ಮನ್ನಿಸುತ್ತಿದ್ದರು. ಅವರಲ್ಲೊಬ್ಬನನ್ನು ೧೬೨೩ ರಷ್ಟು ಇತ್ತೀಚೆಗೆ ಉಲ್ಲೇಖಿಸಲಾಗಿದೆ. ('ಸ್ಕೆಚ್ ಆಫ್ ದ ಡಿನ್ಯಾಸ್ಟೀಜ್ ಆಫ್ ಸದರ್ನ್ ಇಂಡಿಯಾ', ೮೫).

12 ತ್ರಿಚಿನಾಪಳ್ಳಿ.

13 ಮದ್ರಾಸಿಗೆ ಹತ್ತಿರವಿದ್ದು ಪೋರ್ತುಗೀಜರಿಂದ ಹಲವು ಬಾರಿ 'ಮೆಲ್ಲಿಯಾಪೊರ' ಎಂದು ಕರೆಯಲಾಗಿದ್ದ ಅದರ ಹುಟ್ಟು ಹೆಸರು ಮೈಲಾಪುರ. ಹದಿನಾರನೆಯ ಶತಮಾನದ ಕೊನೆಗೆ ವರ್ಣಿಸಿದ ಘಟನೆಗಳ ಕಾಲಕ್ಕಿಂತ ಕೆಲವು ವರ್ಷ ಮೊದಲು ಬರೆಯುತ್ತ ಲಿನ್‌ಸ್ಕೊಟೆನ್ ಹೇಳುವುದೇನೆಂದರೆ "ಈ ಪಟ್ಟಣ.... ಈಗ ನರಸಿಂಗನ ಮತ್ತು ಕೋರಮಂಡಲ ಕರಾವಳಿಯ ಪ್ರಮುಖ ನಗರ."

14 ಮೇಲೆ ಪುಟ ೨೧೪ ನೋಡಿರಿ.

15 "ಸ್ಕೆಚ್ ಆಫ್ ದ ಡಿನ್ಯಾಸ್ಟೀಜ್ ಆಫ್ ಸದರ್ನ್ ಇಂಡಿಯಾ" ಪು. ೧೧೨.

# ಪ್ಯಾಸ್ ಮತ್ತು ನೂನಿಜ್‌ರ ದಿನಚರಿಗಳು
# ಪತ್ರ

**(? ಚರಿತ್ರಕಾರ ಬ್ಯಾರೊಸ್‌ನಿಗೆ ಪತ್ರ) ಕ್ರಿ.ಶ. ೧೫೩೭ರ ಸುಮಾರಿಗೆ ಭಾರತದಿಂದ ಪೋರ್ತುಗಾಲ್‌ಗೆ ಕಳಿಸಿದ ದಿನಚರಿಗಳೊಂದಿಗೆ ಇದ್ದದ್ದು.**

ಇದುವರೆಗೆ ನಾನು ಈ ನಗರ (? ಗೋವಾ)ದಲ್ಲಿದ್ದುದರಿಂದ ಮಾನ್ಯರಾದ ನೀವು ಹೇಳಿದುದನ್ನು ಮಾಡುವುದು, ಅರ್ಥಾತ್, ಈ ಮುಂಚೆ ಬೀಸನಗದಲ್ಲಿದ್ದ ವ್ಯಕ್ತಿಗಳನ್ನು ಹುಡುಕುವುದು ಆವಶ್ಯಕವೆಂದು ತೋರುತ್ತದೆ. ಏಕೆಂದರೆ, ಅಲ್ಲಿಗೆ ಹೋದ ಯಾರೂ ಅದರ ವ್ಯವಹಾರಗಳ ಬಗೆಗೆ ಬರೆದ ಕಾಗದದ ತನ್ನ ಕಟ್ಟನ್ನು ತರದೆ ಬಿಡುವುದಿಲ್ಲೆಂಬುದನ್ನು ನಾನು ಬಲ್ಲೆ. ಕ್ರಿಸ್ನರಾವ್‌ನ ಕಾಲಕ್ಕೆ ಕ್ರಿಸ್ಟೊವಾಒ ದ ಫಿಗ್ಯೆರೆಡೊ ಅಲ್ಲಿದ್ದಾಗ ಬೀಸನಗಕ್ಕೆ ಹೋಗಿದ್ದ ಡೊಮಿಂಗೊ ಪ್ಯಾಸ್ ಎಂಬಾತನ ಈ ಸಾರಾಂಶವನ್ನು ಪಡೆದುಕೊಂಡಿರುವೆ. ಅಲ್ಲಿ ಮೂರು ವರ್ಷ ಕುದುರೆಗಳ ವ್ಯಾಪಾರ (ಅದು ಲಾಭದಾಯಕವಾಗಿ ಪರಿಣಮಿಸಲಿಲ್ಲ)ದಲ್ಲಿ ನಿರತನಾಗಿದ್ದ ಫರ್ನಾಒ ನೂನಿಜ್‌ನಿಂದ ಇನ್ನೊಂದನ್ನು ಪಡೆದುಕೊಂಡಿರುವೆ. ಒಬ್ಬನೇ ಎಲ್ಲವನ್ನೂ ಹೇಳಲು ಸಾಧ್ಯವಿರದ್ದರಿಂದ—ಒಬ್ಬನು ಇನ್ನೊಬ್ಬ ಹೇಳದ ಕೆಲವು ಸಂಗತಿಗಳನ್ನು ಹೇಳುವನು—ಅವರು ಮಾಡಿದ ಎರಡೂ ಸಾರಾಂಶಗಳನ್ನು ಎಂದರೆ, ನಾನು ಹೇಳಿರುವಂತೆ ಕ್ರಿಸ್ನರಾವ್‌ನ ಕಾಲದಲ್ಲಿನ ಒಂದು ಮತ್ತು ಆರು ತಿಂಗಳಾದ ಮೇಲೆ ಅಲ್ಲಿಂದ ಕಳಿಸಿದ ಇನ್ನೊಂದನ್ನು ಕಳಿಸುತ್ತಿರುವೆ. ಅವನು[1] ಮೊದಲು ಬೀಸನಗ ರಾಜ್ಯಕ್ಕೆ ಹೋದಾಗ ಮಾಡತೊಡಗಿದ ಸಾರಾಂಶದ ಕರಡು ಕೆಳಗಿನಂತಿದೆ :

**ಅಡಿಟಿಪ್ಪಣಿ**

1 ಇಲ್ಲಿ 'ಅವನು' ಎಂದರೆ ಡೊಮಿಂಗೊ ಪ್ಯಾಸ್

# ಡೊಮಿಂಗೊಸ್ ಪ್ಯಾಸ್‌ನ ಕಥನ
## (ಬಹುಶಃ ಕ್ರಿ.ಶ. ೧೫೨೦–೨೧ರಲ್ಲಿ ಬರೆದುದು)

**(ನರಸಿಂಗನ[1] ರಾಜ್ಯದ ನಾನು ಕಂಡು ಮತ್ತು ಅರಿತುಕೊಂಡ ಸಂಗತಿಗಳು ಇತ್ಯಾದಿಯ ಬಗೆಗೆ)**

ಇಂಡಿಯಾ[2]ದಿಂದ ಹೊರಟು ಸಮುದ್ರಕರಾವಳಿಯಿಂದ ನರಸಿಂಗನ ರಾಜ್ಯದ ಕಡೆಗೆ ಪಯಣಿಸಲು ನೀವು (ಮೊದಲು) ಪುಸ್ತಕ ರಾಜ್ಯದ ಮತ್ತು ಸಮುದ್ರದ ಬಳಿಯಿರುವ ಪ್ರದೇಶಗಳ ಗಡಿಯಾಗಿರುವ ಗುಡ್ಡಗಳ ಪಂಕ್ತಿಯನ್ನು (ಸೆರಾ) ದಾಟ ಬೇಕು. ಈ ಸೆರಾ ಭಾರತದ ಇಡಿ ಕರಾವಳಿಗುಂಟ ಹಬ್ಬಿದೆ ಮತ್ತು ಜನರು ಒಳನಾಡನ್ನು ಪ್ರವೇಶಿಸುವ ಕಣಿವೆ ಮಾರ್ಗಗಳನ್ನು ಹೊಂದಿದೆ ; ಏಕೆಂದರೆ ಪಂಕ್ತಿಯ ಮಿಕ್ಕೆಲ್ಲ ಭಾಗ ಶಿಲಾಮಯ ಹಾಗೂ ದಟ್ಟ ಅರಣ್ಯಮಯವಾಗಿದೆ. ಉಲ್ಲೇಖಿತ ರಾಜ್ಯ ಭಾರತದ ಕರಾವಳಿಯಲ್ಲಿ ಅನೇಕ ಸ್ಥಳಗಳನ್ನು ಹೊಂದಿದೆ ; ಅವು ನಾವು ಶಾಂತಿಯಿಂದಿರುವ ರೇವುಗಳಾಗಿವೆ ಮತ್ತು ಅವುಗಳಲ್ಲಿ ಕೆಲವುಗಳಲ್ಲಿ ನಮ್ಮ ಕಾರಖಾನೆಗಳಿವೆ, ಎಂದರೆ, ಅಂಕೋಲಾ, ಮಿರ್ಗ್ಗಿಒ, ಹೊನರ್, ಬಟೆಕಲ್, ಮಂಗಳೋರ, ಬ್ರಾಕಳೋರ, ಮತ್ತು ಬಕನೋರ. ನಾವು ಈ ಸೆರಾದ ಮೇಲೆ ತಲುಪಿದ ತಕ್ಷಣ ಬಯಲುನಾಡು ಬರುತ್ತದೆ. ಅದರಲ್ಲಿ ಹೆಚ್ಚಿನ ಬೆಟ್ಟಸಾಲುಗಳಿರದೆ ಕೆಲವೇ ಚಿಕ್ಕ ಪರ್ವತಗಳಿವೆ ; ಮತ್ತು ಮಿಕ್ಕೆಲ್ಲ ಸಾಂತರೆಮ್[3]ದ ಬಯಲುಗಳಂತೆ ಇದೆ. ಬಟೆಕಳ[4]ದಿಂದ ಝಾಂಬುಜ ಎಂಬ ಪಟ್ಟಣದವರೆಗಿನ ದಾರಿಯಲ್ಲಿ ಮಾತ್ರವೆ ಕೆಲವು ಅರಣ್ಯಮಯ ಬೆಟ್ಟಸಾಲುಗಳಿವೆ ; ಆದರೂ ಸಹ ದಾರಿ ಸಮತಟ್ಟಾಗಿದೆ. ಬಟೆಕಳದಿಂದ ಈ ಝಾಂಬೂರ್[5] ಪಟ್ಟಣಕ್ಕೆ ನಲವತ್ತು ಹರದಾರಿ ಇದೆ. ದಾರಿ ಬದಿಯಲ್ಲಿ ಅನೇಕ ತೊರೆಗಳಿವೆ ಮತ್ತು ಇದರಿಂದಾಗಿ ಎಷ್ಟೊಂದು ಸರಕು ಬಟೆಕಳಕ್ಕೆ ಪ್ರವಹಿಸುತ್ತದೆಂದರೆ ಪ್ರತಿವರ್ಷ ಐದಾರು ಸಾವಿರ ಹೇರು-ಎತ್ತುಗಳು ಬರುತ್ತವೆ.

ಈಗ ಮೇಲ್ಕಾಣಿಸಿದ ರಾಜ್ಯದ ಬಗೆಗೆ, ಪೂರ್ವಕ್ಕಿರುವ[6] ಈ ಸೆರಾದ ಉದ್ದಕ್ಕೂ ಬಿಟ್ಟರೆ ಅದು ವಿರಳ ಅರಣ್ಯವಿರುವ ನಾಡು. ಆದರೆ, ಕೆಲವೆಡೆ ಎರಡು ಮೂರು ಹರದಾರಿವರೆಗೆ ನೀವು ಗಿಡಗಳ ತೋಪಿನಡಿ ನಡೆಯುತ್ತೀರಿ. ನಗರ, ಪಟ್ಟಣ ಮತ್ತು ಗ್ರಾಮಗಳ ಹಿಂದುಗಡೆ ಮಾವು ಮತ್ತು ಹಲಸಿನ ಗಿಡಗಳು ಮತ್ತು ಹುಣಿಸೆ ಮರಗಳು ಮತ್ತು ಇತರ ದೊಡ್ಡ ಮರಗಳ ತೋಟಗಳಿವೆ. ಇವು ವರ್ತಕರು ತಮ್ಮ ಸರಕಿನೊಂದಿಗೆ ನಿಲ್ಲುವ ವಿಶ್ರಾಂತಿ ಸ್ಥಳಗಳಾಗಿವೆ. ನಾನು ರೆಕಲೆಮ್[7] ನಗರದಲ್ಲಿ ಒಂದು ಮರ ನೋಡಿದೆ. ಅದರ ಕೆಳಗೆ ತಮ್ಮ ಲಾಯಗಳಲ್ಲಿ ಕ್ರಮವಾಗಿ

ನಿಲ್ಲುವಂತೆ ಮುನ್ನೂರ ಇಪ್ಪತ್ತು ಕುದುರೆಗಳನ್ನು ನಿಲ್ಲಿಸಿದೆವು. ನಾಡಿನ ತುಂಬೆಲ್ಲ ಅನೇಕ ಸಣ್ಣ ಗಿಡಗಳು ನೋಡಸಿಗುತ್ತವೆ. ಈ ರಾಜ್ಯಗಳು ಒಳ್ಳೆಯ ಸಾಗುವಳಿ ಮಾಡಿದವುಗಳು ಮತ್ತು ಬಲು ಫಲವತ್ತಾದವುಗಳು, ಮತ್ತು ಆಕಳು, ಎಮ್ಮೆ ಮತ್ತು ಕುರಿ ಮೊದಲಾದ ಜಾನುವಾರುಗಳ ವಿಪುಲತೆಯಿಂದ ಕೂಡಿವೆ. ಹಾಗೂ ಗುಡ್ಡಗಳಿಗೆ ಸೇರಿದ ಮತ್ತು ಮನೆಯಲ್ಲಿ ಬೆಳೆಸಿದ ಎರಡೂ ವಿಧದ ಪಕ್ಷಿಗಳು ಕೂಡ ಹಾಗೂ ನಮ್ಮ ಪ್ರಾಂತದಲ್ಲಿನಕಿಂತ ಹೆಚ್ಚು ವಿಪುಲವಾಗಿ, ನಮ್ಮ ಭಾಗದಲ್ಲಿ ಬಿತ್ತದ ಭತ್ತ ಮತ್ತು ಮುಸುಕಿನ ಜೋಳ, ಧಾನ್ಯಗಳು, ಅವರೆ ಮತ್ತು ಇತರ ವಿಧದ ಬೆಳೆಗಳು ಹೊಲಗಳಲ್ಲಿ ಭರಪೂರ ಇವೆ; ಅಪರಿಮಿತ ಹತ್ತಿ ಕೂಡ ಧಾನ್ಯಗಳು ದೊಡ್ಡ ಪ್ರಮಾಣದಲ್ಲಿವೆ. ಏಕೆಂದರೆ, ಮನುಷ್ಯರ ಆಹಾರಕ್ಕಾಗಿ ಬಳಸಲ್ಪಡುವುದಲ್ಲದೆ ಬೇರೆ ತರಹದ ಜವೆ ಇಲ್ಲದುದರಿಂದ ಅದನ್ನು ಕುದುರೆಗಳಿಗಾಗಿಯೂ ಬಳಸ ಲಾಗುತ್ತಿದೆ; ಮತ್ತು ಈ ನಾಡಿನಲ್ಲಿ ಗೋಧಿ ವಿಪುಲವಾಗಿದೆ. ಮತ್ತು ಅದೂ ಒಳ್ಳೆಯ ತರಗತಿಯದು. ಇಡಿ ನಾಡು ನಗರಗಳು, ಪಟ್ಟಣಗಳು ಮತ್ತು ಗ್ರಾಮಗಳಿಂದ ಸಾಂದ್ರವಾಗಿ ತುಂಬಿಕೊಂಡಿದೆ; ಅವುಗಳು ತೀರ ಬಲಿಷ್ಠವಾಗುವ ಭಯದಿಂದ ರಾಜ ಅವುಗಳನ್ನು ಮಣ್ಣಿನ ಗೋಡೆಗಳಿಂದ ಮಾತ್ರ ಸುತ್ತುಗಟ್ಟಲು ಅನುಮತಿಸಿದ್ದಾನೆ. ಆದರೆ, ಯಾವುದೊಂದು ನಗರ ತನ್ನ ನಾಡಿನ ಗಡಿಯಲ್ಲಿ ಇದ್ದರೆ ಅದು ಕಲ್ಲಿನ ಗೋಡೆಗಳನ್ನು ಹೊಂದಲು ಒಪ್ಪಿಗೆ ಕೊಡುತ್ತಾನೆ, ಆದರೆ ಪಟ್ಟಣಗಳಿಗಲ್ಲ; ಹೀಗಾಗಿ, ಅವರು ನಗರಗಳನ್ನು ದುರ್ಗಗಳನ್ನಾಗಿಸಬಹುದೆ ವಿನಹ ಪಟ್ಟಣಗಳನ್ನಲ್ಲ.

ಮತ್ತು ಈ ನಾಡೆಲ್ಲ ಸಮತಟ್ಟಾಗಿರುವುದರಿಂದ ಇಲ್ಲಿ ಗಾಳಿಗಳು ಮಿಕ್ಕ ಭಾಗಗಳಲ್ಲಿಗಿಂತ ಹೆಚ್ಚು ಬೀಸುತ್ತವೆ. ಅದು ಉತ್ಪಾದಿಸುವ ಎಣ್ಣೆ, ಬಿತ್ತಿದ ಬೀಜಗಳನ್ನು ಅನಂತರ ಒಕ್ಕುವುದರಿಂದ ಬರುತ್ತದೆ, ಮತ್ತು ಅದನ್ನವರು ತಾವು ಮಾಡುವ ಯಂತ್ರಗಳಿಂದ ಪಡೆಯುತ್ತಾರೆ. ಈ ನಾಡಿನಲ್ಲಿ ನೀರಿನ ಅಭಾವವಿದೆ. ಏಕೆಂದರೆ, ಅದು ವಿಶಾಲವಾಗಿದ್ದು ಬಹಳ ಕಡಿಮೆ ತೊರೆಗಳಿವೆ; ಮಳೆಯಾದಾಗ ನೀರು ಕೂಡಿ ಬೀಳಲು ಅವರು ಸರೋವರಗಳನ್ನು ನಿರ್ಮಿಸುತ್ತಾರೆ ಮತ್ತು ಹಾಗೆ ಮಾಡುವ ಮೂಲಕ ಅವರು ತಮ್ಮನ್ನು ಸಲಹಿಕೊಳ್ಳುತ್ತಾರೆ. ಮಳೆಯ ನೀರು ಮಾತ್ರ ಇರುವ ಮಿಕ್ಕವುಗಳಿಗಿಂತ ಊಟೆ ಇರುವ ಕೆಲವುಗಳ ಸಹಾಯದಿಂದ ಅವರು ತಮ್ಮನ್ನು ಚನ್ನಾಗಿ ಸಲಹಿಕೊಳ್ಳುತ್ತಾರೆ; ಏಕೆಂದರೆ, ನಾವು ನೋಡುವಂತೆ ಅನೇಕ ತೀರ ಬತ್ತಿಹೋಗಿರುವುದರಿಂದ ಜನರು ಅವುಗಳ ಸ್ತರಗಳಲ್ಲಿ ನಡೆದಾಡುತ್ತ ತಮ್ಮ ನಿರ್ವಹಣೆಗಾಗಿ ಸಾಕಷ್ಟು ಇರದಿದ್ದರೆ ಹೋಗಲಿ ಸ್ವಲ್ಪವಾದರೂ ನೀರು ದೊರಕಿಸಲು ತಗ್ಗು ತೋಡುತ್ತಾರೆ. ನೀರಿನ ಕೊರತೆಗೆ ಕಾರಣವೆಂದರೆ ನಮ್ಮ ಭಾಗದಲ್ಲಿ ಮತ್ತು (ಪೋರ್ತುಗೀಜ) ಭಾರತದಲ್ಲಿಯಂತೆ ಇಲ್ಲಿ ಚಳಿಗಾಲವಿರದೆ ಒಂದು ವರ್ಷ ಇನ್ನೊಂದಕ್ಕಿಂತ ಘೋರವಾದ ಸಿಡಿಲು ಮಿಂಚಿನ ಬಿರುಗಾಳಿ ಮಾತ್ರವಿರುವುದು.

ಈ ಸರೋವರಗಳಲ್ಲಿ ವಿಶೇಷತಃ ಊಟೆಗಳು ಇರದವುಗಳಲ್ಲಿ, ನೀರು ಬಹುಮಟ್ಟಿಗೆ ರಾಡಿಯಾಗಿರುತ್ತದೆ. ಅದಕ್ಕೆ ಕಾರಣವೆಂದರೆ ಈ ನಾಡಿನಲ್ಲಿರುವ ಪ್ರಬಲಗಾಳಿ ಮತ್ತು ಧೂಳು ನೀರು ತಿಳಿಯಾಗಲು ಬಿಡುವುದೇ ಇಲ್ಲ. ಇದೂ ಅಲ್ಲದೆ, ಅವುಗಳಲ್ಲಿ ನೀರು ಕುಡಿಯುವ ಎಮ್ಮೆಗಳು, ಆಕಳು, ಎತ್ತುಗಳು ಮತ್ತು ಇತರ ಚಿಕ್ಕ ಜಾನುವಾರುಗಳ ಅಧಿಕ ಸಂಖ್ಯೆ. ಏಕೆಂದರೆ, ಈ ನಾಡಿನಲ್ಲಿ ಅವರು ಎತ್ತುಗಳನ್ನು ಅಥವಾ ಆಕಳುಗಳನ್ನು ಕೊಲ್ಲುವುದಿಲ್ಲ ಎಂಬುದನ್ನು ತಿಳಿದಿರಬೇಕು; ಎತ್ತುಗಳು ಹೊರೆ ಹೊರುವ ಪ್ರಾಣಿಗಳು ಮತ್ತು ಹೇಸರಗತ್ತೆಗಳಂತಿರುತ್ತವೆ; ಇವುಗಳು ಅವರ ಎಲ್ಲ ಸರಕುಗಳನ್ನು ಹೊತ್ತೊಯ್ಯುತ್ತವೆ. ಅವರು ಆಕಳುಗಳನ್ನು ಪೂಜಿಸುತ್ತಾರೆ ಮತ್ತು ಅವುಗಳನ್ನು ಕಲ್ಲಿನಲ್ಲಿ ಕಟ್ಟಿದ ದೇವಸ್ಥಾನಗಳಲ್ಲಿ ಇಡುತ್ತಾರೆ. ಮತ್ತು ಹೋರಿಗಳನ್ನು ಕೂಡ; ಈ ದೇವಸ್ಥಾನಗಳಿಗೆ ದಾನ ಮಾಡಿದ ಅನೇಕ ಹೋರಿಗಳಿದ್ದು ಅವು ಊರು ಸುತ್ತಿದರೂ ಯಾರೂ ಅವುಗಳಿಗೆ ತೊಂದರೆ ಅಥವಾ ಹಾನಿ ಮಾಡುವದಿಲ್ಲ. ಮೇಲಾಗಿ, ಈ ನಾಡಿನಲ್ಲಿ ಕತ್ತೆಗಳುಂಟು, ಆದರೆ ಅವು ಚಿಕ್ಕವಿದ್ದು ಅವರು ಅದನ್ನು ಚಿಕ್ಕ ಕೆಲಸಗಳಿಗಾಗಿ ಉಪಯೋಗಿಸುತ್ತಾರೆ; ಬಟ್ಟೆ ಒಗೆಯುವವರು ಅವುಗಳ ಮೇಲೆ ಬಟ್ಟೆ ಹೇರುತ್ತಾರೆ ಮತ್ತು ಅವುಗಳನ್ನು ಬೇರೆ ಯಾವುದಕ್ಕಿಂತ ಇದಕ್ಕೇ ಹೆಚ್ಚಾಗಿ ಉಪಯೋಗಿಸುತ್ತಾರೆ. ನರಸಿಂಗನ ಈ ರಾಜ್ಯ ಮುನ್ನೂರು ಗ್ರಾಬಗಳ ಕರಾವಳಿ ಹೊಂದಿದೆಯೆಂಬುದನ್ನು ತಿಳಿದಿರಬೇಕು. ಪ್ರತಿ ಗ್ರಾಬ ಒಂದು ಹರದಾರಿ ಇರುತ್ತದೆ. ಇವುಗಳು ನಾನೀಗಾಗಲೆ ಹೇಳಿರುವ ಬೆಟ್ಟ ಸಾಲಿನ (ಸೆರಾ) ಉದ್ದಕ್ಕೂ ಈ ರಾಜ್ಯಕ್ಕೆ ಸೇರಿರುವ ಬಲ್ಲಗತೆ ಮತ್ತು ಚಾರಮಾಬಡೆಲ್[8] ತಲಪುವವರೆಗೆ ಇವೆ: ಮತ್ತು ಅಗಲದಲ್ಲಿ ಅದು ಒಂದುನೂರ ಅರವತ್ತುನಾಲ್ಕು ಗ್ರಾಬಗಳಿವೆ; ಪ್ರತಿ ದೊಡ್ಡ ಗ್ರಾಬ ನಮ್ಮ ಎರಡು ಹರದಾರಿ ಗಳಷ್ಟಿರುವುದರಿಂದ ಅದು ಉದ್ದಕ್ಕೆ ಆರುನೂರು ಹರದಾರಿಗಳ ಕರಾವಳಿ ಹೊಂದಿದೆ ಮತ್ತು ಅಗಲಕ್ಕೆ ಮುನ್ನೂರ ನಲವತ್ತೆಂಟು ಹರದಾರಿಗಳಿವೆ....ಬಟಕಲ್ಲದಿಂದ ಒರಿಯಾ[9] ರಾಜ್ಯದವರೆಗೆ ಅಡ್ಡವಾಗಿ.

ಮತ್ತು ಈ ರಾಜ್ಯ ಬೆಂಗಾಲದ ಎಲ್ಲ ಭೂಪ್ರದೇಶದೊಂದಿಗೆ ಮುಂದರಿಯುತ್ತದೆ. ಮತ್ತು ಆ ಬದಿಗೆ ಪೂರ್ವಕ್ಕಿರುವ ಒರಿಯಾ ರಾಜ್ಯದೊಂದಿಗೆ ಮತ್ತು ಆಚೆಗಿನ ಉತ್ತರ ಬದಿಗೆ ಇಡಲ್‌ಕಾಬ[10] ಮತ್ತು ಒರ್ಜುಮೆಲುಕೊ[11] ಹೊಂದಿದ ಪ್ರದೇಶ ಗಳು ಸೇರಿರುವ ದಕ್ಷನ ರಾಜ್ಯದೊಂದಿಗೆ. ಗೋವಾ ಈ ಇಡಲ್‌ಕಾಬನೊಂದಿಗೆ ಯುದ್ಧನಿರತವಾಗಿದೆ. ಏಕೆಂದರೆ, ಆ ನಗರ ಅವನದಾಗಿತ್ತು ಮತ್ತು ನಾವು ಅದನ್ನು ಅವನಿಂದ ತೆಗೆದುಕೊಂಡಿದ್ದೇವೆ.

ಮತ್ತು ನಾನು ಮೇಲೆ ಹೇಳಿರುವ ಈ ಒರಿಯಾ ರಾಜ್ಯ ಬೆಂಗಾಲದೊಂದಿಗೆ ಮುಂದರಿಯುತ್ತಿದ್ದುದರಿಂದ ಮತ್ತು ಅದರೊಂದಿಗೆ ಯುದ್ಧದಲ್ಲಿ ತೊಡಗಿರುವುದರಿಂದ

ನರಸಿಂಗನ ರಾಜ್ಯಕ್ಕಿಂತ ಬಲು ದೊಡ್ಡದಾಗಿದೆ; ಮತ್ತು ಅದು ಎಲ್ಲ ಪೆಗು ರಾಜ್ಯದೊಂದಿಗೆ ಮುಂದರಿಯುತ್ತದೆ ಮತ್ತು ಮಲ್ಲಕ ಸಮುದ್ರದೊಂದಿಗೆ. ಅದು ಕ್ಯಾಂಬೆ ರಾಜ್ಯವನ್ನು ಮತ್ತು ದಕ್ಷನ ರಾಜ್ಯವನ್ನು ತಲುಪುತ್ತದೆ; ಮತ್ತು ಅದು ಪರ್ಶಿಯಾದವರೆಗೆ ಹಬ್ಬಿರುವುದೆಂದು ಅವರು ನನಗೆ ಅತ್ಯಂತ ಖಚಿತವಾಗಿ ಹೇಳಿದರು. ಅದರ ಜನತೆ ತಿಳಿಬಣ್ಣದ್ದು ಇದೆ ಮತ್ತು ಗಂಡಸರು ಒಳ್ಳೆಯ ಮೈಕಟ್ಟುಳ್ಳವರು. ಅದರ ರಾಜನಲ್ಲಿ ಬಹಳ ಸಂಪತ್ತು, ಅನೇಕ ಯೋಧರು ಮತ್ತು ಅನೇಕ ಆನೆಗಳು ಇವೆ. ಏಕೆಂದರೆ, ಈ ನಾಡಿನಲ್ಲಿ ಇವುಗಳು ಅಧಿಕ ಸಂಖ್ಯೆಯಲ್ಲಿವೆ. (ನನ್ನ ಬಾತಮಿದಾರರಿಗೆ) ಇದು ಚನ್ನಾಗಿ ಗೊತ್ತಿದೆ. ಮತ್ತು ಅವನಿಗಿಂತ ಶ್ರೇಷ್ಟರಾಜ ಬೇರೆ ಇಲ್ಲ ಎಂದು ಅವರೆನ್ನುತ್ತಾರೆ. ಅವನು ಕಾಡು.

ನಮ್ಮ ವಿಷಯಕ್ಕೆ ಹಿಂದಿರುಗುತ್ತ, ಪದಬಾಹುಳ್ಯ ತೊರೆಯಲೋಸುಗ ನರಸಿಂಗ ರಾಜ್ಯದ ನಗರಗಳಲ್ಲಿನ, ಪಟ್ಟಣಗಳಲ್ಲಿನ, ಮತ್ತು ಗ್ರಾಮಗಳಲ್ಲಿನ ಪರಿಸ್ಥಿತಿಯನ್ನು ಇಲ್ಲಿ ಉಲ್ಲೇಖಿಸುವುದಿಲ್ಲೆಂದು ನಾನು ಹೇಳುತ್ತೇನೆ; ಬೇರೆಲ್ಲಿಯೂ ನೋಡಸಿಗಲು ವಿರಳವಾಗಿರುವಂತಹ ಸ್ಮಾರಕ ಹೊಂದಿದ ದರ್ಚ[12] ನಗರದ ಬಗೆಗೆ ಮಾತ್ರ ಹೇಳುವೆ. ನಾನು ಮೇಲೆ ಹೇಳಿರುವ ಕಾರಣದಿಂದಾಗಿ ಕಲ್ಲಿನದಾಗಿರದಿದ್ದರೂ ಒಳ್ಳೆಯ ಕೋಟೆಗೋಡೆಯನ್ನು ದರ್ಚ ನಗರ ಹೊಂದಿದೆ. (ಪೋರ್ತುಗೀಜ) ಭಾರತದ ಕಡೆಯಿರುವ ಪಶ್ಚಿಮ ಬದಿಗೆ ಅದು ಬಲು ಸುಂದರವಾದ ನದಿಯಿಂದ ಸುತ್ತುವರಿಯಲ್ಪಟ್ಟಿದೆ ಮತ್ತು ಆಚೆಗೆ ನಾಡಿನ ಪೂರ್ವ ಒಳಬದಿ ಪೂರ್ತಿ ಬಯಲು ಇದೆ. ಮತ್ತು ಗೋಡೆಗುಂಟ ಅದರ ಕಂದಕವಿದೆ. ಈ ದರ್ಚದಲ್ಲಿ ಒಂದು ಪಗೋಡಾ ಇದೆ: ನಾನು ಹೇಳುವ ಸ್ಮಾರಕ ಅದೇ. ಅದು ಎಷ್ಟು ಸುಂದರವಾಗಿದೆ ಯೆಂದರೆ ಅದರಷ್ಟು ಒಳ್ಳೆಯ ಇನ್ನೊಂದು ದೂರ ದೂರದಲ್ಲೂ ಸಿಕ್ಕದು. ಅದು ಒಂದೇ ಕಲ್ಲಿನಲ್ಲಿ ಮಾಡಿದ ಗೋಳಾಕಾರದ ಗುಡಿಯೆಂಬುದನ್ನು ನೀವು ತಿಳಿಯಬೇಕು. ಕಣ್ಣೆಲೆಯ ಪ್ರತಿಯೊಂದು ಕಲೆಯಿಂದೊಡಗೂಡಿರುವ ಅವರ ದ್ವಾರ ಕೂಡು ಬಡಗಿ ಕೆಲಸದ ರೀತಿಯದಿದೆ. ಪ್ರಸ್ತುತ ಕಟ್ಟಡದಲ್ಲಿ ಅನೇಕ ಆಕೃತಿಗಳಿವೆ. ಅವು ಕಲ್ಲಿನಿಂದ ಒಂದು ಮೊಳದಷ್ಟು ಹೊರಚಾಚಿರುವುದರಿಂದ ಅವುಗಳ ಎಲ್ಲ ಮಗ್ಗಲುಗಳನ್ನೂ ನೋಡಬಹುದು. ಮುಖಗಳೂ ಮತ್ತು ಮಿಕ್ಕೆಲ್ಲ ಭಾಗಗಳು ಎಷ್ಟು ಚನ್ನಾಗಿ ಕೆತ್ತಲ್ಪಟ್ಟವೆಯೆಂದರೆ ಅದಕ್ಕಿಂತ ಉತ್ತಮವಾಗಿ ಮಾಡಲು ಸಾಧ್ಯವಿರಲಿಲ್ಲ. ಮತ್ತು ಪ್ರತಿಯೊಂದೂ ತನ್ನ ಜಾಗದಲ್ಲಿ ಎಲೆಗಳಿಂದ ಆವರಿಸಲ್ಪಟ್ಟಿದೆಯೇನೊ ಎಂಬಂತೆ ನಿಂತಿದೆ: ಮತ್ತು ಮೇಲೆ ರೋಮನ್ ಶೈಲಿಯದಿರುವ ಅದನ್ನು ಎಷ್ಟು ಚನ್ನಾಗಿ ಮಾಡಿದ್ದಾರೆಂದರೆ ಅದನ್ನು ಉತ್ತಮಗೊಳಿಸಲು ಸಾಧ್ಯವಿಲ್ಲ. ಇದಲ್ಲದೆ, ಎಲ್ಲ ಕಲ್ಲಿನಿಂದ ಮಾಡಿದ ಕಂಬಗಳ ಮೇಲೆ ನಿಂತಿರುವ ಚಿಕ್ಕ ದ್ವಾರಮಂಟಪವಿದೆ. ಅವುಗಳ ಪೀಠಗಳೊಂದಿಗೆ[13] ಕಂಬಗಳನ್ನು ಎಷ್ಟು ಉತ್ತಮವಾಗಿ

ಕಡೆಯಲಾಗಿದೆಯೆಂದರೆ ಇಟಲಿಯಲ್ಲಿ ಮಾಡಿರುವಂತೆ ಭಾಸವಾಗುತ್ತವೆ ; ಎಲ್ಲ ಅಡ್ಡ ಪಟ್ಟಿಗಳು ಮತ್ತು ತೊಲೆಗಳು ಅದೇ ಕಲ್ಲಿನವಿದ್ದು ಯಾವುದೇ ಹಲಗೆಗಳನ್ನಾಗಲಿ ಕಟ್ಟಿಗೆಯನ್ನಾಗಲಿ ಬಳಸಲಾಗಿಲ್ಲ ಮತ್ತು ಹೊರಗೂ ಒಳಗೂ ನೆಲವನ್ನೆಲ್ಲ ಅದೇ ಕಲ್ಲಿನಿಂದ ಹೊಂದಿಸಲಾಗಿದೆ. ಮತ್ತು ಈ ಪಗೋಡಾ ದೇವಾಲಯವಿರುವಷ್ಟು ಸುತ್ತಲೂ ಅದೇ ಕಲ್ಲಿನಿಂದ ಮಾಡಿದ ಜಾಳಂದರದಿಂದ ಆವರಿಸಲ್ಪಟ್ಟಿದೆ. ಜಾಳಂದರವನ್ನು ಸುತ್ತುವರಿದಿರುವ ಇನ್ನೊಂದು ಬಲು ಭದ್ರ ಗೋಡೆ ನಗರದ ಗೋಡೆಗಿಂತ ಉತ್ತಮವಾಗಿದೆ. ಏಕೆಂದರೆ, ಅದನ್ನು ಗಟ್ಟಿಯಾದ ಕಲ್ಲಿನಿಂದ ಕಟ್ಟಲಾಗಿದೆ. ಅದಕ್ಕೆ ಬಲು ವಿಶಾಲವಾದ ಮತ್ತು ಸುಂದರವಾದ ಮೂರು ಪ್ರವೇಶ ದ್ವಾರಗಳಿವೆ. ಪೂರ್ವಕ್ಕೆ ಪಗೋಡದ ಬಾಗಿಲಿಗೆ ಇದಿರಾಗಿರುವ ಬದಿಯ ಪ್ರವೇಶ ದ್ವಾರದಲ್ಲಿ ಚಿಕ್ಕ ಮತ್ತು ಎತ್ತರವಲ್ಲದ ಮೊಗಸಾಲೆಗಳಂಥ ಕಟ್ಟಡಗಳಿವೆ. ಅವುಗಳಲ್ಲಿ ಜೋಗಿಗಳು[14] ಕುಳಿತುಕೊಳ್ಳುತ್ತಾರೆ. ಕೆಂಪು ವರ್ಣದ ಇತರ ಚಿಕ್ಕ ಪಗೋಡಾಗಳಿರುವ ಈ ಆವರಣದಲ್ಲಿ ಹಡಗಿನ ಪಟಸ್ತಂಭದಂತಿರುವ ಕಲ್ಲಿದೆ. ಪೀಠ ಚತುರ್ಭುಜಾಕೃತಿಯದಿದ್ದು ಮತ್ತು ಅಲ್ಲಿಂದ ಮೇಲಕ್ಕೆ ಅಷ್ಟಭುಜಾಕೃತಿಯದಿದ್ದು ಅದು ಬಯಲಿನಲ್ಲಿ ನಿಂತಿದೆ. ಅದು ನನಗೆ ಆಶ್ಚರ್ಯವುಂಟುಮಾಡಲಿಲ್ಲ. ಏಕೆಂದರೆ, ನಾನು ರೋಮ್‌ನ ಸೇಂಟ್ ಪೀಟರ್ಸ್‌ನ ಇಷ್ಟೇ ಅಥವಾ ಇನ್ನೂ ಎತ್ತರವಿರುವ ಶಿಖರವನ್ನು ನೋಡಿರುವೆ.[15]

ಈ ಪಗೋಡಾಗಳು ಅವರು ಪ್ರಾರ್ಥಿಸುವ ಮತ್ತು ಮೂರ್ತಿಗಳನ್ನಿಡುವ ಕಟ್ಟಡಗಳು, ಮೂರ್ತಿಗಳು ನಾನಾ ವಿಧವಾಗಿವೆ : ಪುರುಷರು ಮತ್ತು ಸ್ತ್ರೀಯರ ಹೋರಿ ಮತ್ತು ಮಂಗಗಳ ಆಕೃತಿಗಳು. ಅವರು ಪೂಜಿಸುವ ಇನ್ನು ಕೆಲವು ಬರಿ ದುಂಡನೆಯ ಕಲ್ಲುಗಳು ಮಾತ್ರ. ದರ್ಜದ ಈ ದೇವಾಲಯದಲ್ಲಿ ಮಾನವನ ದೇಹ, ದಂತಗಳುಳ್ಳ ಆನೆಯ ಮುಖ, ಪ್ರತಿ ಮಗ್ಗಲಿಗೆ ಮೂರು ತೋಳು, ಆರು ಕೈಗಳು ಇರುವ ಮೂರ್ತಿಯಿದೆ.[16] ಈ ತೋಳುಗಳಲ್ಲಿ ನಾಲ್ಕು ಈಗಾಗಲೆ ಉದುರಿದ್ದು ಎಲ್ಲವೂ ಕಳಚಿ ಬಿದ್ದಾಗ ಪ್ರಪಂಚ ನಾಶವಾಗುತ್ತದೆಂದು ಅವರು ಹೇಳುತ್ತಾರೆ. ಹೀಗಾಗುವದೆಂದು ಅವರು ಪೂರ್ತಿ ನಂಬಿದ್ದು ಅದನ್ನು ಪ್ರವಾದನೆಯೆಂದು ಗ್ರಹಿಸುತ್ತಾರೆ. ಆ ಮೂರ್ತಿಗೆ ದಿನಾಲು ಅನ್ನ ಇಕ್ಕುತ್ತಾರೆ. ಏಕೆಂದರೆ, ಅದು ಉಣ್ಣುತ್ತದೆಂದು ಅವರು ಹೇಳುತ್ತಾರೆ. ಅದು ಉಣ್ಣುವಾಗ ಆ ದೇವಾಲಯಕ್ಕೆ ಸೇರಿದ ಮಹಿಳೆಯರು ನೃತ್ಯಗೈಯುತ್ತಾರೆ. ಮತ್ತು ಇವರಿಗೆ ಜನಿಸಿದ ಎಲ್ಲ ಮಹಿಳೆಯರೂ ದೇವಾಲಯಕ್ಕೆ ಸೇರುತ್ತಾರೆ. ಈ ಮಹಿಳೆಯರು ಸಡಿಲು ಶೀಲವುಳ್ಳವರಾಗಿದ್ದು ನಗರದಲ್ಲಿರುವ ಅತ್ಯುತ್ತಮ ಓಣಿಗಳಲ್ಲಿ ವಾಸಿಸುತ್ತಾರೆ. ಅವರ ಎಲ್ಲ ನಗರಗಳಲ್ಲೂ ಇದೇ ರೀತಿ ಇರುತ್ತದೆ ಮತ್ತು ಅವರಿಗೆ ಶ್ರೇಷ್ಠ ಮನೆಗಳ ಸಾಲುಗಳಿರುತ್ತವೆ. ಅವರು ಬಹಳ ಪ್ರತಿಷ್ಠಿತರಿದ್ದು ದಳವಾಯಿಗಳ ಉಪಪತ್ನಿಗಳಾಗಿರುವ ಗೌರವಾನ್ವಿತರ

ವರ್ಗಕ್ಕೆ ಸೇರಿದವರೆಂದು ಪರಿಗಣಿಸಲಾಗುತ್ತದೆ. ಯಾವುದೆ ಗೌರವಾನ್ವಿತ ವ್ಯಕ್ತಿ ಯಾವುದೇ ದೂಷಣೆಗೊಳಗಾಗದೆ ಅವರ ಮನೆಗಳಿಗೆ ಹೋಗಬಹುದು. ಈ ಮಹಿಳೆ ಯರಿಗೆ ರಾಜನ ಪತ್ನಿಯರ ಸಮಕ್ಷಮಕ್ಕೂ ಪ್ರವೇಶಿಸಲು (ಅನುಮತಿಸಲಾಗಿರುತ್ತದೆ) ಅವರು ಅವರೊಂದಿಗೆ ಇರಬಹುದು ಮತ್ತು ವೀಳ್ಯದೆಲೆ ಸೇವಿಸಬಹುದು. ಹೀಗೆ ಮಾಡಲು ಎಂಥ ಉನ್ನತ ದರ್ಜೆಯ ವ್ಯಕ್ತಿಗೂ ಸಾಧ್ಯವಿಲ್ಲ. ಈ ವೀಳ್ಯದೆಲೆ ನಮ್ಮ ದೇಶದ ಮೆಣಸು ಅಥವಾ ಐವಿ ತರಹದ ಎಲೆಯುಳ್ಳ ಸಸ್ಯ : ಅವರು ಈ ಎಲೆ ಯನ್ನು ಯಾವಾಗಲೂ ತಿನ್ನುತ್ತಾರೆ ಮತ್ತು ಅಡಿಕೆ ಎನ್ನುವ ಇನ್ನೊಂದು ಕಾಯಿ ಯೊಂದಿಗೆ ಯಾವಾಗಲೂ ಬಾಯಿಯಲ್ಲಿ ಇಟ್ಟುಕೊಳ್ಳುತ್ತಾರೆ. ಅದು ಸ್ವಲ್ಪ ಮೆಡ್ಲರ್‌ನಂತಿದ್ದು ಗಟ್ಟಿಯಾಗಿರುತ್ತದೆ ಮತ್ತು ಪರಿಮಳಕ್ಕೆ ಒಳ್ಳೆಯದಾಗಿರುತ್ತದೆ ಮತ್ತು ಇತರ ಅನೇಕ ಗುಣಗಳುಳ್ಳದ್ದಿರುತ್ತದೆ. ನಮ್ಮಂತೆ ಉಣ್ಣಲಾರದವರಿಗೆ ಅದು ಶ್ರೇಷ್ಠ ಏರ್ಪಾಡು. ಅವರಲ್ಲಿ ಕೆಲವರು ಮಾಂಸ ಸೇವಿಸುತ್ತಾರೆ. ಗೋಮಾಂಸ ಮತ್ತು ಹಂದಿಯ ಮಾಂಸವನ್ನು ಬಿಟ್ಟು ಉಳಿದ್ದೆಲ್ಲ ತರಹದ್ದನ್ನು ತಿನ್ನುತ್ತಾರೆ. ಆದರೂ ಸಹ, ಇಡಿ ದಿನ ಈ ವೀಳ್ಯದೆಲೆ ಮೆಲ್ಲುವುದನ್ನು ಅವರು ಬಿಡರು.

ಆಮೇಲೆ ಈ ದರ್ಗ ನಗರದಿಂದ ಹದಿನೆಂಟು ಹರದಾರಿ ದೂರವಿರುವ ನರಸಿಂಗ ರಾಜ್ಯದ ರಾಜಧಾನಿ ಹಾಗೂ ರಾಜ ಯಾವಾಗಲೂ ಅಲ್ಲಿಯೆ ವಾಸಿಸುವ ಬೀಸ್ನಗ ನಗರದ ಕಡೆಗೆ ಹೋಗುವಾಗ ಅನೇಕ ನಗರಗಳು ಮತ್ತು ಗೋಡೆಯುಳ್ಳ ಹಳ್ಳಿಗಳಿವೆ. ಮತ್ತು ಬೀಸ್ನಗ ನಗರ ತಲುಪುವ ಎರಡು ಹರದಾರಿ ಮುಂಚೆ ನಗರವನ್ನು ಪ್ರವೇಶಿಸಲು ಕಣಿವೆ ಮಾರ್ಗಗಳುಳ್ಳ ಉನ್ನತ ಬೆಟ್ಟ ಸಾಲುಗಳಿವೆ. ಇವುಗಳನ್ನು ಹೆಬ್ಬಾಗಿಲುಗಳೆಂದು ಕರೆಯಲಾಗುತ್ತದೆ. ಇವುಗಳ ಮೂಲಕವೆ ಪ್ರವೇಶಿಸಬೇಕು, ಏಕೆಂದರೆ ಇವುಗಳ ಮೂಲಕವಲ್ಲದೆ ಬೇರೆ ದಾರಿಯಿಲ್ಲ. ಈ ಬೆಟ್ಟಸಾಲು ಇಪ್ಪತ್ತುನಾಲ್ಕು ಹರಿದಾರಿಗಳ ಆವರ್ತನದಿಂದ ನಗರವನ್ನು ಸುತ್ತುವರಿಯುತ್ತದೆ ಮತ್ತು ಈ ಸಾಲಿನೊಳಗೆ ಅದನ್ನು ಸಮೀಪದಿಂದ ಸುತ್ತುವರಿಯುವ ಮಿಕ್ಕವು ಇವೆ. ಈ ಬೆಟ್ಟ ಸಾಲುಗಳಿಗೆ ಯಾವುದೆ ಸಮತಲ ಭೂಮಿ ಹತ್ತುವಲ್ಲಿಲ್ಲ ಅವು ಅದನ್ನು ಬಲು ಭದ್ರ ಗೋಡೆಯೊಂದಿಗೆ ಅಡ್ಡ ಹಾಯುತ್ತವೆ. ಇದರಿಂದಾಗಿ ಮೊದಲ ಸಾಲಿ ನಲ್ಲಿರುವ ಮತ್ತು ನಗರಕ್ಕೆ ಪ್ರವೇಶ ಮಾರ್ಗಗಳಾಗಿರುವ ದ್ವಾರಗಳ ಮೂಲಕ ದಾರಿ ಗಳು ಹಾಯುವ ಸ್ಥಳಗಳನ್ನು ಹೊರತುಪಡಿಸಿ ಗುಡ್ಡಗಳು ಪೂರ್ತಿ ಮುಚ್ಚಿವೆ. ಇಂಥ ಸ್ಥಳಗಳಲ್ಲಿ ಕೆಲವು ಮಂದಿ ಸಂರಕ್ಷಿರಬಹುದಾದ ಸಣ್ಣ ತಗ್ಗುಗಳು (ಅಥವಾ ಗುಹೆ ಗಳು)[17] ಇವೆ: ಈ ಬೆಟ್ಟ ಸಾಲುಗಳು ನಗರದ ಒಳಭಾಗದವರಿಗೆ ಸಾಗುತ್ತವೆ. ಇವೆಲ್ಲ ಸುತ್ತುಗಟ್ಟುಳ್ಳ ಪ್ರದೇಶಗಳ ನಡುವೆ ಭತ್ತ ಬೆಳೆಯುವ ಬಯಲುಗಳು ಮತ್ತು ಕಣಿವೆಗಳಿವೆ. ಲೆಟ್ಯೂಸ್ ಮತ್ತು ಕ್ಯಾಬೆಜುಗಳು ಮಾತ್ರವಲ್ಲದೆ ಪೋರ್ತುಗಾಲಿನಲ್ಲಿ ಯಂತೆ ಕಿತ್ತಲೆ, ನಿಂಬೆ, ಜಂಬೀರ, ಮೂಲಂಗಿ ಮತ್ತಿತರ ತೋಟೋತ್ಪನ್ನಗಳುಳ್ಳ

ತೋಟಗಳಿವೆ. ಈ ಬೆಟ್ಟ ಸಾಲುಗಳ ಮಧ್ಯೆ ಅನೇಕ ಸರೋವರಗಳಿದ್ದು ಅವುಗಳಿಂದ ನೇಲೆ ಹೇಳಿರುವ ಬೆಳೆಗಳಿಗೆ ನೀರುಣಿಸುತ್ತಾರೆ. ಮತ್ತು ಇವೆಲ್ಲ ಬೆಟ್ಟ ಸಾಲುಗಳಲ್ಲಿ ತೀರ ಚಿಕ್ಕವನ್ನು ಬಿಟ್ಟರೆ ಅರಣ್ಯಗಳು ಇಲ್ಲವೆ ಕುರುಚಲು ಗಿಡಗಳ ಗುಂಪುಗಳಾಗಲಿ ಹಸಿರಾದ ಇನ್ನಾವುದಾಗಲಿ ಇಲ್ಲ. ಈ ಗುಡ್ಡಗಳಾದರೊ ಎಂದೂ ಅತ್ಯಂತ ವಿಚಿತ್ರವಾಗಿವೆ. ಅವುಗಳು ಬಿಳಿಗಲ್ಲಿನವಾಗಿದ್ದು ಅತ್ಯಂತ ಅಸದೃಶ ರೀತಿಯಲ್ಲಿ ಕಲ್ಲು ದಿಮ್ಮಿಗಳನ್ನು ಒಂದರ ಮೇಲೊಂದು ಪೇರಿಸಿಟ್ಟಂತಿದೆ. ಹಾಗಾಗಿ, ಅವು ಹವೆಯಲ್ಲಿ ನಿಂತಿರುವಂತೆ ಮತ್ತು ಒಂದಕ್ಕೊಂದು ಕೂಡಿಲ್ಲವೆಂಬಂತೆ ಭಾಸವಾಗುತ್ತದೆ. ಮತ್ತು ನಗರ ಈ ಬೆಟ್ಟಗಳ ಮಧ್ಯದಲ್ಲಿದ್ದು ಅವುಗಳಿಂದ ಸಂಪೂರ್ಣವಾಗಿ ಸುತ್ತುವರಿಯಲ್ಪಟ್ಟಿದೆ.

ಬೆಟ್ಟಸಾಲುಗಳು ದಖಿನ್[18] ರಾಜ್ಯದವರೆಗೂ ತಲುಪುತ್ತವೆ ಮತ್ತು ಇಡಲ್ ಸಾಒನ ರಾಜ್ಯದ ಹಾಗೂ ಹಿಂದೆ ನರಸಿಂಗನ ರಾಜ್ಯಕ್ಕೆ ಸೇರಿದ ರಾಚೋಲ ಎಂಬ ನಗರದ ಗಡಿಯವರೆಗೂ ಹಬ್ಬಿವೆ. ಆ ನಗರದ ಸಲುವಾಗಿ ಬಹಳ ಯುದ್ಧವಾಗಿ ಈ ರಾಜ ಅದನ್ನು ಇಡಲ್‌ಸಾಒನಿಂದ ತೆಗೆದುಕೊಂಡ. ಹೀಗಾಗಿ ಈ ಬೆಟ್ಟ ಸಾಲುಗಳು ಒಂದು ರೀತಿಯಲ್ಲಿ (ಇವೆರಡು ರಾಜ್ಯಗಳು) ಎಂದೂ ಒಂದಾಗೂಡದೆ ಯಾವಾಗಲೂ ಯುದ್ಧದಲ್ಲಿ ತೊಡಗಿರಲು ಕಾರಣವಾಗಿವೆ. ಒರಿಯಾ ಕಡೆಗೂ ಬೆಟ್ಟಸಾಲುಗಳಿವೆ. ಆದರೆ, ನಮ್ಮವುಗಳಂತೆ ಕುರುಚಲು ಗಿಡಗಳು ಮತ್ತು ಪೊದೆಗಳ ಚಿಕ್ಕ ಗುಂಪುಗಳಿರುವುದರಿಂದ ಅವು ಇವುಗಳಿಗಿಂತ ಭಿನ್ನವಾಗಿವೆ. ಈ ಬೆಟ್ಟ ಸಾಲುಗಳ ಎತ್ತರ ಕಡಿಮೆಯಿದ್ದು ಅವುಗಳ ಮಧ್ಯೆ ದೊಡ್ಡ ಬಯಲುಗಳಿವೆ. ಇವೆರಡು ರಾಜ್ಯಗಳ ತೀರ ಪೂರ್ವ ಅಂಚಿಗೆ ನಾಡು ಎಲ್ಲೂ ಕಾಣದಂಥ ಅತ್ಯಂತ ಸಿಬಿಡವಾದ ಕುರುಚಲು ಅಡವಿಯಿಂದ ತುಂಬಿದೆ ಎಂಬುದನ್ನು ಅರಿತಿರಬೇಕು. ಅದರಲ್ಲಿ ದೊಡ್ಡ ಪ್ರಾಣಿಗಳಿವೆ ಮತ್ತು (ಇದು) ಎಂಥ ದುರ್ಗವಾಗದೆಯೆಂದರೆ ಅದು ಎರಡೂ ಮಗ್ಗಲುಗಳನ್ನು ಸಂರಕ್ಷಿಸುತ್ತದೆ. ಅದು ಒಂದು ರಾಜ್ಯದಿಂದ ಇನ್ನೊಂದಕ್ಕೆ ಹೋಗುವ ಕಣಿವೆ ಮಾರ್ಗಗಳನ್ನು ಹೊಂದಿದೆ. ಈ ಕಣಿವೆ ಮಾರ್ಗಗಳ ಗಡಿಯಲ್ಲಿ ನರಸಿಂಗದ ರಾಜ ಕೆಲವು ಯೋಧರೊಂದಿಗೆ ಒಬ್ಬ ದಳವಾಯಿಯನ್ನು ಇಟ್ಟಿದ್ದಾನೆ ಮತ್ತು (ಪೋರ್ತುಗೀಜ) ಭಾರತದ ಬದಿಗೆ ನಾನು ಹೇಳಿದುದನ್ನು ಹೊರತುಪಡಿಸಿ ಅವನು ಯಾವ ಸೈನ್ಯವನ್ನೂ ಇರಿಸಿಲ್ಲ.

ಈಗ ಮೊದಲ ಸಾಲಿನ ದಿದ್ವಾರಗಳ ಬಗೆಗೆ ನಾನು ಹೇಳುವುದೇನೆಂದರೆ ಪಶ್ಚಿಮಕ್ಕೆ ಮುಖ್ಯ ಹಾಗೂ ಗೋವಾದಿಂದ ಬರುವವರು ಹಾಯುವ ಹೊರ ಬಾಗಿಲಾಗಿರುವುದರ ಪ್ರವೇಶದಲ್ಲಿ ಈ ರಾಜ ಅದರೊಳಗೆ ಗೋಡೆ ಹಾಗೂ ಗೋಪುರಗಳಿಂದ ಬಲಪಡಿಸಲಾದ ಬಲವಾದ ನಗರವನ್ನು[19] ಕಟ್ಟಿದ್ದಾನೆ ಮತ್ತು ದ್ವಾರಗಳ ಹೊರ ಬಾಗಿಲುಗಳು

ಗೋಪುರಗಳನ್ನು ಹೊಂದಿದ್ದು ಬಲು ಗಟ್ಟಿಯಾಗಿವೆ. ಈ ಗೋಡೆಗಳು ಇತರ ನಗರಗಳ ಗೋಡೆಗಳಂತಿರದೆ ಯಾವ ಪ್ರದೇಶದಲ್ಲೂ ಕಾಣಸಿಗದಂತಹ ಗಟ್ಟಿ ಕಲ್ಲು ಕಟ್ಟಡವಾಗಿವೆ, ಮತ್ತು ಒಳಗಡೆ ಸಪಾಟಾದ ಮಾಳಿಗೆಗಳುಳ್ಳ ಅವೇ ಮಾದರಿಯ ಕಟ್ಟಡಗಳ ಅತಿ ಸುಂದರ ಸಾಲುಗಳಿವೆ. ಇದರಲ್ಲಿ ಅನೇಕ ವರ್ತಕರು ವಾಸವಾಗಿದ್ದಾರೆ ಮತ್ತು ಅದು ಬಹಳ ಜನಸಂಖ್ಯೆಯಿಂದ ತುಂಬಿದೆ. ಏಕೆಂದರೆ ರಾಜ ಅನೇಕ ಗೌರವಾನ್ವಿತ ವರ್ತಕರನ್ನು ನಗರಗಳಿಂದ ಅಲ್ಲಿಗೆ ಹೋಗುವಂತೆ ಪ್ರೇರಿಸುತ್ತಾನೆ. ಮತ್ತು ಅದರಲ್ಲಿ ಸಾಕಷ್ಟು ನೀರು ಇದೆ. ಇದಲ್ಲದೆ ರಾಜ ಅಲ್ಲಿ ಒಂದು ಕೆರೆ[20] ಕಟ್ಟಿಸಿದ್ದಾನೆ. ನನಗೆನಿಸುವಂತೆ ಅದು ಒಂದು ಫ್ಯಾಲ್ಕನ್ ಗುಂಡಿನಷ್ಟು[21] ಅಗಲವಿದೆ. ಅದು ಎರಡು ಗುಡ್ಡಗಳ ಬಾಯಿಯಲ್ಲಿರುವುದರಿಂದ ಒಂದಿಲ್ಲೊಂದು ಬದಿಯಿಂದ ಬರುವ ಎಲ್ಲ ನೀರು ಅಲ್ಲಿ ಸಂಗ್ರಹವಾಗುತ್ತದೆ ; ಇದೂ ಅಲ್ಲದೆ, ಹೊರಗಿನ ಬೆಟ್ಟ ಸಾಲಿನ ಕೆಳಭಾಗಗಳುದ್ದಕ್ಕೂ ಸಾಗುವ ಕೊಳವೆಗಳ ಮೂಲಕ ಮೂರು ಹರದಾರಿಗಳಿಗಿಂತ ಅಧಿಕ ದೂರದಿಂದ ಅದಕ್ಕೆ ನೀರು ಬರುತ್ತದೆ.ಈ ನೀರನ್ನು ತಾನೇ ಒಂದು ಚಿಕ್ಕ ನದಿಯೊಳಗೆ ಹೊರಸೂಸುವ ಕೆರೆಯೊಂದರಿಂದ ತರಲಾಗುತ್ತದೆ. ಕೆರೆಗೆ ಆಕೃತಿಗಳನ್ನು ಸುಂದರವಾಗಿ ಕೆತ್ತಿದ ಮೂರು ದೊಡ್ಡ ಸ್ತಂಭಗಳಿವೆ. ಇವುಗಳು ಮೇಲೆ ಕೆಲವು ಕೊಳವೆಗಳೊಂದಿಗೆ ಜೋಡಿಸಲ್ಪಟ್ಟಿವೆ. ಅವರು ತಮ್ಮ ತೋಟಗಳಿಗೆ ಹಾಗೂ ಭತ್ತದ ಹೊಲಗಳಿಗೆ ನೀರುಣಿಸುವಾಗ ಅವುಗಳ ಮೂಲಕ ನೀರು ಪಡೆಯುವರು. ಈ ಕೆರೆ ನಿರ್ಮಿಸಲೋಸುಗ ಅದು ವ್ಯಾಪಿಸಿರುವ ನೆಲವನ್ನು ಆವರಿಸಿದ್ದ ಗುಡ್ಡವನ್ನು ಒಡೆಸಿದ. ಕೆರೆಯಲ್ಲಿ ಎಷ್ಟೊಂದು ಕೆಲಸಗಾರರನ್ನು ನಾನು ಕಂಡೆನೆಂದರೆ ಅವರು ಹದಿನೈದು ಅಥವಾ ಇಪ್ಪತ್ತು ಸಾವಿರವಿದ್ದಾರು. ಅವರು ಇರುವೆಗಳಂತೆ ಕಾಣುತ್ತಿದ್ದು ಅವರು ಓಡಾಡುವ ನೆಲವೇ ಕಾಣುತ್ತಿರಲಿಲ್ಲ. ಅವರು ಅಷ್ಟು ಇದ್ದರು. ಈ ಕೆರೆಯ ಕಾರ್ಯವನ್ನು ರಾಜ ತನ್ನ ದಳವಾಯಿಗಳಿಗೆ ಹಂಚಿಕೊಟ್ಟಿದ್ದ. ತನ್ನ ಕೆಳಗೆ ಕೊಡಲಾದ ಜನರು ಕೆಲಸ ಮಾಡುವಂತೆ ಮತ್ತು ಕೆರೆ ನಿರ್ಮಾಣ ಪೂರ್ತಿಯಾಗಿ ಮುಗಿಯುವಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ದಳವಾಯಿಯ ಕರ್ತವ್ಯವಾಗಿತ್ತು.

ಕೆರೆ ಎರಡು ಮೂರು ಸಲ ಒಡೆಯಿತು, ಮತ್ತು ಅದು ಮೇಲಿಂದ ಮೇಲೆ ಒಡೆಯುವ ಕಾರಣವನ್ನು ತಮ್ಮ ದೇವತಾ ವಿಗ್ರಹವನ್ನು ಕೇಳಿ ತಿಳಿದುಕೊಳ್ಳುವಂತೆ ರಾಜ ಬ್ರಾಹ್ಮಣರಿಗೆ ಹೇಳಿದ. ದೇವತಾ ವಿಗ್ರಹ ಕೋಪಗೊಂಡಿದೆ ಹಾಗೂ ಅವರು ಬಲಿ ಕೊಡಬೇಕೆಂದು ಇಚ್ಛಿಸುತ್ತದೆ. ಮತ್ತು ಅದಕ್ಕೆ ಮನುಷ್ಯರ, ಕುದುರೆಗಳ ಮತ್ತು ಎಮ್ಮೆಗಳ ರಕ್ತ ಕೊಡಬೇಕು ಎಂದು ಬ್ರಾಹ್ಮಣರು ಹೇಳಿದರು. ಮತ್ತು ಇದನ್ನು ಕೇಳಿದಕೂಡಲೆ ರಾಜ ಗುಡಿಯ ಬಾಗಿಲಿನಲ್ಲಿ ಅರವತ್ತು ಮನುಷ್ಯರ ಮತ್ತು

ಅನೇಕ ಕುದುರೆ ಹಾಗೂ ಎಮ್ಮೆಗಳ ತಲೆ ಕಡಿಯಬೇಕೆಂದು ಆಜ್ಞಾಪಿಸಿದ. ಅದನ್ನು ಕೂಡಲೆ ಪೂರೈಸಲಾಯಿತು.

ಈ ಬ್ರಾಹ್ಮಣರು ನಮ್ಮ ಕ್ರೈಸ್ತ ಸನ್ಯಾಸಿಗಳಂತಿರುವರು ಮತ್ತು ಪವಿತ್ರ ಮಾನವರೆಂದು ಪರಿಗಣಿಸಲ್ಪಡುತ್ತಾರೆ. ನಾನು ಹೇಳುತ್ತಿರುವುದು ದೇವಾಲಯಗಳ ಪುರೋಹಿತರು ಮತ್ತು ಪಂಡಿತರಾದ ಬ್ರಾಹ್ಮಣರ ಬಗೆಗೆ. ಏಕೆಂದರೆ, ರಾಜನಲ್ಲಿ ಅನೇಕ ಬ್ರಾಹ್ಮಣರಿರುವರಾದರೂ ಅವರು ಪಟ್ಟಣ ಹಾಗೂ ನಗರಗಳ ಅಧಿಕಾರಿಗಳಾಗಿದ್ದು ಅವುಗಳ ಆಡಳಿತಕ್ಕೆ ಸೇರಿದವರು. ಮಿಕ್ಕವರು ವರ್ತಕರು, ಮತ್ತು ಇನ್ನುಳಿದವರು ತಮ್ಮದೇ ಆಸ್ತಿ ಮತ್ತು ಸಾಗುವಳಿಯಿಂದ ಮತ್ತು ತಮ್ಮ ಪಿತ್ರಾರ್ಜಿತ ಹೊಲಗಳಲ್ಲಿ ಬೆಳೆಯುವ ಪೈರಿನಿಂದ ಜೀವನ ನಿರ್ವಹಿಸುತ್ತಾರೆ. ದೇವಾಲಯಗಳ ಹೊಣೆಯುಳ್ಳವರು ಪಂಡಿತರಾಗಿದ್ದು ಸಾವಿಗೆ ಈಡಾಗುವ ಮಾಂಸ ಅಥವಾ ಮೀನು ಮುಂತಾದ ಯಾವುದನ್ನೂ ತಿನ್ನುವುದಿಲ್ಲ. ಸಾರನ್ನು ಕೆಂಪಗಾಗಿಸುವ ಯಾವುದನ್ನೂ ತಿನ್ನುವದಿಲ್ಲ. ಏಕೆಂದರೆ, ಅದು ರಕ್ತವಾಗಿರುತ್ತದೆಂದು ಅವರು ಹೇಳುತ್ತಾರೆ. ದೇವರ ಸೇವೆ ಮಾಡುತ್ತ ತಪಸ್ಸು ಮಾಡುತ್ತ ಪುರೋಹಿತರಂತಹ ಜೀವನ ಸಾಗಿಸಬಯಸುವ ನಾನು ಹೇಳಿದ ಇತರ ಬ್ರಾಹ್ಮಣರಲ್ಲಿ ಕೆಲವರು ಮಾಂಸವನ್ನಾಗಲಿ ಮೀನನ್ನಾಗಲಿ ಸಾವನ್ನುಂಟುಮಾಡುವ ಯಾವುದನ್ನೆ ಆಗಲಿ ತಿನ್ನುವದಿಲ್ಲ. ಅವರು ಅನ್ನದೊಂದಿಗೆ ತರಕಾರಿ,[21a] ಬೆಣ್ಣೆ, ಮತ್ತು ಹಣ್ಣಿನಿಂದ[21b] ಮಾಡಿದ ಇತರ ಪದಾರ್ಥಗಳನ್ನು ಮಾತ್ರ ತಿನ್ನುತ್ತಾರೆ. ಅವರೆಲ್ಲ ವಿವಾಹಿತರಾಗಿದ್ದು ಬಲು ಸುಂದರ ಪತ್ನಿಯರನ್ನು ಪಡೆದಿರುತ್ತಾರೆ; ಪತ್ನಿಯರು ಏಕಾಂತಪ್ರಿಯರಾಗಿದ್ದು ಮನೆ ಬಿಟ್ಟು ಹೊರಬೀಳುವುದಿಲ್ಲ. ಸ್ತ್ರೀಯರು ತಿಳಿ ಬಣ್ಣದವರು. ಈ ಬ್ರಾಹ್ಮಣರ ಜಾತಿಯಲ್ಲಿ ದೇಶದಲ್ಲಿಯೆ ಅತ್ಯಂತ ಸುಂದರ ಪುರುಷರು ಮತ್ತು ಸ್ತ್ರೀಯರು ಇದ್ದಾರೆ; ಏಕೆಂದರೆ, ಇತರ ಜಾತಿಗಳಲ್ಲೂ ಸಾಮಾನ್ಯವಾಗಿ ತಿಳಿಬಣ್ಣದ ಜನರಿರುವುದಾದರೂ ಅವರು ತೀರ ಕಡಿಮೆಯಾಗಿದ್ದಾರೆ. ತಮ್ಮನ್ನು ತಾವೇ ಬ್ರಾಹ್ಮಣರೆಂದು ಕರೆದುಕೊಳ್ಳುವವರು ಈ ನಾಡಿನಲ್ಲಿ ಅನೇಕರು ಇದ್ದಾರೆ, ಆದರೆ ಅವರು ನಾನು ಹೇಳಿದವರಿಗಿಂತ ತೀರ ಭಿನ್ನವಾದ ಜೀವನ ಸಾಗಿಸುತ್ತಾರೆ. ನಾನು ಹೇಳುವವರನ್ನು ರಾಜ ಬಹಳ ಗೌರವದಿಂದ ಕಾಣುತ್ತಾನೆ ಮತ್ತು ಬಹಳ ಸ್ನೇಹದೃಷ್ಟಿ ತೋರುತ್ತಾನೆ.

ರಾಜ ನಿರ್ಮಿಸಿದ ಈ ನೂತನ ನಗರಕ್ಕೆ ಯಾವ ಪತ್ನಿಯ ಪ್ರೀತ್ಯರ್ಥವಾಗಿ ಅದನ್ನು ನಿರ್ಮಿಸಿದನೊ ಅವಳ ಹೆಸರು ಇಡಲಾಗಿದೆ.[21c] ಮತ್ತು ಪ್ರಸಕ್ತ ನಗರವನ್ನು ಬಯಲಿನಲ್ಲಿ ಸ್ಥಾಪಿಸಲಾಗಿದೆ ಮತ್ತು ಅದರ ಸುತ್ತಮುತ್ತ ನೆಲಕ್ಕನುಗುಣವಾಗಿ ನಿವಾಸಿಗಳು ಪ್ರತಿಯೊಂದು ಪ್ರತ್ಯೇಕವಾಗಿರುವ ತೋಟಗಳನ್ನು ಮಾಡಿಕೊಂಡಿರವರು. ಈ ನಗರದಲ್ಲಿ ರಾಜ ಅನೇಕ ವಿಗ್ರಹಗಳುಳ್ಳ ದೇವಾಲಯ ಕಟ್ಟಿಸಿದ. ಅದು ಬಹಳ

ಚೆನ್ನಾಗಿ ಮಾಡಿದ ಕೆಲಸವಾಗಿದೆ ಮತ್ತು ಅದೇ ರೀತಿಯಲ್ಲಿ ಚನ್ನಾಗಿ ಮಾಡಿದ ಕೆಲವು ಭಾವಿಗಳನ್ನು ಅದು ಹೊಂದಿದೆ. ಅದರ ಮನೆಗಳು ನಮ್ಮವುಗಳಂತೆ ಮಹಡಿಗಳುಳ್ಳಂತೆ ಕಟ್ಟಿರದೆ ಸಮತಲ ಮಾಳಿಗೆ ಮತ್ತು ಗೋಪುರಗಳಿಂದೊಡಗೂಡಿದ ಒಂದೇ ಅಂತಸ್ತಿನ ವಿದ್ದು ನಮ್ಮವುಗಳಂತ ಭಿನ್ನವಾಗಿವೆ. ಏಕೆಂದರೆ, ಅವರವು ಅಂತಸ್ತಿನಿಂದ ಅಂತಸ್ತಿಗೆ ಮುಂದುವರಿಯುತ್ತವೆ. ಅವುಗಳಿಗೆ ಸ್ತಂಭಗಳಿವೆ. ಪೂರ್ತಿ ಅನಾವೃತವಾಗಿರುವ ಅವುಗಳಲ್ಲಿ ಒಳಗೂ ಹೊರಗೂ ಮೊಗಸಾಲೆಗಳಿವೆ. ಅಲ್ಲಿ ಅವರಿಗೆ ಬೇಕಿದ್ದರೆ ಜನರನ್ನು ಸುಲಭವಾಗಿ ವಸತಿ ಮಾಡಿಸಬಹುದಾದುದರಿಂದ ಅವು ರಾಜನಿಗೆ ಸೇರಿದ ಮನೆಗಳಂತೆ ಕಾಣುತ್ತವೆ. ಈ ಅರಮನೆಗಳು ಅವುಗಳನ್ನೆಲ್ಲ ಸುತ್ತುಗಟ್ಟುವ ಗೋಡೆ ಹೊಂದಿವೆ. ಮತ್ತು ಒಳಗಡೆ ಮನೆಗಳ ಅನೇಕ ಸಾಲುಗಳಿವೆ. ರಾಜನಿರುವ ಸ್ಥಳಕ್ಕೆ ಹೋಗುವ ಮೊದಲು ಅನೇಕ ಕಾವಲುಗಾರರಿರುವ ಎರಡು ದ್ವಾರಗಳಿವೆ. ಅವರು ನಾಯಕರು ಮತ್ತು ಅಲ್ಲಿ ಕೆಲಸವಿರುವವರನ್ನು ಹೊರತುಪಡಿಸಿ ಯಾರಿಗೂ ಪ್ರವೇಶ ನೀಡುವುದಿಲ್ಲ. ಇವೆರಡು ದ್ವಾರಗಳ ಮಧ್ಯೆ ಸುತ್ತಲೂ ಮೊಗಸಾಲೆಗಳಿರುವ ವಿಶಾಲವಾದ ಓಲಗವಿದೆ. ಅಲ್ಲಿ ಈ ನಾಯಕರು ಮತ್ತು ಇತರ ಗೌರವಾನ್ವಿತ ಜನರು ರಾಜ ತನ್ನಲ್ಲಿಗೆ ಅವರನ್ನು ಕರೆಕಳಿಸುವವರೆಗೆ ಕಾಯುತ್ತಾರೆ.

ರಾಜ ಸಾಧಾರಣ ಎತ್ತರ ಮತ್ತು ಒಳ್ಳೆಯ ಮೈಬಣ್ಣದವನು ಮತ್ತು ಒಳ್ಳೆಯ ಮೈಕಟ್ಟಿನವನು, ತೆಳ್ಳಗಿರುವುದಕ್ಕಿಂತ ದಪ್ಪವೇ ಇದ್ದಾನೆ; ಅವನ ಮುಖದ ಮೇಲೆ ಮೈಲಿ ಕಲೆಗಳಿವೆ. ಅವನು ಅತ್ಯಂತ ಭಯಭಕ್ತಿ ಇಡಲ್ಪಟ್ಟವನೂ ಮತ್ತು ಗೆಲುವಿನ ಸ್ವಭಾವದವನೂ ಆನಂದಭರಿತನೂ ಇದ್ದು ಯಾರಿಗೂ ಸಾಧ್ಯವಿದ್ದಷ್ಟು ಪರಿಪೂರ್ಣ ರಾಜನಾಗಿದ್ದಾನೆ. ಅವನು ವಿದೇಶಿಯರನ್ನು ಗೌರವಿಸಬಯಸುವವನೂ ಅವರನ್ನು ಪ್ರೀತಿಯಿಂದ ಬರಮಾಡಿಕೊಳ್ಳುವವನೂ ಆಗಿದ್ದು ಅವರ ಸ್ಥಿತಿ ಏನೆ ಇರಲಿ ಅವರ ಎಲ್ಲ ವ್ಯವಹಾರಗಳ ಬಗೆಗೆ ವಿಚಾರಿಸುತ್ತಾನೆ. ಅವನು ಶ್ರೇಷ್ಠ ದೊರೆಯೂ ಬಹಳ ನ್ಯಾಯಪರನೂ ಆದರೆ ಥಟ್ಟನೆ ಕೋಪಾವೇಶಕ್ಕೆ ಒಳಗಾಗುವನೂ ಆಗಿದ್ದಾನೆ ಮತ್ತು ಇದು ಅವನ ಬಿರುದಾಗಿದೆ: "ಕ್ರಿಸ್ನರಾವ್ ಮಕಾಒ,[22] ರಾಜಾಧಿರಾಜ, ಭಾರತದ ಮಹಾಪ್ರಭುಗಳ ಪ್ರಭು, ಮೂರು ಸಾಗರಗಳ ಹಾಗೂ ಮೂರು ಲೋಕ ಗಳ ಗಂಡ." ಅವನು ಈ ಬಿರುದನ್ನು ಹೊಂದಿರುವುದೇಕೆಂದರೆ[23] ಅವನಲ್ಲಿರುವ (?) ಸೈನ್ಯಗಳು ಮತ್ತು ಪ್ರದೇಶಗಳ ಕಾರಣದಿಂದಾಗಿ ಅವನು ಇತರ ಯಾವನಿಗಿಂತಲೂ ಪದವಿಯಲ್ಲಿ ದೊಡ್ಡವನಿರುವನು. ಆದರೆ, ಅವನಂತಹ ಮನುಷ್ಯ ಏನೆಲ್ಲ ಹೊಂದಿರ ಬೇಕೆಂಬುದನ್ನು ಹೋಲಿಸಿದರೆ ಅವನಲ್ಲಿ (ನಿಜವಾಗಿಯೂ) ಏನೂ ಇಲ್ಲವೆಂದು ತೋರುತ್ತದೆ. ಅವನು ಎಲ್ಲದರಲ್ಲೂ ಅಷ್ಟೊಂದು ದಯಾವೀರನೂ ಪರಿಪೂರ್ಣನೂ ಆಗಿರುವನು. ಈ ರಾಜ ಒರಿಯಾದ ರಾಜನೊಂದಿಗೆ ಸದಾ ಯುದ್ಧದಲ್ಲಿ ತೊಡ ಗಿರುತ್ತಾನೆ ಮತ್ತು ಅನೇಕ ನಗರ ಪಟ್ಟಣಗಳನ್ನು ವಶಪಡಿಸಿಕೊಳ್ಳುತ್ತ ನಾಶ

ಪಡಿಸುತ್ತ ಅವನ ರಾಜ್ಯವನ್ನು ಪ್ರವೇಶಿಸಿದ. ಅವನು ಅವನ ಬಹಳಷ್ಟು ಸೈನಿಕರನ್ನು ಮತ್ತು ಆನೆಗಳನ್ನು ಹೊಡೆದೋಡಿಸಿದ ಮತ್ತು ಅವನ ಮಗನನ್ನು ಸೆರೆಹಿಡಿದ ಮತ್ತು ಬೀಸ್ನಗ ನಗರದಲ್ಲಿಯೆ ದೀರ್ಘ ಕಾಲ ಬಂಧನದಲ್ಲಿರಿಸಿದ. ಅವನು ಅಲ್ಲಿಯೆ ಸತ್ತ. ಒಪ್ಪಂದ ಮಾಡಿಕೊಂಡು ಶಾಂತಿ (ಕಾಪಾಡಿಕೊಳ್ಳಲು)ಗೋಸ್ಕರ ಒರಿಯಾದ ರಾಜ ಕೊಟ್ಟ ಮಗಳನ್ನು ಅವನು ಮದುವೆಯಾಗಿ ಹೆಂಡತಿಯಾಗಿಸಿಕೊಂಡ.

ರಾಜನಿಗೆ ಹನ್ನೆರಡು ಧರ್ಮಪತ್ನಿಯರು. ಅವರಲ್ಲಿ ಮೂವರು ಮುಖ್ಯರು. ಅವರಲ್ಲಿ ಪ್ರತಿಯೊಬ್ಬರ ಪುತ್ರರು ರಾಜ್ಯಕ್ಕೆ ವಾರಸುದಾರರು, ಮಿಕ್ಕವರವಲ್ಲ ಅಂದರೆ, ಅವರೆಲ್ಲರಿಗೂ ಪುತ್ರರಿದ್ದರೆ. ಆದರೆ, ಒಬ್ಬನೇ ಮಗನಿದ್ದಾಗ ಅವನು ಯಾರ ಪುತ್ರನೇ ಆಗಿರಲಿ ಅವನೇ ವಾರಸುದಾರ. ಈ ಪ್ರಧಾನ ಪತ್ನಿಯರಲ್ಲಿ ಒಬ್ಬಳು ಒರಿಯಾ ರಾಜನ ಮಗಳು ಮತ್ತು ಮಿಕ್ಕವರು ಸೆರಿಂಗಪಟಾಒದ ರಾಜನಾಗಿರುವ ಸಾಮಂತನ ಪುತ್ರಿಯರು. ಇನ್ನೊಬ್ಬ ಪತ್ನಿ ವಾರಾಂಗನೆ. ರಾಜನಾಗುವ ಮುನ್ನ ಅವಳು ಅವನ ಉಪಪತ್ನಿಯಾಗಿದ್ದಳು. ಅವನು ರಾಜನಾದರೆ ತನ್ನನ್ನು ಪತ್ನಿಯಾಗಿ ಸ್ವೀಕರಿಸುವಂತೆ ಅವಳು ಅವನಿಂದ ವಚನ ಪಡೆದಿದ್ದಳು. ಹೀಗೆ ಈ ವಾರಾಂಗನೆ ಅವನ ಪತ್ನಿಯಾದಳು. ಅವಳ ಪ್ರೀತ್ಯರ್ಥವಾಗಿ ಅವನು ಈ ಹೊಸ ನಗರವನ್ನು ನಿರ್ಮಿಸಿದ ಮತ್ತು ಅದರ ಹೆಸರು . (ಮೂಲ ಕೃತಿಯಲ್ಲಿ ಹೀಗಿದೆ)....ಈ ಪತ್ನಿಯರಲ್ಲಿ ಪ್ರತಿಯೊಬ್ಬಳಿಗೂ ತನ್ನ ಪರಿಚಾರಿಕೆಯರು, ಆಪ್ತಸೇವಕಿಯರು, ಕಾವಲುಗಾರ್ತಿಯರು ಮತ್ತು ಅಗತ್ಯವಿರುವ ಇತರ ಎಲ್ಲ ಸೇವಕಿಯರುಳ್ಳ ತನ್ನದೇ ಮನೆಯಿದೆ. ಇವರೆಲ್ಲ ಸ್ತ್ರೀಯರಾಗಿದ್ದು ಅವರಿರುವಲ್ಲಿ ಅವರನ್ನು ಸಂರಕ್ಷಿಸುವ ನಪುಂಸಕರನ್ನು ಹೊರತುಪಡಿಸಿ ಯಾವ ಪುರುಷನಿಗೂ ಪ್ರವೇಶವಿಲ್ಲ. ಬಹುಶಃ ರಾಜನ ಅನುಗ್ರಹದಿಂದ ಯಾವನೊಬ್ಬ ಉನ್ನತ ಅಂತಸ್ತಿನ ಹಿರಿಯನನ್ನುಳಿದು ಈ ಸ್ತ್ರೀಯರು ಯಾವ ಪುರುಷನ ಕಣ್ಣಿಗೂ ಬೀಳುವುದಿಲ್ಲ. ಅವರು ಹೊರಗೆ ಹೋಗಬಯಸಿದಾಗ ಅವರನ್ನು ಯಾರಿಗೂ ಕಾಣದಂತೆ ಮುಚ್ಚಿದ ಮೇಣೆಗಳಲ್ಲಿ ಹೊತ್ತೊಯ್ಯಲಾಗುತ್ತಿತ್ತು. ಮತ್ತು ಎಲ್ಲ ಪೂರ್ತಿ ಮುನ್ನೂರು ನಾನೂರು ನಪುಂಸಕರೂ ಅವರೊಂದಿಗಿರುತ್ತಿದ್ದರು. ಮಿಕ್ಕವರೆಲ್ಲ ಅವರಿಂದ ದೂರವಿರುತ್ತಾರೆ. ಈ ರಾಣಿಯರಲ್ಲಿ ಪ್ರತಿಯೊಬ್ಬಳೂ ಬಹಳಷ್ಟು ಧನ, ಮತ್ತು ಸಂಪತ್ತು ಮತ್ತು ಸ್ವಂತ ಆಭರಣಗಳನ್ನು ಅಂದರೆ ತೋಳಬಂದಿಗಳು, ಕೈ ಬಳೆಗಳು ಸಣ್ಣಮುತ್ತುಗಳು, ಮುತ್ತುಗಳು ಮತ್ತು ವಜ್ರಗಳನ್ನು ಪಡೆದಿರುತ್ತಾಳೆ, ಮತ್ತು ಅದೂ ದೊಡ್ಡ ಪ್ರಮಾಣದಲ್ಲಿ ಎಂದು ನಮಗೆ ಹೇಳಲಾಯಿತು. ಅವರಲ್ಲಿ ಪ್ರತಿಯೊಬ್ಬಳಿಗೆ ಅನೇಕ ರತ್ನಗಳು, ಮಾಣಿಕ್ಯಗಳು, ವಜ್ರಗಳು, ಮುತ್ತುಗಳು ಮತ್ತು ಸಣ್ಣಮುತ್ತುಗಳಿಂದ ಸಾಧ್ಯವಿದ್ದಷ್ಟು ಚನ್ನಾಗಿ ಅಲಂಕೃತರಾದ ಅರವತ್ತು ಪರಿಚಾರಿಕೆಯರಿರುವರು ಎಂದೂ ನಮಗೆ ಹೇಳಲಾಯಿತು. ಇವರನ್ನು ನಾವು ಅನಂತರ ನೋಡಿದೆವು ಮತ್ತು ಚಕಿತರಾದೆವು. ಅವರನ್ನು ನಾವು ನೋಡಿದ ಕೆಲವು ಉತ್ಸವ

ಗಳು ಮತ್ತು ಅವರು ಬಂದ ರೀತಿಯು ಬಗೆಗೆ ನಾನು ಆಮೇಲೆ ಹೇಳುವೆ. ಒಳಗಡೆ ಈ ಪರಿಚಾರಿಕೆಯರೊಂದಿಗೆ ಹನ್ನೆರಡು ಸಾವಿರ ಸ್ತ್ರೀಯರಿದ್ದಾರೆಂದು ಹೇಳಲಾಗುತ್ತದೆ. ಏಕೆಂದರೆ ನೀವು ತಿಳಿಯಬೇಕಾದುದೇನೆಂದರೆ ಅಲ್ಲಿ ಕತ್ತಿ ಗುರಾಣಿ ಹಿಡಿಯುವ ಸ್ತ್ರೀಯರಿದ್ದಾರೆ, ಕುಸ್ತಿ ಆಡುವವರಿದ್ದಾರೆ, ಕಹಳೆ ಊದುವವರಿದ್ದಾರೆ, ಕೊಳಲು ಊದುವವರಿದ್ದಾರೆ, ಮತ್ತು ನಮ್ಮವಕ್ಕಿಂತ ಭಿನ್ನವಾದ ಇತರ ವಾದ್ಯಗಳನ್ನು ಊದುವವರಿದ್ದಾರೆ. ಮತ್ತು ಹಾಗೆಯೆ, ಬೋಯಿಗಳಾಗಿ ಮತ್ತು ಅಗಸರಾಗಿ ಮತ್ತು ರಾಜನಿಗೆ ಅವನ ಮನೆಯಲ್ಲಿ ಅಧಿಕಾರಿಗಳಿರುವಂತೆಯೆ ತಮ್ಮ ದ್ವಾರದೊಳಗಡೆ ಇತರ ಕಚೇರಿಗಳಿಗಾಗಿ ಸ್ತ್ರೀಯರಿದ್ದಾರೆ. ಅವರ ಮಧ್ಯೆ ಯಾವುದೆ ಕಲಹ ಅಥವಾ ವೈಮನಸ್ಸು ಇರಬಾರದೆಂದು ಈ ಮೂವರು ಪ್ರಧಾನ ಪತ್ನಿಯರಿಗೂ ಅಷ್ಟೇ, ಒಬ್ಬಳಿಗಿರುವಷ್ಟೆ ಇನ್ನೊಬ್ಬಳಿಗೆ, ಸ್ತ್ರೀಯರು ಇರುತ್ತಾರೆ. ಅವರೆಲ್ಲರೂ ಪ್ರೀತಿಯಿಂದಿದ್ದು ಪ್ರತಿಯೊಬ್ಬಳೂ ಪ್ರತ್ಯೇಕವಾಗಿ ವಾಸಿಸುತ್ತಾಳೆ. ಇದರಿಂದ ಇಷ್ಟೊಂದು ಜನರಿರುವ ಈ ಮನೆಗಳಿಗಾಗಿ ಎಂಥ ದೊಡ್ಡ ಆವರಣ ಇದ್ದಿರಬೇಕು ಮತ್ತು ಏನು ಬೀದಿ ಮತ್ತು ಓಣಿಗಳನ್ನು ಅವು ಹೊಂದಿರಬೇಕು ಎಂಬುದನ್ನು ಊಹಿಸಬಹುದು.

ರಾಜ ಅರಮನೆಯೊಳಗೆ ತಾನೊಬ್ಬನೆ ಇರುತ್ತಾನೆ ಮತ್ತು ತನ್ನ ಪತ್ನಿಯರಲ್ಲೊಬ್ಬಳ ಸಹವಾಸ ಬೇಕೆನಿಸಿದಾಗ ಒಬ್ಬ ನಪುಂಸಕನಿಗೆ ಅವಳನ್ನು ಕರೆತರುವಂತೆ ಆಜ್ಞಾಪಿಸುತ್ತಾನೆ. ಅವಳಿದ್ದಲ್ಲಿ ನಪುಂಸಕ ಪ್ರವೇಶಿಸದೆ ಕಾವಲುಗಾರ್ತಿಯರಿಗೆ ಅದನ್ನು ಹೇಳುತ್ತಾನೆ. ಅವರು ರಾಜನಿಂದ ಸಂದೇಶವಿದೆಯೆಂದು ರಾಣಿಗೆ ತಿಳಿಸುತ್ತಾರೆ. ಆಗ ಅವಳ ಪರಿಚಾರಿಕೆಯರಲ್ಲಿ ಇಲ್ಲವೆ ಆಪ್ತಸೇವಕಿಯರಲ್ಲಿ ಒಬ್ಬಳು ಬಂದು ಏನು ಬೇಕೆಂಬುದನ್ನು ತಿಳಿದುಕೊಳ್ಳುತ್ತಾಳೆ. ಆ ಮೇಲೆ ರಾಣಿ ರಾಜನಿದ್ದಲ್ಲಿಗಾಗಲಿ ಇಲ್ಲವೆ ರಾಜನೆ ರಾಣಿಯಿದ್ದಲ್ಲಿಗಾಗಲಿ ಬರುತ್ತಾನೆ. ಹೀಗೆ ಅವನು ಬೇರೆ ಯಾರಿಗೂ ತಿಳಿಯದಂತೆ ತನಗೆ ಹಿತವೆನಿಸುವಂತೆ ಸಮಯ ಕಳೆಯುತ್ತಾನೆ. ಈ ನಪುಂಸಕರಲ್ಲಿ ರಾಜನಿಗೆ ಅತ್ಯಂತ ಪ್ರೀತಿಯುವರಾಗಿರುವವರು ಮತ್ತು ಅವನು ಮಲಗಿದಲ್ಲಿಯೆ ಮಲಗುವ ಕೆಲವರಿದ್ದಾರೆ ; ಅವರು ದೊಡ್ಡ ಸಂಬಳ ಪಡೆಯುತ್ತಾರೆ.

ಈ ರಾಜನಿಗೆ ಪ್ರತಿದಿನ ಬೆಳಗಾಗುವ ಮುನ್ನ ಮುಕ್ಕಾಲು ಪಿಂಟು ಎಳ್ಳೆಣ್ಣೆ ಕುಡಿಯುವ ರೂಢಿಯಿದೆ ಮತ್ತು ಅದೇ ಎಣ್ಣೆಯನ್ನು ತನ್ನ ದೇಹಕ್ಕೆಲ್ಲ ಹಚ್ಚಿಕೊಳ್ಳುತ್ತಾನೆ. ತನ್ನ ಟೊಂಕವನ್ನು ಒಂದು ಚಿಕ್ಕ ಅರಿವೆಯಿಂದ ಸುತ್ತಿಕೊಂಡು ತನ್ನ ತೋಳುಗಳಿಗೆ ಮಣ್ಣಿನಿಂದ ಮಾಡಿದ ದೊಡ್ಡ ಭಾರಗಳನ್ನು ಕಟ್ಟಿಕೊಂಡು ಕತ್ತಿಯನ್ನು ತೆಗೆದುಕೊಂಡು ಎಲ್ಲ ಎಣ್ಣೆ ಬಸಿದುಹೋಗುವವರೆಗೆ ಅದರೊಂದಿಗೆ ವ್ಯಾಯಾಮ ಮಾಡುತ್ತಾನೆ, ಮತ್ತು ತನ್ನ ಪೈಲ್ವಾನರಲ್ಲೊಬ್ಬನೊಂದಿಗೆ ಕುಸ್ತಿ ಆಡುತ್ತಾನೆ. ಈ ಪರಿಶ್ರಮದ ನಂತರ ಅವನು ಕುದುರೆಯೇರಿ ಬಯಲಿನಲ್ಲಿ ಅತ್ತಿಂದಿತ್ತ ನಾಗಾಲೋಟದ ಸವಾರಿ ಮಾಡುತ್ತಾನೆ. ಏಕೆಂದರೆ, ಅವನು ಇದನ್ನೆಲ್ಲ ಬೆಳಕು

ಹರಿಯುವ ಮುನ್ನ ಮಾಡುತ್ತಾನೆ. ಆ ಮೇಲೆ ಅವನು ಮೈ ತೊಳೆದುಕೊಳ್ಳಲು ಹೋಗುತ್ತಾನೆ ಮತ್ತು ಅವನು ಪವಿತ್ರನೆಂದು ಪರಿಗಣಿಸುವ, ಅವನ ಬಲು ಪ್ರೀತಿ ಯುವನಾದ ಮತ್ತು ಬಹಳ ಧನಿಕನಾದ ಬ್ರಾಹ್ಮಣನೊಬ್ಬ ಅವನ ಮೈ ತೊಳೆಯುತ್ತಾನೆ. ಸ್ನಾನವಾದ ಮೇಲೆ ಅವನು ಅರಮನೆಯೊಳಗೆ ತನ್ನ ಗುಡಿಯಿರುವಲ್ಲಿಗೆ ಹೋಗಿ ಪದ್ಧತಿಯಂತೆ ತನ್ನ ಪ್ರಾರ್ಥನೆ ಮತ್ತು ವ್ರತಾಚರಣೆ ಮಾಡುತ್ತಾನೆ. ಅಲ್ಲಿಂದ ಅವನು ಗೋಡೆಗಳಿಲ್ಲದೆ ದ್ವಾರಮಂಟಪದ ಆಕಾರದಲ್ಲಿ ಕಟ್ಟಿದ ಕಟ್ಟಡಕ್ಕೆ ಹೋಗುತ್ತಾನೆ. ಅದಕ್ಕೆ ಹಲವಾರು ಸ್ತಂಭಗಳಿದ್ದು ಅವುಗಳಿಗೆ ತುದಿಯವರೆಗೆ ಬಟ್ಟೆ ಇಳಿಬಿಡಲಾಗಿದೆ ಮತ್ತು ಗೋಡೆಗಳಿಗೆ ಸುಂದರವಾಗಿ ಬಣ್ಣ ಹಚ್ಚಲಾಗಿದೆ. ಅದರ ಎರಡೂ ಬದಿಗೆ ಚನ್ನಾಗಿ ಮಾಡಿದ ಸ್ತ್ರೀಯರ ಎರಡು ಆಕೃತಿಗಳುಂಟು. ಇಂಥ ಕಟ್ಟಡದಲ್ಲಿ ಅವನು ತನ್ನ ರಾಜ್ಯದಲ್ಲಿ ಹುದ್ದೆಯಲ್ಲಿರುವವರು ಮತ್ತು ತನ್ನ ನಗರಗಳ ಆಡಳಿತ ನೋಡಿಕೊಳ್ಳುವವರೊಂದಿಗೆ ಕೆಲಸ ಮುಗಿಸುತ್ತಾನೆ ಮತ್ತು ತನಗೆ ಪ್ರಿಯರಾದವರೊಂದಿಗೆ ಮಾತಾಡುತ್ತಾನೆ. ಎಲ್ಲರಿಗಿಂತಲೂ ಪ್ರಿಯನಾದವನೆಂದರೆ ತಿಮರ್ಸ್ನಿ[24] ಎಂಬ ಹಿರಿಯ. ಅವನು ಇಡಿ ಮನೆಯನ್ನು ನಿಯಂತ್ರಿಸುತ್ತಾನೆ ಮತ್ತು ಎಲ್ಲ ಮಹಾಪ್ರಭುಗಳು ಅವನೊಂದಿಗೆ ರಾಜನೊಂದಿಗೆ ನಡೆದುಕೊಂಡಂತೆಯೆ ನಡೆದುಕೊಳ್ಳುತ್ತಾರೆ. ರಾಜ ಈ ಮಂದಿಯೊಂದಿಗೆ ತನಗೆ ಇಷ್ಟವಾದ ವಿಷಯಗಳ ಬಗೆಗೆ ಮಾತಾಡಿದ ಮೇಲೆ ದ್ವಾರದಲ್ಲಿ ಕಾಯ್ದಿರುವ ಪ್ರಭುಗಳು ಹಾಗೂ ದಳವಾಯಿಗಳಿಗೆ ಬರಹೇಳುತ್ತಾನೆ. ಅವರು ಕೂಡಲೆ ಬಂದು ಸಲಾಮು ಮಾಡುತ್ತಾರೆ. ಅವರು ಬಂದ ಕೂಡಲೆ ಅವನಿಗೆ ಸಲಾಮು ಮಾಡಿ ಅವನಿಂದ ದೂರ ಗೋಡೆಗುಂಟ ನಿಲ್ಲುತ್ತಾರೆ. ಅವರು ಒಬ್ಬರಿನ್ನೊಬ್ಬರೊಂದಿಗೆ ಮಾತಾಡುವದಿಲ್ಲ. ಅವನೆದುರು ವೀಳ್ಯದೆಲೆ ಜಗಿಯುವದೂ ಇಲ್ಲ. ತಮ್ಮ ಅಂಗಿಯ ತೋಳುಗಳಲ್ಲಿ ಕೈಯಿಟ್ಟುಕೊಂಡು ನೆಲದ ಮೇಲೆ ದೃಷ್ಟಿಯಿಟ್ಟು ನಿಂತಿರುತ್ತಾರೆ. ರಾಜ ಯಾರೊಂದಿಗಾದರೂ ಮಾತಾಡ ಬಯಸಿದರೆ ಅದನ್ನು ಎರಡನೆಯ ವ್ಯಕ್ತಿಯ ಮೂಲಕ ಮಾಡಲಾಗುತ್ತದೆ. ಮತ್ತು ರಾಜ ಯಾರೊಂದಿಗೆ ಮಾತಾಡಬಯಸುತ್ತಾನೊ ಅವನು ಕಣ್ಣೆತ್ತಿ ತನ್ನನ್ನು ಪ್ರಶ್ನಿಸುವವನಿಗೆ ಉತ್ತರ ಕೊಡುತ್ತಾನೆ ಮತ್ತು ತನ್ನ ಮೊದಲಿನ ಸ್ಥಾನಕ್ಕೆ ಮರಳುತ್ತಾನೆ. ಅವರು ರಾಜ ಹೋಗಲು ಅಪ್ಪಣೆ ಕೊಡುವವರೆಗೆ ಹಾಗೆಯೆ ನಿಂತಿರುತ್ತಾರೆ. ಆ ಮೇಲೆ ಅವರೆಲ್ಲ ಅವನಿಗೆ ಸಲಾಮು ಮಾಡಿ ಹೊರಟು ಹೋಗಲು ತಿರುಗುತ್ತಾರೆ. ಅವರಲ್ಲಿರುವ ಅತ್ಯಂತ ದೊಡ್ಡ ಮರ್ಯಾದೆಯಾದ ಸಲಾಮು ಎಂದರೆ ತಲೆಯ ಮೇಲೆ ತಮಗೆ ಸಾಧ್ಯವಿದ್ದಷ್ಟು ಎತ್ತಿ ಕೈ ಜೋಡಿಸುವುದು. ಪ್ರತಿ ದಿನ ಅವರು ರಾಜನಿಗೆ ಸಲಾಮು ಮಾಡಲು ಹೋಗುವರು.

ನಾವು ಈ ನಾಡಿಗೆ ಬಂದಾಗ ರಾಜ ಈ ಹೊಸ ನಗರದಲ್ಲಿದ್ದ ಮತ್ತು ಅವನನ್ನು ಕಾಣಲು ಕ್ರಿಸ್ಟೊವಾಓ ದ ಫಿಗ್ವೈರೆಡೊ[25] ತನ್ನ ಜೊತೆಗೆ ಬಂದ ನಾವೆಲ್ಲ ಪೋರ್ತುಗ

ಗೀಜರೊಂದಿಗೆ ಹೋದ. ಎಲ್ಲರೂ ನಮ್ಮ ರೀತಿಯಲ್ಲಿ ಬೆಡಗಿನ ವೇಷಗಳೊಂದಿಗೆ ಸುಂದರವಾಗಿ ಭೂಷಿತರಾಗಿದ್ದೆವು. ರಾಜ ಅವನನ್ನು ಒಳ್ಳೆಯ ರೀತಿಯಲ್ಲಿ ಬರಮಾಡಿಕೊಂಡ ಮತ್ತು ಅವನೊಂದಿಗೆ ಬಹಳ ಸಂತುಷ್ಟನಾಗಿದ್ದ. ರಾಜ ಅವನೊಂದಿಗೆ ಅವನು ತನ್ನ ಜನರಲ್ಲಿಯೆ ಒಬ್ಬನೇನೊ ಎನ್ನುವಷ್ಟು ಸಂಪ್ರೀತನಾಗಿದ್ದ. ಅವನಲ್ಲಿ ಅಷ್ಟೊಂದು ಆಸಕ್ತಿ ತೋರಿದ. ಮತ್ತು ಅವನೊಂದಿಗೆ ಹೋಗಿದ್ದ ನಮ್ಮವರೊಂದಿಗೂ ಬಹಳ ಪ್ರೀತಿ ತೋರಿದ. ನಾವು ರಾಜನಿಗೆ ಎಷ್ಟೊಂದು ಹತ್ತಿರವಿದ್ದೆವೆಂದರೆ ಅವನು ನಮ್ಮೆಲ್ಲರನ್ನೂ ಮುಟ್ಟಿದ ಮತ್ತು ನಮ್ಮನ್ನೆಷ್ಟು ನೋಡಿದರೂ ಅವನಿಗೆ ಸಾಲದು. ಆ ಮೇಲೆ ಕ್ರಿಸ್ತೊವಾಒ ದ ಫಿಗ್ಯೆರೆಡೊ ಕ್ಯಾಪ್ಟನ್ ಮೇಜರ್‌ನ[26] ಪತ್ರಗಳನ್ನು ಮತ್ತು ಅವನಿಂದ ತಂದ ವಸ್ತುಗಳನ್ನು ರಾಜನಿಗೆ ಕೊಟ್ಟ. ಅವುಗಳಿಂದ ಅವನು ಬಹಳ ಸಂತಸಪಟ್ಟ. ಮುಖ್ಯವಾಗಿ, ಪ್ರಕೃತ ಕ್ರಿಸ್ತೊವಾಒ ದ ಫಿಗ್ಯೆರೆಡೊ ಇತರ ಅನೇಕ ವಸ್ತುಗಳೊಂದಿಗೆ ತಂದಿದ್ದ ಕೆಲವೊಂದು ಆರ್ಗನ್‌ಗಳಿಂದ[27]. ರಾಜ ಅನೇಕ ಬಂಗಾರದ ಗುಲಾಬಿಗಳಿಂದ ಹೆಣೆಯಲಾದ ಕೆಲವು ಬಿಳಿ ಬಟ್ಟೆಗಳನ್ನು ಧರಿಸಿದ್ದ. ಕೊರಳಲ್ಲಿ ಭಾರಿ ಬೆಲೆಯುಳ್ಳ ವಜ್ರಗಳ ಕಂಠಿಹಾರ ಧರಿಸಿದ್ದ. ತಲೆಯ ಮೇಲೆ ಗ್ಯಾಲಿಸಿಯನ್ ಶಿರಸ್ತ್ರಾಣದ ಮಾದರಿಯ, ಉತ್ಕೃಷ್ಟ ರೇಷ್ಮೆಯ ತುಂಡಿನಿಂದ ಆಚ್ಛಾದಿತ ಜರತಾರಿ ಟೊಪ್ಪಿಗೆ ಧರಿಸಿದ್ದ. ಅವನು ಬರಿಗಾಲಿನಲ್ಲಿದ್ದ. ಏಕೆಂದರೆ, ಬರಿಗಾಲಿನಲ್ಲಿರದ ಹೊರತು ಯಾರೂ ಎಂದೂ ರಾಜನಿದ್ದಲ್ಲಿ ಪ್ರವೇಶಿಸುವುದಿಲ್ಲ ಮತ್ತು ಬಹುತೇಕ ಜನರು ಅಥವಾ ಹೆಚ್ಚೂಕಡಿಮೆ ಎಲ್ಲರೂ ಬರಿಗಾಲಿನಲ್ಲಿಯೆ ನಡೆದಾಡುತ್ತಾರೆ. ಪಾದರಕ್ಷೆಗಳಿಗೆ ಪ್ರಾಚೀನ ಶೈಲಿಯಂತೆ ಚೂಪು ತುದಿಗಳಿವೆ ಮತ್ತು ಅಟ್ಟೆಗಳನ್ನು ಬಿಟ್ಟು ಬೇರೇನೂ ಇರದೆ ಮೇಲ್ಗಡೆ ಅವುಗಳನ್ನು ಕಾಲಲ್ಲಿರಿಸಿಕೊಳ್ಳಲು ಸಹಾಯಕವಾಗುವಂತೆ ಕೆಲವು ಪಟ್ಟಿಗಳಿರುವ ಇತರ ಪಾದರಕ್ಷೆಗಳೂ ಇವೆ. ಇಟಲಿಯಿಂದ ಬರುವ ಕೆಲವು ಕಾಗದಗಳು ಅಥವಾ ಅವಶೇಷಗಳಲ್ಲಿ ನೀವು ಕಾಣುವಂತಹ ಪ್ರಾಚೀನ ಕಾಲದಲ್ಲಿ ರೋಮನರು ರೂಢಿಗತವಾಗಿ ಧರಿಸುತ್ತಿದ್ದಂತಹ ಪಾದರಕ್ಷೆಗಳಂತೆ ಅವುಗಳನ್ನು ಮಾಡಲಾಗಿದೆ. ರಾಜ ಕ್ರಿಸ್ತೊವಾಒ ದ ಫಿಗ್ಯೆರೆಡೊನನ್ನು ಕಳುಹಿಸಿಕೊಟ್ಟಾಗ ಅವನಿಗೆ ಜರತಾರಿ ಅಂಗಿಯನ್ನೂ ರಾಜ ಧರಿಸುವಂತಹದೆ[28] ರೀತಿಯ ಟೊಪ್ಪಿಗೆಯನ್ನೂ ಕೊಟ್ಟ. ಮತ್ತು ಪ್ರತಿಯೊಬ್ಬ ಪೋರ್ತುಗೀಜನಿಗೂ ಅನೇಕ ಸುಂದರ ಆಕೃತಿಗಳಿಂದ ಕಸೂತಿ ಹೆಣೆದ ಬಟ್ಟೆಯನ್ನು ಕೊಟ್ಟ. ರಾಜ ಇದನ್ನು ಕೊಡುವುದೇಕೆಂದರೆ ಅದು ಪದ್ಧತಿಯಾಗಿದೆ. ಅವನು ಅದನ್ನು ಮೈತ್ರಿ ಮತ್ತು ಪ್ರೀತಿಗಳ ದ್ಯೋತಕವಾಗಿ ಕೊಡುತ್ತಾನೆ.

ಕ್ರಿಸ್ತೊವಾಒದ ಫಿಗ್ಯೆರೆಡೊನನ್ನು ರಾಜ ಕಳುಹಿಸಿಕೊಟ್ಟಾಗ ನಾವು ಈ ನಗರದಿಂದ ಹರದಾರಿ ದೂರವಿರುವ ಬೀಸ್ನಗ ನಗರಕ್ಕೆ ಬಂದೆವು ಮತ್ತು ಇಲ್ಲಿ ಕೆಲವು ಬಹಳ ಉತ್ತಮ ಮನೆಗಳಲ್ಲಿ ವಾಸಿಸಲು ಅವನು ಆಜ್ಞಾಪಿಸಿದ. ಮತ್ತು ಅನೇಕ

ದೊರೆಗಳು ಮತ್ತು ದಳವಾಯಿಗಳು ಮತ್ತು ರಾಜನ ಪರವಾಗಿ ಬಂದ ಇತರ ವ್ಯಕ್ತಿಗಳು ಫಿಗ್ಯೆರೆಡೊನನ್ನು ಭೇಟಿಯಾದರು. ರಾಜ ಅವನಿಗೆ ಅನೇಕ ಕುರಿಕೋಳಿಗಳನ್ನು ಮತ್ತು ಬೆಣ್ಣೆ, ಜೇನುತುಪ್ಪ ಮತ್ತಿತರ ಖಾದ್ಯಗಳಿಂದ ತುಂಬಿದ ಅನೇಕ ಪಾತ್ರೆಗಳನ್ನು ಕಳಿಸಿದ. ಅವನು ಅವುಗಳನ್ನು ಕೂಡಲೆ ಕಾಲಾಳುಗಳು ಮತ್ತು ತನ್ನೊಂದಿಗೆ ತಂದಿದ್ದ ಜನರಿಗೆ ಹಂಚಿದ. ರಾಜ ಅವನಿಗೆ ಅನೇಕ ಪ್ರೀತಿಯ ಮತ್ತು ಸಂತೋಷದ ಮಾತುಗಳನ್ನು ಹೇಳಿದ ಮತ್ತು ಪೋರ್ತುಗಾಲದ ರಾಜ ನಡೆಸುತ್ತಿದ್ದ ರಾಜ್ಯ ಎಂತಹದೆಂಬುದರ ಬಗೆಗೆ ವಿಚಾರಿಸಿದ. ಅದರ ಬಗೆಗೆ ಎಲ್ಲ ಹೇಳಲಾಗಿ ಅವನಿಗೆ ಸಂತೋಷವಾದಂತಿತ್ತು.

ಬೀಸನಗರ ನಗರದ ವಿಷಯಕ್ಕೆ ಮರುಳುವುದಾದರೆ, ಅಲ್ಲಿಂದ ಹೊಸ ನಗರಕ್ಕೆ ಕ್ರೀಡಾಯುದ್ಧ ಸ್ಥಳದಷ್ಟು ಅಗಲವಾದ ಬೀದಿ ಹೋಗುತ್ತದೆಂಬುದನ್ನು ತಿಳಿಯಬೇಕು ಅದರ ಇಕ್ಕೆಲಗಳಲ್ಲೂ ಮನೆಗಳು ಮತ್ತು ಅಂಗಡಿಗಳು ಸಾಲುಗಟ್ಟಿವೆ. ಅವುಗಳಲ್ಲಿ ಎಲ್ಲವನ್ನೂ ಮಾರಲಾಗುತ್ತದೆ. ದಾರಿಹೋಕರಿಗೆ ನೆರಳು ನೀಡುವ ಉದ್ದೇಶದಿಂದ ಈ ರಸ್ತೆಯುದ್ದಕ್ಕೂ ರಾಜ ಹಚ್ಚಲು ಆಜ್ಞಾಪಿಸಿದ ಅನೇಕ ಗಿಡಗಳಿವೆ. ಈ ರಸ್ತೆಯ ಮೇಲೆ ಸುಂದರವಾದ ಕಲ್ಲಿನ ದೇವಾಲಯವನ್ನು[29] ಕಟ್ಟುವಂತೆ ರಾಜ ಆಜ್ಞಾಪಿಸಿದ. ದಳವಾಯಿಗಳು ಮತ್ತು ಮಹಾ ಪ್ರಭುಗಳು ಕಟ್ಟಿಸಿದ ಇತರ ಗುಡಿಗಳೂ ಇವೆ.

ಹೀಗಾಗಿ, ಬೀಸ್ನಗ ನಗರಕ್ಕೆ ಮರಳುತ್ತ ನಿಮಗೆ ತಿಳಿದಿರಬೇಕಾದುದೇನೆಂದರೆ ನೀವು ನಗರದ ದ್ವಾರಗಳನ್ನು ತಲುಪುವ ಮುನ್ನ ನಗರದ ಎಲ್ಲ ಆವರಣಗಳನ್ನು ಸುತ್ತುಗಟ್ಟುವ ಗೋಡೆಯುಳ್ಳ ಹೆಬ್ಬಾಗಿಲಿದೆ ಮತ್ತು ಈ ಗೋಡೆ ಬಹಳ ಗಟ್ಟಿಯಾದುದೂ ಬೃಹತ್ ಕಲ್ಲು ಕಟ್ಟಡವೂ ಆಗಿದೆ. ಆದರೆ, ಈಗ ಅದು ಅಲ್ಲಲ್ಲಿ ಒಡೆದಿದೆ. ಅವರು ಅದರಲ್ಲಿ ದುರ್ಗಗಳನ್ನು[30] ಇಡದೆ ಬಿಡರು. ಈ ಗೋಡೆಗೆ ಕೆಲವಡೆ ಮತ್ತು ಕೆಳಮಟ್ಟದಲ್ಲಿ ಕಟ್ಟಲಾಗಿರುವ ಭಾಗಗಳಲ್ಲಿ ನೀರಿನ ಕಂದಕವಿದೆ. ಅದರಿಂದ ಪ್ರತ್ಯೇಕವಾಗಿ ಇನ್ನೂ ಒಂದು(ರಕ್ಷಣೆ) ಕೆಳಗೆ ಹೇಳಿದಂತೆ ಮಾಡಿದ್ದು ಇದೆ. ಚೂಪು ತುದಿಯುಳ್ಳ ಕೆಲವು ಎತ್ತರವಾದ ಕಲ್ಲುಗಳನ್ನು ನೆಲದ ಮೇಲೆ ಎದೆ ಎತ್ತರಕ್ಕೆ ನಿಲ್ಲಿಸಿದ್ದಾರ. ಅವು ಒಂದೂವರೆ ಈಟಿಕೋಲಿನಷ್ಟು ಅಗಲವಿದ್ದು ಅವುಗಳ ಮತ್ತು ದೊಡ್ಡ ಗೋಡೆಯ ಮಧ್ಯೆ ಅಷ್ಟೆ ಅಂತರವಿದೆ. ಈ ಗೋಡೆ ಯಾವುದೊಂದು ಗುಡ್ಡ ಅಥವಾ ಕಲ್ಲುಗಾಡು ತಲುಪುವವರೆಗಿನ ಎಲ್ಲ ಕೆಳಮಟ್ಟದ ನೆಲದಲ್ಲೂ ನಿಂತಿದೆ. ನೀರು ಈ ಗೋಡೆಯ ಮೊದಲ ಸಾಲಿನ ಮೂಲಕ ಹಾಯುತ್ತದೆ ಮತ್ತು ಊಟೆಗಳಿದ್ದುದರಿಂದ ಸರೋವರಗಳಲ್ಲಿ ಬಹಳ ನೀರು ಇದೆ. ಇಲ್ಲಿ ಹಣ್ಣಿನ ತೋಟಗಳು ಮತ್ತು ಒಂದು ಚಿಕ್ಕ ತೆಂಗಿನ ತೋಪು ಮತ್ತು ಅನೇಕ ಮನೆಗಳಿವೆ.

ನಗರದ ಪ್ರಥಮ ದ್ವಾರದತ್ತ ಈಗ ತಿರುಗೋಣ. ನೀವು ಅದನ್ನು ತಲುಪುವ ಮುನ್ನ ಒಂದು ಚಿಕ್ಕ ನೀರಿನ ಹೊಂಡ ಬರುತ್ತದೆ. ಆ ಮೇಲೆ ಗೋಡೆ ಬರುತ್ತದೆ.

ಗೋಡೆ ಪೂರ್ತಿ ಕಲ್ಲುಕಟ್ಟಡದ್ದಾಗಿದ್ದು ಬಹಳ ಭದ್ರವಾಗಿದೆ ಮತ್ತು ದ್ವಾರ ತಲುಪುವ ಮುಂಚೆ ಅದು ಒಂದು ತಿರುವು ಪಡೆದಿರುತ್ತದೆ. ಈ ದ್ವಾರದ ಬಾಯಿಯಲ್ಲಿ ಆಚೆಗೊಂದು ಈಚೆಗೊಂದು ಎರಡು ಗೋಪುರಗಳಿವೆ. ಇದು ಅದನ್ನು ಬಲು ಭದ್ರ ವಾಗಿಸಿದೆ. ಅದು ವಿಶಾಲವೂ ಸುಂದರವೂ ಆಗಿದೆ. ನೀವು ಒಳಗೆ ಪ್ರವೇಶಿಸಿದ ತಕ್ಷಣ ಎರಡು ಚಿಕ್ಕ ದೇವಾಲಯಗಳಿವೆ. ಅವುಗಳಲ್ಲೊಂದಕ್ಕೆ ಅನೇಕ ಗಿಡಗಳಿರುವ ಸುತ್ತುಗೋಡೆಯಿದ್ದರೆ ಇನ್ನೊಂದರಲ್ಲಿ ಪೂರ್ತಿ ಕಟ್ಟಡಗಳೇ ಇವೆ. ಪ್ರಥಮ ದ್ವಾರದ ಈ ಗೋಡೆ ಇಡಿ ನಗರವನ್ನು ಸುತ್ತುವರಿಯುತ್ತದೆ. ಮುಂದೆ ಸಾಗಿದರೆ ಇನ್ನೊಂದು ಗೋಡೆಸಾಲಿರುವ ಇನ್ನೊಂದು ದ್ವಾರ ಬರುತ್ತದೆ. ಅದು ಕೂಡ ಮೊದಲಿನ ಗೋಡೆಯೊಳಗಡೆ ನಗರವನ್ನು ಸುತ್ತುವರಿಯುತ್ತದೆ. ಇಲ್ಲಿಂದ ರಾಜನ ಅರಮನೆಯವರೆಗೆಲ್ಲ ಬಹಳ ಸುಂದರವಾದ ಬೀದಿಗಳು ಮತ್ತು ಮನೆಗಳ ಸಾಲುಗಳು ಮತ್ತು ದಳವಾಯಿಗಳ ಮತ್ತು ಇತರ ಶ್ರೀಮಂತರ ಹಾಗೂ ಪ್ರತಿಷ್ಠಿತರ ಮನೆಗಳಿವೆ. ನೋಡಲು ಚಂದವಾಗಿರುವ ಅನೇಕ ಆಕೃತಿಗಳು ಮತ್ತು ಅಲಂಕಾರಗಳುಳ್ಳ ಮನೆಗಳ ಸಾಲುಗಳನ್ನು ಕಾಣಬಹುದು. ಮುಖ್ಯ ಬೀದಿಗುಂಟ ಹೋದರೆ ಮುಖ್ಯ ಮಾರ್ಗ ಗಳಲ್ಲೊಂದು ಬರುತ್ತದೆ. ಅದು ರಾಜನ ಅರಮನೆಯ ಮುಂದಿರುವ ದೊಡ್ಡ ಬಯಲು ಸ್ಥಳದಿಂದ[31] ಹೊರಡುತ್ತದೆ. ಇದರ ಎದುರುಗಡೆ ಇರುವ ಇನ್ನೊಂದು, ನಗರದ ಇನ್ನೊಂದು ಬದಿಗೆ ಹೋಗುತ್ತದೆ. ಸರಕು ಹಾಗೂ ಮಿಕ್ಕೆಲ್ಲವನ್ನು ಒಯ್ಯುವ ಬಂಡಿಗಳು ಮತ್ತು ವಾಹನಗಳು ಈ ಬಯಲಿನ ಮೇಲೆಯೆ ಹಾಯ್ದು ಹೋಗುತ್ತವೆ. ಅದು ನಗರದ ಮಧ್ಯದಲ್ಲಿರುವುದರಿಂದ ಅದು ಉಪಯುಕ್ತವಾಗದಂತೆ ಇರುವಂತಿಲ್ಲ.

ರಾಜನ ಈ ಅರಮನೆ ಇತರ ಕೆಲವು ಗೋಡೆಗಳಂತೆ ಬಲು ಭದ್ರವಾಗಿರುವ ಗೋಡೆಯಿಂದ ಸುತ್ತುವರಿಯಲ್ಪಟ್ಟದ್ದು ಲಿಸ್ಬನ್‌ನ ದುರ್ಗಕ್ಕಿಂತ ಹೆಚ್ಚು ಸ್ಥಳ ಆವರಿಸಿದೆ.

ಇನ್ನೂ ಮುಂದಕ್ಕೆ ಸಾಗಿ ಇನ್ನೊಂದು ಹೆಬ್ಬಾಗಿಲಿಗೆ ಬಂದರೆ ಅಲ್ಲಿ ಅದಕ್ಕೆ ಹೊಂದಿಕೊಂಡೆ ಆ ಬದಿಗೊಂದು ಈ ಬದಿಗೊಂದರಂತೆ ಎರಡು ದೇವಾಲಯಗಳನ್ನು ಕಾಣಬಹುದು. ಇವುಗಳಲ್ಲೊಂದರ ಬಾಗಿಲಲ್ಲಿ ಅನೇಕ ಕುರಿಗಳನ್ನು ಕಡಿಯಲಾ ಗುತ್ತದೆ. ಈ ಗುಡಿಯ ಬಾಗಿಲಲ್ಲಿ ಹೊರತುಪಡಿಸಿ ಇಡಿ ನಗರದಲ್ಲಿ ಎಲ್ಲೂ ಅನಾರಿಗಕರ (ಹಿಂದೂಗಳ) ಉಪಯೋಗಕ್ಕಾಗಿ ಅಥವಾ ಮಾರುಕಟ್ಟೆಗಳಲ್ಲಿ ಮಾರಾಟಕ್ಕಾಗಿ ಯಾವುದೆ ಕುರಿ ಕಡಿಯುವುದಿಲ್ಲ. ಅವುಗಳ ರಕ್ತವನ್ನು ದೇವಾಲಯದಲ್ಲಿನ ಮೂರ್ತಿಗೆ ನೈವೇದ್ಯ ಮಾಡುತ್ತಾರೆ. ತಲೆಗಳನ್ನು ಅವನಿಗೆ ಬಿಡಲಾಗುತ್ತದೆ ಮತ್ತು ಪ್ರತಿಯೊಂದು ಕುರಿಗೆ ಒಂದು ಚಕ್ರಮ್ ಕೊಡುತ್ತಾರೆ. ಅದು ಕಾರ್ಟೆಲ್ಹಾ (ಕಾರ್ಟೆಲ್ಹಾ ಫಾರ್ದಿಂಗ್)ದಂತಹ ನಾಣ್ಯ.

ಈ ಪಶುಬಲಿಯ ಸಮಯಕ್ಕೆ ಅಲ್ಲೊಬ್ಬ ಆ ದೇವಾಲಯದ ಮೇಲ್ವಿಚಾರಣೆಯಲ್ಲಿರುವ ಜೋಗಿ ಉಪಸ್ಥಿತನಿದ್ದು ಕುರಿ ಅಥವಾ ಆಡಿನ ತಲೆ ಕಡಿದ ಸಲಕ್ಕೊಮ್ಮೆ ಮೂರ್ತಿ ಆ ಬಲಿಯನ್ನು ಸ್ವೀಕರಿಸುವುದರ ಸಂಕೇತವಾಗಿ ಕೊಂಬು ಊದುತ್ತಾನೆ. ಮುಂದೆ ಈ ಜೋಗಿಗಳು ಯಾವ ತರಹದ ಮನುಷ್ಯರೆಂಬ ಬಗೆಗೆ ಹೇಳುವೆ.[32]

ಈ ದೇವಾಲಯಗಳಿಗೆ ತೀರ ಹತ್ತಿರದಲ್ಲಿ ಕೆತ್ತನೆಯ ಕೆಲಸ ಮತ್ತು ಆಕೃತಿಗಳಿಂದ ತುಂಬಿದ ವಿಜಯೋತ್ಸವದ ರಥವಿದೆ. ಅದನ್ನು ಪ್ರತಿವರ್ಷ ಉತ್ಸವ ಕಾಲದಲ್ಲಿ ಅದು ಸಾಗಬಹುದಾದಂತಹ ಬೀದಿಗಳ ಮೂಲಕ ನಗರದಲ್ಲಿ ಎಳೆಯಲಾಗುತ್ತದೆ. ಅದು ದೊಡ್ಡದಿದ್ದು ತಿರುವುಗಳಲ್ಲಿ ಹಾಯದು.

ಮುಂದೆ ಸಾಗಿದರೆ, ನಾನು ವರ್ಣಿಸಿದಂತಹ ಉತ್ಕೃಷ್ಟ ಮನೆಗಳ ಸಾಲುಗಳು ಮತ್ತು ಓಣಿಗಳುಳ್ಳ ವಿಶಾಲ ಮತ್ತು ಸುಂದರ ಬೀದಿಯಿದೆ. ಆ ಮನೆಗಳು ಅಂಥವುಗಳನ್ನು ಪಡೆಯುವಷ್ಟು ಶ್ರೀಮಂತರವು ಎಂದು ತಿಳಿಯಬೇಕು. ಈ ಬೀದಿಯಲ್ಲಿ ವರ್ತಕರಿದ್ದು ಅಲ್ಲಿ ನೀವು ಎಲ್ಲ ತರಹದ ಮಾಣಿಕ್ಯ ಮತ್ತು ವಜ್ರಗಳು, ಪಚ್ಚೆಗಳು, ಮುತ್ತುಗಳು, ಸಣ್ಣಮುತ್ತುಗಳು, ಬಟ್ಟೆ ಮತ್ತು ಭೂಮಿಯ ಮೇಲಿರುವ ಮತ್ತು ನೀವು ಕೊಳ್ಳಬಯಸುವ ಪ್ರತಿಯೊಂದು ತರಹದ ವಸ್ತುವನ್ನೂ ಕಾಣಬಹುದು. ಮತ್ತು ಅಲ್ಲಿ ನೀವು ಪ್ರತಿ ಸಂಜೆ ಸಂತೆಯೊಂದನ್ನು ನೋಡುವಿರಿ. ಅದರಲ್ಲಿ ಅವರು ಅನೇಕ ಸಾಮಾನ್ಯ ಕುದುರೆಗಳನ್ನು ಮತ್ತು ತಟ್ಟುಕುದುರೆಗಳನ್ನು ಹಾಗೂ ಅನೇಕ ಜಂಬೀರಗಳನ್ನು, ನಿಂಬೆಗಳನ್ನು, ಕಿತ್ತಲೆಗಳನ್ನು, ದ್ರಾಕ್ಷಿಗಳನ್ನು ಮತ್ತು ಪ್ರತಿಯೊಂದು ತರಹದ ಕಾಯಿಪಲ್ಯ ಮತ್ತು ಹಣ್ಣುಹಂಪಲನ್ನು ಮತ್ತು ಕಟ್ಟಿಗೆಯನ್ನು ಮಾರುತ್ತಾರೆ. ಈ ಬೀದಿಯಲ್ಲಿ ಇವೆಲ್ಲ ಇವೆ. ಇದರ ಕೊನೆಗೆ ತನ್ನದೇ ಗೋಡೆಯಿರುವ ಇನ್ನೊಂದು ಹೆಬ್ಬಾಗಿಲು ಇದೆ. ಈ ಗೋಡೆ ನಾನು ಹೇಳಿರುವ ಎರಡನೆಯ ಗೋಡೆಯನ್ನು ಈ ನಗರಕ್ಕೆ ಮೂರು ಕೋಟೆಗಳಾಗುವ ರೀತಿಯಲ್ಲಿ ಸೇರುತ್ತದೆ. ಇನ್ನೂ ಒಂದು ಕೋಟೆಯೆಂದರೆ ರಾಜನ ಅರಮನೆ. ಈ ಹೆಬ್ಬಾಗಿಲನ್ನು ದಾಟಿದರೆ ಅನೇಕ ಕುಶಲಕರ್ಮಿಗಳಿರುವ ಇನ್ನೊಂದು ಬೀದಿಯಿದೆ ಮತ್ತು ಅಲ್ಲಿ ಹಲವಾರು ವಸ್ತುಗಳನ್ನು ಮಾರಲಾಗುತ್ತದೆ. ಈ ಬೀದಿಯಲ್ಲಿ ಎರಡು ಚಿಕ್ಕ ದೇವಾಲಯಗಳಿವೆ. ಪ್ರತಿ ಬೀದಿಯಲ್ಲೂ ದೇವಾಲಯಗಳಿವೆ. ಇವುಗಳು ನಮ್ಮ ಭಾಗಗಳಲ್ಲಿ ನಿಮಗೆ ಗೊತ್ತಿರುವಂತೆ ಎಲ್ಲ ಕುಶಲಕರ್ಮಿಗಳ ಮತ್ತು ವರ್ತಕರ ಸಂಘಗಳಂತಹ ಸಂಸ್ಥೆಗಳಿಗೆ ಸೇರಿವೆ. ಆದರೆ, ಪ್ರಮುಖ ಮತ್ತು ದೊಡ್ಡ ದೇವಾಲಯಗಳು ನಗರದ ಹೊರಗೆ ಇವೆ. ಈ ಬೀದಿಯಲ್ಲಿ ಕ್ರಿಸ್ಟೊವಾಒ ದ ಫಿಗ್ವೆರೆಡೊ ವಾಸಿಸಿದ್ದ. ಪ್ರತಿ ಶುಕ್ರವಾರ ಅಲ್ಲಿ ಸಂತೆ ಇರುತ್ತದೆ. ಅದರಲ್ಲಿ ಅನೇಕಾನೇಕ ಹಂದಿಗಳು, ಕೋಳಿಗಳು, ಒಣಗಿಸಿದ ಸಮುದ್ರ ಮೀನುಗಳು, ನನಗೆ ಹೆಸರು ಗೊತ್ತಿರದ ಆ ನಾಡಿನ ಹುಟ್ಟುವಳಿಗಳಾದ ಇತರ ವಸ್ತುಗಳು ಇರುತ್ತವೆ. ಅದರಂತೆಯೆ, ದಿನಾಲು ನಗರದ ಬೇರೆ ಬೇರೆ ಭಾಗಗಳಲ್ಲಿ ಸಂತೆ

ಜರಗುತ್ತದೆ. ಈ ಬೀದಿಯು ಕೊನೆಯಲ್ಲಿ ಮೂರರ ವಾಸಸ್ಥಾನವಿದೆ. ಅದು ನಗರದ ತೀರ ಅಂಚಿಗೆ ಇದೆ. ಈ ನಾಡಿನ ನಿವಾಸಿಗಳಾಗಿರುವ ಈ ಮೂರರಿಗೆ ರಾಜ ಸಂಬಳ ಕೊಡುತ್ತಾನೆ ಮತ್ತು ಅವರು ಅವನ ಕಾವಲುಗಾರರಾಗಿದ್ದಾರೆ. ಅದು ಹೊಂದಿರುವ ಬೃಹತ್ ವ್ಯಾಪಾರ ಹಾಗೂ ಮುಖ್ಯತಃ ವಜ್ರಗಳುಳ್ಳ ಅನೇಕ ಬೆಲೆಯುಳ್ಳ ಹರಳುಗಳಿಂದಾಗಿ ಈ ನಗರದಲ್ಲಿ ಪ್ರತಿಯೊಂದು ದೇಶ ಹಾಗೂ ಜನಾಂಗದ ಜನರನ್ನು ಕಾಣಬಹುದು.

ಈ ನಗರದ ಗಾತ್ರದ ಬಗೆಗೆ ನಾನಿಲ್ಲಿ ಬರೆಯುವದಿಲ್ಲ. ಏಕೆಂದರೆ, ಯಾವ ಸ್ಥಳದಿಂದಲೂ ಅದು ಎಲ್ಲ ಕಾಣಿಸದು. ಆದರೆ ನಾನೊಂದು ಗುಡ್ಡ ಏರಿದೆ, ಅಲ್ಲಿಂದ ಅದರ ಬಹುಭಾಗವನ್ನು ನೋಡಲು ಶಕ್ಯವಾಯಿತು. ಅದನ್ನು ಎಲ್ಲ ನೋಡಲಾಗಲಿಲ್ಲವೇಕೆಂದರೆ ಅದು ಹಲವಾರು ಬೆಟ್ಟಸಾಲುಗಳ ಮಧ್ಯೆ ಇದೆ. ಅಲ್ಲಿಂದ ನಾನು ನೋಡಿದುದು ರೋಮ್‌ನಷ್ಟು ವಿಶಾಲವಾಗಿಯೂ ಮತ್ತು ಬಹಳ ಸುಂದರವಾಗಿಯೂ ಕಂಡಿತು. ಅದರೊಳಗೆ ಮತ್ತು ಮನೆಗಳ ತೋಟಗಳಲ್ಲಿ ಅನೇಕ ಗಿಡಗಳಿವೆ ಮತ್ತು ಅದರ ಮಧ್ಯೆ ಹರಿಯುವ ನೀರಿನ ಅನೇಕ ನಾಲೆಗಳಿವೆ. ಅಲ್ಲಲ್ಲಿ ಸರೋವರಗಳಿವೆ. ರಾಜ ತನ್ನ ಅರಮನೆಯ ಹತ್ತಿರವೇ ತೆಂಗಿನ ತೋಪು ಮತ್ತು ಇತರ ಸಂಪದ್ಭರಿತ ಹಣ್ಣಿನ ಗಿಡಗಳನ್ನು ಹೊಂದಿದ್ದಾನೆ. ಮೂರರ ವಾಸಸ್ಥಾನದ ಕೆಳಗಡೆ ಒಂದು ಚಿಕ್ಕ ನದಿಯಿದೆ. ಅದರ ಈ ಬದಿಗೆ ಅನೇಕ ಹಣ್ಣಿನ ತೋಟಗಳು ಮತ್ತು ಅನೇಕ ಹಣ್ಣಿನ ಗಿಡಗಳುಳ್ಳ ತೋಟಗಳು ಇವೆ. ಅವುಗಳಲ್ಲಿ ಬಹುಮಟ್ಟಿಗೆ ಇರುವುದು ಮಾವು, ಅಡಿಕೆ, ಹಲಸು ಮತ್ತು ಅನೇಕ ನಿಂಬೆ, ಕಿತ್ತಳೆ ಗಿಡಗಳು ಅವುಗಳು ಒಂದಕ್ಕೊಂದು ಎಷ್ಟು ಗುತ್ತಾಗಿ ಬೆಳೆದಿವೆಯೆಂದರೆ ಅದು ದಟ್ಟ ಅರಣ್ಯದಂತೆ ತೋರುತ್ತದೆ. ಮತ್ತು ಅಲ್ಲಿ ಬಿಳಿ ದ್ರಾಕ್ಷಿಗಳೂ ಉಂಟು. ನಗರದಲ್ಲಿರುವ ನೀರೆಲ್ಲ ಪ್ರಥಮ ಸುತ್ತಿನ ಗೋಡೆಯ ಹೊರಗೆ ಇರುವ ನಾನು ಹೇಳಿದ ಎರಡು ಕೆರೆಗಳಿಂದ ಬರುತ್ತದೆ.

ಈ ನಗರದಲ್ಲಿನ ಜನರ ಸಂಖ್ಯೆ ಎಣಿಕೆ ಮಿಕ್ಕಿದ್ದು. ಎಷ್ಟರಮಟ್ಟಿಗೆಂದರೆ ಕಲ್ಪಿತವೆಂದು ತಿಳಿದಾರೆಂಬ ಭಯದಿಂದ ನಾನು ಅದನ್ನು ಇಲ್ಲಿ ಬರೆಯಲಿಚ್ಛಿಸುವದಿಲ್ಲ. ಜನರ ಮತ್ತು ಆನೆಗಳ ಸಂಖ್ಯೆ ಎಷ್ಟು ದೊಡ್ಡದಾಗಿತ್ತೆಂದರೆ ಅಶ್ವಾಳಾಗಲಿ ಕಾಲಾಳಾಗಲಿ ಯಾವ ಸೈನ್ಯವೂ ಯಾವ ಓಣಿ ಅಥವಾ ಬೀದಿಯನ್ನೂ ಭೇದಿಸಿಕೊಂಡು ನುಗ್ಗಲು ಸಾಧ್ಯವಿಲ್ಲ.

ಜಗತ್ತಿನಲ್ಲಿಯೆ ಇದು ಅತ್ಯಂತ ಚನ್ನಾಗಿ ಸವರಿಸಿದ ನಗರ ಮತ್ತು ಅಕ್ಕಿ, ಗೋಧಿ, ಧಾನ್ಯಗಳು, ಮುಸುಕಿನ ಜೋಳ, ಕೆಲಮಟ್ಟಿನ ಜವೆ ಮತ್ತು ಅವರೆಗಳು, ಹಸಿರುಗಡಲೆ, ಬೇಳೆಕಾಳು, ಕುದುರೆಗಡಲೆ ಮತ್ತು ಈ ನಾಡಿನಲ್ಲಿ ಬೆಳೆಯುವ ಹಾಗೂ ಜನರ ಆಹಾರವಾಗಿರುವ ಇತರ ಅನೇಕ ಧಾನ್ಯಗಳು ಮೊದಲಾದ ಆಹಾರ ಧಾನ್ಯಗಳ ದಾಸ್ತಾನು ಮಾಡಲಾಗಿದೆ. ಇವುಗಳ ದೊಡ್ಡ ಸಂಗ್ರಹವಿದ್ದು ಇವುಗಳು ಬಹಳ

ಅಗ್ಗವಾಗಿವೆ. ಅದನ್ನು ಮೂರರನ್ನುಳಿದು ಬೇರೆ ಯಾರೂ ತಿನ್ನದುದರಿಂದ ಗೋದಿ ಇತರ ಧಾನ್ಯಗಳಷ್ಟು ಸಾಮಾನ್ಯವಾಗಿಲ್ಲ. ಆದರೆ, ನಾನು ಹೇಳಿದುದನ್ನು ನೀವು ಕಾಣುವಿರಿ. ಬೀದಿಗಳು ಮತ್ತು ಪೇಟೆಗಳು ಹೇರಿದ ಲೆಕ್ಕವಿಲ್ಲದಷ್ಟು ಎತ್ತುಗಳಿಂದ ತುಂಬಿದುದರಿಂದ ಅವುಗಳಿಂದಾಗಿ ನೀವು ಮುಂದೆ ಸಾಗಲಾರಿರಿ ಮತ್ತು ಅನೇಕ ಬೀದಿಗಳಲ್ಲಿ ಅವು ಎಷ್ಟೊಂದು ಇರುತ್ತವೆಂದರೆ ನೀವು ಅವು ಹೋಗುವವರೆಗೆ ನಿಲ್ಲಬೇಕು ಇಲ್ಲವೆ ಇನ್ನೊಂದು ಹಾದಿಯಿಂದ ಹೋಗಬೇಕು. ಬಹಳ ಕೋಳಿಗಳೂ ಇವೆ. ಫವಾಒ ಎಂದು ಕರೆಯಲಾಗುವ ಒಂದು ವಿಂಟೆಮ್‌[33] ಬೆಲೆಯುಳ್ಳ ನಾಣ್ಯಕ್ಕೆ ನಗರದಲ್ಲಿ ಮೂರು ಕೋಳಿ ಕೊಡುತ್ತಾರೆ. ನಗರದ ಹೊರಗೆ ಒಂದು ವಿಂಟೆಮ್‌ಗೆ ನಾಲ್ಕು ಕೋಳಿ ಕೊಡುತ್ತಾರೆ.

ಈ ನಾಡಿನಲ್ಲಿ ಅನೇಕ ಕವುಜುಗ ಹಕ್ಕಿಗಳಿವೆ. ಆದರೆ, ಅವು ನಮ್ಮವಂತಹ ನಮೂನೆಯವು ಅಥವಾ ಮಟ್ಟದವು ಆಗಿಲ್ಲ. ಅವು ಇಟಲಿಯ ಎಸ್ಟರ್ನಗಳಂತಿವೆ. ಇವುಗಳು ಮೂರು ವಿಧಗಳವು ಇವೆ. ಒಂದು ಜಾತಿ ಪೋರ್ತುಗಾಲದವುಗಳಂತೆ ಒಂದೇ ಚಿಕ್ಕ ಗಡಸುಚಾಚು ಹೊಂದಿದೆ; ಇನ್ನೊಂದು ಜಾತಿ ಪ್ರತಿಯೊಂದು ಕಾಲಿನಲ್ಲಿ ಎರಡು ಚೂಪಾದ ಹೆಚ್ಚೂಕಡಿಮೆ ನಮ್ಮ ಬೆರಳಿನಷ್ಟು ಉದ್ದ ಹಾಗೂ ದಪ್ಪವಾದ ಗಡಸುಚಾಚು ಹೊಂದಿದೆ. ಇನ್ನೂ ಒಂದು ಜಾತಿ ಬಣ್ಣದ್ದು. ಇವುಗಳಿಂದಲೂ ಲಾವಕ್ಕಿ ಮತ್ತು ಮೊಲಗಳಿಂದಲೂ ಎಲ್ಲ ಜಾತಿಯ ಕಾಡುಪಕ್ಷಿಗಳಿಂದಲೂ ಮತ್ತು ಸರೋವರಗಳಲ್ಲಿರುವ ಗೀಜಗನಂತೆ ಕಾಣುವ-ಇತರ ಹಕ್ಕಿಗಳಿಂದಲೂ ಮಾರುಕಟ್ಟೆಗಳು ತುಂಬಿರುತ್ತವೆ. ಇವೆಲ್ಲ ಪಕ್ಷಿಗಳು ಮತ್ತು ಬೇಟೆ ಪ್ರಾಣಿಗಳನ್ನು ಅವರು ಜೀವಂತ ಮಾರುತ್ತಾರೆ ಮತ್ತು ಅವು ಬಹಳ ಅಗ್ಗವಿರುತ್ತವೆ. ಏಕೆಂದರೆ, ಅವರು ಒಂದು ವಿಂಟೆಮ್‌ಗೆ ಆರು ಅಥವಾ ಎಂಟು ಕವುಜುಗ ಹಕ್ಕಿಗಳನ್ನು ಕೊಡುತ್ತಾರೆ ಮತ್ತು ಮೊಲಗಳನ್ನು ಎರಡು, ಕೆಲವೊಮ್ಮೆ ಒಂದು ಕೊಡುತ್ತಾರೆ. ಇತರ ಹಕ್ಕಿಗಳನ್ನಾದರೊ ನೀವು ಎಣಿಸಲಾರದಷ್ಟು ಕೊಡುತ್ತಾರೆ. ಏಕೆಂದರೆ, ದೊಡ್ಡವುಗಳನ್ನು ಕೂಡ ಎಷ್ಟೊಂದು ಕೊಡುತ್ತಾರೆಂದರೆ ಅವರು ಕೊಡುವ ಹಕ್ಕಿಗಳು, ಪಾರಿವಾಳಗಳು ಮತ್ತು ನಾಡಿನ ಇತರ ಸಾಮಾನ್ಯ ಪಕ್ಷಿಗಳಂತಹ ಚಿಕ್ಕವುಗಳ ಕಡೆಗೆ ನೀವು ಗಮನಿಸದಿರಬಹುದು. ಹಕ್ಕಿಗಳು ಎರಡು ತರಹದವು: ಕೆಲವು ಪೋರ್ತುಗಾಲಿನಲ್ಲಿನವುಗಳಂತೆ ಇವೆ, ಮಿಕ್ಕವು ಥ್ರಶ್ ಪಕ್ಷಿಗಳಷ್ಟು ದೊಡ್ಡವು. ಹಕ್ಕಿಗಳನ್ನು ಒಂದು ಫವಾಒಗೆ ಹನ್ನೆರಡು ಅಥವಾ ಹದಿನಾಲ್ಕು ಕೊಡುತ್ತಾರೆ. ಪಾರಿವಾಳಗಳ ಬೆಲೆ ಇತರ ಪಕ್ಷಿಗಳಿಗಿದ್ದಷ್ಟೆ. ಅವರು ದಿನಾಲು ಕೊಲ್ಲುವ ಕುರಿಗಳಿಗೆ ಲೆಕ್ಕವಿಲ್ಲ, ಅವುಗಳನ್ನು ಎಣಿಸಲಿಕ್ಕಾಗದು. ಏಕೆಂದರೆ, ಪ್ರತಿಯೊಂದು ಬೀದಿಯಲ್ಲಿ ಮಾಂಸ ಮಾರುವ ಜನರಿದ್ದಾರೆ. ಅದು ಎಷ್ಟು ಸ್ವಚ್ಛ ಹಾಗೂ ದಪ್ಪವಾಗಿರುತ್ತದೆಂದರೆ ಅದು ಹಂದಿಯ ಮಾಂಸದಂತೆ ಕಾಣುತ್ತದೆ. ಕಟುಕರ

ಮನೆಗಳಿರುವ ಕೆಲವು ಬೀದಿಗಳಲ್ಲಿ ಹಂದಿಗಳೂ ಇವೆ. ಅವು ಎಷ್ಟು ಬೆಳ್ಳಗೆ ಮತ್ತು ಸ್ವಚ್ಛವಾಗಿವೆಯೆಂದರೆ ನಿಮಗೆ ಯಾವುದೆ ದೇಶದಲ್ಲಿ ಇದಕ್ಕಿಂತ ಉತ್ತಮವಾದವುಗಳು ದೊರೆಯವು. ಒಂದು ಹಂದಿಯು ಬೆಲೆ ನಾಲ್ಕು ಅಥವಾ ಐದು ಫನಮ್‌ಗಳು. ಅಲ್ಲದೆ, ದಿನಾಲು ಬರುವ ನಿಂಬೆಯ ರಾಶಿಗಳಿಗೆ ಪೊನೊಸ್‌ನವುಗಳು ಯಾವ ಲೆಕ್ಕವೂ ಇಲ್ಲ. ಹಾಗೂ ಸಿಹಿ ಮತ್ತು ಹುಳಿ ಕಿತ್ತಲೆಗಳ, ಕಾಡು ಬದನೆಕಾಯಿಗಳ ಇತರ ಕಾಯಿಪಲ್ಯ ಹಣ್ಣು ಹಂಪಲುಗಳ ವಿಪುಲತೆ ದಂಗುಬಡಿಸುವಂತಹದು. ಈ ನಗರದ ಪರಿಸ್ಥಿತಿ ಹಗಲೆಲ್ಲ ಸಾಮಗ್ರಿ ಮತ್ತು ಆಹಾರಧಾನ್ಯಗಳ ಕೊರತೆ ಬೀಳುವ ಇತರ ನಗರಗಳ ಪರಿಸ್ಥಿತಿಯಂತಿಲ್ಲ. ಏಕೆಂದರೆ, ಇದರಲ್ಲಿ ಎಲ್ಲವೂ ವಿಪುಲವಾಗಿದೆ. ಪ್ರತಿ ದಿನ ಮಾರಲಾಗುವ ಬೆಣ್ಣೆ, ಎಣ್ಣೆ, ಹಾಲುಗಳ ಮೊತ್ತದ ಬಗೆಗೂ ಹೇಳದಿರಲಾರೆ. ಈ ನಗರದಲ್ಲಿ ಜರುಗುವ ಆಕಳು ಮತ್ತು ಎಮ್ಮೆಗಳ ಸಂಗೋಪನೆ ಯಾವ ಪ್ರಮಾಣದ್ದೆಂದರೆ ಅದರಂತಹದಿನ್ನೊಂದನ್ನು ನೋಡಲು ನೀವು ದೂರ ಹೋಗಬೇಕು. ಬಹಳ ದಾಳಿಂಬಗಳೂ ಉಂಟು. ದ್ರಾಕ್ಷಿಗಳನ್ನು ಒಂದು ಫನಮ್‌ಗೆ ಮೂರು ಗೊಂಚಲಿನಂತೆ, ದಾಳಿಂಬಗಳನ್ನು ಹತ್ತರಂತೆ ಮಾರಲಾಗುತ್ತದೆ.

ಈ ನಗರದ ಉತ್ತರ ದಿಕ್ಕಿಗೆ ಬಹಳ ನೀರುಳ್ಳ ದೊಡ್ಡ ನದಿಯಿದೆ. ಅದರಲ್ಲಿ ವಿಪುಲ ಮೀನುಗಳಿವೆ. ಆ ಮೀನುಗಳು ಅನಾರೋಗ್ಯಕರವಾಗಿವೆ. ಮತ್ತು ಈ ನದಿಯಲ್ಲಿ....(ಮೂಲದಲ್ಲಿ ಹೀಗಯೆ ಇದೆ) ಎಂದು ಎನ್ನಬಹುದಾದದ್ದು ಇದೆ. ಉಳಿದ ನದಿಗಳು ಹರಿದುಬಂದು ಇದಕ್ಕೆ ಸೇರಿರುವುದರಿಂದ ಇದು ವಿಶಾಲವಾಗಿದೆ.

ಈಗ ಈ ನದಿಯ ದಂಡೆಯ ಮೇಲಿರುವ ಊರುಗಳನ್ನು ನೋಡೋಣ. ಸೇನುಗುಂಡಿಮ್[34] ಎಂದು ಕರೆಯಲಾಗುವ ನಗರವೊಂದು ನಿರ್ಮಿತವಾಗಿದೆ. ಅದು ಈ ಹಿಂದೆ ರಾಜ್ಯದ ರಾಜಧಾನಿಯಾಗಿತ್ತೆಂದು ಹೇಳುತ್ತಾರೆ. ಆದರೆ ಈಗ ಅಲ್ಲಿ ಬಹಳ ಕಡಿಮೆ ಜನ ವಾಸವಾಗಿದ್ದಾರೆ. ಅದು ಇನ್ನೂ ಒಳ್ಳೆಯ ಗೋಡೆಗಳನ್ನು ಹೊಂದಿದ್ದು ಬಹಳ ಭದ್ರವಾಗಿದೆ. ಮತ್ತು ಅದು ಎರಡೇ ದ್ವಾರಗಳಿರುವ ಎರಡು ಬೆಟ್ಟಸಾಲುಗಳ ನಡುವೆ ಇದೆ. ಈ ನಗರದಲ್ಲಿ ರಾಜನ ಪರವಾಗಿ ಒಬ್ಬ ದಳವಾಯಿ ಇರುತ್ತಾನೆ. ಜನರು ಈ ಊರಿಗೆ ಬುಟ್ಟಿಗಳಂತೆ ದುಂಡಗಿರುವ ದೋಣಿಗಳಲ್ಲಿ ದಾಟಿ ಬರುತ್ತಾರೆ. ಅವುಗಳನ್ನು ಒಳಗಡೆ ಬೆತ್ತದಂತೆ ಮಾಡಿ ಹೊರಮೈಗೆ ಚರ್ಮ ಹೊದಿಸಿರುತ್ತಾರೆ. ಅವುಗಳು ಹದಿನೈದು ಇಪ್ಪತ್ತು ಜನರನ್ನು ಒಯ್ಯಬಲ್ಲವು ಮತ್ತು ಅಗತ್ಯ ಬಿದ್ದರೆ ಕುದುರೆ ಮತ್ತು ಎತ್ತುಗಳೂ ಅವುಗಳಲ್ಲಿ ದಾಟುತ್ತವೆ. ಆದರೆ, ಬಹುಮಟ್ಟಿಗೆ ಈ ಪ್ರಾಣಿಗಳು ಈಜಿ ದಾಟುತ್ತವೆ. ಜನರು ಅವುಗಳನ್ನು ಒಂದು ತರದ ಮೋಟು ಹುಟ್ಟನಿಂದ ಹುಟ್ಟುಹಾಕುತ್ತಾರೆ ಮತ್ತು ಅವು ಇತರ ದೋಣಿಗಳಂತೆ ನೇರವಾಗಿ ಹೋಗಲಾರವಾದುದರಿಂದ ಈ ದೋಣಿಗಳು ಯಾವಾಗಲೂ ದುಂಡಗೆ ತಿರುಗುತ್ತವೆ. ರಾಜ್ಯದಲ್ಲಿ ನದಿಗಳಿರುವೆಡೆಯಲ್ಲೆಲ್ಲ ಇವುಗಳನ್ನು ಬಿಟ್ಟರೆ ಬೇರೆ ದೋಣಿಗಳಿಲ್ಲ.[35]

ಈ ನಗರದಲ್ಲಿ ಸಜೀವ ಕುರಿಗಳನ್ನು ಮಾರುವ ಸ್ಥಳಗಳೂ ಉಂಟು. ನಗರದ ಸುತ್ತಲಿನ ಹೊಲಗಳು ಅವುಗಳಿಂದ ತುಂಬಿದುದನ್ನು ಕಾಣಬಹುದು. ಅದೇ ರೀತಿ ಆಕಳುಗಳು ಹಾಗೂ ಎಮ್ಮೆಗಳದ್ದೂ ನೋಡಲು ಅದು ಸುಂದರ ನೋಟವಾಗಿರುತ್ತದೆ. ಹಾಗೆಯೆ ಆಡುಗಳು, ಮರಿಗಳು ಮತ್ತು ಟಗರುಗಳದ್ದೂ. ಟಗರುಗಳು ಎಷ್ಟು ದೊಡ್ಡವಿರುತ್ತವೆಂದರೆ ಅವುಗಳಿಗೆ ಲಗಾಮು ಜೀನು ತೊಡಿಸಲಾಗುತ್ತದೆ. ಅನೇಕ ಕುರಿಗಳೂ ಅದೇ ರೀತಿ ಇದ್ದು ಹುಡುಗರು ಅವುಗಳ ಮೇಲೆ ಕುಳಿತು ನಡೆಸುತ್ತಾರೆ.

ನಗರದ ಗೋಡೆಗಳಾಚೆ ಉತ್ತರಕ್ಕೆ ಮೂರು ಬಲು ಸುಂದರ ದೇವಾಲಯಗಳಿವೆ. ಅವುಗಳಲ್ಲೊಂದನ್ನು ವಿಟಿಲಾ[36] ಎಂದು ಕರೆಯಲಾಗುತ್ತದೆ. ಅದು ಈ ನಾಗುಂಡಿಮ್ ನಗರಕ್ಕೆ ಎದುರಾಗಿ ನಿಂತಿದೆ. ಇನ್ನೊಂದನ್ನು ಆ ಒಪರಾದ್ಯನಾರ್[37] ಎಂದು ಕರೆಯುತ್ತಾರೆ. ಅವರು ಬಹಳ ಭಕ್ತಿ ತೋರುವುದೂ ಮತ್ತು ಮಹಾ ತೀರ್ಥ ಯಾತ್ರೆ ಹೊರಡುವುದೂ ಇದಕ್ಕೇ.

ಈ ದೇವಾಲಯದಲ್ಲಿ, ಪೂರ್ವಕ್ಕಿರುವ ಅದರ ಪ್ರಧಾನ ಹೆಬ್ಬಾಗಿಲಿಗೆ ಎದುರಾಗಿ ಉಪ್ಪರಿಗೆಯ ಮೊಗಸಾಲೆ ಹಾಗೂ ಕಮಾನುದಾರಿಗಳುಳ್ಳ ಬಲು ಸುಂದರ ಮನೆಗಳ ಬಲು ಸುಂದರ ಬೀದಿಯಿದೆ. ಇವುಗಳಲ್ಲಿ ಅಲ್ಲಿಗೆ ಬರುವ ಯಾತ್ರಿಗಳಿಗೆ ಆಶ್ರಯ ನೀಡಲಾಗುತ್ತದೆ. ಮೇಲುವರ್ಗದವರ ವಾಸಕ್ಕಾಗಿ ಮನೆಗಳೂ ಇವೆ. ಅದೇ ಬೀದಿಯಲ್ಲಿ ರಾಜನ ಅರಮನೆಯೊಂದಿದೆ. ದೇವಾಲಯವನ್ನು ಸಂದರ್ಶಿಸುವಾಗ ಅವನು ಅಲ್ಲಿಯೆ ತಂಗುತ್ತಾನೆ. ಈ ಪ್ರಥಮ ಹೆಬ್ಬಾಗಿಲಿನ ಮೇಲೆ ಒಂದು ದಾಳಿಂಬ ವೃಕ್ಷ[38]ವಿದೆ. ದ್ವಾರಕ್ಕೆ ಬಲು ಎತ್ತರವಾದ ಗೋಪುರವಿದೆ. ಗೋಪುರ ಪುರುಷ ಸ್ತ್ರೀಯರ, ಬೇಟೆಯ ದೃಶ್ಯಗಳ, ಇನ್ನೂ ಅನೇಕ ಆಕೃತಿಗಳ ಸಾಲುಗಳಿಂದ ಆಚ್ಛಾದಿತವಾಗಿದೆ. ಗೋಪುರ ಮೇಲಕ್ಕೆ ಹೋದಂತೆ ಕಿರಿದಾಗುವುದರಿಂದ ಆಕೃತಿ ಗಳು ಆಕಾರದಲ್ಲಿ ಚಿಕ್ಕದಾಗುತ್ತವೆ. ಈ ದ್ವಾರ ದಾಟಿದರೆ ಮೊದಲಿನದಂತಹದೇ ಇನ್ನೊಂದು ದ್ವಾರವುಳ್ಳ ವಿಶಾಲ ಅಂಗಳದಲ್ಲಿ ಪ್ರವೇಶಿಸುತ್ತೀರಿ. ಆದರೆ ಈ ದ್ವಾರ ಉದ್ದಕ್ಕೂ ಚಿಕ್ಕದಾಗಿದೆ. ಈ ಎರಡನೆಯ ದ್ವಾರ ದಾಟಿದರೆ ಕಲ್ಲಿನ ಕಂಬಗಳ ಮೇಲೆ ಸುತ್ತಲೂ ಇರುವ ಮೊಗಸಾಲೆಗಳುಳ್ಳ ವಿಶಾಲ ಅಂಗಳವಿದೆ. ಈ ಅಂಗಳದ ಮಧ್ಯದಲ್ಲಿ ಗರ್ಭಗುಡಿಯಿದೆ.

ಪ್ರಮುಖ ದ್ವಾರದ ಎದುರಿಗೆ ನಾಲ್ಕು ಸ್ತಂಭಗಳಿವೆ. ಎರಡು ಚಿನ್ನದ ಗಿಲೀಟು ಮಾಡಿದವು, ಇನ್ನೆರಡು ತಾಮ್ರದವು. ಅವುಗಳ ದೀರ್ಘ ವಯಸ್ಸಿನಿಂದಾಗಿ ಬಂಗಾರ ಉದುರಿಹೋಗಿದೆ. ಎಂದು ನನಗೆನಿಸುತ್ತದೆ ; ಉಳಿದೆರಡೂ ತಾಮ್ರದವು, ಏಕೆಂದರೆ ಎಲ್ಲವೂ ತಾಮ್ರದವು. ದೇವಾಲಯದ ದ್ವಾರಕ್ಕೆ ತೀರ ಹತ್ತಿರವಿರುವುದನ್ನು ಈಗ ಇಲ್ಲಿ ಆಳುತ್ತಿರುವ ಈ ರಾಜಾ ಕ್ರಿಸ್ನರಾವ್ ಕೊಟ್ಟಿದ್ದ. ಮಿಕ್ಕವುಗಳನ್ನು ಅವನ ಪೂರ್ವಾಧಿಕಾರಿಗಳು ನೀಡಿದ್ದರು. ದೇವಾಲಯದ ದ್ವಾರದ ಹೊರಬದಿಯಲ್ಲ

ಚಾವಣಿಯವರೆಗೆ ತಾಮ್ರದಿಂದ ಆಚ್ಛಾದಿತವಾಗಿದ್ದು ಬಂಗಾರದ ಗಿಲೀಟು ಮಾಡ ಲಾಗಿದೆ. ಚಾವಣಿಯ ತುದಿಯ ಮೇಲೆ ಎರಡೂ ಬದಿಗೆ ಪೂರ್ತಿ ಬಂಗಾರದ ಗಿಲೀಟು ಮಾಡಲಾದ ಹುಲಿಗಳಂತೆ ಕಾಣುವ ಕೆಲವು ದೊಡ್ಡ ಪ್ರಾಣಿಗಳಿವೆ. ಈ ಗರ್ಭ ಗುಡಿಯನ್ನು ಪ್ರವೇಶಿಸಿದಾಕ್ಷಣ ಅದನ್ನು ಹೊತ್ತಿರುವ ಕಂಬ ಕಂಬದಲ್ಲೂ ಇರುವ ಅನೇಕ ಚಿಕ್ಕ ರಂಧ್ರಗಳಲ್ಲಿ ಎಣ್ಣೆದೀಪಗಳಿರುವುದನ್ನು ನೋಡುತ್ತೀರಿ. ಅವು ಪ್ರತಿ ರಾತ್ರಿ ಉರಿಯುತ್ತವೆ, ಎಂದು ಅವರು ನನಗೆ ಹೇಳುತ್ತಾರೆ. ಅವು ಎರಡೂವರೆ ಇಲ್ಲವೆ ಮೂರು ಸಾವಿರ ದೀಪಗಳಾಗುತ್ತವೆ. ಈ ಗುಡಿಯನ್ನು ದಾಟಿದ ಕೂಡಲೆ ಯಾವುದೊ ಚರ್ಚ್‌ನ ನೆಲಗವಿಯಂತಿರುವ ಇನ್ನೊಂದು ಚಿಕ್ಕ ಗುಡಿಯನ್ನು ಪ್ರವೇಶಿಸುತ್ತೀರಿ. ಅದಕ್ಕೆ ಬದಿಗಳಲ್ಲಿ ಎರಡು ಬಾಗಿಲುಗಳಿದ್ದು ಅಲ್ಲಿಂದ ಮುಂದಕ್ಕೆ ಈ ಕಟ್ಟಡ ಆರಾಧನಾಗೃಹದಂತಿದೆ. ಅಲ್ಲಿ ಅವರು ಆರಾಧಿಸುವ ಮೂರ್ತಿಯಿದೆ. ಅದನ್ನು ತಲುಪುವ ಮುನ್ನ ಮೂರು ಬಾಗಿಲುಗಳಿವೆ. ಗರ್ಭಗುಡಿ ಗುಮ್ಮಟ ಚಾವಣಿಯಾಗಿದ್ದು ಆಕಾಶದಿಂದ ಯಾವುದೆ ಬೆಳಕು ಬೀಳದಿದ್ದುದರಿಂದ ಕತ್ತಲಾಗಿರುತ್ತದೆ. ಅದನ್ನು ಯಾವಾಗಲೂ ಬತ್ತಿಗಳಿಂದ ಬೆಳಗಿಸಲಾಗುತ್ತದೆ. ಮೊದಲ ಬಾಗಿಲಲ್ಲಿ ದ್ವಾರಪಾಲಕರಿದ್ದು ಅವರು ಅದರ ಮೇಲ್ವಿಚಾರಣೆಯಲ್ಲಿದ್ದ ಬ್ರಾಹ್ಮಣರನ್ನು ಹೊರತುಪಡಿಸಿ ಯಾರಿಗೂ ಪ್ರವೇಶಿಸಲು ಬಿಡುವುದಿಲ್ಲ. ನಾನು ಅವರಿಗೆ ಏನನ್ನೊ ಕೊಟ್ಟೆನೆಂದು ಒಳಗೆ ಬಿಟ್ಟರು. ಬಾಗಿಲು ಬಾಗಿಲ ಮಧ್ಯೆ ಚಿಕ್ಕ ದೇವತೆಗಳ ವಿಗ್ರಹಗಳಿವೆ. ಪ್ರಧಾನ ಮೂರ್ತಿ ಯಾವುದೇ ಆಕಾರವಿಲ್ಲದ ದುಂಡು ಕಲ್ಲು. ಆದೆಂದರೆ ಅವರಿಗೆ ಬಲು ಭಕ್ತಿ. ಈ ಕಟ್ಟಡದ ಹೊರಮೈಗೆಲ್ಲ ತಾಮ್ರದ ಗಿಲೀಟು ಕೊಡಲಾಗಿದೆ. ದೇವಾಲಯದ ಹಿಂದೆ ಹೊರಗಡೆ ನಾನು ಹೇಳಿದ ಮೊಗಸಾಲೆಗಳಿಗೆ ಹತ್ತಿರವಾಗಿಯೆ ಬಿಳಿ ಚಂದ್ರಕಾಂತ ಶಿಲೆಯಲ್ಲಿ ಮಾಡಲಾದ ಆರು ತೋಳುಗಳುಳ್ಳ ಚಿಕ್ಕ ವಿಗ್ರಹವಿದೆ. ಒಂದರಲ್ಲಿ....ಇದೆ[39], ಇನ್ನೊಂದರಲ್ಲಿ ಖಡ್ಗವಿದೆ. ಉಳಿದವುಗಳಲ್ಲಿ ಪವಿತ್ರ ಲಾಂಛನಗಳಿವೆ. ಮತ್ತು ಅದರ ಪಾದದಡಿಯಲ್ಲಿ ಒಂದು ಕೋಣವಿದೆ ಮತ್ತು ಅದನ್ನು ಕೊಲ್ಲಲು ಸಹಾಯಕವಾದ ದೊಡ್ಡ ಪ್ರಾಣಿಯೊಂದಿದೆ. ಈ ದೇವಾಲಯದಲ್ಲಿ ಅವಿರತವಾಗಿ ತುಪ್ಪದ ದೀವಿಗೆ ಉರಿಯುತ್ತದೆ ಮತ್ತು ಸುತ್ತಲೂ ಪೂಜಾಗ್ರಹಗಳಿಗಾಗಿ ಚಿಕ್ಕ ದೇವಾಲಯಗಳಿವೆ.

ಮೇಲೆ ಹೇಳಿದ ಇತರ ದೇವಾಲಯಗಳು ಅದೇ ಮಾದರಿಯಲ್ಲಿ ರಚಿಸಲ್ಪಟ್ಟಿವೆ. ಆದರೆ ಇದು ಪ್ರಮುಖವಾದುದು ಮತ್ತು ಅತ್ಯಂತ ಪ್ರಾಚೀನವಾದುದು. ಅವುಗಳು ಹಲವಾರು ಕಟ್ಟಡಗಳನ್ನು ಮತ್ತು ಅನೇಕ ಗಿಡಗಳುಳ್ಳ ತೋಟಗಳನ್ನು ಹೊಂದಿವೆ. ಅವುಗಳಲ್ಲಿ ಬ್ರಾಹ್ಮಣರು ಕಾಯಿಪಲ್ಯಗಳನ್ನು[40] ಮತ್ತು ತಾವು ತಿನ್ನುವ ಇತರ ಸಸ್ಯಗಳನ್ನು ಬೆಳೆಯುತ್ತಾರೆ. ಇವುಗಳಲ್ಲಿ ಯಾವುದೊಂದರ ಉತ್ಸವ ಜರುಗಿದಾಗ ಗಾಲಿಗಳ ಮೇಲೆ ಉರುಳುವ ವಿಜಯೋತ್ಸವ ರಥಗಳನ್ನು ಎಳೆಯುತ್ತಾರೆ. ಬಹಳ

ವೈಭವದೊಂದಿಗೆ ಹೇಳಲಾದ ಬೇದಿಗುಂಟೆ ವಿಗ್ರಹವನ್ನು (ಒಯ್ಯಲಾಗುತ್ತದೆ). ಅದರೊಂದಿಗೆ ನೃತ್ಯಕನ್ಯೆಯರು ಮತ್ತು ಸ್ತ್ರೀಯರು ಸಂಗೀತದೊಂದಿಗೆ ದೇವಾಲಯಕ್ಕೆ ಹೋಗುತ್ತಾರೆ. ಈ ರಥಗಳನ್ನು ಎಳೆಯುವ ರೀತಿಯ ಬಗೆಗೆ ನಾನು ಹೇಳುವದಿಲ್ಲ. ಏಕೆಂದರೆ, ನಾನು ಈ ನಗರದಲ್ಲಿದ್ದ ಒಟ್ಟು ಅವಧಿಯಲ್ಲಿ ಯಾವುದನ್ನೂ ಎಳೆಯಲಿಲ್ಲ. ನಗರದಲ್ಲಿ ಇನ್ನೂ ಅನೇಕ ದೇವಾಲಯಗಳಿವೆ. ಪದಬಾಹುಳ್ಯ ತೊಡೆಯಲು ಅವುಗಳ ಬಗೆಗೆ ನಾನು ಇಲ್ಲಿ ಹೇಳುವುದಿಲ್ಲ.

ಈ ಅನಾಗರಿಕರಲ್ಲಿಯೂ ನಮ್ಮಲ್ಲಿಯಂತೆ ಉತ್ಸವ ಆಚರಿಸುವ ದಿನಗಳಿವೆ ಯೆಂಬುದನ್ನು ನೀವು ತಿಳಿಯಬೇಕು. ಅವರ ಉಪವಾಸದ ದಿನಗಳೂ ಇವೆ. ಅಂದು ಅವರು ಇಡಿ ದಿನ ಏನನ್ನೂ ಸೇವಿಸುವದಿಲ್ಲ; ಮಧ್ಯರಾತ್ರಿಗೆ ಮಾತ್ರ ಸೇವಿಸು ತ್ತಾರೆ. ಮುಖ್ಯ ಉತ್ಸವದ ಕಾಲ ಬಂದಾಗ, ಅದು ರಾಜ್ಯದ ರಾಜಧಾನಿಯಾದುದ ರಿಂದಲೂ, ರಾಜ ಹೊಸ ನಗರದಿಂದ ಈ ಬೀಸ್ನಗ ನಗರಕ್ಕೆ ಆಗಮಿಸುತ್ತಾನೆ. ಈ ಉತ್ಸವಗಳಿಗೆ ಅವರು ಹಾಜರಿರುವಂತೆ ರಾಜ್ಯದ ಎಲ್ಲ ನರ್ತಕಿಯರನ್ನು ಕರೆಯಿಸಲಾಗುತ್ತದೆ. ಹಾಗೆಯೆ ದಳವಾಯಿಗಳು ಮತ್ತು ರಾಜರು ಮತ್ತು ಮಹಾ ಪ್ರಭುಗಳನ್ನು, ಅವರ ಪರಿವಾರಗಳೊಂದಿಗೆ ಆದರೆ, ರಾಜ ಯುದ್ಧಕ್ಕೆ ಕಳಿಸಿದವರನ್ನು ಇಲ್ಲವೆ ಬೇರೆ ಭಾಗಗಳಲ್ಲಿರುವವರನ್ನು ಇಲ್ಲವೆ (ಆಕ್ರಮಣದ) ಭೀತಿಯಿರುವ ಕಡೆ ರಾಜ್ಯದ ದೂರ ಗಡಿಯಲ್ಲಿರುವವರನ್ನು ಮಾತ್ರ, ಉದಾಹರಣೆಗೆ ಒರಿಯಾ ರಾಜ್ಯ ಮತ್ತು ಇಡಲ್‌ಸಾಒನ ಪ್ರದೇಶಗಳು, ಕರೆಯುವದಿಲ್ಲ. ಇಂಥ ದಳವಾಯಿಗಳು ಇಂಥ ಸ್ಥಳಗಳಲ್ಲಿ ಅನುಪಸ್ಥಿತರಿದ್ದರೂ ನಾನು ಇನ್ನು ಮುಂದೆ ಹೇಳುವವರು ಅವರ ಪರವಾಗಿ ಉತ್ಸವಕ್ಕೆ ಬಂದಿರುತ್ತಾರೆ.

ಹನ್ನೆರಡನೆಯ ಸೆಪ್ಟಂಬರದಂದು[41] ಪ್ರಾರಂಭವಾಗಿ ಒಂಬತ್ತು ದಿನ ನಡೆಯುವ ಈ ಉತ್ಸವಗಳು ರಾಜನ ಅರಮನೆಯಲ್ಲಿ ಜರಗುತ್ತವೆ.

ಅರಮನೆ ಈ ತರಹದ್ದು ಇದೆ. ಅದು ನಾನು ಹೇಳಿರುವ ಬಯಲು ಸ್ಥಳಕ್ಕೆ[42] ತೆರೆಯುವ ದ್ವಾರ ಹೊಂದಿದೆ. ಈ ದ್ವಾರದ ಮೇಲೆ ಸ್ವಲ್ಪ ಎತ್ತರದ ಗೋಪುರವಿದೆ. ಮಿಕ್ಕವುಗಳಂತೆ ಇದನ್ನೂ ಕಟ್ಟಲಾಗಿದ್ದು ಅದಕ್ಕೆ ಮೊಗಸಾಲೆಗಳಿವೆ. ಈ ದ್ವಾರದ ಹೊರಗೆ ಅರಮನೆಯನ್ನು ಸುತ್ತುತ್ತದೆಂದು ನಾನು ಹೇಳಿರುವ ಗೋಡೆ ಪ್ರಾರಂಭ ವಾಗುತ್ತದೆ. ದ್ವಾರದಲ್ಲಿ ಅನೇಕ ದ್ವಾರಪಾಲಕರಿರುವರು.[42a] ಅವರು ಕೈಯಲ್ಲಿ ಚರ್ಮದ ಕೋರಡಗಳು ಮತ್ತು ಬಡಿಗೆಗಳನ್ನು ಹಿಡಿದಿರುತ್ತಾರೆ. ದಳವಾಯಿಗಳು ಮತ್ತು ಪ್ರಮುಖರು ಮತ್ತು ಕಾವಲು ಪಡೆಯ ಮುಖ್ಯಸ್ಥನಿಂದ ಆಜ್ಞೆ ಬಂದಿರುವ ವರನ್ನು ಅಲ್ಲದೆ ಬೇರೆ ಯಾರನ್ನೂ ಪ್ರವೇಶಿಸಗೊಡುವುದಿಲ್ಲ. ಈ ದ್ವಾರ ದಾಟಿದರೆ ಒಂದು ಬಯಲು ಸ್ಥಳವಿದೆ ಮತ್ತು ಮೊದಲಿನಂತಹ ಇನ್ನೊಂದು ದ್ವಾರವುಂಟು. ಅಲ್ಲಿಯೂ ದ್ವಾರಪಾಲಕರು ಮತ್ತು ರಕ್ಷಕರು ಇರುವರು. ಇದನ್ನು ಪ್ರವೇಶಿಸಿದ

ಕೂಡಲೆ ಒಂದು ವಿಶಾಲ ಬಯಲು ಸ್ಥಳವಿದೆ. ಅದರ ಒಂದು ಬದಿಗೆ ಮತ್ತು ಇನ್ನೊಂದು ಬದಿಗೆ ಎತ್ತರವಲ್ಲದ ಮೊಗಸಾಲೆಗಳಿವೆ. ಇಲ್ಲಿ ದಳವಾಯಿಗಳು ಮತ್ತು ಪ್ರಮುಖರು ಉತ್ಸವ ನೋಡಲೋಸುಗ ಕುಳಿತುಕೊಳ್ಳುತ್ತಾರೆ. ಈ ಬಯಲು ಸ್ಥಳದ ಉತ್ತರ ದಿಕ್ಕಿನ ಎಡಬದಿಗೆ ಒಂದು ಏಕ ಮಹಡಿಯ ದೊಡ್ಡ ಕಟ್ಟಡವಿದೆ. ಮಿಕ್ಕವುಗಳೆಲ್ಲ ಅದರಂತೆಯೆ ಇವೆ. ಈ ಕಟ್ಟಡ ಆನೆಯಾಕಾರದ ಮತ್ತು ಇತರ ಆಕೃತಿಗಳುಳ್ಳ ಕಂಬಗಳ ಮೇಲೆ ನಿಂತಿದ್ದು ಮುಂದೆಲ್ಲ ಬಯಲಿದೆ ಅದಕ್ಕೆ ಹೋಗಲು ಮೆಟ್ಟಿಲುಗಳನ್ನು ಹತ್ತಬೇಕು. ಅದರ ಸುತ್ತ ಕೆಳಗಡೆ ಜಗತಿಯಿದೆ. ಅದಕ್ಕೆ ಹಾಸುಗಲ್ಲು ಜೋಡಿಸಲಾಗಿದೆ. ಇಲ್ಲಿ ಕೆಲವು ಜನ ಉತ್ಸವ ನೋಡಲು ನಿಂತು ಕೊಳ್ಳುತ್ತಾರೆ. ಅದನ್ನು ನಾನೀಗಾಗಲೆ ಹೇಳಿರುವಂತೆ ರಾಜ ಒರಿಯಾ ವಿರುದ್ಧ ಯುದ್ಧದಿಂದ ಹಿಂತಿರುಗಿದಾಗ ಕಟ್ಟಿದ್ದರಿಂದ ಈ ಮನೆಗೆ ವಿಜಯಗೃಹ ಎಂದು ಕರೆಯ ಲಾಗುತ್ತದೆ. ಬಯಲು ಸ್ಥಳದ ಬಲಬದಿಗೆ ಕೆಲವು ಅಟ್ಟಣೆಗಳಿದ್ದವು. ಅವುಗಳು ಕಟ್ಟಿಗೆಯಿದ್ದು ಗೋಡೆಯ ತುದಿಯ ಮೇಲೂ ಕಾಣುವಷ್ಟು ಎತ್ತರವಾಗಿದ್ದವು. ಅವುಗಳ ಮೇಲ್ಭಾಗವನ್ನು ನಡುಗೆಂಪು ಮತ್ತು ಹಸಿರು ಮುಖಮಲ್ಲಿನಿಂದ ಮತ್ತು ಇತರ ಸುಂದರ ಬಟ್ಟೆಗಳಿಂದ ಮುಚ್ಚಲಾಗಿತ್ತು ಮತ್ತು ಕೆಳಗಿನಿಂದ ಮೇಲಿನವರೆಗೆ ಅಲಂಕರಿಸಲಾಗಿತ್ತು. ಈ ಬಟ್ಟೆ ಉಣ್ಣೆಯದೆಂದು ಯಾರೂ ಊಹಿಸದಿರಲಿ. ಏಕೆಂದರೆ, ಈ ದೇಶದಲ್ಲಿ ಅಂಥದಾವುದೂ ಇಲ್ಲ. ಆದರೆ ಅವು ಉತ್ಕೃಷ್ಟ ಅರಳೆಯವು. ಈ ಅಟ್ಟಣೆಗಳನ್ನು ಆ ಜಾಗದಲ್ಲಿ ಯಾವಾಗಲೂ ಇಟ್ಟಿರದೆ ಈ ಉತ್ಸವಗಳಿಗಾಗಿ ವಿಶೇಷತಃ ಮಾಡಲಾಗಿರುತ್ತದೆ. ಅವು ಹನ್ನೊಂದು ಇವೆ. ದ್ವಾರಗಳಿಗೆ ಎದುರಾಗಿ ಎರಡು ವರ್ತುಲಗಳಿದ್ದವು. ಅವುಗಳಲ್ಲಿ ಬಂಗಾರ, ವಜ್ರ ಮತ್ತು ಮುತ್ತುಗಳ ಆಭರಣಗಳಿಂದ ಅಲಂಕೃತರಾದ ನರ್ತಕಿಯರಿದ್ದರು. ಬಯಲು ಜಾಗದ ಮುಂದೆ ಪೂರ್ವ ಬದಿಗಿರುವ ದ್ವಾರಕ್ಕೆದುರಾಗಿ ನಾನು ಹೇಳಿರುವ ವಿಜಯಗೃಹದ ತರಹದ್ದೇ ಎರಡು ಕಟ್ಟಡಗಳಿವೆ. ಈ ಕಟ್ಟಡಗಳಿಗೆ ಸುಂದರವಾಗಿ ಕಲ್ಲಿನಲ್ಲಿ ಮಾಡಿದ ಒಂದು ರೀತಿಯ ಮೆಟ್ಟಿಲು ಇವೆ—ಒಂದು ಮಧ್ಯದಲ್ಲಿದ್ದರೆ ಇನ್ನೊಂದು ಕೊನೆಗಿದೆ. ಈ ಕಟ್ಟಡದ ತುಂಬ, ಗೋಡೆಗಳು ಮತ್ತು ಮಾಳಿಗೆ ಎರಡೂ ಅಲ್ಲದೆ ಆಧಾರಗಳನ್ನೂ ಬಿಡದಂತೆ ಒಳ್ಳೆಯ ಬಟ್ಟೆಗಳನ್ನು ತೂಗುಹಾಕಲಾಗಿತ್ತು. ಗೋಡೆಯ ಮೇಲಿನ ಬಟ್ಟೆಗಳ ಮೇಲೆ ಕಸೂತಿ ಮಾದರಿಯ ಆಕೃತಿಗಳಿಂದ ಅಲಂಕರಿಸಲಾಗಿತ್ತು. ಈ ಕಟ್ಟಡಗಳಿಗೆ ಒಂದರ ಮೇಲೊಂದು ಎರಡು ಸುಂದರವಾಗಿ ಕಡೆದ ಮತ್ತು ಅವುಗಳ ಮಗ್ಗಲುಗಳನ್ನು ಚನ್ನಾಗಿ ಮಾಡಿದ ಜಗಲಿಗಳು ಇವೆ. ಈ ಜಗಲಿಗಳಿಗೆ ಉತ್ಸವ ಕ್ಕಾಗಿ ರಾಜನಿಗೆ ಪ್ರಿಯರಾದವರ ಮಕ್ಕಳು, ಕೆಲವೊಮ್ಮೆ ನಪುಂಸಕರು, ಬರುತ್ತಾರೆ. ರಾಜನಿಗೆ ಹತ್ತಿರವಾಗಿಯೆ ಮೇಲಿನ ಜಗಲಿಯ ಮೇಲೆ ಅವನೊಂದಿಗೆ ಬಂದಿದ್ದ ನಮ್ಮೆಲ್ಲರೊಂದಿಗೆ ಕ್ರಿಸ್ಟೊವಾಒ ದ ಫಿಗ್ವೆರೆಡೊ ಇದ್ದ. ಏಕೆಂದರೆ, ಉತ್ಸವಗಳನ್ನು ಮತ್ತು ವೈಭವ ಚನ್ನಾಗಿ ಕಾಣುವ ಜಾಗದಲ್ಲಿ ಅವನನ್ನು ಕುಳ್ಳಿರಿಸುವಂತೆ ರಾಜ

ಆಜ್ಞೆಗೈದಿದ್ದ. ಅರಮನೆಯಲ್ಲಿರುವ ಬೀದಿಗಳ ಬಗೆಗೆ ಮರೆಯುವ ಮುನ್ನ ಇಲ್ಲಿಯೆ ಹೇಳಿಬಿಡುತ್ತೇನೆ. ನಾನು ಹೇಳಿರುವ ಅರಮನೆಯೊಳಗೆ ರಾಜನ ಮತ್ತು ಅವನ ಪತ್ನಿಯರ ಮತ್ತು ನಾನು ಈಗಾಗಲೆ ಹೇಳಿರುವಂತೆ ಸಂಖ್ಯೆಯಲ್ಲಿ ಹನ್ನೆರಡುಸಾವಿರ ವಿರುವ ಪರಿಚಾರಿಕೆಯರ ಬಿಡದಿಗಳಿವೆ. ಅವರು ಒಳಗೆ ಹೋಗಲು ಈ ಮನೆಗಳ ಸಾಲುಗಳಿಗೆ ದ್ವಾರವುಂಟು. ಈ ಅರಮನೆ ಮತ್ತು ವಿಜಯಗೃಹದ ನಡುವೆ ಒಂದು ದ್ವಾರವಿದ್ದು ಅದು ಅದಕ್ಕೆ ಹಾದಿಯಾಗಿದೆ. ಒಳಗೆ ಮೂವತ್ನಾಲ್ಕು ಬೀದಿ ಗಳಿವೆ.

ಉತ್ಸವಗಳಿಗೆ ತಿರುಗುವದಾದರೆ, ಈ ವಿಜಯಗೃಹದಲ್ಲಿ ರಾಜ ಅರಿವೆಯಿಂದ ಮಾಡಿಸಿದ, ಬಾಗಿಲು ಮುಚ್ಚಿದ, ಕೋಣೆಯೊಂದನ್ನು ಕಟ್ಟಿಸಿದ್ದಾನೆ ಎಂಬುದನ್ನು ನೀವ್ರ ತಿಳಿಯಬೇಕು. ಅದರಲ್ಲಿ ದೇವತೆಯ ಗುಡಿಯಿದೆ. (ಕಟ್ಟಡದ) ಮಧ್ಯದಲ್ಲಿ ರುವ ಇನ್ನೊಂದರಲ್ಲಿ ಮಧ್ಯದ ಮೆಟ್ಟಲುಗಳಿಗೆ ಇದಿರಾಗಿ ಒಂದು ಜಗಲಿ ಇರಿಸ ಲಾಗಿದೆ. ಆ ಜಗಲಿ ಮೇಲೆ ರಾಜಸಿಂಹಾಸನ ನಿಂತಿರುತ್ತದೆ. ಅದನ್ನು ಹೀಗೆ ಮಾಡಲಾಗಿದೆ : ಅದು ನಾಲ್ಕು ಮಗ್ಗಲುಳ್ಳದ್ದು ಮತ್ತು ಸಪಾಟಾದುದು, ಮೇಲ್ಭಾಗ ದುಂಡಗೆ ಮಧ್ಯದಲ್ಲ ಆಸನಕ್ಕೆ ತಗ್ಗು ಇದೆ. ಅದರ ಮರಗೆಲಸದ ಬಗೆಗೆ ನೀವು ತಿಳಿದಿರಬೇಕಾದುದೇನೆಂದರೆ ಅದು ಪೂರ್ತಿಯಾಗಿ ರೇಷ್ಮೆ ಬಟ್ಟೆಗಳಿಂದ (?)[43] ಹೊದಿಸಲ್ಪಟ್ಟಿದೆ ಮತ್ತು ಪೂರ್ತಿ ಬಂಗಾರದ ಸಿಂಹಗಳಿವೆ ಮತ್ತು ಬಟ್ಟೆಗಳ ಮಧ್ಯ ವಿರುವ ಸ್ಥಳಗಳಲ್ಲಿ ಕೆಳಗಡೆ ಅನೇಕ ಮಾಣಿಕ್ಯ ಸಣ್ಣ ಮುತ್ತು ಮತ್ತು ಮುತ್ತು ಗಳುಳ್ಳ ಸುವರ್ಣ ಫಲಕಗಳಿವೆ. ಮಗ್ಗಲುಗಳ ಸುತ್ತಲೂ ಗಣ್ಯ ವ್ಯಕ್ತಿಗಳ ಸುವರ್ಣಾಕೃತಿಗಳು ತುಂಬಿವೆ. ಅವುಗಳ ಮೇಲೆ ಬಹಳ ಬಂಗಾರದ ಕೆಲಸವಿದ್ದು ಅದರಲ್ಲಿ ಅನೇಕ ಅಮೂಲ್ಯ ಹರಳುಗಳಿವೆ. ಈ ಸಿಂಹಾಸನದ ಮೇಲೆ ಗುಲಾಬಿ ಮತ್ತು ಹೂಗಳಿಂದ ಆವೃತವಾದ ಬಂಗಾರದ್ದೇ ಇರುವ ವಿಗ್ರಹವನ್ನಿಡಲಾಗಿದೆ. ಈ ಸಿಂಹಾಸನದ ಒಂದು ಪಕ್ಕದಲ್ಲಿ ಕೆಳಗಿನ ಜಗಲಿಯ ಮೇಲೆ ತಲೆಯುಡಿಗೆ ಇದೆ. ಇದನ್ನೂ ಅದೇ ರೀತಿಯಲ್ಲಿ ಮಾಡಲಾಗಿದೆ. ಅದು ನೆಟ್ಟಗೆ ಇದ್ದು ಒಂದು ಗೇಣಿ ನಷ್ಟು ಎತ್ತರವಾಗಿದೆ. ಮೇಲ್ಭಾಗ ದುಂಡಗಿದೆ. ಅದು ಮುತ್ತುಗಳು, ಮಾಣಿಕ್ಯ ಗಳು ಮತ್ತು ಇತರ ಎಲ್ಲ ಬೆಲೆಯುಳ್ಳ ಹರಳುಗಳಿಂದ ತುಂಬಿಹೋಗಿದೆ. ಅದರ ನೆತ್ತಿಯ ಮೇಲೆ ತೀರ ದುಂಡಗಿರದ ಕಾಯಿಯಷ್ಟು ದೊಡ್ಡದಾದ ಮುತ್ತು ಇದೆ. ಇನ್ನೊಂದು ಪಕ್ಕಕ್ಕೆ ಅದೇ ಮಾದರಿಯಲ್ಲಿ ಮಾಡಿದ ಕಾಲ್ಕಡಗವಿದೆ. ಅದು ಇನ್ನೊಂದು ರಾಜರತ್ನವಾಗಿದ್ದು ದೊಡ್ಡ ಮುತ್ತುಗಳು, ಅನೇಕ ಮಾಣಿಕ್ಯಗಳು, ವಜ್ರಗಳು ಮತ್ತು ಇತರ ಬೆಲೆಯುಳ್ಳ ಹರಳುಗಳಿಂದ ತುಂಬಿ ಹೋಗಿದೆ. ಅದು ಮನುಷ್ಯನ ತೋಳಿನಷ್ಟು ದಪ್ಪವಿದೆ. ಇದೆಲ್ಲದರ ಮುಂದೆ ಜಗುಲಿಯ ಅಂಚಿಗೆ[44]

ಅನಿಕೆಯ ಮೇಲೆ ಕೆಲವು ದಿಂಬುಗಳಿವೆ. ಅಲ್ಲಿ ಉತ್ಸವಗಳ ಕಾಲಕ್ಕೆ ರಾಜ ಕುಳಿತಿದ್ದ. ಉತ್ಸವಗಳು ಹೀಗೆ ಆರಂಭಿಸುತ್ತವೆ :—

ಬೆಳಗಾದಾಗ ಈ ವಿಜಯಗೃಹಕ್ಕೆ ಬರುತ್ತಾನೆ, ವಿಗ್ರಹ ಮತ್ತು ಅದರ ಬ್ರಾಹ್ಮಣರಿರುವ ಕೋಣೆಗೆ ಹೋಗುತ್ತಾನೆ ಮತ್ತು ಪ್ರಾರ್ಥನೆ ಮತ್ತು ಆಚರಣೆಗಳನ್ನು ಮಾಡುತ್ತಾನೆಂಬುದನ್ನು ನೀವು ತಿಳಿಯಬೇಕು. ಮನೆಯ ಹೊರಗಡೆ ಅವನ ಕೆಲವು ಪ್ರಿಯರು ಇರುತ್ತಾರೆ ಮತ್ತು ಚೌಕದ ಮೇಲೆ ಅನೇಕ ನರ್ತಕಿಯರು ನರ್ತನಗೈಯುತ್ತಿರುವರು. ಚೌಕದ ಸುತ್ತಲಿನ ಮೊಗಸಾಲೆಗಳಲ್ಲಿ ಅಲ್ಲಿಗೆ ನೋಡಲು ಬಂದಿರುವ ಅನೇಕ ದಳವಾಯಿಗಳು ಮತ್ತು ಪ್ರಮುಖರು ಇದ್ದಾರೆ. ಮತ್ತು ನೆಲದ ಮೇಲೆ, ಮನೆಯ ಜಗಲಿಯ ಹತ್ತಿರ ಸುಂದರ ಮತ್ತು ಸುವ್ಯವಸ್ಥಿತ ಸಜ್ಜಿನಿಂದೊಡಗೂಡಿದ ಹನ್ನೊಂದು ಕುದುರೆಗಳು ಮತ್ತು ಅವುಗಳ ಹಿಂದೆ ಅನೇಕ ಅಲಂಕಾರ ಹೊತ್ತ ನಾಲ್ಕು ಸುಂದರ ಆನೆಗಳು ಇವೆ. ಒಳಗೆ ಪ್ರವೇಶಿಸಿದ ಮೇಲೆ ರಾಜ ಹೊರಗೆ ಬರುತ್ತಾನೆ ಮತ್ತು ಅವನೊಂದಿಗೆ ಬರುವ ಬ್ರಾಹ್ಮಣ ಬಿಳಿ ಗುಲಾಬಿಗಳಿಂದ ತುಂಬಿದ ಬುಟ್ಟಿಯನ್ನು ಕೈಯಲ್ಲಿ ಹಿಡಿದು ಜಗಲಿಯ ಮೇಲೆ ಕುಳಿತ ರಾಜನಲ್ಲಿಗೆ ಹೋಗುತ್ತಾನೆ. ರಾಜ ಮೂರು ಹಿಡಿ ಗುಲಾಬಿಗಳನ್ನು ಎತ್ತಿಕೊಂಡು ಕುದುರೆಗಳತ್ತ ಎಸಿಯುತ್ತಾನೆ. ಅವುಗಳನ್ನು ಎಸೆದ ಮೇಲೆ ಪರಿಮಳಗಳ ಬುಟ್ಟಿ ತೆಗೆದುಕೊಂಡು ಅವುಗಳತ್ತ ಧೂಪಾರತಿ ಮಾಡುವಂತೆ ಆಚರಿಸುತ್ತಾನೆ. ಇದು ಮುಗಿದ ಮೇಲೆ ಅವನು ಆನೆಗಳನ್ನು ತಲುಪಿ ಅವುಗಳಿಗೂ ಹಾಗೆಯೆ ಮಾಡುತ್ತಾನೆ. ರಾಜ ಇದನ್ನು ಪೂರ್ತಿಗೊಳಿಸಿದಾಗ ಬ್ರಾಹ್ಮಣನು ಬುಟ್ಟಿ ತೆಗೆದುಕೊಂಡು ಜಗಲಿಗೆ ಇಳಿಯುತ್ತಾನೆ ಮತ್ತು ಅಲ್ಲಿಂದ ಆ ಗುಲಾಬಿಗಳನ್ನು ಮತ್ತು ಇತರ ಹೂಗಳನ್ನು ಎಲ್ಲ ಕುದುರೆಗಳ ತಲೆಯ ಮೇಲೆ ಏರಿಸುತ್ತಾನೆ. ಮತ್ತು ಇದನ್ನು ಮಾಡಿ ರಾಜನಲ್ಲಿಗೆ ಮರಳುತ್ತಾನೆ. ಆಮೇಲೆ ರಾಜ ವಿಗ್ರಹವಿದ್ದಲ್ಲಿಗೆ ಪುನಃ ಹೋಗುತ್ತಾನೆ ಮತ್ತು ಅವನು ಒಳಗೆ ಹೋದ ಕೂಡಲೆ ಡೇರೆಗಳ ಪರದೆಗಳಂತೆ ಮಾಡಲಾದ ಕೋಣೆಯ ಪರದೆಗಳನ್ನು ಎತ್ತುತ್ತಾರೆ. ರಾಜ ಇವುಗಳಿದ್ದಲ್ಲಿ ಕೂಡುತ್ತಾನೆ ಮತ್ತು ಅವುಗಳನ್ನೆಲ್ಲ ಎತ್ತಲಾಗುತ್ತದೆ. ಅಲ್ಲಿಂದ ಅವನು ಇಪ್ಪತ್ನಾಲ್ಕು ಕೋಣಗಳು ಮತ್ತು ನೂರೈವತ್ತು ಕುರಿಗಳ ವಧೆಯನ್ನು—ವೀಕ್ಷಿಸುತ್ತಾನೆ. ಅವುಗಳನ್ನು ವಿಗ್ರಹಕ್ಕೆ ನೈವೇದ್ಯ ಮಾಡಲಾಗುತ್ತದೆ. ಈ ಕೋಣಗಳ ಮತ್ತು ಕುರಿಗಳ ರುಂಡಗಳನ್ನು ಕೆಲವು ದೊಡ್ಡ ಮಚ್ಚುಗತ್ತಿಗಳಿಂದ ಒಂದೇ ಹೊಡೆತಕ್ಕೆ ಕತ್ತರಿಸುತ್ತಾರೆಂಬುದನ್ನೂ ನೀವು ತಿಳಿಯಬೇಕು. ಅವುಗಳನ್ನು ಈ ವಧೆಯ ಹೊಣೆಯುಳ್ಳವನು ಹಿಡಿದಿರುತ್ತಾನೆ. ಅವರ ಕೈ ಎಷ್ಟು ನಿಶ್ಚಿತವಾಗಿರುತ್ತದೆಂದರೆ ಒಂದು ಏಟೂ ತಪ್ಪುವದಿಲ್ಲ. ಈ ಪಶು ಬಲಿ ಮುಗಿದ ನಂತರ ರಾಜ ಹೊರನಡೆದು ಇತರ ದೊಡ್ಡ ಕಟ್ಟಡಗಳಿಗೆ ಬರುತ್ತಾನೆ. ಅವುಗಳ ಜಗಲಿಗಳ ಮೇಲೆ ನಿಂತಿರುವ ಬ್ರಾಹ್ಮಣ ಸಮೂಹ ಅವನು ತಾವಿದ್ದಲ್ಲಿಗೆ ಏರಿದ ಕೂಡಲೆ ರಾಜನ ಮೇಲೆ ಹತ್ತು ಅಥವಾ ಹನ್ನೆರಡು ಗುಲಾಬಿಗಳನ್ನು ಚಲ್ಲು

ತ್ತಾರೆ—(ಅಂದರೆ) ಅವನಿಗೆ ಶೀರ ಹತ್ತಿರದಲ್ಲಿದ್ದವರು. ಅನಂತರ ಅವನು ಕಟ್ಟಡ
ಗಳ ಮೇಲ್ಭಾಗದಗುಂಟ ಸಾಗುತ್ತಾನೆ ಮತ್ತು ಕೊನೆ ತಲುಪಿದಾಕ್ಷಣ ತನ್ನ ತಲೆಯ
ಮೇಲಿಂದ ಟೊಪ್ಪಿಗೆ ತೆಗೆದು ನೆಲದ ಮೇಲಿಟ್ಟು ವಿಗ್ರಹವಿರುವ (ಸ್ಥಳಕ್ಕೆ) ಮುಖ
ವಾಗುವಂತೆ ತಿರುಗುತ್ತಾನೆ. ಇಲ್ಲಿ ಅವನು ಸಾಷ್ಟಾಂಗ ಹಾಕುತ್ತಾನೆ. ಮೇಲೆದ್ದ
ನಂತರ ಅವನು ಕಟ್ಟಡದ ಒಳಗಡೆ ಹೋಗುತ್ತಾನೆ ಮತ್ತು ಉದ್ಯಾನವನ್ನು (ಅಥವಾ
ಗೋಡೆಯಿರುವ ಆವರಣ) ಪ್ರವೇಶಿಸುತ್ತಾನೆ. ಅಲ್ಲೊಂದು ಚಿಕ್ಕ ಉರಿ ಹೊತ್ತಿಸ
ಲಾಗಿರುತ್ತದೆಂದು ಹೇಳುತ್ತಾರೆ ಮತ್ತು ಅವನು ಅದರಲ್ಲಿ ಅನೇಕ ಪದಾರ್ಥಗಳಿಂದ,
ಅಂದರೆ ಮಾಣಿಕ್ಯ ಮತ್ತು ಮುತ್ತು ಮತ್ತು ಇತರ ಎಲ್ಲ ಬಗೆಯ ಬೆಲೆಯುಳ್ಳ
ಹರಳುಗಳು ಮತ್ತು ಕತ್ತಾಳೆ ಮತ್ತು ಸುಗಂಧಿತ ಪದಾರ್ಥಗಳಿಂದ ಭಸ್ಮವನ್ನು ಆ
ಉರಿಯಲ್ಲಿ ಎಸೆಯುತ್ತಾನೆ. ಇದಾದ ಮೇಲೆ ಅವನು ದೇವಾಲಯಕ್ಕೆ ಹಿಂತಿರುಗು
ತ್ತಾನೆ ಮತ್ತು ಒಳಗೆ ಹೋಗಿ ಸ್ವಲ್ಪ ಹೊತ್ತು ಇರುತ್ತಾನೆ. ಆ ಸಮಯದಲ್ಲಿ
ಇನ್ನೊಂದು ದ್ವಾರದಿಂದ ಆ ಕಟ್ಟಡದಲ್ಲಿದ್ದ ಅವನಿಗೆ ಪ್ರಿಯರಾದ ಕೆಲವರು ಪ್ರವೇಶಿಸಿ
ತಮ್ಮ ಸಲಾಮು ಮಾಡುತ್ತಾರೆ. ನಂತರ ಅವನು ಎಲ್ಲಿಂದ ಕುದುರೆಗಳತ್ತ
ಹೂಗಳನ್ನು ತೂರಿದನೊ ಆ ಸ್ಥಳಕ್ಕೆ ಹಿಂದಿರುಗುತ್ತಾನೆ. ವನು ಇಲ್ಲಿಗೆ ಬಂದ ತಕ್ಷಣ
ಎಲ್ಲ ದಳವಾಯಿಗಳು ಮತ್ತು ಪ್ರಮುಖರು ಬಂದು ಅವನಿಗೆ ಸಲಾಮು ಮಾಡು
ತ್ತಾರೆ ಮತ್ತು ಕೆಲವರು ತಾವು ಇಷ್ಟಪಟ್ಟರೆ ಅವನಿಗೆ ಕಾಣಿಕೆಗಳನ್ನು ಅರ್ಪಿಸುತ್ತಾರೆ
ಮತ್ತು ಬಂದಂತೆಯೆ ಹಿಂದೆ ಸರಿಯುತ್ತಾರೆ. ಮತ್ತು ಪ್ರತಿಯೊಬ್ಬನೂ ತನ್ನ
ಬಿಡದಿಗೆ ಹೋಗುತ್ತಾನೆ. ಮತ್ತು ರಾಜ ನಾನು ಈಗಾಗಲೆ ಹೇಳಿರುವ—ಬಯಲು
ಕಣದಲ್ಲಿರುವ ಎರಡು ಕಟ್ಟಡಗಳ ಮಧ್ಯೆ ಇರುವ ದ್ವಾರದ ಮೂಲಕ ಅರಮನೆಯ
ಒಳಕ್ಕೆ ಹೋಗುತ್ತಾನೆ. ವಾರಾಂಗನೆಯರು ಮತ್ತು ದೇವಾಲಯದ ಮತ್ತು
ಅರಮನೆಯ ನರ್ತಕಿಯರು ಬಹಳ ಹೊತ್ತಿನವರೆಗೆ ದೇವಾಲಯ ಹಾಗೂ ವಿಗ್ರಹದ
ಮುಂದೆ ನರ್ತನಗೈಯ್ಯುತ್ತ ಉಳಿಯುತ್ತಾರೆ. ಈ ಒಂಬತ್ತು ದಿನಗಳಲ್ಲಿ ಪ್ರತಿ
ಮುಂಜಾನೆ ಸಮಯದಲ್ಲಿ ನಾನು ಹೇಳಿರುವ ಆಚರಣೆಗಳೊಂದಿಗೆ ಇದೆಲ್ಲವನ್ನು ಮಾಡ
ಲಾಗುತ್ತದೆ. ಪ್ರತಿದಿನ (ಹಿಂದಿನದಕ್ಕಿಂತ) ಅಧಿಕ ಭವ್ಯವಾಗಿರುತ್ತದೆ.

ಈಗ ಉತ್ಸವಗಳಿಗೆ ಹಿಂದಿರುಗೋಣ. ಮಧ್ಯಾಹ್ನ ಮೂರು ಗಂಟೆಗೆ ಪ್ರತಿ
ಯೊಬ್ಬನೂ ಅರಮನೆಗೆ ಬರುತ್ತಾನೆ. ಎಲ್ಲರನ್ನೂ ಒಮ್ಮೆಲೆ ಪ್ರವೇಶಿಸಲು ಬಿಡುವ
ದಿಲ್ಲ (ದ್ವಾರಗಳ ನಡುವಿನ ಬಯಲು ಜಾಗದಲ್ಲಿ ಹೋಗಲು ನಮಗೆ ಬಿಟ್ಟರು).
ಆದರೆ, ಮಲ್ಲರು, ನರ್ತಕಿಯರು, ಎಲ್ಲ ಸಜ್ಜು ಮತ್ತು ಅಲಂಕಾರಗಳಿಂದೊಡಗೂಡಿದ
ಆನೆಗಳು, ಈಟಿ ಥಾಲುಗಳಿಂದ ಸುಸಜ್ಜಿತರಾಗಿ ರಜಾಯಿ ಅಂಗಿ ತೊಟ್ಟು ಅವುಗಳ
ಮೇಲೆ ಕುಳಿತವರು ಒಳಗೆ ಹೋಗುತ್ತಾರೆ. ಒಳಸೇರಿದ ಕೂಡಲೆ ಇವರು ಕಣ
ಸುತ್ತುವರಿದು ಪ್ರತಿಯೊಬ್ಬನೂ ತನ್ನ ಸ್ಥಳದಲ್ಲಿ ನಿಂತುಕೊಳ್ಳುತ್ತಾನೆ ಮತ್ತು ಮಲ್ಲರು

ಆ ಕಟ್ಟಡದ ಮಧ್ಯದಲ್ಲಿರುವ ಸಾವಟಿಗೆಗಳಿಗೆ ಹತ್ತಿರ ಹೋಗುತ್ತಾರೆ. ಅಲ್ಲಿ ನರ್ತಕಿಯರಿಗೆ ನರ್ತನಗೈಯಲು ವಿಶಾಲವಾದ ಬಯಲು ನೆಲವನ್ನು ಸಿದ್ಧಗೊಳಿಸಲಾಗಿದೆ. ಇತರ ಅನೇಕ ಜನ, ಅಂದರೆ ಬ್ರಾಹ್ಮಣರು, ರಾಜನಿಗೆ ಪ್ರಿಯರಾದವರ ಮಕ್ಕಳು ಮತ್ತು ಅವರ ಸಂಬಂಧಿಗಳು, ಆಗ ಕಟ್ಟಡದ ಎದುರಿಗಿರುವ ಪ್ರವೇಶದ್ವಾರದಲ್ಲಿರುತ್ತಾರೆ. ಇವರೆಲ್ಲ ರಾಜನ ಸೇವೆಗೈಯುವ ಕುಲೀನ ಯುವಕರು. ಈ ಮನೆಯ ಅಧಿಕಾರಿಗಳು ಎಲ್ಲ ಜನರಲ್ಲಿ ಶಿಸ್ತು ಪಾಲಿಸುತ್ತ ಅಡ್ಡಾಡುತ್ತಾರೆ ಮತ್ತು ಪ್ರತಿಯೊಬ್ಬನು ತನ್ನ ಸ್ಥಾನದಲ್ಲಿ ಇರುವಂತೆ ನೋಡಿಕೊಳ್ಳುತ್ತಾರೆ. ಯಾವನೂ ಆಮಂತ್ರಿಸದ ಹೊರತು ಪ್ರವೇಶಿಸಲಾರದಂತೆ ಬೇರೆ ಬೇರೆ ಮಂಟಪಗಳನ್ನು ದ್ವಾರಗಳಿಂದ ಪ್ರತ್ಯೇಕಿಸಲಾಗಿದೆ. ಸಾಲ್ವಟಿನಿಕಾ[45] ಕಟ್ಟಡ ಪ್ರವೇಶಿಸುವ ಪ್ರಧಾನ ವ್ಯಕ್ತಿಯಾಗಿದ್ದು ಎಲ್ಲದರ ಮೇಲ್ವಿಚಾರಣೆ ಮಾಡುತ್ತಾನೆ. ಏಕೆಂದರೆ, ಅವನೇ ರಾಜನನ್ನು ಬೆಳೆಸಿ ರಾಜನನ್ನಾಗಿ ಮಾಡಿದವ ಮತ್ತು ರಾಜ ಅವನನ್ನು ತಂದೆಯಂತೆ ಕಾಣುತ್ತಾನೆ. ರಾಜ ಅವನನ್ನು ಯಾವಾಗ ಕರೆದರೂ "ದೊರೆ ಸಾಲ್ವಟಿನಿಕಾ" ಎಂದು ಸಂಬೋಧಿಸುತ್ತಾನೆ ಮತ್ತು ರಾಜ್ಯದ ಎಲ್ಲ ದಳವಾಯಿಗಳು ಮತ್ತು ಮನ್ನೆಯರು ಅವನಿಗೆ ಸಲಾಮು ಮಾಡುತ್ತಾರೆ. ಉತ್ಸವಗಳು ಜರುಗುವ ಕಣದೊಳಗೆ ದ್ವಾರಗಳಲ್ಲೊಂದರ ಹತ್ತಿರ ನಿಂತು ಈ ಸಾಲ್ವಟಿನಿಕಾ ಉತ್ಸವಕ್ಕೆ ಅಗತ್ಯವಿರುವ ಎಲ್ಲ ವಸ್ತುಗಳನ್ನು ತರಲು ಅಲ್ಲಿಂದಲೆ ಆಜ್ಞೆ ನೀಡುತ್ತಾನೆ.

ಇದನ್ನೆಲ್ಲ ಮಾಡಿ ವ್ಯವಸ್ಥೆಗೊಳಿಸಿದ ಮೇಲೆ ರಾಜ ನಾನೀಗಾಗಲೆ ಹೇಳಿರುವ ಸಿಂಹಾಸನ ಮತ್ತು ಇತರ ವಸ್ತುಗಳಿರುವ ಜಗಲಿಗೆ ಬಂದು ಕುಳಿತುಕೊಳ್ಳುತ್ತಾನೆ. ಮತ್ತು ಒಳಗಿರುವ ಎಲ್ಲರೂ ಅವನಿಗೆ ಸಲಾಮು ಮಾಡುತ್ತಾರೆ. ಅವರು ಹಾಗೆ ಮಾಡಿದ ಕೂಡಲೆ ಮಲ್ಲರು ನೆಲದ ಮೇಲೆ ಕುಳ್ಳಿರುತ್ತಾರೆ. ಏಕೆಂದರೆ, ಇವರಿಗೆ ಕೂಡಲು ಅನುಮತಿಯಿದೆ. ಆದರೆ, ಬೇರಾರೂ ಅವನು ಎಂಥಾ ಮಹಾಪ್ರಭುವೆ ಆಗಿರಲಿ, ರಾಜ ಆಜ್ಞೆ ನೀಡದ ಹೊರತು ಕುಳ್ಳಿರುವಂತಿಲ್ಲ. ರಾಜನೆದುರು ಯಾವಾಗಲೂ ವೀಳ್ಯದೆಲೆ ತಿನ್ನಬಹುದಾದ ನರ್ತಕಿಯರನ್ನು ಹೊರತುಪಡಿಸಿ ಬೇರಾರೂ ತಿನ್ನಬಾರದೆಂದಿದ್ದರು ಮಲ್ಲರು ತಿನ್ನಬಹುದಾಗಿದೆ. ರಾಜ ತನ್ನ ಸ್ಥಾನದಲ್ಲಿ ಆಸೀನನಾದ ತಕ್ಷಣ ತನ್ನ ಕುಲಕ್ಕೆ ಸೇರಿದ, ಸ್ವತಃ ರಾಜರಾಗಿದ್ದ ಮತ್ತು ತನ್ನ ಹೆಂಡತಿಯರ ತಂದೆಗಳಾದ ಮೂವರು ಅಥವಾ ನಾಲ್ವರನ್ನು ತನ್ನೊಂದಿಗೆ ಕುಳ್ಳಿರಲು ಹೇಳುತ್ತಾನೆ. ಇವರಲ್ಲಿ ಪ್ರಮುಖನಾದವನೆಂದರೆ ಸಿರಿಂಗಪಟಾಂಒ ಮತ್ತು ಮಲಭಾರದ ದಂಡೆಗುಂಟ ಇರುವ ಎಲ್ಲ ಪ್ರದೇಶದ ರಾಜ. ಈ ರಾಜನನ್ನು ಕುಮಾರ ವೀರ್ಯ[46] ಎಂದು ಕರೆಯಲಾಗುತ್ತದೆ. ಇವನು ಜಗಲಿಯ ಇನ್ನೊಂದು ಬದಿಗೆ. ರಾಜನಷ್ಟೆ ಮುಂಭಾಗದಲ್ಲಿ ಕುಳ್ಳಿರುತ್ತಾನೆ. ಮಿಕ್ಕವರೆಲ್ಲ ಹಿಂದೆ ಕುಳ್ಳಿರುವರು.

ರಾಜ ಅಲ್ಲಿ ಎಲ್ಲ ಬಂಗಾರದ ಗುಲಾಬಿಗಳಿಂದ (ಕಸೂತಿಯಿಂದ) ಆಚ್ಛಾದಿತ ವಾದ ಬಿಳಿ ಬಟ್ಟೆ ಹಾಗೂ ತನ್ನ ರತ್ನಗಳನ್ನು ಧರಿಸಿ ಕುಳಿತಿರುತ್ತಾನೆ. ಅವನು ಹಲವಾರು ಈ ಬಿಳಿ ಬಟ್ಟೆಗಳನ್ನು ಧರಿಸುತ್ತಾನೆ ಮತ್ತು ನಾನು ಅವನನ್ನು ಯಾವಾಗಲೂ ಹಾಗೆಯೆ ಕಂಡದ್ದು. ಅವನ ಸುತ್ತ ಅವನ ತಾಂಬೂಲ, ಖಡ್ಗ ಮತ್ತು ಅವನ ಇತರ ರಾಜಲಾಂಛನಗಳನ್ನು ಹೊತ್ತ ಬಾಲಸೇವಕರು ನಿಂತಿರು ತ್ತಾರೆ. ವಿಗ್ರಹವನ್ನಿಟ್ಟಿರುವ ಸಿಂಹಾಸನದ ಸುತ್ತ ಅನೇಕ ಬ್ರಾಹ್ಮಣರು ನಿಂತಿರು ತ್ತಾರೆ. ಅವರು ಅದಕ್ಕೆ ಕುದುರೆಬಾಲದ ಚವಿಗಳಿಂದ ಗಾಳಿ ಹಾಕುತ್ತಾರೆ. ಅವುಗಳ ಹಿಡಿಕೆಗಳು ಬಂಗಾರ ಹೊದ್ದಿಸಿದ್ದವುಗಳಾಗಿವೆ. ಈ ಚವಿಗಳು ಅತಿಶ್ರೇಷ್ಠ ಗೌರವದ ಪ್ರತೀಕ. ಅವರು ಅವುಗಳಿಂದ ರಾಜನಿಗೂ ಗಾಳಿ ಹಾಕುತ್ತಾರೆ.

ರಾಜ ಕುಳಿತ ಕೂಡಲೆ[47] ಹೊರಗೆ ಕಾಯುತ್ತಿದ್ದ ದಳವಾಯಿಗಳು, ಪ್ರತಿ ಯೊಬ್ಬನು ತನ್ನ ಪ್ರಮುಖರು ಮುಂತಾದವರೊಂದಿಗೆ ಶಿಸ್ತಿನಿಂದ, ಪ್ರವೇಶಿಸುತ್ತಾರೆ. ರಾಜನೆದುರು ಬಂದು ಸಲಾಮು ಮಾಡುತ್ತಾರೆ ಮತ್ತು ನಾನು ಈಗಾಗಲೇ ವರ್ಣಿಸಿರುವ ಮಂಡಪಗಳಲ್ಲಿ ತಮ್ಮ ಸ್ಥಾನದಲ್ಲಿ ನಿಲ್ಲುತ್ತಾರೆ. ಈ ಮನ್ನೆಯರ ಪ್ರವೇಶ ಮುಗಿದಾಕ್ಷಣ ಸೈನ್ಯಗಳ ದಳಪತಿಗಳು ಢಾಲು ಬಲ್ಲೆಗಳೊಂದಿಗೆ ಪ್ರವೇಶಿಸುತ್ತಾರೆ. ನಂತರ ಬಿಲ್ಲುಪಡೆಯ ದಳಪತಿಗಳು ಇಂಥ ಸ್ಥಳದಲ್ಲಿ ಶಸ್ತ್ರಾಸ್ತ್ರ ಧರಿಸಿದ ಯಾವನೂ ಪ್ರವೇಶಿಸಲು ಇಲ್ಲವೆ ರಾಜನಿದ್ದಲ್ಲಿಗೆ ಬರಲು ಕೊಡದಂತೆ ಈ ಅಧಿಕಾರಿಗಳು ಕಣದ ಸುತ್ತಲೂ ನೆಲದ ಮೇಲೆ ಆನೆಗಳ ಮುಂದೆ ನಿಂತುಕೊಳ್ಳುತ್ತಾರೆ ಮತ್ತು ಅವರು ರಾಜನ ರಕ್ಷಕರಾಗಿರುವರು. ಈ ಸೈನಿಕರು ತಮ್ಮ ಸ್ಥಾನಗಳಲ್ಲಿ ನಿಂತ ಕೂಡಲೆ ಸ್ತ್ರಿಯರು ನರ್ತಿಸಲಾರಂಭಿಸುವರು ಮತ್ತು ಅವರಲ್ಲಿ ಕೆಲವರು ನಾನು ಹೇಳಿರುವ ಅವುಗಳ ಪ್ರವೇಶದ್ವಾರದಲ್ಲಿರುವ ವರ್ತುಲಾಕಾರದ ದ್ವಾರ ಮಂಟಪಗಳಲ್ಲಿ ನಿಂತುಕೊಳ್ಳುತ್ತಾರೆ. ಈ ಸ್ತ್ರಿಯರು ತಮ್ಮ ದೇಹಗಳ ಮೇಲೆ ಧರಿಸಿದ ವಿಪುಲ ಸಂಪತ್ತನ್ನು ಯಥೋಚಿತವಾಗಿ ನಿಮಗಾರು ವರ್ಣಿಸಬಲ್ಲರು ?-- ಅಷ್ಟೊಂದು ವಜ್ರ, ಮಾಣಿಕ್ಯ, ಮುತ್ತುಗಳಿಂದೊಡಗೂಡಿದ ಬಂಗಾರದ ಕಂಠಾಭರಣ ಗಳು ; ತೋಳುಗಳು ಹಾಗೂ ರಟ್ಟೆಗಳಲ್ಲಿಯೂ ಕಡಗಗಳು ; ಕೆಳಗೆ ನಡುಪಟ್ಟಿಗಳು; ಕಾಲುಗಳಲ್ಲಿ ತಪ್ಪದೆ ಕಾಲ್ಕಡಗಗಳು. ಅಚ್ಚರಿ ಬೇರೆ ರೀತಿಯದು ಆಗಿರುತ್ತದೆ, ಅರ್ಥಾತ್ ಇಂಥ ವೃತ್ತಿಯ ಸ್ತ್ರೀಯರಿಗೆ ಇಷ್ಟು ಐಶ್ವರ್ಯ ಹೇಗೆ ಬಂತೆಂಬ ಬಗೆಗೆ. ಆದರೆ ಅವರಲ್ಲಿ ತಮಗೆ ಕೊಡಲಾದ ಹೊಲಗಳುಳ್ಳ, ಮೇಣೆಗಳುಳ್ಳ, ಎಷ್ಟೊಂದು ಸೇವಕಿಯರುಳ್ಳ ಮತ್ತು ಎಣಿಸಲಾಗದಷ್ಟು ವಸ್ತುಗಳುಳ್ಳವರು ಇದ್ದಾರೆ. ಒಂದು ನೂರು ಸಾವಿರ ಪದಾರ್ಥಗಳನ್ನು[48] ಪಡೆದಿರುವಳೆಂದು ಹೇಳಲಾಗುವ ಸ್ತ್ರೀಯೊಬ್ಬಳು ಈ ನಗರದಲ್ಲಿದ್ದಾಳೆ ಮತ್ತು ಅವರನ್ನು ನೋಡಿದ್ದುದರ ಮೇಲಿಂದ ನಾನಿದನ್ನು ನಂಬುತ್ತೇನೆ.

ಆನಂತರ ಮಲ್ಲರು ಆಟ ಆರಂಭಿಸುವರು. ಅವರ ಕುಸ್ತಿ ನಮ್ಮದರಂತೆ ತೋರುವುದಿಲ್ಲ, ಆದರೆ ಹಲ್ಲು ಮುರಿಯುವಂಥ ಕಣ್ಣು ಕೀಳುವಂಥ ಮುಖ ವಿಕಾರಗೊಳಿಸುವಂಥ ಬಲವಾದ ಏಟುಗಳನ್ನು ಕೊಡಲಾಗುತ್ತದೆ. ಅವು ಎಷ್ಟು ತೀವ್ರವಾಗಿರುತ್ತದೆಂದರೆ ಆಗೊಮ್ಮೆ ಈಗೊಮ್ಮೆ ಮಾತು ಕಟ್ಟಿಹೋದ ಕೆಲವರನ್ನು ಅವರ ಮಿತ್ರರು ಹೊತ್ತೊಯ್ಯುತ್ತಾರೆ. ಅವರು ಒಬ್ಬರನ್ನೊಬ್ಬರು ಚೆನ್ನಾಗಿ ಒಗೆಯುತ್ತಾರೆ ಕೂಡ. ಅವರಿಗೆ ತಮ್ಮ ಮುಖಂಡರು ಮತ್ತು ತೀರ್ಪುಗಾರರಿರುತ್ತಾರೆ. ಅದರು ಕಣದಲ್ಲಿ ಎಲ್ಲರನ್ನೂ ಒಂದೇ ಸಮನಾಗಿ ನೋಡಿಕೊಳ್ಳುತ್ತಾರೆ ಮತ್ತು ಗೆದ್ದವರನ್ನು ಸತ್ಕರಿಸುತ್ತಾರೆ.

ದಿನದ ಈ ಅವಧಿಯಲ್ಲೆಲ್ಲ ಕುಸ್ತಿ ಮತ್ತು ಸ್ತ್ರೀಯರ ನರ್ತನ ಬಿಟ್ಟು ಬೇರೇನೂ ಮಾಡಲಾಗುವದಿಲ್ಲ. ಆದರೆ ಸೂರ್ಯ ಕೆಳಗಿಳಿದ ತಕ್ಷಣ ಅನೇಕ ಪಂಜು ಗಳನ್ನು ಮತ್ತು ಅರಿವೆಯಿಂದ ಮಾಡಿದ ದೊಡ್ಡ ಮಶಾಲುಗಳನ್ನು ಹೊತ್ತಿಸುತ್ತಾರೆ. ಇವುಗಳನ್ನು ಕಣದ ಸುತ್ತ ಯಾವ ರೀತಿ ಇಡಲಾಗುತ್ತದೆಂದರೆ ಅದೆಲ್ಲ ದಿನದಂತೆಯೆ ಬೆಳಕಾಗಿರುತ್ತದೆ. ಗೋಡೆಗಳ ಮೇಲೆ ಸಹ ಅವುಗಳನ್ನಿಡಲಾಗುತ್ತದೆ. ಕೋಟೆ ಗೋಡೆಯ ಕಂಡಿಗಳಲೆಲ್ಲ ಉರಿಯುವ ದೀಪಗಳನ್ನು ಇರಿಸುತ್ತಾರೆ ಮತ್ತು ರಾಜ ಕೂಡುವ ಸ್ಥಳ ಪಂಜುಗಳಿಂದ ತುಂಬಿದೆ. ಇವೆಲ್ಲವನ್ನು ಹೊತ್ತಿಸಿದ ತಕ್ಷಣ ಅನೇಕ ಬಲು ಚಿತ್ತಾಕರ್ಷಕ ಆಟಗಳನ್ನು ಮತ್ತು ಯುಕ್ತಿಗಳನ್ನು ಆರಂಭಿಸಲಾಗುತ್ತದೆ. ಆದರೆ ಇವುಗಳು ಬಹಳ ಹೊತ್ತು ನಿಲ್ಲುವುದಿಲ್ಲ. ಅವು ರಾಜನಿದ್ದಲ್ಲಿಗೆ ಬಂದು ಹೋಗಿ ಬಿಡುತ್ತವೆ. ಆ ಮೇಲೆ ಇತರರು ಕುದುರೆ ಮೇಲೆ ಕುಳಿತು ಯುದ್ಧ ಮಾಡುವ ರೀತಿಯಲ್ಲಿ ಪ್ರವೇಶಿಸುತ್ತಾರೆ. ಈ ಕುದುರೆಗಳು ಪೋರ್ತುಗಾಲದಲ್ಲಿ ಕಾರ್ಪೊದ ಡೈಯೊಸ್‌ನ ಉತ್ಸವಕ್ಕೆ ಮಾಡಲಾದಂತಹ ಆಟದ ಕುದುರೆಗಳಂತಿರುತ್ತವೆ. ಬೇರೆ ಯುವರು ಬಲೆಗಳೊಂದಿಗೆ ಮೀನು ಹಿಡಿಯಲೆಂಬಂತೆ ಬಂದು ಕಣದಲ್ಲಿದ್ದ ಜನರನ್ನು ಸೆರೆಹಿಡಿಯುತ್ತಾರೆ. ಈ ಮನರಂಜನೆಗಳು ಮುಕ್ತಾಯವಾದಾಗ ಅವರು ಅನೇಕ ಬಾಣ ಬಿರುಸುಗಳನ್ನು ಮತ್ತು ಅನೇಕ ಬೇರೆ ಬೇರೆ ರೀತಿಯ ಜ್ವಾಲೆಗಳನ್ನು ಮತ್ತು ಉರಿಯುತ್ತಲೆ ತಮ್ಮೊಳಗಿಂದ ಅನೇಕ ಬಾಂಬು ಹಾಗೂ ಆಕಾಶ ಬಾಣಗಳನ್ನು ಉಗುಳುವ ದುರ್ಗಗಳನ್ನೂ ಆಕಾಶದಲ್ಲಿ ಎಸೆಯುತ್ತಾರೆ.

ಈ ಸುಡುಮದ್ದಿನ ವಿನೋದ ಮುಕ್ತಾಯವಾದ ಮೇಲೆ ದಳವಾಯಿಗಳಿಗೆ ಸೇರಿದ ಅನೇಕ ವಿಜಯೋತ್ಸವ ರಥಗಳು ಪ್ರವೇಶಿಸುತ್ತವೆ. ಅವುಗಳಲ್ಲಿ ಕೆಲವನ್ನು ವಿದೇಶಗಳಲ್ಲಿ ಯುದ್ಧನಿರತ ದಳವಾಯಿಗಳು ಕಳಿಸಿರುತ್ತಾರೆ. ಅವುಗಳು ಪ್ರವೇಶಿಸು ವುದು ಹೀಗೆ. ಮೊದಲನೆಯದು ಸಾಲ್ವಟನಿಕಾನದು ಮತ್ತು ಅವು ಒಂದರ ಹಿಂದೊಂದು ಬರುತ್ತವೆ. ನರ್ತನಬಾಲೆಯರು ಮತ್ತು ಇತರ ಮಾನವ ಆಕೃತಿಗಳುಳ್ಳ ಬೆಲೆಯುಳ್ಳ ಬಟ್ಟೆಗಳಿಂದ ಆಚ್ಛಾದಿತವಾದಂತೆ ಕೆಲವು ರಥಗಳು ತೋರುತ್ತವೆ. ಇನ್ನು

ಕೆಲವು ರಥಗಳು ಒಂದರ ಮೇಲೊಂದು ಅಂತಸ್ತುಗಳನ್ನು ಹೊಂದಿವೆ. ಮಿಕ್ಕವುಗಳೆಲ್ಲ ಒಂದೇ ರೀತಿಯವು. ಮತ್ತು ಅವು ತಮ್ಮ ಕ್ರಮದಲ್ಲಿ ರಾಜನಿದ್ದೆಡೆಗೆ ಸಾಗುತ್ತವೆ. ರಥಗಳು ಹೊರಗೆ ಹೋದ ಮೇಲೆ ಅವುಗಳನ್ನು ಹಿಂಬಾಲಿಸಿ ಅನೇಕ ಕುದುರೆಗಳು ಬರುತ್ತವೆ. ಅವುಗಳನ್ನು ಸಜ್ಜುಗಳಿಂದ ಮತ್ತು ರಾಜನ ಬಣ್ಣದ ಉತ್ಕೃಷ್ಟ ಬಟ್ಟೆಗಳಿಂದ ಹೊಚ್ಚಿರುತ್ತಾರೆ. ಅವುಗಳ ತಲೆ ಹಾಗೂ ಕುತ್ತಿಗೆಗಳ ಮೇಲೆ ಅನೇಕ ಗುಲಾಬಿಗಳು ಮತ್ತು ಹೂಗಳಿರುತ್ತವೆ ಮತ್ತು ಅವುಗಳ ಲಗಾಮುಗಳಿಗೆ ಬಂಗಾರದ ಗಿಲೀಟು ಮಾಡಲಾಗಿರುತ್ತದೆ. ಈ ಕುದುರೆಗಳ ಮುಂದೆ ಇನ್ನೊಂದು ಕುದುರೆ ಅರ್ಧ ಸುತ್ತು ಸುತ್ತುತ್ತ ಕುಣಿಯುತ್ತ ನಡೆಯುತ್ತದೆ. ಈ ಕಲೆಯಲ್ಲಿ ತರಬೇತು ಗೊಳಿಸಿರುವುದರಿಂದ ಎಲ್ಲ ಕುದುರೆಗಳೂ ಹಾಗೆಯೆ ಮಾಡುತ್ತವೆ. ಇಷ್ಟು ವೈಭವದೊಂದಿಗೆ ನಡೆಸಿಕೊಂಡು ಒಯ್ಯಲಾಗುವ ಈ ಕುದುರೆ ರಾಜ ಇಟ್ಟುಕೊಂಡಂತಹದು. ಅದರ ಮೇಲೆಯೆ ಅವರನ್ನು ರಾಜರಾಗಿ ಪ್ರತಿಜ್ಞೆ ವಿಧಿಸಿ ಬರಮಾಡಿಕೊಳ್ಳಲಾಗುತ್ತದೆ ಮತ್ತು ಅವರ ನಂತರ ಬರುವವರನ್ನೂ ಅದರ ಮೇಲೆಯೆ ಪ್ರತಿಜ್ಞೆ ವಿಧಿಸಬೇಕು. ಇಂಥ ಕುದುರೆ ಸತ್ತರೆ ಅದರ ಸ್ಥಾನದಲ್ಲಿ ಇನ್ನೊಂದನ್ನು ಇಡುತ್ತಾರೆ. ಯಾವುದೆ ರಾಜ ಕುದುರೆಯ ಮೇಲೆ ಪ್ರತಿಜ್ಞೆ ಸ್ವೀಕರಿಸಲಿಚ್ಛಿಸದಿದ್ದರೆ ಅವನಿಗೆ ಆನೆಯ ಮೇಲೆ ಪ್ರತಿಜ್ಞೆ ವಿಧಿಸುತ್ತಾರೆ. ಅದನ್ನೂ ಇಟ್ಟುಕೊಂಡು ಅಷ್ಟೇ ಗೌರವದಿಂದ ನೋಡಿಕೊಳ್ಳುತ್ತಾರೆ.

ಈ ಕುದುರೆಗಳು ನಾನು ಹೇಳಿರುವಂತೆ ಸಾಗುತ್ತ ಕಣವನ್ನು ಎರಡು ಸಲ ಸುತ್ತಿ ಒಂದರ ಮುಂದೊಂದರಂತೆ ಐದಾರು ಸಾಲುಗಳಲ್ಲಿ ಕಣದ ಮಧ್ಯದಲ್ಲಿ ಬಂದು ನಿಲ್ಲುತ್ತವೆ; ರಾಜನ ಕುದುರೆ ಅವುಗಳ ಮುಂದಿದ್ದು ಎಲ್ಲವೂ ರಾಜನಿಗೆ ಎದುರಾಗಿ ನಿಲ್ಲುತ್ತವೆ. ಅವು ಯಾವ ರೀತಿ ನಿಲ್ಲುತ್ತವೆಂದರೆ ಅವುಗಳ ಮತ್ತು ಜನರ ಮಧ್ಯೆ ಸುತ್ತಲೂ ಬಯಲು ಜಾಗವಿರುತ್ತದೆ. ಅವುಗಳನ್ನು ಈ ರೀತಿ ನಿಲ್ಲಿಸಲಾದ ಮತ್ತು ಎಲ್ಲವೂ ಸ್ತಬ್ಧವಾದ ಕೂಡಲೆ ಅರಮನೆಯೊಳಗಿಂದ ರಾಜನ ಹತ್ತಿರವಿರುವವರಲ್ಲಿ ಅತ್ಯುನ್ನತ ದರ್ಜೆಯ ಬ್ರಾಹ್ಮಣನೊಬ್ಬ ಮತ್ತು ಅವನೊಂದಿಗೆ ಇನ್ನಿಬ್ಬರು ಹೊರ ಬರುತ್ತಾರೆ. ಈ ಪ್ರಧಾನ ಬ್ರಾಹ್ಮಣ ತನ್ನ ಕೈಗಳಲ್ಲಿ ತೆಂಗಿನಕಾಯಿ, ಸ್ವಲ್ಪ ಅಕ್ಕಿ ಮತ್ತು ಹೂಗಳಿರುವ ಬೋಗುಣಿಯೊಂದನ್ನು ಮತ್ತು ಇತರರು ನೀರಿನ ಪಾತ್ರೆಯನ್ನು ಒಯ್ಯುತ್ತಾರೆ. ರಾಜನಿಗೆ ಎದುರಾಗಿ ನಿಂತ ಕುದುರೆಗಳ ಹಿಂಭಾಗದ ಮೂಲಕ ಅವರು ಸುತ್ತ ತಿರುಗುತ್ತಾರೆ. ಅಲ್ಲಿ ತನ್ನ ಆಚರಣೆಗಳನ್ನು ಜರುಗಿಸಿ ಅವನು ಅರಮನೆಗೆ ಹಿಂದಿರುಗುತ್ತಾನೆ.

ಇದು ಮುಗಿದ ಮೇಲೆ ಇಪ್ಪತ್ತೈದು ಮೂವತ್ತು ದ್ವಾರಪಾಲಕಿಯರು ಕೈಯಲ್ಲಿ ಛಡಿ ಹೆಗಲ ಮೇಲೆ ಚಾವುಟಿ ಹಿಡಿದು ಒಳಗಿನಿಂದ ಬರುವುದನ್ನು ಕಾಣುತ್ತೀರಿ. ಇವರ ಹಿಂದೆಯೆ ಅನೇಕ ನಪುಂಸಕರು ಬರುತ್ತಾರೆ. ಈ ನಪುಂಸಕರ

ನಂತರ ಅನೇಕ ತುತ್ತೂರಿ, ಮದ್ದಲೆ, ಕೊಳಲು (ನಮ್ಮವುಗಳಂತಹವಲ್ಲ), ಪಿಟೀಲು ಮತ್ತಿತರ ಸಂಗೀತ ನುಡಿಸುವ ಸ್ತ್ರೀಯರು ಬರುತ್ತಾರೆ. ಈ ಸ್ತ್ರೀಯರ ಹಿಂದೆ ಇಪ್ಪತ್ತರಷ್ಟು ಮಹಿಳಾ ಹೊರೆಯಾಳುಗಳು ಕೈಯಲ್ಲಿ ಪೂರ್ತಿ ಬೆಳ್ಳಿಯಿಂದ ಹೊದಿಸಿದ ಬೆತ್ತಗಳನ್ನು ಹಿಡಿದು ಬರುತ್ತಾರೆ. ಅವರ ಬೆನ್ನಹಿಂದೆಯೆ ಕೆಳಗಿನ ರೀತಿಯಲ್ಲಿ ಬಟ್ಟೆ ಧರಿಸಿದ ಸ್ತ್ರೀಯರು ಬರುತ್ತಾರೆ. ಅವರಿಗೆ ಬಲು ತುಟ್ಟಿಯ ಮತ್ತು ಶ್ರೇಷ್ಠ ರೇಷ್ಮೆ ಬಟ್ಟೆಗಳಿರುತ್ತವೆ. ತಲೆಯ ಮೇಲೆ ಅವರು ಕೊಲ್ಲಾಯಿ[49] ಎಂದು ಕರೆಯುವ ಎತ್ತರವಾದ ಟೊಪ್ಪಿಗೆಗಳನ್ನು ಧರಿಸುತ್ತಾರೆ ಮತ್ತು ಈ ಟೊಪ್ಪಿಗೆಗಳ ಮೇಲೆ ಅವರು ಮುತ್ತುಗಳಿಂದ ಮಾಡಿದ ಹೂಗಳನ್ನು ಧರಿಸುತ್ತಾರೆ. ಕೊರಳಲ್ಲಿ ಅನೇಕ ಪಚ್ಚೆ, ವಜ್ರ, ಮಾಣಿಕ್ಯ ಮತ್ತು ಮುತ್ತು ಜೋಡಿಸಿದ ಬಂಗಾರದ ಕಂಠಾಭರಣ ; ಇದಲ್ಲದೆ ಅನೇಕ ಮುತ್ತಿನ ಸರಗಳು ಮತ್ತು ದವಾಲಿಗಳಿಗಾಗಿ ಬೇರೆಯವು ; ತೋಳಿನ ಕೆಳಭಾಗದಲ್ಲಿ ಅನೇಕ ಬಳೆಗಳು ; ಅರ್ಧಭಾಗ ಬರಿದಾದ ಮೇಲ್ತೋಳಿನ ಮೇಲೆ ಅದೇ ರೀತಿಯ ಬೆಲೆಯುಳ್ಳ ಹರಳುಗಳುಳ್ಳ ತೋಳ್ಬಂದಿಗಳು ; ಟೊಂಕದ ಮೇಲೆ ಬಂಗಾರ ಹಾಗೂ ಬೆಲೆಯುಳ್ಳ ಹರಳುಗಳ ಡಾಬುಗಳು ; ಈ ಡಾಬುಗಳು ಒಂದರ ಕೆಳಗೊಂದರಂತೆ ಅರ್ಧ ತೊಡೆಯವರೆಗೂ ನೇತಾಡುತ್ತವೆ ; ಈ ಡಾಬುಗಳಲ್ಲದೆ ಇನ್ನೂ ಅನೇಕ ಆಭರಣಗಳು ಅವರಲ್ಲಿವೆ ಮತ್ತು ಹರಡುಗಳ ಸುತ್ತ ಮುತ್ತುಗಳ ಹಲವು ಸರಗಳು, ಏಕೆಂದರೆ ಅವರು ಮಿಕ್ಕವುಗಳಿಗಿಂತ ಬೆಲೆಯುಳ್ಳ ಕಾಲಂದಿಗೆಗಳನ್ನು ಧರಿಸುತ್ತಾರೆ. ಅವರು ತಮ್ಮ ಕೈಗಳಲ್ಲಿ ಚಿಕ್ಕ ನೀರಿನ ತಂಬಿಗೆ ಯಷ್ಟು ದೊಡ್ಡದಿರುವ ಬಂಗಾರದ ಪಾತ್ರೆಗಳನ್ನು ಒಯ್ಯುತ್ತಾರೆ. ಇವುಗಳೊಳ ಮೇಣದಿಂದ ಅಂಟಿಸಲಾದ ಮುತ್ತಿನ ಬಳ್ಳಿಗಳಿದ್ದು ಇದೆಲ್ಲದರ ನಡುವೆ ಉರಿಯುವ ದೀಪ ಇರುತ್ತದೆ. ಅವರು ಒಬ್ಬರ ಮುಂದೊಬ್ಬರಂತೆ ನಿಯಮಿತ ಕ್ರಮದಲ್ಲಿ ಬರುತ್ತಾರೆ. ಒಟ್ಟು ಹದಿನಾರರಿಂದ ಇಪ್ಪತ್ನಾಲ್ಕರವರೆಗಿನ ವಯದ ಸುಮಾರಗೆ ಅರವತ್ತು ಸುಂದರ ತರುಣಿಯರು. ಈ ಸ್ತ್ರೀಯರಲ್ಲಿ ಪ್ರತಿಯೊಬ್ಬಳೂ ತನ್ನ ದೇಹದ ಮೇಲೆ ಧರಿಸಿದ್ದುದರ ಬೆಲೆ ಹಾಗೂ ಮೂಲ್ಯದ ಅಂದಾಜು ಮಾಡಬಲ್ಲವರಾರು ? ಅವರು ಧರಿಸಿದ ಬಳೆಗಳ, ಬಂಗಾರದ ಮತ್ತು ಆಭರಣಗಳ ಹೊರೆ ಎಷ್ಟಾಗಿತ್ತೆಂದರೆ ಅವರಲ್ಲನೇಕರು ಅವುಗಳ ಭಾರ ತಾಳಲಾರರು. ಮತ್ತು ಅವರ ಕೈಗಳಿಗೆ ಆಸರೆ ಯಾಗುವ ಮೂಲಕ ಸಹಾಯಕರಾದ ಸ್ತ್ರೀಯರು ಅವರ ಜೊತೆಗಿರುತ್ತಾರೆ. ಈ ರೀತಿಯಲ್ಲಿ ಮತ್ತು ಈ ಅಲಂಕಾರದಲ್ಲಿ ಅವರು ಕುದುರೆಗಳ ಸುತ್ತ ಮೂರು ಸಲ ಸುತ್ತಿ ಕೊನೆಗೆ ಅರಮನೆಗೆ ಹಿಂತಿರುಗುತ್ತಾರೆ. ಇವರೂ ಮತ್ತು ಇವರೊಂದಿಗೆ ಹೋಗುವ ಇತರರೂ ರಾಣಿಯರ ಗೌರವಾನುಚರೆಯರು. ಉತ್ಸವದ ಈ ಒಂಬತ್ತು ದಿನಗಳಲ್ಲಿ ಪ್ರತಿಯೊಂದರಂದು ರಾಣಿಯರಲ್ಲೊಬ್ಬಳು, ಪ್ರತಿಯೊಬ್ಬಳೂ ತನ್ನದೇ ದಿನದಂದು, ತನ್ನ ಸ್ತ್ರೀಯರನ್ನು ಇತರರೊಂದಿಗೆ ಕಳಿಸುತ್ತಾಳೆ. ಉತ್ಸವದ

ಗೌರವಾರ್ಥವಾಗಿ ಅಧಿಕಾರಿಗಳು ರಾಜ ಮೊದಲೆ ವ್ಯವಸ್ಥೆಗೊಳಿಸಿರುವಂತೆ ತಮ್ಮ ರಿವಾಜಿನಂತೆ ದಿನಗಳನ್ನು ತಮ್ಮಲ್ಲಿ ಹಂಚಿಕೊಳ್ಳುತ್ತಾರೆ. ಚನ್ನಾಗಿ ತೊಡಿಗೆ ಧರಿಸಿದ ಈ ಸ್ತ್ರೀಯರು ಪ್ರತಿದಿನ ಬಂದು ತಮ್ಮನ್ನು ಇಂಥ ವಸ್ತುಗಳಲ್ಲಿಯೆ ತೋರ್ಪಡಿಸಿ ಕೊಳ್ಳಲು ಮತ್ತು ಪ್ರತಿಯೊಬ್ಬಳೂ ತನ್ನಲ್ಲಿರುವುದನ್ನು ಪ್ರದರ್ಶಿಸಲು ಸಂತಸ ಪಡುತ್ತಾರೆ.

ಈ ಸ್ತ್ರೀಯರು ಹಿಂತಿರುಗಿದ ಮೇಲೆ ಕುದುರೆಗಳೂ ಹೋಗುತ್ತವೆ. ಆ ಮೇಲೆ ಆನೆಗಳು ಬಂದು ತಮ್ಮ ಸಲಾಮು ಮಾಡಿ ಅವೂ ಹಿಂತಿರುಗುತ್ತವೆ. ಅವು ಹೋದ ಕೂಡಲೆ ರಾಜ ಕಟ್ಟಡದ ಕೊನೆಯಲ್ಲಿರುವ ಚಿಕ್ಕ ಬಾಗಿಲಿನ ಮೂಲಕ ಹೊರಟು ಹೋಗುತ್ತಾನೆ. ಅನಂತರ ಬ್ರಾಹ್ಮಣರು ವಿಗ್ರಹವನ್ನು ತೆಗೆದುಕೊಂಡು ಅದನ್ನು ತಾನು ಹೇಳಿರುವ ಅರಿವೆಯ ಕೋಣೆಯುಳ್ಳ ವಿಜಯಗೃಹದೊಳಗೆ ಒಯ್ಯುವರು. ರಾಜ ತಕ್ಷಣ ಹೊರಬಂದು ವಿಗ್ರಹವಿದ್ದಲ್ಲಿಗೆ ಹೋಗಿ ತನ್ನ ಪ್ರಾರ್ಥನೆಗಳನ್ನು ಸಲ್ಲಿಸುತ್ತಾನೆ. ಮತ್ತು ವ್ರತಗಳನ್ನು ಆಚರಿಸುತ್ತಾನೆ. ಆಗ ಅಲ್ಲಿಗೆ ಇನ್ನೂ ಅಧಿಕ ಕೋಣ ಮತ್ತು ಕುರಿ ತರುತ್ತಾರೆ ಮತ್ತು ಮೊದಲಿನಂತೆಯೆ ಕೊಲ್ಲುತ್ತಾರೆ. ಅನಂತರ ನರ್ತಿಸಲು ವಾರಾಂಗನೆಯರು ಬರುತ್ತಾರೆ. ಕೋಣ ಕುರಿಗಳ ಬಲಿ ಮುಗಿದ ಕೂಡಲೆ ರಾಜ ಅಲ್ಲಿಂದ ಹೊರಟು ರಾತ್ರಿಯೂಟಕ್ಕೆ ಹೋಗುತ್ತಾನೆ. ಏಕೆಂದರೆ ಅವನು ಒಂಬತ್ತು ದಿನಗಳೆಲ್ಲ ಉಪವಾಸವಿರುತ್ತಾನೆ, ಮತ್ತು (ಪ್ರತಿದಿನ) ಎಲ್ಲ ಮುಗಿಯುವವರೆಗೆ ಅವನು ಏನನ್ನೂ ತಿನ್ನುವುದಿಲ್ಲ ಮತ್ತು ಅವರ ಊಟದ ಸಮಯ ಮಧ್ಯರಾತ್ರಿ. ವಾರಾಂಗನೆಯರು ವಿಗ್ರಹದ ಮುಂದೆ ಬಹಳ ಹೊತ್ತು ನರ್ತಿಸುತ್ತ ಉಳಿಯುತ್ತಾರೆ.

ಈ ರೀತಿಯಾಗಿ ಒಂಬತ್ತು ದಿನಗಳ ಈ ಉತ್ಸವಗಳನ್ನು ಆಚರಿಸಲಾಗುತ್ತದೆ. ಕೊನೆಯ ದಿನ ಇನ್ನೂರೈವತ್ತು ಕೋಣಗಳು ನಾಲ್ಕು ಸಾವಿರದ ಐನೂರು ಕುರಿಗಳನ್ನು ಬಲಿಕೊಡಲಾಗುತ್ತದೆ

ಉತ್ಸವದ ಈ ದಿನಗಳು ಕಳೆದ ಮೇಲೆ ರಾಜ ತನ್ನ ಎಲ್ಲ ಬಲಗಳ ಪರಿಶೀಲನ ಜರುಗಿಸುತ್ತಾನೆ. ಮತ್ತು ಪರಿಶೀಲನವನ್ನು ಈ ರೀತಿ ವ್ಯವಸ್ಥೆಗೊಳಿಸಲಾಗಿರುತ್ತದೆ. ರಾಜ ತನ್ನ ಮೆಕ್ಕಾ ಮುಕಮುಲ್ಲಿನ ಡೇರೆಯನ್ನು ನಗರದಿಂದ ಒಂದು ಹರದಾರಿ ದೂರ ಆ ಉದ್ದೇಶಕ್ಕಾಗಿಯೇ ಪೂರ್ವನಿರ್ಧರಿತ ಸ್ಥಳದಲ್ಲಿ ನಿಲ್ಲಿಸಲು ಆಜ್ಞಾಪಿಸುತ್ತಾನೆ. ಯಾವುದರ ಗೌರವಾರ್ಥ ಇವೆಲ್ಲ ಉತ್ಸವಗಳನ್ನು ಆಚರಿಸಲಾಯಿತೊ ಆ ವಿಗ್ರಹವನ್ನು ಈ ಡೇರೆಯಲ್ಲಿಡುವರು. ಈ ಡೇರೆಯಿಂದ ರಾಜನ ಅರಮನೆಯವರೆಗೆ ದಳಪತಿಗಳು ತಮ್ಮ ಸೈನಿಕರು ಮತ್ತು ಸಜ್ಜಿನೊಂದಿಗೆ ಸಾಲಾಗಿ ನಿಲ್ಲುತ್ತಾರೆ. ಪ್ರತಿಯೊಬ್ಬನೂ ರಾಜನ ಸಿಬ್ಬಂದಿಯಲ್ಲಿ ತನಗಿರುವ ದರ್ಜೆಗನುಗುಣವಾದ ಸ್ಥಾನದಲ್ಲಿ

ಹೀಗೆ, ಸೈನಿಕರು ಸಾಲಾಗಿ ನಿಲ್ಲುವರು. ಆದರೆ, ಅದು ನಿಮಗೆ ಒಂದೇ ಸಾಲಾಗಿ ಕಾಣಲಿಕ್ಕಿಲ್ಲ. ಕೆಲವೆಡೆ ಒಂದರ ಹಿಂದೊಂದರಂತೆ ಎರಡು ಮೂರು ಸಾಲುಗಳಿರ ಬಹುದು. ಸರೋವರವಿದ್ದಲ್ಲಿ ಅದು ಸೈನಿಕರಿಂದ ಸುತ್ತುವರಿಯಲ್ಪಟ್ಟಿತ್ತು ಮತ್ತು ರಸ್ತೆ ಇಕ್ಕಟ್ಟಾಗಿದ್ದಲ್ಲಿ ಅವರನ್ನು ಬಯಲಿನಲ್ಲಿ ನಿಲ್ಲಿಸಲಾಗಿತ್ತು; ಮತ್ತು ಅಂತೆಯೇ ಗುಡ್ಡಗಳ ಇಳಿಜಾರು ಮತ್ತು ದಿಣ್ಣೆಗಳ ಮೇಲೆ ಯಾವ ರೀತಿ ನಿಲ್ಲಿಸಲಾಗಿರುತ್ತದೆಂದರೆ ಸೈನಿಕರಿಂದ ಪೂರ್ತಿ ಆಚ್ಛಾದಿತವಾಗದ ಗುಡ್ಡವಾಗಲಿ ಬಯಲಾಗಲಿ ಕಾಣಸಿಗದು. ಕಾಲಾಳುಗಳು ಕುದುರೆ ಮೇಲಿರುವವರ ಮುಂದೆ ಮತ್ತು ಆನೆಗಳು ಕುದುರೆಗಳ ಹಿಂದೆ ನಿಂತಿರುತ್ತವೆ. ಈ ವಿನ್ಯಾಸದಲ್ಲಿ ಪ್ರತಿಯೊಬ್ಬ ದಳಪತಿ ತನ್ನ ಸೈನಿಕರೊಂದಿಗೆ ನಿಂತಿದ್ದ. ಮನೆಗಳ ಸಮತಟ್ಟಾದ ಮಾಳಿಗೆಗಳ ಮೇಲೆ ಸೈನಿಕರನ್ನು ನಿಲ್ಲಿಸಲಸಾಧ್ಯ ವಾದುದರಿಂದ ನಗರದೊಳಗೆ ತಮ್ಮ ಠಾಣ್ಯಗಳಿದ್ದ ದಳಪತಿಗಳು ಸೈನಿಕರಿಗಾಗಿ ಬೀದಿಗಳ ಮುಖಗಳಿಗೆ ಅಡ್ಡಲಾಗಿ ಅಟ್ಟಣಿಗೆಗಳನ್ನು ನಿಲ್ಲಿಸುತ್ತಿದ್ದರು. ಹೇಗೆಂದರೆ ಎಲ್ಲ ಒಳಗೂ ಹೊರಗೂ ತುಂಬಿರುತ್ತಿದ್ದವು.

ನಾನೀಗ ಅವರು ಹೇಗೆ ಶಸ್ತ್ರ ಹಾಗೂ ಅಲಂಕಾರಗಳನ್ನು ಧರಿಸಿದ್ದರೆಂಬುದನ್ನು ವರ್ಣಿಸಲಚ್ಛಿಸುವೆ. ಅಶ್ವದಳ ಪೂರ್ಣಾಲಂಕೃತ ಕುದುರೆಗಳ ಹಣೆಗಳ ಮೇಲೆ ಫಲಕ ಗಳು. ಕೆಲವು ಬೆಳ್ಳಿಯವು. ಬಹುಮಟ್ಟಿನವು ಬಂಗಾರದ ಗಿಲೀಟು ಮಾಡಲ್ಪಟ್ಟವು. ಅವುಗಳಿಗೆ ಎಲ್ಲ ಬಣ್ಣಗಳ ರೇಷ್ಮೆಯಿಂದ ಹೊಸೆದ ಅಂಚುಗಳು ಮತ್ತು ಅದರದೇ ಲಗಾಮುಗಳು[50] ಮೀಕ್ಕವುಗಳಿಗೆ ಮೆಕ್ಕಾ ಮಕಮಲ್ಲಿನ ಸಜ್ಜುಗಳು. ಅಂದರೆ ಅಂಚು ಗಳು ಮತ್ತು ಅಲಂಕಾರಗಳುಳ್ಳ ಹಲವಾರು ಬಣ್ಣಗಳ ಮಖಮಲ್ಲು. ಇನ್ನು ಕೆಲವು ಸ್ಯಾಟಿನ್ ಮತ್ತು ಕಿತ್ತನಾರು ಮೊದಲಾದ ಬೇರೆ ತರಹದ ರೇಷ್ಮೆಗಳವು. ಮತ್ತು ಕೆಲವು ಚೀನ ಮತ್ತು ಪರ್ಶಿಯಾಗಳ[51] ಕಿನ್‌ಖಾಪಿನವು. ಗಿಲೀಟಿನ ಫಲಕಗಳುಳ್ಳ ಕೆಲವರು ಅವುಗಳಲ್ಲಿ ಹಲವು ದೊಡ್ಡ ಬೆಲೆಯುಳ್ಳ ಹರಳುಗಳನ್ನು ಕೂಡಿಸಿದ್ದರು ಮತ್ತು ಅಂಚುಗಳಲ್ಲಿ ಚಿಕ್ಕ ಹರಳುಗಳ ಕಲಾಬತು. ಈ ಕುದುರೆಗಳಲ್ಲಿ ಕೆಲವುಗಳ ಹಣೆಯ ಮೇಲೆ ಹಾವುಗಳ ಮತ್ತು ನಾನಾ ವಿಧದ ಇತರ ದೊಡ್ಡ ಪ್ರಾಣಿಗಳ ಮುಖ ಗಳು ಇದ್ದವು. ಅವು ಎಂಥ ವಿಲಕ್ಷಣ ರೀತಿಯಲ್ಲಿ ಮಾಡಲ್ಪಟ್ಟಿದ್ದವೆಂದರೆ ಅವುಗಳ ಮಾಟದ ಪರಿಪೂರ್ಣತೆಯಿಂದಾಗಿ ಅವು ಮನೋಹರ ನೋಟಗಳಾಗಿದ್ದವು. ಅಶ್ವಾಳು ಗಳುರಜಾಯಿ,[52] ಜರತಾರಿ, ಮಖಮಲ್ಲು ಮತ್ತು ಎಲ್ಲ ವಿಧದ ರೇಷ್ಮೆಯ ಅಂಗಿ ಗಳನ್ನು ತೊಟ್ಟಿದ್ದರು. ಈ ಅಂಗಿಗಳನ್ನು ಬಹಳ ಗಟ್ಟಿಯಾದ ಚರ್ಮದ ಪದರುಗಳಿಂದ ಮಾಡಿದ್ದು ಅವುಗಳನ್ನು ಮಜಬೂತಾಗಿಸುವ ಬೇರೆ ಕಬ್ಬಿಣ (ತಗಡು) ದಿಂದ ಸಜ್ಜುಗೊಳಿಸಲಾಗಿದೆ. ಕೆಲವರು ಈ ತಗಡುಗಳನ್ನು ಒಳಗೂ ಹೊರಗೂ ಗಿಲೀಟು ಮಾಡಿಸಿದ್ದಾರೆ. ಮತ್ತು ಕೆಲವನ್ನು ಬೆಳ್ಳಿಯಿಂದ ಮಾಡಲಾಗಿದೆ. ಅವರ ತಲೆಯುಡುಪುಗಳು ಶಿರಸ್ತ್ರಾಣಗಳ ಮಾದರಿಯಲ್ಲಿ ಮಾಡಲಾಗಿವೆ. ಅವುಗಳ ಅಂಚುಗಳು ಕುತ್ತಿಗೆಗಳನ್ನು ಮುಚ್ಚುತ್ತವೆ. ಪ್ರತಿಯೊಂದಕ್ಕೂ

ಮುಖ ಸಂರಕ್ಷಿಸುವ ಭಾಗವಿದೆ ಅವು ಅಂಗಿಗಳ ಮಾದರಿಯುವೆ ಆಗಿವೆ. ಅವರು ಕೊರಳಲ್ಲಿ ಪೂರ್ತಿ ಗಿಲೀಟು ಮಾಡಲಾದ ಹಾರಗಳನ್ನು ಧರಿಸಿರುತ್ತಾರೆ. ಇನ್ನು ಕೆಲವು ಗಳನ್ನು ಬಂಗಾರ ಹಾಗೂ ಬೆಳ್ಳಿಯು ತಗಡುಗಳನ್ನು ಜೋಡಿಸಿ ರೇಷ್ಮೆಯಿಂದ ಮತ್ತು ಕೆಲವುಗಳನ್ನು ಕನ್ನಡಿಯಷ್ಟು ಉಜ್ವಲವಾದ ಉಕ್ಕಿನೊಂದಿಗೆ ಮಾಡಲಾಗಿದೆ. ಟೊಂಕದಲ್ಲಿ ಅವರು ಕತ್ತಿಗಳನ್ನು ಮತ್ತು ಚಿಕ್ಕ ಗಂಡುಗೊಡಲಿಗಳನ್ನು ಧರಿಸಿರುತ್ತಾರೆ. ಮತ್ತು ಕೈಗಳಲ್ಲಿ ಬಂಗಾರ ಮತ್ತು ಬೆಳ್ಳಿಯಿಂದ ಹೊದಿಸಿದ ಕೋಲುಳ್ಳ ಈಟಿಗಳನ್ನು ಹಿಡಿದಿರುತ್ತಾರೆ. ಕುದುರೆಗಳ ಮೇಲೆ ಎಲ್ಲರೂ ಮಖಮಲ್ಲು, ಕಿತ್ತಾನಾರು ಮತ್ತು ಹಲವಾರು ಬಣ್ಣದ ರೇಷ್ಮೆಗಳಿಂದ ಮಾಡಿದ ತಮ್ಮ ರಾಜ ಛತ್ರಗಳನ್ನು ಹೊಂದಿರುತ್ತಾರೆ. ಬಿಳಿ ಮತ್ತು ಬಣ್ಣದ ಬಾಲಗಳುಳ್ಳ ಅನೇಕ (ಪತಾಕೆಗಳನ್ನು) ವನ್ನು ಅವರು ಹೊಂದಿರುತ್ತಾರೆ ಮತ್ತು ಅವುಗಳನ್ನು ಬಹಳ ಗೌರವದಿಂದ ನೋಡಿ ಕೊಳ್ಳುತ್ತಾರೆ. ಈ ಬಾಲಗಳೆಂದರೆ ಕುದುರೆಗಳ ಬಾಲಗಳು. ಆನೆಗಳಿಗೂ ಅದೇ ರೀತಿ ಮಖಮಲ್ಲು ಮತ್ತು ಬಂಗಾರದ ಜೂಲುಗಳನ್ನು ಹಾಕಲಾಗಿರುತ್ತದೆ. ಜೂಲುಗಳಿಗೆ ಜಾಲರಿಗಳಿದ್ದು ಅನೇಕ ಬಣ್ಣಗಳ ಒಳ್ಳೆಯ ಬಟ್ಟೆಯಿಂದ ತಯಾರಿಸಲಾಗಿರುತ್ತದೆ. ಮತ್ತು ಭೂಮಿ ಪ್ರತಿಧ್ವನಿಸುವಂತೆ ಗಂಟೆಗಳನ್ನು ಕಟ್ಟಲಾಗಿರುತ್ತದೆ. ಪ್ರತಿಯೊಂದರ ಬೆನ್ನ ಮೇಲೆ ಮೂರು ಅಥವಾ ನಾಲ್ಕು ಜನರು ತಮ್ಮ ರಜಾಯಿ ಅಂಗಿ ಧರಿಸಿ, ಢಾಲು ಮತ್ತು ಈಟಿಗಳಿಂದ ಸಜ್ಜತರಾಗಿ ಆಕ್ರಮಣಕ್ಕೇನೊ ಎಂಬಂತೆ ಕುಳಿತಿರುತ್ತಾರೆ. ಈಗ ಕಾಲಾಳುಗಳ ಬಗೆಗಾದರೆ ಅವರು ಎಷ್ಟೊಂದು ಸಂಖ್ಯೆಯಲ್ಲಿದ್ದಾರೆಂದರೆ ಜಗತ್ತಿನಲ್ಲಿ ಅದರೊಂದಿಗೆ ಏನನ್ನೂ ಹೋಲಿಸಲಾಗದಂತ ರೀತಿಯಲ್ಲಿ ಅವರು ಎಲ್ಲ ಕೊಳ್ಳ ಮತ್ತು ಗುಡ್ಡಗಳನ್ನು ಸುತ್ತುವರಿದಿರುತ್ತಾರೆ. ನೀವು ಅವರಲ್ಲಿ ಎಂಥೆಂಥ ಒಳ್ಳೆಯ ಬಟ್ಟೆಗಳನ್ನು ನೋಡುವಿರೆಂದರೆ ಅವು ಎಲ್ಲಿಂದ ಬರುತ್ತವೆಂದು ನಾನು ಹೇಳಲಾರೆ. ಅವು ಎಷ್ಟು ಬಣ್ಣದವೆಂಬುವನ್ನೂ ಯಾರೂ ಹೇಳರು. ಈಟಿಗಾರರ ಈಟಿಗಳ ಮೇಲೆ ಹಲವಾರು ಬಂಗಾರದ ಮತ್ತು ಬೆಳ್ಳಿಯ ಹೂಗಳು, ಹುಲಿ ಮತ್ತಿತರ ದೊಡ್ಡ ಪಶುಗಳ ಆಕೃತಿಗಳು, ಸುಂದರವಾಗಿ ಕೆತ್ತಿದ ಬೆಳ್ಳಿಯ ಎಲೆ ವಿನ್ಯಾಸ, ಬಣ್ಣ ಕೊಟ್ಟವು, ಕಪ್ಪು ಮತ್ತು (ಎಷ್ಟೊಂದು ಬೆಳಗಿದವೆಂದರೆ) ನೀವು ಕನ್ನಡಿಯಲ್ಲಿಯಂತೆ ಅದರೊಳಗೆ ನೋಡಬಹುದು, ಮತ್ತು ಅವರ ಖಡ್ಗಗಳು ಎಷ್ಟು ಒಳ್ಳೆಯ ರೀತಿಯಲ್ಲಿ ಅಲಂಕೃತವಾಗಿರುವವೆಂದರೆ ಅವುಗಳನ್ನು ಅದಕ್ಕಿಂತ ಹೆಚ್ಚು ಹಾಗೆ ಮಾಡಲಾಗದು. ಬಿಲ್ಲುಗಾರರ ಬಗೆಗೆ ಹೇಳಬೇಕೆಂದರೆ ಅವರ ಬಿಲ್ಲುಗಳಿಗೆ ಬಂಗಾರ ಮತ್ತು ಬೆಳ್ಳಿಯ ತಗಡು ಹೊದಿಸಲಾಗಿರುತ್ತದೆ. ಮಿಕ್ಕವರು ಅವುಗಳನ್ನು ಉಜ್ಜಿ ಹೊಳಪು ಕೊಡಲಾಗಿರುತ್ತದೆ ಮತ್ತು ಅವರ ಬಾಣಗಳು ನೀಟಾಗಿದ್ದು ಹೇಗೆ ಗರಿ ಹಾಕಲಾಗಿರುತ್ತದೆಂದರೆ ಅವುಗಳನ್ನು ಇನ್ನೂ ಉತ್ತಮಗೊಳಿಸಲು ಸಾಧ್ಯವಿಲ್ಲ. ಟೊಂಕಗಳಲ್ಲಿ ಬಂಗಾರದ ಮತ್ತು ಬೆಳ್ಳಿಯ ಕಾವುಗಳು ಮತ್ತು ಹಿಡಿಕೆಗಳುಳ್ಳ ಕಠಾರಿ ಮತ್ತು ಗಂಡುಗೊಡಲಿಗಳು. ಅಲ್ಲದೆ, ತುಬಾಕಿ ಮತ್ತು ದೊಡ್ಡ ಬಾಯಿಯ ಸಣ್ಣ

ಬಂದೂಕು ಹಿಡಿದು ದಪ್ಪ ಅಂಗಿ ಧರಿಸಿದ ತುಬಾಕಿದಳ ಎಲ್ಲರೂ ತಮ್ಮ ತಮ್ಮ ಸ್ಥಾನ ದಲ್ಲಿ ತಮ್ಮ....ಗಳೊಂದಿಗೆ ತಮ್ಮೆಲ್ಲ ಆಟೋಪದೊಂದಿಗೆ. ಅದು ನಿಜಕ್ಕೂ ನೋಡು ವಂಥದು. ನಂತರ ಮೂರರು—ಅವರನ್ನು ಮರೆಯುವಂತಿಲ್ಲ—ಅವರು ಕೂಡ ತಮ್ಮ ಢಾಲು, ಈಟಿ, ತುರ್ಕಿಬಿಲ್ಲು, ಅನೇಕ ಸಿಡಿಗುಂಡುಗಳು, ಭಲ್ಲೆ ಮತ್ತು ಅಗ್ನಿಬಾಣಗಳೊಂದಿಗೆ ಸೈನ್ಯ ಪ್ರದರ್ಶನದಲ್ಲಿದ್ದರು. ಮತ್ತು ಈ ಆಯುಧಗಳನ್ನು ಬಳಸಲು ಬಲು ಚನ್ನಾಗಿ ಬಲ್ಲವರು ಅವರಲ್ಲಿದ್ದುದು ನನಗೆ ಬಹಳ ಅಚ್ಚರಿಯುಂಟು ಮಾಡಿತು.

ರಾಜ ಅರಮನೆಯಿಂದ ನಾನು ಈಗಾಗಲೆ ಹೇಳಿರುವ ಕುದುರೆಯ ಮೇಲೆ ಹೊರಡುತ್ತಾನೆ. ನಾನೀಗಾಗಲೆ ಹೇಳಿದ ಹಲವಾರು ಶ್ರೇಷ್ಠ ಬಿಳಿ ಬಟ್ಟೆಗಳನ್ನು ಧರಿಸುತ್ತಾನೆ. ಬಂಗಾರದ ಗಿಲೀಟು ಮಾಡಲಾದ ಮತ್ತು ಕಡುಗೆಂಪು ಮಖಮಲ್ಲು ಹೊದಿಸಿದ ಎರಡು ರಾಜಛತ್ರಗಳೊಂದಿಗೆ ಮತ್ತು ಇಂಥ ಸಮಯಗಳಲ್ಲಿ ಧರಿಸುವ ಉದ್ದೇಶದಿಂದ ಇಡಲಾದ ರತ್ನಗಳು ಮತ್ತು ಆಭರಣಗಳೊಂದಿಗೆ. ಇಂಥ ರತ್ನಗಳನ್ನು ಎಂದಾದರೂ ಧರಿಸಿದವನು ಮಾತ್ರ ಇಷ್ಟು ದೊಡ್ಡ ದೊರೆ ಧರಿಸಬಹುದಾದ ವಸ್ತು ಗಳನ್ನು ಅರಿಯಬಲ್ಲ. ಮನ್ನೆಯರ ಮತ್ತು ಉನ್ನತ ದರ್ಜೆಯವರ ವೈಭವವನ್ನು ನೋಡಿದರೆ ನಾನು ಅದೆಲ್ಲವನ್ನೂ ವರ್ಣಿಸಲು ಅಸಾಧ್ಯ. ಹಾಗೆ ಮಾಡಲೆತ್ನಿಸಿದರೂ ಯಾರೂ ನಂಬರು. ಕುದುರೆಗಳು ಮತ್ತು ಅವುಗಳು ಧರಿಸಿದ ಯುದ್ಧಕವಚ ನೋಡಿದರೆ ಅವು ಲೋಹಫಲಕಗಳಿಂದ ಯಾವ ರೀತಿ ಆಚ್ಛಾದಿತವಾದುದನ್ನು ನೀವು ಕಾಣುವಿರೆಂದರೆ ನಾನು ನೋಡಿದುದನ್ನು ವರ್ಣಿಸಲು ನನ್ನ ಬಳಿ ಶಬ್ದಗಳಿಲ್ಲ. ಮತ್ತು ಕೆಲವು ಇನ್ನು ಕೆಲವುಗಳ ನೋಟವನ್ನು ನನ್ನಿಂದ ಮರೆಮಾಡಿದವು; ಮತ್ತು ನಾನು ನೋಡಿದುದೆಲ್ಲ ಹೇಳಲೆತ್ನಿಸುವುದು ಅಸಾಧ್ಯ. ಏಕೆಂದರೆ, ನಾನು ಹೋಗುತ್ತ ನನ್ನ ತಲೆಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಎಷ್ಟೊಂದು ಮೇಲಿಂದ ಮೇಲೆ ತಿರುಗಿಸುತ್ತಿದ್ದೆನೆಂದರೆ ಅರಿವು ತಪ್ಪಿ ನನ್ನ ಕುದುರೆಯಿಂದ ಹೆಚ್ಚೂಕಡಿಮೆ ಹಿಂದಕ್ಕೆ ಬೀಳುವಂತಾಗಿತ್ತು. ಅದೆಲ್ಲದರ ವೆಚ್ಚದ ಬಗೆಗೆ ಅಚ್ಚರಿಪಡುವ ಕಾರಣ ವಿಲ್ಲ. ಏಕೆಂದರೆ, ನಾಡಿನಲ್ಲಿ ಅಷ್ಟೊಂದು ಹಣವಿದೆ ಮತ್ತು ದೊರೆಗಳು ಅಷ್ಟೊಂದು ಶ್ರೀಮಂತರಿದ್ದಾರೆ.

ರಾಜನ ಮುಂದೆ ನಾನು ಹೇಳಿರುವಂತೆ ಬಹಳ ಆನೆಗಳು ತಮ್ಮ ಗೌಸುಗಳು ಮತ್ತು ಆಭರಣಗಳೊಂದಿಗೆ ಹೋಗುತ್ತಿದ್ದವು. ರಾಜನ ಮುಂದೆ ಸುಮಾರು ಇಪ್ಪತ್ತು ಕುದುರೆಗಳು. ಅವುಗಳಿಗೆ ಪೂರ್ತಿ ಜೂಲು ಮತ್ತು ಜೀನು ಮತ್ತು ತಮ್ಮ ಪ್ರಭುವಿನ ವೈಭವ ಮತ್ತು ಅಂತಸ್ತುಗಳನ್ನು ಪ್ರದರ್ಶಿಸುವ ಬಂಗಾರ ಮತ್ತು ಬೆಲೆ ಯುಳ್ಳ ಹರಳುಗಳ ಕಸೂತಿಗಳು, ರಾಜನಿಗೆ ಸಮೀಪದಲ್ಲಿಯೆ ಕಾರ್ಪೊದ ಡಿಯೊಸ್ ಉತ್ಸವದ ದಿನದಂದು ಲಿಸ್ಬನ್‌ನಲ್ಲಿ ನೋಡುವಂತಹ ಪಂಜರ ಹೋಗುತ್ತದೆ. ಅದಕ್ಕೆ

ಬಂಗಾರದ ಗಿಲೀಟು ಮಾಡಲಾಗಿದ್ದು ಅದು ದೊಡ್ಡದಿದೆ. ಅದು ತಾಮ್ರ ಅಥವಾ ಬೆಳ್ಳಿಯಿಂದ ಮಾಡಿದ್ದಂತೆ ನನಗೆ ತೋರಿತು. ಅದನ್ನು ಪ್ರತಿ ಬದಿಯಲ್ಲಿ ಎಂಟರಂತೆ ಹದಿನಾರು ಜನ ಹೊರುತ್ತಾರೆ. ಅಲ್ಲದೆ, ತಮ್ಮ ಸರದಿ ಪಡೆಯುವ ಇತರರು ಇರುತ್ತಾರೆ. ಅದರಲ್ಲಿ ನಾನೀಗಾಗಲೆ ಹೇಳಿದ ವಿಗ್ರಹವನ್ನು ಒಯ್ಯುತ್ತಾರೆ. ಹೀಗೆ ಜೊತೆಗೂಡಿ ರಾಜ ತನ್ನ ಸೈನಿಕರತ್ತ ದೃಷ್ಟಿ ಬೀರುತ್ತ ಮುಂದೆ ಸಾಗಿದ. ಅವರು ಗಟ್ಟಿಯಾಗಿ ಕೂಗುತ್ತ, ಕೇಕೆ ಹಾಕುತ್ತ ತಮ್ಮ ಗುರಾಣಿಗಳನ್ನು ಬಡಿಯುತ್ತಿದ್ದರು. ನಗರ ಕಿತ್ತುಬೀಳುವುದೇನೊ ಎಂಬಂತೆ ಕುದುರೆಗಳು ಹೇಂಕರಿಸಿದವು, ಆನೆಗಳು ಘೀಳಿಟ್ಟವು. ಶಸ್ತ್ರಾಸ್ತ್ರಗಳ ಮತ್ತು ತುಬಾಕಿಗಳ ಸುರಿಮಳೆಯಿಂದ ಗಿರಿಗಹ್ವರಗಳು ಮತ್ತು ನೆಲವೆಲ್ಲ ಅದುರಿದವು, ಬಯಲುಗಳ ಮೇಲೆ ಸಿಡಿಗುಂಡುಗಳು ಮತ್ತು ಅಗ್ನಿ ಬಾಣಗಳನ್ನು ನೋಡುವುದು ಅದ್ಭುತವಾಗಿತ್ತು. ನಿಜಕ್ಕೂ ಅಲ್ಲಿ ಇಡಿ ಪ್ರಪಂಚವೆ ನೆರೆದಂತೆ ಕಾಣುತ್ತಿತ್ತು.

ಈ ರೀತಿ ರಾಜ ನಾನೀಗಾಗಲೆ ಹೇಳಿರುವ ಡೇರೆಯಿದ್ದಲ್ಲಿಗೆ ಬರುವವರೆಗೆ ಅದು ನಡೆಯುತ್ತಿತ್ತು. ಅವನು ಅದನ್ನು ಪ್ರವೇಶಿಸಿ ತನ್ನ ವಾಡಿಕೆಯ ಆಚರಣೆಗಳನ್ನು ಮತ್ತು ಪ್ರಾರ್ಥನೆಗಳನ್ನು ಸಲ್ಲಿಸಿದ. ರಾಜ ಸಾಗುವಾಗ ಸೈನಿಕರು ತಮ್ಮ ಸ್ಥಾನಗಳಿಂದ ಅಲುಗಾಡುತ್ತಿದ್ದರೆಂದು ಭಾವಿಸಬಾರದು. ತದ್ವಿರುದ್ಧವಾಗಿ ಅವರು ರಾಜ ಹಿಂತಿರುಗುವವರೆಗೆ ತಮ್ಮ ಸ್ಥಳಗಳಲ್ಲಿ ಅಲುಗಾಡದೆ ನಿಂತಿರುವರು. ತನ್ನ ಆಚರಣೆಗಳನ್ನು ಮುಗಿಸಿದಾಕ್ಷಣ ಅವನು ಪುನಃ ಕುದುರೆಯೇರಿ ತಾನು ಬಂದಂತೆಯೆ ನಗರಕ್ಕೆ ಹಿಂದಿರುಗಿದ. ಸೈನಿಕರು ಘೋಷ ಹಾಕುವುದಕ್ಕೆ ಬೇಸರಿಸಲಿಲ್ಲ. ಅವನು ದಾಟಿ ಹೋದ ಕೂಡಲೆ ಅವರು ಹೊರಡತೊಡಗಿದರು. ಆ ಮೇಲೆ ಗುಡ್ಡಗಳು ಮತ್ತು ಇಳಿಜಾರುಗಳ ಮೇಲೆ ಇದ್ದವರ ಅವರೋಹಣವನ್ನು ನೋಡುವುದು. ಅವರ ಘೋಷ, ಗುರಾಣಿ ಬಡಿಯುವುದು, ಮತ್ತು ಎಣಿಕೆಯಿಲ್ಲದ ಬಿಲ್ಲುಬಾಣಗಳ ಅಲುಗಾಡಿಸುವಿಕೆ, ನಿಜವಾಗಿಯೂ, ನಾನೆಷ್ಟು ಪರವಶನಾದೆನೆಂದರೆ ನಾನು ಸ್ವಪ್ನ ದರ್ಶನ ಕಂಡವನಂತೆ ಮತ್ತು ಕನಸಿನಲ್ಲಿದ್ದಂತೆ ಎನಿಸಿತು. ಆ ಮೇಲೆ ಸೈನಿಕರು ಬಯಲುಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದ ತಮ್ಮ ಡೇರೆಗಳಿಗೆ ಮತ್ತು ಗುಡಾರಗಳಿಗೆ ಸಾಗತೊಡಗಿದರು. ಎಲ್ಲ ದಳಪತಿಗಳು ರಾಜನೊಂದಿಗೆ ಅರಮನೆಯವರೆಗೆ ಸಾಗಿ ಅಲ್ಲಿಂದ ತಮ್ಮ ಶ್ರಮದಿಂದ ವಿಶ್ರಾಂತಿ ಪಡೆಯಲು ತೆರಳಿದರು.

ಈ ರಾಜ ಯುದ್ಧ ಕವಚವುಳ್ಳ ೩೫,೦೦೦ ಅಶ್ವಾಳುಗಳು ಸೇರಿದಂತೆ ಒಂದು ದಶಲಕ್ಷ[54] ಕಾದುವ ಸೈನಿಕರನ್ನು ಯಾವಾಗಲೂ ಹೊಂದಿರುತ್ತಾನೆಂಬುದನ್ನು ನೀವು ಅರಿಯಬೇಕೆಂದು ಬಯಸುವೆ. ಇವರೆಲ್ಲ ಅವನ ವೇತನದಲ್ಲಿರುವರು. ಅವನು ಇವೆಲ್ಲ ಸೈನಿಕರನ್ನು ಒಟ್ಟಿಗೆ ಇಟ್ಟಿದ್ದು ಅವಶ್ಯಕತೆ ಬಿದ್ದಾಗ ಯಾವ ದಿಕ್ಕಿಗಾದರೂ ಕಳಿಸಲು ಸನ್ನದ್ಧವಾಗಿ ಇರಿಸುತ್ತಾನೆ. ಈ ಬಿಸ್ನಗ ನಗರದಲ್ಲಿದ್ದುದರಿಂದ

ನಾನೊಮ್ಮೆ ರಾಜ ಸಮುದ್ರ ಕರಾವಳಿಯಲ್ಲಿರುವ ತನ್ನ ಸ್ಥಳಗಳಲ್ಲೊಂದರ ವಿರುದ್ಧ ಸೇನಾಬಲ ಕಳಿಸಿದುದನ್ನು ನೋಡಿದೆ. ಅವನು ಅನೇಕ ಅಶ್ವಾಳುಗಳಿದ್ದ ೧೫೦,೦೦೦ ಸೈನಿಕರೊಂದಿಗೆ ಐವತ್ತು ದಳಪತಿಗಳನ್ನು ಕಳಿಸಿದ. ಅವನಲ್ಲಿ ಅನೇಕ ಆನೆಗಳಿವೆ. ರಾಜ ತನ್ನ ರಾಜ್ಯದ ನೆರೆಯಲ್ಲಿರುವ ಮೂವರು ರಾಜರಲ್ಲಿ ಯಾವನೊಬ್ಬನಿಗೆ ತನ್ನ ಬಲ ಪ್ರದರ್ಶಿಸಬಯಸಿದಾಗ ರಣರಂಗದಲ್ಲಿ ಎರಡು ದಶಲಕ್ಷ ಸೈನಿಕರನ್ನು ನಿಲ್ಲಿಸುತ್ತಾನೆ. ತತ್ಪರಿಣಾಮವಾಗಿ ಈ ಭಾಗಗಳಲ್ಲಿ ಅವನು ಅತ್ಯಂತ ಭಯ ಹುಟ್ಟಿಸುವ ರಾಜನಾಗಿರುವನು. ಅವನು ತನ್ನ ರಾಜ್ಯದಿಂದ ಇಷ್ಟೊಂದು ಜನರನ್ನು ಒಯ್ದರೂ ರಾಜ್ಯ ಜನರಹಿತವಾಗಿರುತ್ತದೆಂದು ಭಾವಿಸಕೂಡದು. ಅದು ಎಷ್ಟೊಂದು ಜನಭರಿತವಾಗಿರುತ್ತದೆಂದರೆ ಅವನು ಒಬ್ಬನನ್ನೂ ಒಯ್ದಿಲ್ಲವೆಂಬಂತೆ ಅನಿಸುತ್ತದೆ. ಇದಕ್ಕೆ ಕಾರಣವೆಂದರೆ ಅದರಲ್ಲಿರುವ ಅನೇಕ ಮತ್ತು ಶ್ರೇಷ್ಠ ವರ್ತಕರು ರಣರಂಗದಲ್ಲಿ ಹೋಗಬೇಕಾದವರಲ್ಲದೆ ಅಲ್ಲಿ ದುಡಿಯುವ ಜನ ಮತ್ತು ವ್ಯಾಪಾರದಲ್ಲಿ ತೊಡಗಿದ ಮಿಕ್ಕೆಲ್ಲ ತರಹದ ಜನ ಇದ್ದಾರೆ. ಅಧಿಕ ಸಂಖ್ಯೆಯಲ್ಲಿ ಬ್ರಾಹ್ಮಣರೂ ಇದ್ದಾರೆ. ವಿಧರ್ಮೀಯ ನಾಡಿನಲ್ಲೆಲ್ಲ ಈ ಬ್ರಾಹ್ಮಣರಿದ್ದಾರೆ. ಅವರು ಸಾವನ್ನುಂಟು ಮಾಡುವುದಾವುದನ್ನೂ ತಿನ್ನುವದಿಲ್ಲ. ಅವರಿಗೆ ಶಸ್ತ್ರಗಳ ಬಳಕೆಯಲ್ಲಿ ಅಭಿರುಚಿಯಿಲ್ಲ.

ರಾಜನ ಆದಾಯವೆಷ್ಟು ಮತ್ತು ಇಷ್ಟು ಸೈನಿಕರಿಗೆ ಸಂಬಳ ಕೊಡಲು ಶಕ್ತನಾಗಿರಲು ಅವನ ಭಂಡಾರ ಎಂಥದು ಎಂದು ಯಾರಾದರೂ ಕೇಳಿದರೆ, ಅವನು ತನ್ನ ರಾಜ್ಯದಲ್ಲಿ ಇಷ್ಟೊಂದು ಮತ್ತು ಎಂಥ ದೊಡ್ಡ ಪ್ರಭುಗಳನ್ನು ಹೊಂದಿರುವುದರಿಂದ ಮತ್ತು ಅವರಲ್ಲಿ ಬಹುಮಂದಿ ತಮ್ಮದೇ ಆದಾಯಗಳನ್ನು ಹೊಂದಿರುವುದರಿಂದ ನಾನು ಹೀಗೆ ಉತ್ತರಿಸುವೆ : ತನ್ನ ಸೈನಿಕರ ಮೇಲೆ ನಿಯಮಿಸಿದ ಈ ದಳಪತಿಗಳು ಅವನ ಮನ್ನೆಯರು ; ಅವರು ಪ್ರಭುಗಳು, ಅವರು ನಗರಗಳು ಪಟ್ಟಣಗಳು ಮತ್ತು ಗ್ರಾಮಗಳ ಸ್ವಾಮ್ಯ ಪಡೆದಿರುತ್ತಾರೆ. ದಳಪತಿಗಳಲ್ಲಿ ಕೆಲವರು ಒಂದು ಒಂದೂವರೆ ದಶಲಕ್ಷ ಪರ್ದಾಓಗಳ ಆದಾಯವುಳ್ಳವರಿದ್ದಾರೆ ಇನ್ನು ಕೆಲವರು ಒಂದು ನೂರು ಮತ್ತು ಇನ್ನೂ ಕೆಲವರು ಇನ್ನೂರು, ಮುನ್ನೂರು ಅಥವಾ ಐನೂರು ಸಾವಿರ ಪರ್ದಾಓಗಳ ಆದಾಯವುಳ್ಳವರು. ಪ್ರತಿಯೊಬ್ಬನಿಗೂ ಆದಾಯವಿರುವುದರಿಂದ ರಾಜ ಅವನು ಸಲಹಬೇಕಿದ್ದ ಕಾಲಾಳು, ಕುದರೆ ಮತ್ತು ಆನೆಗಳ ಸೈನ್ಯವನ್ನು ನಿಗದಿಗೊಳಿಸುತ್ತಾನೆ[55]. ಯಾವಾಗಲೇ ಕರೆಯಲಿ ಎಲ್ಲಿಗೇ ಹೋಗಬೇಕಿರಲಿ ಈ ಸೈನಿಕರು ಕರ್ತವ್ಯಕ್ಕಾಗಿ ಸದಾ ಸನ್ನದ್ಧರಾಗಿರುತ್ತಾರೆ. ಈ ರೀತಿ ಅವನು ಈ ದಶಲಕ್ಷ ಹೋರಾಳುಗಳನ್ನು ಯಾವಾಗಲೂ ಸಿದ್ಧವಾಗಿಟ್ಟಿರುತ್ತಾನೆ. ತಾನು ಅವರಿಗೆ ಸಂಬಳ ಕೊಡುತ್ತಿರುವುದರಿಂದ ಪ್ರತಿ ದಳಪತಿಯೂ ತನಗೆ ಲಭ್ಯವಿರುವ ಅತ್ಯುತ್ತಮ ಸೈನಿಕರನ್ನು ತಯಾರಿಸಲು ಶ್ರಮಿಸುತ್ತಾನೆ. ಮತ್ತು ಈ ಪ್ರದರ್ಶನದಲ್ಲಿ ಎಂದಿಗೂ ಕಾಣಲು ಸಾಧ್ಯವಾದ ಅತ್ಯುತ್ಕೃಷ್ಟ ಯುವಕರನ್ನು ನಾನು ಕಂಡೆ.

ಏಕೆಂದರೆ ಇಡಿ ವ್ಯೂಹದಲ್ಲಿ ಹೇಡಿಯಂತೆ ನಡೆದುಕೊಳ್ಳುವ ಒಬ್ಬನನ್ನೂ ನಾನು ಕಾಣಲಿಲ್ಲ. ಈ ಸೈನಿಕರನ್ನು ಸಲಹುವುದಲ್ಲದೆ ಪ್ರತಿ ದಳಪತಿ ರಾಜನಿಗೆ ವಾರ್ಷಿಕ ಕಪ್ಪ ಕೊಡಬೇಕು ಮತ್ತು ರಾಜ ತಾನು ಪಗಾರ ಕೊಡುವ ತನ್ನದೇ ಸಂಬಳದಾರ ಸೈನಿಕರನ್ನೂ ಪಡೆದಿರುತ್ತಾನೆ. ತನ್ನ ಸ್ವಂತ ನಿಯಂತ್ರಣದಲ್ಲಿ ಎಂಟುನೂರು ಆನೆ ಗಳನ್ನು ಮತ್ತು ತನ್ನ ಲಾಯಗಳಲ್ಲಿ ಯಾವಾಗಲೂ ಐನೂರು ಕುದುರೆಗಳನ್ನು ಇಟ್ಟಿರುತ್ತಾನೆ. ಈ ಕುದುರೆಗಳ ಮತ್ತು ಆನೆಗಳ ಖರ್ಚಿಗಾಗಿ ಅವನು ಈ ಬಿಸ್ನಗ ನಗರದಿಂದ ಬರುವ ಆದಾಯಗಳನ್ನು ಮೀಸಲಿಟ್ಟಿದ್ದಾನೆ. ಈ ಖರ್ಚು ಎಷ್ಟು ದೊಡ್ಡದಾಗಿರುವುದೆಂದು ನೀವು ಸುಲಭವಾಗಿ ಊಹಿಸಬಹುದು. ಇವುಗಳ ಖರ್ಚಲ್ಲದೆ ಕುದುರೆಗಳ ಮತ್ತು ಆನೆಗಳ ಚಾಕರಿಗಾಗಿದ್ದ ಸೇವಕರ ಖರ್ಚು ಬೇರೆ. ಇದರಿಂದ ಈ ನಗರದ ಆದಾಯ ಎಷ್ಟಾಗಿರಬಹುದೆಂದು ನೀವು ತೀರ್ಮಾನಿಸಬಹುದು. ವಿಶಾಲ ಪ್ರದೇಶಗಳು ಮತ್ತು ದೊಡ್ಡ ಆದಾಯಗಳುಳ್ಳ ಬೇರೆ ದಳಪತಿಗಳು ಮತ್ತು ಪ್ರಭು ಗಳಲ್ಲದೆ ಬಿಸ್ನಗದ ಈ ರಾಜನ ಪ್ರಜೆಗಳು ಮತ್ತು ಮಾಂಡಲಿಕರಾಗಿದ್ದ ಐವರು ರಾಜರಿದ್ದರು.[56] ಈ ರಾಜನಿಗೆ ಪುತ್ರ ಅಥವಾ ಪುತ್ರಿ ಜನಿಸಿದಾಗಲೆಲ್ಲ ರಾಜ್ಯದ ಅವನ ಎಲ್ಲ ಮನ್ನೆಯರು ಹಣ ಮತ್ತು ಬೆಲೆಯುಳ್ಳ ರತ್ನಗಳ ಕಾಣಿಕೆ ಸಲ್ಲಿಸುವರು ಮತ್ತು ಪ್ರತಿ ವರ್ಷ ಅವನ ಜನ್ಮದಿನದಂದೂ ಹಾಗೆಯೆ ಮಾಡುವರು.

ನಾನು ಹೇಳಿರುವ ಈ ಉತ್ಸವಗಳು ಮುಗಿದ ಮೇಲೆ ಮತ್ತು ಅಕ್ಟೋಬರದ ಆದಿಯಲ್ಲಿ ಅದರ ಹನ್ನೊಂದು ದಿವಸ ಕಳೆದ ಮೇಲೆ ಅವರು ದೊಡ್ಡ ಉತ್ಸವಗಳನ್ನು ಮಾಡುತ್ತಾರೆಂಬುದನ್ನು ನೀವು ಅರಿಯಬೇಕು. ಆಗ ಪ್ರತಿಯೊಬ್ಬನೂ ತನಗೆ ಇಷ್ಟ ಬಂದಂತೆ ಹೊಸ, ಬೆಲೆ ಬಾಳುವ ಮತ್ತು ಸುಂದರ ಬಟ್ಟೆಗಳನ್ನು ಧರಿಸುತ್ತಾನೆ. ಎಲ್ಲ ದಳಪತಿಗಳು ತಮ್ಮ ಜನರಿಗೆ ಅನೇಕ ಬಣ್ಣಗಳ ಬಟ್ಟೆಗಳನ್ನು ಕೊಡುತ್ತಾರೆ. ಪ್ರತಿಯೊಬ್ಬನಿಗೂ ತನ್ನದೇ ಬಣ್ಣ ಮತ್ತು ಲಾಂಛನ ಇರುತ್ತದೆ. ಅದೇ ದಿನದಂದು ಅವರು ರಾಜನಿಗೆ ಹಣದ ದೊಡ್ಡ ಕಾಣಿಕೆಗಳನ್ನು ಅರ್ಪಿಸುತ್ತಾರೆ. ಅವರು ಆ ದಿನ ರಾಜನಿಗೆ ಹಣದ ರೂಪದಲ್ಲಿ ಒಂದು ದಶಲಕ್ಷ ಐನೂರು ಸಾವಿರ ಸುವರ್ಣ ಪರ್ದಾಓ ಗಳನ್ನು ಕೊಡುತ್ತಾರೆಂದು ಹೇಳಲಾಗುತ್ತದೆ ಕೂಡ. ಪ್ರತಿ ಪರ್ದಾಓನ ಬೆಲೆ ಮುನ್ನೂರ ಅರವತ್ತು ರೆಯ್ಸ್. ಇದರಿಂದ ಅದೆಲ್ಲ ಎಷ್ಟು ರೆಯ್ಸ್ ಆಗುತ್ತದೆಂದು ನೀವು ತಿಳಿಯಬಹುದು. ಈ ದಿನದಂದು ಅವರ ವರ್ಷ ಆರಂಭಿಸುತ್ತದೆ ಎಂಬುದನ್ನು ನೀವು ತಿಳಿಯಬೇಕೆಂದು ಅಪೇಕ್ಷಿಸುವೆ. ಅದವರ ಹೊಸ ವರ್ಷ. ಇದಕ್ಕಾಗಿ ಅವರು ಉತ್ಸವ ಆಚರಿಸುತ್ತಾರೆ ಮತ್ತು ಕಾಣಿಕೆ ನೀಡುತ್ತಾರೆ. ಅದರಿಂದ ಆಚ್ಚರಿಪಡಬೇಕಿಲ್ಲ. ಏಕೆಂದರೆ, ನಾವು ಕೂಡ ಹೊಸ ವರ್ಷದ ದಿನ ಹಾಗೆಯೆ ಮಾಡುತ್ತೇವೆ. ಅವರು ಹೊಸ ವರ್ಷವನ್ನು ಈ ತಿಂಗಳಿನಲ್ಲಿ ಅಮವಾಸ್ಯೆಯ ದಿನ ಆರಂಭಿಸುತ್ತಾರೆ ಮತ್ತು ತಿಂಗಳುಗಳನ್ನು ಯಾವಾಗಲೂ ಚಂದ್ರನಿಂದ ಚಂದ್ರನಿಗೆ ಎಣಿಸುತ್ತಾರೆ.[57]

ನೀವು ತಿಳಿಯಬೇಕೆಂದು ನಾನೀಗ ಅಪೇಕ್ಷಿಸುವುದೇನೆಂದರೆ ಈ ಸ್ಥಳದ ಹಿಂದಿನ ರಾಜರು ಅನೇಕ ವರ್ಷಗಳಿಂದ ಒಂದು ಬೊಕ್ಕಸವನ್ನು ಇಟ್ಟುಕೊಂಡು ಬರುವ ರೂಢಿಯನ್ನು ಬೆಳೆಸಿದ್ದಾರೆ. ಪ್ರತಿಯೊಬ್ಬನ ಮರಣಾನಂತರವೂ ಅದನ್ನು ಯಾರೂ ನೋಡಲಾಗದಂತೆ ಮತ್ತು ತೆರೆಯಲಾಗದಂತೆ ಅದನ್ನು ಬೀಗ ಮುದ್ರೆಗಳಿಂದ ಭದ್ರಪಡಿಸಲಾಗುತ್ತದೆ. ಉತ್ತರಾಧಿಕಾರಿಗಳಾಗಿ ಬರುವ ರಾಜರೂ ಅವುಗಳನ್ನು ತೆರೆಯುವದಿಲ್ಲ ಅಥವಾ ಅವುಗಳಲ್ಲೇನಿದೆಯೆಂದು ತಿಳಿಯರು. ರಾಜರಿಗೆ ಅತ್ಯಂತ ಕಠಿಣ ಪರಿಸ್ಥಿತಿ ಇರದ ಹೊರತು ಅವುಗಳನ್ನು ತೆರೆಯಲಾಗುವುದಿಲ್ಲ. ಹೀಗೆ, ರಾಜ್ಯಕ್ಕೆ ತನ್ನ ಅಗತ್ಯಗಳಿಗೋಸ್ಕರ ಒಳ್ಳೆಯ ಸರಬರಾಯಿ ಇರುತ್ತದೆ. ಈ ರಾಜ ತನ್ನ ಬೊಕ್ಕಸವನ್ನು ಹಿಂದಿನ ರಾಜರವುಗಳಿಗಿಂತ ಭಿನ್ನವಾಗಿ ಮಾಡಿದ್ದಾನೆ. ಅದರಲ್ಲಿ ಪ್ರತಿವರ್ಷ ಹತ್ತು ದಶಲಕ್ಷ ಪರ್ದಾಓಗಳನ್ನು ಇಡುತ್ತಾನೆ. ತನ್ನ ಮನೆ ಖರ್ಚಿಗೆ ಬೇಕಾದುದಕ್ಕಿಂತ ಒಂದು ಪರ್ದಾಓ ಕೂಡ ಜಾಸ್ತಿ ಅವುಗಳಿಂದ ಹೊರ ತೆಗೆಯುವುದಿಲ್ಲ. ಈ ಖರ್ಚುಗಳು ಮತ್ತು ತನ್ನ ಪತ್ನಿಯರ ಮನೆಗಳಲ್ಲಿ ಖರ್ಚುಗಳು ಮಿಕ್ಕಿ ಉಳಿದುದೆಲ್ಲ ಅವನಿಗಾಗಿ. ನಾನೀಗಾಗಲೆ ಹೇಳಿರುವಂತೆ ಅವನು ತನ್ನಲ್ಲಿ ಹನ್ನೆರಡು ಸಾವಿರ ಸ್ತ್ರೀಯರನ್ನು ಇಟ್ಟುಕೊಂಡಿರುತ್ತಾನೆ. ಇದರಿಂದ ಈ ರಾಜ್ಯದ ಶ್ರೀಮಂತಿಕೆ ಎಷ್ಟು ದೊಡ್ಡದು ಮತ್ತು ಅವನು ಸಂಗ್ರಹಿಸಿದ ಸಂಪತ್ತು ಎಷ್ಟು ದೊಡ್ಡದು ಎಂಬುದನ್ನು ನೀವು ತೀರ್ಮಾನಿಸಬಹುದು.

ಯಾರಿಗಾದರೂ ಪರ್ದಾಓ ಅಂದರೇನೆಂದು ಗೊತ್ತಿರದಿದ್ದರೆ ಅದು ಈ ರಾಜ್ಯ ಬಿಟ್ಟು ಭಾರತದಲ್ಲೆಲ್ಲೂ ಟಂಕಿಸದ ದುಂಡಗಿನ ಸುವರ್ಣನಾಣ್ಯವೆಂದು ಅವನು ತಿಳಿದುಕೊಳ್ಳಲಿ. ಅದರ ಒಂದು ಬದಿಗೆ ಎರಡು ಆಕೃತಿಗಳು, ಮತ್ತೊಂದು ಬದಿಯ ಮೇಲೆ ಅದನ್ನು ಟಂಕಿಸಲು ಆಜ್ಞಾಪಿಸಿದ ರಾಜನ ಹೆಸರು ಮುದ್ರಿಸಲಾಗಿರುತ್ತದೆ. ಈ ರಾಜ ಟಂಕಿಸಲು ಆಜ್ಞಾಪಿಸಿದವುಗಳು ಒಂದೇ ಆಕೃತಿ ಹೊಂದಿವೆ. ಈ ನಾಣ್ಯ ಭಾರತಾದ್ಯಂತ ಚಲಾವಣೆಯಲ್ಲಿದೆ. ಈಗಾಗಲೆ ಹೇಳಿದಂತೆ ಪ್ರತಿ ಪರ್ದಾಓನ ಬೆಲೆ ಮುನ್ನೂರ ಅರವತ್ತು ರೆಯ್ಸ್.

ಇವೆಲ್ಲ ಸಂಗತಿಗಳು (ಉತ್ಸವಗಳು) ಕಳೆದ ಮೇಲೆ ರಾಜ ಹೊಸ ನಗರಕ್ಕೆ ಹೋದ. ನಾನೀಗಾಗಲೆ ಅದರ ಬಗೆಗೆ ಹೇಳಿರುವಂತೆ ಅದು ಅವನಿಗೆ ಬಹಳ ಇಷ್ಟ. ಏಕೆಂದರೆ, ನಾನೀಗಾಗಲೆ ಹೇಳಿರುವಂತೆ ಅದನ್ನು ನಿರ್ಮಿಸಿ ಜನವಸತಿ ಮಾಡಿಸಿದವನು ಅವನೇ. ರಾಜ ಎರಡು ವರ್ಷಗಳಲ್ಲಿ ಈ ನಗರ ಕಟ್ಟಿದ. ರಾಜನನ್ನು ನಾಗರಿಕರು ಒಳ್ಳೆಯ ಉತ್ಸವಗಳೊಂದಿಗೆ ಬರಮಾಡಿಕೊಂಡರು. ಬೀದಿಗಳಲ್ಲಿ ಬೆಲೆ ಬಾಳುವ ಬಟ್ಟೆಗಳನ್ನು ನೇತು ಬಿಡಲಾಗಿತ್ತು. ಕಟ್ಟಲಾಗಿದ್ದ ಅನೇಕ ವಿಜಯೋತ್ಸವ ಕಮಾನುಗಳ ಕೆಳಗೆ ರಾಜ ನಡೆದ. ಈ ನಗರದಲ್ಲಿ ರಾಜ ತನ್ನ ಕಾವಲು ಪಡೆಯ ಇನ್ನೊಂದು ಪರಿಶೀಲನ–ಪ್ರದರ್ಶನ ಏರ್ಪಡಿಸಿದ ಮತ್ತು ಅದು ವರ್ಷಾರಂಭವಾದು

ದರಿಂದ ಅವನು ಎಲ್ಲರಿಗೂ ಸಂಬಳ ವಿತರಿಸಿದ. ವರ್ಷಕ್ಕೊಮ್ಮೆ ಸಂಬಳ ಕೊಡುವುದು ಅವರ ರೂಢಿ. ಅವನ ಮನೆಯ ಅಧಿಕಾರಿಗಳಿಂದ ವೀಕ್ಷಣೆ ನಡೆದು ಅವರು ಪ್ರತಿಯೊಬ್ಬನ ಹೆಸರು ಮತ್ತು ಅವನ ಮುಖ ಇಲ್ಲವೆ ದೇಹದ ಮೇಲೆ ಇರುವ ಕಲೆಗಳನ್ನು ಬರೆದುಕೊಳ್ಳುತ್ತಿದ್ದರು. ಒಂದು ಸಾವಿರ ಪರ್ದಾಓ ಸಂಬಳವಿರುವ ರಕ್ಷಕ ಪಡೆಯುವರು ಇದ್ದಾರೆ. ಕೆಲವರಿಗೆ ಎಂಟುನೂರು, ಆರುನೂರು, ಸ್ವಲ್ಪ ಹೆಚ್ಚು ಇಲ್ಲವೆ ಕಮ್ಮಿ. ವ್ಯತ್ಯಾಸವಿದೆ ಹಾಗೂ ವ್ಯಕ್ತಿಗಳಲ್ಲೂ ವ್ಯತ್ಯಾಸವಿದೆ. ಅವರಲ್ಲಿ ಉನ್ನತ ದರ್ಜೆಯು ಕೆಲವರಿಗೆ ಎರಡು ಮೂರು ಕುದುರೆಗಳಿವೆ ಮತ್ತು ಮಿಕ್ಕವರಿಗೆ ಒಂದಕ್ಕಿಂತ ಹೆಚ್ಚಿಲ್ಲ. ಈ ಸೈನಿಕರಿಗೆ ತಮ್ಮ ದಳಪತಿ ಇದ್ದು ಪ್ರತಿಯೊಬ್ಬ ದಳಪತಿ ಕ್ರಮ ಹಾಗೂ ಪದ್ಧತಿಯಂತೆ ತನ್ನ ರಕ್ಷಕದಳದೊಂದಿಗೆ ಅರಮನೆಗೆ ಕಾವಲಾಗಿ ನಿಲ್ಲಲು ಹೋಗುವನು. ರಾಜ ತನ್ನ ಕಾವಲುಪಡೆಯಲ್ಲಿ ಐನೂರು ಅಶ್ವಾಳುಗಳನ್ನು ಹೊಂದಿದ್ದಾನೆ ಮತ್ತು ಇವರು ತಮ್ಮ ಆಯುಧಗಳೊಂದಿಗೆ ಅರಮನೆಯ ಹೊರಗೆ ಪಹರೆ ಮಾಡುತ್ತಾರೆ. ಒಳಗಡೆ ಎರಡು ಪಹರೆಗಳಿರುತ್ತವೆ ಮತ್ತು ಖಡ್ಗ ಗುರಾಣಿ ಹಿಡಿದ ಜನರು ಇರುತ್ತಾರೆ.

ನಾನು ಈಗಾಗಲೆ ಹೇಳಿರುವಂತೆ ರಾಜ ಈ ಹೊಸ ನಗರದಲ್ಲಿದ್ದು ಕ್ರಿಸ್ಟೊವಾಓ ದ ಫಿಗ್ವೆರೆಡೊ ಅವನನ್ನು ದಯವಿಟ್ಟು ಬಿಸ್ನಗ ನಗರದ ಅರಮನೆಯನ್ನು ತೋರಿಸಲು ಅಪ್ಪಣೆ ನೀಡುವಂತೆ ಕೇಳಿಕೊಂಡ. ಏಕೆಂದರೆ, ತನ್ನೊಂದಿಗೆ ಅನೇಕ ಪೋರ್ತುಗೀಜರು ಬಂದಿದ್ದು ಅವರು ಹಿಂದೆಂದೂ ಬಿಸ್ನಗ ನೋಡಿರದಿದ್ದುದರಿಂದ ದೇವರು ಅವರನ್ನು ತಮ್ಮ ನಾಡಿಗೆ ತಿರುಗಿ ಒಯ್ದಾಗ ಹೇಳಲು ಏನಾದರೂ ಇರಲೆಂಬ ಉದ್ದೇಶದಿಂದ ಅವರು ಅದನ್ನು ನೋಡಲು ಸಂಭ್ರಮಿಸುತ್ತಿದ್ದಾರೆ ಎಂದೂ ಅರಿಕೆ ಮಾಡಿಕೊಂಡ. ರಾಜ ಕೂಡಲೆ ತನ್ನ ವಾಸಸ್ಥಾನಗಳಲ್ಲಿ ಕೆಲವನ್ನು ಅವರಿಗೆ ತೋರಿಸುವಂತೆ ಆಜ್ಞೆ ಮಾಡಿದ. ಏಕೆಂದರೆ, ಅವನ ಪತ್ನಿಯರ ವಾಸಸ್ಥಾನಗಳನ್ನು ಯಾರೂ ನೋಡುವಂತಿಲ್ಲ. ಬಿಸ್ನಗ ನಗರವನ್ನು ನಾವು ತಲುಪಿದ ಕೂಡಲೆ ಗಂದರಾಜೊ ಎಂಬ ಹೆಸರುಳ್ಳ ಮತ್ತು ಸಾಲ್ವಟಿನಿಕ್[58]ನ ಸಹೋದರನಾದ ಆ ನಗರದ ಮಂಡಲಾಧಿಪತಿ ಅರಮನೆಯನ್ನು ನಮಗೆ ತೋರಿಸಿದ.

ನಾನು ಹೇಳಿರುವಂತೆ ರಾಜನ ಪತ್ನಿಯರ ಸೇವೆಯಲ್ಲಿರುವ ಸ್ತ್ರೀಯರು ಉತ್ಸವಕ್ಕೆ ಬರುವಾಗ ಹೊರಗೆ ಹೋಗಲು ಬಳಸುವ ದ್ವಾರವನ್ನು ಪ್ರವೇಶಿಸಿದರೆ ಅದರ ಎದುರಿಗೆ ಅಂತಹದೆ ಇನ್ನೊಂದಿದೆ. ಇಲ್ಲಿ ಅವರು ನಮಗೆ ನಿಲ್ಲಲು ಹೇಳಿದರು ಮತ್ತು ನಾವು ಎಷ್ಟು ಜನರಿರುವೆವೆಂದು ಎಣಿಸಿದರು ಮತ್ತು ಎಣಿಸುತ್ತಿದ್ದಂತೆಯೆ ನಯವಾಗಿ ಗಿಲಾವು ಮಾಡಿದ ಮತ್ತು ಸುತ್ತಲೂ ಬಲು ಬಿಳಿಯಾದ ಗೋಡೆಗಳುಳ್ಳ[59] ಒಂದು ಸಣ್ಣ ಅಂಗಳದೊಳಗೆ ಬಿಟ್ಟರು. ಈ ಅಂಗಳದ ಕೊನೆಗೆ ನಾವು ಪ್ರವೇಶಿಸಿದ ದ್ವಾರದ ಎದುರಿಗೆ ಅದಕ್ಕೆ ಅಂಟಿಕೊಂಡು ಎಡಕ್ಕೆ ಇನ್ನೊಂದಿದೆ ಮತ್ತು ಮುಚ್ಚಿದ

ಇನ್ನೂ ಒಂದಿದೆ. ಎದುರಿಗಿರುವ ದ್ವಾರ ರಾಜನ ವಾಸಸ್ಥಾನದ್ದು. ಈ ದ್ವಾರದ ಪ್ರವೇಶದಲ್ಲಿ ಹೊರಗಡೆ ಸಜೀವಾಕೃತಿಯಂತೆ ಬಣ್ಣಿಸಿದ ಮತ್ತು ಆ ರೀತಿಯಲ್ಲಿ ಚಿತ್ರಿಸಿದ ಎರಡು ಆಕೃತಿಗಳಿವೆ. ಅವಾವುವೆಂದರೆ, ಬಲಬದಿಗಿರುವುದು ಈ ರಾಜನ ತಂದೆಯುದು ಮತ್ತು ಎಡಬದಿಯುದು ಈ ರಾಜನದು. ತಂದೆ ಕಪ್ಪು ಮತ್ತು ಒಳ್ಳೆಯ ರೂಪ ಮತ್ತು ಮಗನಿಗಿಂತ ದೃಢಕಾಯನು ಇರುವನು. ಅವರು ತಮ್ಮ ಎಲ್ಲ ಉಡಿಗೆ ತೊಡಿಗೆ ಮತ್ತು ಅವರು ಉಡುವ ಅಥವಾ ಜೀವಂತವಿರುವಾಗ ಉಡುತ್ತಿದ್ದಂತಹ ಬಟ್ಟೆ ಬರೆ ಧರಿಸಿ ನಿಂತಿರುವರು. ಆಮೇಲೆ, ದ್ವಾರದೊಳಗೆ ಪ್ರವೇಶಿಸಲಿಚ್ಛಿಸಿದ ನಮ್ಮನ್ನು ಪುನಃ ಎಣಿಸಿದರು ಮತ್ತು ಅವರು ನಮ್ಮನ್ನು ಎಣಿಸುವುದು ಮುಗಿದ ನಂತರ ನಾವು ಅದರಲ್ಲೇನಿತ್ತೆಂದು ನಾನೀಗ ಬಣ್ಣಿಸಲಿರುವ ಚಿಕ್ಕ ಮನೆಯನ್ನು ಪ್ರವೇಶಿಸಿದೆವು.

ನೀವು ಒಳಗೆ ಬಂದ ಕೂಡಲೆ ಎಡಬದಿಗೆ ಒಂದರ ಮೇಲೊಂದರಂತೆ ಎರಡು ಕೋಣೆಗಳಿವೆ. ಅವು ಹೀಗಿವೆ : ಕೆಳಗಿನದು ನೆಲಕ್ಕಿಂತ ಕೆಳಗೆ ಇದ್ದು ಅದಕ್ಕೆರಡು ಬಂಗಾರದ ಗಿಲೀಟು ಮಾಡಿದ ತಾಮ್ರ ಹೊದಿಸಿದ ಚಿಕ್ಕ ಪಾವಟಿಗೆಗಳಿವೆ. ಮತ್ತು ಅಲ್ಲಿಂದ ಮೇಲಿನವರೆಗೆ ಪೂರ್ತಿ ಬಂಗಾರದ ಪದರು ಕೂಡಿಸಲಾಗಿದೆ (ನಾನು ಹೇಳುತ್ತಿರುವುದು ಬಂಗಾರದ ಗಿಲೀಟು ಕೊಟ್ಟಿದೆ ಎಂದಲ್ಲ, ಒಳಗಡೆ ಬಂಗಾರದ ಪದರು ಕೂಡಿಸಲಾಗಿದೆ ಎಂದು) ಮತ್ತು ಹೊರಗಡೆ ಅದು ಗುಮ್ಮಟಾಕಾರದ್ದಿದೆ. ಅದಕ್ಕೆ ನಾಲ್ಕು ಬದಿಯುಳ್ಳ ಬಿದಿರು ಕೆಲಸದಿಂದ[60] ಕಟ್ಟಲಾದ ದ್ವಾರ ಮಂಟಪವಿದೆ. ಅದರ ಮೇಲೆ ಮಾಣಿಕ್ಯ, ವಜ್ರ, ಇತರ ಎಲ್ಲ ಬೆಲೆಯುಳ್ಳ ಹರಳುಗಳು ಮತ್ತು ಮುತ್ತುಗಳ ಕೆಲಸವಿದೆ. ದ್ವಾರಮಂಟಪದ ಮೇಲೆ ಎರಡು ಸುವರ್ಣ ಲೋಲಕಗಳಿವೆ. ಎಲ್ಲ ಬೆಲೆಯುಳ್ಳ ಹರಳುಗಳ ಕೆಲಸ ಹೃದಯಾಕಾರದ್ದಿದೆ. ಒಂದರೊಳಗೊಂದು ಹೆಣೆದ ದಪ್ಪ ಸಣ್ಣ ಮುತ್ತಿನ ಕೆಲಸ ಮಾಡಿದ ಹಗ್ಗವಿದೆ. ಗುಮ್ಮಟದ ಮೇಲೆ ಅದರದೇ ಲೋಲಕಗಳಿವೆ. ಈ ಕೋಣೆಯಲ್ಲಿ ಒಂದು ಮಂಚವಿದೆ ಅದರ ಕಾಲುಗಳು ದ್ವಾರ ಮಂಟಪದಂತೆಯೆ ಇವೆ. ಅಡ್ಡಪಟ್ಟಿಗಳನ್ನು ಬಂಗಾರದಿಂದ ಹೊದಿಸಲಾಗಿತ್ತು. ಅದರ ಮೇಲೆ ಕಪ್ಪು ಸ್ಯಾಟಿನ್ ಬಟ್ಟೆಯ ಗಾದಿಯಿತ್ತು. ಅದರ ಸುತ್ತ ಒಂದು ಗೇಣಗಲದ ಮುತ್ತಿನ ಕಂಬಿಸಾಲು ಇತ್ತು. ಅದರ ಮೇಲೆ ಎರಡು ದಿಂಬುಗಳಿದ್ದು ಬೇರೆ ಯಾವ ಹೊದಿಕೆಯೂ ಇಲ್ಲ. ಅದರ ಮೇಲಿನ ಕೋಣೆಯಲ್ಲಿ ಏನಾದರೂ ಇತ್ತೊ ಇಲ್ಲವೊ ಹೇಳಲಾರೆ, ಏಕೆಂದರೆ, ನಾನದನ್ನು ನೋಡಲಿಲ್ಲ. ಕೆಳಗೆ ಬಲಗಡೆ ಇರುವುದನ್ನು ಮಾತ್ರ ನೋಡಿದೆ. ಈ ಮನೆಯಲ್ಲಿ ಕಡೆದ ಕಲ್ಲಿನ ಕಂಬಗಳುಳ್ಳ ಕೋಣೆಯಿದೆ. ಕೋಣೆಯೆಲ್ಲ, ಕೋಣೆ ಮತ್ತು ಗೋಡೆಗಳು, ತುದಿಯಿಂದ ಅಡಿವರೆಗೆ, ದಂತದಿಂದ ಮಾಡಲ್ಪಟ್ಟಿದೆ. ಅಡ್ಡ ತೊಲೆಗಂಬಗಳ ಮೇಲ್ಭಾಗದಲ್ಲಿ ಎಲ್ಲ ದಂತದ ಗುಲಾಬಿ ಮತ್ತು ಇತರ ಹೂಗಳಿವೆ. ಎಲ್ಲವನ್ನೂ ಎಷ್ಟು ಚನ್ನಾಗಿ ಮಾಡ

ಲಾಗಿದೆಯೆಂದರೆ ಅದಕ್ಕಿಂತ ಉತ್ತಮವಾದುದು ಇರಲು ಸಾಧ್ಯವಿಲ್ಲ. ಅದು ಎಷ್ಟೊಂದು ಶ್ರೀಮಂತವೂ ಸುಂದರವೂ ಆಗಿದೆಯೆಂದರೆ ನಿಮಗೆ ಇಂಥ ಇನ್ನೊಂದು ಎಲ್ಲೂ ದೊರೆಯದು. ಇದೇ ಮಗ್ಗಲಲ್ಲಿ ಇಲ್ಲಿಗೆ ಬಂದ ಪೋರ್ತುಗೀಜರವರೆಗೆ ಕೂಡ ಎಲ್ಲ ಜನರ ಜೀವನ ವಿಧಾನಗಳನ್ನೆಲ್ಲ ಬಣ್ಣಗಳಲ್ಲಿ ಚಿತ್ರಿಸಲಾಗಿದೆ. ಅದರಿಂದ, ಪ್ರತಿಯೊಬ್ಬನು, ಕುರುಡರು ಮತ್ತು ಭಿಕ್ಷುಕರವರೆಗೂ, ತನ್ನ ದೇಶದಲ್ಲಿ ಹೇಗೆ ಜೀವನ ನಡೆಸುತ್ತಾನೆಂದು ರಾಜನ ಪತ್ನಿಯರು ಅರಿಯಬಹುದು. ಈ ಮನೆಯಲ್ಲಿ ಎರಡು ಬಂಗಾರದಿಂದ ಹೊದಿಸಲಾದ ಸಿಂಹಾಸನಗಳು ಮತ್ತು ಪರದೆಗಳುಳ್ಳ ಬೆಳ್ಳಿಯ ಮಂಚ ಇವೆ. 'ಇಲ್ಲಿ ನಾನು ಹಸಿರು ಬೆಣಚುಕಲ್ಲಿನ ಹಾಸನ್ನೊಂದು ಕಂಡೆ. ಅದನ್ನು ಈ ಮನೆಯಲ್ಲಿ ಮಹತ್ವದ ವಸ್ತುವೆಂದು ಭಾವಿಸಲಾಗುತ್ತದೆ. ಈ ಬೆಣಚುಕಲ್ಲು ಇದ್ದ ಹತ್ತಿರದಲ್ಲಿಯೆ, ಅಂದರೆ ಅರಮನೆಗೆ ಪ್ರವೇಶವಿರುವ ಕೆಲವು ಕಮಾನುಗಳ ಕೆಳಗೆ ಕೆಲವು ಚಿಲಕಗಳಿಂದ ಮುಚ್ಚಲಾದ ಒಂದು ಚಿಕ್ಕ ಬಾಗಿಲು ಇದೆ. ಅದರೊಳಗೆ ಹಿಂದಿನ ರಾಜರಲ್ಲೊಬ್ಬನ ನಿಧಿ ಇದೆಯೆಂದು ನಮಗೆ ಹೇಳಿದರು.

ಈ ಮನೆಯನ್ನು ಬಿಟ್ಟಕೂಡಲೆ ನಾವು ಪ್ರಾಣಿ ಕಾಳಗಗಳ ಕಣದಷ್ಟು ದೊಡ್ಡ ಅಂಗಳವನ್ನು ಪ್ರವೇಶಿಸಿದೆವು. ಅದು ಚನ್ನಾಗಿ ಗಿಲಾಯ ಮಾಡಲಾಗಿದ್ದು ಅದರ ಮಧ್ಯದ ಸುಮಾರಿಗೆ ಕೆಲವು ಕಟ್ಟಿಗೆಯ ಕಂಬಗಳ ಜೊತೆಗೆ ಪೂರ್ತಿ ತಾಮ್ರದ ಗಿಲೀಟಿನಿಂದ ಹೊದಿಸಿದ ತೊಲೆ ಮೇಲ್ಗಡೆ ಇದೆ. ಮಧ್ಯದಲ್ಲಿ ಒಂದರೊಳಗೊಂದು ಜೋಡಿಸಿದ ಕೊಂಡಿಗಳುಳ್ಳ ಬೆಳ್ಳಿಯ ನಾಲ್ಕು ಸರಪಣಿಗಳು ಇವೆ. ಅವು ರಾಜನ ಪತ್ನಿಯರಿಗೆ ಜೋಕಾಲಿಯಾಗಿ ಬಳಸಲ್ಪಡುತ್ತವೆ. ಈ ಅಂಗಳದ ಪ್ರವೇಶಕ್ಕೆ ಬಲ ಬದಿಗೆ ನಾವು ನಾಲ್ಕೈದು ಸೋಪಟಿಗೆ ಏರಿ ನಾನೀಗಾಗಲೆ ಹೇಳಿರುವಂತೆ ಕಟ್ಟಲಾದ ಕೆಲವು ಸುಂದರ ಮನೆಗಳನ್ನು ಪ್ರವೇಶಿಸಿದೆವು. ಏಕೆಂದರೆ, ಮೇಲೆ ಬೇರೆ ಮನೆಗಳಿರಬಹುದಾದರೂ ಅವರ ಮನೆಗಳು ಚಪ್ಪಟೆ ಮಾಳಿಗೆಗಳುಳ್ಳ ಒಂದೇ ಅಂತಸ್ತಿನವು. ಯೋಜನೆ ಚನ್ನಾಗಿದ್ದು ಅವುಗಳು ಸೋಪಾನ ಗ್ರಹಶ್ರೇಣಿಗಳಂತಿವೆ. ಅಲ್ಲೊಂದು ಅನೇಕ ಕಂಬಗಳ ಮೇಲೆ ಕಟ್ಟಿದ ಕಟ್ಟಡವಿದೆ. ಅವು ಕಲ್ಲುಗೆಲಸದವನಾಗಿದ್ದು ಮತ್ತು ಚಾವಣಿಯ ಎಲ್ಲ ಕೆಲಸವೂ ಹಾಗೆಯೆ ಇದ್ದು ಮಿಕ್ಕದ್ದು ಕಟ್ಟಿಗೆಯದಿದೆ. ಎಲ್ಲ ಕಂಬಗಳು (ಬೇರೆ ಎಲ್ಲ ಕೆಲಸದೊಂದಿಗೆ)ಬಂಗಾರದಿಂದ ಹೊದಿಸಲಾಗಿವೆಯೊ ಎಂಬಂತೆ ಗಿಲೀಟು ಮಾಡಲಾಗಿವೆ.

ಆಮೇಲೆ ಈ ಕಟ್ಟಡದ ಪ್ರವೇಶ ದ್ವಾರದಲ್ಲಿ ಮಧ್ಯಪಟಾಂಗಣದ ನಡುವೆ ನಾಲ್ಕು ಕಂಬಗಳ ಮೇಲೆ ಕಲ್ಲುಗೆಲಸದಲ್ಲಿ ಜೋಡಿಸಲಾದ ಇತರ ಚಿಕ್ಕ ಆಕೃತಿಗಳಲ್ಲದೆ ಅನೇಕ ನರ್ತಕಿಯರ ಆಕೃತಿಗಳಿಂದ ತುಂಬಿದ ವಿತಾನ ನಿಂತಿದೆ. ಇದೂ ಕೂಡ ಪೂರ್ತಿ ಬಂಗಾರದ ಗಿಲೀಟು ಮಾಡಲಾಗಿದೆ. ಮತ್ತು ಶಿಲ್ಪಗಳ ಹೊರಗೆ ಚಾಚಿರುವ ಎಲೆಗಳ ಕೆಳಬದಿಯ ಮೇಲೆ ಸ್ವಲ್ಪ ಕೆಂಪು ಬಣ್ಣವಿದೆ. ಈ ಕಟ್ಟಡವನ್ನು ಅವರು

ಬಳಸುವುದಿಲ್ಲವೆಂಬುದನ್ನು ನೀವು ತಿಳಿದಿರಬೇಕು. ಏಕೆಂದರೆ ಇದು ಅವರ ದೇವತೆಗೆ ಮತ್ತು ದೇವಾಲಯಕ್ಕೆ ಸೇರಿದ್ದು. ಇದರ ಕೊನೆಗೆ ಬಾಗಿಲಿರುವಲ್ಲಿ ವಿಗ್ರಹವಿದೆ. ಈ ದೇವತೆಯು ಉತ್ಸವ ಆಚರಿಸುವಾಗಲೆಲ್ಲ ಅದನ್ನು ಸುವರ್ಣ ಸಿಂಹಾಸನದ ಮೇಲೆ ಹೊತ್ತೊಯ್ದು ಆ ಉದ್ದೇಶಕ್ಕಾಗಿಯೆ ಮಾಡಿದ ವಿತಾನದ ಕೆಳಗೆ ಇಡುತ್ತಾರೆ. ಆಮೇಲೆ ಅಲ್ಲಿಗೆ ಬ್ರಾಹ್ಮಣರು ತಮ್ಮ ಆಚರಣೆಗಳನ್ನು ಜರುಗಿಸಲು ಮತ್ತು ನರ್ತಕಿಯರು ನರ್ತನಗೈಯಲು ಬರುತ್ತಾರೆ.

ಈ ಕಟ್ಟಡದಿಂದ ಕೆಳಗಿಳಿದು ನಾವು ಅಂಗಳದ ಎಡಪಕ್ಕದಲ್ಲಿ ಸಾಗಿದೆವು ಮತ್ತು ಅದರುದ್ದಕ್ಕೂ ವಿಸ್ತರಿಸಿರುವ ಮೊಗಸಾಲೆಯನ್ನು ಪ್ರವೇಶಿಸಿದೆವು. ಅದರಲ್ಲಿ ಕೆಲವು ವಸ್ತುಗಳನ್ನು ನೋಡಿದೆವು. ಮೊಗಸಾಲೆ ಪ್ರವೇಶಿಸುತ್ತಲೆ ಬೆಳ್ಳಿಯ ಸರಪಳಿಗಳಿಂದ ತೂಗುಬಿಟ್ಟ ಮಂಚವಿತ್ತು. ಮಂಚಕ್ಕೆ ಬಂಗಾರದ ಗಟ್ಟಿಗಳಿಂದ ಮಾಡಿದ ಕಾಲುಗಳಿದ್ದವು. ಅವುಗಳನ್ನು ಎಷ್ಟು ಚೆನ್ನಾಗಿ ಮಾಡಲಾಗಿದೆಯೆಂದರೆ ಅವುಗಳನ್ನು ಉತ್ತಮಪಡಿಸಲು ಸಾಧ್ಯವಿಲ್ಲ. ಮತ್ತು ಮಂಚದ ಅಡ್ಡಪಟ್ಟಿಗಳು ಬಂಗಾರದಿಂದ ಹೊದಿಸಲಾಗಿವೆ. ಈ ಮಂಚದ ಮುಂದಿರುವ ಕೋಣೆಯಲ್ಲಿ ಬಂಗಾರದ ಸರಪಳಿಗಳಿಂದ ತೂಗುಬಿಟ್ಟ ಇನ್ನೊಂದು ಮಂಚವಿದೆ ಈ ಮಂಚಕ್ಕೆ ಬೆಲೆಯುಳ್ಳ ಹರಳುಗಳನ್ನು ಅಧಿಕವಾಗಿ ಜೋಡಿಸಲಾದ ಬಂಗಾರದ ಗಟ್ಟಿಗಳಿಂದ ಮಾಡಲಾದ ಕಾಲುಗಳಿವೆ. ಮಂಚದ ಅಡ್ಡಪಟ್ಟಿಗಳನ್ನು ಬಂಗಾರದಿಂದ ಹೊದಿಸಲಾಗಿದೆ. ಈ ಕೋಣೆಯ ಮೇಲೆ ಇನ್ನೊಂದು ಚಿಕ್ಕ ಕೋಣೆಯತ್ತು. ಅದಕ್ಕೆ ಬಂಗಾರದ ಗಿಲೀಟು ಮಾಡಲಾಗಿದೆ ಮತ್ತು ಬಣ್ಣ ಹಚ್ಚಲಾಗಿದೆ ಎನ್ನುವುದನ್ನು ಬಿಟ್ಟರೆ ಅದರಲ್ಲಿ ಏನೂ ಇಲ್ಲ. ಈ ಕೋಣೆ ದಾಟಿದರೆ ಅದೇ ಮೊಗಸಾಲೆಗುಂಟ ಮುಂದೆ ಈ ರಾಜ ಕಟ್ಟಲು ಆಜ್ಞಾಪಿಸಿದ ಕೋಣೆಯಿತ್ತು. ಹೊರಗಡೆ ಪ್ರಮಿಳೆಯರಂತೆ ಬಿಲ್ಲು ಬಾಣ ಹಿಡಿದ ಸ್ತ್ರೀಯರ ಆಕೃತಿಗಳಿವೆ. ಅವರು ಆ ಕೋಣೆಗೆ ಬಣ್ಣ ಹಚ್ಚಲಾರಂಭಿಸಿದ್ದರು ಮತ್ತು ಮಿಕ್ಕವುಗಳಿಗಿಂತ ಅದು ಉತ್ಕೃಷ್ಟವಾಗಬೇಕಿತ್ತೆಂದು ಮತ್ತು ಕೆಳಗಿನ ನೆಲ ಹಾಗೂ ಉಳಿದೆಲ್ಲ ಪೂರ್ತಿಯಾಗಿ ಬಂಗಾರದ ತಗಡಿನಿಂದ ಆಚ್ಛಾದಿತವಾಗಬೇಕಿತ್ತೆಂದು ಅವರು ನಮಗೆ ಹೇಳಿದರು. ಈ ಮೊಗಸಾಲೆ ದಾಟಿ ಅದಕ್ಕಿಂತ ಎತ್ತರವಿರುವ ಇನ್ನೊಂದನ್ನು ಏರಿ ನಾವು ಒಂದು ಕೊನೆಯಲ್ಲಿ ಮೂರು ಬಂಗಾರದ ಕಡಾಯಿಗಳನ್ನು ಕಂಡೆವು. ಅವುಗಳು ಎಷ್ಟು ದೊಡ್ಡವಿದ್ದವೆಂದರೆ ಪ್ರತಿಯೊಂದರಲ್ಲಿ ಅರ್ಧ ಆಕಳು ಬೇಯಿಸಬಹುದಿತ್ತು. ಅವುಗಳೊಂದಿಗೆ ಬಹಳ ದೊಡ್ಡ ಬೆಳ್ಳಿಯ ಕಡಾಯಿಗಳು ಮತ್ತು ಕೆಲವು ಚಿಕ್ಕ ಹಾಗೂ ಕೆಲವು ದೊಡ್ಡ ಬಂಗಾರದ ಪಾತ್ರೆಗಳಿದ್ದವು. ಅಲ್ಲಿಂದ ಒಂದು ಚಿಕ್ಕ ಮೆಟ್ಟಿಲುಸಾಲು ಹತ್ತಿ ಹೋದೆವು ಮತ್ತು ಒಂದು ಚಿಕ್ಕ ಬಾಗಿಲಿನ ಮೂಲಕ ಈ ರೀತಿಯಾಗಿರುವ ಕಟ್ಟಡ ಪ್ರವೇಶಿಸಿದೆವು. ರಾಜ ತನ್ನ ಸ್ತ್ರೀಯರನ್ನು ನೃತ್ಯ ಕಲಿಯಲು ಕಳಿಸುವುದು ಈ

ಭವನಕ್ಕೇ. ಅದು ಉದ್ದವಾದ ಬಹಳ ಅಗಲವಲ್ಲದ ಕಂಬಗಳ ಮೇಲೆ ನಿಂತ ಪೂರ್ತಿ ಕಲ್ಲಿನ ಕಟ್ಟಡ. ಕಂಬಗಳು ಗೋಡೆಯಿಂದ ಒಂದು ಪೂರ್ತಿ ತೋಳಿನಷ್ಟು ದೂರ ಇವೆ. ಒಂದರಿಂದ ಇನ್ನೊಂದರ ಮಧ್ಯೆ ಒಂದೂವರೆ ತೋಳು, ಬಹುಶಃ ಇನ್ನೂ ಸ್ವಲ್ಪ ಹೆಚ್ಚು, ಅಂತರವಿದೆ. ಈ ಕಂಬಗಳು ಕಟ್ಟಡದ ಸುತ್ತ ಆ ರೀತಿಯಲ್ಲಿ ನಿಲ್ಲುತ್ತವೆ. ಅವು ಎಲ್ಲ ಗಿಲೀಟು ಮಾಡಿದ[61] ಇತರ ಪೊಳ್ಳುಗಳೊಂದಿಗೆ(?) ಮಾಡಿದ ಅರೆಕಂಬಗಳು(?)[62] ಆಧಾರ (ಅಥವಾ ನುಣುಪಾದ)ಗಳಲ್ಲಿ ಮೇಲ್ಗಡೆ[63] ಆನೆಗಳು ಮತ್ತು ಇತರ ಆಕಾರಗಳ ಬಹಳಷ್ಟು ಪ್ರಾಣಿಗಳಿವೆ. ಒಳಭಾಗ ಕಾಣುವಂತೆ ಅದು ಅನಾವೃತವಾಗಿದೆ ಮತ್ತು ಈ ಪ್ರಾಣಿಗಳ ಒಳಬದಿಯ ಮೇಲೆ ಇತರ ಬಿಂಬಗಳಿವೆ ಪ್ರತಿಯೊಂದನ್ನು ಅದರ ಸ್ವರೂಪಕ್ಕನುಗುಣವಾಗಿ ಇಡಲಾಗಿದೆ. ಬೆನ್ನಿಗೆ ಬೆನ್ನು ಹತ್ತಿದ ಮಾನಾವಕೃತಿಗಳು ಮತ್ತು ಬೇರೆ ಬೇರೆ ವಿಧದ ಪ್ರಾಣಿಗಳವೂ ಇವೆ. ಪ್ರತಿಯೊಂದಕ್ಕೂ ಪುಟೀಪಿನಂತಹ ಕಂಬದಿಂದ ಕಂಬದವರೆಗಿರುವ ತೊಲೆಯಿದೆ. ಮತ್ತು ಕಂಬದಿಂದ ಕಂಬಕ್ಕೆ ಇಂತಹ ಅನೇಕ ಪುಟೀಪುಗಳಿವೆ. ಗಿಲೀಟು ಮಾಡ ಲಾದ ಹಾಗೂ ಒಂದು ಮೊಳ ಆಕಾರದ ಮುದುಕರ ಬಿಂಬಗಳೂ ಇವೆ. ಪುಟೀಪು ಗಳಲ್ಲಿ ಪ್ರತಿಯೊಂದಕ್ಕೂ ಈ ರೀತಿಯಲ್ಲಿ ಇಡಲಾದ ಒಂದು ಇದೆ. ಈ ಬಿಂಬಗಳು ಕಟ್ಟಡದ ತುಂಬ ಇವೆ. ಕಂಬಗಳ ಮೇಲೆ ಇತರ ಚಿಕ್ಕ ಬಿಂಬಗಳಿವೆ. ಇನ್ನೂ ಕೆಲವು ಅವಕ್ಕಿಂತ ಚಿಕ್ಕವು. ಹೀಗೆಯೆ ಮತ್ತೂ ಕೆಲವು ಬಿಂಬಗಳು. ಅವು ಯಾವ ರೀತಿ ಇದ್ದವೆಂದರೆ ಈ ಕೆಲಸ ಗುಮ್ಮಟ ವಿನ್ಯಾಸಗಳೊಂದಿಗೆ ಈ ಕಂಬಗಳ ಮೇಲೆ, ಕಂಬದಿಂದ ಕಂಬಕ್ಕೆ, ಆಕಾರದಲ್ಲಿ ಕ್ರಮೇಣ ಕಡಿಮೆಗೊಳ್ಳುತ್ತ ಹೋದುದನ್ನು ಕಂಡೆ. ಪ್ರತಿಸಲ ಗೇಣಿನಷ್ಟು ಚಿಕ್ಕದಾಗುತ್ತ ಹೋಗಿ ಕೊನೆಗೆ ಇಲ್ಲದಂತಾಯಿತು. ಹಾಗೆ ಅದು ಕ್ರಮೇಣ ಚಿಕ್ಕದಾಗುತ್ತ ಹೋಗಿ ಕೊನಗೆ ಎಲ್ಲ ಶಿಲ್ಪ ಕೆಲಸದಲ್ಲಿ ಬರಿ ಗುಮ್ಮಟ ಉಳಿಯಿತು. ಇದಾದರೊ ನಾನು ನೋಡಿದುದರಲ್ಲಿ ಅತ್ಯಂತ ಸುಂದರ ವಾದುದು. ಈ ಬಿಂಬಗಳು ಮತ್ತು ಕಂಬಗಳ ನಡುವೆ ಎಲೆಗಳ ವಿನ್ಯಾಸ ಮುಂದು ವರಿದಿದೆ. ಅದೆಲ್ಲ ಗಿಲೀಟು ಮಾಡಲಾದ ಫಲಕಗಳಿಂತಿದ್ದು ಕೆಂಪು ಮತ್ತು ನೀಲಿಯಲ್ಲಿ ಎಲೆಗಳ ಬೆನ್ನುಗಳಿವೆ. ಕಂಬಗಳ ಮೇಲಿನ ಬಿಂಬಗಳು ಸಾರಂಗ ಮತ್ತು ಇತರ ಪ್ರಾಣಿಗಳವಿದ್ದು ಅವುಗಳಿಗೆ ಬಣ್ಣ ಹಚ್ಚಲಾಗಿದ್ದು ಮುಖಗಳು ಕೆಂಪಗಿವೆ. ಆದರೆ ಇತರ ಆನೆಯ ಮೇಲೆ ಕುಳಿತ ಆಕೃತಿಗಳು ಹಾಗೂ ಪುಟೀಪುಗಳ ಮೇಲಿನವೆಲ್ಲ ಚಿಕ್ಕ ಡೋಲು ಹಿಡಿದ ನರ್ತಕಿಯುವರವು.

ಈ ಫಲಕಗಳ ವಿನ್ಯಾಸಗಳು ನೃತ್ಯಗಳ ಕೊನೆಯಲ್ಲಿ ಭಂಗಿಗಳನ್ನು ಯಾವ ರೀತಿಯಲ್ಲಿ ತೋರ್ಪಡಿಸುತ್ತವೆಂದರೆ ಪ್ರತಿ ಫಲಕದ ಮೇಲೆ ನೃತ್ಯದ ಕೊನೆಗೆ ಉಚಿತ ಭಂಗಿಯಲ್ಲೊಬ್ಬ ನರ್ತಕಿಯಿದ್ದಾಳೆ. ಸ್ತ್ರೀಯರಿಗೆ ಕಲಿಸಲೋಸುಗ ಹೀಗೆ ಮಾಡಲಾಗಿದೆ. ನೃತ್ಯ ಮುಗಿದ ಮೇಲೆ ತಾವು ಯಾವ ಭಂಗಿಯಲ್ಲುಳಿಯಬೇಕೆಂಬುದನ್ನು ಮರೆತಾಗ

ಆ ನೃತ್ಯದ ಕೊನೆ ಇದ್ದ ಫಲಕವನ್ನು ನೋಡಬಹುದು. ಅದರಿಂದ ತಾವು ಏನು ಮಾಡಬೇಕೆಂಬುದನ್ನು ಅವರು ಲಕ್ಷ್ಯದಲ್ಲಿಡುತ್ತಾರೆ.

ಈ ಮನೆಯ ಕೊನೆಗೆ ಎಡಬದಿಗೆ ಬಣ್ಣ ತೊಟ್ಟ ಗೋಡೆಯಿದೆ. ಸ್ತ್ರೀಯರು ತಮ್ಮ ದೇಹ ಮತ್ತು ಕಾಲುಗಳನ್ನು ಸಡಿಲಗೊಳಿಸಲೋಸುಗ ತಮ್ಮ ಕೈಗಳೊಂದಿಗೆ ಅದಕ್ಕೆ ಅಂಟಿಕೊಳ್ಳುತ್ತಾರೆ. ಅವರ ನೃತ್ಯವನ್ನು ಲಾವಣ್ಯಗೊಳಿಸಲೋಸುಗ ಇಡಿ ದೇಹವನ್ನು ನಮ್ಯವಾಗಿರಿಸಲು ಅಲ್ಲಿ ಕಲಿಸುತ್ತಾರೆ. ಇನ್ನೊಂದು ತುದಿಗೆ ಬಲಕ್ಕೆ ರಾಜ ಅವರು ನರ್ತಿಸುವುದನ್ನು ನೋಡಲು ಕುಳಿತುಕೊಳ್ಳುವಲ್ಲಿ ಎಲ್ಲ ನೆಲಗಳು ಮತ್ತು ಗೋಡೆಗಳು ಬಂಗಾರದಿಂದ ಹೊದಿಸಲಾಗಿವೆ ಮತ್ತು ಗೋಡೆಯ ಮಧ್ಯದಲ್ಲಿ ನೃತ್ಯದ ಕೊನೆಗೆ ತಾಳುವ ಭಂಗಿಯಲ್ಲಿ ಕೈಗಳಿರುವ ಹನ್ನೆರಡು ವರ್ಷದ ಹುಡುಗಿಯ ಗಾತ್ರದ ಸ್ತ್ರೀಯ ಬಂಗಾರದ ಮೂರ್ತಿಯಿದೆ.

ಅವರು ನಮಗೆ ಇದಕ್ಕಿಂತ ಹೆಚ್ಚು ತೋರಿಸಲಿಲ್ಲ. ನಾನೀಗಾಗಲೆ ಹೇಳಿರುವ ನಪುಂಸಕರನ್ನು ಹೊರತುಪಡಿಸಿ ಸ್ತ್ರೀಯರ ವಾಸಸ್ಥಾನವನ್ನು ಯಾರೂ ನೋಡು ವಂತಿಲ್ಲ. ಇಲ್ಲಿಂದ ನಾವು ಒಳಗೆ ಹೋಗುತ್ತಿದ್ದಂತೆಯೆ ಎರಡನೆಯ ದ್ವಾರಕ್ಕೆ ಬಂದೆವು ಅಲ್ಲಿ ನಮ್ಮನ್ನು ಮತ್ತೊಮ್ಮೆ ಎಣಿಸಿದರು.

ಬಿಸ್ನಗ ನಗರದಲ್ಲಿ ನೂರು ಸಾವಿರಕ್ಕಿಂತ ಹೆಚ್ಚು ವಸತಿಗೃಹಗಳಿವೆಯೆಂದು ಹೇಳಲಾಗುತ್ತದೆ. ಅವೆಲ್ಲ ಒಂದು ಅಂತಸ್ತಿನವು ಮತ್ತು ಸಮತಟ್ಟು ಮಾಳಿಗೆಯ. ವಿದ್ದು ಪ್ರತಿಯೊಂದಕ್ಕೂ ಒಂದು ಎತ್ತರವಿಲ್ಲದ ಸುತ್ತುಗೋಡೆಯಿದೆ. ರಾಜ ವಾಸಿಸುವುದು ಹೆಚ್ಚಾಗಿ ಈ ನಗರದಲ್ಲಿಯೆ. ಉತ್ತರ ಬದಿಗೆ ಕಲ್ಲುಗುಡ್ಡಗಳಿವೆ. ಅವುಗಳ ನಡುವೆ ನದಿ ಹರಿಯುತ್ತದೆ. ಮತ್ತು ಗೋಡೆ ಅವುಗಳ ತುದಿಯುಗುಂಟ ವ್ಯಾಪಿಸಿದೆ. ಆಚೆಗೆ ನಾಗುಂಡಿಮ್ ಎಂದು ಕರೆಯಲಾಗುವ ನಗರವಿದೆ. ಅದಕೆ ಮೂರೇ ದ್ವಾರಗಳು : ಎಂದರೆ, ನದಿ ಮೂಲಕ ಒಂದು, ಅವರು ಸರಿಯಾಗಿ ಈ ದ್ವಾರದಲ್ಲಿ[64] ಹತ್ತಿ ಅದನ್ನು ನಾವೆಗಳಲ್ಲಿ ದಾಟುವರು ; ಆ ಬದಿಗೆ ಉತ್ತರಕ್ಕಿರುವ ಇನ್ನೊಂದು ಅಧಿಕ ಭದ್ರವಾದ ದ್ವಾರ ; ಮತ್ತೊಂದು ಎರಡು ಎತ್ತರವಾಗಿರುವ ಏಣುಗಳ ಮಧ್ಯೆ ವಾಯುವ್ಯಕ್ಕಿರುವ ಚಿಕ್ಕ ದ್ವಾರ, ಅದು ಎಷ್ಟು ಕೆಟ್ಟ ರಸ್ತೆಯಾಗಿದೆ ಯೆಂದರೆ ಒಮ್ಮೆ ಒಬ್ಬನೇ ಅಶ್ವಾರೋಹಿ ದಾಟಬಹುದು.

ಮತ್ತು (ಬಿಸ್ನಗದ) ವಾಯುವ್ಯಕ್ಕೆ ಬಿಸ್ನಗಕ್ಕೆ ಹೊಂದಿಕೊಂಡು ಕ್ರಿಸ್ನಾಪೊರ್[65] ಎಂಬ ಇನ್ನೊಂದು ನಗರವಿದೆ. ಅದರಲ್ಲಿ ಅವರು ಹೆಚ್ಚಾಗಿ ಪೂಜೆ ಮಾಡುವ ಅವರ ಎಲ್ಲ ದೇವಾಲಯಗಳಿವೆ ಮತ್ತು ಈ ನಗರದ ಆದಾಯವೆಲ್ಲ ಅವುಗಳಿಗೆ ಕೊಡಲಾಗಿದೆ. ಒಂದುನೂರು ಬಂಗಾರದ ಪರ್ದಾಒಗಳ ಆದಾಯವಿದೆ ಎಂದು ಹೇಳಲಾಗುತ್ತದೆ. ದೇವಾಲಯಗಳು ಉನ್ನತವಾಗಿದ್ದು ಎಲ್ಲ ಕಾಮಪ್ರೇರಕ ಭಂಗಿಗಳಲ್ಲಿರುವ ಪುರುಷ ಸ್ತ್ರೀಯರ ಅನೇಕ ಆಕೃತಿಗಳುಳ್ಳ ದೊಡ್ಡ ಕಟ್ಟಡಗಳನ್ನು ಹೊಂದಿವೆ.

ದಕ್ಷಿಣ ಬದಿಗೆ ಬಯಲಿನಲ್ಲಿರುವ ನಾಗಲಾಪುರ ಎಂಬ ಇನ್ನೊಂದು ನಗರ. ಇದರಲ್ಲಿ ಇಡಲ್‌ಸಾಒ ಬಿಸ್ನಗಕ್ಕೆ ಮುತ್ತಿಗೆ ಹಾಕಿದಾಗ ಬಿಡಾರ ಹೂಡಿದ್ದ ಮತ್ತು ಅದನ್ನು ನೆಲಸಮ ಮಾಡಿದ. ಆದರೆ, ಈಗಾಗಲೆ ಅದನ್ನು ಪುನಃ ಕಟ್ಟಲಾಗಿದೆ ಮತ್ತು ಇದು ಬಿಸ್ನಗದಿಂದ ಒಂದು ಹರವಾರಿ ದೂರ ಇದೆ.[66]

ಪೂರ್ವಕ್ಕೆ ಆರ್ದೆಗೆಮಾ[67] ಎಂಬ ಇನ್ನೊಂದು ನಗರವಿದೆ. ಅದು ಈ ರಾಜನ ಪ್ರಧಾನ ರಾಣಿಯ ಹೆಸರು. ಅದು ಹೊಸದಿದೆ ಮತ್ತು ಅವನು ಅವಳ ಪ್ರೀತ್ಯರ್ಥ ಅದನ್ನು ಕಟ್ಟಿದ.

---

1 "ನರಸಿಂಗನ ರಾಜ್ಯ" ಎಂಬುದು ಪೋರ್ತುಗೀಜರು ಮತ್ತು ಇತರರು ಬಹುತೇಕವಾಗಿ ವಿಜಯನಗರಕ್ಕೆ ಕೊಟ್ಟ ಹೆಸರು.

2 ಇಲ್ಲಿ ಆ ಪದ ಗೋವಾ ನಗರದ ತಕ್ಷಣ ಸುತ್ತಲಿರುವ ಪೋರ್ತುಗೀಜ ಭಾರತದ ಚಿಕ್ಕ ನಾಡಿಗೆ ಸೀಮಿತವಾಗಿದೆ. ಆದುದರಿಂದ, ಲಿನ್‌ಸ್ಕೋಟೆನ್ (ಕ್ರಿ.ಶ. ೧೫೮೩) ಹೀಗೆ ಬರೆದ: "ಕ್ಯಾಂಬೆಯ ತುದಿಗೆ ಭಾರತ ಆರಂಭಿಸುತ್ತದೆ. ಮತ್ತು ಡೆಕನ್ ಮತ್ತು ಕುಂಕನ್ ಭೂಮಿಗಳು." ಅಂದರೆ, ಕ್ಯಾಂಬೆಯ ಪ್ರದೇಶಗಳ ತಕ್ಷಣ ದಕ್ಷಿಣಕ್ಕೆ ಪೋರ್ತುಗೀಜ ಭಾರತದ ಭೂಪ್ರದೇಶಗಳು ಆರಂಭಿಸಿದರೆ ಗಡಿಯಲ್ಲಿದ್ದ ಇತರ ನಾಡುಗಳೆಂದರೆ ದಕ್ಖನ ಮತ್ತು ಕೊಂಕಣ.

3 ಪೋರ್ತುಗಾಲದಲ್ಲಿ.

4 ಇದು ಸ್ಪಷ್ಟವಾಗಿಯೆ ಕರಾವಳಿಯಿಂದ ವಿಜಯನಗರಕ್ಕೆ ರೂಢಿಯ ಮಾರ್ಗವಾಗಿತ್ತು. ಫಾದರ್ ಲೂಯಿಸ್ ೧೫೦೯ರಲ್ಲಿ ಕೋಚಿನ್‌ದಿಂದ ರಾಜಧಾನಿಗೆ ತನ್ನ ಪಯಣಕ್ಕೆ ಅದನ್ನು ಬಳಸಿದನು (ಮೇಲೆ, ಪು. ೧೨೩, ಮತ್ತು ಟಿಪ್ಪಣಿ).

5 ಬಹುಶಃ ಭಟ್ಕಳದ ಕರಾವಳಿಯಿಂದ ಸುಮಾರು ೧೨೦ ಮೈಲಿರುವ ಸಂಡೂರು, ಸಂಡೂರು ವಿಜಯನಗರದಿಂದ ೨೫ ಮೈಲು ದೂರವಿರುವ ಚಿಕ್ಕ ಮರಾಠಾ ಸಂಸ್ಥಾನ.

6 ಅರ್ಥಾತ್, ಪೋರ್ತುಗೀಜ ಭಾರತದ ಪೂರ್ವಕ್ಕೆ, ವಿಜಯನಗರ ಭೂಪ್ರದೇಶದ ಪಶ್ಚಿಮಕ್ಕೆ.

7 ಗುರುತಿಸಲಾಗದ್ದು. ದೊಡ್ಡ ಮರವಂತೂ ಅಲದ್ದು.

8 ಕೋರಮಂಡಲ. ಈ ಹೆಸರನ್ನು ಪೋರ್ತುಗೀಜರು ಪೂರ್ವ ತಮಿಳು ಮತ್ತು ದಕ್ಷಿಣ ತೆಲುಗ ನಾಡುಗಳಿಗೆ ಕೊಟ್ಟಿದ್ದರು. ಅದಕ್ಕೆ ಖಚಿತವಾದ ಸೀಮೆಯಿರಲಿಲ್ಲ. ಮತ್ತು ಅನೇಕ ಭಾರಿ ಕೃಷ್ಣಾ ನದಿಯಷ್ಟು ದೂರ ಉತ್ತರಕ್ಕೆ ಅಥವಾ ಒರಿಸಾದ ವರೆಗೆ ಕೂಡ ಹಬ್ಬಿತ್ತೆಂದು ಭಾವಿಸಲಾಗುತ್ತದೆ. ಚೋಳರ ನಾಡು ಎಂಬರ್ಥದ ಚೋಳಮಂಡಲದಿಂದ ಬಂದಿರುವ ಹೆಸರಿನ ಈಗ ಸಾಮಾನ್ಯವಾಗಿ ಸ್ವೀಕೃತವಾದ ವ್ಯಾಖ್ಯಾನಕ್ಕೆ ಯೂಲ್ ಮತ್ತು ಬರ್ನೆಲ್ ಅಂಟಿಕೊಳ್ಳುತ್ತಾರೆ (ಲಘು ಶಬ್ದ ಕೋಶ, ನಿರ್ದಿಷ್ಟ ಪದ, ಕೋರಮಂಡಲ್).

9 ಒರಿಸಾ.

10 ಆದಿಲ್ ಖಾನ, ಬಿಜಾಪುರದ ಸುಲ್ತಾನ. ಪೋರ್ತುಗೀಜರು ಕೆಲವೊಮ್ಮೆ ಆ ಹೆಸರನ್ನು ಇದಲ್‌ಕ್ಷ ("ಶಾಹ" ಬದಲು "ಕ್ಷ") ಎಂದು ಬರೆಯುತ್ತಾರೆ. ಹಳೆಯ ದಿನಚರಿಗಳಲ್ಲಿ, ಹಿಡಲ್‌ಖಾನ, ಆ ದೈಹನ್ ಮುಂತಾದ ಅಸಂಖ್ಯ ಕಾಗುಣಿತಗಳಿವೆ.

11 ಅಹಮದನಗರದ ಸುಲ್ತಾನ ನಿಜಾಮ-ಉಲ್-ಮುಲ್ಕ್ ಅಥವಾ ನಿಜಾಮ ಶಾಹ, ಅದೇ ರೀತಿ, ಗೋಲ್ಕೊಂಡದ ಕುತುಬ್ ಶಾಹನನ್ನು ಈ ದಿನಚರಿಗಳಲ್ಲಿ "ಕೋಟಾಮುಲುಕೊ" ಎಂದು ಕರೆಯಲಾಗಿವೆ. ಬೀರರ್‌ನ ಇಮಾದ್ ಶಾಹನನ್ನು ಡಚ್‌ರು (ಲಿನ್‌ಸ್ಕೊಟೆನ್) ಮತ್ತು ಪೋರ್ತುಗೀಜರು "ಇಮದೆಮುಲುಕೊ" ಅಥವಾ "ಮಾದ್ರೆಮುಲುಕೊ" ಎಂತಲೂ ಕರೆದಿದ್ದಾರೆ. ಬೀದರಿನ ಬರೀದ್ ಶಾಹನನ್ನು "ಮೆಲೀಕ್ ವೆರಿದೊ" ಎಂದು ಕರೆಯಲಾಗಿದೆ.

12 ಮೂಲದಲ್ಲಿ ಇದರ ಕಾಗುಣಿತ ಸಂದೇಹಾಸ್ಪದವಾಗಿದೆ. ಮೊದಲು ಅದು ಅರ್ಚ ಎಂದಿದ್ದರೆ ಮುಂದಿನ ಸಂದರ್ಭದಲ್ಲಿ ಅದು ನಿಸ್ಸಂದೇಹವಾಗಿ ದರ್ಚ ಎಂದಿದೆ, ಆ ಊರಿನ ಮೂರನೆಯ ಉಲ್ಲೇಖ ಲರ್ಚ ಎಂದಿದೆ. ಪ್ರತಿ ಸಲವೂ ಸ್ಪಷ್ಟವಾಗಿಲ್ಲ, ಮತ್ತು ಅದು ಚುಕ್ಕೆಯಿಡದ i ಆಗಿರಬಹುದು. ಅಲ್ಲದೆ, c ಬಹುಶಃ e ಆಗಿರುವ ಸಾಧ್ಯತೆಯಿದೆ, ಮತ್ತು ಹೆಸರು ಅರೆಹ ಅಥವಾ ದರೆಹ ಆಗಿರಬಹುದು. ಕೊನೆಯದನ್ನು ನಾವು ಸ್ವೀಕರಿಸಿದರೆ ನಾವು ಅದನ್ನು ಧಾರವಾಡದೊಂದಿಗೆ ಸಮೀಕರಿಸಬಹುದು ಮತ್ತು ನೂನಿಜ್‌ನ ದುರೀ ಕೂಡ ಅದೇ ಎಂದು ನಂಬಬಹುದು (ಕೆಳಗೆ, ಪು ೨೯೨).

13 ಬಹುಶಃ **Pianhas** ಅಥವಾ **Peanhas** ಕ್ಕಾಗಿ ಮೂಲದಲ್ಲಿ **Pranhas** ಬಳಸಲಾಗಿದೆ (ಕೆಳಗೆ ಪು. ೨೮೮ ನೋಡಿರಿ).

14 ಜೋಗಿಗಳು, ಹಿಂದೂ ಸನ್ಯಾಸಿಗಳು.

15 ಇದು ಬಹುಶಃ ಸೇಂಟ್ ಪೀಟರ್ಸ್‌ನಲ್ಲಿರುವ ಇಜಿಪ್ಶಿಯನ್ ಚೌಕ ಸೂಚ್ಯಾಕಾರದ ಕಂಬವನ್ನು ಸೂಚಿಸುತ್ತದೆ.

16 ಸ್ಪಷ್ಟವಾಗಿಯೆ ಗಣೇಶ ದೇವತೆ.

17 **Buvucyrois** ಈ ಶಬ್ದ ಕಟ್ಟಲಾಗುವ ಹಂಗಾಮಿ ಹೊರಕೋಟೆಗಳಿಗೆ ಭಿನ್ನವಾಗಿ ಅಗೆದುಮಾಡಿದುದನ್ನು ಸೂಚಿಸುತ್ತದೆ.

18 ದಕ್ಖನ.

19 ಇದು ನಾಗಲಾಪುರ, ಆಧುನಿಕ ಹೊಸಪೇಟೆ (ಎಪಿಗ್ರಾಫಿಯಾ ಇಂಡಿಕಾ. ೪. ೨೬೭).

20 ಈ ಕೆರೆ ಅಥವಾ ಸರೋವರವನ್ನು ನೂನಿಜ್ ವರ್ಣಿಸಿದ್ದಾನೆ(ಪುಟ ೩೬೪ ನೋಡಿರಿ).

21 ತೋಪಖಾನೆಯ ಫ್ಯಾಲ್ಕನ್ ಎಂಬ ಹೆಸರಿನ ಮೊದಲಿನ ಫಿರಂಗಿಯ ಗುಂಡು ಸಿಡಿಯುವಷ್ಟು ದೂರ.

21a ಬ್ರೆಕೊಸ್ **blites**, ಒಂದು ರುಚಿಹೀನ ಅಡಿಗೆ ತರಕಾರಿ ಆದರೆ. ಆ ಶಬ್ದ ರೂಢಿಯಲ್ಲಿಲ್ಲ ಮತ್ತು ಬ್ರಾಹ್ಮಣರು ಬಹುತೇಕ ತರಕಾರಿಗಳನ್ನು ಬಳಸುತ್ತಿದ್ದುದರಿಂದ ನಾನು ಸಾಮಾನ್ಯ ಪದವನ್ನು ಇಷ್ಟಪಟ್ಟಿರುವೆ.

21b **Macaas** ಅರ್ಥಾತ್ "ಸೇಬು ಹಣ್ಣುಗಳು".

21c ಅದನ್ನು ಸಾಮಾನ್ಯವಾಗಿ ನಾಗಲಾಪುರ ಎಂದು ಕರೆಯುತ್ತಿದ್ದರು. ಆದರೆ, ಆ ಮಹಿಳೆಯ ಹೆಸರು ಚಿನ್ನದೇವಿ ಎಂದಿತ್ತೆಂದು ನೂನಿಜ್ ಹೇಳುತ್ತಾನೆ. (ಕೆಳಗೆ, ಪು. ೩೬೨).

22 ಸ್ಪಷ್ಟವಾಗಿಯೆ "ಮಹಾ" (ಶ್ರೇಷ್ಠ) ಹಾಗು "ಶಾಹ" ಪದಗಳ ಮಿಶ್ರಣ.

23 ಮುಂದಿನ ಭಾಗ ಮೂಲದಲ್ಲಿ ಸ್ಪಷ್ಟವಾಗಿಲ್ಲ.

24 ಇವನು ಕೃಷ್ಣದೇವನ ಮಂತ್ರಿ ಸುಪ್ರಸಿದ್ಧ ಸಾಳುವ ತೆಮ್ಮರ್ಸಿ ಎಂಬ ಪದಾಂತ್ಯ ಬಹುಶಃ "ಅರಸ"ವನ್ನು ಪ್ರತಿನಿಧಿಸುತ್ತದೆ. ತೆಮೆರ್ಸಿ...ತಿಮ್ಮರಸ....ತಿಮ್ಮರಾಜ.

25 ಕೊರಿಯಾನ ಪ್ರಕಾರ ಮಂಡಲಾಧಿಪತಿ ಲೊಪೊ ಸೊಆರಿಸ್ ಕ್ರಿಸ್ಟೊವಾಓದ ಫಿಗ್ಯೆರೆಡೊನನ್ನು ೧೫೧೭ರಲ್ಲಿ ರಾಜಪ್ರತಿನಿಧಿಯಾಗಿ ವಿಜಯನಗರಕ್ಕೆ ಕುದುರೆ ಆನೆಗಳೊಂದಿಗೆ ಕಳಿಸಿಕೊಟ್ಟ (ಲೆಂಡಸ್‌ದ ಇಂಡಿಯಾ, ii. ೫೧೯-೫೧೦) ಆದರೆ, ಈ ದೃಢ ಹೇಳಿಕೆ ಎಷ್ಟು ಮಟ್ಟಿಗೆ ನಿಜವೆಂಬುದು ನಮಗೆ ತಿಳಿಯದು ಎಂದು ಸೆನ್ಹೊರ್ ಲೋಪ್ಸ್ ಎತ್ತಿ ತೋರಿಸುತ್ತಾನೆ (ತನ್ನ "ಕ್ರಾನಿಕಾ"ದ ಪೀಠಿಕೆ **ixxxii** ಟಿಪ್ಪಣಿ). ಆದರೆ ಅವನು ಗೋವಾದಲ್ಲಿದ್ದುದಂತೂ ನಿಜ ಮತ್ತು ಈ ಯುದ್ಧ ಜರುಗಿದ ಅನತಿ ಕಾಲದಲ್ಲಿಯೆ ಅವನನ್ನು ಗೋವಾದ ಭೂಖಂಡಗಳ ಪ್ರಧಾನ ಠಾಣೆದಾರನನ್ನಾಗಿ ಮಾಡಲಾಯಿತು ಮತ್ತು ಅವನ ವಾಸಸ್ಥಾನ ಮರಡೊರ್‌ನ ದೇವಾಲಯದಲ್ಲಿತ್ತು. ಅವನು ಹಲವು ಬಾರಿ ಮುಸಲ್ಮಾನರ ಕೈಯಲ್ಲಿ ಗಂಡಾಂತರದಲ್ಲಿ ಸಿಲುಕಿದ್ದ ಮತ್ತು ೧೫೩೬ರಲ್ಲಿ ಪೋರ್ತುಗೀಜರು ಮತ್ತು ಅವನು ಗೆಳೆತನ ಹೊಂದಿದ ಬೆಳಗಾಂವಿಯ ಅಸದ ಖಾನ ಮಧ್ಯೆ ಜರುಗಿದ ಯುದ್ಧಗಳಲ್ಲಿ ಉಪಸ್ಥಿತನಿದ್ದ, ಅವನು ಒಂದು ಕಾಲಕ್ಕೆ ಗೋವಾದ ಕಾರಖಾನೆಯ ಮೊಕ್ತಿಯಾರನೂ ಆಗಿದ್ದನೆಂದು ಮಿಸ್ಟರ್ ಡ್ಯಾನ್ವರ್ಸ್ (೨, ೫೦೭) ಹೇಳುತ್ತಾನೆ.

26 ಇದು ಸ್ಪಷ್ಟವಾಗಿಯೆ ರಾಯ್‌ದ ಮೆಲೊನಿಗೆ ಅನ್ವಯಿಸುತ್ತದೆ (ಮೇಲೆ ಪುಟ ೧೫೨ ನೋಡಿರಿ)ದ ಸಿಕ್ವೇರಾನನ್ನು ಉದ್ದೇಶಿಸಿದ್ದುದಾಗಿದ್ದರೆ ಅವನನ್ನು "ಮಂಡಲಾಧಿಪತಿ" ಎಂದು ಕರೆಯಲಾಗುತ್ತಿತ್ತು.

27 ಇವು ನಿಶ್ಚಿತವಾಗಿಯೂ ಸಂಗೀತವಾದ್ಯಗಳಾಗಿದ್ದವೆಂದು ಮಿಸ್ಟರ್ ಫರ್ಗ್ಯುಸನ್ ಎತ್ತಿ ತೋರಿಸುತ್ತಾನೆ. ಮಹಾಪ್ರಭುವಿಗೆ ಕಳಿಸಲಾದ ಕಾಣಿಕೆಗಳಲ್ಲಿ "ಕೆಲವು ಆರ್ಗನ್‌ಗಳು ಮತ್ತು ಒಂದು ಕ್ಲ್ಯಾವಿಕಾರ್ಡ್ ಮತ್ತು ಅವುಗಳ ವಾದಕನೊಬ್ಬ" ಇದ್ದವೆಂದು ೧೫೨೦ (ಅದೇ ವರ್ಷ)ದಲ್ಲಿ ಡಾಮ್ ರಾಡ್ರಿಗೊ ದ ಲಿಮಾನ ನೇತೃತ್ವದ ರಾಯಭಾರವನ್ನು "ಪ್ರೆಸ್ಟರ್ ಜಾನ್"ನಿಗೆ ವರ್ಣಿಸುತ್ತ ಕ್ಯಾಸ್ಟನ್‌ಹೆಡಾ (೫. ೨೮) ಹೇಳುತ್ತಾನೆ. ಈ ಆರ್ಗನ್‌ಗಳು ಅವರ ರಾಯಭಾರ ಕುರಿತ ಫಾದರ್ ಆಲ್ವಾರಿಜ್‌ನ ವೃತ್ತಾಂತದಲ್ಲೂ ಉಲ್ಲೇಖಿತವಾಗಿವೆ (ಹ್ಯಾಕ್ಲುಟ್ ಸೊಸಾಯಿಟಿ ಅನುವಾದ, ಪು ೧೦).

28 "ರಾಜ ಎರಡು ಗೇಣಿನ ಬಂಗಾರದ ಜರತಾರಿ ಟೊಪ್ಪಿಗೆಯನ್ನು ಧರಿಸುತ್ತಾನೆ" ಎಂದು ವಾರ್ಥೆಮಾ ಹೇಳುತ್ತಾನೆ. ಇವನು ಕೃಷ್ಣದೇವನ ಪೂರ್ವಾಧಿಕಾರಿ ನರಸಿಂಹ.

29 ಕಮಲಾಪುರದ ರಸ್ತೆಯ ಮೇಲೆ ಹೊಸಪೇಟೆಯಿಂದ ಒಂದು ಮೈಲಿನಷ್ಟು ದೂರ ವಿರುವ ಸುಂದರವಾದ ಅನಂತಶಯನ ದೇವಾಲಯವನ್ನು ಇದು ನಿರ್ದೇಶಿಸ ಬಹುದು, ಮರಗಳೂ ಇಂದಿಗೂ ಕೊಂಚಮಟ್ಟಿಗೆ ನಿಂತಿವೆ.

30 ಲೇಖಕ ಬಹುಶಃ ಬುರುಜುಗಳು ಅಥವಾ ಗೋಪುರಗಳು ಅಥವಾ ಗುಡ್ಡದ ನೆತ್ತಿಯ ಮೇಲೆ ಭದ್ರ ಗೋಡೆಯುಳ್ಳ ಆಶ್ರಯ ಸ್ಥಾನಗಳನ್ನು ಸೂಚಿಸುತ್ತಾನೆ. ವಾಕ್ಯವೃಂದ ಅಸ್ಪಷ್ಟವಾಗಿದೆ.

31 ಇಲ್ಲಿ ಉಲ್ಲೇಖಿತವಾದ ಮಾರ್ಗ ಬಹುಶಃ ಕಮಲಾಪುರ ಗ್ರಾಮದ ಉತ್ತರಕ್ಕಿರುವ ಅರಮನೆಯ ಆವರಣದ ಪ್ರವೇಶಮಾರ್ಗ.

32 ಲೇಖಕ ಈ ಭರವಸೆ ಈಡೇರಿಸುವುದನ್ನು ಮರೆತುಬಿಟ್ಟ.

33 ವಿಂಟೆಮ್ $= \frac{7}{20}$ ಪೆನಿ

34 ಆನೆಗುಂದಿ.

35 ವಿಠ್ಠಲಸ್ವಾಮಿಯ ದೇವಾಲಯದ ಸಮೀಪದಲ್ಲಿ ಇಂದಿಗೂ ಅದರ ಅವಶೇಷಗಳು ಕಂಡುಬರುವ, ನೆಟ್ಟಗೆ ನಿಲ್ಲಿಸಿದ ಒರಟು ಏಕಶಿಲಾ ಕಂಬಗಳ ಮೇಲೆ ಕಟ್ಟಲಾದ ಕಲ್ಲಿನ ಸೇತುವೆ ಉಲ್ಲೇಖಿಸಲ್ಪಡದಿರುವುದನ್ನು ನೋಡಿದರೆ ಅದನ್ನು ನಂತರದ ಕಾಲದಲ್ಲಿ ಕಟ್ಟಲಾಯಿತೆಂದು ತೋರುತ್ತದೆ.

36 ವರ್ಣಿಸಲಾಗಿರುವ ಸ್ಥಳದಿಂದಾಗಿ ಇದು ಸುಂದರವಾಗಿ ಕಡೆದ ವಿಠ್ಠಲಸ್ವಾಮಿ ದೇವಾಲಯವನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

37 ಈ ಶಬ್ದವೊಂದು ಒಗಟು. ವರ್ಣನೆಯಿಂದ ಸಂಭವ ನೀಯವಾಗಿ ತೋರುವಂತೆ ಈ ದೇವಾಲಯ ಇಂದಿಗೂ ಬಳಕೆಯಲ್ಲಿರುವ ಹಂಪೆಯ ಮುಖ್ಯ ದೇವಾಲಯವೆ ಆಗಿದ್ದರೆ "ಆಪೆ" (Aope) "ಹಂಪಿ" ಅಥವಾ "ಹಂಪೆ" ಯನ್ನು ಸಂಕೇತಿಸುತ್ತದೆಂದು ನಾನು ಸೂಚಿಸಬಯಸುತ್ತೇನೆ. Radi "ರಾಜಾ" ಅಥವಾ radian "ರಾಜ್ಯದ" ಆಗಿರಬಹುದು. ಅದನ್ನು "ರಾಜನ ಹಂಪೆ ದೇವಾಲಯ"—ಇದು ಅದನ್ನು ಕರಾರುವಾಕ್ಕಾಗಿ ವರ್ಣಿಸುತ್ತದೆ—ಎಂದು ವರ್ಣಿಸಿದ ಯಾವನೊ ಒಬ್ಬ ಬಹುಶಃ ಈ ಹೆಸರನ್ನು ಪ್ಯಾಸ್‌ನಿಗೆ ಕೊಟ್ಟಿರಬಹುದು. ವಿರುಪಾಕ್ಷನಿಗೆ ಸಮರ್ಪಿತವಾಗಿದ್ದು ಅದು ಮಹಾ ನಗರದ ಪ್ರಮುಖ ಆರಾಧನಾ ಮಂದಿರವಾಗಿತ್ತು.

38 ಬಳಸಲಾದ ಶಬ್ದ romeyra. ಅದು ದಾಳಿಂಬವೃಕ್ಷ ಅಥವಾ ಸ್ತ್ರೀಯಾತ್ರಿ ಎಂಬ ಅರ್ಥ ನೀಡಬಹುದು. ಪ್ರಸ್ತಾಪ ಬಾಗಿಲ ಮೇಲಿರುವ ಗೋಪುರದ ಮೇಲಣ ಮೆತುಗಾರೆಯ ಆಕೃತಿಗಳು ಮತ್ತು ನಕ್ಷೆಗಳಿಗಿದೆ.

39 ಮೂಲಕೃತಿಯಲ್ಲಿ ಈ ಶಬ್ದ ಬಿಟ್ಟುಹೋಗಿದೆ.

40 ಬ್ರೆಡೊಸ್. ಮೇಲೆ ಪುಟ ೨೨೭, ೨೪೫, ಟಿಪ್ಪಣಿಗಳನ್ನು ನೋಡಿರಿ.

41 ಪ್ಯಾಸ್‌ನಲ್ಲಿ ನೀಡಲಾಗಿರುವ ತಾರೀಖುಗಳ ಬಗೆಗಿನ ಚರ್ಚೆಗೆ ಪುಟ ೧೪೦ ನೋಡಿರಿ.

42 ಸ್ಪಷ್ಟವಾಗಿಯೆ ಶಸ್ತ್ರಾಸ್ತ್ರಗಳ ಸ್ಥಳ ಸೂಚಿತವಾಗಿದೆ.

42a ಈ ಜನರನ್ನು ದಿನಚರಿಯಲ್ಲಿ ಮೇಲಿಂದ ಮೇಲೆ ಉಲ್ಲೇಖಿಸಲಾಗಿದೆ. ಅವರ ಮುಖ್ಯಸ್ಥ, ರಾಜನ ಅತಿ ಮಹತ್ವದ ಅಧಿಕಾರಿಗಳಲ್ಲೊಬ್ಬ. ಆದುದರಿಂದ, ನಾನು ಅವನಿಗೆ ಕಾವಲುಪಡೆಯ ಮುಖ್ಯಸ್ಥ ಎಂದು ಹೆಸರು ಕೊಟ್ಟಿರುವೆ.

43 ನನಗೆ ಈ ಅನುವಾದದ ಬಗೆಗೆ ಸಂದೇಹ. ಬಳಸಲಾದ ಪದಕ್ಕೆ ಬಹುಶಃ ಪಾರಿಭಾಷಿಕ ಅರ್ಥವೊಂದಿದ್ದಿರಬೇಕು.

44 ಇದರರ್ಥ ಅಂಚು, ಮುಂಭಾಗ ಎಂದಿರಬೇಕಲ್ಲದೆ ರಾಜನ ಚಾವಣಿಯ ತೀರ ಅಂಚು ಅಲ್ಲವೆಂದು ನನಗನಿಸುತ್ತದೆ.

45 ಪ್ರಧಾನಿ ಸಾಳುವ ತಿಮ್ಮ. ಪ್ಯಾಸ್ ಮತ್ತು ನೂನಿಜ್‌ರಿಬ್ಬರ ದಿನಚರಿಗಳಲ್ಲಿ ಈ ಹೆಸರನ್ನು ನಾನಾ ವಿಧ ಬರೆಯಲಾಗಿದೆ. ಕೃಷ್ಣದೇವ ತನ್ನ ಸಿಂಹಾಸನಕ್ಕಾಗಿ ಅವನಿಗೆ ಋಣಿಯಾಗಿದ್ದ.

46 ಈ ಕಾಲಕ್ಕೆ ಇದ್ದ ಸೆರಿಂಗಪಟಮ್‌ದ ರಾಜ ಬೆಟ್ಟದ ಚಾಮರಾಯ. ಅವನು ಮೈಸೂರು ನಾಡನ್ನು ೧೫೧೩ ರಿಂದ ೧೫೫೩ರವರೆಗೆ ಆಳಿದ. ಅವನಿಗೆ ಮೂವರು ಪುತ್ರರು, ಅವನ ಮರಣ ಕಾಲಕ್ಕೆ ಇಬ್ಬರೂ ಹಿರಿಯ ಪುತ್ರರು ಅವನ ಆಸ್ತಿಯ ಭಾಗಗಳನ್ನು ಪಡೆದರು. ಆದರೆ ಇಬ್ಬರೂ ಸಂತಾನವಿಲ್ಲದೆ ಸತ್ತರು, ಮೂರನೆಯ ಪುತ್ರ "ಹಿರೆ" ಅಥವಾ "ವೀರ" ಚಾಮ. ಅವನು ಸ್ಪಷ್ಟವಾಗಿಯೆ ಎಲ್ಲಕ್ಕಿಂತ ಬಲಶಾಲಿಯಾಗಿದ್ದನು ಮತ್ತು ತನ್ನ ತಂದೆಗೆ ಅತ್ಯಂತ ಪ್ರಿಯನಾಗಿದ್ದನು. ಏಕೆಂದರೆ, ತಂದೆ ಮರಣ ಸಮಯಕ್ಕೆ ತನ್ನ ಪಾಲೆಂದು ಅವನು ಮೈಸೂರಿನ ಪ್ರಧಾನ ನಾಡು, ಪಟ್ಟಣ ಕೂಡ, ಮತ್ತು ನೆರೆಪ್ರಾಂತ ಪಡೆದ. ೧೫೬೫ರಲ್ಲಿ ವಿಜಯನಗರದ ಪತನದ ನಂತರ ಅವನು ವಸ್ತುತಃ ಸ್ವತಂತ್ರನಾದ ಮತ್ತು ೧೫೭೦ರಲ್ಲಿ ಅವನ ಸಂಬಂಧಿ ರಾಜಾ ಒಡೆಯಾರ್ ಪ್ರಧಾನ ಶಕ್ತಿಯನ್ನು ಹಿಡಿದುಕೊಳ್ಳುವವರೆಗೆ ಆಳಿದ. "ಕುಮಾರ" ("ಮಗ") ಎಂಬ ಪದವನ್ನು ಭಾರತದಲ್ಲಿ ರಾಜಮನೆತನಗಳಲ್ಲಿ ಆಳುವ ರಾಜನ ಸಂತತಿಗೆ ಹಗಲೆಲ್ಲ ಅನ್ವಯಿಸಲಾಗುತ್ತದೆ. ಆದುದರಿಂದ, 'ಕುಮಾರವೀರ್ಯ' "ಕುಮಾರ ವೀರಯ್ಯ" ಆಗಿರಬಹುದೆಂದು ಭಾವಿಸುವ ಧೈರ್ಯ ಮಾಡುತ್ತೇನೆ. ಈ ಉತ್ಸವಗಳಲ್ಲಿ ಸೆರಿಂಗಪಟಮ್‌ದ ರಾಜ ಸ್ವತಃ ಉಪಸ್ಥಿತನಾಗಿರದೆ ಪ್ಯಾಸ್ ನೋಡಿದ ವ್ಯಕ್ತಿ ಅವನ ಮಗ "ವೀರ" ಆಗಿದ್ದನು.

47 "ಉತ್ಸವಗಳತ್ತ ತಿರುಗೋಣ" ಎಂದು ಲೇಖಕ ಆರಂಭಿಸುತ್ತಾನೆ. ಅದು ತೀರ ಬೇಸರ ಹಿಡಿಸುವಂತಿರುವುದರಿಂದ ನಾನು ಅದನ್ನಿಲ್ಲಿ ಕೈಬಿಟ್ಟಿರುವೆ.

48 ಖಚಿತವಾಗಿ ಬೆಲೆ ಕಟ್ಟಲು ಬಲು ಕಠಿಣವಾಗಿರುವ ಒಂದು ಚಿಕ್ಕ ಸುವರ್ಣನಾಣ್ಯ. ಅಬ್ದುರ್ ರಜಾಕ್ (೧೪೪೩) ಸ್ಪಷ್ಟವಾಗಿ ಅರ್ಧ ಪಗೋಡಕ್ಕೆ ಸಮವೆನ್ನುತ್ತಾನೆ; ವಾರ್ಥೆಮಾ (೧೫೦೩-೮) ಒಂದು ಪಗೋಡಕ್ಕೆ ಸಮವೆನ್ನುತ್ತಾನೆ. ನಾವು ಈ ಎರಡನೆಯ ಅರ್ಥದಲ್ಲಿಯೆ ಅದನ್ನು ತೆಗೆದುಕೊಳ್ಳಬೇಕು. ವಾರ್ಥೆಮಾ ಅದನ್ನು "ಸುವರ್ಣ ಡುಕಟ್" ಎಂದು ಕರೆಯುತ್ತಾನೆ. ತನ್ನ ಕಾಲದಲ್ಲಿ ಅದು ಫ್ಲೆಮಿಶ್‌ಡಾಲರಿನಷ್ಟು ಸರಿಸುಮಾರು ಬೆಲೆ ಹೊಂದಿತ್ತೆಂದು ಪರ್ಚಸ್ ಹೇಳುತ್ತಾನೆ.

ತೀರ ಇತ್ತೀಚಿನ ದಿನಗಳಲ್ಲಿ ಪಗೋಡಕ್ಕೆ ನಿಗದಿಪಡಿಸಿದ ಸಾಧಾರಣ ಬೆಲೆಯೆಂದರೆ ರೂ 3½(ಯುಲ್ ಆ್ಯಂಡ್ ಬರ್ನೆಲ್‌ನ ನಿಘಂಟಿನಲ್ಲಿ "ಹಾಬ್ಸನ್-ಜಾಬ್ಸನ್" ಕೆಳಗೆ "ಪಗೋಡ" ಮತ್ತು "ಪರ್ದಾಒ" ನೋಡಿರಿ. ಯೂಲ್ ಸ್ಪಷ್ಟವಾಗಿ ಪ್ರಸ್ತುತ ಕಾಲವಲ್ಲಿ ೪ ಶಿಲಿಂಗ್ ೬ ಪೆನ್ಸ್ ಎಂದು ಅದರ ಬೆಲೆ ಕಟ್ಟುತ್ತಾನೆ. ಬ್ಯಾರೊಸ್ ಮತ್ತು ಕ್ಯಾಸ್ಟನ್‌ಹೆಡಾ ಇಬ್ಬರೂ ಪರ್ದಾಒನ ೩೬೦ ರೆಯಸ್ ಆಗಿತ್ತೆಂದು ಪ್ಯಾಸ್‌ನೊಂದಿಗೆ ಒಪ್ಪುತ್ತಾರೆ. (ಮುಂದೆ, ಪು. ೨೮೨).

49 ತೆಲುಗಿನಲ್ಲಿ "ಕುಲ್ಲಾಯಿ". ಪು. ೨೧೦, ೨೫೨, ಟಿಪ್ಪಣಿ ೨ ಮತ್ತು ಪು. ೩೮೩ ನೋಡಿರಿ. ಈ ಸ್ತ್ರೀಯರು ಪುರುಷರ ತಲೆಉಡುಗೆ ಧರಿಸಿದಂತೆ ತೋರುತ್ತದೆ.

50 ಲಗಾಮುಗಳು ಚರ್ಮದಿಂದ ಮಾಡಲಾಗಿರದೆ ದಾರಗಳಾಗಿ ಹೊಸೆದ ರೇಷ್ಮೆಯವು.

51 ಈ ಶಬ್ದವನ್ನು ಹಸ್ತಪ್ರತಿಯಲ್ಲಿ **xismael** ಎಂದು ಓದಿರುವೆ. ಮತ್ತು ಮಿಸ್ಟರ್ ಲೊಪ್ಸ್ ಇದು ಶೇಖ್ (**xegue**) ಇಸ್ಮಾಯಿಲ್ ಎಂಬರ್ಥದಲ್ಲಿ ಬಳಸಲಾಗಿದೆ ಎಂದು ಸೂಚಿಸುತ್ತಾನೆ. ಹಾಗಾದರೆ, ನಿಸ್ಸಂದೇಹವಾಗಿಯೂ ಪರ್ಶಿಯಾ ಎಂಬರ್ಥ ಸೂಚಿತವಾಗಿದೆ.

52 **Laudeis**. ಬೇರೆ ಬೇರೆ ರೀತಿ ಬರೆಯಲಾದ ಈ ಶಬ್ದ ಸತತವಾಗಿ ಬಳಸಲ್ಪಟ್ಟಿದೆ. ಇದು ಭಾರತದಲ್ಲಿ ಹಿಂದಿನ ಕಾಲದಲ್ಲಿ ಹಗಲೆಲ್ಲ ಹಾಕಿಕೊಳ್ಳಲಾಗುತ್ತಿದ್ದ ಚರ್ಮ ಅಥವಾ ಲೋಹದ ತುಣುಕುಗಳಿಂದ ಬಲಪಡಿಸಿದ ದಪ್ಪ ರಜಾಯಿ ಅಂಗಿಗಳಿಗೆ ಅನ್ವಯಿಸುತ್ತದೆಂದು ತೋರುತ್ತದೆ. ಅವುಗಳಲ್ಲಿ ಬಹುಪಾಲು ಚನ್ನಾಗಿ ಅಲಂಕೃತ ವಾಗಿದ್ದವು ಮತ್ತು ಖಡ್ಗದ ಏಟುಗಳಿಂದ ಒಳ್ಳೆಯ ರಕ್ಷಣೆ ಒದಗಿಸುತ್ತಿದ್ದವು. ಉತ್ತರ ಆರ್ಕಾಟದಲ್ಲಿ ವೆಲ್ಲೋರಿನ ಕೋಟೆಯಲ್ಲಿರುವ ವಿಜಯನಗರ ಕಾಲದಲ್ಲಿ ಕಟ್ಟಲಾದ ಅತ್ಯಂತ ಅಲಂಕೃತವಾದ ದೇವಾಲಯದ ಕಂಬಗಳ ಮೇಲೆ ಹಿಂಗಾಲ ಮೇಲೆ ನಿಂತ ಕುದುರೆಗಳನ್ನು ಕಡೆಯಲಾಗಿದೆ. ಅವುಗಳ ಆರೋಹಿಗಳು ಗುಂಡಿ ಮತ್ತು ಕಸಿಗಳಿಂದ ಕಟ್ಟಲಾದ ಮೇಲ್ನೋಟಕ್ಕೆ ಚರ್ಮದವೆಂದು ತೋರುವ ಕವಚ ಗಳನ್ನು ಧರಿಸಿದ್ದಾರೆ. ದಿನಚರಿಕಾರ ಸೂಚಿಸಿರುವ ಅಂಗವಸ್ತ್ರ ಇದಾಗಿರುವ ಸಾಧ್ಯತೆಯಿದೆ. ಅದು "ಅರಿವೆ ಅಥವಾ ಮೆತ್ತೆಯಿಂದ ತುಂಬಿದ" ಎಂಬ ಅರ್ಥ ನೀಡುವ "ಲೋಡು" ಎಂಬ ಕನ್ನಡಕ್ಕೆ ಸಂಬಂಧಿಸಿದ್ದೆಂಬ ಸುಳಿವು ಬಿಟ್ಟರೆ ಆ ಶಬ್ದದ ಮೂಲದ ಬಗೆಗೆ ಬೇರೆ ಸುಳಿವು ನೀಡಲಾರೆ. ೧೫೨೦ರ ರಾಯಚೂರು ದಂಡೆ ಯಾತ್ರೆಯಲ್ಲಿ ಹಿಂದೂ ಅಶ್ವದಳದ ಉಡುಪು ವರ್ಣಿಸುತ್ತ ಬ್ಯಾರೊಸ್ ಅವರ ಈಟಿ ತಿವಿತ ಮತ್ತು ಖಡ್ಗ ಇರಿತಗಳಿಂದ ಸಂರಕ್ಷಿಸಲು ಸಮರ್ಥವಾದ ನೂಲಿನ ಲೋಡು ಗಳನ್ನು (**embutidos**, ಈ ಸಂದರ್ಭದಲ್ಲಿ ಅದು ಏನೆ ಅರ್ಥ ನೀಡಲಿ ವಾಚ್ಯಾರ್ಥದಲ್ಲಿ "ಒಳಗೆ ತುಂಬಲಾದ") ಅಥವಾ ದೇಹ, ತಲೆ, ಮತ್ತು ತೋಳು ಗಳು ಕುದುರೆಗಳು ಮತ್ತು ಆನೆಗಳನ್ನು ಅದೇ ರೀತಿ ಸಂರಕ್ಷಿಸಲಾಗಿರುತ್ತದೆ. ಕಾಲಾಳುಗಳು ಸಂರಕ್ಷಕ ಚಿಲಕತ್ತು ಧರಿಸದೆ "ಕೇವಲ ಲೋಡುಗಳನ್ನು" ಧರಿಸುತ್ತಿದ್ದರು. ಡೆಕಡಾ, **iii.l.iv.c.4.**

53 **Lioes**. ಅರ್ಥ ಸ್ಪಷ್ಟವಿಲ್ಲ.

54 ಈ ದೊಡ್ಡ ಸಂಖ್ಯೆಯ ಬಗೆಗೆ ಮೇಲೆ ಪು. ೧೪೭ **lt**. ನೋಡಿರಿ.

55 ಸೂನಿಜ್‌ನಿಂದ ಕೆಲವು ವಿವರಗಳು ನೀಡಲ್ಪಟ್ಟಿವೆ (ಮುಂದೆ, ಪು. ೩೮೪t).

56 ಸೂನಿಜ್‌ನ ತೀರ ಸ್ವತಂತ್ರವಾದ ಪ್ರಮಾಣದ ಪ್ರಕಾರ (ಮುಂದೆ, ಪು. ೩೭೪) ಇವರು ಬಂಕಾಪುರ, ಗೆರಸೊಪ್ಪ, ಬಕಾನೂರ, ಕ್ಯಾಲಿಕಟ್ ಮತ್ತು ಭಟ್ಕಳದ ರಾಜರು.

67 ಈ ಕಾಲಾನುಕ್ರಮಣಿಕೆಯ ವಿವರಗಳ ಬಗೆಗೆ ಪೂರ್ಣ ಟಿಪ್ಪಣಿಗಾಗಿ ಮೇಲೆ ಪು. ೧೪೦ ನೋಡಿರಿ.

58 ಸೂನಿಜ್‌ನ "ಗುಆಂಡಾಜಾ" (ಮುಂದೆ, ಪು. ೩೬೧).

59 ಇವೆಲ್ಲ ಕಟ್ಟಡಗಳು ಸಂಪೂರ್ಣ ನಾಶಗೊಳಿಸಲ್ಪಟ್ಟಿವೆ. ಆದರೆ ಕಾಳಜಿಪೂರ್ಣವಾದ ಮತ್ತು ವ್ಯವಸ್ಥಿತವಾದ ಉತ್ಖನನ ಅರಮನೆಯ ಇಡಿ ವಿನ್ಯಾಸವನ್ನು ತೋರ್ಪಡಿಸಬಹುದು. ಹಾಳುಗಳಲ್ಲಿ ಮತ್ತು ಭಗ್ನಾವಶೇಷಗಳಲ್ಲಿ ವರ್ಣಿಸಲಾಗಿರುವ ಸುಂದರ ಶಿಲ್ಪಗಳ ಅವಶೇಷಗಳು ದೊರೆಯಬಹುದು. ಪ್ಯಾಸ್ ವರ್ಣಿಸಿದ ಉತ್ಸವಗಳನ್ನು ರಾಜ ಮತ್ತು ಅವನ ಆಸ್ಥಾನಿಕರು ನೋಡುತ್ತಿದ್ದ ದೊಡ್ಡ ಅಲಂಕೃತ ದ್ವಾರ ಮಂಟಪದ ಹಿಂದೆಯೆ ಮತ್ತು ಹಾಗಾಗಿ ಇದೀಗ ಪ್ರಸ್ತಾಪಿಸಿದ ದ್ವಾರಕ್ಕೆ ಹತ್ತಿಕೊಂಡೆ ಮಣ್ಣು ಮತ್ತು ಹಾಳಿನಲ್ಲಿ ಅರೆಹೂತಿರುವ ಮತ್ತು ಪ್ರತಿಯೊಂದು ಒಂದೇ ಕಲ್ಲುದಿಮ್ಮಿಯಲ್ಲಿ ಮಾಡಿದ ಎರಡು ದೊಡ್ಡ ಕಲ್ಲಿನ ಬಾಗಿಲುಗಳಿವೆ. ಮರಗೆಲಸವನ್ನು ಅನುಕರಿಸುವಂತೆ ಕಲ್ಲಿನಲ್ಲಿ ಪಟ್ಟಿಗಳನ್ನು ಕೆತ್ತಲಾಗಿದೆ ಮತ್ತು ಅದೇ ದಿಮ್ಮಿಯಲ್ಲಿ ಕೊರೆದ ದೊಡ್ಡ ಚಿಲಕಗಳಿವೆ.

60 **Sao de meas canas** (ಮೇಲೆ, ಪುಟ ೨೮೫ ನೋಡಿರಿ) ಇದರ ಅರ್ಥದ ಬಗೆಗೆ ನನಗೆ ಸಂದೇಹವಿದೆ. ಈಗ ಉಳಿದಿರುವ ಅವಶೇಷಗಳ ರಾಶಿಯ ಪರಿಶೀಲನೆ ಇವೆಲ್ಲ ಅಂಶಗಳನ್ನು ಬಗೆಹರಿಸಬಹುದು. ಶಿಲಾಶಿಲ್ಪಗಳನ್ನು ಒಡೆದು ಬಿಟ್ಟು ಹೋಗಲಾಗುತ್ತಿತ್ತು. ಅವನ್ನು ಒಯ್ಯಲಾಗುತ್ತಿರಲಿಲ್ಲ. (ಮುಂದೆ ಪು. ೨೦೪ ಕೂಡ ನೋಡಿರಿ).

61 ಈ ವರ್ಣನೆ ವಿಶೇಷ ಗಮನಕ್ಕೆ ಅರ್ಹವಾಗಿದೆ. ಲೇಖಕ ಸ್ಪಷ್ಟವಾಗಿಯೆ ಶ್ರೀಮಂತವಾಗಿ ಶಿಲ್ಪಿಸಲಾದ ಮಂಡಪವನ್ನು ವರ್ಣಿಸುತ್ತಾನೆ. ಅದರಂಥ ಅನೇಕ ನಮೂನೆಗಳು ದೇವಾಲಯಗಳಲ್ಲಿ ಇನ್ನೂ ನೋಡಸಿಗುತ್ತವೆ. ಮತ್ತು ಇಡಿ ಕಲ್ಲು ಕೆತ್ತನೆ ಚನ್ನಾಗಿ ಬಣ್ಣ ನೀಡಲಾಗಿತ್ತು ಮತ್ತು ಬಂಗಾರದ ಗಿಲೀಟು ಮಾಡಲಾಗಿತ್ತು. ಬಹುಶಃ ಯಾವಾಗಲೂ ಹೀಗೆಯೆ ಆಗಿತ್ತು. ವಿಜಯನಗರದ ಈ ಅನೇಕ ಕಟ್ಟಡಗಳ ಮೇಲೆ ಬಣ್ಣದ ಗುರುತುಗಳು ಇನ್ನೂ ಉಳಿದಿವೆ.

62 ಇಲ್ಲಿ ನಿರೂಪಿಸಲಾಗಿರುವಂತೆ ಇರದಿದ್ದರೆ ಇದರ ಅರ್ಥ ತಿಳಿಯದು.

63 ಬಹುಶಃ ಶಿಲ್ಪಗಳು ದಕ್ಷಿಣ ಭಾರತದ ಆ ಕಾಲದ ದೇವಾಲಯಗಳಲ್ಲಿ ಇಂದಿಗೂ ನೋಡಸಿಗುವ ಅನೇಕ ಶಿಲ್ಪಗಳಂತಿವೆ. ಅವುಗಳ ಕಂಬಗಳ ಗದ್ದಿಗೆಕಲ್ಲನ್ನು ಆನೆಗಳ, ಕುದುರೆಗಳ, ರಾಕ್ಷಸರ ವಿಚಿತ್ರ ಆಕೃತಿಗಳಿಂದ ಚನ್ನಾಗಿ ಕಡೆಯಲಾಗುತ್ತಿತ್ತು.

64 ಈ ದ್ವಾರ ಆನೆಗುಂದಿಯ ದೋಣಿದಾಟಿನ ಎದುರಿಗೆ ಇಂದಿಗೂ ಇದೆ.

65 ಒಂದು ಉತ್ಕೃಷ್ಟ ದೇವಾಲಯದ ಅವಶೇಷಗಳಿರುವ ಕೃಷ್ಣಾಪುರ.

66 ಈ ವಾಕ್ಯವನ್ನು ನಂತರ ಮಧ್ಯೆ ಸೇರಿಸಲಾರಗಿಬೇಕೆಂಬುದು ಸ್ಪಷ್ಟವಾಗಿವೆ. ಬಹುಶಃ ಕೊನೆಯ ನಾಲ್ಕು ಪ್ಯಾರಾಗಳನ್ನೂ ಹಾಗೆಯೆ ಮಾಡಿರಬೇಕು. ಏಕೆಂದರೆ, ಉಪಾಂತ ವಾಕ್ಯ ಬಹುಶಃ ೧೫೨೨ ಅಥವಾ ಆ ಸುಮಾರಿಗೆ ಬರೆದ ಪ್ಯಾಸ್‌ನ ಮೂಲ ದಿನಚರಿಯ ಭಾಗವಾಗಿರಲಾರದು. ಏಕೆಂದರೆ, ಅದು ೧೫೩೫-೩೬ರಲ್ಲಿ ಘಟನೆಯನ್ನು ಪ್ರಸ್ತಾಪಿಸುತ್ತದೆ.

67 ಇತರೆಡೆ "ಒಂದೆಗಮಾ" ಎಂದು ಕರೆಯಲಾಗಿದೆ. ಅದರ ಇನ್ನೊಂದು ಹೆಸರು ನಾಗಲಾಪುರ. ಅದೇ ಆಧುನಿಕ ಹೊಸಪೇಟ, (ಮುಂದೆ ನೋಡಿರಿ, ನೂನಿಜ್, ಪು. ೩೮೭).

# ಫರ್ನಾಓ ನೂನಿಜ್‌ನ ದಿನಚರಿ
## (ಪ್ರಾಯಶಃ ಕ್ರಿ.ಶ. ೧೫೩೫–೩೭ರಲ್ಲಿ ಬರೆದುದು)

### ಅಧ್ಯಾಯ ೧

**ಒಂದು ಸಾವಿರ ಎರಡು ನೂರಾ ಮೂವತ್ತನೆಯ ಶಕೆಯಿಂದ ಅಂದರೆ ಬಿಸ್ನಗ ರಾಜ್ಯದ ಸಾರ್ವತ್ರಿಕವಾದ ವಿನಾಶದ[1] ನಂತರ ಆಳಿದ ಬಿಸ್ನಗ ರಾಜರ ದಿನಚರಿಯ ಪ್ರತಿ ಮತ್ತು ಸಾರಾಂಶ.**

ಹನ್ನೆರಡುನೂರಾ ಮೂವತ್ತನೆಯ[2] ವರ್ಷದಲ್ಲಿ ಭಾರತದ ಈ ಭಾಗಗಳನ್ನು ಹಿಂದೆಂದಿಗಿಂತ ದೊಡ್ಡ ಅರಸ ಆಳಿದ. ಇವನು ದಿಲ್ಲಿಯ[3] ರಾಜ.ಅವನು ಶಸ್ತ್ರ ಹಾಗೂ ಸೈನಿಕರ ಬಲದಿಂದ ಅನೇಕ ವರ್ಷಗಳವರೆಗೆ ಕ್ಯಾಂಬೆ ಮೇಲೆ ಯುದ್ಧ ಮಾಡಿ ಆ ಅವಧಿಯಲ್ಲಿ ಕ್ಯಾಂಬೆಗೆ[4] ಸೇರಿದ ಗುಜರಾತ ನಾಡನ್ನು ವಶಪಡಿಸಿಕೊಂಡ ಹಾಗೂ ನಾಶಮಾಡಿದ ಮತ್ತು ಕೊನೆಗೆ ಅದರ ಪ್ರಭುವಾದ.

ಇದನ್ನು ತೆಗೆದುಕೊಂಡ ಮೇಲೆ ಈಗಾಗಲೆ ಪಡೆದ ವಿಜಯದಿಂದ ತೃಪ್ತನಾಗದೆ ಅವನು ಕಾಲಾಳು ಮತ್ತು ಅಶ್ವಾಳುಗಳ ದೊಡ್ಡ ಸೈನ್ಯ ಸಿದ್ಧಪಡಿಸಿದನು ಮತ್ತು ಬಿಸ್ನಗದ ರಾಜನ ಮೇಲೆ ಯುದ್ಧ ಮಾಡಲು ನಿರ್ಧರಿಸಿದನು ಮತ್ತು ತನಗಿದ್ದ ಅನೇಕ ಶತ್ರುಗಳಿಂದ ತನ್ನನ್ನು ಸಂರಕ್ಷಿಸಿಕೊಳ್ಳಲು ತನ್ನ ನಾಡು ಮತ್ತು ದುರ್ಗ ಗಳಲ್ಲಿ ತನ್ನ ದಳಪತಿಗಳನ್ನು ಬಿಟ್ಟುಬಂದ. ಏಕೆಂದರೆ, ಈ ರಾಜ[5] ಬೆಂಗಲ್ಲದೊಂದಿಗೆ ಮತ್ತು ಶೇಖ್ ಇಸ್ಮಾಯಿಲ್[6] ದೇಶದ ಗಡಿಗಳಲ್ಲಿ ತುರ್ಕಮನ್‌ರೊಂದಿಗೆ ಯುದ್ಧ ದಲ್ಲಿದ್ದ. ಈ ಜನರು ತಿಳಿಬಣ್ಣದವರೂ ಭೀಮಕಾಯರೂ ಆಗಿರುವರು ; ದಿಲ್ಲಿಯ ಈ ರಾಜ ಕ್ಯಾಂಬೆಯ ಮೇಲೆ ಯುದ್ಧ ಮಾಡಲು ಬಳಸಿ ಅದನ್ನು ನಾಶಪಡಿಸಿದ ಕುದುರೆ ಗಳು ಅವರ ದೇಶದಲ್ಲಿನವು. ನಾಡನ್ನು ವಶಪಡಿಸಿಕೊಂಡು ತಾನದರ ಪ್ರಭುವಾದ ಮೇಲೂ ಅವನಲ್ಲಿನ್ನೂ ಎಂಟುನೂರು ಸಾವಿರದಷ್ಟು ಅಶ್ವಾಳುಗಳು ಉಳಿದರು. ಅವರೊಂದಿಗೆ ಅವನು ಬಿಸ್ನಗಕ್ಕೆ ಮುನ್ನಡೆದ ಕಾಲಾಳುಗಳ ಸಂಖ್ಯೆಯ ಬಗೆಗೆ ಇಲ್ಲಿ ಏನನ್ನೂ ಹೇಳಲಾಗಿಲ್ಲ. ಏಕೆಂದರೆ, ಅವುಗಳನ್ನು ಯಾರೂ ಎಣಿಸಲಿಲ್ಲ.

ಬಿಸ್ನಗದ ರಾಜನ ಮೇಲೆ ಯುದ್ಧ ಮಾಡಲು ಮತ್ತು ಅವನನ್ನು ತನ್ನ ಅಧಿಪತ್ಯಕ್ಕೊಳಪಡಿಸಲು ನಿರ್ಧರಿಸಿ ಅವನು ತಾನು ಹೊಸದಾಗಿ ಗೆದ್ದಿದ್ದ ನಾಡು ಗಳಿಂದ ಹೊರಬಿದ್ದು ಆ ಸಮಯಕ್ಕೆ ಬಹಳವಿದ್ದ ಬಿಸ್ನಗ ರಾಜನ ನಾಡುಗಳನ್ನು ಪ್ರವೇಶಿಸಿದ. ಕ್ಯಾಂಬೆ ರಾಜ್ಯ ಬಿಟ್ಟುಬಂದು ಅವನು ಅದರ ಪ್ರದೇಶಗಳು ಈಗ ಇದಲ್‌ಸಾಓ[7]ನಿಗೆ ಸೇರಿದ ಬಲ್ಲಾಗೇಟ್[8] ಮೇಲೆ ದಾಳಿ ಮಾಡಿ ಯುದ್ಧ ಮಾಡ

ಲಾರಂಭಿಸಿದ. ಅವನು ಅನೇಕ ಪಟ್ಟಣಗಳನ್ನು ಮತ್ತು ಊರುಗಳನ್ನು ಯಾವ ರೀತಿ ವಶಪಡಿಸಿಕೊಂಡ ಮತ್ತು ನಾಶಪಡಿಸಿದನೆಂದರೆ ಆ ನಾಡಿನ ಜನರು ತಮ್ಮ ದೇಹ ಗಳನ್ನು ಮತ್ತು ಆಸ್ತಿಯನ್ನು ಅವನಿಗೆ ಶರಣಾಗತಗೊಳಿಸಿದರು. ಆದಾಗ್ಯೂ ಅವರ ಆಯುಧಗಳನ್ನು ಅವರಿಗೇ ಬಿಟ್ಟ. ಏಕೆಂದರೆ, ಅವುಗಳನ್ನು ಒಯ್ಯುವುದನ್ನು ತಪ್ಪಿಸಲು ಅವನಿಗೆ ಸಾಧ್ಯವಿರಲಿಲ್ಲ.

ಬಲ್ಲಾಗೇಟ್‌ನ ಪ್ರಾಂತಕ್ಕೆಲ್ಲ ತಾನು ಅಧಿಪತಿಯಾದ ಮೇಲೆ ಅವನು ದುರೀ[9] ನದಿಯನ್ನು ದಾಟಿದ. ಅದು ಬಲ್ಲಾಗೇಟ್ ಹಾಗೂ ಬಿಸ್ನಗದ ರಾಜನ ಪ್ರದೇಶಗಳ ಗಡಿರೇಖೆಯಾಗಿದೆ. ತನ್ನ ಸಾಗುವಿಕೆಯನ್ನು ವಿರೋಧಿಸಲು ಯಾರೂ ಇಲ್ಲದಂತೆ ಅವನು ಆ ನದಿಯನ್ನು ಹರಗೋಲುಗಳಲ್ಲಿ ದಾಟಿದ. ಆ ಸಮಯದವರೆಗೆ (ನಂತರದ) ಬಿಸ್ನಗ ರಾಜ್ಯದಲ್ಲೆಲ್ಲ ನಾಗುಂಡಿವ್[10] ಹೊರತು ಬೇರೆಲ್ಲೂ ಜನವಸತಿ ಇರಲಿಲ್ಲ. ಅದು ಭದ್ರವಾಗಿದ್ದುದರಿಂದ, ಅವನ ಲಿಸ್ಬನ್ ಆಗಿದ್ದ ಅದನ್ನು ಬಿಟ್ಟರೆ ಅವನಿಗೆ ಬೇರೆ ದುರ್ಗ ಇಲ್ಲದುದರಿಂದ ಬಿಸ್ನಗದ ರಾಜ[11] ಅಗ ಅದರಲ್ಲಿ ತನ್ನ ವಿನಾಶಕ್ಕೆ ಕಾಯ್ದಿದ್ದ.

ದಿಲ್ಲಿಯ ರಾಜ ಹರಗೋಲುಗಳಲ್ಲಿ[12] ದಾಟಿದ ನದಿಯಿಂದ ಆ ನಗರಕ್ಕೆ ಇಪ್ಪತ್ತೈದು ಹರದಾರಿಗಳು ಇದ್ದು ಎಲ್ಲ ಬಯಲುಸೀಮೆ. ಅವನು ಅವುಗಳಲ್ಲಿ ತನ್ನ ಠಾಣೆ ಹೂಡಲು ಒಳ್ಳೆಯದೆಂದು ಭಾವಿಸಿದ. ನದಿಯುದ್ದಕ್ಕೂ ಬಯಲಿನಲ್ಲಿನ ನೀರನ್ನು ತನ್ನ ಜನರು ಕುಡಿಯಲೆಂದು ಅಲ್ಲಿ ತನ್ನ ಠಾಣೆ ಹೂಡುವುದೊಳಿತೆಂದು ಅವನಿಗೆ ತೋರಿತು. ಬೇಸಿಗೆ ಋತುವಿನಿಂದಾಗಿ ಆ ಸಮಯದಲ್ಲಿ ಅಲ್ಲಿ ನೀರಿನ ಬರವಿತ್ತು. ಬಯಲಿನಲ್ಲಿ ಇದ್ದ ಕೆಲವೇ ಚಿಕ್ಕ ಕೆರೆಗಳ ನೀರು ಅವನ ಸೈನಿಕರಿಗೆ, ಕುದುರೆಗಳು ಮತ್ತು ಆನೆಗಳಿಗೆ ಬತ್ತದಂತುಳಿದು ಹತ್ತು ದಿನಗಳವರೆಗೆ ಸಾಲುವಂತಿರ ಲಿಲ್ಲ. ಆ ಕಾರಣದಿಂದ, ತಾನು ತಂದಂಥ ದೊಡ್ಡ ಸೈನ್ಯಕ್ಕೆ ಸಾಕಾಗುವಷ್ಟು ಮಳೆ ಹೊಲಗಳಲ್ಲಿ ಮತ್ತು ಕೆರೆಗಳಲ್ಲಿ ಬೀಳುವವರೆಗೆ ಅವನು ಕೆಲವು ದಿನ ನದಿಯ ದಂಡೆಯ ಮೇಲೆ ಬಿಡಾರ ಬಿಟ್ಟ. ಸಮಯ ಬಂದಾಗ ಅವನು ತನ್ನ ಠಾಣೆ ಎಬ್ಬಿಸಿ ಆನಾಗುಂಡಿ ನಗರ ಕಣ್ಣಿಗೆ ಬೀಳುವಂತೆ ತನ್ನ ವ್ಯೂಹವನ್ನು ನಿಲ್ಲಿಸಿದ.

ಮತ್ತು ಬಿಸ್ನಗದ ರಾಜ ಅವನ ಮಹಾಬಲವನ್ನು ಮತ್ತು ಅವನು ತನ್ನೊಂದಿಗೆ ಎಷ್ಟು ಸೈನಿಕರನ್ನು ಕರೆತಂದಿದ್ದನೆಂಬುದನ್ನು ಕಂಡು ಪ್ರವೇಶಿಸಲು ಕಠಿಣವಾಗಿದ್ದ ನಗರವನ್ನು ತ್ಯಜಿಸಲು ನಿರ್ಧರಿಸಿದ.ಅದಕ್ಕೆ ಹೊಂದಿಕೊಂಡೆ ನಾಗುಂಡಿ ಎಂಬ ನದಿ ಆಗಲೂ ಇತ್ತು ಮತ್ತು ಈಗಲೂ ಇದೆ. ಆದುದರಿಂದಲೆ ನಗರಕ್ಕೆ ನಾಗುಂಡಿ ಎಂಬ ಹೆಸರು ಮತ್ತು ನಗರಕ್ಕೆ ಅದರಿಂದಲೆ ಆ ಹೆಸರು ಬಂದಿದೆಯೆಂದು ಹೇಳುತ್ತಾರೆ. ಮತ್ತು ಅವನು ನದಿತೀರದ ಮೇಲಿದ್ದ ಮತ್ತು ಬಹಳಷ್ಟು ಆಹಾರ ಧಾನ್ಯ ಮತ್ತು ನೀರು ಇರುವ ಕ್ರಿನವಾಟ ಎಂಬ ಹೆಸರಿನ ದುರ್ಗಕ್ಕೆ ಪಲಾಯನ

ಗೈದ. ಆದರೆ ಅಲ್ಲಿ ತನ್ನ ಜೊತೆಗಿದ್ದ ಐವತ್ತು ಸಾವಿರದಷ್ಟು ಜನರ ಜೀವನಾಧಾರಕ್ಕೆ ಸಾಕಾಗುವಷ್ಟಿರಲಿಲ್ಲ. ಆದುದರಿಂದ ರಾಜ ಐದು ಸಾವಿರ ಜನರನ್ನು ಅವರ ಆಸ್ತಿಯೊಂದಿಗೆ ಆಯ್ದು ಆ ದುರ್ಗದಲ್ಲಿ ಆಶ್ರಯ ಪಡೆದ. ಮಿಕ್ಕವರಿಗೆ ತನ್ನ ರಾಜ್ಯದ ಇನ್ನೊಂದು ಭಾಗದಲ್ಲಿದ್ದ ಇನ್ನೊಂದು ದುರ್ಗಕ್ಕೆ ಹೋಗಲು ಆಜ್ಞೆಯಿತ್ತ.

ತನ್ನ ಆಹಾರ ಸಾಮಗ್ರಿಗಳ ಬಗೆಗೆ ಕ್ರಮ ತೆಗೆದುಕೊಂಡನಂತರ ದುರ್ಗದಲ್ಲಿ ಆಶ್ರಯಿತನಾದ ಅವನಿಗೆ ತನ್ನೊಂದಿಗೆ ಇದುವರೆಗಾಗಲೆ[13] ಹನ್ನೆರಡು ವರ್ಷ ಯುದ್ಧದಲ್ಲಿ ತೊಡಗಿದ್ದ ದಿಲ್ಲಿಯ ರಾಜನ ಸೈನಿಕರಿಂದ ಎಲ್ಲ ಕಡೆಯಿಂದಲೂ ಮುತ್ತಿಗೆ ಬಿತ್ತು. ಈ ಮುತ್ತಿಗೆಗಾಗಿ ಅಲ್ಪ ಕಾಲ ವ್ಯಯವಾಯಿತು. ಏಕೆಂದರೆ ದುರ್ಗದೊಳಗಿದ್ದ ಜನರು ಅಸಂಖ್ಯರಾಗಿದ್ದು ಅಲ್ಪಕಾಲದಲ್ಲಿಯೆ ತಮ್ಮ ಆಹಾರಸಾಮಗ್ರಿಗಳನ್ನು ಮುಗಿಸಿದ್ದರು.

ಆಗ ಬಿಸ್ನಗದ ರಾಜ ತನ್ನೊಂದಿಗೆ ದುರ್ಗದಲ್ಲಿದ್ದವರನ್ನು ಮುಗಿಸದೆ ಜಾಗ ಕಿತ್ತುವದಿಲ್ಲೆಂಬ ದಿಲ್ಲಿ ರಾಜನ ಸೈನಿಕರ ನಿರ್ಧಾರ ಕಂಡು ಅವರೆಲ್ಲರನ್ನುದ್ದೇಶಿಸಿ ಭಾಷಣ ಮಾಡಿದ. ತನ್ನದೇ ರಾಜ್ಯಗಳಲ್ಲಿ[14] ದಿಲ್ಲಿಯ ಸೈನಿಕರ ರಾಜ ಮಾಡಿದ ನಾಶವನ್ನು ಮತ್ತು ಆದರಿಂದ ತೃಪ್ತನಾಗದೆ ಹೇಗೆ ಈ ದುರ್ಗವನ್ನು ಮುತ್ತಿರುವನೆಂಬುದನ್ನು ಅವರೆದುರು ಬಿಚ್ಚಿಟ್ಟ. ಆದುದರಿಂದ ತಮಗೆ ಮರಣವನ್ನು ಬಿಟ್ಟು ಎದುರು ನೋಡಲು ಏನೂ ಇಲ್ಲ, ಏಕೆಂದರೆ ಈಗಾಗಲೆ ದುರ್ಗದಲ್ಲಿ ನೀರಿಲ್ಲ ಮತ್ತು ತಿನ್ನಲು ಏನೂ ಇಲ್ಲ ಎಂದು ನುಡಿದ. ಮತ್ತು ನಾಗುಂದಿ ನಗರದಲ್ಲಿರುವ ಐವತ್ತು ಸಾವಿರ ಜನರನ್ನೇ ತನ್ನ ಸಂಗಾತಿಗಳು ಮತ್ತು ನಿಜವಾದ ಮಿತ್ರರೆಂದು ಆಯ್ಕೆ ಮಾಡಿದ್ದಾಗಿ (ತಿಳಿಸಿ) ಅವರು ಜೀವನದಲ್ಲಿ ಅವನಿಗೆ ತೋರಿದ ನಿಷ್ಠೆಯನ್ನೆ ಮರಣದಲ್ಲಿಯೂ ಬದ್ಧರಾಗುವಂತೆ ಅವರಲ್ಲಿ ಮೊರೆಯಿಟ್ಟ. ಏಕೆಂದರೆ, ಆ ದಿನ ಅವನು ದಿಲ್ಲಿಯ ರಾಜನಿಗೆ ಯುದ್ಧ ಕೊಡಬಯಸಿದ್ದ. ತನ್ನ ರಾಜ್ಯ ಮತ್ತು ಪ್ರಭುತ್ವಗಳಲ್ಲಿ ಈ ದುರ್ಗ ಮತ್ತು ಅದರೊಳಗಿನ ಜನ ಬಿಟ್ಟು ಇನ್ನೇನೂ ಉಳಿದಿಲ್ಲ ಎಂದೂ ಹೇಳಿದ. ಆದುದರಿಂದ, ಶಸ್ತ್ರ ಧರಿಸಿ ತನ್ನೊಂದಿಗೆ ಯುದ್ಧದಲ್ಲಿ ಅಸುನೀಗಿ ತಮ್ಮೆಲ್ಲ ಭೂಮಿಗಳನ್ನೆಲ್ಲ ದೋಚಿದ್ದ ಶತ್ರುವಿಗೆ ತಮ್ಮ ಪ್ರಾಣಗಳನ್ನು ಅರ್ಪಿಸುವಂತೆ ಕೇಳಿಕೊಂಡ.

ಇದರಿಂದ ಎಲ್ಲರೂ ತೃಪ್ತರೂ ಸಂತೋಷಭರಿತರೂ ಆಗಿ ಅಲ್ಪಕಾಲದಲ್ಲಿಯೆ ಎಲ್ಲರೂ ಶಸ್ತ್ರಸಜ್ಜಿತರಾದರು. ಅವರು ಹಾಗೆ ಸಿದ್ಧರಾದ ಮೇಲೆ ರಾಜ ಇನ್ನೊಂದು ಭಾಷಣಗೈಯ್ಯುತ್ತ "ನಾವು ಯುದ್ಧ ಸೇರುವ ಮುನ್ನ ನಾವು ನಮ್ಮ ಪುತ್ರರು, ಪುತ್ರಿಯರು ಮತ್ತು ಪತ್ನಿಯರೊಂದಿಗೆ ಇನ್ನೊಂದು ಯುದ್ಧ ಮಾಡಬೇಕು. ಏಕೆಂದರೆ, ಅವರನ್ನು ವೈರಿ ತನ್ನ ಉಪಭೋಗಕ್ಕೆ ಒಯ್ಯಲು ಬಿಡುವುದು ಒಳಿತಲ್ಲ. ಮತ್ತು ನನ್ನ ಪತ್ನಿ ಮತ್ತು ಪುತ್ರರೊಂದಿಗೆ ವಿಚಾರಿಸಿಕೊಳ್ಳುವಲ್ಲಿ ನಾನೇ ಮೊದಲಿಗನಾಗುವೆ" ಎಂದು ಹೇಳಿದ. ಈ ಸಮಯಕ್ಕೆ ಅವರೆಲ್ಲ ದುರ್ಗದ ಮುಂದಿರುವ ವಿಶಾಲ ಬಯಲು

ಸ್ಥಳದಲ್ಲಿ ನಿಂತಿದ್ದರು. ಮತ್ತು ಅಲ್ಲಿಯೆ ರಾಜನ ಕೈಯಿಂದ ಅವನ ಐವತ್ತಕ್ಕೂ ಅಧಿಕ ಪತ್ನಿಯರು, ಕೆಲವು ಪುತ್ರರು ಮತ್ತು ಚಿಕ್ಕ ಪುತ್ರಿಯರು ಹತರಾದರು. ಹೆಂಡರು ಮತ್ತು ಯುದ್ಧ ಮಾಡಲಾರದ ಮಕ್ಕಳಿದ್ದ ಎಲ್ಲರೂ ತಮ್ಮವೇ ಕೈಗಳಿಂದ ಹಾಗೆಯೆ ಮಾಡಿದರು.

ಎಲ್ಲರೂ ಅಸಹ್ಯಪಟ್ಟ ಈ ಶೋಭನಪ್ರಸ್ತ ಸಮಾರಂಭ ಮುಗಿದ ಮೇಲೆ ಅವರು ದುರ್ಗದ ದ್ವಾರಗಳನ್ನು ತೆರೆದರು. ತಕ್ಷಣ ವೈರಿಗಳು ಒಳನುಗ್ಗಿ ಒಂದು ಮನೆಗೆ ಹಿಂದೆ ಸರಿದ ಆರು ವೃದ್ಧರನ್ನುಳಿದು ಎಲ್ಲರನ್ನೂ ಕೊಂದರು. ಇವರನ್ನೂ ಸೆರೆಹಿಡಿದು (ದಿಲ್ಲಿಯ) ರಾಜನ ಮುಂದೆ ತಂದು ನಿಲ್ಲಿಸಿದರು. ರಾಜ ಅವರಾರು ಮತ್ತು ಹೇಗೆ ಪಾರಾದರೆಂದು ಕೇಳಲಾಗಿ ಅವರು ಯಾರೆಂಬುದನ್ನು ಹೇಳಲಾಯಿತು. ಅದರಿಂದ ರಾಜ ಅತೀವ ಸಂತಸಗೊಂಡ. ಏಕೆಂದರೆ, ಅವರಲ್ಲೊಬ್ಬ ರಾಜ್ಯದ ಮಂತ್ರಿ, ಇನ್ನೊಬ್ಬ ಭಂಡಾರಿ ಮತ್ತು ಇತರರು ಅದರಲ್ಲಿ ಉನ್ನತಾಧಿಕಾರಿಗಳಾಗಿದ್ದರು. ರಾಜ ಅವರನ್ನು ಬಿಸ್ನಗ ರಾಜನ ನಿಧಿಗಳ ಬಗೆಗೆ ಪ್ರಶ್ನೆ ಮಾಡಿದ ಮತ್ತು ದುರ್ಗದ ನೆಲ ಮನೆಗಳಲ್ಲಿ ಹೂಳಲಾಗಿದ್ದ ಸಂಪತ್ತನ್ನು ಅವನಿಗೆ ವಶಪಡಿಸಲಾಯಿತು. ಅಲ್ಲದೆ, ಅವನಿಗೆ ಅವರು ಆಗಿನ ಬಿಸ್ನಗ ರಾಜನ ಆದಾಯಗಳ ಬಗೆಗೂ ಮಾಹಿತಿ ನೀಡಿದರು. ರಾಜನಿಗೆ ಎಲ್ಲ ತಿಳಿದ ಮೇಲೆ ಅವನು ಅವುಗಳನ್ನು ತನ್ನ ದಳಪತಿಯೊಬ್ಬನ ವಶಕ್ಕೊಪ್ಪಿಸಿದನು ಮತ್ತು ಇನ್ನೊಬ್ಬ ದಳಪತಿಯ ವಶಕ್ಕೆ ಮೃತ ದೇಹಗಳನ್ನೊಪ್ಪಿಸಿ ಅವುಗಳನ್ನು ಸುಡುವಂತೆ ಆಜ್ಞಾಪಿಸಿದನು. ಆ ಆರು ಜನರ ಬಿನ್ನಹದ ಮೇರೆಗೆ ರಾಜನ ದೇಹವನ್ನು ಒಳ್ಳೆಯ ಗೌರವಯುತವಾಗಿ ನಾಗುಂದಿ ನಗರಕ್ಕೆ ಸಾಗಿಸಲಾಯಿತು. ಅಂದಿನಿಂದ ಮುಂದೆ ಆ ಊರು ರಾಜರ ಸ್ಮಶಾನವಾಯಿತು. ಅವರಲ್ಲಿ ಇಂದಿಗೂ ಈ ರಾಜನನ್ನು ಸಂತನೆಂದು ಪೂಜಿಸುತ್ತಾರೆ.

## ಅಡಿಟಿಪ್ಪಣಿಗಳು

1 ಈ "ಸಾರ್ವತ್ರಿಕ ವಿನಾಶ ಸ್ಪಷ್ಟವಾಗಿಯೆ ಮುಹಮ್ಮದ ತಘಲಕ್‌ನಿಂದ (ಆನೆಗುಂದಿಯ) ಸ್ವಾಧೀನವನ್ನು ಸೂಚಿಸುತ್ತದೆ.

2 (ಮೇಲೆ ಪು. ೮ ನೋಡಿರಿ), ದಿನಾಂಕ ೧೩೩೦ ಆಗಬೇಕು. ನೂನಿಜ್ ಇಲ್ಲಿ ಒಂದು ಶತಮಾನ ತಪ್ಪಾಗಿದ್ದಾನೆ.

3 ದಿಲ್ಲಿ.

4 ವಿದೇಶಿಯರಲ್ಲಿ ಇದು ಸಾಮಾನ್ಯ ತಪ್ಪು. ಸರಿಯಾಗಿ ಹೇಳಬೇಕಾದರೆ ಗುಜರಾತಿಗೇ ಕ್ಯಾಂಬೆ ಸೇರಿದೆ.

5 ದಿಲ್ಲಿಯ ಮುಹಮ್ಮದ ತಘಲಕ್.

6 ಪರ್ಶಿಯಾ (ಮೇಲೆ, ಪು. ೧೦).

7 ಇದು ಬಿಜಾಪುರದ ಆದಿಲ್‌ಖಾನ ಅಥವಾ ಆದಿಲ್‌ಶಾಹನ ಪೋರ್ತುಗೀಜ ಭಾಷಾಂತರ. “ಇಡಲ್‌ಕ್ಷಾ” ಈ ಕೊನೆಯ ಪದವಿಯನ್ನು ಬಿಂಬಿಸುತ್ತದೆ.

8 ಅಂದರೆ ಬಾಲಾಘಾಟ ಅಥವಾ ಘಾಟುಗಳ ಮೇಲಿನ ಪ್ರಾಂತ. “ಬಾಲಾಗೇಟ್ ಮತ್ತು ಡೆಕನ್ ಎಂಬ ಮೇಲಣ ಉನ್ನತ ಭೂಮಿ ಬಹಳ ಸಮತಟ್ಟು ಮತ್ತು ಕಟ್ಟಲು ಚನ್ನಾಗಿದೆ ಮತ್ತು ಜನವಸತಿಯಿದ್ದು ಹಲವಾರು ರಾಜರು ಮತ್ತು ಮಂಡಲಾಧಿಪತಿಗಳಲ್ಲಿ ಹಂಚಲಾಗಿದೆ” (ಲಿನ್‌ಸ್ಕೊಟೆನ್, ೧.೬೫). ಕೊರಿಯಾ ಭಾರತದ ಈ ಪ್ರದೇಶವನ್ನು “ಬಿಸ್ನಗ, ಬಾಲಾಗೇಟ್, ಮತ್ತು ಕ್ಯಾಂಬೆ”ಗಳಾಗಿ ವಿಭಜಿಸುತ್ತಾನೆ.

9 ಈ ವರ್ಣನೆ ಮಲಪ್ರಭಾ ನದಿಗೆ ಚನ್ನಾಗಿ ಅನ್ವಯಿಸುತ್ತದೆ, ಮತ್ತು “ದುರೀ” ಧಾರವಾಡವನ್ನು ಬಿಂಬಿಸುತ್ತದೆ.

10 ಆನೆಗುಂದಿ.

11 ಅವನು ಆ ಕಾಲಕ್ಕೆ ಆನೆಗುಂದಿಯ ದೊರೆ ಅಥವಾ ರಾಜ ಮಾತ್ರನಾಗಿದ್ದ. ವಿಜಯನಗರ ಇನ್ನೂ ಸಂಸ್ಥಾಪಿತವಾಗಿರಲಿಲ್ಲ.

12 ಈ ಹರಗೋಲುಗಳನ್ನು ಪ್ಯಾಸ್ ವರ್ಣಿಸಿದ್ದಾನೆ (ಮೇಲೆ ಪು. ೨೫೯ ನೋಡಿರಿ).

13 ನಮಗೆ ಗೊತ್ತಿರುವ ವಿಶೇಷ ಯುದ್ಧವಾವುದೂ ಆನೆಗುಂದಿಯೊಂದಿಗೆ ಜರುಗಲಿಲ್ಲ. ಆದರೆ, ಆ ಸ್ಥಳದ ರಾಜ ಒಂದೆಡೆ ಹಿಂದೂ ಹೊಯ್ಸಳ ಬಲ್ಲಾಳರು ಮತ್ತು ವಾರಂಗಲ್ಲಿನ ರಾಜರು ಮತ್ತು ಗುಜರಾತ ಮತ್ತು ಇನ್ನೊಂದೆಡೆ ದಿಲ್ಲಿಯ ಮುಹಮ್ಮದೀಯ ದಾಳಿಗಾರರ ನಡುವೆ ನಡೆದ ಯುದ್ಧದಲ್ಲಿ ತಾನು ಸ್ವತಃ ಭಾಗಿಯಾಗದಿದ್ದರೂ ಆದರಿಂದ ಅವನು ಪ್ರತ್ಯಕ್ಷವಾಗಿ ಬಾಧಿತನಾಗಿರುವ ಸಾಧ್ಯತೆ ಬಹಳವಿದೆ.

14 ಪೀಠಿಕೆ, ಪು. ೧೩ ನೋಡಿರಿ. “ಅವನ ರಾಜ್ಯಗಳು” ಮುಹಮ್ಮದ ತಘಲಕ್‌ನ ಪ್ರಾಂತಗಳಿಗೆ ಸಂಬಂಧಿಸಿದೆ. ಅವನ ಬರ್ಬರತೆಗಳು ವಿಶಾಲ ಪ್ರದೇಶಗಳ ಧ್ವಂಸ ಹಾಗೂ ನಿರ್ಜನವಾಗಿಸುವಲ್ಲಿ ಪರಿಣಮಿಸಿದವು.

## ಅಧ್ಯಾಯ ೨

(ದಿಲ್ಲಿಯ) ರಾಜ ಬಿಸ್ನಗದ ರಾಜನನ್ನು ಕೊಂದು, ಅವರನ್ನು ಸಂಪೂರ್ಣವಾಗಿ ಉಚ್ಚಾಟನೆಗೈದು, ಅವನ ಪ್ರಾಂತಗಳನ್ನೆಲ್ಲ ತನ್ನ ವಶಕ್ಕೆ ತೆಗೆದುಕೊಂಡು, ಅವುಗಳನ್ನು ಸಂರಕ್ಷಿಸಲು ಯಾರೂ ಇಲ್ಲವಾದ ಮೇಲೆ ಏನು ಮಾಡಿದನೆಂಬುದನ್ನು ಕುರಿತು.

ರಾಜ ತನ್ನೆಲ್ಲ ಇಚ್ಛೆಗಳನ್ನು ಈಡೇರಿಸಿಕೊಂಡ ಬಳಿಕ ತನ್ನ ವಿರುದ್ಧ ದಂಗೆ ಯೆದ್ದ ಕೆಲವು ಗ್ರಾಮ ಮತ್ತು ಪಟ್ಟಣಗಳನ್ನು ನಾಶಪಡಿಸಲು ಮತ್ತು ಸಂರಕ್ಷಣೆ ಬೇಡಿದವರಿಗೆ ಅದನ್ನು ಕೊಡಲು ಆಜ್ಞಾಪಿಸಿದ. ಆ ರಾಜ್ಯದ ಮೇಲೆ ಅಗಲೆ ಹನ್ನೆರಡು ವರ್ಷ[1] ಯುದ್ಧ ಮಾಡಿದ್ದು (ಹಿಂದೂ)ರಾಜನ ಮರಣಾನಂತರ ಅವನು ಆ ದುರ್ಗದಲ್ಲಿ ಎರಡು ವರ್ಷ ನಿಂತ. ಅವನು ಐನೂರು ಹರಿದಾರಿಗಿಂತ ದೂರವಿದ್ದ ತನ್ನ ಮನೆಯಿಂದ ಬಹು ದೂರವಾಗಿದ್ದ. ಮತ್ತು ಅವನ ಪಡೆಗಳೆಲ್ಲ ಚದುರಿದ್ದು ಅವನು ಈ ಮೊದಲು ಪಡೆದಿದ್ದ ನಾಡೆಲ್ಲ ಅವನ ವಿರುದ್ಧ ದಂಗೆಯೆದ್ದ ಸುದ್ದಿ ಬಂತು. ಇದು ತಿಳಿದ ಕೂಡಲೆ ರಾಜ ರಾಜ್ಯದಲ್ಲಿಯೆ ಅತಿ ಭದ್ರವಾಗಿದ್ದ ಈ ದುರ್ಗದಲ್ಲಿ ಎಂಥ ಪರಿಸ್ಥಿತಿಯಲ್ಲೂ ಅದರ ಸಂರಕ್ಷಣೆಗಾಗಿ ಸಾಕಷ್ಟು ಆಹಾರಸಾಮಗ್ರಿ ಬಿಟ್ಟು ತನ್ನ ಜನರನ್ನು ಕೂಡಿಹಾಕಲು ಕಳಿಸಿದ. ಅವನು ರಾಜ್ಯದ ದಳಪತಿ ಮತ್ತು ಮಂಡಲಾ ಧಿಪತಿಯಾಗಿ ಎನಿಬಿಕ್ವಿಮೆಲಿ[2] ಎಂಬ ಮೂರನನ್ನು, ಅವನೊಂದಿಗೆ ಅನೇಕ ಸೈನಿಕ ರನ್ನು ಬಿಟ್ಟು ನಡೆದ. ಎಲ್ಲರೂ ತೃಪ್ತರಾಗುವಂತೆ ಧಾರಾಳ ಕಾಣಿಕೆಗಳನ್ನು ಮತ್ತು ಭೂಮಿಗಳನ್ನು ನೀಡಿ ಅವರಲ್ಲಿ ಪ್ರತಿಯೊಬ್ಬನಿಗೂ ಪ್ರತ್ಯೇಕವಾಗಿ ಬಹಳ ಪ್ರೀತಿ ತೋರಿದ. ಅವರು ಕೂಡಲೆ ತಮ್ಮ ದೇಶಕ್ಕೆ ಹಿಂದಿರುಗುವ ಆಶೆ ಕೈಬಿಟ್ಟು ಅಲ್ಲಿಯೆ ತಮ್ಮ ಮನೆಗಳನ್ನು ಮಾಡಿಕೊಂಡರು.

### ಅಡಿಟಿಪ್ಪಣಿಗಳು

1 ಮೇಲೆ ಪು. ೨೯೪, ಟಿಪ್ಪಣಿ ೧ ನೋಡಿರಿ.

2 ಮುಂದೆ 'ಮಿಲಿಕ್ವಿ ನಿಬಿ' ಮತ್ತು 'ಮೆಲಿಕ್ ನೆಬೆ' ಎಂದು ಬರೆಯಲಾಗಿದೆ. ಅದು ರಾಜನ ಪ್ರತಿನಿಧಿ 'ಮಲಿಕ್ ನಾಯಿಬ್'ನಿಗಾಗಿ ಬಳಸಿದ್ದು ಸ್ಪಷ್ಟ.

## ಅಧ್ಯಾಯ ೩

**ದಿಲ್ಲಿಯ ರಾಜ ತನ್ನ ಸೈನಿಕರೊಂದಿಗೆ ಹೇಗೆ ತೆರಳಿದ ಮತ್ತು ದುರ್ಗದಲ್ಲಿ ಹಿಡಿಯಲಾದ ಆರು ಸೆರೆಯಾಳುಗಳನ್ನು ತನ್ನ ರಾಜ್ಯಕ್ಕೆ ಒಯ್ದು ಇತ್ಯಾದಿ.**

ರಾಜ ತನಗೆ ಬಂದ ಸುದ್ದಿಯ ಪರಿಣಾಮವಾಗಿ ಬಿಸ್ನಗ ರಾಜ್ಯವನ್ನು ಮೆಲಿಕ್ವಿನಿಬಿಯ ಅಧಿಪತ್ಯದಲ್ಲಿ ಬಿಟ್ಟು ತನ್ನ ರಾಜ್ಯಕ್ಕೆ ತೆರಳಿದ. ಅವನು ಹೊರ ನಡೆದದ್ದು ದೇಶದ ತುಂಬ ಗೊತ್ತಾದಾಗ ಗುಡ್ಡಗಳಿಗೆ ಓಡಿ ಪಾರಾಗಿದ್ದವರು ತಮ್ಮ ಮನಸ್ಸಿನ ವಿರುದ್ಧ ಮತ್ತು ಭೀತಿಯಿಂದ ತಮ್ಮ ನಗರಗಳಿಗೆ ಮತ್ತು ಗ್ರಾಮಗಳಿಗೆ ನಿಷ್ಠೆಯ ಆಣೆ ಮಾಡಿದ್ದ ಇತರರೊಂದಿಗೆ ದಳಪತಿ ಮಿಲೀಕ್ ನೆಬಿ ವಿರುದ್ಧ ದಂಗೆ ಯೆದ್ದರು ಮತ್ತು ಅವನಲ್ಲಿಗೆ ಆಹಾರ ಸಾಮಗ್ರಿಗಳನ್ನು ಹೋಗಗೊಡದಂತೆ ದುರ್ಗವನ್ನು ಮುತ್ತಿದರು. ತಮ್ಮ ಮೇಲೆ ಹೇರಲಾದ ಕರಗಳನ್ನೂ ಸಂದಾಯ ಮಾಡಲಿಲ್ಲ. ಈ ದೇಶದಲ್ಲಿ ಎಷ್ಟು ಕಡಿಮೆ ಲಾಭವಿದೆಯೆಂಬುದನ್ನು, ತನ್ನ ಆಜ್ಞೆ ಯನ್ನು ಎಷ್ಟು ನಿಷ್ಕೃಷ್ಟವಾಗಿ ಪಾಲಿಸುತ್ತಾರೆಂಬುದನ್ನು, ತನ್ನ ಪ್ರಭುವಾದ ರಾಜನಿಂದ ಕಳಿಸಲ್ಪಟ್ಟ ಸಹಾಯ ಎಷ್ಟು ದೂರವಿದೆಯೆಂಬುದನ್ನು ಅರಿತ ಮೆಲಿಕ್ವಿನಿಬಿ ರಾಜನಲ್ಲಿಗೆ ಶೀಘ್ರ ಕಳಿಸಿಕೊಟ್ಟು ಹೇಗೆ ನಾಡೆಲ್ಲ ತನ್ನ ವಿರುದ್ಧ ದಂಗೆಯೆದ್ದಿದೆ, ಹೇಗೆ ಪ್ರತಿ ಯೊಬ್ಬನೂ ತನಗಿಷ್ಟ ಬಂದುದರ ಪ್ರಭುವಾಗಿದ್ದಾನೆ. ತನ್ನ ಪಕ್ಷದಲ್ಲಿ ಯಾರೂ ಇಲ್ಲ ಎಂಬುದನ್ನು ಮತ್ತು ಮಹಾಪ್ರಭುಗಳು ಇಂಥ ಸ್ಥಿತಿಯಲ್ಲಿ ಏನು ಮಾಡಿದರೆ ಒಳಿತೆಂಬುದನ್ನು ನಿರ್ಣಯಿಸಬೇಕೆಂದು ನಿವೇದಿಸಿದ. ರಾಜ ಈ ಸುದ್ದಿ ಕೇಳಿದಾಗ ಮಂತ್ರಾಲೋಚಿಸಿದ. ತನ್ನ ರಾಜ್ಯದ ವರಿಷ್ಠರಿಗೆ ಬಿಸ್ನಗ ರಾಜ್ಯದಲ್ಲಿ ತನ್ನ ದಳಪತಿ ಹಾಗೂ ಮಂಡಲಾಧಿಪತಿಯಾಗಿದ್ದ ಮೆಲಿನೆಬಿಕ್ವಿಯಿಂದ ಬಂದ ಪತ್ರ ಮತ್ತು ಸಂದೇಶದ ಬಗೆಗೆ, ಅವನ ಆಜ್ಞೆಯನ್ನು ಆ ದೇಶದ ದೊರೆಗಳು ಎಷ್ಟು ನಿಕೃಷ್ಟವಾಗಿ ಪಾಲಿಸುತ್ತಿದ್ದರೆಂಬ ಬಗೆಗೆ, ಯಾವುದೆ ಅಧಿಕಾರ ಪಡೆದಾಕ್ಷಣ ಹೇಗೆ ಪ್ರತಿಯೊಬ್ಬನೂ ತಾನು ಇಷ್ಟಪಟ್ಟವರ ಮೇಲೆ ರಾಜ ಮತ್ತು ಪ್ರಭುವಾಗುತ್ತಿದ್ದನೆಂಬ ಬಗೆಗೆ, ಅವರಲ್ಲಿ ನ್ಯಾಯವೆ ಉಳಿದಂತಾಗಿರದ ಬಗೆಗೆ, ಅವರು ಯಾರ ಆಜ್ಞಾಧಾರಕರೂ ಆಗಬಯಸದ ಬಗೆಗೆ ಅರುಹಿದ. ಅವರಿಗೆ ಅತ್ಯುತ್ತಮವೆಂದು ತೋರುವುದಾವುದು ಮತ್ತು ಇಂಥ ಪರಿಸ್ಥಿತಿಯಲ್ಲಿ ಇಷ್ಟೊಂದು ಸುಂದರ ಹಾಗೂ ಶ್ರೀಮಂತವಾದ, ಅದರ ಸ್ವಾಧೀನಕ್ಕಾಗಿ ಎಷ್ಟೊಂದು ಶ್ರಮ, ಹಣ, ಮತ್ತು ತಮ್ಮ ಜನರ ಪ್ರಾಣ ತೆತ್ತ ಬೇಕಾದ ಪ್ರದೇಶವನ್ನು ತಾನು ಕಳೆದುಕೊಳ್ಳದಿರಲು ತಾವು ಏನು ಮಾಡಬೇಕು ಮತ್ತು ಮಾಡಬಲ್ಲರು ಎಂದು ಅವರನ್ನು (ಕೇಳಿದ) ? ರಾಜ ತನ್ನ ಸೆರೆಯಾಳಾಗಿದ್ದ ಆರು ಜನರನ್ನು ಕರೆಯಿಸಿ ಆ ಸಮಯದಲ್ಲಿ ಬಿಸ್ನಗ ರಾಜನಿಗೆ ಹತ್ತಿರದ ಸಂಬಂಧಿ

ಅಥವಾ ಯಾವುದೆ ರೀತಿಯಲ್ಲಿ ಸಂಬಂಧಿಯಾಗಿದ್ದವನು ಯಾರೆಂಬುದನ್ನು ತಿಳಿದು ಕೊಳ್ಳಬೇಕೆಂದು ಎಲ್ಲ ಸಮಾಲೋಚಕರು ನಿರ್ಣಯಿಸಿದರು. ಹೀಗೆ ಪ್ರಶ್ನಿಸಲಾಗಿ, ತಾನು ಸೆರೆಹಿಡಿದಿದ್ದ ಆರು ಜನರಲ್ಲಿ ಒಬ್ಬನನ್ನು ಬಿಟ್ಟರೆ ರಾಜ್ಯ ಪಡೆಯುವ ಹಕ್ಕು ಯಾರಿಗೂ ಇಲ್ಲವೆಂದು ಮತ್ತು ಬಿಸ್ನಗದ ವಿನಾಶದ ಕಾಲಕ್ಕೆ ಆ ರಾಜ್ಯದ ಮಂತ್ರಿ ಯಾಗಿದ್ದವನೆ ಇವನು ಎಂದು ಕಂಡುಬಂತು. ಅವನು ರಾಜರಿಗೆ ರಕ್ತಸಂಬಂಧಿ ಯಾಗಿರಲಿಲ್ಲ, ಪ್ರಮುಖ ನ್ಯಾಯನಿರ್ಣಾಯಕ ಮಾತ್ರ. ಆದರೆ, ಮಹಾಪ್ರಭು ಅವನಿಗೇ ರಾಜ್ಯ ಕೊಡುವುದು ಒಳಿತು (ಎಂದು ತೋರುತ್ತದೆ). ಈ ಸಲಹೆ ರಾಜನಿಗೆ ಮತ್ತು ಅವರೆಲ್ಲರಿಗೂ ಮೆಚ್ಚಿಕೆಯಾಯಿತು.

ಕೂಡಲೆ ಆರೂ ಸೆರೆಯಾಳುಗಳನ್ನು ಬಿಡುಗಡೆ ಮಾಡಿ ಸ್ವತಂತ್ರಗೊಳಿಸ ಲಾಯಿತು. ಅವರಿಗೆ ಅನೇಕ ರೀತಿಯ ಪ್ರೀತಿಗೌರವ ನೀಡಲಾಯಿತು. ಮತ್ತು ಮಂಡಲಾಧಿಪತಿಯನ್ನು ರಾಜನ ಸ್ಥಾನಕ್ಕೆ ಹಾಗೂ ಭಂಡಾರಿಯನ್ನು ಮಂಡಲಾಧಿಪತಿಯ ಸ್ಥಾನಕ್ಕೆ ಏರಿಸಲಾಯಿತು.[1] ಮತ್ತು ಅವನು ಅವರಿಂದ ಮಾಂಡಲಿಕರಾಗಿ ವಿಧೇಯತೆಯಿಂದ ಇರುವ ಪ್ರಮಾಣ ಹಾಗೂ ವಚನಗಳನ್ನು ತೆಗೆದುಕೊಂಡ. ಅವರಿಗೆ ಅಪಾಯ ಮಾಡಬಯಸುವ ಯಾರಿಂದಲೂ ಸಂರಕ್ಷಿಸಲು ಬಹಳ ಅನುಯಾಯಿಗಳೊಂದಿಗೆ ಅವರನ್ನು ಕೂಡಲೆ ಹೊರಡಿಸಿ ತಮ್ಮ ನಾಡಿಗೆ ಕಳಿಸಿ ಕೊಡಲಾಯಿತು. ಈ ಆರು ಜನರು ಹೀಗೆ ನಾಗುಂದಿ ನಗರಕ್ಕೆ ತಮ್ಮ ಪಯಣ ಮುಗಿಸಿದಾಗ ಅವರು ಕಂಡದ್ದು ಹಾಳಾದ ಮನೆಗಳ ಮೇಲ್ಛಾವಣಿಗಳನ್ನು ಮತ್ತು ಕೆಲವು ಬಡಜನರು ವಾಸಿಸಿದ್ದ ಸ್ಥಳಗಳನ್ನು ಮಾತ್ರ.

ಅಲ್ಪ ಕಾಲದಲ್ಲಿಯೆ ದೇವರಾವ್[2] (ಏಕೆಂದರೆ ಅವನನ್ನು ಹಾಗೆಯೆ ಕರೆಯಲಾಗುತ್ತಿದ್ದುದು)ನ ಆಗಮನ ಮತ್ತು ಅವನನ್ನು ರಾಜನನ್ನಾಗಿ ಉನ್ನತೀಕರಿಸ ಲಾಗಿದೆ ಎಂಬುದು ನಾಡಿನಲ್ಲೆಲ್ಲ ಗೊತ್ತಾಯಿತು. ತಮ್ಮ ಧರ್ಮದವನಲ್ಲದ ಪ್ರಭುವಿಗೆ ಅಧೀನರಾದುದರ ಬಗೆಗೆ ತೀವ್ರವಾಗಿ ಭಾವನೆ ತಾಳಿದ್ದ ಜನರಿಗೆಲ್ಲ ಅದು ಒಳ್ಳೆಯ ತೃಪ್ತಿ ನೀಡಿತ್ತು. ಮತ್ತು ಇದುವರೆಗೆ ಆಳಿದವರೆಲ್ಲ ಈ ವ್ಯಕ್ತಿಯ ಸಂತತಿಯೆ. ಅವರು ಅವನಿಗಾಗಿ ಮಹೋತ್ಸವಗಳನ್ನು ಆಚರಿಸಿದರು, ಹಿಂದಿನ ರಾಜರು ವಶಪಡಿಸಿಕೊಂಡಿದ್ದ ಆದರೆ ತನಗೆ ಸೋತಿದ್ದ ಭೂಮಿಗಳನ್ನು ಅವನಿಗೆ ಬಿಟ್ಟುಕೊಟ್ಟರು ಮತ್ತು ರಾಜನೆಂದು ಅವನಿಗೆ ವಿಧೇಯತೆ ತೋರಿದರು. ದಳಪತಿ ಮೆಲಿಕ್ವೆನಿಬಿ ಇದನ್ನು ತಿಳಿದಾಗ ಸಂತೋಷ ಮತ್ತು ತೃಪ್ತಿಪಟ್ಟ ಮತ್ತು ತನ್ನ ಪ್ರಭುವಾಗಿದ್ದ ರಾಜ ಆಜ್ಞಾಪಿಸಿದಂತೆ ದುರ್ಗ ಮತ್ತು ರಾಜ್ಯ ಅವನಿಗೆ ಬಿಟ್ಟುಕೊಟ್ಟ. ಮತ್ತು ನಾಡನ್ನು ಅದರ ಯೋಗ್ಯ ಒಡೆಯನಿಗೆ ಬಿಟ್ಟುಕೊಟ್ಟು ಅತ್ಯಂತ ಶೀಘ್ರವಾಗಿ ತನ್ನನ್ನು ಸಿದ್ಧಗೊಳಿಸಿಕೊಂಡು ತೆರಳಿದ. ಅವನು ಹೋದ ಮೇಲೆ ತನ್ನ ಆಳಿಕೆ ಯನ್ನು ಪ್ರವೇಶಿಸಿದ ರಾಜಾ ದೇವರಾವ್ ಜನರನ್ನು ಮತ್ತು ದಂಗೆಯೆದ್ದಿದ್ದವರನ್ನು

ಸಾಂತ್ವನಗೊಳಿಸಲು ಮತ್ತು ಅವರನ್ನು ಸುರಕ್ಷಿತಗೊಳಿಸಲು ಯತ್ನಿಸಿದ. ಅವರ ವಿಶ್ವಾಸ ಗಳಿಸಲು ಅವನು ಅವರಿಗೆ ಅನೇಕ ಉಪಕಾರಗಳನ್ನು ಮಾಡಿದ ಮತ್ತು ಅವರ ದುರ್ಗಗಳಿಗೆ ಮತ್ತು ನಗರಗಳಿಗೆ ಪಯಣಿಸಿದ. ಇಂಥ ಕೆಲಸಕ್ಕೆ ಸೈನ್ಯ ಅಥವಾ ಬಲ ತನ್ನಲ್ಲಿರದ್ದರಿಂದ ಹಾಗೂ ಯುದ್ಧ ಮಾಡಲು ಯಾವುದೆ ಕಾರಣ ವಿರದ್ದರಿಂದ ಮತ್ತು ತಾನು ಬಹಳ ಮುದುಕನಾಗಿದ್ದುದರಿಂದಲೂ ಅವುಗಳನ್ನು ಮರಳಿ ಪಡೆಯಲು ತನಗೆ ಸಾಧ್ಯವಿಲ್ಲೆನ್ನುವುದು ಗೊತ್ತಿದ್ದುದರಿಂದ ಅವನು ಕಳೆದು ಹೋಗಿದ್ದ ನಾಡುಗಳ ಆಸೆ ಬಿಟ್ಟ.

## ಅಡಿಟಿಪ್ಪಣಿಗಳು

1 ಹಿಂದೆ, ಪು. ೧೯ ಮತ್ತು ಮುಂದಿನ ಪುಟಗಳು.

2 ದೇವರಾಯ, ಹರಿಹರ ದೇವರಾಯ, ಬುಕ್ಕ ದೇವರಾಯ, ಕೃಷ್ಣ ದೇವರಾಯ ಇತ್ಯಾದಿ ಹೀಗೆ ಇದು ವಿಜಯನಗರ ರಾಜರ ಸಾಮಾನ್ಯ ಉಪಾಧಿಯಾಗಿತ್ತು. ಈ ಪ್ರಥಮ ರಾಜನಿಗೆ ನೂನಿಜ್ ಯಾವ ಅಂಕಿತನಾಮವನ್ನೂ ಕೊಟ್ಟಿಲ್ಲ. ಅಂಕಿತ ನಾಮವನ್ನು ಪೀಠಿಕೆಯಾಗಿ ಸೇರಿಸದ ಒಂದನೆಯ ದೇವರಾಯ ಮತ್ತು ಎರಡನೆಯ ದೇವರಾಯ ಎಂಬ ಹೆಸರುಗಳಿಂದ ಚರಿತ್ರೆಗೆ ಗೊತ್ತಿರುವ ಇಬ್ಬರು ರಾಜರು ತರುವಾಯದಲ್ಲಿ ಆಗಿಹೋದರು.

## ಅಧ್ಯಾಯ ೪

## ರಾಜಾ ದೇಹೊರಾವ್‌ನಿಂದ ಬಿಸ್ನಗ ನಗರ ಹೇಗೆ ಕಟ್ಟಲಾಯಿತು

ರಾಜ ಆಗಿಂದಾಗ ತನ್ನ ರೂಢಿಯಂತೆ ಬೇಟೆಗಾಗಿ ಒಂದು ದಿನ ನಾಗುಂದಿವ್‌ನ ನದಿಯ ಆಚೆಗಿನ ಪರ್ವತಕ್ಕೆ ಹೋದ. ಅಲ್ಲಿ ಈಗ ಬಿಸ್ನಗ ನಗರವಿದೆ. ಆಗ ಅದು ಬಹಳ ಬೇಟೆ ಜರುಗುವ ನಿರ್ಜನ ಸ್ಥಳವಾಗಿದ್ದು ರಾಜ ಅದನ್ನು ತನ್ನ ಮನರಂಜನೆಗಾಗಿ ಕಾಯ್ದಿರಿಸಿಕೊಂಡಿದ್ದ. ಆ ದಿನ ಅವನು ತನ್ನ ನಾಯಿಗಳು ಹಾಗೂ ಬೇಟೆಯ ಸಲಕರಣೆಗಳೊಂದಿಗೆ ಇದ್ದಾಗ ಅವನೆದುರಿಗೆ ಒಂದು ಮೊಲ ಎದ್ದು ಬಂತು. ಅದು ನಾಯಿಗಳಿಂದ ದೂರ ಓಡುವ ಬದಲು ಅವುಗಳತ್ತ ಧಾವಿಸಿ ಅವುಗಳನ್ನೆಲ್ಲ ಕಚ್ಚಿತು. ಅದು ಅವುಗಳಿಗೆ ಎಷ್ಟೊಂದು ಅಪಾಯ ಮಾಡಿತೆಂದರೆ ಅವಾವೂ ಅದರ ಸಮೀಪ ಹೋಗುವ ಧೈರ್ಯ ಮಾಡಲಿಲ್ಲ.[1] ರಾಜ ಇಂಥ ಒಂದು ದುರ್ಬಲ ಪ್ರಾಣಿ ಈಗಾಗಲೆ ತನಗಾಗಿ ಒಂದು ಹುಲಿ ಮತ್ತು ಒಂದು ಸಿಂಹವನ್ನು ಹಿಡಿದಿದ್ದ ನಾಯಿಗಳನ್ನು ಕಚ್ಚುತ್ತಿರುವದನ್ನು ಕಂಡು ಆಶ್ಚರ್ಯಚಕಿತನಾಗಿ ಅದು ನಿಜವಾಗಿಯೂ ಮೊಲವಾಗಿರದೆ ಯಾವುದೊ ಅದ್ಭುತವಿರಬೇಕೆಂದು ತೀರ್ಮಾನಿಸಿದ. ಮತ್ತು ಅವನು ಕೂಡಲೆ ನಾಗುಂದಿವ್ ನಗರಕ್ಕೆ ಹಿಂತಿರುಗಿದ.

ನದಿಗೆ ಬಂದು ತೀರದಗುಂಟ ನಡೆದಾಡುತ್ತಿದ್ದ ಸನ್ಯಾಸಿಯನ್ನು ಭೇಟಿಯಾದ. ಅವರೆಲ್ಲರಲ್ಲಿ ಪೂಜ್ಯನಾದ ಅವನಿಗೆ ಮೊಲದ ಬಗೆಗೆ ನಡೆದುದನ್ನು ಹೇಳಿದ. ಸನ್ಯಾಸಿ ಅದನ್ನು ಕೇಳಿ ಆಶ್ಚರ್ಯಪಟ್ಟು, ತನ್ನೊಂದಿಗೆ ವಾಪಸು ನಡೆದು ಇಂಥ ಅದ್ಭುತ ಘಟನೆ ಜರುಗಿದ ಸ್ಥಳವನ್ನು ತನಗೆ ತೋರಿಸಬೇಕೆಂದು ರಾಜನಿಗೆ ಹೇಳಿದ. ಅಲ್ಲಿಗೆ ಹೋಗಿ ನೋಡಲಾಗಿ, ರಾಜ ಆ ಸ್ಥಳದಲ್ಲಿ ತಾನು ವಾಸಿಸುವ ಮನೆಗಳನ್ನು ಕಟ್ಟಿ ಒಂದು ನಗರ ಸ್ಥಾಪಿಸಬೇಕೆಂದು ಸನ್ಯಾಸಿ ಹೇಳಿದ. ಏಕೆಂದರೆ, ಆ ನಗರ ಪ್ರಪಂಚದಲ್ಲಿಯೆ ಅತ್ಯಂತ ಬಲಿಷ್ಠ ನಗರವಾಗುವುದು, ಅದನ್ನು ಅವನ ವೈರಿಗಳು ಎಂದೂ ವಶಪಡಿಸಿಕೊಳ್ಳಲಾರರು ಮತ್ತು ರಾಜ್ಯದಲ್ಲಿಯೆ ಅದು ಪ್ರಧಾನ ನಗರವಾಗುವುದು ಎಂಬುದೇ ಆ ಅದ್ಭುತದ ಅರ್ಥ ಎಂದು ಸನ್ಯಾಸಿ ವಿವರಿಸಿದ. ರಾಜ ಹಾಗೆಯೆ ಮಾಡಿದ ಮತ್ತು ಅಂದೇ ತನ್ನ ಮನೆಗಳನ್ನು ಕಟ್ಟಿಸಲಾರಂಭಿಸಿದ ಮತ್ತು ನಗರದ ಸುತ್ತ ಗೋಡೆ ಕಟ್ಟಿಸಿದ ಮತ್ತು ಅದಾದ ಮೇಲೆ ಅವನು ನಾಗುಂದಿವ್ ಬಿಟ್ಟು ಹೊಸ ನಗರವನ್ನು ಶೀಘ್ರವಾಗಿ ಜನರಿಂದ ತುಂಬಿದ. ಅದಕ್ಕೆ ಅವನು ವಿದ್ಯಾಜುನ ಎಂದು ಹೆಸರಿಟ್ಟ. ಏಕೆಂದರೆ, ಅದನ್ನು ಕಟ್ಟಿಸಲು ಹೇಳಿದ ಸನ್ಯಾಸಿಯ ಹೆಸರೂ ಅದೇ ಆಗಿತ್ತು.[2] ಆದರೆ, ಕಾಲಕ್ರಮೇಣ ಈ ಹೆಸರು ಅಪಭ್ರಂಶಗೊಂಡು ಈಗ ಬಿಸ್ನಗ

ಎಂದು ಕರೆಯಲ್ಪಡುತ್ತಿದೆ. ಮತ್ತು ಆ ಸನ್ಯಾಸಿ ತೀರಿಕೊಂಡ ಮೇಲೆ ಅವನ ಗೌರವಾರ್ಥ ಒಂದು ಭವ್ಯ ದೇವಾಲಯ[3] ಕಟ್ಟಿಸಿ ಅದಕ್ಕೆ ವಿಪುಲ ಆದಾಯ ನೀಡಿದ. ಅಂದಿನಿಂದಲೂ ಅವನ ಸ್ಮರಣಾರ್ಥವಾಗಿ ಬಿಸ್ನಗದ ರಾಜರು ತಾವು ರಾಜರಾದ ದಿನ ತಮ್ಮ ಮನೆ ಪ್ರವೇಶಿಸುವ ಮೊದಲು ಈ ದೇವಾಲಯವನ್ನು ಪ್ರವೇಶಿಸಬೇಕು. ಮತ್ತು ಅವರು ಅಲ್ಲಿ ಪ್ರಾರ್ಥನೆ ಸಲ್ಲಿಸುವರು ಮತ್ತು ಪ್ರತಿವರ್ಷ ಅನೇಕ ಉತ್ಸವ ಗಳನ್ನು ಆಚರಿಸುವರು.

ಈ ರಾಜ ದೇಹೊರಾವ್ ಏಳು ವರ್ಷ ಆಳಿದ ಮತ್ತು ತಾನು ಸಂಪೂರ್ಣ ಶಾಂತತೆಯಲ್ಲಿ ಬಿಟ್ಟುಹೋದ ರಾಜ್ಯವನ್ನು ಶಾಂತಗೊಳಿಸುವುದನ್ನು ಬಿಟ್ಟರೆ ಬೇರೆ ಏನನ್ನೂ ಮಾಡಲಿಲ್ಲ.

ಅವನ ಮರಣಾನಂತರ ಬುಕಾರಾವ್[4] ಎಂಬವನೊಬ್ಬ ರಾಜ್ಯದ ಉತ್ತರಾಧಿ ಕಾರಿಯಾದ. ಅವನು ಅನೇಕ ನಾಡುಗಳನ್ನು ಗೆದ್ದುಕೊಂಡ. ಅವುಗಳಾದರೊ ಆ ರಾಜ್ಯದ ವಿನಾಶಕಾಲಕ್ಕೆ ಬಂಡುಕೋರರಾಗುಳಿದವು. ಅವನು ಅವುಗಳನ್ನು ವಶ ಪಡಿಸಿಕೊಂಡು ತನ್ನ ಅಧಿಕಾರ ಹಾಗೂ ಪ್ರಭುತ್ವಕ್ಕೆ ಅಧೀನಪಡಿಸಿದ. ಅವನು ಬಹಳ ವಿಶಾಲವಾದ ಒರಿಯಾ ರಾಜವನ್ನು ವಶಪಡಿಸಿಕೊಂಡ. ಅದು ಬೆಂಗಲ್ಲನ್ನು ಮುಟ್ಟುತ್ತದೆ. ಅವನಿಗೆ ಗೌರವ ತೋರುವಷ್ಟೆ ಭಯಪಡುತ್ತ ಅವನ ರಾಜ್ಯದಲ್ಲಿ ಎಲ್ಲರೂ ಅವನ ಆಜ್ಞೆ ಪಾಲಿಸುತ್ತ ಅವನು ಮೂವತ್ತೇಳು ವರ್ಷ ಆಳಿದನು.

ಆ ರಾಜಾ ಬುಕಾರಾವನ ಮರಣಾನಂತರ ಪುರಿಯೋರೆ ದೇವರಾವ್[5] ಎಂಬ ಅವನ ಮಗ ಪಟ್ಟಕ್ಕೆ ಬಂದ. ಕನ್ನಡದಲ್ಲಿ ಅದರರ್ಥ "ಬಲಶಾಲಿ ಪ್ರಭು" ಎಂದಿದೆ. ಅವನು ಪರ್ದಾಒಗಳ ಹಣವನ್ನು ಟಂಕಿಸಿದ. ಅದನ್ನು ಇಂದಿಗೂ "ಪುರೌರೆ ದೇವರಾವ್" ಎಂದು ಕರೆಯುುತ್ತಾರೆ. ಮತ್ತು ಅಂದಿನಿಂದ ಮುಂದಕ್ಕೆ ಅವುಗಳನ್ನು ಮಾಡಿದ ರಾಜರ ಹೆಸರಿನಿಂದ ನಾಣ್ಯಗಳನ್ನು ಕರೆಯುುವದು ಪದ್ಧತಿಯಾಯಿತು. ಇದರಿಂದಾಗಿಯೆ ಬಿಸ್ನಗ ರಾಜ್ಯದಲ್ಲಿ ಪರ್ದಾಒಗಳ ಇಪ್ಪೊಂದು ಹೆಸರುಗಳಿವೆ. ಈ ರಾಜ ತನ್ನ ತಂದೆ ಬಿಟ್ಟು ಹೋಗಿದ್ದಷ್ಟೆ ರಾಜ್ಯವನ್ನು ತನ್ನ ಮರಣಕಾಲಕ್ಕೆ ಬಿಟ್ಟು ಹೋದನಲ್ಲದೆ ಬೇರೇನೂ ಮಾಡಲಿಲ್ಲ.

ಈ ರಾಜನಿಗೆ ಅಜರಾವ್[6] ಎಂಬ ಒಬ್ಬ ಮಗನಿದ್ದು ಅವನು ಅವನ ಮರಣಾ ನಂತರ ಉತ್ತರಾಧಿಕಾರಿಯಾದ. ತಾನು ಆಳಿದ ನಲವತ್ತುಮೂರು ವರ್ಷಗಳಲ್ಲಿ ಅವನು ಮೂರರೊಂದಿಗೆ ಸದಾ ಯುದ್ಧದಲ್ಲಿ ತೊಡಗಿದ್ದ. ಅವನು ಈ ರಾಜ್ಯದ ಪ್ರಥಮ ವಿನಾಶಕಾಲಕ್ಕೆ ಬಂಡೆದ್ದಿದ್ದ ಗೋವಾ, ಚೌಲ್, ದಾಬುಲ್, ಸೈಲ್ಲಾಒ[7], ಮತ್ತು ಚಾರಮೆಂಡೆಲ್[8]ದ ಎಲ್ಲ ಪ್ರದೇಶವನ್ನು ವಶಪಡಿಸಿಕೊಂಡ. ಮತ್ತು ಅವನು ಇಲ್ಲಿ ದಾಖಲಿಸಲಾಗಿರದ ಅನೇಕ ಕೆಲಸಗಳನ್ನು ಮಾಡಿದ.

ಈ ರಾಜ ಬಿಸ್ನಗ ನಗರದಲ್ಲಿ ಅನೇಕ ಗೋಡೆಗಳನ್ನು ಗೋಪುರಗಳನ್ನು ಕಟ್ಟಿಸಿದ ಮತ್ತು ಅದರ ಸುತ್ತ ಹೊಸದಾಗಿ ಗೋಡೆ ಕಟ್ಟಿಸಿದ. ಆಗ ನಗರ ನಿರುಪ ಯುಕ್ತವಾಗಿತ್ತು. ಏಕೆಂದರೆ, ಅದರಿಂದ ದೂರವಿರುವ ನಾಗುಂದಿವ್‌ದ ನೀರನ್ನು ಬಿಟ್ಟರೆ ತೋಟ ಮತ್ತು ಹಣ್ಣು ತೋಟಗಳನ್ನು ಬೆಳೆಸಲು ಬೇಕಾದ ನೀರು ಅಲ್ಲಿರಲಿಲ್ಲ. ಆ ಪ್ರದೇಶದಲ್ಲಿದ್ದ ನೀರೆಲ್ಲ ಸವುಳು ಇದ್ದುದರಿಂದ ಏನನ್ನೂ ಬೆಳೆಯಗೊಡದಂತಹದು. ಈ ನಗರವನ್ನು ಬೆಳೆಸುವ ಮತ್ತು ರಾಜ್ಯದಲ್ಲಿಯೆ ಅತ್ಯುತ್ತಮವಾಗಿಸುವ ಇಚ್ಛೆಯುಳ್ಳ ರಾಜ, ನಗರದಲ್ಲಿ ತಂದರೆ ಬಹಳ ಲಾಭವಾಗುವುದೆಂದು ನಂಬಿ ಐದು ಹರದಾರಿ ದೂರವಿದ್ದ ದೊಡ್ಡ ನದಿಯನ್ನು ನಗರಕ್ಕೆ ತರಲು ನಿರ್ಧರಿಸಿದ. ಮತ್ತು ನದಿಗೆ ದೊಡ್ಡ ಬಂಡೆಗಳಿಂದ ಒಡ್ಡುಕಟ್ಟಿ ಅವನು ಹಾಗೆಯೆ ಮಾಡಿದ. ಮತ್ತು ಒಂದು ಕಡೆಯಂತೆ ಅವನು ಅದರೊಳಗೆ ಎಂಥ ದೊಡ್ಡ ಕಲ್ಲು ಎಸೆದನೆಂದರೆ ರಾಜನ ಇಷ್ಟ ದಂತೆ ನದಿ ಹರಿಯುವಂತೆ ಮಾಡಲು ಅದೊಂದೆ ಸಾಕಾಯಿತು. ರಾಜ್ಯದಲ್ಲಿದ್ದ ಅನೇಕ ಆನೆಗಳಿಂದ ಅದನ್ನು ಅಲ್ಲಿಗೆ ಎಳೆತರಲಾಗಿತ್ತು. ಹೀಗೆ ತರಲಾದ ನೀರನ್ನು ಅವನು ತನಗೆ ಮನಸ್ಸಿಗೆ ಬಂದ ನಗರದ ಭಾಗಗಳಿಗೆ ಒಯ್ದ. ಈ ನೀರು ನಗರಕ್ಕೆ ಎಷ್ಟೊಂದು ಉಪಯುಕ್ತವಾಯಿತೆಂದರೆ ಅದು ಅವನ ಆದಾಯವನ್ನು ಮುನ್ನೂರ ಐವತ್ತುಸಾವಿರ ಪರ್ದಾಒಗಳಿಗಿಂತಲೂ ಹೆಚ್ಚಿಸಿತು.ಈ ನೀರಿನ ಸಹಾಯದಿಂದ ನಗರದ ಸುತ್ತ ಬಹಳ ತೋಟಗಳು, ಹಣ್ಣು ತೋಟಗಳು, ಗಿಡಗಳ ತೋಪುಗಳು ಮತ್ತು ದ್ರಾಕ್ಷಿಯ ತೋಟಗಳನ್ನು ಬೆಳೆಯಲಾಯಿತು. ಈ ನಾಡಿನಲ್ಲಿ ಅವು ವಿಪುಲವಾಗಿವೆ. ಈ ನಾಡಿನಲ್ಲಿ ಒಳ್ಳೆಯ ಫಲ ನೀಡುವ ಲಿಂಬಿ, ಕಿತ್ತಳೆ, ಗುಲಾಬಿ ಮತ್ತು ಇತರ ಗಿಡ ಗಳನ್ನು ನೆಡಲಾಗಿದೆ. ನದಿಯನ್ನು ಹೀಗೆ ತಿರುಗಿಸಲು ರಾಜ ತನ್ನ ತಂದೆಯಿಂದ ಬಂದ ಬಹಳ ಮೊತ್ತದಲ್ಲಿದ್ದ ಎಲ್ಲ ಸಂಪತ್ತನ್ನು ವ್ಯಯಮಾಡಿದನೆಂದು ಹೇಳ ಲಾಗುತ್ತದೆ.

ಈ ರಾಜ ತನ್ನ ಮರಣಕ್ಕೆ ಪಿಸರಾವ್[9] ಎಂಬ ಮಗನನ್ನು ಬಿಟ್ಟು ಹೋದ. ಅವನು ತನ್ನ ತಂದೆಯ ಮರಣಾನಂತರ ಉತ್ತರಾಧಿಕಾರಿಯಾದ. ಅವನು ಆರು ವರ್ಷ ಬಾಳಿದ ಮತ್ತು ಆ ಅವಧಿಯಲ್ಲಿ ಹೇಳಿಕೊಳ್ಳುವಂತಹ ಯಾವುದನ್ನೂ ಮಾಡಲಿಲ್ಲ.

ತನ್ನ ಮರಣಕಾಲಕ್ಕೆ ಅವನು ದೇವರಾವ್ ಎಂಬ ಮಗನನ್ನು ಬಿಟ್ಟುಹೋದ. ಅವನು ಇಪ್ಪತ್ತೈದು ವರ್ಷ ಆಳಿದ. ಅವನು ದೊಡ್ಡ ಸಂಪತ್ತು ಸಂಗ್ರಹಿಸಲು ನಿರ್ಧರಿಸಿದ. ಆದರೆ, ಸತತ ಯುದ್ಧದಿಂದಾಗಿ, ಬೆಲೆಯುಳ್ಳ ಹರಳುಗಳನ್ನು ಬಿಟ್ಟು ಎಂಟನೂರೈವತ್ತು ದಶಲಕ್ಷದಷ್ಟು ಬಂಗಾರಕ್ಕಿಂತ ಹೆಚ್ಚು ಸಂಗ್ರಹಿಸಲಾಗಲಿಲ್ಲ. ಅವನ ಕಾಲದಲ್ಲಿ ಕೌಲಾಓ[10], ಸಿಲಾಒ, ಪಾಲಿಯಕೇಟ್,[11] ಪೆಗು, ತಾನಾಸಂ[12]

ಮತ್ತು ಇತರ ಅನೇಕ ರಾಜ್ಯಗಳು ಅವನಿಗೆ ಕಪ್ಪ ಕೊಡುತ್ತಿದ್ದವೆಂಬುದನ್ನು ನೋಡಿದರೆ ಇದು ದೊಡ್ಡ ಮೊತ್ತವೇನಲ್ಲ.

ತನ್ನ ಮರಣಕಾಲಕ್ಕೆ ಈ ರಾಜ ಬಿಟ್ಟುಹೋದ ಪೀಣರಾವ್[13] ಎಂಬ ಮಗ ರಾಜ್ಯದ ಉತ್ತರಾಧಿಕಾರಿಯಾಗಿ ಹನ್ನೆರಡು ವರ್ಷ ಆಳಿದ ಮತ್ತು ದೊಡ್ಡ ಜ್ಯೋತಿಷಿಯಾಗಿದ್ದ. ಅವನಿಗೆ ಸಾಹಿತ್ಯದ ಒಲವು ಬಹಳವಿದ್ದು ಹಲವಾರು ಗ್ರಂಥ ರಚಿಸಿದ ಮತ್ತು ತನ್ನ ನಾಡು ಮತ್ತು ರಾಜ್ಯದಲ್ಲಿ ಕಟ್ಟಳೆಗಳನ್ನು (ಜಾರಿಗೆ ತಂದ). ಅವನ ಆಳಿಕೆಯಿರುವವರೆಗೆ ಅವನು ಇಪ್ಪತ್ತು ಮಂತ್ರಿಗಳನ್ನು ಹೊಂದಿದ್ದ. ಈ (ಜನರಲ್ಲಿ) ಈ ಹುದ್ದೆಯಲ್ಲಿ (ಸಾಮಾನ್ಯವಾಗಿ) ಒಬ್ಬ ಮಾತ್ರ ಇರುತ್ತಾನೆ. ಈ ರಾಜ ಬಹಳ ಜಾಣನಿದ್ದ, ತನ್ನ ಎಲ್ಲ ಕರ್ತವ್ಯಗಳಲ್ಲಿ ಪಾರಂಗತನಿದ್ದ ಮತ್ತು ಎಂಥ ಪ್ರತಿಭೆ ಮತ್ತು ಗುಣಗಳನ್ನು ಪಡೆದಿದ್ದನೆಂದರೆ ಅವರು ಅವನನ್ನು ಪೀಣರಾವ್ ಎಂದು ಕರೆದರು. ಹಾಗೆಂದರೆ, ಅವರಲ್ಲಿನ ಕನ್ನಡ ಭಾಷೆಯಲ್ಲಿ ಬಹಳ ಬುದ್ಧಿವಂತ ಎಂದರ್ಥ. ಈ ರಾಜನನ್ನು ದ್ರೋಹದಿಂದ ಅವನ ಸೋದರಳಿಯನೆ ಕೊಂದ. ರಾಜನೇ ತನ್ನ ಮನೆಯಲ್ಲಿಯೆ ಮಗನಂತೆ ಬೆಳೆಸಿದ್ದ ಅವನು ರಾಜನ ಮರಣಕ್ಕೆ ಕಾರಣನಾದ.[14] ಸೋದರಳಿಯ ಲಗ್ನವಾಗಲು ನಿರ್ಧರಿಸಿದ ಮತ್ತು ತನ್ನ ಲಗ್ನದ ಉತ್ಸವಗಳಲ್ಲಿ ಸ್ವತಃ ರಾಜನ ಮಗ ಉಪಸ್ಥಿತನಿದ್ದು ಮರ್ಯಾದೆ ಮಾಡುವಂತೆ ಆಜ್ಞೆ ಮಾಡಬೇಕೆಂದು ತನ್ನ ಸೋದರಮಾವನಾದ ರಾಜನನ್ನು ಪ್ರಾರ್ಥಿಸಿದ. ಅವನಿಗಾಗಿ ಪಡೆದಿದ್ದ ಪ್ರೀತಿಗಾಗಿ ಮತ್ತು ಅವನನ್ನು ಗೌರವಿಸುವ ಸಂತೋಷಕ್ಕಾಗಿ ತನ್ನ ಮಗನಿಗೆ ತನ್ನ ಪರಿವಾರದೊಂದಿಗೆ ಅಣಿಯಾಗಲು ರಾಜ ಅಪ್ಪಣೆಯಿತ್ತ ಮತ್ತು ತನ್ನ ಸೋದರಳಿಯನ ಲಗ್ನದಲ್ಲಿ ಉಪಸ್ಥಿತನಿರಲು ಮತ್ತು ಗೌರವಿಸಲು ತನ್ನ ಆಸ್ಥಾನದ ಮಂತ್ರಿಗಳು ಮತ್ತು ದಳಪತಿಗಳೊಂದಿಗೆ ಕಳುಹಿಸಿದ. ಎಲ್ಲವನ್ನೂ ಸಿದ್ಧವಾಗಿರಿಸಿಕೊಂಡ ಸೋದರಳಿಯ ಅವರೆಲ್ಲ ತನ್ನ ಮನೆಯಲ್ಲಿ ಭೋಜನಕ್ಕೆ ಕುಳಿತಾಗ ಆ ಕೃತ್ಯಕ್ಕಾಗಿಯೆ ತಯಾರಾಗಿ ನಿಲ್ಲಿಸಿದ್ದ ಜನರಿಂದ ಕಠಾರಿಗಳಿಂದ ಇರಿಯಿಸಿ ಕೊಲ್ಲಿಸಿದ. ಯಾರಿಗೂ ಸಂಶಯಬಾರದಂತೆ ಇದನ್ನು ಮಾಡಲಾಯಿತು. ಏಕೆಂದರೆ, ಅಲ್ಲಿರುವ ಪದ್ಧತಿಯೆಂದರೆ ತಿನ್ನಲು ಕುಡಿಯಲು ಇರುವ ಎಲ್ಲವನ್ನೂ ಇಟ್ಟು ಊಟಕ್ಕೆ ಕುಳಿತವರಿಗೆ ಬಡಿಸಲು ಅಲ್ಲಿ ಯಾರು ಇರುವುದಿಲ್ಲ. ಊಟ ಮಾಡುವವರನ್ನು ಬಿಟ್ಟರೆ ಹೊರಗಡೆಯೂ ಯಾರೂ ಇರುವುದಿಲ್ಲ. ಅವರು ಮಾತ್ರ ಭೋಜನಕ್ಕೆ ಕುಳಿತಿದ್ದುದರಿಂದ ಅವರೊಂದಿಗೆ ತರಲಾಗಿದ್ದ ಜನರಿಗೆ ಏನು ಸಂಭವಿಸಿತೆಂದು ತಿಳಿಯಲಿಲ್ಲ, ಮತ್ತು ಅವನು ರಾಜನ ಮಗನನ್ನು ಎಲ್ಲ ಮುಖ್ಯರೊಂದಿಗೆ ಕೊಂದ ಬಳಿಕ ಮಂತ್ರಿ[15] ರಾಜನಿಗೆ ಕಾಣಿಕೆ ನೀಡಲೆಂಬಂತೆ ಕುದುರೆಯೇರಿ ಹೊರಟ. ಅರಮನೆಯ ದ್ವಾರ ತಲುಪಿದಾಕ್ಷಣ ತಾನು ಬಂದಿರುವುದಾಗಿಯೂ ಮತ್ತು ಪದ್ಧತಿಯಂತೆ ಕಾಣಿಕೆ ತಂದಿರುವುದಾಗಿಯೂ ರಾಜನಲ್ಲಿಗೆ ಹೇಳಿಕಳಿಸಿದ. ಆಗ ವಿಶ್ರಮಿಸುತ್ತಿದ್ದ ಮತ್ತು ತನ್ನ ಪತ್ನಿಯರೊಂದಿಗೆ

ಉಲ್ಲಾಸಗೈಯುತ್ತಿದ್ದ ರಾಜ ಅವನಿಗೆ ಒಳಗೆ ಬರಹೇಳಿದ. ರಾಜ ನಿಂತಲ್ಲಿಗೆ ಬಂದಾಕ್ಷಣ ಅವನು ವಿಷದಲ್ಲಿ ಅದ್ದಿದ ಕಠಾರಿ ಇಡಲಾಗಿದ್ದ ಸುವರ್ಣಪಾತ್ರೆಯನ್ನು ರಾಜನಿಗೆ ಕಾಣಿಕೆಯಾಗಿ ಒಪ್ಪಿಸಿದ. ಅದರಿಂದಲೆ ಅವನನ್ನು ಅನೇಕ ಕಡೆ ಗಾಯಗೊಳಿಸಿದ. ಕತ್ತಿ ಮತ್ತು ಕಠಾರಿ ಬಳಕೆಯಲ್ಲಿ ತನ್ನ ರಾಜ್ಯದಲ್ಲಿ ಯಾರಿಗಿಂತಲೂ ಉತ್ತಮನಾಗಿದ್ದ ರಾಜ ತನ್ನ ಮೇಲೆ ಗುರಿಯಿಟ್ಟ ತಿವಿತಗಳನ್ನು ತನ್ನ ದೇಹದ ತಿರುಚು ತಿರುವುಗಳಿಂದ ತಪ್ಪಿಸಿಕೊಂಡು ಅವನಿಂದ ಬಿಡಿಸಿಕೊಂಡ ಮತ್ತು ತನ್ನಲ್ಲಿದ್ದ ಗಿಡ್ಡ ಕತ್ತಿಯಿಂದ ಅವನನ್ನು ಕೊಂದ. ಅದಾದ ಮೇಲೆ ಕುದುರೆಗೆ ಜೀನು ಹಾಕಲು ಆಜ್ಞಾಪಿಸಿ ಅದನೇರಿ ಸೋದರಳಿಯನ ರುಂಡವನ್ನು ಕೈಯಲ್ಲಿ ಹಿಡಿದು ನಡೆದ. ದ್ರೋಹ ಮಾಡಿರಬಹುದು ಮತ್ತು ತನ್ನ ಮಗ ಸತ್ತಿರಬಹುದೆಂದು ಶಂಕಿಸಿ ರಾಜ ಅವನ ಮನೆ ದಾರಿ ಹಿಡಿದ. ಮತ್ತು ಅಲ್ಲಿಗೆ ಬಂದಾಕ್ಷಣ ದ್ರೋಹವನ್ನು ಮತ್ತು ತನ್ನ ಸೋದರಳಿಯ ಎಂಥ ದುಷ್ಟ ಕೃತ್ಯ ಎಸಗಿದ್ದನೆಂಬುದನ್ನು ಪ್ರತ್ಯಕ್ಷ ಕಂಡ. ತನ್ನ ಮಗ ಮತ್ತು ಪ್ರಮುಖ ದಳಪತಿಗಳು ಹತರಾದುದನ್ನು ಕಂಡು ಮತ್ತು ದ್ರೋಹಿ ಶಕ್ತಿಯಿದ್ದರೆ ತನ್ನ ಮೇಲೂ ಮೇಲುಗೈ ಪಡೆಯಬಹುದಿತ್ತೆಂದು ಮನಗಂಡು ರಾಜ ಬಹಳ ಸಿಟ್ಟಿಗೆದ್ದು ಈ ದ್ರೋಹಕ್ಕೆ ಕಾರಣರಾದ ಎಲ್ಲರಿಗೆ ಮತ್ತು ಕಾರಣರಲ್ಲದ ಅನೇಕರಿಗೆ ಭಯಾನಕ ಶಿಕ್ಷೆ ವಿಧಿಸಲು ತನ್ನ ಜನರಿಗೆ ಆಜ್ಞೆಯಿತ್ತ. ಸ್ವತಃ ತಾನು ವಿಷಾಯುಕ್ತ ಗಾಯಗಳಿಂದ ತೀವ್ರವಾಗಿ ಬಳಲಿ ಆರು ತಿಂಗಳು ಮಾತ್ರ ಬದುಕಿದ. ಅವುಗಳ ಕೊನೆಗೆ, ಕಠಾರಿಯಲ್ಲಿದ್ದ ವಿಷದಿಂದಾಗಿ ತೀರಿಕೊಂಡ.

ಅವನ ಮರಣಾನಂತರ ಹಿಂದೆ ಉಳಿದ ಅವನ ಮಗ ರಾಜ್ಯದ ಉತ್ತರಾಧಿಕಾರಿಯಾದ ಮತ್ತು ಅವನ ಹೆಸರು.... ...ಆಗಿತ್ತು.[16] ಮತ್ತು ಈ ರಾಜ ಆಳಲಾರಂಭಿಸಿದ ಕೂಡಲೆ ತನ್ನ ಮನೆತನದ ಎಲ್ಲ ಭಂಡಾರಿಗಳು, ಮಂತ್ರಿಗಳು ಮತ್ತು ಕರಣಿಕರನ್ನು ಕರೆಕಳಿಸಿ ತನ್ನ ರಾಜ್ಯದ ಆದಾಯವೆಷ್ಟು ಎಂದು ವಿಚಾರಿಸಿ ಪ್ರತಿ ವರ್ಷ ಎಷ್ಟು ಆದಾಯ ಬರುತ್ತದೆಂದು ತಿಳಿದುಕೊಂಡ. ಮತ್ತು ಘನತೆವೆತ್ತ ಅವನಿಗೆ ಹದಿಮೂರು ಲಕ್ಷ ಸುವರ್ಣಗಳು ಬರುತ್ತಿದ್ದವು. ಈ ರಾಜ ತನ್ನ ಆದಾಯದ ಐದರಲ್ಲೊಂದು ಪಾಲು ದೇವಾಲಯಗಳಿಗೆ ದತ್ತಿ ನೀಡಿದ. ಈ ದೇವಾಲಯಗಳಿರುವ ನಾಡಿನಲ್ಲಿ ಬ್ರಾಹ್ಮಣರ ಅಂದರೆ ಪುರೋಹಿತರ ಕಾನೂನು ಒಂದು ಬಿಟ್ಟರೆ ಬೇರಾವ ಕಾನೂನೂ ಸಾಧ್ಯವಿಲ್ಲ. ಹೀಗಾಗಿ, ಜನ ಕಷ್ಟ ಅನುಭವಿಸುತ್ತಾರೆ.

ಈ ರಾಜನ ಮರಣಾನಂತರ ವೆರುಪಾಕರಾವ[17] ಎಂಬ ಮಗ ಉತ್ತರಾಧಿಕಾರಿಯಾದ. ಆಳುವಷ್ಟು ಕಾಲವೂ ದುಶ್ಚಟಗಳಿಗೆ ಬಲಿಯಾಗಿ ಅವನು ಸ್ತ್ರೀಯರನ್ನು ಬಿಟ್ಟು ಬೇರಾವುದಕ್ಕೂ ಗಮನ ಹರಿಸಲಿಲ್ಲ, ಕುಡಿತದಲ್ಲಿ ಮೈಮರೆತ, ಮನೋಲ್ಲಾಸದಲ್ಲಿ ಮುಳುಗಿದ ಮತ್ತು ತನ್ನ ದಳಪತಿಗಾಗಲಿ ತನ್ನ ಜನರಿಗಾಗಲಿ ಎಂದೂ ದರ್ಶನ ನೀಡಲಿಲ್ಲ. ಹೀಗಾಗಿ ಅಲ್ಪ ಕಾಲದಲ್ಲಿಯೆ ಅವನ ಪೂರ್ವಜರು ಗೆದ್ದು ಬಿಟ್ಟು

ಹೋಗಿದ್ದುದನ್ನು ಕಳೆದುಕೊಂಡ. ಈ ರಾಜನ ಚಟಗಳು ಮತ್ತು ಜೀವನವನ್ನು ಕಂಡ ರಾಜ್ಯದ ಮನ್ನೆಯರಲ್ಲಿ ಪ್ರತಿಯೊಬ್ಬನೂ ಬಂಡೆದ್ದು ತಾನೂ ಪಡೆದುದನ್ನು ಹಿಡಿದುಕೊಂಡ. ಇದರಿಂದಾಗಿ, ತನ್ನ ಕಾಲದಲ್ಲಿ ರಾಜ ಗೋವಾ, ಚೌಲ್, ದಾಬುಲ್ ಮತ್ತು ರಾಜ್ಯದ ಇತರ ಪ್ರಮುಖ ಪ್ರದೇಶಗಳನ್ನು ಕಳೆದುಕೊಂಡ. ಈ ರಾಜ ಕೇವಲ ಕುಡಿತಕೋರತನದಲ್ಲಿ ತನ್ನ ದಳಪತಿಗಳಲ್ಲನೇಕರನ್ನು ಕೊಂದ. ಒಂದು ರಾತ್ರಿ ತನ್ನ ದಳಪತಿಗಳಲ್ಲೊಬ್ಬ ತನ್ನ ಕೋಣೆಯನ್ನು ಪ್ರವೇಶಿಸಿದಂತೆ ಕನಸು ಕಂಡದ್ದಕ್ಕಾಗಿ ಮರುದಿನ ಅವನನ್ನು ಕರೆಯಿಸಿ ಅವನು ತನ್ನನ್ನು ಕೊಲ್ಲಲು ತನ್ನ ಕೋಣೆಯನ್ನು ಪ್ರವೇಶಿಸಿದಂತೆ ಕನಸು ಬಿದ್ದಿತ್ತೆಂದು ಹೇಳಿದ ಮತ್ತು ಅಷ್ಟು ಮಾತ್ರಕ್ಕೆ ಅವನನ್ನು ಕೊಲ್ಲಿಸಿದ. ಈ ರಾಜನಿಗೆ ಬೆಳೆದ ಇಬ್ಬರು ಪುತ್ರರಿದ್ದರು. ತಮ್ಮ ತಂದೆಯ ದುಷ್ಟತನ ಹಾಗೂ ತನ್ನ ರಾಜ್ಯ ಕಳೆದುಕೊಂಡ ಬಗೆಯನ್ನು ಕಂಡು ಅವರು ಅವನನ್ನು ಕೊಲ್ಲಲು ನಿರ್ಧರಿಸಿದರು. ವಾರಸುದಾರನಾದ ಹಿರಿಯ ಮಗ ನಿಜಕ್ಕೂ ಹಾಗೆಯೆ ಮಾಡಿದ. ಅವನು ತಂದೆಯನ್ನು ಕೊಂದ ಮೇಲೆ ಅವನನ್ನು ರಾಜನನ್ನಾಗಿ ಮಾಡಲು ಅರಿಕೆ ಮಾಡಿಕೊಳ್ಳಲಾಗಿ ಅವನು ಹೀಗೆಂದ : "ಈ ರಾಜ್ಯ ಹಕ್ಕಿನಿಂದ ನನ್ನದಿರಬಹುದಾದರೂ ಅದು ನನಗೆ ಬೇಕಿಲ್ಲ. ಏಕೆಂದರೆ, ನಾನು ನನ್ನ ತಂದೆಯನ್ನು ಕೊಂದೆ ಮತ್ತು ತನ್ಮೂಲಕ ಮಾಡಬಾರದುದನ್ನು ಮಾಡಿರುವೆ ಮತ್ತು ಘೋರ ಪಾಪಗೈದಿರುವೆ. ಆದುದರಿಂದ ಇಂಥ ಅಪಾತ್ರ ಮಗ ರಾಜ್ಯದ ಉತ್ತರಾಧಿಕಾರಿಯಾಗುವುದು ತರವಲ್ಲ. ನನ್ನ ತಮ್ಮ ತನ್ನ ತಂದೆಯ ರಕ್ತದಿಂದ ತನ್ನ ಕೈಗಳನ್ನು ಕಲುಷಿತಗೊಳಿಸಿಕೊಳ್ಳಲಿಲ್ಲವಾದ್ದರಿಂದ ಅವನನ್ನೆ ತೆಗೆದುಕೊಳ್ಳಿರಿ ಮತ್ತು ಅವನೆ ಆಳಲಿ". ಹಾಗೆಯೆ ಮಾಡಲಾಗಿ ತಮ್ಮನನ್ನು ಪಟ್ಟಕ್ಕೆ ತರಲಾಯಿತು. ಮತ್ತು ಅವರು ಅವನಿಗೆ ರಾಜ್ಯ ಒಪ್ಪಿಸಿಯಾದ ಮೇಲೆ ಅವನ ಮಂತ್ರಿ ಹಾಗೂ ದಳಪತಿಗಳು ಅವನು ತನ್ನ ಅಣ್ಣನನ್ನು ಕೊಲ್ಲುವಂತೆ ಉಪದೇಶಿಸಿದರು. ಏಕೆಂದರೆ, ತಂದೆಯನ್ನು ಕೊಂದಿದ್ದ ಅವನು ಬಯಸಿದರೆ ತಮ್ಮನನ್ನು ಕೊಲ್ಲಬಹುದು. ಹೀಗೆ ಆಗಲೂ ಬಹುದೆಂದು ರಾಜನಿಗೆ ತೋರಿದ್ದರಿಂದ ಅವನು ಅಣ್ಣನನ್ನು ಕೊಲ್ಲಲು ನಿರ್ಧರಿಸಿದನು ಮತ್ತು ಇದನ್ನು ಕೂಡಲೆ ಜಾರಿಗೊಳಿಸಿದನು ಮತ್ತು ಅವನನ್ನು ತನ್ನ ಕೈಯಿಂದಲೆ ಕೊಂದನು. ಈ ರೀತಿ ಈ ಮನುಷ್ಯ ಇಂಥ ಕುಕೃತ್ಯ ಎಸಗುವವರು ಕಾಣುವ ಗತಿಯನ್ನೆ ಕಂಡ. ಈ ರಾಜನ ಹೆಸರು ಪಾದೆಯರಾವ್ ಮತ್ತು ಇದನ್ನು ಮಾಡಿಯಾದ ಮೇಲೆ ಅವನೂ ತನ್ನ ತಂದೆಯ ವ್ಯಸನಗಳಿಗೇ ಶರಣನಾದ. ತಾನು ಸಂತೋಷಿಸುವ ದುರ್ವ್ಯಸನಗಳನ್ನು ಬಿಟ್ಟರೆ ತನ್ನ ರಾಜ್ಯದ ಬಗೆಗೆ ಏನನ್ನೂ ಅರಿಯಬಯಸದ, ತನ್ನ ಸ್ತ್ರೀಯರಿಗೆ ಅರ್ಪಿತನಾದ ಅವನು ಬಹುಮಟ್ಟಿಗೆ ನಗರದಲ್ಲಿಯೆ ಇದ್ದನು.

ಅವನಿಗೆ ಒಂದು ರೀತಿಯಲ್ಲಿ ಸಂಬಂಧಿಕನಾಗಿದ್ದ ನರಸಿಂಗುಲ[18] ಎಂಬ ಅವನ ದಳಪತಿಯೊಬ್ಬ ಇನ್ನೂ ಎಲ್ಲವೂ ಕಳೆದುಹೋಗಿರದಿದ್ದರೂ ಅವನ ಜೀವನಕ್ರಮ ಕಂಡು, ಅವನು ಜೀವಂತವಿದ್ದು ಆಳುವುದು ರಾಜ್ಯಕ್ಕೆ ಎಷ್ಟು ಕೇಡು ಎಂದು ಅರಿತು ಅವನ ಮೇಲೆ ದಾಳಿಯಿಟ್ಟು ಅವನ ನಾಡುಗಳನ್ನು ವಶಪಡಿಸಿಕೊಳ್ಳಲು ನಿರ್ಧರಿಸಿದ. ಆ ಯೋಜನೆಯನ್ನು ಅವನು ತಕ್ಷಣ ಕಾರ್ಯಗತಗೊಳಿಸಿದ.

ಆದುದರಿಂದ, ಸರಿಯಾಗಿ ಆಳುವ ರಾಜ ತಮ್ಮ ಮೇಲೆ ಇರದಿರುವುದು ಎಷ್ಟು ಕೆಟ್ಟದ್ದು, ಅವನ ಜೀವನಕ್ರಮ ನೋಡಿದರೆ ರಾಜ ತನ್ನ ದುರಾಡಳಿತದಿಂದ ತಂದೆ ಕಳೆದುಕೊಂಡುದಕ್ಕಿಂತಲೂ ಹೆಚ್ಚು ಕಳೆದುಕೊಂಡರೆ ಆಶ್ಚರ್ಯವಲ್ಲ ಎಂದು ವಿವರಿಸಿ ಅವನು ರಾಜ್ಯದ ದಳಪತಿಗಳಿಗೆ ಮತ್ತು ಪಾಳೆಯಗಾರರಿಗೆ ಪತ್ರ ಬರೆದ.

ಅವರ ಸದಿಚ್ಛೆಗಳಿಸಲೋಸಗ ಅವನು ಅವರೆಲ್ಲರಿಗೆ ದೊಡ್ಡ ಕಾಣಿಕೆಗಳನ್ನು ನೀಡಿದ ಮತ್ತು ಹೀಗೆ ಬಹಳ ಜನರನ್ನು ತನ್ನೆಡೆಗೆ ಸೆಳೆದುಕೊಂಡಾಗ ರಾಜನಿದ್ದ ಬಿಸ್ನಗ ನಗರದ ಮೇಲೆ ದಾಳಿಯಿಡಲು ಸಿದ್ಧತೆ ಮಾಡಿದ. ಈ ದಳಪತಿ ನರಸಿಂಗುಲನ ಬಂಡು, ಅವನು ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತ ಸಮೀಪ ಬರುತ್ತಿದ್ದ ಬಗೆ, ಅನೇಕ ಜನರು ಅವನೊಂದಿಗೆ ಕೂಡಿಕೊಳ್ಳುತ್ತಿದ್ದ ಬಗೆ ತಿಳಿಸಿದಾಗ ಅವನಿಗೆ ತಾನು ಅನುಭವಿಸಿದ ನಷ್ಟದ ಪರಿವೆ ಇದ್ದಂತೆ ತೋರಲಿಲ್ಲ. ಅವನು ಅದಕ್ಕೆ ಲಕ್ಷ್ಯ ಕೊಡಲಿಲ್ಲ, ಸಿದ್ಧತೆ ಮಾಡಿಕೊಳ್ಳಲೂ ಇಲ್ಲ. ಅದಕ್ಕೆ ಬದಲಾಗಿ, ಆ ಸುದ್ದಿ ತಂದಿದ್ದವನನ್ನೆ ಕೆಟ್ಟ ರೀತಿಯಲ್ಲಿ ನೋಡಿಕೊಂಡ. ಹಾಗಾಗಿ, ಈ ನರಸಿಂಗುಲನ ಸೈನ್ಯದ ದಳಪತಿಯೊಬ್ಬ ಬಿಸ್ನಗದ ದ್ವಾರ ತಲುಪಿದಾಗ ಅದನ್ನು ರಕ್ಷಿಸಲು ಒಬ್ಬ ಮನುಷ್ಯನೂ ಇರಲಿಲ್ಲ. ಮತ್ತು ರಾಜನಿಗೆ ಅವನ ಆಗಮನದ ಬಗೆಗೆ ಹೇಳಿದಾಗ ಅವನು ಅದು ಸಾಧ್ಯವಿರದ್ದು ಎಂದೇ ಅಂದ. ಆ ಮೇಲೆ ದಳಪತಿ ನಗರವನ್ನು ಪ್ರವೇಶಿಸಿದ ಮತ್ತು ರಾಜ ಅದು:ಸಾಧ್ಯವಿರದ್ದು ಎಂದೇ ಅಂದ. ಆಮೇಲೆ ಅವನು ಅರಮನೆ ಪ್ರವೇಶಿಸಿ ಕೆಲವು ಸ್ತ್ರೀಯರನ್ನು ಕೊಲ್ಲುತ್ತ ಅವನ ಕೋಣೆಯ ಬಾಗಿಲುಗಳಿಗೇ ಬಂದ. ಕೊನೆಗೆ ರಾಜ ನಂಬಿದ ಮತ್ತು ಅಪಾಯ ಎಷ್ಟು ದೊಡ್ಡದೆಂದು ಈಗ ಕಂಡು ಇನ್ನೊಂದು ಬದಿಯ ದ್ವಾರಗಳ ಮೂಲಕ ಓಡಿಹೋಗಲು ನಿರ್ಧರಿಸಿದ ಮತ್ತು ಹೀಗೆ ಅವನು ತನ್ನ ನಗರ ಮತ್ತು ಅರಮನೆಗಳನ್ನು ಬಿಟ್ಟುಓಡಿದ.

ರಾಜ ಓಡಿಹೋದುದನ್ನು ತಿಳಿದಾಗ ದಳಪತಿ ಅವನನ್ನು ಬೆನ್ನಟ್ಟುವ ತೊಂದರೆ ತೆಗೆದುಕೊಳ್ಳದೆ ನಗರವನ್ನು ಹಾಗೂ ಅದರಲ್ಲಿ ದೊರೆತ ಸಂಪತ್ತನ್ನು ವಶಪಡಿಸಿಕೊಂಡ. ಮತ್ತು ಅದನ್ನು ತಿಳಿಸಲೋಸುಗ ತನ್ನ ಪ್ರಭು ನರಸಿಂಗಲನಿಗೆ ಹೇಳಿಕಳಿಸಿದ. ಅದಾದ ನಂತರ ನರಸಿಂಗುಲನನ್ನು ರಾಜಪದವಿಗೇರಿಸಿಲಾಯಿತು. ಮತ್ತು ಅವನು ಬಹಳ ಬಲಶಾಲಿ ಹಾಗೂ ಜನರಿಂದ ಪ್ರೀತಿಸಲ್ಪಟ್ಟವನಾದುದರಿಂದ ಅಂದಿನಿಂದ ಈ ಬಿಸ್ನಗ ರಾಜ್ಯವನ್ನು ನರಸಿಂಗನ ರಾಜ್ಯ ಎಂದು ಕರೆಯಲಾಯಿತು.

ಅವನನ್ನು ರಾಜಪದವಿಗೇರಿಸಿ ವಿಧೇಯತೆ ತೋರಿದ ನಂತರ ಅವನು ಬಿಸ್ನಗಕ್ಕೆ ಬಂದು ಅಲ್ಲಿ ಅನೇಕ ನ್ಯಾಯಕಾರ್ಯಗಳನ್ನು ಮಾಡಿದ. ಹಕ್ಕಿಗೆ ವ್ಯತಿರಿಕ್ತವಾಗಿ ಯಾರ್‍ಯಾರು ರಾಜನಿಂದ ಪ್ರದೇಶಗಳನ್ನು ಕಿತ್ತುಕೊಂಡಿದ್ದರೊ ಅವರಿಂದ ಅವನು ಅವನ್ನು ವಶಪಡಿಸಿಕೊಂಡ. ಈ ರಾಜ ನಲವತ್ತು ನಾಲ್ಕು ವರ್ಷ ಆಳಿದ ಮತ್ತು ತನ್ನ ಮರಣಕಾಲಕ್ಕೆ ಇಡಿ ರಾಜ್ಯವನ್ನು ಶಾಂತಿಯಲ್ಲಿ ಬಿಟ್ಟುಹೋದ ಮತ್ತು ತನ್ನ ಪೂರ್ವಾಧಿಕಾರಿ ರಾಜರು ಕಳೆದುಕೊಂಡಿದ್ದ ಎಲ್ಲ ಪ್ರಾಂತಗಳನ್ನೂ ಮರಳಿ ಪಡೆದ. ಅವನು ಒರ್ಮೂಜ್ ಮತ್ತು ಅದೀನ್[19]ಗಳಿಂದ ತನ್ನ ರಾಜ್ಯದೊಳಗೆ ಕುದುರೆಗಳನ್ನು ತರುವಂತೆ ಮಾಡಿದ ಮತ್ತು ಕುದುರೆಗಳಿಗಾಗಿ ಅವರು ಕೇಳಿದಷ್ಟು ಕೊಡುವ ಮೂಲಕ ವರ್ತಕರಿಗೆ ಬಹಳ ಲಾಭ ಮಾಡಿಕೊಡುತ್ತಿದ್ದ. ಅವುಗಳು ಸತ್ತಿರಲಿ ಜೀವಂತವಾಗಿರಲಿ ಸಾವಿರ ಪರ್ದಾಒಗಳಿಗೆ ಮೂರರಂತೆ ಕೊಂಡುಕೊಳ್ಳುತ್ತಿದ್ದ ಮತ್ತು ಸಮುದ್ರದಲ್ಲಿ ಸತ್ತವುಗಳ ಬಾಲವನ್ನು ಮಾತ್ರ ಅವರು ಅವನಲ್ಲಿಗೆ ತರುತ್ತಿದ್ದರು ಮತ್ತು ಅವನು ಅದಕ್ಕೆ ಅದು ಜೀವಂತವಾಗಿದ್ದಂತೆಯೆ ಹಣ ತೆರುತ್ತಿದ್ದ.

ಆ ರಾಜನ ಮರಣಕಾಲಕ್ಕೆ ಅವನ ಆಳಿಕೆಯ ವಿರುದ್ಧ ಬಂಡೆದ್ದ ಮೂರು ದುರ್ಗಗಳಿದ್ದವು ಮತ್ತು ಅವುಗಳನ್ನು ವಶಪಡಿಸಿಕೊಳ್ಳಲು ಅವನಿಗೆ ಆಗಲಿಲ್ಲ. ಅವಾವುವೆಂದರೆ ರಾಚೋಲ, ಒದೆಗರಿ ಮತ್ತು ಕೊನಡೊಲ್ಲಿ.[20] ಅವುಗಳು ವಿಶಾಲ ಮತ್ತು ಶ್ರೀಮಂತ ಪ್ರದೇಶಗಳನ್ನು ಹೊಂದಿದ್ದು ರಾಜ್ಯದ ಮುಖ್ಯ ದುರ್ಗಗಳಾಗಿವೆ. ಅವನು ಮರಣಕಾಲಕ್ಕೆ 'ಇಬ್ಬರು ಪುತ್ರರನ್ನು ಮತ್ತು ತರುವಾಯ ಬಿಸ್ನಗದ ರಾಜನಾದವನ ತಂದೆಯಾದ ನಸೇನಕ ಎಂಬ ರಾಜ್ಯದ ರಾಜಪ್ರತಿನಿಧಿಯನ್ನು ಹಿಂದೆ ಬಿಟ್ಟು ಹೋದ[21]. ಈ ರಾಜ(ನರಸಿಂಗುಅ) ಮರಣಕ್ಕೆ ಮುಂಚೆ ತನ್ನ ಮಂತ್ರಿ ನರಸೇನಕನನ್ನು ಕರೆಕಳಿಸಿ ಅವನೊಂದಿಗೆ ಸಂಭಾಷಣೆ ನಡೆಸಿದ ಮತ್ತು ರಾಜಪುತ್ರರು ಆಳುವ ವಯಸ್ಸಿಗೆ ಬರುವವರೆಗೆ ಅವನು ರಾಜ್ಯವಾಳುವಂತೆ ಮೃತ್ಯುಪತ್ರದಲ್ಲಿ ಉಲ್ಲೇಖಿಸುವುದಾಗಿ ಹೇಳಿದ. ಎಲ್ಲ ರಾಜಸಂಪತ್ತೂ ತನ್ನದು ಮಾತ್ರವೆಂದೂ ಹೇಳಿದ ಮತ್ತು ಖಡ್ಗದ ಮೊನಚಿನಿಂದಲೆ ನರಸಿಂಗದ ಈ ರಾಜ್ಯವನ್ನು ತಾನು ಗೆದ್ದುದನ್ನು ಅವನಿಗೆ ನೆನಪಿಸಿದ. ಈಗ ವಶಪಡಿಸಿಕೊಳ್ಳಬೇಕಾದ ಮೂರು ದುರ್ಗಗಳು ಮಾತ್ರ ಉಳಿದಿವೆ ಆದರೆ ತನಗೆ ಅವುಗಳನ್ನು ವಶಪಡಿಸಿಕೊಳ್ಳುವ ಸಮಯ ಮೀರಿದೆ ಎಂದು ಸೇರಿಸಿದ. ರಾಜ್ಯವನ್ನು ಚನ್ನಾಗಿ ಕಾಪಾಡಬೇಕು ಮತ್ತು ತನ್ನ ರಾಜಕುಮಾರರಲ್ಲಿ ಅತ್ಯಂತ ಸಮರ್ಥನಾದವನಿಗೆ ಅದನ್ನು ಬಿಟ್ಟುಕೊಡಬೇಕು ಎಂದು ರಾಜ ಅವನನ್ನು ಕೇಳಿಕೊಂಡ. ರಾಜನ ಮರಣಾನಂತರ ಈ ನರಸೇನಕ ರಾಜಪ್ರತಿನಿಧಿಯಾಗಿ ಉಳಿದ ಮತ್ತು ಕೂಡಲೆ ರಾಜಕುಮಾರನನ್ನು ರಾಜಪದವಿಗೇರಿಸಿದ ಮತ್ತು ದೇಶದ ಎಲ್ಲ ಸಂಪತ್ತನ್ನು, ಆದಾಯವನ್ನು ಮತ್ತು ಆಡಳಿತವನ್ನು ತನ್ನ ಕೈಯಲ್ಲಿಯೆ ಇಟ್ಟುಕೊಂಡ.

ಆ ಸಮಯದಲ್ಲಿ ಅವನಿಗೆ ಕೆಡುಕು ಬಯಸುವ ದಳಪತಿಯೊಬ್ಬ ನರಸೇನಕನೆ ಹತ್ಯೆಗೈಯಲು ಆಜ್ಞೆಯಿತ್ತಿದ್ದನೆಂದು ಅನಂತರ ಹೇಳುವ ಉದ್ದೇಶದಿಂದ ರಾಜಕುಮಾರನನ್ನು ಕೊಲ್ಲಲು ನಿರ್ಧರಿಸಿದ. ಏಕೆಂದರೆ ನರಸೇನಕ ರಾಜ್ಯದ ಆಡಳಿತ ವಹಿಸಿಕೊಡಲಾಗಿದ್ದ ಮಂತ್ರಿಯಾಗಿದ್ದುದರಿಂದ ಈ ದ್ರೋಹಕೃತ್ಯಕ್ಕಾಗಿ ನರಸೇನಕನನ್ನು ಮರಣಕ್ಕೀಡುಮಾಡಲಾಗುವುದೆಂದು ಅವನು ಬಗೆದ. ಅವನು ಕೂಡಲೆ ಆ ಉದ್ದೇಶಕ್ಕಾಗಿ ಆಮಿಷ ನೀಡಿದ್ದ ಬಾಲಸೇವಕನೊಬ್ಬ ಒಂದು ರಾತ್ರಿ ರಾಜಕುಮಾರನನ್ನು ಕೊಲ್ಲುವಂತೆ ವ್ಯವಸ್ಥೆಗೊಳಿಸಿದ ಮತ್ತು ಅವನು ಖಡ್ಗದಿಂದ ರಾಜಕುಮಾರನನ್ನು ಕೊಂದ. ಅವನು ಸತ್ತನೆಂದು ಕೇಳಿದ ಮತ್ತು ತಾನೇ ಅವನನ್ನು ಕೊಲ್ಲಲು ಕಳಿಸಿಕೊಟ್ಟವನೆಂದು (ಭಾವಿಸಲಾಗಿದ್ದುದನ್ನು) ತಿಳಿದ ಕೂಡಲೆ ನರಸೇನಕ ರಾಜರ ಇನ್ನೊಬ್ಬ ಸಹೋದರರನ್ನು ರಾಜನ ಸ್ಥಾನಕ್ಕೇರಿಸಿದ. ಈ ದಳಪತಿಯನ್ನು ಇದಕ್ಕಿಂತ ಹೆಚ್ಚು ಶಿಕ್ಷಿಸಲು ತಾಮರಾವ್ ಎಂಬ ಹೆಸರಿನ ಈ ತಮ್ಮನನ್ನು ರಾಜನ ಸ್ಥಾನಕ್ಕೇರಿಸುವವರೆಗೆ ಅವನಿಗೆ ಶಕ್ಯವಿದ್ದಿಲ್ಲ. ಏಕೆಂದರೆ, ಆ ದಳಪತಿಗೆ ಅನೇಕ ಸಂಬಂಧಿಗಳಿದ್ದರು. ಅವನು (ನರಸೇನಕ) ಒಂದು ದಿನ ನಗರದಲ್ಲಿ ತನ್ನ ಎಲ್ಲ ಮನೆ ಮಾರು ಬಿಟ್ಟು ಬೇಟೆಗೆ ಹೋಗುವುದಾಗಿ ಹೇಳಿ ಬಿಸ್ನಗ ನಗರದಿಂದ ನಾಗುಂದಿಮ್ ಕಡೆಗೆ ಹೊರಟ. ಮತ್ತು ಈ ನಾಗುಂದಿಮ್ ನಗರಕ್ಕೆ ಆಗಮಿಸಿದ ನಂತರ ಆ ಸ್ಥಳದಿಂದ ಇಪ್ಪತ್ನಾಲ್ಕು ಹರದಾರಿ ದೂರವಿರುವ ಪೆನಗುಂದಿಮ್[22] ಎಂಬ ಇನ್ನೊಂದು ನಗರಕ್ಕೆ ಹೋದ. ಅಲ್ಲಿ ಕೂಡಲೆ ದೊಡ್ಡ ಪಡೆಗಳನ್ನು ಅನೇಕ ಕುದುರೆಗಳನ್ನು ಮತ್ತು ಆನೆಗಳನ್ನು ಸಿದ್ಧಗೊಳಿಸಿದ ಮತ್ತು ಅದಾದ ಮೇಲೆ ತಾನು ಹೋದ ಉದ್ದೇಶವನ್ನು ರಾಜಾ ತಾಮರಾವ್‌ನಿಗೆ ಹೇಳಿಕಳಿಸಿದ. ತಿಮರ್ಸಾ[23] ಎಂಬ ಹೆಸರಿನ ಆ ದಳಪತಿ ತನ್ನ ಸಹೋದರನಾಗಿದ್ದ ರಾಜನನ್ನು ಕೊಲ್ಲುವ ಮೂಲಕ ಮಾಡಿದ ದ್ರೋಹವನ್ನು ಮತ್ತು ಅವನ ಮರಣದಿಂದಾಗಿ ತಾನು (ರಾಜಕುಮಾರ) ರಾಜ್ಯದ ಉತ್ತರಾಧಿಕಾರಿಯಾದುದನ್ನು ವಿವರಿಸಿದನು. ಅವನ ತಂದೆ ರಾಜ್ಯವನ್ನು ಮತ್ತು ಅವನ ಹಾಗೂ ಅವನ ಸಹೋದರನ ಯೋಗಕ್ಷೇಮವನ್ನು ತನಗೆ ಒಪ್ಪಿಸಿದುದರಿಂದ ದ್ರೋಹಿಯಾದ ಅವನೊಂದಿಗೆ ತಾನೂ ಅದೇ ರೀತಿ ಮಾಡುವುದಾಗಿಯೂ ತಿಳಿಸಿದ. ಮತ್ತು ಆ ಕಾರಣಕ್ಕಾಗಿ ಅವನನ್ನು ಶಿಕ್ಷಿಸುವುದು ಅಗತ್ಯವಿದೆಯೆಂದು ಆಗ್ರಹ ಪಡಿಸಿದ. ಆದರೆ, ತಾನು ಅವನಿಂದಲೆ ರಾಜನಾದುದರಿಂದ ರಾಜ ಆ ಸಮಯಕ್ಕೆ ಆ ದಳಪತಿಗೆ ಬಲು ಪ್ರೀತಿ ತೋರುತ್ತಿದ್ದನು ಮತ್ತು ಅವನನ್ನು ಶಿಕ್ಷಿಸುವ ಬದಲು ಅವನಿಗೆ ಅನುಗ್ರಹ ತೋರಿದ ಮತ್ತು ಮಂತ್ರಿಯ ವಿರುದ್ಧ ಅವನ ಪಕ್ಷ ವಹಿಸಿದ. ಇದನ್ನು ಕಂಡು ನರಸೇನಕ ದೊಡ್ಡ ಪಡೆಗಳೊಂದಿಗೆ ಅವನ ವಿರುದ್ಧ ಸಾಗಿದ ಮತ್ತು ಅವನನ್ನು ಮುತ್ತಿದ, ನಾಲ್ಕೈದು ದಿನ ಅವನನ್ನು ಬೆದರಿಸಿದ. ಕೊನೆಗೆ, ಅವನ ನಿರ್ಧಾರ ಕಂಡು ರಾಜ ತಿಮರ್ಸಾನನ್ನು ಕೊಲ್ಲುವಂತೆ ಆಜ್ಞೆಯಿತ್ತ. ಅದಾದ ನಂತರ ಅವನು (ರಾಜ) (ದ್ರೋಹಿಯ) ರುಂಡವನ್ನು ತೋರಿಸಲು ಮಂತ್ರಿಗೆ ಕಳಿಸಲಾಗಿ

ಅವನು ಹಿಗ್ಗಿದ. ನರಸೇನಕ ತನ್ನ ಎಲ್ಲ ಸೈನಿಕರನ್ನು ಬರ್ಖಾಸ್ತು ಮಾಡಿದ ಮತ್ತು ನಗರವನ್ನು ಪ್ರವೇಶಿಸಿದ. ಅಲ್ಲಿ ನ್ಯಾಯವಂತ ವ್ಯಕ್ತಿಯೆಂದು ಅವನನ್ನು ಪ್ರೀತಿಸುತ್ತಿದ್ದ ಎಲ್ಲ ಜನರು ಅವನನ್ನು ಆದರದಿಂದ ಬರಮಾಡಿಕೊಂಡರು.

ಕೆಲವು ದಿನಗಳು ಮತ್ತು ವರ್ಷಗಳು ಕಳೆದನಂತರ, ರಾಜನ ವಯಸ್ಸು ಎಷ್ಟು ಚಿಕ್ಕದೆಂದು ಕಂಡು ನರಸೇನಕ ಅವನನ್ನು ಸುರಕ್ಷಿತವಾಗಿರಿಸಲು ಬಹಳ ಜನ ರಕ್ಷಕ ರೊಂದಿಗೆ ಪೆನಗುಂದಿ ನಗರದಲ್ಲಿ ಇಡಲು, ಅವನ ಆಹಾರ ಮತ್ತು ಖರ್ಚಿಗಾಗಿ ಪ್ರತಿ ವರ್ಷ ೨೦,೦೦೦ ಸುವರ್ಣ ಕ್ರೂಜೆಡೊಗಳನ್ನು ಕೊಡಲು ಮತ್ತು ತನ್ನ ಪ್ರಭು ವಾಗಿದ್ದ ರಾಜ ಅದನ್ನು ತನಗೆ ಒಪ್ಪಿಸಿದ್ದರಿಂದ ರಾಜ್ಯವನ್ನು ತಾನೇ ಆಳಲು ನಿರ್ಧರಿಸಿದ. ಇದನ್ನು ಮಾಡಿದ ಮೇಲೆ, ತಾನು ಬಿಸ್ನಗಕ್ಕೆ ಹೋಗಿ ರಾಜ್ಯಕ್ಕೆ ಹಿತ ವಾಗುವಂತಹ ಕೆಲವು ಕಾರ್ಯಗಳನ್ನು ಮಾಡಬಯಸಿರುವುದಾಗಿ ರಾಜನಿಗೆ ಹೇಳಿದ. ಈಗ ತಾನೇ ತನ್ನ ಯಜಮಾನನಾಗುವೆನು ಮತ್ತು ಅವನ ನಿಯಂತ್ರಣಕ್ಕೆ ಅಷ್ಟೊಂದಾಗಿ ಒಳಪಡೆನು ಎಂದು ಭಾವಿಸಿ ರಾಜ ಅದನ್ನು ಕೇಳಿ ಸಂತೋಷಗೊಂಡು ಹಾಗೆಯೆ ಮಾಡು ಎಂದು ಅವನಿಗೆ ಹೇಳಿದ. ಅಲ್ಲಿಂದ ಹೊರಟು ಬಿಸ್ನಗಕ್ಕೆ ಬಂದ ಮೇಲೆ ನರಸೇನಕ ತಾನು ಯೋಜಿಸಿದ್ದಂತೆ ಅವನ ರಕ್ಷಣೆಗಾಗಿ ೨೦,೦೦೦ ಜನರನ್ನು ಕಳಿಸಿದ. ಅವರ ದಳಪತಿಯಾಗಿ ತಿಮಪನರ್ಕ ಎಂಬ ತಾನು ಬಹಳ ವಿಶ್ವಾಸ ವಿಟ್ಟವನನ್ನು ಕಳಿಸಿದ. ಅವನು ರಾಜನನ್ನು ನಗರ ಬಿಡಲು ಕೊಡಬಾರದೆಂದು ದ್ರೋಹ ದಿಂದ ಅವನನ್ನು ಜಾಗರೂಕತೆಯಿಂದ ಕಾಪಾಡಬೇಕೆಂದೂ (ಅವನಿಗೆ ಆಜ್ಞೆಯಿತ್ತು).

ಮತ್ತು ಇದನ್ನು ಮಾಡಿದ ಮೇಲೆ ನರಸೇನಕ ಬಂಡೆದ್ದಿದ್ದ ಹಲವಾರು ಊರುಗಳ ಮೇಲೆ ದಾಳಿಯಿಟ್ಟು ಅವುಗಳನ್ನು ವಶಪಡಿಸಿಕೊಂಡ ಮತ್ತು ಧ್ವಂಸ ಮಾಡಿದ. ಆ ಸಮಯಕ್ಕೆ, ಅವನು ಆಳಲು ಯೋಗ್ಯನಲ್ಲದುದರಿಂದ ರಾಜನನ್ನು ಕೊಲ್ಲಬೇಕೆಂದು ಕೆಲವು ದಳಪತಿಗಳು ಸೂಚಿಸಿದರು. ಆದರೆ ನರಸೇನಕ ಇದಕ್ಕೆ ಏನನ್ನೂ ಹೇಳಲಿಲ್ಲ. ಹಾಗಿದ್ದರೂ, ಕೆಲವು ದಿನಗಳ ನಂತರ ಅವರು ತನ್ನೊಂದಿಗೆ ಮಾತಾಡಿದ್ದ ದ್ರೋಹದ ಬಗೆಗೆ, ಅದು ಹೇಗೆ ತನ್ನ ದೊಡ್ಡಸ್ತಿಕೆಯನ್ನು ಹೆಚ್ಚಿಸುತ್ತ ದೆಂಬ ಮತ್ತು ತಾನು (ಕೇವಲ) ಮಂತ್ರಿಯಾಗಿದ್ದ ರಾಜ್ಯದ ಅಧಿಪತಿಯನ್ನಾಗಿ ಹೆಚ್ಚು ಸುಲಭವಾಗಿ ಮಾಡುವ ಬಗೆಗೆ ಆಲೋಚಿಸಿ ಒಂದು ದಿನ ತನಗೆ ಮೇಲಿಂದ ಮೇಲೆ ಸೂಚಿಸಿದ್ದ ಅದೇ ದಳಪತಿಗಳನ್ನು ಕರೆದು ರಾಜನ ಮರಣದಲ್ಲಿ ತನ್ನ ಕೈವಾಡ ವಿದೆಯೆಂದು ಗೊತ್ತಾಗದಂತೆ ಅವನನ್ನು ಕೊಲ್ಲುವ ಉಪಾಯದ ಬಗೆಗೆ ಅವರನ್ನು ಕೇಳಿದ. ಆಗ ಒಬ್ಬನು ಅವನಿಗೆ ಹೇಳಿದುದೇನೆಂದರೆ : ಒಂದು ಒಳ್ಳೆಯ ಹಾದಿ ಯೆಂದರೆ ಅವನು (ಮಂತ್ರಿ) ಅವನೊಂದಿಗೆ ಸಿಟ್ಟಿಗೆದ್ದಂತೆ ತೋರಬೇಕು ಮತ್ತು ಅವನನ್ನು ತನ್ನಲ್ಲಿಗೆ ಬರಲು ಆಜ್ಞಾಪಿಸಬೇಕು : ಈ ಆಜ್ಞೆಯನ್ನು ಅವನು ಪಾಲಿಸುವದಿಲ್ಲ ಮತ್ತು ಈ ಅವಿಧೇಯತೆಯ ಕೃತಿಗಾಗಿ ಯಾವುದಾದರೂ ಶಿಕ್ಷೆ

ಕೊಡುವಂತೆ ಅವನು (ಮಂತ್ರಿ) ವಿಧಿಸಬೇಕು ; ಈ ಉದ್ರೇಕವಾದ ಮೇಲೆ ತಾನು ನಗರವನ್ನು ಬಿಟ್ಟು ಪೆನಗುಂಡಿಗೆ ಹೋಗಿ ರಾಜನನ್ನು ಮಂತ್ರಿಯ ವಿರುದ್ಧ ಪ್ರಚೋದಿಸುವೆನು ; ತಾನು ರಾಜನ ವಿಶ್ವಾಸ ಸಂಪಾದಿಸಿದ ಮೇಲೆ ಅವನು ಅವಿಧೇಯನಾಗುವಂತೆ ಅವನ ವಿರುದ್ಧ ಸಂಚು ಹೂಡುವೆನು ; ಮತ್ತು ರಾಜನಿಗೆ ಹೆಚ್ಚಿನ ಪ್ರೋತ್ಸಾಹ ನೀಡುವ ಸಲುವಾಗಿ ದಳಪತಿಗಳಿಂದ ಬಂದಂತ ಖೊಟ್ಟಿ ಪತ್ರ ಗಳನ್ನು ತಯಾರಿಸುವೆನು. ಅವುಗಳಲ್ಲೆಲ್ಲ ಅದೇ ಸಲಹೆ ಇರುವುದು, ಅಂದರೆ ಅವನು ಸ್ವತಂತ್ರನಾಗಿರುವುದಕ್ಕಿಂತ ಹೆಚ್ಚು ಸೆರೆಯಾಳಾಗಿರುವ ನಗರವನ್ನು ಬಿಡಬೇಕು ಎಂಬುದು ; ಮತ್ತು ತಾನು ಮಾತ್ರವೆ ರಾಜ ಮತ್ತು ಪ್ರಭು, ಆದರೂ ಸಹ ರಾಜ್ಯ ತನ್ನ ಸಾಮಂತನಾದ ನರಸೇನಕನ ಅಧಿಕಾರದಲ್ಲಿ ಇದೆ, ಅವನು ರಾಜ್ಯದಲ್ಲಿ ತನ್ನನ್ನು ಬಲಿಷ್ಠನನ್ನಾಗಿ ಮಾಡಿಕೊಂಡು ಅವನನ್ನು (ರಾಜನನ್ನು) ಬಂಧಿಯಾಗಿರಿಸಿ ಬಂಡೆದ್ದಿದ್ದಾನೆ. ಗುಪ್ತವಾಗಿ ನಗರ ಬಿಟ್ಟು ಆ ಪತ್ರ ಬಂದ ದಳಪತಿಗೆ ಸೇರಿದ ದುರ್ಗಕ್ಕೆ ಹೋಗಿ ಅಲ್ಲಿ ದೊಡ್ಡ ಪ್ರಮಾಣದಲ್ಲಿ ಅನುಯಾಯಿಗಳನ್ನು ಕೂಡಿಸಿ ಸಿದ್ಧತೆ ಮಾಡಿಕೊಳ್ಳಬೇಕೆಂದು ರಾಜನನ್ನು ತಾನು ಆಗ್ರಹಪಡಿಸುವುದಾಗಿ ಹೇಳಿದ. ಮತ್ತು ಮನ್ನೆಯರು ಹಾಗೂ ದಳಪತಿಗಳು ಅವನ ಇಚ್ಛೆ ಮತ್ತು ನಿರ್ಧಾರವನ್ನು ತಿಳಿದ ಬಳಿಕ ಅವರು ಅದಕ್ಕನುಗುಣವಾಗಿಯೆ ನಡೆದುಕೊಳ್ಳುವರು ಮತ್ತು ಅವನಿಗೆ ನೆರವಾಗುವರು ಮತ್ತು ಅವನಿಗೆ (ನರಸೇನಕನಿಗೆ) ತನ್ನನ್ನು (ರಾಜನನ್ನು) ಈಗ ಇಡಲಾಗಿದ್ದ ಸೆರೆಮನೆಯನ್ನೆ ಕೊಡಲಾಗುವುದು ಎಂದೂ ಹೇಳುವುದಾಗಿ ತಿಳಿಸಿದ. ಹೀಗೆ ಅವನು ರಾಜನಾಗುವನು. ರಾಜನನ್ನು ಇದಕ್ಕಾಗಿ ಮನವೊಲಿಸಿದ ನಂತರ ಅವನನ್ನು (ನಗರ ಬಿಡುವಂತೆ) ಮಾಡಿ ಅವನು ಹೊರಗೆ ಹೋಗುವಾಗ ಕೊಲ್ಲುವು ದಾಗಿಯೂ ಈ ರೀತಿ ನರಸೇನಕ ರಾಜನಾಗುವನೆಂದೂ (ದಳಪತಿ ಮುಂದುವರಿದು ಹೇಳಿದ).

ಈ ದ್ರೋಹದ ಬಗೆಗೆ ಮತ್ತು ಈ ದಳಪತಿ ಯೋಜಿಸಿದ ದುಷ್ಕೃತ್ಯದ ಬಗೆಗೆ ಕೇಳಿ ನರಸೇನಕ ಬಲು ಸಂತಸಪಟ್ಟ ಮತ್ತು ಅವನಿಗೆ ಬಹಳ ಅನುಗ್ರಹ ತೋರಿದ. ಕೆಲ ದಿನಗಳ ನಂತರ ಆ ದಳಪತಿ ಓಡಿಹೋದಂತೆ ನಟಿಸಿ ನರಸೇನಕನಲ್ಲಿಂದ ಅದೃಶ್ಯ ನಾದ. ಅವನು ಪೆನಗುಂದಿಗೆ ಬಂದ. ಕೆಲವು ದಿನಗಳಲ್ಲಿಯೆ ಅಲ್ಲಿ ಅವನ ಆಗಮನ ಗೊತ್ತಾಯಿತು. ಯೋಜಿತವಾಗಿದ್ದ ಎಲ್ಲ ಕೆಲಸಗಳನ್ನು ಪ್ರಾರಂಭಿಸಿ ಕೈಗೆತ್ತಿಕೊಂಡ. ಅವನು ಪ್ರತಿ ದಿನ ರಾಜನಿಗೆ ಒಂದೊಂದು ದುರ್ಗದ ದಳಪತಿಯಿಂದ ಬಂದ ಪತ್ರ ತೋರಿಸಿದ. ಹೀಗೆ ತೋರಿಸಲಾದ ಪತ್ರಗಳಲ್ಲಿನ ಸಂಚುಗಳನ್ನು ಅರ್ಥೈಸಿಕೊಂಡು ರಾಜ ಉತ್ತರಿಸಿದುದು ಹೀಗೆ : ಆಲೋಚನೆ ಮತ್ತು ಸಲಹೆಗಳೇನೊ ಉತ್ತಮವೆಂದು ತೋರುತ್ತವೆ : ಆದರೆ, ರಾಜ್ಯದ ಮಂತ್ರಿಯಾಗಿದ್ದುದಲ್ಲದೆ ತನ್ನ ಮೇಲೆ ತಕ್ಷಣ ಯುದ್ಧ ಮಾಡಬಹುದಾದಂತೆ ಎಲ್ಲ ಕುದುರೆ, ಆನೆ ಮತ್ತು ಬೊಕ್ಕಸ (ಸ್ವಾಧೀನಲ್ಲಿ)

ಇದ್ದ ನರಸೇನಕನ ಬಲವನ್ನು ತಾನು ಹೇಗೆ ಎದುರಿಸಬಲ್ಲೆನು. "ನೀವು ಹೇಳುವುದು ನಿಜ, ಸ್ವಾಮಿ. ಆದರೂ ನಿನ್ನನ್ನು ರಾಜನನ್ನಾಗಿ ಮಾಡಿದ ಎಲ್ಲ ದಳಪತಿಗಳು ಅವನನ್ನು ಬಹಳ ದ್ವೇಷಿಸುತ್ತಾರೆ ಮತ್ತು ನಿಮ್ಮನ್ನು (ಅದುವರೆಗೆ ಸ್ವತಂತ್ರವಾಗಿದ್ದ ಮತ್ತು ಅವನು ಅಲ್ಲಿಗೆ ಓಡಿಹೋಗಲು ರಾಜನಿಗೆ ಸಲಹೆಯಿತ್ತಿದ್ದ ದುರ್ಗವಾಗಿದ್ದ) ಚಾಬದಗರಿಯಲ್ಲಿ ನೋಡಿದಾಕ್ಷಣ ಅವರೆಲ್ಲ ನಿಮ್ಮ ನೆರವಿಗೆ ಹಾರಿಬರುತ್ತಾರೆ. ಏಕೆಂದರೆ, ಅದನ್ನು ಅವರು ನ್ಯಾಯವಾದ ಉದ್ದೇಶವೆಂದು ಮನ್ನಿಸುತ್ತಾರೆ" ಎಂದು ದ್ರೋಹಿ ಉತ್ತರಿಸಿದ. ಅದಕ್ಕೆ ರಾಜ ಹೀಗೆ ನುಡಿದ "ಹಾಗಿದ್ದರೆ, ನನ್ನ ನಿರ್ಗಮನ ಕಾವಲುಗಾರರಿಗೆ ಮತ್ತು ಈ ನಗರದಲ್ಲಿ ನನ್ನನ್ನು ಸುತ್ತುವರಿದಿರುವ ೨೦,೦೦೦ ಜನರಿಗೆ ಗೊತ್ತಾಗದಂತೆ ನಾನು ಈ ಸ್ಥಳವನ್ನು ಬಿಡುವ ಯಾವ ಸೂಚನೆಯನ್ನು ನೀನು ಮಾಡುವಿ ?" ಅದಕ್ಕೆ ಅವನೆಂದ : ಸ್ವಾಮಿ, ನಾನು ನಿಮಗೆ ಒಂದು ಒಳ್ಳೆಯ ಯೋಜನೆಯನ್ನು ತಿಳಿಯಪಡಿಸುವೆ. ನೀವು ಮತ್ತು ನಾನು ಈ ನಿಮ್ಮ ಉದ್ಯಾನ ದಿಂದ ಮತ್ತು ಅಲ್ಲಿಂದ ನನಗೆ ಚನ್ನಾಗಿ ಪರಿಚಿತವಿರುವ ಈ ನಗರ (ಗೋಡೆ)ದಲ್ಲಿರುವ ಹಿಂಬಾಗಿಲಿನಿಂದ ಹೊರಟುಹೋಗೋಣ. ನಿಮ್ಮ ಪರಿವಾರವಿಲ್ಲದೆ ನೀವೊಬ್ಬರೆ ಇರುವುದನ್ನು ನೋಡಿ ನೀವು ರಾಜನೆಂದು ಕಾವಲುಗಾರರಿಗೆ ತಿಳಿಯುವುದಿಲ್ಲ. ಹೀಗೆ ನಾವು ನಗರದ ಹೊರಭಾಗಕ್ಕೆ ಸಾಗುವೆವು. ಅಲ್ಲಿ ನಾನು ನಿಮಗೆ ಒಳ್ಳೆಯದೆನಿಸುವಲ್ಲಿ ನಮ್ಮನ್ನು ಒಯ್ಯಲು ಕುದುರೆಗಳನ್ನು ಸಿದ್ಧವಾಗಿರಿಸಿರುತ್ತೇನೆ." ಇದೆಲ್ಲ ರಾಜನನ್ನು ಬಹಳ ಸಂತೋಷಗೊಳಿಸಿತು ಮತ್ತು ಅವನು ಎಲ್ಲವನ್ನೂ ಅವನ ಕೈಗೊಪ್ಪಿಸಿದ. ತನ್ನ ಎಲ್ಲ ಇಚ್ಛೆ ನೆರವೇರಿದುದನ್ನು ಕಂಡು, ದಳಪತಿ ರಾಜನು ಯಾವುದರ ಮೂಲಕ ಓಡಿಹೋಗಬೇಕೆಂದು ತಾನು ಬಯಸಿದ್ದನೊ ಮತ್ತು ಯಾವುದು ರಾಜ ಮನೆಗಳ ಹತ್ತಿರವಿತ್ತೊ (ಏಕೆಂದರೆ, ಉದ್ಯಾನದಲ್ಲಿ ರಾಜ ಆಗಾಗ ತನ್ನ ಹೆಂಡತಿಯರೊಂದಿಗೆ ರಮಿಸಲು ಹೋಗುತ್ತಿದ್ದ. ಆ ಭಾಗದಲ್ಲಿ ಉದ್ಯಾನದಲ್ಲಿ ೩೦೦ ಸಶಸ್ತ್ರ ಜನರ ತುಕಡಿ ಕಾವಲಿತ್ತು) ಆ ಉದ್ಯಾನಭಾಗದಲ್ಲಿ ಕಾವಲಿದ್ದ ಜನರೊಂದಿಗೆ ಮಾತಾಡಿದ. ಈ ಜನರಿಗೆ ಹೀಗೆ ಹೇಳಿದ : "ಇಂತಿಂಥ ರಾತ್ರಿ ಇಂತಿಂಥ ಘಂಟೆಗೆ ನಾನು ಇಲ್ಲಿ ಒಬ್ಬನೊಡನೆ ಹೋಗುತ್ತಿರುವುದನ್ನು ನೀವು ಕಂಡರೆ ಅವನನ್ನು ಕೊಲ್ಲಿರಿ. ಏಕೆಂದರೆ, ಅವನು ಅದಕ್ಕೆ ಅರ್ಹನಿದ್ದಾನೆ ಮತ್ತು ನಾನು ನಿಮಗೆ ಇನಾಮು ಕೊಡುವೆ." ಅದು ಅವನಿಗೆ ತಾವು ಮಾಡುವ ಅಲ್ಪ ಸೇವೆಯೆಂದು ಅವರೆಲ್ಲರೂ ನುಡಿದರು. ಆ ದಿನ ಕಳೆದ ಮೇಲೆ ದ್ರೋಹಿ ರಾಜನಲ್ಲಿಗೆ ಹೋಗಿ ಹೀಗೆಂದ : "ಸ್ವಾಮಿ, ಇಂದು ನೀವು ಮಾಡಲೇಬೇಕಾದುದನ್ನು ನಾಳೆಗೆ ಮುಂದೂಡಬೇಡಿರಿ. ಏಕೆಂದರೆ, ನಾನು ನಿಮ್ಮ ಪಾರಾಗುವಿಕೆಗೆ ಕುದುರೆಗಳನ್ನು ಸಿದ್ಧವಾಗಿರಿಸಿದ್ದೇನೆ ಮತ್ತು ನಿಮ್ಮ ನಿರ್ಗಮನದ ಬಗೆಗೆ ನಿಮ್ಮ ಸ್ತ್ರೀಯರಿಗಾಗಲಿ ಯಾವುದೆ ವ್ಯಕ್ತಿಗಾಗಲಿ ಗೊತ್ತಾಗ ದಂತೆ ನಿಮ್ಮನ್ನು ಕರೆದೊಯ್ಯಲು ಯೋಜಿಸಿರುವೆ. ನಾನು ನಿಮಗಾಗಿ ಕಾಯುತ್ತಿರುವ ಉದ್ಯಾನಕ್ಕೆ ಬನ್ನಿ, ಸ್ವಾಮಿ". ಅವನ ಮಾತುಗಳು ಒಳ್ಳೆಯವು ಇವೆ ಮತ್ತು ತಾನು

ಹಾಗೆಯೆ ಮಾಡುವೆ ಎಂದು ರಾಜ ಉತ್ತರಿಸಿದ. ರಾತ್ರಿ ಆ ಸಮಯ ಬಂದ ಕೂಡಲೆ ರಾಜ ಜಾಗರೂಕತೆಯಿಂದ ಹೊರಟ ಮತ್ತು ಅವನಿಗಾಗಿ ಕೆಲ ಸಮಯ ಕಾಯ್ದಿದ್ದವನು ಇನ್ನೂ ಹೆಚ್ಚು ಜಾಗರೂಕನಾಗಿದ್ದ. ಮತ್ತು ಅವನು ಸಶಸ್ತ್ರ ಕಾವಲುಗಾರರಿಗೆ ಸಂಜ್ಞೆ ಮಾಡಿದ ಮತ್ತು ಅವನು ಕಾವಲುಗಾರರಾಗಿದ್ದ ಇಬ್ಬರ ಮಧ್ಯೆ ಹಾಯ್ದು ಹೋದ ಮತ್ತು ಅವರು ರಾಜನ ಮೇಲೆ ಬಿದ್ದರು ಮತ್ತು ಅವನನ್ನು ಕೊಂದರು ಮತ್ತು ತಕ್ಷಣ ಅದೇ ಉದ್ಯಾನದ ಒಂದು ಗಿಡದ ಬುಡದಲ್ಲಿ ಹೂಳಿದರು. ಅವರಿಗೆ ತಾವು ಯಾರನ್ನು ಕೊಂದಿದ್ದೇವೆಂದು ತಿಳಿಯದಂತೆ ಇದನ್ನು ಸಾಧಿಸಿದ ಮೇಲೆ ದ್ರೋಹಿ ಅವರಿಗೆ ತನ್ನ ಧನ್ಯವಾದ ಹೇಳಿದ ಮತ್ತು ನಗರವನ್ನು ಬಿಡುವ ಸಿದ್ಧತೆ ಮಾಡಿಕೊಳ್ಳಲು ಹಾಗೂ ಅಲ್ಲಿ ಮಾತಿಗೆ ಅವಕಾಶವಾಗದಿರಲೆಂದು ಕೂಡ ಪ್ರವಾಸಿ ಗೃಹಕ್ಕೆ ಹಿಂತಿರುಗಿದ. ಮತ್ತು ಮರುದಿನ ಬೆಳಿಗ್ಗೆ ರಾಜನಿಲ್ಲದುದು ಪತ್ತೆಯಾಯಿತು. ಮತ್ತು ನಗರವೆಲ್ಲ ಹುಡುಕಿದರೂ ಯಾವ ಸುದ್ದಿಯೂ ತಿಳಿಯದಿದ್ದಾಗ ಎಲ್ಲ ಜನರು ಅವನು ಎಲ್ಲಿಗೊ ಓಡಿಹೋಗಿದ್ದಾನೆ ಮತ್ತು ಅಲ್ಲಿಂದ ನರಸೇನಕನ ಮೇಲೆ ಯುದ್ಧ ಮಾಡುತ್ತಾನೆ ಎಂದು ಬಗೆದರು. ಮತ್ತು ನರಸೇನಕನಿಗೆ ಸುದ್ದಿಯನ್ನು ನೇರವಾಗಿ ತಲುಪಿಸಲಾಯಿತು ಮತ್ತು ಬಹಳ ದುಃಖ ನಟಿಸಿದ ಅವನು ರಾಜನ ಮರಣದಿಂದ ರಾಜ್ಯ ಕ್ಷೋಭೆಯಲ್ಲಿ ಮುಳುಗಿದರೆ ಇರಲಿ ಎಂದು ತನ್ನೆಲ್ಲ ಕುದುರೆಗಳನ್ನು ಮತ್ತು ಆನೆಗಳನ್ನು ಅಣಿಗೊಳಿಸಿದ. ಏಕೆಂದರೆ, ರಾಜ ಮಾಯವಾಗಿದ್ದಾನೆಂಬುದೊಂದನ್ನು ಬಿಟ್ಟರೆ ಸಂಗತಿ ಏನೆಂಬುದು ಅವನಿಗಿನ್ನೂ ಖಚಿತವಾಗಿ ತಿಳಿದಿರಲಿಲ್ಲ. ಮತ್ತು ನಂತರ ರಾಜನನ್ನು ಕೊಂದ ಮನುಷ್ಯ ಬಂದ ಮತ್ತು ಅದನ್ನು ಹೇಗೆ ಮಾಡಲಾಯಿತು ಮತ್ತು ಅವನನ್ನು ಕೊಂದವರಿಗೂ ಅವನಾರೆಂಬುದು ತಿಳಿಯದಂತೆ ಅವನನ್ನು ಹೇಗೆ ಕೊಲ್ಲಲಾಯಿತೆಂಬುದನ್ನು ಹೇಳಿದ. ಮತ್ತು ನರಸೇನಕ ಅವನಿಗೆ ಬೆಲೆಯುಳ್ಳ ಬಹುಮಾನಗಳನ್ನು ನೀಡಿದ. ಮತ್ತು ರಾಜನ ಯಾವ ಸುದ್ದಿಯೂ ಇರದ್ದರಿಂದ ಮತ್ತು ಅವನು ಎಲ್ಲವನ್ನು ತನ್ನ ಕೈಯಲ್ಲಿ ಹಿಡಿದುಕೊಂಡಿದ್ದರಿಂದ ನರಸಿಂಗ ರಾಜ್ಯದಲ್ಲೆಲ್ಲ ಅವನನ್ನು ರಾಜನನ್ನಾಗಿ ಮಾಡಲಾಯಿತು.

ಮತ್ತು ಈ ರಾಜ ಮರಣಕಾಲಕ್ಕೆ ಐದು ಪುತ್ರರನ್ನು ಬಿಟ್ಟುಹೋದ. ಒಬ್ಬನ ಹೆಸರು ಬಸಬಲರಾವ್, ಇನ್ನೊಬ್ಬನದು ಕ್ರಿಸ್ನಾರಾವ್, ಮತ್ತೊಬ್ಬನದು ಶೇತಾರಾವ್, ಮಗುದೊಬ್ಬನದು ರಾಮಿಗುಪ, ಇನ್ನೂ ಒಬ್ಬನದು ಜೌಮಿಸ್ಸುಯ.[25]

ಮತ್ತು ಈ ಬುಸಬಲರಾವ ತನ್ನ ತಂದೆ ನರಸೇನಿಕನ ಮರಣ ಕಾಲಕ್ಕೆ ರಾಜ್ಯದ ಉತ್ತರಾಧಿಕಾರಿಯಾದ ಮತ್ತು ಆರು ವರ್ಷ ಆಳಿದ. ಆ ಅವಧಿಯಲ್ಲಿ ಅವನು ಸದಾ ಯುದ್ಧನಿರತನಾಗಿದ್ದ. ಏಕೆಂದರೆ, ಅವನ ತಂದೆ ತೀರಿಕೊಂಡ ಕೂಡಲೆ ಇಡಿ ನಾಡು ಅದರ ದಳವಾಯಿಗಳ ನೇತೃತ್ವದಲ್ಲಿ ಬಂಡೆದ್ದಿತು. ಅವರನ್ನು ಆ ರಾಜ ಅಲ್ಪ ಕಾಲದಲ್ಲಿಯೆ ನಾಶಪಡಿಸಿದ ಮತ್ತು ಅವರ ಪ್ರದೇಶಗಳನ್ನು ವಶಪಡಿಸಿಕೊಂಡು

ತನ್ನ ಆಳಿಕೆಯಡಿ ಅಡಗಿಸಿದ. ಈ ಆರು ವರ್ಷಗಳ ಅವಧಿಯಲ್ಲಿ ರಾಜ್ಯವನ್ನು ಮೊದಲ ಸ್ಥಿತಿಗೆ ತರಲು ರಾಜ ಎಂಟು ದಶಲಕ್ಷ ಸುವರ್ಣ ಪದಾರ್ಥಗಳನ್ನು ವ್ಯಯಿಸಿದ. ರಾಜ ಬಿಸ್ನಗ ನಗರದಲ್ಲಿ ಅನಾರೋಗ್ಯದಿಂದ ತೀರಿಕೊಂಡ. ತೀರಿಕೊಳ್ಳುವ ಮುಂಚೆ ತನ್ನ ಮಂತ್ರಿ ಸಾಳ್ವತಿಮಿಯನನ್ನು[26] ಕರೆಯಿಸಿ ತನ್ನ (ರಾಜನ) ಎಂಟು ವರ್ಷದ ಮಗನನ್ನು ಕರೆತರುವಂತೆ ಆಜ್ಞಾಪಿಸಿದ. ಮತ್ತು ತಾನು ತೀರಿಕೊಂಡ ಕೂಡಲೆ ಈ ಮಗನನ್ನು ರಾಜನನ್ನಾಗಿ (ಅವನು ಅದಕ್ಕೆ ತಕ್ಕ ವಯಸ್ಸಿನವನಾಗಿರದಿದ್ದರೂ ಮತ್ತು ರಾಜ್ಯ ಅವನ ಸಹೋದರ ಕ್ರಿಸ್ನರಾವ್‌ನಿಗೆ ಸೇರಬೇಕಾದುದಾಗಿದ್ದರೂ) ಮಾಡುವಂತೆ ಆಜ್ಞಾಪಿಸಿದ. ಮತ್ತು ತಾನು ಸತ್ತ ಬಳಿಕ ರಾಜ್ಯದಲ್ಲಿ ಮತಭೇದ ಇರಬಾರದೆಂದು ಕ್ರಿಸ್ನರಾವ್‌ನ ಕಣ್ಣು ಕಿತ್ತು ತನಗೆ ತಂದು ತೋರಿಸಬೇಕೆಂದು ಆಜ್ಞಾಪಿಸಿದ. ಸಾಲ್ವಟಿನ ಹಾಗೆಯೆ ಮಾಡುವದಾಗಿ ಹೇಳಿ ಹೊರಟು ಕ್ರಿಸ್ನರಾವ್‌ನನ್ನು ಕರೆಕಳಿಸಿ ಅವನನ್ನು ಓರೆಗೆ ಒಂದು ಲಾಯಕ್ಕೆ ಕರೆದೊಯ್ದು ಹೇಗೆ ಅವನ ಸಹೋದರ ಕಣ್ಣು ಕೀಳಿಸಿ ತನ್ನ ಮಗನನ್ನು ರಾಜನನ್ನಾಗಿ ಮಾಡಲು ಆಜ್ಞಾಪಿಸಿದನೆಂಬುದನ್ನು ಹೇಳಿದ. ಇದನ್ನು ಕೇಳಿದ ಕ್ರಿಸ್ನರಾವ್ ರಾಜ್ಯ ಹಕ್ಕಿನಿಂದ ತನಗೆ ಬರಬೇಕಿದ್ದರೂ ತಾನು ರಾಜನಾಗಲಿ ರಾಜ್ಯದಲ್ಲಿ ಇನ್ನೇನಾಗಲಿ ಆಗಬಯಸುವುದಿಲ್ಲೆಂದೂ ಈ ಪ್ರಪಂಚದಲ್ಲಿ ತಾನು ಜೋಗಿಯಾಗಿ ಕಾಲ ಕಳೆಯಬಯಸಿರುವುದಾಗಿಯೂ ತಾನು ತನ್ನ ಸಹೋದರ ಕಣ್ಣು ಕೀಳುವಂತಹದೇನನ್ನೂ ಮಾಡಿಲ್ಲದಿದ್ದುದರಿಂದ ಹಾಗೆ ಮಾಡಬಾರದೆಂದೂ ಕೇಳಿಕೊಂಡ. ಇದನ್ನು ಕೇಳಿದ ಸಾಳುವತಿನ ಕ್ರಿಸ್ನರಾವ್ ಇಪ್ಪತ್ತು ವರ್ಷಕ್ಕೂ ಮೇಲ್ಪಟ್ಟವನಿದ್ದುದರಿಂದ, ಮತ್ತು ನೀವು ಮುಂದೆ ನೋಡಲಿರುವಂತೆ, ಕೇವಲ ಎಂಟು ವರ್ಷದವನಾಗಿದ್ದ ಬುಸಬಲರಾವನ ಮಗನಿಗಿಂತ ರಾಜನಾಗಲು ಹೆಚ್ಚು ಯೋಗ್ಯನಾದುದರಿಂದ ಒಂದು ಆಡನ್ನು ತರುವಂತೆ ಆಜ್ಞೆಯಿತ್ತ. ಅದರ ಕಣ್ಣು ಕಿತ್ತು ಅವುಗಳನ್ನು ತೋರಿಸಲು ತನ್ನ ಜೀವನದ ಕೊನೆಯ ಗಳಿಗೆಯಲ್ಲಿದ್ದ ರಾಜನಲ್ಲಿಗೆ ಬಂದ. ಅವುಗಳನ್ನು ಅವನಿಗೆ ತೋರಿಸಿದ ಮತ್ತು ರಾಜ ಸತ್ತ ಕೂಡಲೆ ದಿವಂಗತ ರಾಜ ಕಣ್ಣು ಕೀಳಿಸಲು ಆಜ್ಞಾಪಿಸಿದ್ದ ಕ್ರಿಸ್ನರಾವ್‌ನನ್ನು ರಾಜನನ್ನಾಗಿಸಿದ.

## ಅಡಿ ಟಿಪ್ಪಣಿಗಳು

1 ಇದೇ ಕತೆಯನ್ನು ದಕ್ಷಿಣ ಭಾರತದ ಅನೇಕಾನೇಕ ರಾಜರು ಮತ್ತು ಪಾಳೆಯಗಾರರ ಬಗೆಗೆ ಹೇಳಲಾಗುತ್ತದೆ. "ತಾರ್ಖುಕರತ್-ಉಲ್-ಮುಲುತ್" (ಇಂ. ಆ್ಯಂ. ಮೇ ೧೮೯೯, ಪು. ೧೨೯) ಕೂಡ ಬಾಹಮನಿ ಸುಲ್ತಾನ ಆಹಮದ್ ಶಾಹ (೧೪೨೨-೩೫)ನ ಬಗೆಗೆ ಅದನ್ನು ಹೇಳುತ್ತ ಅವನು ಬೀದರವನ್ನು ರಾಜಧಾನಿ ಮಾಡಿಕೊಳ್ಳಲು ಪ್ರೇರೇಪಿಸಿದ್ದು ಬೇಟೆಯಾಡಲ್ಪಟ್ಟ ಮೊಲದ ವರ್ತನೆಯೆಂದು ಆರೋಪಿಸುತ್ತದೆ.

2 ಇವನು ವಿದ್ಯಾರಣ್ಯ ಎಂಬ ಅಡ್ಡ ಹೆಸರಿದ್ದ ಶೃಂಗೇರಿಯ ಮಹಾಗುರು ಮಾಧವಾಚಾರ್ಯ. ನಗರದ ಹೆಸರಿನ ಈ ವ್ಯುತ್ಪತ್ತಿ ಸಾಮಾನ್ಯವಾಗಿರುವುದಾದರೂ ಅದು ತಪ್ಪೆಂದು ನಂಬಲಾಗುತ್ತಿದೆ.

3 ಹಂಪೆಯಲ್ಲಿನ ವಿಶಾಲವಾದ ವಿರೂಪಾಕ್ಷ ದೇವಾಲಯ.

4 ಬುಕ್ಕರಾಯ.

5 "ಪುರಿಯೋರೆ" ಬಹುಶಃ "ಹರಿಹರ"ವನ್ನು ಪ್ರತಿನಿಧಿಸುತ್ತದೆ. ಈ ರಾಜ ಪರ್ದಾಓ ಅಥವಾ ಪಗೋಡಾಗಳನ್ನು ಟಂಕಿಸುವಲ್ಲಿ ಮೊದಲಿಗನಲ್ಲ. ಒಂದನೆಯ ಬುಕ್ಕನ ಪಗೋಡಾ ಗೊತ್ತಿದೆ (ಇಂ. ಆ್ಯಂ. XX. ೩೦೨).

6 ಮೇಲೆ ಪು. ೫೧ ನೋಡಿರಿ. ಇದನ್ನು ಈಗ ಸಧ್ಯ ಜೋಡಿಸಬಹುದಾದ ಯಾವ ಹೆಸರೂ ಈ ರಾಜವಂಶದಲ್ಲಿಲ್ಲ.

7 ಸಿಲೋನ.

8 ಕೊರೊಮಂಡಲ (ಟಿಪ್ಪಣಿ, ಪು. ೨೩೯, ಮೇಲೆ)

9 ವಿಜಯರಾನ್.

10 ಕ್ವಿಲಾನ್.

11 ಮದ್ರಾಸದ ಹತ್ತಿರ ಪುಲಿಕಟ್. ತರುವಾಯದ ವರ್ಷಗಳಲ್ಲಿ ಇದು ವಿಜಯನಗರದ ಮಹತ್ವದ ಪ್ರಾಂತಗಳಲ್ಲೊಂದಾಗಿತ್ತು.

12 ತೆನಸ್ಸರಿಮ್.

13 ಪೀಣ=ತೆಲುಗಿನಲ್ಲಿ ಚಿಣ್ಣ, ಕನ್ನಡದಲ್ಲಿ ಚಿಕ್ಕ ಮತ್ತು 'ಸಣ್ಣ' ಎಂದು ಅರ್ಥ. ಪೀಣ ರಾಯ ಅಥವಾ ಚಿಕ್ಕರಾಯ ಯುವರಾಜನಿಗೆ ಅನ್ವಯಿಸಿದ ಬಿರುದಾಗಿತ್ತು (ಮೇಲೆ, ಪು. ೨೨೩). ನೂನಿಜ್ ಕೊಟ್ಟಿರುವ ವ್ಯುತ್ಪತ್ತಿ ಸ್ಪಷ್ಟವಾಗಿ ತಪ್ಪಾಗಿದೆ.

14 ಅದೇ ಕತೆಯನ್ನು ಹೇಳುವ ಅಬ್ದುಲ್ ರಜಾಕ್ ಘಟನೆ ಜರುಗಿದ ಕಾಲವನ್ನು, "ತಾನು ಕಾಲಿಕತ್‌ನಲ್ಲಿದ್ದಾಗ", ನವಂಬರ ೧೪೪೨ ಮತ್ತು ಎಪ್ರಿಲ್ ೧೪೪೩ ಕ್ರಿ.ಶ.ದ ಮಧ್ಯೆ ಎಂದು ನಿರ್ಧರಿಸುತ್ತಾನೆ.

15 ದಿನಚರಿಯಲ್ಲಿ ಹೇಳಿದ ಇಪ್ಪತ್ತು ಮಂತ್ರಿಗಳಲ್ಲಿ ಸೋದರಳಿಯನೂ ಒಬ್ಬನಾಗಿದ್ದನೆಂದು ಸೂಚಿಸುವಂತೆ ತೋರುತ್ತದೆ.

16 ಮೂಲದಲ್ಲಿ ಹೀಗೆಯೆ ಇದೆ.

17 ವಿರೂಪಾಕ್ಷರಾಯ.

18 ನರಸಿಂಹ. ಅವನು ಸ್ಪಷ್ಟವಾಗಿಯೆ ಪೂರ್ವ ಕರಾವಳಿಯತ್ತ ರಾಜಧಾನಿಯ ಪೂರ್ವಕ್ಕೆ ವಿಶಾಲ ಪ್ರದೇಶಗಳನ್ನು ಪಡೆದಿದ್ದ. ರಾಜನೊಂದಿಗೆ ಅವನ ಸಂಬಂಧ ಎಂದಿಗೂ ಸಂದೇಹದ ವಸ್ತುವಾಗಿದೆ.

19 ಪರ್ಶಿಯಾ (ಒರ್ಮುಝು) ಮತ್ತು ಏಡನ್. ವರ್ತಕರು ಅರಬರು.

20 ರಾಚೋಲ ಅಂದರೆ ರಾಯಚೂರು, ಒದೆಗರಿ, ಉದಯಗಿರಿ, ಕೊನಡೊಲ್ಲಿ, ಕೊಂಡವೀಡು ದುರ್ಗ್ (ದುರ್ಗ)ಕ್ಕೆ ಊಲ್ಗಿ ಎಂದು ಬಳಸಲಾಗಿದೆ.

21 ಎರಡನೆಯ ನರಸನ ವೃತ್ತಾಂತ ಮತ್ತು ಕೌಟುಂಬಿಕ ಸಂಬಂಧ ಶಾಸನಗಳ ಅಧ್ಯಯನದಿಂದ ದೊರೆತ ಸಂಗತಿಗಳಿಂದ ಪೂರ್ಣ ಭಿನ್ನವಾಗಿದೆ. ಆದರ ಪ್ರಕಾರ, ಎರಡನೆಯ ನರಸ ಮೊದಲನೆಯ ನರಸ ಅಥವಾ ನರಸಿಂಹನ ಹಿರಿಯ ಮಗನಾಗಿದ್ದ ಮತ್ತು ಕೃಷ್ಣದೇವರಾಯ ಕಿರಿಯ ಮಗನಾಗಿದ್ದ.

22 ಪೆನ್ನಕೊಂಡ.

23 ನೋಡಿರಿ. "ತೆಮುರ್ನಿಯಾ", ಪು. ೨೫೦ ಮತ್ತು ಟಿಪ್ಪಣಿ ಇವನಿಗೂ ಅದೇ ಹೆಸರಿದ್ದರೂ ಇವನು ಅಲ್ಲಿ ಪ್ರಸ್ತಾಪಿಸಿದ ವ್ಯಕ್ತಿಯಲ್ಲ.

24 ಅವಸಾನದ ದಿನಗಳಲ್ಲಿ ರಾಜ್ಯದ ರಾಜಧಾನಿಯಾಗಿದ್ದ ಚಂದ್ರಗಿರಿ.

25 ಶಾಸನಗಳು ಇಂಥ ಹೆಸರುಳ್ಳ ಯಾವ ಪುತ್ರರ ಹೆಸರನ್ನೂ ನೀಡುವುದಿಲ್ಲ. "ಕ್ರಿಸ್ನಾರಾವ್" ಬಹುಶಃ ಪ್ರಥಮ ನರಸ ಅಥವಾ ನರಸಿಂಹನ ಮಗನೂ ಹೆಚ್ಚಾಗಿ ವೀರ ನರಸಿಂಹನೆಂದು ಕರೆಯಲ್ಪಡುತ್ತಿದ್ದ ಎರಡನೆಯ ನರಸನ ಸಹೋದರನೂ ಆದ ಕ್ರಿಷ್ಣರಾವ್‌ನನ್ನು ಸಂಕೇತಿಸುತ್ತದೆ.

26 ಸಾಳುವ ತಿಮ್ಮ. ಇವನು ಸಾಳುವ ಎಂಬ ಮನೆತನದ ಹೆಸರುಳ್ಳ ಹೊಸ ರಾಜಮನೆತನಕ್ಕೆ ಸೇರಿದುದು ಸ್ಪಷ್ಟವಾಗಿದೆ. ಅವನು ಕೃಷ್ಣದೇವರಾಯನ ಪ್ರಭಾವಶಾಲಿ ಮಂತ್ರಿಯಾಗಿದ್ದ. ಆದರೆ ಅಪಮಾನಿತನಾಗಿ. ಬಂಧಿತನಾಗಿ ಮತ್ತು ಕಣ್ಣು ಕೀಳಿಸಿಕೊಂಡು ಸತ್ತ. ಈ ಕಾಲದ ಶಾಸನಗಳಲ್ಲಿ ಅವನು ಸದಾ ಉಲ್ಲೇಖಿತನಾಗಿದ್ದಾನೆ.

## ಅಧ್ಯಾಯ ೫

## ಪಟ್ಟಕ್ಕೆ ಬಂದ ಮೇಲೆ ರಾಜಾ ಕ್ರಿಸ್ನರಾವ್ ಮಾಡಿದ ಕೆಲಸಗಳು

ಕ್ರಿಸ್ನರಾವ್ ಪಟ್ಟಕ್ಕೆ ಬಂದು ರಾಜ್ಯಾದ್ಯಂತ ತನ್ನ ಆಜ್ಞೆ ಪಾಲಿಸಲ್ಪಟ್ಟ ಕೂಡಲೆ—ತನ್ನ ಸಹೋದರ ಬಸಬಲರಾವ್[1]ನ ಮಂತ್ರಿಯಾಗಿದ್ದ ಸಾಲ್ವತಿನನೆ ಇವನ ಮಂತ್ರಿಯೂ ಆಗಿದ್ದ—ತನ್ನ ಭ್ರಾತ್ರೇಯನಾಗಿದ್ದ ಸಹೋದರ ಬಸ ಬಲರಾವ್‌ನ ಮಗನನ್ನು ತನ್ನ ಮೂವರು ಸಹೋದರರೊಂದಿಗೆ ಚಾಂಡಗಿರಿ ಎಂಬ ದುರ್ಗಕ್ಕೆ ಕಳಿಸಿದ. ಆ ಭ್ರಾತ್ರೇಯ ತಾನು ಸಾಯುವವರೆಗೆ ಅಲ್ಲಿದ್ದ. ರಾಜ ತನ್ನ ಸುರಕ್ಷಿತತೆಗೋಸ್ಕರ ಹೀಗೆ ಮಾಡಿದನಂತರ ಹೊರಗೆ ಹೋಗದೆ ರಾಜ್ಯದ ವ್ಯವಹಾರಗಳನ್ನು ತಿಳಿದುಕೊಳ್ಳುತ್ತ ಮತ್ತು ಗತರಾಜರ ಮೃತ್ಯುಪತ್ರಗಳನ್ನು ನೋಡುತ್ತ ಒಂದೂವರೆ ವರ್ಷ ಬಿಸ್ನಗ ನಗರದಲ್ಲಿಯೆ ಇದ್ದ. ಇವುಗಳಲ್ಲಿ ಅವನಿಗೆ ತನ್ನ ತಂದೆ ನರಸನಾಯಿಕ ಮಂತ್ರಿಯಾಗಿದ್ದ ನರಸಿಂಗ ರಾಜನದೊಂದು ದೊರೆಯಿತು. ಅದರಲ್ಲಿ ರಾಜ ಹೀಗೆ ಇಚ್ಛಿಸಿದ್ದ : ತನ್ನ ಮಕ್ಕಳಾಗಲಿ (ಅಥವಾ ತಾನು ಶಸ್ತ್ರ ಬಲದಿಂದ ಗೆದ್ದಿದ್ದ ಈ ರಾಜ್ಯದ ಅಧಿಕಾರಕ್ಕೆ ಬಂದ ಯಾವನೆ ಆಗಲಿ) ತನ್ನ ಮರಣ ಕಾಲಕ್ಕೆ ತನ್ನ ವಿರುದ್ಧ ಬಂಡೆದ್ದಿದ್ದ ಮತ್ತು ಸಮಯವಿಲ್ಲದುದರಿಂದ ತಾನೆ ಅವು ಗಳನ್ನು ವಶಪಡಿಸಿಕೊಳ್ಳಲಾಗದ ಮೂರು ದುರ್ಗಗಳನ್ನು ವಶಪಡಿಸಿಕೊಳ್ಳಬೇಕು ; ಅವುಗಳಲ್ಲೊಂದನ್ನು ರಾಚೋಲ್[2] ಮತ್ತು ಮೆದೆಗುಲ್ಲಾ[3] ಎಂದು ಕರೆಯ ಲಾಗುತ್ತದೆ.

ಈ ಮೃತ್ಯುಪತ್ರವನ್ನು ಮತ್ತು ತನ್ನ ಪೂರ್ವಿಕರು ತಮ್ಮ ಮೇಲೆ ವಿಧಿಸಲಾಗಿ ದ್ದುದರ ಬಗೆಗೆ ಎಷ್ಟು ಕೆಟ್ಟದಾಗಿ ನಡೆದುಕೊಂಡಿದ್ದರೆಂಬುದುನ್ನು ಕಂಡು ಕ್ರಿಸ್ನರಾವ್ ಕೂಡಲೆ ಸೈನ್ಯಗಳನ್ನು ಸಿದ್ಧಗೊಳಿಸಲು ಮತ್ತು ಈ ಊರುಗಳ ಮೇಲೆ ದಂಡೆತ್ತಿ ಹೋಗಲು ನಿರ್ಧರಿಸಿದ. ಈ ದುರ್ಗಗಳಲ್ಲೊಂದು ಒದಿಗ್ಯೆರ್ ಆಗಿತ್ತು ಮತ್ತು ಅದು ಒಯರ್ಮಾ ರಾಜನಿಗೆ ಸೇರಿದುದಾಗಿತ್ತು. ಮತ್ತು ಪ್ರಥಮವಾಗಿ ಅದರ ಮೇಲೇರಿ ಹೋಗಲು ನಿರ್ಧರಿಸಿ ಅವನು ಮೂವತ್ನಾಲ್ಕು ಸಾವಿರ ಕಾಲಾಳುಗಳು ಮತ್ತು ಎಂಟನೂರು ಆನೆಗಳ ಸೈನ್ಯ ಜಮಾಯಿಸಿದ ಮತ್ತು ಅದರೊಂದಿಗೆ ದಿಗರಿ[4] ನಗರಕ್ಕೆ ಬಂದ. ಅದರಲ್ಲಿ ಹತ್ತುಸಾವಿರ ಕಾಲಾಳು ಮತ್ತು ನಾಲ್ಕು ನೂರು ಕುದುರೆಗಳು ಇದ್ದವು. ಏಕೆಂದರೆ, ದುರ್ಗ ಬಹಳ ಗಟ್ಟಿಯಾಗಿದ್ದುದರಿಂದ ಮತ್ತು ಉಪವಾಸ ಬೀಳಿಸದ ಹೊರತು ಅದನ್ನು ವಶಪಡಿಸಿಕೊಳ್ಳಲು ಸಾಧ್ಯವಿಲ್ಲದಿದ್ದುದರಿಂದ ಅದಕ್ಕೆ ಹೆಚ್ಚು ಸೈನ್ಯದ ಅವಶ್ಯಕತೆ ಇರಲಿಲ್ಲ.

ರಾಜ ಅದನ್ನು ಒಂದೂವರೆ ವರ್ಷ ಮುತ್ತಿದ. ಆ ದುರ್ಗದ ಗೋಪುರಗಳನ್ನು ತನ್ನ ಸೈನಿಕರು ತಲುಪುವಂತೆ ಮಾರ್ಗ ರಚಿಸಲೋಸುಗ ಅನೇಕ ದೈತ್ಯ ಕಲ್ಲುಬಂಡೆಗಳನ್ನು ಒಡೆಯಿಸಿ ಗುಡ್ಡಗಾಡಿನಲ್ಲಿ ಅನೇಕ ರಸ್ತೆಗಳನ್ನು ಮಾಡಿದ. ಆ ಕಾಲಕ್ಕೆ ಆ ಸ್ಥಳ ಎಷ್ಟು ಗಟ್ಟಿಯಾಗಿತ್ತೆಂದರೆ ಒಬ್ಬೊಬ್ಬರಾಗಿ ಮಾತ್ರ ಹಾಯುವಂತಹ ಅತಿ ಇಕ್ಕಟ್ಟಿನ ದಾರಿಯೊಂದನ್ನು ಬಿಟ್ಟರೆ ಅದನ್ನು ಪ್ರವೇಶಿಸಲಾಗುತ್ತಿರಲಿಲ್ಲ; ಮತ್ತು ತಾನು ದುರ್ಗಕ್ಕೆ ಹತ್ತಿರ ಬರಲು ಸಾಧ್ಯವಾಗುವಂತೆ ಅವನು ಆ ಜಾಗದಲ್ಲೊಂದು ಮತ್ತು ಇತರ ಅನೇಕ ರಸ್ತೆಗಳನ್ನೂ ನಿರ್ಮಿಸಿದ.

ಮತ್ತು ಅದನ್ನವನು ಶಸ್ತ್ರಬಲದಿಂದ ವಶಪಡಿಸಿಕೊಂಡ ಮತ್ತು ಅದರಲ್ಲಿದ್ದ ಒರಿಯ ರಾಜನ ಪತ್ನಿಯನ್ನು ಸೆರೆಹಿಡಿದ ಅವಳಿಗೆ ತಾನು ತೋರಬಹುದಾದ ಸೌಜನ್ಯದೊಂದಿಗೆ ಮತ್ತು ಅವಳಿಗೆ ಸ್ವಾತಂತ್ರ್ಯವಿತ್ತು ಅವಳನ್ನು ಬಂದಿಯಾಗಿ ಕೊಂಡೊಯ್ಯಲಾಯಿತು. ಮತ್ತು ಅವನು ಅವಳನ್ನು ತನ್ನ ಜೊತೆಗೇ ಕರೆದೊಯ್ದ.

ಮತ್ತು ಇದಾದ ನಂತರ ಅವನು ಸಾಲ್ವತಿನಿಯನನ್ನು ಕರೆದು ತಾನು ರಾಜಾ ನರಸಿಂಗ ಮೃತ್ಯುಪತ್ರದಲ್ಲಿ ತನ್ನ ಮೇಲೆ ವಿಧಿಸಿದುದನ್ನು ಎಷ್ಟು ಚನ್ನಾಗಿ ಸಾಧಿಸಿರುವೆನೆಂಬುದನ್ನು ನೋಡಲು ಹೇಳಿದ ಮತ್ತು ಇಂಥ ಚಿಕ್ಕ ವಿಜಯದಿಂದ ತಾನಿನ್ನೂ ತೃಪ್ತನಾಗಿಲ್ಲವೆಂದೂ ತಾನು ಒರಿಯಾ ರಾಜ್ಯದೊಳಗೆ ಒಂದುನೂರು ಗಾವುದ ಮುನ್ನುಗ್ಗಬಯಸಿರುವುದಾಗಿಯೂ ಹೇಳಿದ; ಮತ್ತು ಆಹಾರ ಸಾಮಗ್ರಿಗಳನ್ನು ಸಿದ್ಧಗೊಳಿಸಲು ಮತ್ತು ಸೈನ್ಯಗಳಿಗೆ ಪೂರ್ಣ ವೇತನ ನೀಡಲು ಅವನಿಗೆ ಆಜ್ಞೆಯಿತ್ತ.

ಮತ್ತು ಈ ದುರ್ಗವನ್ನು ತೆಗೆದುಕೊಂಡ ನಂತರ ಅವನು ಹೊರಟು ಒರಿಯಾ ರಾಜ್ಯದ ಮುಖ್ಯ ನಗರಗಳಲ್ಲೊಂದಾಗಿದ್ದ ಕೊಂಡೊವಿಯ ಮೇಲೆ ಏರಿಹೋಗಿ ಅದನ್ನು ಮುತ್ತಿದ; ಮತ್ತು ಇದನ್ನು ತಿಳಿದ ಒರಿಯಾದ ರಾಜ ತನ್ನ ಪ್ರದೇಶಗಳನ್ನು ಸಂರಕ್ಷಿಸಲು ಅವನನ್ನು ಎದುರಿಸಲು ಬಂದ ಮತ್ತು ತನ್ನೊಂದಿಗೆ ಒಂದು ಸಾವಿರ ಮುನ್ನೂರು ಆನೆಗಳು, ಇಪ್ಪತ್ತುಸಾವಿರ ಅಶ್ವಾರೋಹಿಗಳು ಮತ್ತು ಐನೂರು ಸಾವಿರ ಕಾಲಾಳುಗಳನ್ನು ತಂದ. ಒರಿಯಾದ ರಾಜನ ಬರವನ್ನು ತಿಳಿದ ಕ್ರಿಸ್ನಾರಾವ್ ತಾನು ನಗರದ ಮೇಲೆ ಆಕ್ರಮಣ ಮಾಡುವುದಕ್ಕಿಂತ ಹೆಚ್ಚಾಗಿ ರಾಜ ಮತ್ತು ಅವನ ಸೈನ್ಯದೊಂದಿಗೆ ಯುದ್ಧ ಮಾಡಬಯಸಿರುವುದಾಗಿ ಮತ್ತು ಅದನ್ನು ವಶಪಡಿಸಿಕೊಳ್ಳಲು ನಂತರ ಬೇಕಾದಷ್ಟು ಸಮಯವಿರುವುದೆಂದು ಹೇಳಿ ನಗರವನ್ನು ಆಕ್ರಮಿಸದೆ ಬಿಟ್ಟು ನಡೆದ. ಮತ್ತು ಅವನು ನಗರದ ಜನರು ಕರಾವಳಿಗೆ ಓಡಿಹೋಗಲು ಯತ್ನಿಸಿದರೆ ಅದನ್ನು ತಡೆಯಲು ಬಲವನ್ನು ಹಿಂದೆ ಬಿಟ್ಟು ಅವನು ಅದಕ್ಕಿಂತ ನಾಲ್ಕು ಹರದಾರಿ ಮುಂದೆ ಸಾಗಿದ. ಮತ್ತು ಅವನು ಗಡುವಿನಿಂದ ದಾಟುವ ಒಂದು ದೊಡ್ಡ ಉಪ್ಪು ನೀರಿನ ನದಿಗೆ[7] ಬಂದ ಮತ್ತು ನದಿಯ ಆ ಬದಿಗೆ ಒರಿಯಾದ

ರಾಜ ತನ್ನ ಸೈನ್ಯದೊಂದಿಗೆ ನಿಂತಿದ್ದ. ರಾಜಾ ಕ್ರಿಸ್ನರಾವ್ ನದಿಯ ಈಚೆಗೆ ತನ್ನ ಸೈನ್ಯ ನಿಲ್ಲಿಸಿದ ಮತ್ತು ತನ್ನೊಂದಿಗೆ ಯುದ್ಧ ಮಾಡಲಿಚ್ಛಿಸುವದಾದರೆ ತಾನು ನದಿಯಿಂದ ಎರಡು ಗಾವುದ ಸರಿಯುವದಾಗಿಯೂ ಅದರಿಂದ ಅವನು (ಒರಿಯಾದ ರಾಜ) ನದಿಯನ್ನು ಪೀಡೆಗೊಳಪಡದೆ ದಾಟಬಹುದಾಗಿಯೂ ಮತ್ತು ನದಿಯನ್ನು ದಾಟಿದ ತಕ್ಷಣ ತಾನು ಯುದ್ಧ ಹೂಡುವುದಾಗಿಯೂ ಸಂದೇಶ ಕಳಿಸಿದ. ಆ ಸಂದೇಶಕ್ಕೆ ಒರಿಯಾದ ರಾಜ ಉತ್ತರ ಕೊಡಲಿಲ್ಲ. ಅಷ್ಟೆ ಅಲ್ಲ, ಯುದ್ಧ ಮಾಡಲು ಸಿದ್ಧನಾದ. ಅವನ ನಿರ್ಧಾರ ಕಂಡು ರಾಜ ಕ್ರಿಸ್ನರಾವ್ ತನ್ನೆಲ್ಲ ಬಲ ಹಾಗೂ ಆನೆಗಳೊಂದಿಗೆ ನದಿ ದಾಟಿದ ಮತ್ತು ನದಿ ದಾಟುವಾಗ ಎರಡೂ ಬದಿಗಳಲ್ಲಿ ಬಹಳ ಹೋರಾಟಗಳಾದವು ಮತ್ತು ಅನೇಕರು ಕೊಲ್ಲಲ್ಪಟ್ಟರು. ಆದರೂ ಸಹ ರಾಜ ಕ್ರಿಸ್ನರಾವ್ ನದಿ ದಾಟಿದ ಮತ್ತು ತೀರದಲ್ಲಿ ಎಷ್ಟೊಂದು ಕಲಿತನದಿಂದ ಕಾದಿದನೆಂದರೆ ಒರಿಯಾದ ರಾಜನನ್ನು ಸೋಲಿಸಿ ಓಡಿಸಿದ. ಆ ವಿಜಯದಲ್ಲಿ ಅವನು ಅನೇಕ ಕುದುರೆಗಳನ್ನು ಮತ್ತು ಆನೆಗಳನ್ನು ವಶಪಡಿಸಿಕೊಂಡ.

ಮತ್ತು ರಾಜ ಇದನ್ನು ಮಾಡಿದ ನಂತರ ತನ್ನ ಬಲವನ್ನು ಇನ್ನೂ ಅನುಭವಿಸಿರದ ದುರ್ಗಕ್ಕೆ ಹಿಂತಿರುಗುವುದಾಗಿ ತನ್ನ ಮಂತ್ರಿ ಸಾಲ್ವತಿನಿಯನಿಗೆ ಹೇಳಿದ. ಮತ್ತು ಅವನು ಅದರತ್ತ ನಡೆದು ಅಲ್ಲಿ ಅದಕ್ಕೆ ಮುತ್ತಿಗೆ ಹಾಕಿ ಎರಡು ತಿಂಗಳು ನಿಂತ ಮತ್ತು ಅದನ್ನು ವಶಪಡಿಸಿಕೊಂಡ.

ಮತ್ತು ಅವನು ಅದರ ಹತೋಟಿಯನ್ನು ಸಾಲ್ವತಿನಿಯನಿಗೆ ಒಪ್ಪಿಸಿದ. ಅವನಾದರೊ ಒರಿಯಾ ರಾಜ್ಯದುದ್ದಕ್ಕೂ ರಾಜನೊಂದಿಗೆ ಮುಂದೆ ಸಾಗುವ ಉದ್ದೇಶದಿಂದ ತನ್ನ ಸೈನ್ಯದಲ್ಲಿದ್ದ ಸಹೋದರರಲ್ಲೊಬ್ಬನನ್ನು ದಳವಾಯಿಯಾಗಿ ಹಿಂದೆ ಬಿಟ್ಟ. ಮತ್ತು ರಾಜ ಒರಿಯಾದ ರಾಜನನ್ನು ಬೆನ್ನಟ್ಟ ಇನ್ನೊಮ್ಮೆ ನದಿ ದಾಟಿ ಅವನನ್ನು ನಿರೀಕ್ಷಿಸಲು ಯಾವುದೆ ಕಾರಣವಿಲ್ಲದಿದ್ದ ನಾಡನ್ನು ವಶಪಡಿಸಿಕೊಳ್ಳುತ್ತ ನಾಶಪಡಿಸುತ್ತ ಕೊಂಡೆಪಲ್ಲಿರ್[8] ಎಂಬ ನಗರ ತಲುಪಿದ. ಅದು ರಾಜ್ಯದ ಪ್ರಮುಖ ನಗರವಾದುದರಿಂದ ರಾಜ್ಯದ ಎಲ್ಲ ಮುಖ್ಯಸ್ಥರು ಅಲ್ಲಿದ್ದರು. ಮತ್ತು ಅವನು ಅದಕ್ಕೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಳ್ಳಲಾರದೆ ಮೂರು ತಿಂಗಳು ಅಲ್ಲಿ ಉಳಿದ, ಮತ್ತು ಕೊನೆಗೆ ಅವನು ಅದನ್ನು ಶಸ್ತ್ರಬಲಕ್ಕಿಂತ ಹೆಚ್ಚಾಗಿ ಸಂಖ್ಯಾಬಲ ದಿಂದ ವಶಪಡಿಸಿಕೊಂಡ. ಆ ದುರ್ಗದಲ್ಲಿ ಅವನು ಬಂದಿಗಳನ್ನಾಗಿಸಿದವರಲ್ಲಿ ಅನೇಕರು ಉಚ್ಚ ದರ್ಜೆಯವರಿದ್ದರು. ಅವರಲ್ಲಿ ರಾಜನ ಪತ್ನಿಯೊಬ್ಬಳು ರಾಜಕುಮಾರನಾಗಿದ್ದ ಅವನ ಪುತ್ರನೊಬ್ಬ ಮತ್ತು ರಾಜ್ಯದ ಏಳು ಪ್ರಮುಖ ದಳವಾಯಿಗಳಿದ್ದರು. ಅವರೆಲ್ಲರನ್ನೂ ಅವನು ರಸ್ತೆ ಮೂಲಕ ಬಿಸ್ನಗಕ್ಕೆ ಕಳುಹಿದ.

ಮತ್ತು ಅವನು ರಾಜ್ಯದೊಳಗೆ ಮುಂದೆ ಒಂದು ನೂರು ಹರದಾರಿ ನಡೆದ. ಅವನ ಮುನ್ನಡೆಯನ್ನು ತಡೆಯಲು ಅವನು ಬಹಳ ದೊಡ್ಡ ನಗರವಾಗಿದ್ದ

ಸಿಮುಂದರಿ೨ ತಲುಪುವವರೆಗೆ ಯಾರೂ ಇರಲಿಲ್ಲ. ಅಲ್ಲಿ ಅವನು ಒರಿಯಾದ ರಾಜನಿಗಾಗಿ ಕಾಯುತ್ತ ಆರು ತಿಂಗಳು ನಿಂತ. ತಾನು ಅವನಿಗಾಗಿ ರಣರಂಗದಲ್ಲಿ ಕಾದಿರುವುದಾಗಿ ಅನೇಕ ಸಂದೇಶಗಳನ್ನು ಕಳಿಸಿದರೂ ಅವನು ಬರಲಿಲ್ಲ. ಮತ್ತು ಈ ನಗರದಲ್ಲಿ ಅವನು ಅನೇಕ ಕಾರ್ಯಗಳನ್ನು ಮಾಡಿದ ಮತ್ತು ದೇವಾಲಯಗಳಿಗೆ ದಾನ ನೀಡಿದ ಮತ್ತು ಅಲ್ಲಿ ಒಂದು ಭವ್ಯ ದೇವಾಲಯ ಕಟ್ಟಿಸಿ ಅದಕ್ಕೆ ಬಹಳ ಆದಾಯ ಕೊಡಮಾಡಿದ. "ಬಹುಶಃ ಈ ಅಕ್ಷರಗಳು ಸವೆದಾಗ ಒರಿಯಾದ ರಾಜ ಬಿಸ್ನಗದ ರಾಜನೊಂದಿಗೆ ಯುದ್ಧ ಮಾಡಿಯಾನು, ಒರಿಯಾದ ರಾಜ ಅವುಗಳನ್ನು ಅಳಿಸಿದರೆ ಅವನ ಪತ್ನಿಯನ್ನು ಬಿಸ್ನಗ ರಾಜನ ಕುದುರೆಗಳಿಗೆ ನಾಲು ಕಟ್ಟುವ ಕಮ್ಮಾರನಿಗೆ ಕೊಡಲಾಗುವುದು" ಎಂದು ಸಾರುವ ಶಾಸನವನ್ನು ಆ ದೇವಾಲಯದ ಮೇಲೆ ಕೆತ್ತುವಂತೆ ಆಜ್ಞೆಯಿತ್ತ.

ಮತ್ತು ಹೀಗೆ ಮಾಡಿದ ನಂತರ ಅವನು ಬಹುತೇಕ ಭೂಮಿಗಳನ್ನು ದೇವಾಲಯಗಳಿಗೆ ಬಿಟ್ಟು ಮರಳಿದ ಮತ್ತು ಬಿಸ್ನಗಕ್ಕೆ ಬಂದು ಕೆಲವು ದಿನ ವಿಶ್ರಮಿಸಿದ. ಮತ್ತು ಮೊದಲ ದುರ್ಗದಲ್ಲಿ ಬಂದಿಯಾಗಿ ಪಡೆದಿದ್ದ ಒರಿಯಾ ರಾಜನ ಪುತ್ರನನ್ನು ಕರೆಕಳಿಸಿದ ಮತ್ತು ಅವನು ಚುರುಕು ಮನುಷ್ಯನೂ ಕತ್ತಿ ಮತ್ತು ಕಠಾರಿ ಎರಡರಲ್ಲಿಯೂ ಪ್ರವೀಣನೆಂದು ಜನರು ಹೇಳುತ್ತಿರುವುದರಿಂದ ಅವನು ವರಸೆ ಮಾಡುವುದನ್ನು ನೋಡಲು ಸಂತೋಷ ಪಡುವುದಾಗಿ ತಿಳಿಸಿದ.

ಮಹಾರಾಜ ಕರೆಸಿದುದರಿಂದ ತನಗೆ ಸಾಧ್ಯವಿದ್ದುದನ್ನು ಮಾಡುವುದಾಗಿಯೂ ಮರುದಿನಕ್ಕೆ ಅದನ್ನು ಮುಂದೂಡಬೇಕೆಂದೂ ಆ ತರುಣ ಕೇಳಿಕೊಂಡ. ಮರುದಿನ ಬಂದಾಗ ರಾಜನು ಅವನನ್ನು ಕರೆಕಳಿಸಿದ. ಮತ್ತು ಅವನೊಂದಿಗೆ ವರಸೆ ಮಾಡಲು ಆ ಕಾಲಕ್ಕೆ ಆ ಕಲೆಯಲ್ಲಿ ಅತ್ಯಂತ ಪ್ರವೀಣನಾದ ತನ್ನ ಮನುಷ್ಯನೊಬ್ಬನನ್ನು ಕರೆಕಳಿಸಿದ. ಒರಿಯಾ ರಾಜನ ಮಗ ಅವನನ್ನು ನೋಡಿದಾಗ ರಾಜನ ಪುತ್ರನ ಬದಲು ಸಾಮಾನ್ಯ ಮನುಷ್ಯನೊಬ್ಬನನ್ನು ತನ್ನೊಂದಿಗೆ ವರಸೆ ಮಾಡಲು ಕರೆಸಿದುದರಿಂದ ರಾಜನೊಂದಿಗೆ ಕೋಪಾವಿಷ್ಟನಾಗಿ ಅವನು ರಾಜನನ್ನು ಉದ್ದೇಶಿಸಿ ಹೀಗೆ ಕೂಗಿದ : "ರಾಜರಕ್ತದವನಲ್ಲದವನನ್ನು ಮುಟ್ಟಿ ನನ್ನ ಕೈಗಳನ್ನು ಹೊಲಸು ಮಾಡಿಕೊಳ್ಳುವುದನ್ನು ದೇವರು ತಪ್ಪಿಸಲಿ" ಹೀಗೆಂದವನೇ ತನ್ನನ್ನು ತಾನೆ ಕೊಂದು ಕೊಂಡ ಮತ್ತು ಅವನ ತಂದೆ ತನ್ನ ಮಗ ಸತ್ತ ಬಗೆಯನ್ನು ಕೇಳಿ, ತನ್ನ ಮಗ ಸತ್ತಿರುವುದರಿಂದ ರಾಜನ ವಶದಲ್ಲಿದ್ದ ತನ್ನ ಪತ್ನಿಯ ಬಿಡುಗಡೆ ಪಡೆಯಬಹುದೆಂದು (ಕೋರಿ) ಸಾಳ್ವತಿನಿಯನಿಗೆ ಬರೆದ. ಅದಕ್ಕೆ ಅವನು ರಾಜನೊಂದಿಗೆ ತನ್ನ ಮಗಳ ವಿವಾಹ ಮಾಡಬೇಕೆಂದು ಮತ್ತು ಅನಂತರ ರಾಜ ಅವನ ಮಡದಿ ಭೂಮಿಗಳನ್ನು ಮರಳಿ ಕೊಡುವುದಾಗಿ (ಅಥವಾ ಭೂಮಿಗಳನ್ನು ಮಾತ್ರ ಇಟ್ಟುಕೊಳ್ಳುವನು) ಉತ್ತರಿಸಿದ. ಈ ಸಲಹೆಯನ್ನು ಅವನು ಒಪ್ಪಿದ ಮತ್ತು ತನ್ನ ಮಗಳ ವಿವಾಹ

ಏರ್ಪಡಿಸಲು ಬಿಸ್ನಗಕ್ಕೆ ರಾಯಭಾರಿಗಳನ್ನು ಕಳಿಸಿದ. ಇದರಿಂದ ರಾಜಾ ಕ್ರಿಸ್ನರಾವ್ ಬಲು ಸಂತುಷ್ಟನಾದ ; ಮತ್ತು ಒರಿಯಾದ ರಾಜ (ಈ ವಿಷಯದಲ್ಲಿ) ಅವನ ಇಚ್ಛೆಯನ್ನರಿತಾಗ ತನ್ನ ಮಗಳನ್ನು ಅವನಲ್ಲಿಗೆ ಕಳಿಸಿಕೊಟ್ಟ ಮತ್ತು ಅವಳ ಆಗಮನದಿಂದ ಅವರು ಮಿತ್ರರಾದರು ಮತ್ತು ಕ್ರಿಸ್ನರಾವ್ ನದಿಯಾಚೆಗಿನ ಪ್ರದೇಶ ಗಳನ್ನು ಹಿಂತಿರುಗಿಸಿ ಈಚೆಗಿನವನ್ನು ತನಗೇ ಇಟ್ಟುಕೊಂಡ.

## ಅಡಿಟಿಪ್ಪಣಿಗಳು

1 ಬಹುಶಃ "ಬಸವ ರಾಯ" ಆದರೆ ಆ ಹೆಸರು ಹೊಂದಿದ ಯಾವ ಕೃಷ್ಣದೇವನ ಸಹೋದರನೂ ಇದುವರೆಗೆ ತಿಳಿದುಬಂದಿಲ್ಲ.

2 ರಾಯಚೂರು

3 ಮುದಕಲ್

4 ಉದಯಗಿರಿ

5 ಕೆಲವರು ಕಕ್ಕ ಎನ್ನುತ್ತಾರೆ

6 ಕೊಂಡವೀಡು

7 ಈ ನದಿ ಯಾವುದೆಂದು ನನಗೆ ತಿಳಿಯದು. ನನಗೆ ತಿಳಿದಂತೆ ಕೊಂಡವೀಡಿನ ಹನ್ನೆರಡು ಮೈಲು ಅಥವಾ ಸುತ್ತಮುತ್ತ ಯಾವ ನದಿಯೂ ಇಲ್ಲ.

8 ಕೊಂಡಪಲ್ಲೆ

9 ರಾಜಮಂದ್ರಿ, ಮೊದಲ ಅಕ್ಷರ ಆಕಸ್ಮಿಕವಾಗಿ, ಬಹುಶಃ ಲಿಪಿಕಾರನಿಂದ ಬಿಡಲಾಗಿದೆ.

## ಅಧ್ಯಾಯ ೬

ಒರಿಯಾದ ರಾಜನೊಂದಿಗೆ ಶಾಂತಿ ಏರ್ಪಡಿಸಿ, ಒರಿಯಾ ರಾಜನ ಮಗಳೊಂದಿಗೆ ವಿವಾಹ ಮಾಡಿಕೊಂಡು, ಮತ್ತು ಮೇಲೆ ಹೇಳಿದಂತೆ ಅವನಿಗೆ ಅವನ ಹೆಂಡತಿಯನ್ನೂ ನದಿಯಾಚೆಗಿನ ಪ್ರದೇಶಗಳನ್ನೂ ಮರಳಿ ಕೊಟ್ಟ ನಂತರ ದೊಡ್ಡ ಸೈನ್ಯ ಸನ್ನದ್ಧಗೊಳಿಸಿ ಐವತ್ತು ವರ್ಷಗಳವರೆಗೆ ಬಂಡೆದ್ದಿದ್ದ ದೊರೆಯ ಪ್ರದೇಶವಾಗಿದ್ದ ಕಾತೂರ್[1]ನ ಮೇಲೆ ಆಕ್ರಮಣ ಮಾಡಲು ಸಿದ್ಧತೆ ಮಾಡಿದ. ಈ ಪ್ರದೇಶ ಕೋರಮಂಡಲದ ಕಡೆಗೆ ಇದೆ. ಮತ್ತು ಅವನು ಅದರ ಮೇಲೇರಿ ಹೋದ ಮತ್ತು ಆ ನಾಡಿನ ದೊರೆ ಇದ್ದ ಪ್ರಮುಖ ನಗರಗಳಲ್ಲೊಂದಕ್ಕೆ ಮುತ್ತಿಗೆ ಹಾಕಿದ. ಅದಕ್ಕೆ ... ಎಂದು ಹೆಸರಿದ್ದು[2] ಅದು ನೀರಿನಿಂದ ಆವೃತವಾಗಿದೆ.

ಕ್ರಿಸ್ನರಾವ್ ಈ ನಗರವನ್ನು ಆಕ್ರಮಣ ಮಾಡಿದಾಗ ಚಳಿಗಾಲವಾಗಿತ್ತು. ಆದುದರಿಂದ ನದಿ ಎಷ್ಟೊಂದು ಏರಿತ್ತು ಮತ್ತು ಎಷ್ಟೊಂದು ಪ್ರವಾಹವಿತ್ತೆಂದರೆ ರಾಜ ಆ ನಗರಕ್ಕೆ ಯಾವ ಹಾನಿಯನ್ನೂ ಮಾಡಲಾಗಲಿಲ್ಲ. ಇದನ್ನು ಕಂಡ ಕ್ರಿಸ್ನರಾವ್ ತನ್ನ ಇಚ್ಛೆ ಈಡೇರದೆ ಸಮಯ ಸರಿಯುತ್ತಿರುವುದನ್ನು ಮನಗಂಡು ತನ್ನ ಇಚ್ಛೆ ಪೂರ್ತಿಗೊಳ್ಳಲು ಅಡ್ಡಿಯಾಗಿದ್ದ ಪ್ರಧಾನ (ನದಿ)ಯ ಮೇಲೆ ಆಕ್ರಮಣ ಮಾಡಲು ಸಾಧ್ಯವಾಗಲೋಸುಗ ಅದಕ್ಕೆ ಅನೇಕ ಹರಿಗಳನ್ನು ಕೊರೆಯುವಂತೆ ತನ್ನ ಸೈನಿಕರಿಗೆ ಆಜ್ಞೆಯಿತ್ತ. ಅವನಲ್ಲಿ ಅನೇಕ ಸೈನಿಕರಿದ್ದುದರಿಂದ ಇದನ್ನು ಅಲ್ಪ ಸಮಯದಲ್ಲಿ ಮಾಡಲಾಯಿತು. (ಹೊಸ) ಜಲಮಾರ್ಗಗಳು ಪೂರ್ತಿಯಾಗಿ ನೀರು ಹೋಗಬೇಕಾಗಿದ್ದಲ್ಲಿ ಜೋಡಿಸಲಾದ ನಂತರ ನದಿಯಲ್ಲಿ ಅನೇಕ ಮುಖಗಳನ್ನು ತೆರೆಯಿಸಿದ. ನೀರು ಬಹು ಬೇಗ ಹರಿದುಹೋಗಿ ತಳ ಕಾಣುವಂತಾಯಿತು. ನೀರು ಎಷ್ಟೊಂದು ಆಳ ಕಡಿಮೆಯಾಯಿತೆಂದರೆ ಅವನು ನಗರದ ಗೋಡೆಗಳನ್ನು ತಲುಪಲು ಶಕ್ತನಾದ. ಮತ್ತು ಹೀಗೆ ಐವತ್ತು ಪ್ರತ್ಯೇಕ ತಳಗಳಲ್ಲಿ ನದಿಯನ್ನು ತಿರುಗಿಸಲಾಯಿತು. ನಗರದೊಳಗೆ ಒಂದುನೂರು ಸಾವಿರ ಕಾಲಾಳುಗಳು ಮತ್ತು ಮೂರು ಸಾವಿರ ಅಶ್ವಾರೋಹಿಗಳಿದ್ದು ತಮ್ಮನ್ನು ಅವರು ಸಂರಕ್ಷಿಸಿಕೊಂಡರು ಮತ್ತು ಚನ್ನಾಗಿ ಕಾದಿದರು. ಆದರೆ, ಕೆಲವೆ ದಿನಗಳಲ್ಲಿ ಕ್ರಿಸ್ನರಾವ್ ಪ್ರವೇಶಿಸಿ ಎಲ್ಲರನ್ನೂ ಕೊಲ್ಲುವುದನ್ನು ತಡೆಯಲಾಗಲಿಲ್ಲ. ಈ ನಗರದಲ್ಲಿ ಅವನು ವಿಪುಲ ನಿಧಿಗಳನ್ನು ಪಡೆದುದಲ್ಲದೆ ಒಂದು ದಶಲಕ್ಷ ಆರು ಸಾವಿರ ಸುವರ್ಣ ಪರ್ದಾಓಗಳ ನಗದು ಹಣ ಪಡೆದ. ಮೇಲಾಗಿ, ಅನೇಕ ರತ್ನಗಳನ್ನು, ಅಶ್ವಗಳನ್ನು ಮತ್ತು ಆನೆಗಳನ್ನು ಪಡೆದ. ಈ ಪ್ರದೇಶದ ಸ್ವಾಧೀನವನ್ನು ಪೂರ್ಣಗೊಳಿಸಿದ ನಂತರ ಕ್ರಿಸ್ನರಾವ್ ಅದನ್ನು ತನ್ನ ಅನೇಕ ದಳವಾಯಿಗಳಲ್ಲಿ ವಿಭಜಿಸಿ ಪ್ರತಿಯೊಬ್ಬನಿಗೂ ಅಗತ್ಯವಾದಷ್ಟನ್ನು ಕೊಟ್ಟ. ಆ ನಗರದಲ್ಲಿದ್ದ ಪ್ರಮುಖ ಮತ್ತು ಆ ಪ್ರದೇಶದ ದೊರೆ

ಯಾಗಿದ್ದವನನ್ನು ಸೆರೆಹಿಡಿದು ಬಿಸ್ನಗಕ್ಕೆ ಒಯ್ಯಲಾಯಿತು. ಅವನು ಅಲ್ಲಿ ರಾಜನ ಸೆರೆಮನೆಯಲ್ಲಿ ಸತ್ತ.

ರಾಜ ಆ ಪ್ರದೇಶವನ್ನು ನೆಲೆಗೊಳಿಸಿದ ನಂತರ ಬಿಸ್ನಗಕ್ಕೆ ಬಂದು ಅಲ್ಲಿಂದ ಕೊಂಡೊವಿ ನಗರಕ್ಕೆ ಸಾಲ್ವತಿನಿಯುನನ್ನು ಕಳಿಸಿದ. ಏಕೆಂದರೆ, ಅವನು ಅದರ ಪ್ರಧಾನಾಧಿಕಾರಿಯಿದ್ದು ಪ್ರದೇಶ ಮತ್ತು ಆಡಳಿತವನ್ನು ನೇರವಾಗಿ ನೋಡಿಕೊಳ್ಳಲು ತನ್ನ ತಮ್ಮನನ್ನು ಅಲ್ಲಿರಿಸಿದ್ದ. ರಾಜ ಒರಿಯಾದಿಂದ ಹಿಂತಿರುಗಿದ ಮೇಲೆ ಅಲ್ಲಿಗೆ ಎಂದೂ ಹೋಗಲಿಲ್ಲ.

ಕೊಂಡೊವಿಗೆ ಪಯಣ ಬೆಳೆಸಿದ ಸಾಲ್ವತಿನಿಯ ಅದನ್ನು ತಲುಪುವ ಮಾರ್ಗದಲ್ಲಿ ಅವನನ್ನು ಅಡ್ಡಗಟ್ಟಿದ ಮದಾರ್ಮಲುಕೊ ಎಂಬ ಮಹಮ್ಮದೀಯ ಎದುರಾದ. ಅವನು ಈ ಬದಿಯ[3] ರಾಜನ ದಳವಾಯಿಯಾಗಿದ್ದು ಅರವತ್ತು ಸಾವಿರ ಸೈನಿಕರೊಂದಿಗೆ ದಾರಿ ಕಾಯುತ್ತಿದ್ದ. ಸಾಲ್ವತಿನಿಯನೊಂದಿಗೆ ಎರಡುನೂರು ಸಾವಿರ ಸೈನಿಕರಿದ್ದರು ಮತ್ತು ಅವನಿಗೆ ಅವನ ಅಂಜಿಕೆ ಇರಲಿಲ್ಲ; ಇವರೊಂದಿಗೆ ಅವನ ಮೇಲೆ ಸಾಗಿ ಅವನನ್ನು ಸೋಲಿಸಿ ಸೆರೆಹಿಡಿದ ಮತ್ತು ಅವನನ್ನೂ ಅವನ ಹೆಂಡತಿಯನ್ನೂ ಮಗನನ್ನೂ, ಕುದುರೆ ಆನೆಗಳನ್ನೂ, ವಿಪುಲ ಧನವನ್ನೂ ರತ್ನಗಳ ಸಂಗ್ರಹವನ್ನೂ ವಶಕ್ಕೆ ತೆಗೆದುಕೊಂಡು ಎಲ್ಲವನ್ನೂ ರಾಜಾ ಕ್ರಿಸ್ನರಾವ್‌ನಿಗೆ ಕಳಿಸಿಕೊಟ್ಟ. ರಾಜ (ಬಂದಿಗಳನ್ನು) ಸೆರೆಮನೆಯಲ್ಲಿಡಲು ಆಜ್ಞಾಪಿಸಿದ ಮತ್ತು ಅವರು ಅಲ್ಲಿಯೆ ಸತ್ತರು. ಮತ್ತು ಸಾಲ್ವತಿನಿಯ ತನ್ನ ಪ್ರದೇಶಕ್ಕೆ ನಡೆದ ಮತ್ತು ಅಲ್ಲಿ ಕೆಲವು ತಿಂಗಳು ಇದ್ದು ಆಡಳಿತವನ್ನು ನೋಡಿಕೊಂಡು ನ್ಯಾಯ್ಯಕ್ಕೊಳಪಟ್ಟ ಸಂಗತಿಗಳನ್ನು ಬಗೆಹರಿಸಿ ಬಿಸ್ನಗದ ರಾಜನಲ್ಲಿಗೆ ಹಿಂತಿರುಗಿದಾಗ ರಾಜ ಅವನನ್ನು ರಾಜ್ಯದಲ್ಲಿ ಅತಿ ಪ್ರಮುಖ ವ್ಯಕ್ತಿಯಾದುದರಿಂದ ಚನ್ನಾಗಿ ಬರಮಾಡಿಕೊಂಡ.

## ಅಡಿಟಿಪ್ಪಣಿಗಳು

೧ ಈ ಪ್ರದೇಶವನ್ನು ಗುರುತಿಸಲು ನಾನು ಅಶಕ್ತನಾಗಿದ್ದೇನೆ. ನಗರದ ವರ್ಣನೆ ಉತ್ತರ ಅರ್ಕಾಟ್‌ನಲ್ಲಿರುವ ವೆಲ್ಲೂರನ್ನು ಸೂಚಿಸುತ್ತದೆ. ಅಲ್ಲಿರುವ ಉತ್ತಮ ಹಳೆಯ ಕೋಟೆ ಆಳವಾದ ಕಂದಕದಿಂದ ಸುತ್ತುವರಿಯಲ್ಪಟ್ಟದೆ. ಸಂಪ್ರದಾಯದನ್ವಯ ಈ ಸ್ಥಳವನ್ನು ಕೃಷ್ಣದೇವರಾಯರೆಡ್ಡಿ ದೊರೆಯೊಬ್ಬನಿಂದ ವಶಪಡಿಸಿಕೊಂಡ.

೨ ಮೂಲಕೃತಿಯಲ್ಲಿ ಖಾಲಿ ಇದೆ.

೩ ಎಲ್ರೆ ಡಾಕ್ವೆಮ್, ಇದು "ಈ ಬದಿಗಿನ ರಾಜ" ಅಥವಾ "ದಕ್ಖನದ ರಾಜ" ಎಂದು ಆಗಿರಬಹುದು. ಮೊದಲಿನದು ಹೆಚ್ಚು ಸಮಂಜಸವಾಗಿ ತೋರುತ್ತದೆ ಮತ್ತು ಉಲ್ಲೇಖ, ಗೋಲ್ಕೊಂಡದ ಸುಲ್ತಾನ ಕುಲಿ ಕುತುಬ್ ಶಾಹನ ಸೈನ್ಯಕ್ಕೆ ಇದೆ ಎಂದು ನನಗೆನಿಸುತ್ತದೆ (ಈ ಕಾಲದ ವ್ಯವಹಾರಗಳ ಬಗೆಗೆ ಮೇಲೆ ನೀಡಿದ ಮಹಮ್ಮದೀಯ ವೃತ್ತಾಂತ ನೋಡಿ ಪು. ೧೩೨-೧೩೫).

## ಅಧ್ಯಾಯ ೭

**ಸಾಲ್ವತಿನಿಯನ ಆಗಮನವಾದ ಮೇಲೆ ಕ್ರಿಸ್ನರಾವ್ ಇಡಲ್‌ಕಾವ್‌ನ ನಗರವಾದ ರಾಯಚೂರಿನ ಮೇಲೆ ಆಕ್ರಮಣ ಮಾಡಲು ಮತ್ತು ಬಹುಕಾಲ ಇದ್ದ ಶಾಂತಿಯನ್ನು ಒಡೆಯಲು ನಿರ್ಧರಿಸಿದ ಬಗೆ; ಮತ್ತು ಅದಕ್ಕೆ ಕಾರಣಗಳು**

ಸಾಲ್ವತಿನಿಯು ಆಗಮಿಸಿ ರಾಜ ಅವನನ್ನು ಚನ್ನಾಗಿ ಬರಮಾಡಿಕೊಳ್ಳಲಾದ ಮೇಲೆ ಮತ್ತು ಕೆಲವು ದಿನ ನಂತರ, ತನ್ನ ಪೂರ್ವಜ ರಾಜರಿಂದ ಇಡಲ್‌ಕಾವ್ ವಶಪಡಿಸಿಕೊಂಡಿದ್ದ ಬಲಿಷ್ಠವಾದ ಹಾಗೂ ಅವನ ಪ್ರಮುಖ ನಗರಗಳಲ್ಲೊಂದಾದ ರಾಯಚೂರನ್ನು ಸ್ವಾಧೀನಪಡಿಸಿಕೊಳ್ಳುವುದು ರಾಜಾ ನರಸಿಂಗನ ಮೃತ್ಯುಪತ್ರ ದಲ್ಲಿನ ಇಚ್ಛೆಗಳಲ್ಲೊಂದಾಗಿದ್ದುದರಿಂದ ತಾನು ಅದನ್ನು ಈಡೇರಿಸಬಯಸಿರುವುದಾಗಿ ಸಾಲ್ವತಿನಿಯನಿಗೆ ಹೇಳಿದ. ನಲವತ್ತು ವರ್ಷಗಳಿಂದಲೂ ಎರಡೂ ಬಣಗಳ ಮಧ್ಯೆ ಶಾಂತಿ ಇರುತ್ತಿರುವುದರಿಂದ ಅದನ್ನು ಹೇಗೆ ಭಂಗ ಮಾಡಬೇಕೆಂದು ತನಗೆ ತಿಳಿಯು ದೆಂದ. ಆದರೆ, ಸಾಲ್ವತಿನಿಯು ಹೇಳಿದುದು ಹೀಗೆ : ಕೆಲವು ಕರಾರಿಗೊಳಪಟ್ಟು ಶಾಂತಿ ಮಾಡಿಕೊಳ್ಳಲಾಗಿರುವುದರಿಂದ—ಬಣದಲ್ಲಿ ಯಾವುದೆ ಜಮೀನುದಾರರು ಇಲ್ಲವೆ ಬಂಡೆದ್ದ ದಳವಾಯಿಗಳು ಇಲ್ಲವೆ ಇತರ ಕೇಡಿಗಳಿಗೆ ಆಶ್ರಯ ನೀಡಲಾಗಿದ್ದರೆ ಅವರನ್ನು ಒಪ್ಪಿಸಬೇಕೆಂದು ಬೇಡಿಕೆ ಇಟ್ಟಾಗ ಅವರನ್ನು ಕೂಡಲೆ ಬಿಟ್ಟುಕೊಡ ಬೇಕೆಂಬುದು ಆ ಕರಾರುಗಳಲ್ಲೊಂದು—ಈಗ ಶಾಂತಿ ಮುರಿಯಲು ಬಲವಾದ ಕಾರಣವುಂಟು ; ಏಕೆಂದರೆ, ಮಹಾರಾಜರ ಹಲವಾರು ಜಮೀನುದಾರರು ಮತ್ತು ಸಾಲಗಾರರು ಇಡಲ್‌ಕಾವ್‌ನ ರಾಜ್ಯಕ್ಕೆ ಓಡಿ ಹೋಗಿರುವರು. ಆದುದರಿಂದ, ರಾಜ ಈ ವ್ಯಕ್ತಿಗಳನ್ನು ಒಪ್ಪಿಸುವಂತೆ ಹೇಳಿಕಳಿಸಬೇಕು ಮತ್ತು ಅವರನ್ನು ಒಪ್ಪಿಸಲು ನಿರಾಕರಿಸಿದರೆ ಶಾಂತಿ ಮುರಿಯಲು ಒಳ್ಳೆಯ ಕಾರಣವಾಗುವುದೆಂದು ಅವನು ಸಲಹೆಯಿತ್ತ. ಅನೇಕರು ಈ ಸಲಹೆಗೆ ಬೆಂಬಲ ನೀಡಲಿಲ್ಲ. ಈ ಹೊತ್ತಿಗೆ ಏನಾಯಿತೆಂದರೆ (ಬಿಸ್ನಗದ) ರಾಜ ನಲವತ್ತು ಸಾವಿರ ಪರ್ದಾಒಗಳನ್ನು ಕೊಟ್ಟು ಸೈದ್ ಮರ್ಕರ್‌ನನ್ನು ಕುದುರೆ ಕೊಳ್ಳಲು ಗೋವಾಕ್ಕೆ ಕಳಿಸಿದ. ಈ ಸೈದ್ ಮರ್ಕರ್ ಮೂರನಾಗಿದ್ದು ಅವನಿಗೆ ಈಗಾಗಲೆ ಒಪ್ಪಿಸಲಾಗಿದ್ದ ಅನೇಕ ವ್ಯವಹಾರ ಗಳಿಂದಾಗಿ ಬಿಸ್ನಗದ ರಾಜ ಅವನಲ್ಲಿ ವಿಶ್ವಾಸವಿಟ್ಟಿದ್ದ ; ಈ ಮನುಷ್ಯ ಮೂರರು ವಾಸವಾಗಿದ್ದ ಪೊಂಡಾ ಎಂಬ ಗೋವಾದಿಂದ ಎರಡು ಹರದಾರಿ ದೂರವಿರುವ ಸ್ಥಳಕ್ಕೆ ಬಂದಾಗ ತನ್ನೊಂದಿಗಿದ್ದ ಎಲ್ಲ ಸಂಪತ್ತಿನೊಂದಿಗೆ ಆ ಪೊಂಡಾದಿಂದ ಇಡಲ್ ಕಾವ್‌ನಲ್ಲಿಗೆ ಓಡಿಹೋದ. ಅವನು ಅಲ್ಲಿಗೆ ತಲುಪಿದ ಕೂಡಲೆ ಇಡಲ್‌ಕಾವ್

ಅವನಿಗೆ ಒಂದು ಪತ್ರ ಬರೆದನೆಂದು ಹೇಳುತ್ತಾರೆ. ಸೈದ್ ಎಲ್ಲ ಧನದೊಂದಿಗೆ ಗೈದ ಪಲಾಯನದ ಸುದ್ದಿಯನ್ನು ರಾಜನಿಗೆ ಹೇಳಿದಾಕ್ಷಣ ಇಡಲ್‌ಕಾವ್ ತನ್ನ ಮಿತ್ರನಾದುದರಿಂದ ಅವನಲ್ಲಿದ್ದ ಎಲ್ಲ ಧನದೊಂದಿಗೆ ಆ ಮನುಷ್ಯನನು ವಾಪಸು ಕಳಿಸಲು ಬರೆಯುವುದಾಗಿ ಹೇಳಿದ. ಆಮೇಲೆ ರಾಜ ಒಂದು ಪತ್ರ ಬರೆಯಿಸಿದ. ಅದರಲ್ಲಿ ಅವನು ಯಾವುದೂ ಅಲುಗಾಡಿಸಲಾರದಂಥ ಮೈತ್ರಿ ಇಷ್ಟೊಂದು ವರ್ಷ ಇದ್ದುದನ್ನು ಉಲ್ಲೇಖಿಸುತ್ತ ತಮ್ಮ ಮಧ್ಯೆ ಸುದೀರ್ಘ ಕಾಲ ಇದ್ದ ಶಾಂತಿಯನ್ನು ಒಡೆಯಲು ದ್ರೋಹಿಯೊಬ್ಬ ಕಾರಣೀಭೂತನಾಗಲಾರನೆಂದು ಆಶಿಸಿ ಅವನು ಕೂಡಲೆ ಸೈದ್‌ನನ್ನು ವಾಪಸು ಕಳಿಸಬೇಕೆಂದು ಕೇಳಿದ.

ಪತ್ರವನ್ನು ಇಡಲ್‌ಕಾವ್‌ನಿಗೆ ಓದಿ ಹೇಳಿದ ತಕ್ಷಣ ಅವನು ತನ್ನ ಕಾರ್ಯಿಗಳನ್ನು ಮತ್ತು ಮಂತ್ರಾಲೋಚನೆ ಸಭೆಯವರನ್ನು ಕರೆ ಕಳಿಸಿದ ಮತ್ತು ರಾಜನಿಂದ ಬಂದ ಪತ್ರವನ್ನು ಓದಲು ಅವರಿಗೆ ಹೇಳಿದ. ಅದರ ಬಗೆಗೆ ಅನೇಕ ಸಲಹೆಗಳನ್ನು ಮಾಡಲಾಯಿತು. ಎಲ್ಲದರ ಕೊನೆಗೆ ಅವನು ಅವನನ್ನು (ಸೈದ್‌ನನ್ನು) ಅವನಲ್ಲಿಗೆ (ಬಿಸ್ನಗದ ರಾಜ) ಕಳಿಸಿಕೊಡಬಾರದೆಂದು ಒಪ್ಪಿತವಾಯಿತು. ಏಕೆಂದರೆ, ಅವನು (ಸೈದ್) ಧರ್ಮದಲ್ಲಿ ಪಂಡಿತನು ಮತ್ತು ಮಾಫುಂದೊ[1]ನಿಗೆ ಸಂಬಂಧಿತನೆಂದು ಅವರು ಹೇಳಿದರು. ಮತ್ತು ಇಡಲ್‌ಕಾವ್ ತನ್ನ ಕ್ರಮವನ್ನು ಮರೆಮಾಚಲು ಅವನು ತನ್ನ ಹತ್ತಿರವಿಲ್ಲ ಮತ್ತು ಅವನ ಬಗೆಗೆ ತನಗೇನೂ ತಿಳಿಯದೆಂದು ತೋರಿಸಲೋಸುಗ ಆ ಸೈದ್‌ನಿಗೆ ದಾಬುಲ್ ಅನ್ನು ನೀಡಿದ. ಆ ದಾಬುಲ್ ಪಟ್ಟಣದಿಂದ ಸೈದ್ ಓಡಿ ಹೋದ : ಅವನ ಬಗೆಗೆ ಹೆಚ್ಚಿಗೆ ಏನೂ ಅವರಿಗೆ ತಿಳಿದಿರಲಿಲ್ಲ. ರಾಜನಿಂದ ಬಂದಿದ್ದವರು ಇಡಲ್‌ಕಾವ್‌ನ ಉತ್ತರ ಪಡೆದು ಮರಳಿದಾಗ ರಾಜ ಅದರಿಂದ ಬಹಳ ಕೋಪಗೊಂಡ ಮತ್ತು ಶಾಂತಿ ಮುರಿದುಬಿತ್ತೆಂದು ಭಾವಿಸಿದ. ಅವನು ಕೂಡಲೆ ತನ್ನೆದುರು ಬಂದು ಸೇರುವಂತೆ ತನ್ನ ಮಂತ್ರಾಲೋಚನ ಮಂಡಳಿಯ ಮಹಾಪ್ರಭುಗಳಿಗೆಲ್ಲ ಆಜ್ಞಾಪಿಸಿದ. ಮತ್ತು ಎಲ್ಲರಿಗೂ ಕೇಳುವಂತೆ ಪತ್ರವನ್ನು ಗಟ್ಟಿಯಾಗಿ ಓದಿಸಿದ. ತಾನು ಪೂರ್ಣ ಸೇಡು ತೀರಿಸಿಕೊಳ್ಳಲು ನಿರ್ಧರಿಸಿರುವುದರಿಂದ ಅದನ್ನು ಓದಲಾದ ತಕ್ಷಣ ಅವನು ಅವರಿಗೆ ಹೆಚ್ಚಿನ ಗಲಿಬಿಲಿಯಿಲ್ಲದೆ ಸನ್ನದ್ಧರಾಗಲು ಹೇಳಿದ. ಆದರೆ, ಇಷ್ಟು ಚಿಕ್ಕ ಧನ ಮೊತ್ತಕ್ಕಾಗಿ ಕ್ರಮ ತೆಗೆದುಕೊಳ್ಳುವುದು ಒಳ್ಳೆಯದಲ್ಲವೆಂದೂ, ಪ್ರಪಂಚದಾದ್ಯಂತ ಏನು ಮಾತಾಡಿಕೊಂಡಾರೆಂಬುದನ್ನು ಗಮನಿಸಬೇಕೆಂದೂ, ಇಷ್ಟು ಸಣ್ಣ ಕಾರಣಕ್ಕಾಗಿ ಇಷ್ಟು ಸುದೀರ್ಘ ಕಾಲದ ಶಾಂತಿಯನ್ನು ಮುರಿಯಲು ತಾನು ಪಣ ತೊಟ್ಟಿರುವುದಾದರೆ ಯಾವುದೇ ಮೂರನಲ್ಲಿ ಎಂದೂ ನಿಷ್ಠೆ ಎನ್ನುವುದು ಇದ್ದಿರಲಾರದೆಂಬುದನ್ನು ನೆನೆಸಿಕೊಳ್ಳಬೇಕೆಂದೂ, ಸೈದ್‌ಗೈದುದರಲ್ಲಿ ಇತರರೂ ಬಾಧ್ಯಸ್ಥರೆಂದೂ, ತನ್ನ ಮೇಲೆ ಸೇಡು ತೀರಿಸಿಕೊಳ್ಳಲು ಹೂಡಿದ ಯುದ್ಧಕ್ಕೆ ಸೈದ್ ಬರುವ ಧಾರ್ಷ್ಟ್ಯ ತೋರಿಸಿದ್ದಾದರೆ[2] ಅವನೊಂದಿಗೆ

ಇದ್ದವರೆಲ್ಲ ಸಾಯುವುದು ಒಳಿತೆಂದೂ, ಆದರೆ ಸೈದ್ ಸೈನ್ಯದಿಂದ ತುಂಬ ದೂರವುಳಿಯುವುದಾಗಿ ತಮಗೆ ಗೊತ್ತಿರುವುದೆಂದೂ[3] ಮಂತ್ರಾಲೋಚಕರು ರಾಜನಿಗೆ ಸಲಹೆಯಿತ್ತರು.

ಆದಾಗ್ಯೂ, ಯುದ್ಧ ಮಾಡುವ ತನ್ನ ನಿರ್ಧಾರದಿಂದ ರಾಜ ವಿಚಲಿತ ನಾಗದುದನ್ನು ಕಂಡು ಮಂತ್ರಾಲೋಚಕರು ಅವನಿಗೆ ಹೀಗೆ ಸಲಹೆಯಿತ್ತರು : "ಸ್ವಾಮಿ, ಆ ದಾರಿಯ ಮೂಲಕ (ದಾಬುಲ್) ಯುದ್ಧಕ್ಕೆ ಹೋಗದೆ ಹಿಂದೆ ಈ ರಾಜ್ಯದ ಭಾಗವಾಗಿದ್ದ ಆದರೆ, ಈಗ ಇಡಲ್‌ಕಾವ್‌ನಿಗೆ ಸೇರಿದ ರಾಚೋಲ್ ಮೇಲೆ ಸಾಗಿರಿ ; ಆಗ ಇಡಲ್‌ಕಾವ್ ಅದನ್ನು ರಕ್ಷಿಸಲು ಧಾವಿಸಿ ಬರದೆ ಗತ್ಯಂತರ ವಿಲ್ಲ ಮತ್ತು ಈ ರೀತಿ ನೀವು ಒಬ್ಬನ ಮತ್ತು ಇನ್ನೊಬ್ಬನ ಮೇಲೂ ಸೇಡು ತೀರಿಸಿ ಕೊಳ್ಳುವಿರಿ". ಈ ಸಲಹೆ ಸರಿಯೆಂದು ಭಾವಿಸಿ ರಾಜ ಮಾದ್ರೆ ಮಲುಕೊ, ಮತ್ತು ಡೆಮೆಲಿನೊ, ಮತ್ತು ದೆಸ್ತುರ್ವಿರಿದೊ[4] ಮತ್ತು ಇನ್ನಿತರ ಉನ್ನತ ದೊರೆಗಳಿಗೆ ಪತ್ರ ಬರೆದು ಇಡಲ್‌ಕಾವ್‌ನ ಬಗೆಗೆ ಏನು ಘಟಿಸಿರುವುದೆಂಬುವನ್ನು ಮತ್ತು ಹೇಗೆ ತಾನು ಅವನೊಂದಿಗೆ ಯುದ್ಧ ಮಾಡಲು ನಿರ್ಧರಿಸಿದುದನ್ನು ತಿಳಿಸಿದ. ಅವನು ಸರಿಯಾಗಿಯೆ ನಡೆದುಕೊಳ್ಳುತ್ತಿರುವುದಾಗಿ ಮತ್ತು ತಮಗೆ ಶಕ್ಯವಿದ್ದಷ್ಟು ಅವನಿಗೆ ಸಹಾಯ ಮಾಡುವುದಾಗಿ ಆ ದೊರೆಗಳಿಂದ ಉತ್ತರ ಬಂದವು. ಝುಮೆಲುಕೊನಿಗಾದರೊ ಹರಿಕಾರರು ಈ ಉತ್ತರ ಮುಟ್ಟಿಸಿದಾಗ ಇಡಲ್ ಕಾವ್‌ನನ್ನು ಮದುವೆಯಾಗಿದ್ದ ತನ್ನ ಸಹೋದರಿಯ ನೆರವಿಗೆ ಕೆಲವು ಸೈನಿಕರನ್ನು ಕಳಿಸದಿರಲು ಯಾವ ನೆಪವೂ ದೊರೆಯಲಿಲ್ಲ.

ರಾಜ ಆ ದೊರೆಗಳಿಗೆ ಪತ್ರ ಕಳಿಸಿದುದು ಜಾಣ್ಮೆಯ ಕೆಲಸವಾಗಿತ್ತು. ಏಕೆಂದರೆ, ಅವರನ್ನು ತನ್ನ ಪಕ್ಷಕ್ಕೆ ಸೆಳೆದುಕೊಳ್ಳಲೋಸುಗ ತಾನು ಏನು ಮಾಡ ಹೊರಟಿರುವನೆಂಬುದನ್ನು ಅವರಿಗೆ ತಿಳಿಸಿದನು. ಸೈನಿಕರ ವಿಷಯದಲ್ಲಂತೂ ಅವನಿಗೆ ಅವಶ್ಯಕತೆಯಿರಲಿಲ್ಲ. ಕನಿಷ್ಠಪಕ್ಷ ಅವರ ಸಮ್ಮತಿಯಾದರೂ ಇರಲೆಂದು ಹಾಗೆ ಮಾಡಿದ. ಏಕೆಂದರೆ, ಅವರು ಇಡಲ್‌ಕಾವ್‌ನನ್ನು ಕೂಡಿಕೊಂಡಿದ್ದರೆ ತಾನು (ರಾಜ) ಈಗ ಮಾಡಿದಂತೆ ಅವನನ್ನು ಗೆಲ್ಲಲಾಗುತ್ತಿರಲಿಲ್ಲ. ಆದರೆ, ಅವನು ಅವರೆಲ್ಲರಿಗಿಂತ ಬಲಿಷ್ಠ ದೊರೆಯಾಗಿದ್ದುದರಿಂದ ಇಡಲ್‌ಕಾವ್‌ನನ್ನು ಅವರೆಲ್ಲ ದ್ವೇಷಿಸುತ್ತಿದ್ದುದರಿಂದ (ಏಕೆಂದರೆ, ಮೂರರ ಮಧ್ಯೆ ವಿಶ್ವಾಸವಿರುವುದಿಲ್ಲ ಮತ್ತು ಅವರು ನಾಯಿಗಳಂತೆ ಒಬ್ಬರನ್ನೊಬ್ಬರು ಕಚ್ಚುತ್ತಾರೆ ಮತ್ತು ಒಬ್ಬರು ಇನ್ನೊಬ್ಬರು ನಾಶವಾಗುವುದನ್ನು ಇಷ್ಟಪಡುತ್ತಾರೆ.) ನೀವು ಮುಂದೆ ನೋಡಲಿರುವಂತೆ ಒಂದು ಸಾವಿರ ಐನೂರ ಇಪ್ಪತ್ತೆರಡನೆಯ ಇಸ್ವಿ ಮೇ ತಿಂಗಳಲ್ಲಿ ಅಮಾವಾಸ್ಯೆಯ ದಿನ[5] ಅವನನ್ನು ಗೆಲ್ಲಲಾಯಿತು.

ರಾಜ ಪ್ರಾರ್ಥನೆ ಸಲ್ಲಿಸಿ ತನ್ನ ದೇವತೆಗಳಿಗೆ ಬಲಿ ನೀಡಿದ ನಂತರ ತನ್ನೆಲ್ಲ ಸೈನಿಕರೊಂದಿಗೆ ಬಿಸ್ನಗದಿಂದ ಹೊರಟ, ಮತ್ತು ಅವರು ಕೆಳಗೆ ವಿವರಿಸಿದ ಕ್ರಮದಲ್ಲಿ ಸಾಗಿದರು. ರಕ್ಷಣಾಪಡೆಯ ಮುಖ್ಯಸ್ಥ[6] ಮೂವತ್ತು ಸಾವಿರ ಕಾಲಾಳುಗಳ— ಬಿಲ್ಲುಗಾರರು, ಗುರಾಣಿಯುವರು, ಮತ್ತು ತುಬಾಕಿಯುವರು, ಮತ್ತು ಭಲ್ಲೆಯುವರು– ಮತ್ತು ಒಂದು ಸಾವಿರ ಅಶ್ವಾಳುಗಳು ಮತ್ತು ತನ್ನ ಆನೆಗಳ ಮುಂಚೂಣಿಯ ನಾಯಕತ್ವ ವಹಿಸಿದ. ಅವನ ಹಿಂದೆ ಐವತ್ತು ಸಾವಿರ ಕಾಲಾಳು ಮತ್ತು ಎರಡು ಸಾವಿರ ಅಶ್ವ ಮತ್ತು ಇಪ್ಪತ್ತು ಆನೆಗಳೊಂದಿಗೆ ತ್ರಿಂಬಿಕರ ನಡೆದ. ಅವನ ಹಿಂದೆ ತಿಮಪನಾಯಿಕ ನಡೆದ; ಅವನೊಂದಿಗೆ ಅರವತ್ತು ಸಾವಿರ ಕಾಲಾಳು ಮತ್ತು ಮೂರು ಸಾವಿರದ ಐನೂರು ಅಶ್ವಗಳು ಮತ್ತು ಮೂವತ್ತು ಆನೆಗಳು ಇದ್ದವು; ಅವನ ಹಿಂದೆ ಒಂದು ನೂರು ಸಾವಿರ ಕಾಲಾಳು ಮತ್ತು ಐದು ಸಾವಿರ ಅಶ್ವಗಳು ಮತ್ತು ಐವತ್ತು ಆನೆಗಳೊಂದಿಗೆ ಆದಪನಾಯಿಕ ನಡೆದ. ಅವನ ಹಿಂದೆ ಕೊಂಡಮಾರ[7]ನಿದ್ದ ಮತ್ತು ಅವನೊಂದಿಗೆ ನೂರಿಪ್ಪತ್ತು ಸಾವಿರ ಕಾಲಾಳು, ಆರು ಸಾವಿರ ಅಶ್ವಾಳು ಮತ್ತು ಅರವತ್ತು ಆನೆಗಳಿದ್ದವು; ಅವನ ಹಿಂದೆ ಕೊಮಾರ ನಡೆದ ಮತ್ತು ಅವನೊಂದಿಗೆ ಎಂಬತ್ತು ಸಾವಿರ ಕಾಲಾಳು, ಎರಡು ಸಾವಿರ ಐನೂರು ಅಶ್ವಾಳು ಮತ್ತು ನಲವತ್ತು ಆನೆಗಳಿದ್ದವು; ಅವನ ಹಿಂದೆ ಬಿಸ್ನಗ ನಗರದ ಅಧಿಪತಿಯಾದ ಒಗೆಮ್‌ದ್ರಹೊ[8] ತನ್ನ ಬಲಗಳೊಂದಿಗೆ. ಅವನೊಂದಿಗೆ ಒಂದು ಸಾವಿರ ಅಶ್ವಾಳು ಮತ್ತು ಮೂವತ್ತು ಸಾವಿರ ಕಾಲಾಳು ಮತ್ತು ಹತ್ತು ಆನೆಗಳುಳ್ಳ ಅವನ ದಳವಾಯಿಗಳಲ್ಲೊಬ್ಬನಿದ್ದ. ಅವನ ಹಿಂದೆ ರಾಜನಿಗೆ ಪ್ರಿಯರಾದ ಮೂವರು ಬೀಜವೊಡೆದ ಗಂಡಸರು, ಅವರು ನಲವತ್ತು ಸಾವಿರ ಕಾಲಾಳು ಮತ್ತು ಒಂದು ಸಾವಿರ ಅಶ್ವಾಳು ಮತ್ತು ಹದಿನೈದು ಆನೆಗಳನ್ನು ಪಡೆದಿದ್ದರು. ರಾಜನ ಅಡಿಕೆಯ ಸೇವೆಯಲ್ಲಿದ್ದ ಯುವಪರಿಚಾರಕ[9]ನೊಂದಿಗೆ ಹದಿನೈದು ಸಾವಿರ ಕಾಲಾಳು ಮತ್ತು ಎರಡುನೂರು ಅಶ್ವಾಳುಗಳಿದ್ದು ಆನೆಗಳಿರಲಿಲ್ಲ. ಕೊಮಾರಬರ್ಕ[10]ನೊಂದಿಗೆ ಎಂಟು ಸಾವಿರ ಕಾಲಾಳು ಮತ್ತು ನಾನೂರು ಅಶ್ವಾಳು ಮತ್ತು ಇಪ್ಪತ್ತು ಆನೆಗಳಿದ್ದವು. ಬೆಂಗಾಪುರದ[11] ದೊರೆಯ ಜನ ಅಸಂಖ್ಯರಾಗಿದ್ದ ಡೋಮರ ಜನರೊಂದಿಗೆ ಬೇರೆ ಮಾರ್ಗದಿಂದ ಬಂದರು; ಮತ್ತು ಇದೇ ರೀತಿ ಹತ್ತು ಹನ್ನೆರಡು ಸಾವಿರ ಯೋಧರುಳ್ಳ ಇತರ ದಳವಾಯಿಗಳೂ ನಡೆದರು. ಅವರ ಹೆಸರುಗಳು ನನಗೆ ಗೊತ್ತಿರದ್ದರಿಂದ ನಾನಿಲ್ಲಿ ಹೇಳುವುದಿಲ್ಲ. ರಾಜ ತನ್ನ ರಕ್ಷಣಾಪಡೆಯಿಂದ ತನ್ನ ರಾಜ್ಯದಲ್ಲಿಯೆ ಅತ್ಯುತ್ತಮವಾಗಿದ್ದ ಆರು ಸಾವಿರ ಅಶ್ವಾಳು ಮತ್ತು ನಲವತ್ತು ಸಾವಿರ ಕಾಲಾಳುಗಳನ್ನು ತೆಗೆದುಕೊಂಡು ಹೊರಟ; ಗುರಾಣಿಗಳುಳ್ಳವರು, ಬಿಲ್ಲುಗಾರರು ಮತ್ತು ಮುನ್ನೂರು ಆನೆಗಳು.

ಎಲ್ಲರೂ ಚನ್ನಾಗಿ ಶಸ್ತ್ರಸಜ್ಜಿತರಾಗಿದ್ದರು, ಪ್ರತಿಯೊಬ್ಬನೂ ತನ್ನದೆ ರೀತಿಯಲ್ಲಿ ಬಿಲ್ಲುಗಾರರು ಮತ್ತು ತುಬಾಕಿದಾರರು ತಮ್ಮ ರಜಾಯಿ ಕಪನಿಗಳಿಂದ, ಮತ್ತು ಗುರಾಣಿದಾರರು ತಮ್ಮ ಟೊಂಕಗಳಲ್ಲಿ ಕತ್ತಿಗಳು ಮತ್ತು ಕಠಾರಿಗಳೊಂದಿಗೆ, ಗುರಾಣಿಗಳು ಎಷ್ಟು ದೊಡ್ಡವಿವೆಯೆಂದರೆ ಸಂಪೂರ್ಣ ಮರೆಮಾಡಿದ ದೇಹವನ್ನು ಸಂರಕ್ಷಿಸಲು ಚಿಲಕತ್ತಿನ ಅವಶ್ಯಕತೆಯಿಲ್ಲ ; ಕುದುರೆಗಳು ಸಂಪೂರ್ಣ ಜೂಲಗಳಲ್ಲಿ ಮತ್ತು ಅಶ್ವಾಳುಗಳು ರಜಾಯಿ ಅಂಗಿಗಳಲ್ಲಿ ಮತ್ತು ತಮ್ಮ ಕೈಗಳಲ್ಲಿ ಆಯುಧಗಳೊಂದಿಗೆ ಮತ್ತು ತಮ್ಮ ತಲೆಯ ಮೇಲೆ ತಮ್ಮ ಅಂಗಿಗಳಂತಹವೆ ಅರಳೆಯ ರಜಾಯಿಯ ತುರಾಯಿಗಳೊಂದಿಗೆ ಯುದ್ಧದ ಆನೆಗಳು ತಮ್ಮ ಅಂಬಾರಿಗಳೊಂದಿಗೆ ಹೋಗುತ್ತವೆ. ಅವುಗಳಲ್ಲಿ ಕುಳಿತು ನಾಲ್ವರು ನಾಲ್ಕೂ ಬದಿಗೆ ಕಾದುತ್ತಾರೆ. ಆನೆಗಳನ್ನು ಸಂಪೂರ್ಣವಾಗಿ ಜೂಲಗಳಿಂದ ಹೊಚ್ಚಲಾಗಿರುತ್ತದೆ. ಮತ್ತು ಅವುಗಳ ಕೋರೆಗಳಿಗೆ ಬಹಳ ಸಾಣೆಹಿಡಿದ ಮತ್ತು ಹರಿತಗೊಳಿಸಿದ ಚೂರಿಗಳನ್ನು ಕಟ್ಟಲಾಗಿರುತ್ತದೆ. ಅವುಗಳಿಂದ ಅವು ಬಹಳ ಹಾನಿ ಮಾಡುತ್ತವೆ. ಹಲವು ತೋಪುಗಳನ್ನು ಒಯ್ಯಲಾಗಿತ್ತು. ನಾನಿಲ್ಲಿ ಅಸಂಖ್ಯರಾಗಿದ್ದ ಅಗಸರ ಬಗೆಗಾಗಲಿ ಸೈನ್ಯದೊಡನೆ ಬಂದ ವೇಶ್ಯೆಯರ ಬಗೆಗಾಗಲಿ ಹೇಳುವದಿಲ್ಲ ; ರಾಜನ ಪಯಣದಲ್ಲಿ ಅವನೊಂದಿಗೆ ಅವರು ಇಪ್ಪತ್ತು ಸಾವಿರ ಇದ್ದರು. ಇಷ್ಟು ದೊಡ್ಡ ಸಂಖ್ಯೆಯ ಜನರು ಒಯ್ಯುವ ಸಾಮಾನು ಸರಂಜಾಮನ್ನು ಯಾರಾದರೂ ಕಲ್ಪಿಸಿಕೊಳ್ಳಬಹುದು. ರಾಜನೊಂದಿಗೆ ಹಿಂಗಡೆಯಲ್ಲಿ ಆದರೆ ಯಾವಾಗಲೂ ಅವನ ಮುಂದೆ ರಸ್ತೆಯ ಮೇಲೆ ಹತ್ತು ಹನ್ನೆರಡು ಸಾವಿರದಷ್ಟು ಜನ ತಮ್ಮ ಪಕಾಲಿಗಳೊಂದಿಗೆ ನೀರನ್ನರಸಿ ಹೋಗುತ್ತಾರೆ ಮತ್ತು ಯಾರಿಗೆ ನೀರು ತಂದುಕೊಡಲು ಯಾರೂ ಇರುವುದಿಲ್ಲವೊ ಅವರಿಗೆ ನೀರುಣಿಸಲೋಸುಗ ರಸ್ತೆಗುಂಟ ಇರುತ್ತಾರೆ ; ನೀರಡಿಕೆಯಿಂದ ಯಾರೂ ಸಾಯಬಾರದೆಂದು ಹೀಗೆ ಮಾಡಲಾಗುತ್ತದೆ. ಇದೆಲ್ಲ ಜನಸಮುದಾಯದ ಮೂರು ನಾಲ್ಕು ಹರದಾರಿ ಮುಂದೆ ಅಗ್ರಚಾರರಂತಿದ್ದ ಸುಮಾರು ಐವತ್ತು ಸಾವಿರ ಜನ ಹೋಗುತ್ತಾರೆ. ಅವರು ಮುಂದಿರುವ ಪ್ರದೇಶವನ್ನು ರಹಸ್ಯಾನ್ವೇಷಣ ಮಾಡಬೇಕು ಮತ್ತು ಯಾವಾಗಲೂ ಅಷ್ಟು ಅಂತರ ಕಾಯ್ದುಕೊಳ್ಳಬೇಕು ; ಮತ್ತು ಅವರ ಇಕ್ಕೆಲ್ಲಗಳಲ್ಲಿ ಆ ನಾಡಿನ ಅಶ್ವದಳದ ಎರಡು ಸಾವಿರ ಕುದುರೆಗಳಿರುತ್ತವೆ. ಇವರೆಲ್ಲ ಬಿಲ್ಲುಗಾರರು ಮತ್ತು ಯಾವಾಗಲೂ ಅಗ್ರಚಾರರಿಗಿಂತ ಮುಂದೆ ಅವರ ಇಕ್ಕೆಲಗಳಲ್ಲಿ ನಡೆದಿರುತ್ತಾರೆ.

ನಾನು ಹೇಳಿರುವ ಈ ಕ್ರಮದಲ್ಲಿ ಅವರು ಬಿಸ್ನಗ ನಗರದಿಂದ ತೆರಳಿದರು, ಮತ್ತು ಅವರೊಂದಿಗೆ ಇತರ ಅನೇಕರೊಂದಿಗೆ ಅಧಿಕ ಸಂಖ್ಯೆಯ ವರ್ತಕರು ಇದ್ದರು. ಅವರು ಎಲ್ಲ ಪೂರೈಕೆಗಳೊಂದಿಗೆ ಆಗಲೆ ಮುಂದೆ ಸಾಗಿದ್ದರು ; ಇದರಿಂದಾಗಿ ನೀವು ಎಲ್ಲಿಯೆ ಇರಲಿ ನಿಮಗೆ ಬೇಕಾದುದೆಲ್ಲ ತಕ್ಷಣ ಸಿಗುತ್ತದೆ. ಪ್ರತಿ ದಳವಾಯಿ ತನ್ನದೆ

ವರ್ತಕರನ್ನು ಹೊಂದಿರುತ್ತಾನೆ. ಅವರು ಅವನ್ನೆಲ್ಲ ಜನರಿಗೆ ಅಗತ್ಯವಿರುವ ವಸ್ತುಗಳನ್ನು ಪೂರೈಸಬೇಕು. ಮತ್ತು ಅದೇ ರೀತಿಯಲ್ಲಿ ಅವರು ಇತರ ಅಗತ್ಯ ವಸ್ತುಗಳನ್ನು ಒಯ್ಯುತ್ತಾರೆ.

ರಾಜನ ಪದ್ಧತಿಯಂತೆ, ಅವನು ಒರಗಿ ನಿದ್ದೆಗೈಯಬಯಸಿದಾಗ, ಅವರು ಅವನಿಗಾಗಿ ಪೊದೆ ಮತ್ತು ಮುಳ್ಳುಗಳ ಬೇಲಿ ನಿರ್ಮಿಸಿ ಅದರ ಹಿಂದೆ ಅವನ ಡೇರೆ ನಿಲ್ಲಿಸುತ್ತಾರೆ. ಈ ಮಾರ್ಗದುದ್ದಕ್ಕೂ ಹೀಗೆ ಮಾಡಲಾಯಿತು. ಆ ಮಾರ್ಗದಲ್ಲಿ ಒಂದು ಅದ್ಭುತ ದೃಶ್ಯ ಕಂಡಿತು. ಅದೆಂದರೆ, ಒಂದು ನದಿ ದಾಟಲು ಅವರು ಅದನ್ನು ತಲುಪಿದಾಗ ಅದು ಅರ್ಧ ಮೊಣಕಾಲವರೆಗೆ ಬಂತು, ಅರ್ಧ ಜನ ದಾಟುವಷ್ಟರಲ್ಲಿ ಅದು ಒಂದೂ ಹನಿ ನೀರಿಲ್ಲದಂತೆ ಸಂಪೂರ್ಣ ಒಣಗಿತು ಮತ್ತು ಸ್ವಲ್ಪ ನೀರು ಹುಡುಕಲೋಸುಗ ಅವರು ಅದರ ಮಳಲಿನಲ್ಲಿ ತಗ್ಗು ತೋಡತೊಡಗಿದರು. ಈ ಕ್ರಮದಲ್ಲಿ ರಾಜ ಮೊಲ್ಲಬಂಡಿಮ್[12] ಪಟ್ಟಣ ತಲುಪುವವರೆಗೆ ಸಾಗಿದ. ರಾಚೋಲ್‌ನ ಮುತ್ತಿಗೆಗೆ ಅಗತ್ಯವಿದ್ದ ಎಲ್ಲವನ್ನೂ ಹವಣಿಸುತ್ತಿದ್ದಾಗ ಬಿಸ್ನಗ ರಾಜನ ಜನರ ಮತ್ತು ಡೋಮಾರದ ಜನರು ಮತ್ತು ಅಸಂಖ್ಯ ಜನರೊಡಗೂಡಿದ ಇನ್ನೂ ಅನೇಕ ದಳವಾಯಿಗಳು ಅವನಲ್ಲಿಗೆ ಬಂದರು. ಅವರು ಬಂದು ಸೇರಿ ಎಲ್ಲವನ್ನೂ ಕ್ರಮಗೊಳಿಸಿದ ಕೂಡಲೆ ಮತ್ತು ಬ್ರಾಹ್ಮಣರು ತಮ್ಮ ಆಚರಣೆಗಳನ್ನು ಮತ್ತು ಯಜ್ಞಗಳನ್ನು ಮುಗಿಸಿದ ಮೇಲೆ ಅವರು ರಾಜನಿಗೆ ಈಗ ಸಮಯ ಯೋಗ್ಯವಾಗಿರುವುದೆಂದು ದೇವಾಲಯಗಳು ಅವನಿಗೆ ವಿಜಯಸೂಚನೆಯನ್ನು ಕೊಟ್ಟಿರುವುವೆಂದು ಮತ್ತು ಅವನು ಮುಂದೆ ಸಾಗಬೇಕೆಂದು ಹೇಳಿದರು.

ಆಗ ಅವನು ರಾಜಸೇವೆಯಲ್ಲಿದ್ದ ಮೂರರನ್ನು ಮಂಚೂಣಿಗೆ ಮಾರ್ಗ ತೋರಲು ಕಳಿಸಿದನು, ಮತ್ತು ರಕ್ಷಣಾದಳದ ಅಧಿಪತಿ ಕಾಮಾನಾಯಕ ರಾಚೋಲ್ ನಗರದ ಕಂದಕಗಳಿಗೆ ತೀರ ಹತ್ತಿರದಲ್ಲಿ ಬಿಡಾರ ಹೂಡಿದ ಮತ್ತು ಇತ್ತ ಆಜ್ಞೆಗನುಸಾರವಾಗಿ ಪ್ರತಿಯೊಬ್ಬ ದಳವಾಯಿ ತನ್ನ ಜನರನ್ನು ನಿಲ್ಲಿಸಿದ. ನಗರದ ಜನರು ಅವರನ್ನು ತಮ್ಮಲ್ಲಿದ್ದ ಭಾರಿ ತೋಪುಗಳಿಂದ ಮತ್ತು ಬಂದೂಕುಗಳಿಂದ ಹೊಡೆದ ಅನೇಕ ಗುಂಡುಗಳಿಂದ ಮತ್ತು ಅನೇಕ ಬಾಣಗಳು ಮತ್ತು ತುಬಾಕಿ ಗುಂಡುಗಳಿಂದ ಎದುರುಗೊಂಡರು. ಆದರಿಂದಾಗಿ, ಕಂದಕಗಳಿಗೆ ತೀರ ಹತ್ತಿರ ಬಂದಿದ್ದ ದಾಳಿಗಾರರು ಭಾರಿ ನಷ್ಟ ಅನುಭವಿಸಿದರು ಮತ್ತು ಹಿಂದೆ ಸರಿಯಲು ಇಚ್ಛಿಸಿದ್ದರು. ತಾನು ಬೇಗ ನಗರದೊಳಗೆ ಪ್ರವೇಶ ಪಡೆಯುವಂತಿರದಿದ್ದರೆ ತಾನು ಅವರನ್ನು ಅಲ್ಲಿಗೆ ಕಳಿಸುತ್ತಿರಲಿಲ್ಲ, ಹಾಗಾಗದಿದ್ದ ಪಕ್ಷದಲ್ಲಿ ಅವರೆಲ್ಲ ಸಾಯಬೇಕು ಎಂದು ಹೇಳುತ್ತ ರಾಜ ಅವರು ಹಿಂದೆ ಸರಿಯಲು ಅನುಮತಿ ನೀಡಲಿಲ್ಲ. ಹೀಗಾಗಿ, ಅವನ ಸೈನಿಕರು ನಗರದ ಮೇಲೆ ಆಕ್ರಮಣ ಮಾಡಲೇಬೇಕಾಯಿತು ಮತ್ತು ಅವರು ಅನೇಕ ಧೀರ ಮತ್ತು ಗಂಭೀರ ಕದನಗಳಲ್ಲಿ ಹಾಗೆಯೆ ಮಾಡಿದರು. ಇವುಗಳಲ್ಲಿ ಅವರಲ್ಲನೇಕರು

ಆಸುನೀಗಿದರು. ಏಕೆಂದರೆ, ಭದ್ರ ಸ್ಥಾನದಲ್ಲಿದ್ದ ನಗರದೊಳಗಿನವರಿಗೆ ತಮ್ಮ ರಕ್ಷಣೆ ಗಾಗಿ ಏನೆಲ್ಲ ಮಾಡಬೇಕೆಂದು ಚನ್ನಾಗಿ ಗೊತ್ತಿತ್ತು. ಅದೇ ಸಮಯಕ್ಕೆ ರಾಜನ ಪಡೆಗಳು ನಗರದ ಮೇಲಿನ ದಾಳಿಯನ್ನು ನಿಲ್ಲಿಸಲಿಲ್ಲ. ಸತ್ತ ಸೈನಿಕರ ಸಂಖ್ಯೆಯನ್ನು ಗಮನಿಸಿ ದಾಳಿ ಎಷ್ಟು ದುರ್ಬಲವಾಗಿ ನಡೆದಿತ್ತೆಂದು ಅರಿತ ದಳವಾಯಿಗಳು ಧಾರಾಳವಾದ ಕಾಣಿಕೆಗಳ ಮತ್ತು ಯುಕ್ತಿಗಳನ್ನು ಆಶ್ರಯಿಸಿದರು. ಅದು ಹೀಗೆ: ಅವರು (ಸೈನಿಕರಿಂದ) ಗೋಡೆಗಳಿಂದ ಗೋಪುರಗಳಿಂದ ಕಿತ್ತುತಂದ ಹರಳುಗಳನ್ನು ಕೊಂಡುಕೊಳ್ಳತೊಡಗಿದರು ಮತ್ತು ಹರಳಿನ ಮೌಲ್ಯದನ್ವಯ ಹಣ ನೀಡತೊಡಗಿ ದರು. ಹರಳುಗಳು ಹತ್ತು, ಇಪ್ಪತ್ತು, ಮೂವತ್ತು, ನಲವತ್ತು ಮತ್ತು ಐವತ್ತು ಘನವನ್[13] ಕಿಮ್ಮತ್ತಿನವು ಇದ್ದವು. ಈ ಯುಕ್ತಿಯಿಂದ ಅವರು ಅನೇಕ ಕಡೆ ಗೋಡೆ ಯನ್ನು ಕೆಡವಲು ಉಪಾಯ ಮಾಡಿದರು ಮತ್ತು ನಗರವನ್ನು ತೆರೆದಿಟ್ಟರು. ಆದರೆ ನಗರವೆ ಭದ್ರವಾಗಿದ್ದು ಮತ್ತು ಅದರಲ್ಲಿದ್ದ ಸೈನಿಕರು ಎಂಥ ಅಯ್ದ ಜನರು ಮತ್ತು ಯುದ್ಧದ ರೂಢಿಯಿದ್ದವರು ಆಗಿದ್ದರೆಂದರೆ ಅವರು ರಾಜನ ಅನೇಕ ಸೈನಿಕರನ್ನು ಕೊಂದರು. ಆದರೂ ಸಹ ಅವರು ಯುದ್ಧ ನಿಲ್ಲಿಸಲಿಲ್ಲ. ಆದರೆ, ದಳವಾಯಿಗಳು ಕೊಡುತ್ತಿದ್ದುದರ ಆಶೆಗಾಗಿ ಅವರು ಪ್ರತಿದಿನ ಮತ್ತು ಪ್ರತಿ ಆಕ್ರಮಣಕ್ಕೂ ಅಧಿಕ ಧೀರರಾದರು. ಏಕೆಂದರೆ, ಅವರನ್ನು ಈ ಮುಂಚೆ ಆವರಿಸಿದ್ದ ಮೃತ್ಯುಭಯವನ್ನು ಅವರಿಂದ ದೂರ ಮಾಡಲು ಹಣ ಶಕ್ತವಾಯಿತು. ಗೋಡೆಯ ಅಡಿಯಿಂದ ಪ್ರತಿ ಹೆಣವನ್ನು ಎಳೆದೊಗೆಯಲೂ ಅವರು ಏನಾದರೂ ಕೊಡುತ್ತಿದ್ದರು. ಆದುದರಿಂದ ಇಡಲ್‌ಕಾನ್ ಹೆಚ್ಚಿಗೆ ಸೈನ್ಯ ತರುವವರೆಗೆ ಯುದ್ಧ ಮೂರು ತಿಂಗಳ ಕಾಲ ತಳ್ಳಿಕೊಂಡು ಹೋಯಿತು.

ಈಗ ನಾನು ಪರಿಸ್ಥಿತಿಯ ಬಗೆಗೆ ಮತ್ತು ನಗರದ ಬಗೆಗೆ ಮತ್ತು ಅದರಲ್ಲಿದ್ದ ಜನರ ಬಗೆಗೆ ನೀವು ಹೆಚ್ಚು ತಿಳಿಯಬೇಕೆಂದು ಬಯಸುತ್ತೇನೆ. ಈ ರಾಚೋಲ್ ನಗರ ಎರಡು ದೊಡ್ಡ ನದಿಗಳ ಮಧ್ಯೆ ಮತ್ತು ತೀರ ಚಿಕ್ಕವನ್ನು ಬಿಟ್ಟರೆ ಗಿಡಗಳೆ ಇಲ್ಲದ ಮತ್ತು ದೊಡ್ಡ ಬಂಡೆಗಳಿರುವ ವಿಶಾಲ ಬಯಲಿನ ನಡುವೆ ಇದೆ. ಪ್ರತಿ ನದಿಯಿಂದ ನಗರ ಮೂರು ಹರದಾರಿ ದೂರವಿದೆ. ಇವೆರಡು ನದಿಗಳಲ್ಲೊಂದು ಉತ್ತರಗಡಿಯಾಗಿದೆ, ಮತ್ತು ಅದರಾಚೆಗಿನ ಪ್ರದೇಶ ಇಡಲ್‌ಕಾನ್‌ನಿಗೆ ಸೇರಿದೆ, ಮತ್ತು ಇನ್ನೊಂದು ದಕ್ಷಿಣದ ಗಡಿಯಾಗಿದ್ದು ನರಸಿಂಗನ ಗಡಿಯಾಗಿದೆ. ಬಯಲು ಇವೆರಡು ನದಿಗಳ ಮಧ್ಯೆ ಇದೆ ಮತ್ತು ಅದರೊಳಗೆ ದೊಡ್ಡ ಸರೋವರಗಳು ಮತ್ತು ಭಾವಿಗಳು ಮತ್ತು ನಗರ ಸ್ಥಾಪಿತವಾಗಿರುವೆಡೆ ಕೆಲವು ಚಿಕ್ಕ ಹೊಳೆಗಳಿವೆ ಮತ್ತು ಸ್ತ್ರೀಯ ಸ್ತನದಂತೆ ಕಾಣುವ ಮತ್ತು ಪ್ರಾಕೃತಿಕವಾಗಿ ರಚಿತವಾಗಿರುವ ಗುಡ್ಡ ವೊಂದಿದೆ. ಸುಣ್ಣರಹಿತವಾದ ಗಟ್ಟಿ ಕಲ್ಲುಕಟ್ಟಡದ ಭದ್ರ ಗೋಡೆಗಳ ಮೂರು ಸುತ್ತುಗಳನ್ನು ನಗರ ಹೊಂದಿದೆ: ಗೋಡೆಗಳನ್ನು ಅರಲಿನಿಂದ ತುಂಬಲಾಗಿದೆ

ಮತ್ತು ಅದರ ಅತ್ಯುನ್ನತ ತುದಿಗೆ ಬಲು ಎತ್ತರ ಮತ್ತು ಗಟ್ಟಿಯಾದ ಬುರುಜಿ ನಂತಿರುವ ದುರ್ಗವಿದೆ ; ದುರ್ಗ ನಿಂತಿರುವ ತುದಿಯ ಮೇಲೆ ಇಡಿ ವರ್ಷ ಹರಿಯುವ ನೀರಿನ ಚಿಲುಮೆಯಿದೆ. ಇಷ್ಟು ಎತ್ತರದ ಸ್ಥಳದಲ್ಲಿರುವ ಅದು ಹೇಗೊ ಎಂದೂ ನೀರು ಬತ್ತದಿರುವುದು ಒಂದು ರಹಸ್ಯಗರ್ಭಿತ ಘಟನೆಯೆಂದು ಗ್ರಹಿಸಲಾಗುತ್ತದೆ. ಈ ಚಿಲುಮೆಯಲ್ಲದೆ ಅಲ್ಲಿ ನೀರಿನ ಹಲವಾರು ಕೆರೆಭಾವಿಗಳುಂಟು. ಹಾಗಾಗಿ ನೀರಿನ ಕೊರತೆಯಿಂದ ಸೋಲಿಸಲ್ಪಡುವ ಭಯ ನಾಗರಿಕರಿಗೆ ಇರಲಿಲ್ಲ ; ಮತ್ತು ನಗರದಲ್ಲಿ ಐದು ವರ್ಷ ಸಾಲುವ ಪೂರೈಕೆಗಳಿದ್ದವು. ಅಲ್ಲಿ ಕಾವಲುದಂಡಾಗಿ ಎಂಟು ಸಾವಿರ ಯೋಧರು ಮತ್ತು ನಾನೂರು ಅಶ್ವಾಳು ಮತ್ತು ಇಪ್ಪತ್ತು ಆನೆಗಳು, ಮತ್ತು ಭಾರಿ ಕಲ್ಲುಗಳನ್ನೆಸೆದು ಬಹಳ ಹಾನಿ ಉಂಟು ಮಾಡುವ ಮೂವತ್ತು ಕವಣೆ ಯಂತ್ರ ಗಳು ಇದ್ದವು. ಗೋಡೆಗಳ ಮೇಲಿರುವ ಬುರುಜುಗಳು ಎಷ್ಟು ಸಮೀಪವಿವೆಯೆಂದರೆ ಒಂದರಲ್ಲಿ ಆಡಿದ ಮಾತುಗಳು ಇನ್ನೊಂದರಲ್ಲಿ ಕೇಳಿಸುತ್ತವೆ. ಇವುಗಳ ನಡುವೆ ಮತ್ತು ಸುತ್ತಲೂ ಚಿಕ್ಕವುಗಳನ್ನು ಬಿಟ್ಟು ಇನ್ನೂರು ದೊಡ್ಡ ತೋಪುಗಳ ಫಿರಂಗಿ ದಳ ನಿಲ್ಲಿಸಲಾಗಿದೆ. ನಗರದಲ್ಲಿನ ಯೋಧರಿಗೆ ರಾಜನ ಪಡೆಗಳು ಬಂದುದು ತಿಳಿದ ಕೂಡಲೆ ಮತ್ತು ಕೆಲವು ಸೈನಿಕರೊಂದಿಗೆ ಆಗಮಿಸಿದ ಇಡಲ್‌ಕಾವ್‌ನ ದಳವಾಯಿ ಯೊಬ್ಬನನ್ನು ಬರಮಾಡಿಕೊಂಡನಂತರ ದ್ವಾರಗಳನ್ನು ಕಲ್ಲುಗಚ್ಚುಗಳಿಂದ ಮುಚ್ಚ ಲಾಯಿತು. ಪ್ರಮುಖ ಕದನ ಜರುಗುವುದು ಪೂರ್ವ ಬದಿಯಲ್ಲಿ. ಏಕೆಂದರೆ, ಉತ್ತರ ಮತ್ತು ದಕ್ಷಿಣ ಬದಿಗಳಲ್ಲಿ ಅದು ದೊಡ್ಡ ಕಲ್ಲುಬಂಡೆಗಳ ಮೇಲೆ ನಿಂತಿದ್ದು ಬಹಳ ಭದ್ರವಾಗಿದೆ ಮತ್ತು ನಗರವನ್ನು ಎಲ್ಲ ಬದಿಗಳಿಂದ ಮುತ್ತಲಾಗಿದ್ದು ರಾಜನ ಠಾಣ್ಯ ಪೂರ್ವ ಬದಿಗಿತ್ತು ಮತ್ತು ಹಾಗೆಯೆ ಆಕ್ರಮಣಬಲವೂ.

## ಅಡಿ ಟಿಪ್ಪಣಿಗಳು

1 ಮುಹಮ್ಮದ, ಮಾಹೊಮತ್ ಅರ್ಥಾತ್ ಅವನು ಪ್ರವಾದಿಯ ವಂಶಸ್ಥನಾಗಿದ್ದ.

2 ಗ್ರಂಥಪಾಠ ಇಲ್ಲಿ ಅಸ್ಪಷ್ಟವಾಗಿದೆ.

3 "ಸೈದ ಮರ್ಕರ್" ವ್ಯವಹಾರದ ಬಗೆಗೆ ಬ್ಯಾರೊಸ್‌ನ ಕಥನ ಕೆಳಗಿನಂತಿದೆ : ವಿಜಯನಗರ ಮತ್ತು ಬಿಜಾಪುರ ನಡುವಣ ಶಾಂತಿ ಒಡಂಬಡಿಕೆಯ ಷರತ್ತುಗಳನ್ನು- ಅಪರಾಧಿಗಳನ್ನು ಮತ್ತು ಸಾಲಗಾರರನ್ನು ಪರಸ್ಪರರ ವಶಕ್ಕೊಪಿಸುವುದು ಅವುಗಳಲ್ಲೊಂದಾಗಿತ್ತು- ಉಲ್ಲೇಖಿಸಿದ ನಂತರ ಅವನು ಹೀಗೆ ಬರೆಯುತ್ತಾನೆ :

"ಈ ಬಲೆಯಲ್ಲಿ ಇಡಲ್‌ಕಾವ್‌ನನ್ನು ಹಿಡಿಯಬಹುದೆಂದು ಅರಿತು ಕ್ರಿಸ್ನರಾವ್ ತನ್ನ ಸೇವೆಯಲ್ಲಿ ಅನೇಕ ವರ್ಷಗಳಿದ್ದ ಸೈದ್ ಮರ್ಕರ್ ಎಂಬ ಮೂರನನ್ನು ಕರೆದು ಗೋವಾಕ್ಕೆ ಹೋಗಿ ಪರ್ಶಿಯಾದಿಂದ ಬಂದಿದ್ದವರಿಂದ ಕುದುರೆಗಳನ್ನು ಕೊಳ್ಳಲೋಸುಗ ನಲವತ್ತು ಸಾವಿರ ಪರ್ದಾಒಗಳನ್ನು ತೆಗೆದುಕೊಂಡು ಹೋಗಲು ಆಜ್ಞೆಯಿತ್ತ. ಕ್ರಿಸ್ನರಾವ್ ನಮ್ಮ ದಳವಾಯಿಗೆ ಪತ್ರಗಳನ್ನು ಬರೆದ...., ಆ

ವ್ಯವಹಾರ ಎಲ್ಲರಿಗೂ ವ್ಯಾಪಕವಾಗಿ ಗೊತ್ತಾಗಲೆಂಬ ಉದ್ದೇಶದಿಂದ ತನ್ನ ವಶದಲ್ಲಿದ್ದ ದೊಡ್ಡ ಧನ ಮೊತ್ತದಿಂದ ಪ್ರಲೋಭನಗೊಂಡೋ ಅಥವಾ ಹಿಡಲ್‌ಕಾವ್‌ನಿಂದ ಕಳಿಸಲಾಗಿತ್ತೆಂದು ಹೇಳಲಾದ ಪತ್ರದಿಂದ ಪ್ರಭಾವಿತನಾಗಿಯೋ ಗೋವಾದಿಂದ ಮೂರು ಹರದಾರಿ ದೂರವಿರುವ ಪೊಂಡಾ ಎಂಬ ಠಾಣೆದಾರಿಗೆ ಬಂದಾಗ ಅಲ್ಲಿಂದ ಹಿಡಲ್‌ಕಾವ್‌ನಲ್ಲಿಗೆ ಓಡಿಹೋದ. ಅವನು ಆಗಮಿಸಿದ ತಕ್ಷಣ ಹಿಡಲ್‌ಕಾವ್ ಅವನು ಸಾಹಸುದ್‌ನ ವಂಶದ ಅಪರಣೀಯ ವ್ಯಕ್ತಿಯಾದುದರಿಂದ ಅವನಿಗೆ ತಾನು ಈ ಠಾಣೆದಾರಿ ಕೊಡಮಾಡಿರುವುದಾಗಿ ಹೇಳಿ ಅವನನ್ನು ಚೌರ್‌ಗೆ ಕಳಿಸಿದ...., ಆದರೆ, ಕೆಲವು ದಿನಗಳಲ್ಲಿ ಅವನು ಅಲ್ಲಿಂದ ಕಾಣೆಯಾದ ಮತ್ತು ಅವನಿಂದ ನಲವತ್ತು ಸಾವಿರ ಪದಾರ್ಓಗಳನ್ನು ತೆಗೆದುಕೊಂಡನಂತರ ರಾಜ ಅವನ ಕೊಲೆ ಮಾಡುವಂತೆ ಆಜ್ಞೆಯಿತ್ತನೆಂದು ಹೇಳಲಾಗುತ್ತದೆ."

4 "ಮಾದ್ರೆ" ಎಂದರೆ ಬಿರಾರ್‌ದ ಸುಲ್ತಾನ ಇಮಾದ್ "ವಿರಿದೊ" ಎಂದರೆ ಬೀದರಿನ ಬರೀದ್‌ಶಾಹ. ಕೆಳಗೆ ಉಲ್ಲೇಖಿಸಲಾಗಿರುವಂತೆ ಡೆಮೆಲಿಕೊ ಅಥವಾ ದೆಸ್ತುರ್‌ಗಳಲ್ಲಿ ಮೊದಲನೆಯದು "ರೆಖುಮೆಲುಕೊನ"ನ ಬದಲು ಲಿಪಿಕಾರ ಬಳಸಿದ ತಪ್ಪು ಆಗಿರದಿದ್ದ ಪಕ್ಷದಲ್ಲಿ ನಾನು ಅವುಗಳನ್ನು ಸ್ಪಷ್ಟಪಡಿಸಲಾರೆ. ಹಾಗಿದ್ದ ಪಕ್ಷದಲ್ಲಿ ಅದು ನಿಜಕ್ಕೂ ನಿಜಾಮು ಶಾಹನನ್ನು ಸೂಚಿಸುತ್ತದೆ. ಹಲವಾರು ಪೋರ್ತುಗೀಜ ಚರಿತ್ರಕಾರರು ತಮ್ಮ ವೃತ್ತಾಂತಗಳಲ್ಲಿ "ನಿಜಾಮು" ಶಬ್ದದ ಪ್ರಥಮ ಅಕ್ಷರ ಬಿಟ್ಟುಬಿಡುತ್ತಾರೆ. ಕೆಳಗೆ ಪು. ೩೪೮ರಲ್ಲಿ ಈ ಹೆಸರುಗಳನ್ನು "ಮಾದ್ರೆಮಲುಕೊ" "ರೆಖುಮೆಲುಕೊ" "ಡೆಸ್ಪುಯಿ" ಮತ್ತು "ವಿರಿದೊ" ಎಂದು ಕೊಡಲಾಗಿದೆ ; ಮತ್ತು ಆದುದರಿಂದ "ಡೆಸ್ಪುರ್" ಮತ್ತು "ಡೆಸ್ಪುಯಿ" ಅಂದರೆ ಆ ಕಾಲಕ್ಕೆ ಗೋಲ್ಕೊಂಡದ ಕುತುಬ್ ಶಾಹನಾಗಿದ್ದ ಸುಲ್ತಾನ ಖುಲಿ ೩೪೯ನೆಯ ಪುಟದ ಮೇಲೆ "ದೇಸ್ಕರ್" ಎಂಬ ರೂಪಾಂತರ ದೊರಕುತ್ತದೆ.

5 ಈ ದಿನಾಂಕದ ಪೂರ್ಣ ಚರ್ಚೆಗೆ ಪು. ೧೪೦ ನೋಡಿರಿ.

6 ಮೇಲೆ ಪು. ೨೬೩, ಟಿಪ್ಪಣಿ ನೋಡಿರಿ. ಅವನ ಹೆಸರು ಕಾಮಾನಾಯಕ್ (ಪು. ೩೨೯).

7 ಕೆಳಗೆ ಪು. ೩೬೦, ಟಿಪ್ಪಣಿ ನೋಡಿರಿ.

8 ಬಹುಶಃ ಮಂತ್ರಿ ಸಾಳುವ ತಿಮ್ಮನ ಸಹೋದರನಾಗಿದ್ದ ಗಂಡರಾಜ (ಪು. ೨೮೪ ಮತ್ತು ಪು. ೩೬೧ರ ಟಿಪ್ಪಣಿ ನೋಡಿರಿ).

9 ಸಾಮ್ರಾಜ್ಯದ ಪತನದ ನಂತರ ಸ್ವತಂತ್ರ ಸಾರ್ವಭೌಮರ ವಂಶವಾಗಿ ಸ್ಥಾಪಿತವಾದ ಮದುರಾದ ನಾಯಕಸಾಮಂತರು, ಬ್ಯಾರಡೊಸ್ ಹೇಳುವಂತೆ "ಅಡಿಕೆಯ ಯುವ ಪರಿಚಾರಕನಿಂದ" ಇಳಿದು ಬಂದಿದ್ದರು. (ಮೇಲೆ ಪು. ೨೩೦)

10 **Comarberea** ದಲ್ಲಿನ ಎರಡನೆಯ c ಬದಲಾಗಿ ತಪ್ಪಾಗಿ ಬಿದ್ದಿದೆಯೆಂದು ಮತ್ತು **Comarberea** ಮೈಸೂರಿನ ಕುಮಾರ ವೀರಯ್ಯನನ್ನು ಸಂಕೇತಿಸುತ್ತದೆಂದು ನನಗೆನಿಸುತ್ತದೆ (ಮೇಲೆ ಪು. ೨೬೯). ಮುಂದೆ ನೂನಿಜ್ ಆ ಹೆಸರನ್ನು **Comarberya** ಎಂದು ಬರೆದಿದ್ದಾನೆ (ಕೆಳಗೆ ಪು. ೩೩೬).

11 ಮೇಲೆ ಪು. ೪೦, ೬೦, ೧೨೨.

12 ರಾಯಚೂರಿಗೆ ಹತ್ತಿರವಿರುವ, ಈಗ ಕರೆಯುತ್ತಿರುವಂತೆ, ಮುಲ್ಲಿಯಾಬಾದ ನೂನಿಜ್ ಕೊಟ್ಟ ಹೆಸರಾಗಿರುವ "ಮುಲ್ಲಿಯ ಬಂಡ" ಬಹುಶಃ ಹಿಂದೂ ಹೆಸರಿರಬೇಕೆಂದು ನಾನು ಭಾವಿಸುವೆ. ಅದು "ಬಂಡೆ" ಶಬ್ದದಿಂದ ಬಂದಿರಬೇಕು. ಮುಸಲ್ಮಾನರು ಅದಕ್ಕೆ "ಮುಲ್ಲಿಯಾ ಬಾದ" ಎಂಬ ಹೆಸರನ್ನು ಕೊಟ್ಟರು.

13 ಚಿಕ್ಕ ತಾಮ್ರದ ನಾಣ್ಯ.

## ಅಧ್ಯಾಯ ೮

## ರಾಜ ತನ್ನ ಠಾಣ್ಯ ಇಟ್ಟ ರೀತಿ ಇತ್ಯಾದಿ ಕುರಿತು

ರಾಜನ ಡೇರೆ ಮುಳ್ಳುಗಳ ದೊಡ್ಡ ಬೇಲಿಯಿಂದ ಸುತ್ತುವರಿಯಲ್ಪಟ್ಟಿದ್ದು ಒಂದೇ ಕಡೆಗೆ ಪ್ರವೇಶವಿತ್ತು ಮತ್ತು ಬಾಗಿಲಲ್ಲಿ ರಕ್ಷಕರು ನಿಲ್ಲುತ್ತಿದ್ದರು. ಈ ಬೇಲಿಯೊಳಗಡೆ ಅವನ ಮೈ ತೊಳೆಯುವ ಮತ್ತು ಅವನು ತನ್ನೊಂದಿಗೆ ಯಾವಾಗಲೂ ಒಯ್ಯುವ ವಿಗ್ರಹದ ಜವಾಬ್ದಾರಿ ಹೊತ್ತ ಬ್ರಾಹ್ಮಣನು ಮತ್ತು ರಾಜನ ಸ್ವಂತ ಸೇವೆಯಲ್ಲಿರುವ ಅಧಿಕಾರಿಗಳು ಮತ್ತು ಅವನ ಕೋಣೆಯಲ್ಲಿ ಯಾವಾಗಲೂ ನೋಡಸಿಗುವ ಬೀಜವೊಡೆದ ಗಂಡಸರು ಇರುವರು. ಈ ವೃತ್ತದ ಸುತ್ತಲೂ ನಿಶ್ಚಿತ ಸ್ಥಾನಗಳಲ್ಲಿ ರಾತ್ರಿಯಿಡಿ ಕಾವಲು ಇರುವ ರಕ್ಷಕರು ಇರುವರು; ಈ ರಕ್ಷಕದಳದೊಂದಿಗೆ ಕುಟುಂಬದ ಅಧಿಕಾರಿಗಳಿಗೆ ಬಿಡದಿ ಒದಗಿಸಲಾಗಿದೆ; ಮತ್ತು ಅಲ್ಲಿಂದ ಮಂಚೂಣಿವರೆಗೆ ಪ್ರತಿಯೊಬ್ಬನಿಗೂ ವಹಿಸಿಕೊಟ್ಟಂತೆ ಮತ್ತು ಆಜ್ಞಾಪಿಸಿದಂತೆ ನಿಗದಿಪಡಿಸಿದ ತಮ್ಮ ತಮ್ಮ ಸ್ಥಳಗಳಲ್ಲಿ ಎಲ್ಲ ದಳವಾಯಿಗಳಿದ್ದರು. ಇವರೆಲ್ಲ ಜನರ ಹೊರಗಡೆ ತಮ್ಮವೆ ಬಿಡಾರಗಳಲ್ಲಿ ನಾನು ಈಗಾಗಲೆ ಹೇಳಿರುವ ಅಗ್ರಚಾರರು ಇರುವರು. ಶಿಬಿರದಲ್ಲಿ ಇಡಿ ರಾತ್ರಿ ಗಸ್ತು ತಿರುಗುತ್ತ ಯಾರಾದರೂ ಗುಪ್ತಚಾರರು ಸಿಕ್ಕರೆ ಹಿಡಿಯುವುದೆ ಅವರ ಕರ್ತವ್ಯ. ಆ ಬದಿಗೆ ಅಗಸರು (ಅವರು ಬಟ್ಟೆಗಳನ್ನು ಒಗೆಯುವವರು) ತಮ್ಮದೆ ಬಿಡಾರದಲ್ಲಿ ಇದ್ದರು ಮತ್ತು ಅವರು ಬಟ್ಟೆ ಚೆನ್ನಾಗಿ ಒಗೆಯುವ ಸ್ಥಳಕ್ಕೆ ಹತ್ತಿರದಲ್ಲಿದ್ದರು.

ಇಡಿ ಬಿಡಾರ ನಿಯಮಿತ ಓಣಿಗಳಲ್ಲಿ ವಿಭಜಿತವಾಗಿತ್ತು. ಪ್ರತಿಯೊಬ್ಬ ದಳವಾಯಿಯ ಪಡೆಗೆ ತನ್ನದೆ ಮಾರುಕಟ್ಟೆಯಿತ್ತು. ಅಲ್ಲಿ ಕುರಿ, ಕೋಳಿ, ಆಡು, ಹಂದಿ, ಮೊಲ, ಕವುಜಗ ಮತ್ತು ಇತರ ಹಕ್ಕಿಗಳು ಮುಂತಾದವುಗಳ ಮಾಂಸ ಯಥೇಚ್ಛವಾಗಿ ದೊರೆಯುತ್ತಿತ್ತು ;ಎಷ್ಟು ಯಥೇಚ್ಛವೆಂದರೆ ನೀವು ಬಿಸ್ನಗ ನಗರದಲ್ಲಿದ್ದಂತೆಯೆ ಭಾಸವಾಗುತ್ತಿತ್ತು ಮತ್ತು ಅಕ್ಕಿ, ಕಾಳು, ಮುಸುಕಿನ ಜೋಳ, ಅವರೆ ಮತ್ತು ಅವರು ತಿನ್ನುವ ಇತರ ಕಾಳುಗಳ ಅನೇಕಾನೇಕ ಜಾತಿಗಳು ದೊರಕುತ್ತಿದ್ದವು. ಅವಶ್ಯಕತೆಗಳಾದ ಈ ವಸ್ತುಗಳಲ್ಲದೆ ಇನ್ನೊಂದು (ಮಾರುಕಟ್ಟೆ) ಇತ್ತು. ಅಲ್ಲಿ ನಿಮಗೆ ಬೇಕಾದ ಎಲ್ಲವೂ ಬೇಕಾದಷ್ಟು ಸಿಗುತ್ತಿತ್ತು. ಏಕೆಂದರೆ, ಈ ಮಾರುಕಟ್ಟೆಗಳಲ್ಲಿ ಅವರು ನಮ್ಮ ಪ್ರದೇಶಗಳಲ್ಲಿ ವೃತ್ತಿನಿರತ ತಿರುಗುವ್ಯಾಪಾರಿಗಳು ಮಾರುವ ವಸ್ತುಗಳನ್ನು ಮಾರುತ್ತಾರೆ. ಅವರ ಓಣಿಗಳಲ್ಲಿ ಕುಶಲಕರ್ಮಿಗಳೂ ದುಡಿಯುತ್ತಿದ್ದರು. ಹೀಗಾಗಿ, ಅಲ್ಲಿ ಬಂಗಾರದ ಒಡವೆಗಳು ಮತ್ತು ಥಳುಕಿನ ಆಭರಣಗಳನ್ನು ಮಾಡಲಾಗುತ್ತಿದ್ದುದನ್ನು ಮತ್ತು ಎಲ್ಲ ತರಹದ ಮಾಣಿಕ್ಯಗಳು ಮತ್ತು ವಜ್ರಗಳು

ಮತ್ತು ಮುತ್ತುಗಳು ಇತರ ಎಲ್ಲ ತರಹದ ಬೆಲೆಯುಳ್ಳ ಹರಳುಗಳೊಂದಿಗೆ ಮಾರಾಟಕ್ಕಿದ್ದುದನ್ನು ನೋಡಬಹುದು. ಬಟ್ಟೆಯ ವ್ಯಾಪಾರಿಗಳನ್ನೂ ಕಾಣಬಹುದಿತ್ತು ಮತ್ತು ಇವರು ಅಸಂಖ್ಯರಾಗಿದ್ದರು. ಏಕೆಂದರೆ, ಅದು ಅಷ್ಟೊಂದು ಜನರಿಗೆ ಬೇಕಾದ ವಸ್ತುವಾಗಿತ್ತು ಮತ್ತು ಬಟ್ಟೆಗಳು ಅರಳೆಯುವಾಗಿದ್ದವು. ಅಪಾರ ವಿಪುಲತೆಯಲ್ಲಿ ಹುಲ್ಲು ಮತ್ತು ಒಣಹುಲ್ಲು ಕೂಡ ಕಾಣಸಿಗುತ್ತಿತ್ತು. ನಂಬಿಕೆ ಹುಟ್ಟಿಸುವಂತೆ ಅದನ್ನು ಯಾರಾದರೂ ವರ್ಣಿಸಬಹುದೆ ಎಂಬುದನ್ನು ನಾನರಿಯೆ. ಏಕೆಂದರೆ, ರಾಚೊಲ್ ಅಷ್ಟೊಂದು ಬಂಜೆ ಮತ್ತು ಮರುಳುಮಯ ಪ್ರದೇಶವಾಗಿತ್ತು. ಅಲ್ಲಿ ಪ್ರತಿಯೊಂದು ವಿಪುಲವಾಗಿ ದೊರಕುವುದೊಂದು ರಹಸ್ಯ. ಮೂವತ್ತೆರಡು ಸಾವಿರದ ನಾನೂರು ಕುದುರೆಗಳು ಮತ್ತು ಐದುನೂರಾಐವತ್ತೊಂದು ಆನೆಗಳಿಗೆ[1] ಪ್ರತಿ ದಿನ ಎಷ್ಟು ಹುಲ್ಲು ಮತ್ತು ಒಣಹುಲ್ಲು ಬೇಕಾಗುವುದೆಂಬುದನ್ನು ಯಾರಾದರೂ ಊಹಿಸಬಹುದು. ಇದರಲ್ಲಿ ಎಲ್ಲ ಪೂರೈಕೆಗಳನ್ನು ಮತ್ತು ಡೇರೆ ಮೊದಲಾದ ಇತರ ಅನೇಕ ಹೊರೆಗಳನ್ನು ಹೊರುವ ಹೇಸರಗತ್ತೆಗಳು ಮತ್ತು ಅಧಿಕ ಸಂಖ್ಯೆಯಲ್ಲಿದ್ದ ಎತ್ತುಗಳನ್ನು ಸೇರಿಸಿಲ್ಲ. ನಿಜಕ್ಕೂ ತಾನು ನೋಡಿದುದರ ಅರ್ಥ ಗ್ರಹಿಸಿದ ಯಾರೂ ಯುದ್ಧ ನಡೆಯುತ್ತಿದೆಯೆಂದು ಕಲ್ಪಿಸಿಕೊಳ್ಳಲು ಶಕ್ಯವಿಲ್ಲ. ಬದಲು ತಾನು ಸಮೃದ್ಧ ನಗರವೊಂದರಲ್ಲಿರುವೆನೆಂದು ಭಾವಿಸಿಯಾನು. ಅಬ್ಬಾ ! ಅವರು ಬಳಸುವ ನಗಾರಿಗಳು, ತುತ್ತೂರಿಗಳು ಮತ್ತು ಇತರ ಸಂಗೀತವಾದ್ಯಗಳ ಸಂಖ್ಯೆಯೊ ! ತಾವು ಯುದ್ಧ ಆರಂಭಿಸುವ ಸಂಕೇತವಾಗಿ ಅವರು ಸಂಗೀತ ನುಡಿಸಿದಾಗ ಆಕಾಶ ಕಳಚಿ ಬೀಳುತ್ತದೇನೊ ಎಂಬಂತೆ ಭಾಸವಾಗುತ್ತಿತ್ತು. ಮತ್ತು ಅವರು ಇಂಥ ಭಯಂಕರ ಸಪ್ಪಳ ಮಾಡುತ್ತಿದ್ದಾಗ ಯಾವುದೇ ಹಕ್ಕಿ ಹಾರುತ್ತ ಬಂದುದಾದರೆ ಬಿಡಾರವನ್ನು ದಾಟಲಾರದ ಭಯದಿಂದ ಅದು ಕೆಳಗೆ ಬೀಳುತ್ತಿತ್ತು. ಅವರು ಅದನ್ನು, ಮುಖ್ಯತಃ ಗಿಡಗಗಳನ್ನು, ತಮ್ಮ ಕೈಯಲ್ಲಿ ಹಿಡಿಯುತ್ತಿದ್ದರು, ಅಂಥ ಅನೇಕವನ್ನು ಹಿಡಿಯುತ್ತಿದ್ದರು.

ಮುಗಿಸಲಾರೆನೆಂಬ ಭಯದಿಂದ ನಾನು ಇದರ ಬಗೆಗೆ ಹೆಚ್ಚು ಹೇಳದೆ ನಿಲ್ಲಿಸುತ್ತೇನೆ. ಮತ್ತು ಯುದ್ಧದ ಬಗೆಗೆ ಹೇಳಲಾರಂಭಿಸುವೆ.

## ಅಡಿಟಿಪ್ಪಣಿಗಳು

1 ಮೇಲೆ ನಮೂದಿಸಲಾದ ಬೇರೆ ಬೇರೆ ಸಾಲುಗಳ ಒಟ್ಟು ಅಶ್ವದಳ ಮತ್ತು ಆನೆಗಳು ಅನುಕ್ರಮವಾಗಿ ೩೨, ೬೦೦ ಮತ್ತು ೫೫೧ ಆಗುತ್ತವೆ.

## ಅಧ್ಯಾಯ ೯

### ರಾಜ ರಾಚೋಲ್ ನಗರದ ಮೇಲೆ ಆಕ್ರಮಣ ಮಾಡಿದ ಬಗೆ

ನಾನು ಹೇಳಿದಂತೆ ರಾಜ ರಾಚೋಲ್ ನಗರದ ಮುತ್ತಿಗೆಯಲ್ಲಿರುವಾಗ ಇಡಲ್‌ಕಾವ್ ಉತ್ತರ ಬದಿಗೆ ನದಿಯು ಬಳಿ ಬಂದು ಅಲ್ಲಿ ತನ್ನ ಶಿಬಿರ ಹೂಡಿದ್ದನೆಂಬ ಖಚಿತ ಸುದ್ದಿ ಬಂತು. ಆದುದರಿಂದ, ವೈರಿಯು ಮೇಲೆ ಕಣ್ಣಿಡಲು ಅವನು ಏನು ಮಾಡುತ್ತಿರುವನೆಂಬುದನ್ನು ಕಂಡು ಅವನ ಪ್ರತಿಯೊಂದು ಚಲನವಲನದ ಸುದ್ದಿ ಕಳುಹಲು ಗೂಢಚಾರರನ್ನು ರಾಜ ಕಳಿಸಿದನು. ಈ ಸುದ್ದಿಯು ಬರುವಿಕೆಯಿಂದ ಶಿಬಿರದಲ್ಲಿ, ಮುಖ್ಯತಃ ಸಂದೇಹಕ್ಕೆ ಕೊರತೆಯಿರದ ಸಾಮಾನ್ಯ ಯೋಧರಲ್ಲಿ, ಕೋಲಾಹಲ ಉಂಟಾಯಿತು ಮತ್ತು ಅವರು ಮೂರರು ಹುಟ್ಟಿಸಿದ್ದ ಹಳೆಯ ಕಾಲದ ಭೀತಿಯಿಂದ ಇನ್ನೂ ಬಾಧಿತರಾಗಿದ್ದರು. ರಾಜ ಏನು ಮಾಡುತ್ತಿರುವನೆಂದು ಮತ್ತು ತಾನು ಮುಂದೆ ಹೋಗಿ ಅವನ ಶಿಬಿರದಲ್ಲಿಯೆ ಅವನ ಮೇಲೆ ಬೀಳಲೊ ಹೇಗೆಂಬುದನ್ನು ನೋಡಲೋಸುಗ ಇಡಲ್‌ಕಾವ್ ಅಲ್ಲಿ ಕೆಲವು ದಿನ ನಿಂತನು. ಏಕೆಂದರೆ, ತನ್ನ ಆಗಮನ ತಿಳಿದ ಕೂಡಲೆ ರಾಜ ಕೂಡಲೆ ತನ್ನ ಮೇಲೆ ಏರಿ ಬರುವನೆಂದು ಅವನು ಮತ್ತು ಅವನ ಜನರು ಭಾವಿಸಿದರು, ಮತ್ತು ಮತ್ತಾವುದೆ ಸ್ಥಳಕ್ಕಿಂತ ತಾನಿದ್ದ ಸ್ಥಳ ನದಿಯು ಸಹಾಯದಿಂದ ರಾಜನ ವಿರುದ್ಧ ತನ್ನನ್ನು ರಕ್ಷಿಸಿಕೊಳ್ಳಲು ಉತ್ತಮವಾದುದೆಂದು ಅವರು ನಿರ್ಧರಿಸಿದರು. ಏಕೆಂದರೆ, ತೀರ ಸಮೀಪದಲ್ಲಿದ್ದ ಗಡು ಬಿಟ್ಟರೆ ಇನ್ನೊಂದಿರಲಿಲ್ಲ ; ಮತ್ತು ಇದನ್ನು ಯಾರೂ, ಏನೆಂದೂ ತಾವು ತಿಳಿದಂತೆ (ತಮ್ಮ ದೃಷ್ಟಿಯಲ್ಲಿ) ಕೇವಲ ತಪ್ಪಾದ ಜನ, ವಶಪಡಿಸಿಕೊಳ್ಳದಂತೆ ಅವರು ಚನ್ನಾಗಿ ಕಾಯಬಯಸಿದ್ದರು.

ವೈರಿ ನದಿಯು ಆಚೆ ದಡದ ಮೇಲಿರುವನೆಂದು ತಿಳಿದಾಗ್ಯೂ ರಾಜ ಯಾವ ಚಲನೆಯನ್ನೂ ಮಾಡಲಿಲ್ಲ. ಅಷ್ಟೆ ಅಲ್ಲ, ಏನನ್ನೂ ಮಾಡಲಿಲ್ಲ-ಮತ್ತು ಇಡಲ್ ಕಾವ್ ಅವನು ಮುಂದುವರಿಯದಿದ್ದುದನ್ನು ಕಂಡು ತನ್ನ ಅಧಿಕಾರಿಗಳೊಂದಿಗೆ ಸಮಾಲೋಚಿಸಿದ ಮತ್ತು ಈ ಸಭೆಯಲ್ಲಿ ನೀಡಿದ ಸಲಹೆ ಭಿನ್ನ ಭಿನ್ನವಾಗಿತ್ತು. ಏಕೆಂದರೆ, ರಾಜ ಚಲಿಸದಿದ್ದುದರ ಬಗೆಗೆ ಪ್ರತಿಯೊಬ್ಬನೂ ತನ್ನದೆ ಅಭಿಪ್ರಾಯ ತಾಳಿದ್ದ. ರಾಜ ಹಾಗೇಕೆ ಮಾಡಿದನೆಂದರೆ ಅವನು ತನ್ನ ವೈರಿ ಯಾವ ಲೆಕ್ಕವೂ ಅಲ್ಲವೆಂದು ಪರಿಗಣಿಸಿದ್ದ ಮತ್ತು ತನ್ನ ಜನರಿಗೆ ತನ್ನ ಬಲ ಎಷ್ಟು ದೊಡ್ಡದೆಂದು ತೋರಿಸಬಯಸಿದ್ದ ಎಂದು ಅನೇಕರು ಅಂದರು. ಅವನು ತಾವು ನದಿ ದಾಟುವುದನ್ನೆ ಕಾಯ್ದು ತಮ್ಮ ಮೇಲೆ ಕೂಡಲೆ ಬೀಳಬೇಕೆಂದೆ ಕಾಯುತ್ತಿದ್ದನೆಂದು ಅವರು ಹೇಳಿದರು. ಹೀಗೆ

ಅಭಿಪ್ರಾಯಪಟ್ಟ ಪ್ರಮುಖ ವ್ಯಕ್ತಿಯೆಂದರೆ ಅವ್‌ಕೊಸ್ಟ್ಯಾವ್.[1] ಡಾವ್ ಗುಟೆರ್ ಗೋವಾದ[2] ದಳವಾಯಿಯಾಗಿದ್ದಾಗ ಅವನು ಪೂಂಡಾದ ದಳವಾಯಿಯಾಗಿದ್ದ. ಉಳಿದವರು ಹಾಗಲ್ಲವೆಂದರು. ಆದರೆ, ರಾಜ ಮೂರರು ಹಿಂದೂಗಳ ಮೇಲೆ ಪಡೆದ ಅನೇಕ ವಿಜಯಗಳ ಗತ ಸಂದರ್ಭಗಳನ್ನು ನೆನೆಸಿಕೊಂಡು ಹೆದರಿದ್ದನೆಂದೂ ಮತ್ತು ಆ ಯುದ್ಧಗಳಲ್ಲಿ ಪಾಲ್ಗೊಂಡಿದ್ದ ಪಳಗಿದಯೋಧರನ್ನು ತನ್ನೊಂದಿಗೆ ಕರೆತಂದಿದ್ದನೆಂದೂ ಹೇಳಿದರು. ಮುನ್ನುಗ್ಗಿ ನದಿದಾಟಬೇಕೆಂಬುದೆ ಇವರ ಸಲಹೆಯಾಗಿತ್ತು. ಇಡಲ್‌ಕಾವ್ ತನ್ನ ದೌರ್ಬಲ್ಯ ತೋರ್ಪಡಿಸುವುದು ಉಚಿತವಲ್ಲವೆಂದೂ ತಾನಿದ್ದಲ್ಲಿಯೆ ಹೆಚ್ಚುಕಾಲ ಇದ್ದರೆ ಅವನಿಗೆ ಪ್ರಯೋಜನ ಕಡಿಮೆ ಮತ್ತು ವೈರಿಗೂ ಹೆಚ್ಚು ಹಾನಿ ಮಾಡಲು ಶಕ್ಯವಿಲ್ಲವೆಂದೂ (ಅವರು ಹೇಳಿದರು) ಮತ್ತು ಹಿಂದೂಗಳಷ್ಟು ಸಂಖ್ಯೆ ತಮ್ಮದಿರದಿದ್ದರೂ ಅವರೊಂದಿಗೆ ಮಾಡಿದ ಹಿಂದಿನ ಯುದ್ಧಗಳ ಸ್ಮರಣೆಯು ಪ್ರಯೋಜನ ತಮಗಿದೆ.[3] ಕೊನೆಗೆ ಇಡಲ್‌ಕಾವ್ ಅವರು ತಮ್ಮ ಬಲಗಳನ್ನು ಒಟ್ಟುಗೂಡಿಸಲು ಆಜ್ಞೆಯಿತ್ತ ಮತ್ತು ಅದು ಮುಗಿದಮೇಲೆ ಏನು ಮಾಡುವುದು ಅತ್ಯುತ್ತಮವಾದುದೆಂಬುದನ್ನು ತಾನು ನಿರ್ಧರಿಸುವುದಾಗಿ ಹೇಳಿದ. ಒಟ್ಟುಗೂಡಿಸಲ್ಪಟ್ಟಾಗ ತನ್ನಲ್ಲಿ ನೂರಿಪ್ಪತ್ತು ಸಾವಿರ ಕಾಲಾಳು, ಬಿಲ್ಲುಗಾರರು ಮತ್ತು ತುಬಾಕಿದಾರರು, ಗುರಾಣಿದಾರರು ಮತ್ತು ಭಲ್ಲೆಗಾರರು, ಮತ್ತು ಹದಿನೆಂಟುಸಾವಿರ ಅಶ್ವಾಳು ಮತ್ತು ನೂರೈವತ್ತು ಆನೆಗಳಿದ್ದುದನ್ನು ತಿಳಿದ ; ಮತ್ತು ಒಟ್ಟುಗೂಡಿಸುವುದು ಮುಗಿದ ಮೇಲೆ ಮತ್ತು ತನ್ನ ಬಲಗಳನ್ನು ತಾನೆ ಖುದ್ದಾಗಿ ನೋಡಿದ ಮೇಲೆ ಹಾಗೂ ತನ್ನಲ್ಲಿದ್ದ ಫಿರಂಗಿಯ ದೊಡ್ಡ ಪಡೆಯನೂ ನೋಡಿ ತನ್ನ ಫಿರಂಗಿ ದಳದ ಸಹಾಯದಿಂದ ತಾನು ನರಸಿಂಗದ ರಾಯನನ್ನು ಸೋಲಿಸಲು ಉದ್ದೇಶಿಸಿರುವುದಾಗಿ ಹೇಳಿದ. ತಾನು ಕೂಡಲೆ ನದಿ ದಾಟಿದ ಆಕ್ರಮಣಕ್ಕೆ ಮುಂದರಿಯಬಯಸಿರುವುದರಿಂದ ಅವರಿಗೆ ಸನ್ನದ್ಧರಾಗಲು ಅವನು ಹೇಳಿದ. ಏಕೆಂದರೆ, ಆಚೆಯ ಬದಿಯಲ್ಲಿ ನಿಂತು ತನ್ನ ಸೈನ್ಯಗಳನ್ನು ರಾಜನ ಶಿಬಿರದ ಮೇಲೆ ಆಕ್ರಮಣ ಮಾಡಲು ಕಳಿಸುವುದು ಉತ್ತಮ ಮಾರ್ಗ ಮತ್ತು ಹಾಗೆ ಮಾಡುವ ಮೂಲಕ ತಾನು ಸೋಲುವುದಿಲ್ಲ ಹಾಗೂ ರಾಚೊಲ್ ಅನ್ನು ಕಳೆದುಕೊಳ್ಳುವುದಿಲ್ಲ ಎಂದು ಇಡಲ್‌ಕಾವ್ ನಂಬಿದ್ದ.[4]

ಈ ಅತ್ಯಾಶೆಯ ನಿರ್ಧಾರದಿಂದ ಅವನು ಗಡುವನ್ನು ದಾಟಿ ರಾಜನ ಶಿಬಿರದಿಂದ ಮೂರು ಹರದಾರಿಗೂ ಒಳಕ್ಕೆ ಮುನ್ನಡೆದ, ಮತ್ತು ದೊಡ್ಡ ಕಂದಕಗಳನ್ನು ತೋಡಿಸಿ ತನ್ನ ಶಿಬಿರ ಬಲಗೊಳ್ಳುವಂತೆ ಮಾಡಿದ, ಮತ್ತು ತನ್ನ ಸೈನ್ಯ ನಿಲ್ಲುವ ಸ್ಥಾನಗಳ ಕ್ರಮವನ್ನು ಮತ್ತು ವೈರಿ ಆಕ್ರಮಣಗೈದಾಗ ಅವರು ವರ್ತಿಸಬೇಕಿದ್ದ ರೀತಿಯನ್ನು ವ್ಯವಸ್ಥೆಗೊಳಿಸಿದ. ನೀರಿನ ಸಲುವಾಗಿ ಅವನ ಶಿಬಿರ ನದಿಯುದ್ದಕ್ಕೂ ಚಾಚಿತು. ವೈರಿಯಿಂದಾಗಿ ಅದರೊಂದಿಗಿನ ಸಂಪರ್ಕ ಕಡಿಯಬಾರದೆಂಬುದೂ ಉದ್ದೇಶವಾಗಿತ್ತು.

ಇಡಲ್‌ಕಾವ್ ನದಿ ದಾಟಿರುವನೆಂಬ ಸುದ್ದಿಯನ್ನು ರಾಜನಲ್ಲಿಗೆ ತರಲಾದೊಡನೆ ಅವನು ಎಲ್ಲರೂ ಸನ್ನದ್ಧರಾಗುವಂತೆ ಆದರೆ ವೈರಿ ಏನು ಮಾಡುವನೆಂಬುದನ್ನು ತಾನು ನೋಡುವವರಿಗೆ ಯಾವ ಚಲನೆಯನ್ನೂ ಮಾಡಕೂಡದೆಂದು ಆಜ್ಞೆಯಿತ್ತ. ಮತ್ತು ವೈರಿ ತನ್ನ ಶಿಬಿರ ಹೂಡಿ ತನ್ನ ನೆಲೆ ಭದ್ರಗೊಳಿಸಿರುವನೆಂಬ ಹೆಚ್ಚಿನ ಸುದ್ದಿ ತರಲಾಗಿ ಅವನು ತನ್ನೆಲ್ಲ ಬಲಗಳ ಸಾಮೂಹಿಕ ಮುನ್ನಡೆಗೆ ಆಜ್ಞೆಯಿತ್ತ. ಅವನು ತನ್ನ ಸೈನ್ಯವನ್ನು ಏಳು ವಿಭಾಗಗಳಾಗಿ ವಿಭಜಿಸಿದ. ರಾಜನ ಮಾವ ಮತ್ತು ದೊಡ್ಡ ದೊರೆಯಾಗಿದ್ದ ಕೊಮಾರಬೆರ್ಯ[5] ಮುಂಚೂಣಿಯ (ಸೇನಾಪಟ್ಟ)ನ್ನು ಬೇಡಿದ ; ಅವನು ಸೆರಿಂಗ್‌ಪಟಾಒದ ರಾಜ ಮತ್ತು ಒಂದು ದೊಡ್ಡ ರಾಜ್ಯದ ಪ್ರಭು. ಅವನು ತನ್ನೊಂದಿಗೆ ಮೂವತ್ತೆರಡು ಬೆಳೆದ ಮಕ್ಕಳನ್ನು ತಂದ. ತನ್ನ ಶಿಬಿರವನ್ನು ಇಡಲ್‌ಕಾವ್‌ನಿಂದ ಒಂದು ಹರದಾರಿ ದೂರ ನೆಲೆಗೊಳಿಸಲು ರಾಜ ಅವನಿಗೆ ಹೇಳಿದ. ಮತ್ತು ವೈರಿಯೊಂದಿಗೆ ಆ ಸಮಯಕ್ಕೆ ಯುದ್ಧ ಹೂಡುವ ಉದ್ದೇಶವಿದ್ದುದರಿಂದ (ಎಲ್ಲರೂ ನಸುಕಿನಲ್ಲಿ ಶಸ್ತ್ರ ಧರಿಸಲು ಆಜ್ಞೆಯಿತ್ತ. ಆದರೆ ಅವನ ಮಂತ್ರಾಲೋಚನೆ ಸಭೆಯುವರು ಅಂದು ಶುಕ್ರವಾರವಾದುದರಿಂದ) ಅದು ಅಶುಭವೆಂದೂ ಅವನು ಆಕ್ರಮಣ ಮಾಡಬಾರದೆಂದು ಬೇಡಿಕೊಂಡರು ಮತ್ತು ತಾವು ಶುಭದಿನವೆಂದು ತಿಳಿದ ಶನಿವಾರದವರೆಗೆ ಆಕ್ರಮಣ ಮಾಡಬಾರದೆಂದು ಕೇಳಿಕೊಂಡರು.

ರಾಜ ರಾಚೋಲ್ ಬಿಟ್ಟಾಗ ಒಳಗಿದ್ದವರು ಒಂದು ದ್ವಾರ ತೆರೆದರು, ಮತ್ತು ಒಳಗಿದ್ದ ಬೀಜವೊಡೆದ ಗಂಡಸಾಗಿದ್ದ ದಳವಾಯಿಯೊಬ್ಬ ಇನ್ನೂರು ಕುದುರೆ, ಕೆಲವು ಕಾಲಾಳು ಮತ್ತು ಆನೆಗಳೊಂದಿಗೆ ದಾಳಿ ಮಾಡಿದ. ಅವನ ರಾಜನ ಪಾರ್ಶ್ವಕ್ಕಿದ್ದ ನದಿದಂಡೆಗುಂಟ ಮಾತ್ರವೆ ಹೋಗುತ್ತಿದ್ದ. ಪ್ರತಿಯೊಬ್ಬನೂ ತನ್ನದೆ ಅಭಿಪ್ರಾಯ ತಾಳಿದ್ದರಿಂದ ಇದರ ಉದ್ದೇಶವನ್ನು ಯಾರೂ ಊಹಿಸಲಾಗಲಿಲ್ಲ. ಏನಾಗುತ್ತಿದೆಯೆಂಬುದನ್ನು ಮತ್ತು ಯುದ್ಧದ ಕೊನೆ (ಏನಾಗಬಹುದೆಂದು) ಅರಿಯಲು ರಾಜನ ಶಿಬಿರದಲ್ಲಿ ಯಾವಾಗಲೂ ತನ್ನ ಗೂಢಾಚಾರರನ್ನಿಟ್ಟಿದ್ದ. ರಾಜ ಅಲ್ಲಿಗೆ ಬಂದುನಿಂತ ಕೂಡಲೆ ತಾನೂ ಹಾಗೆಯೆ ಮಾಡಿದ. ಎರಡೂ ಸೈನ್ಯಗಳು ಪರಸ್ಪರ ವೈರಿಗೆ ತೀರ ಹತ್ತಿರವಿದ್ದುದರಿಂದ ತಮ್ಮ ತಮ್ಮ ಶಸ್ತ್ರಗಳನ್ನು ಬದಿಗಿರಿಸದೆ ಇಡಿ ರಾತ್ರಿ ಕಣ್ಣಿಟ್ಟು ನೋಡಿದರು.

ಶನಿವಾರದ ಬೆಳಗು ಹರಿಯುತ್ತಿರುವುದನ್ನು ನೋಡಿ ರಾಜನ ಶಿಬಿರದಲ್ಲಿನ ನಗಾರಿಗಳು, ಕಹಳೆಗಳು ಮತ್ತು ಇತರ ಸಂಗೀತ ಮೊಳಗಲಾರಂಭಿಸಿ ಯೋಧರೆಲ್ಲ ಕೂಗಲಾರಂಭಿಸಿದುದರಿಂದ ಆಕಾಶವೆ ಕಳಚಿ ಭೂಮಿಗೆ ಬೀಳುವಂತೆ ಎನಿಸಿತು. ಆಮೇಲೆ ಕುದುರೆಗಳ ಕೆನೆತ ಮತ್ತು ಉತ್ಸಾಹ ಮತ್ತು ಆನೆಗಳ ಘೀಳಿಡುವಿಕೆ ಹೇಗಿತ್ತೆಂಬುದನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ. ಅದನ್ನು ಸರಳ ಸತ್ಯವಾಗಿ

ಹೇಳಿದರೂ ಅದನ್ನು ಕೇಳಿದವರ ಎದೆಯಲ್ಲಿ ಹುಟ್ಟಿದ ಮಹಾ ಭೀತಿ ನಡುಕಗಳನ್ನು ನಂಬುವುದು ಕಷ್ಟ. ಅದು ಎಷ್ಟಾಗಿತ್ತೆಂದರೆ ಸದ್ದು ಹುಟ್ಟಿಸಿದ ಜನರೇ ನಡುಗಿದರು. ಮತ್ತು ವೈರಿಗಳೂ ಸಹ ಕಡಿಮೆ ಸದ್ದು ಮಾಡಲಿಲ್ಲ. ನೀವು ಏನಾದರೂ ಕೇಳಿದರೆ ನಿಮ್ಮ ಮಾತು ನಿಮಗೆ ಕೇಳಿಸುತ್ತಿರಲಿಲ್ಲವಾದುದರಿಂದ ನೀವು ಸಂಜ್ಞೆಯಿಂದಲೆ ಮಾತಾಡಬೇಕಿತ್ತು. ಏಕೆಂದರೆ, ಇನ್ನಾವ ರೀತಿಯಲ್ಲೂ ನೀವು ತಿಳಿಯಪಡಿಸುವುದು ಶಕ್ಯವಿರಲಿಲ್ಲ. ಶಿಬಿರದಲ್ಲಿನ ಎಲ್ಲರೂ ಯುದ್ಧರಂಗಕ್ಕೆ ಹೋದಾಗ ಸೂರ್ಯೋದಯ ವಾಗಿ ಎರಡು ಘಂಟೆಯಾಗಿತ್ತು. ಮತ್ತು ಬಲವಾಗಿ ಪೆಟ್ಟು ಹಾಕಿ ಒಬ್ಬ ವೈರಿ ಯನ್ನೂ ಜೀವಂತ ಉಳಿಸಬಾರದೆಂದು ಆಜ್ಞೆಯಿತ್ತು ರಾಜ ತನ್ನೆರಡು ಮುಂಭಾಗದ ಸೈನ್ಯವಿಭಾಗಗಳು ಮುಂದರಿಯಲು ಆಜ್ಞೆಯಿತ್ತ. ಮತ್ತು ತಕ್ಷಣ ಹಾಗೆ ಮಾಡಲಾಯಿತು. ಅವರು ವೈರಿಯ ಮೇಲೆ ಎಷ್ಟೊಂದು ರಭಸದಿಂದ ನುಗ್ಗಿದರೆಂದರೆ ರಾಜನ ಅನೇಕ ಸೈನಿಕರು, ಮೂರರು ರಣರಂಗದಲ್ಲಿ ನಿರ್ಮಿಸಿಕೊಂಡಿದ್ದ ಕುಣಿಗಳ ದಂಡೆಗಳನ್ನೆ ತಲುಪಿದರು. ರಾಜ ತನ್ನೆಲ್ಲ ಬಲಗಳೊಂದಿಗೆ ತಮ್ಮೆಲ್ಲರ ಮೇಲೆ ಏಕ ಕಾಲಕ್ಕೆ ಯುದ್ಧ ಹೂಡುವನೆಂದು ನಿರೀಕ್ಷಿಸಿದ್ದರೆಂಬಂತೆ ಮೂರರು ವ್ಯೂಹ ರಚಿಸಿದ್ದರು ಮತ್ತು ಇಡಲ್‌ಕಾವ್ ಮತ್ತು ಅವನ ಅಧಿಕಾರಿಗಳಿಗೆ ಹಾಗೆ ಅನಿಸಿತು. ಮತ್ತು ಆ ಕಾರಣದಿಂದ, ಅವರ ಪ್ರಮುಖ ದಂಡಿನ ಸಾಹಸಮಯತೆಯಿಂದಾಗಿ ತನ್ನ ಜನ ಅವರ ಪಂಕ್ತಿಗಳಲ್ಲಿ ಅನಿವಾರ್ಯವಾಗಿಯೆ ಬಹಳ ಹತ್ಯೆಗೈಯುವ ಸಮಯಕ್ಕಾಗಿ ಕಾಯುವಂತೆ ತನ್ನ ಫಿರಂಗಿದಳವನ್ನೆಲ್ಲ ಸನ್ನದ್ಧವಾಗಿರಿಸಿದ್ದ. ಆಗ ತನ್ನ ಫಿರಂಗಿದಳ ಮುನ್ನಡೆಸಿ ಅವರನ್ನೆಲ್ಲ ನಾಶಮಾಡಲು ಉದ್ದೇಶಿಸಿದ್ದ. ಆದರೆ, ಅವರ ಆಕ್ರಮಣದ ರೀತಿಯನ್ನು ನೋಡಿದಾಕ್ಷಣ ಇಡಲ್‌ಕಾವ್ ತಮ್ಮ ಸುರಕ್ಷಿತತೆಗೆ ಅತ್ಯುತ್ತಮವೆಂದು ಕಂಡ ಯೋಜನೆಯನ್ನು ಕೈಬಿಡಬೇಕಾಯಿತು. ಮತ್ತು ಗುಂಡಿನ ದಾಳಿ ಆರಂಭಿಸಲು ತನ್ನ ಎಲ್ಲ ಫಿರಂಗಿದಳಕ್ಕೆ ಅವನು ಆಜ್ಞೆಯಿತ್ತ. ಗುಂಡುಗಳ ಸುರಿತ ಬಹಳವಾಗಿದ್ದು ಅನೇಕ ಕುದುರೆ, ಕಾಲಾಳು, ಮತ್ತು ಆನೆಗಳನ್ನು ಕೊಂದು ವೈರಿಗೆ ಬಹಳ ನಷ್ಟ ಮಾಡಿ ರಾಜನ ಸೈನ್ಯ ಹಿಂದೆ ಸರಿಯುವಂತೆ ಮಾಡಿತು. ತಮ್ಮ ವೈರಿಗಳು ರಣರಂಗ ಬಿಡುತ್ತಿರುವುದನ್ನು ಕಾಣುತ್ತಲೆ ಮೂರರೆಲ್ಲರೂ ಅವರ ಮೇಲೆ ದಾಳಿಯಿಟ್ಟ ಪರಿಣಾಮವಾಗಿ ಜೀನಿನಲ್ಲಾಗಲಿ ವೈರಿಗೆ ಮುಖ ತೋರಲಾಗಲಿ ನರಪಿಳ್ಳೆಯೂ ಉಳಿದಿರಲಿಲ್ಲ ; ಆದರೆ, ರಾಜನ ಎಲ್ಲ ಸೈನಿಕರು ಓಡತೊಡಗಿದರು ಮತ್ತು ಮೂರರು ಅವರನ್ನು ಕೊಲ್ಲುತ್ತ ಅರ್ಧ ಹರದಾರಿ ಬೆನ್ನಟ್ಟಿದರು. ತನ್ನ ಸೈನಿಕರು ಓಡುತ್ತಿರುವ ರೀತಿಯನ್ನು ನೋಡಿದಾಗ ರಾಜ ಅವರು ದೇಶದ್ರೋಹಿಗಳೆಂದೂ ಮತ್ತು ತನ್ನೊಂದಿಗೆ ಯಾರಿರುವರೆಂದೂ ನೋಡುವುದಾಗಿಯೂ ಮತ್ತು ಅವರೆಲ್ಲ ಸಾಯುವದು ಇದ್ದುದೆ ಆದುದರಿಂದ ಅವರು ಪರಂಪರೆಯಂತೆ ತಮ್ಮ ವಿಧಿಯನ್ನು ಧೈರ್ಯದಿಂದ ಎದುರಿಸ ಬೇಕೆಂದೂ ಕೂಗಿದ. "ನನ್ನೊಂದಿಗೆ ಯಾರಿರುವಿರಿ ?" ಎಂದು ಅವನು ಕೂಗಿದ.

ತಕ್ಷಣ ಅವನೊಂದಿಗೆ ಇರಲು ಸಿದ್ಧವಿದ್ದ ಎಲ್ಲ ದೊರೆಗಳು ಮತ್ತು ದಳವಾಯಿಗಳು ಅವನ ಸುತ್ತ ನೆರೆದರು, ಮತ್ತು ಪ್ರಪಂಚದಲ್ಲಿಯೆ ಅತಿ ದೊಡ್ಡ ಪ್ರಭುವನ್ನು ಕೊಂದಿರುವೆನೆಂದು ಇಡಲ್‌ಕಾವ್ ಹೆಮ್ಮೆ ಪಡುವ ದಿನ ಬಂದಿದೆ, ಆದರೆ ಅವನು ಅವನನ್ನು ಸೋಲಿಸಿದನೆಂದು ಜಂಭಪಡಲು ಸಾಧ್ಯವಿಲ್ಲ ಎಂದು ರಾಜ ಹೇಳಿದ. ಆ ಮೇಲೆ ಅವನು ತನ್ನ ಮರಣದ ಸಂಕೇತವಾಗಿ ರಾಣಿಯರಿಗೆ ಅದನ್ನು ತೋರಿಸ ಲೋಸುಗ ಮತ್ತು ಪದ್ಧತಿಯಂತೆ ಅವರು ಅಗ್ನಿಪ್ರವೇಶ ಮಾಡಲೋಸುಗ ತನ್ನ ಬೆರಳಿನಿಂದ ಒಂದು ಉಂಗುರವನ್ನು ತೆಗೆದು ತನ್ನ ಯುವಕ ಪರಿಚರನೊಬ್ಬನಿಗೆ ಕೊಟ್ಟ. ಆ ಮೇಲೆ ಕುದುರೆಯೇರಿ ಉಳಿದಿದ್ದ ಸೈನ್ಯವಿಭಾಗಗಳೊಂದಿಗೆ ಮುನ್ನುಗ್ಗುತ್ತ ಓಡಿಬಂದಿದ್ದ ಪ್ರತಿಯೊಬ್ಬನನ್ನೂ ಕರುಣೆಯಿಲ್ಲದೆ ಕೊಲ್ಲಲು ಆಜ್ಞಾಪಿಸಿದ. ತಮ್ಮ ಬಾಂಧವರಿಂದ ಎಂಥ ಸ್ವಾಗತ ದೊರೆಯಿತೆಂದು ಕಂಡ ಅವರು ತಿರುಗಿ ವೈರಿಯ ಮೇಲೆ ಬೀಳದೆ ಗತ್ಯಂತರವಿರಲಿಲ್ಲ. ಮತ್ತು ಅವರ ಆಕ್ರಮಣ ಎಂಥದಿತ್ತೆಂದರೆ ಮೂರರಲ್ಲೊಬ್ಬನೂ ಅವರಿಗೆ ಮುಖಾಮುಖಿ ಯಾಗಿರಲಿಲ್ಲ. ಏಕೆಂದರೆ, ಮೂರರು ಅವರನ್ನು ಬಹಳ ಅಸ್ತವ್ಯಸ್ತವಾಗಿ ಬೆನ್ನಟ್ಟಲ್ಪಟ್ಟಿದ್ದ ಜನರಂತೆ ಎದುರಿಸಿದರು. ಮೂರರಲ್ಲಾದ ಗೊಂದಲ ಮತ್ತು ಅವರ ಪಂಕ್ತಿಗಳಲ್ಲಾದ ಹಾವಳಿ ಎಷ್ಟು ದೊಡ್ಡದಾಗಿತ್ತೆಂದರೆ ಅವರು ಅಷ್ಟು ಚನ್ನಾಗಿ ಭದ್ರಪಡಿಸಿಕೊಂಡಿದ್ದ ಮತ್ತು ಬೇಲಿ ಕಟ್ಟಿಕೊಂಡಿದ್ದ ತಮ್ಮ ಶಿಬಿರವನ್ನು ಸಂರಕ್ಷಿಸಿ ಕೊಳ್ಳುವ ಗೋಜಿಗೆ ಹೋಗಲಿಲ್ಲ. ಆದರೆ, ಸ್ಥಿಮಿತ ಕಳೆದುಕೊಂಡವರಂತೆ ಅವರು ತಮ್ಮ ಜೀವ ಉಳಿಸಿಕೊಳ್ಳಲೋಸುಗ ನದಿಯಲ್ಲಿ ಧುಮುಕಿದರು. ಅವರನ್ನು ಬೆನ್ನಟ್ಟಿ ರಾಜನ ಅಸಂಖ್ಯ ಯೋಧರು ಮತ್ತು ಆನೆಗಳು ಬಂದವು. ಅವು ಲೆಕ್ಕವಿಲ್ಲ ದಷ್ಟು ಹಾನಿ ಮಾಡಿದವು. ಏಕೆಂದರೆ, ಅವು ತಮ್ಮ ಸೊಂಡಿಲಿನಿಂದ ಜನರನ್ನು ಹಿಡಿದು ತುಂಡು ತುಂಡಾಗಿ ಸೀಳಿದವು ಮತ್ತು ಅಂಬಾರಿಯಲ್ಲಿದ್ದವರು ಎಣಿಕೆ ಯಿಲ್ಲದಷ್ಟು ಜನರನ್ನು ಕೊಂದರು.

ಸೈನ್ಯಗಳು ವೈರಿಯನ್ನು ಬೆನ್ನಟ್ಟುತ್ತ ರಾಜ ನದಿ ತಲುಪುವವರೆಗೆ ಮುಂದೆ ನಡೆದವು. ಅಲ್ಲಿ ಸತ್ತವರಿಗೆ ಲೆಕ್ಕವಿಲ್ಲ—ಇಲ್ಲಿ ನೋಡಿದರೆ ಶಿಬಿರ ಬಿಟ್ಟುಬಂದಿದ್ದ ಸ್ತ್ರೀಯರು ಮತ್ತು ಬಾಲಕರು, ಅಲ್ಲಿ ನೋಡಿದರೆ, ನದಿಯಲ್ಲಿ ಬಹಳ ನೀರಿದ್ದುದರಿಂದ ಒಂದಕ್ಕೊಂದು ಅಂಟಿಕೊಂಡಿದ್ದರೂ ಪಾರಾಗಲಾರದ ಕುದುರೆಗಳು ಮತ್ತು ಸವಾರರು ಮತ್ತು ರಾಜನ ಸೈನ್ಯಗಳು ದಂಡೆಯ ಮೇಲೆ ನಿಂತುಕೊಂಡು ಯಾವುದೆ ಮನುಷ್ಯ ಕಾಣಿಸಿಕೊಳ್ಳಲಿ ಕೊಲ್ಲುತ್ತಿದ್ದರು, ಮತ್ತು ನದಿಯ ದಂಡೆ ಏರಲು ಪ್ರಯತ್ನಿಸಿ ಸಾಧ್ಯವಾಗದೆ ಕುದುರೆಗಳು ಸವಾರರ ಮೇಲೆ ಬಿದ್ದು ಎರಡೂ ಪಾರಾಗದಂತಾಯಿತು, ಮತ್ತು ಆನೆಗಳು ಪ್ರವಾಹವನ್ನು ಪ್ರವೇಶಿಸಿದವು ಮತ್ತು ಅವುಗಳ ಹಿಡಿತಕ್ಕೆ ಸಿಕ್ಕವರು ಕ್ರೂರವಾಗಿ ಕೊಲ್ಲಲ್ಪಟ್ಟರು. ನಡೆದುದನ್ನು ಕಂಡು ರಾಜನ ಮನಸ್ಸು ಕರಗಿ ತನ್ನ

ಸೈನಿಕರಿಗೆ ಹಿಂದೆ ಸರಿಯಲು ಹೇಳಿದ. ಸಾಯಲು ಅರ್ಹರಲ್ಲದ ಅಥವಾ ಏನೂ ತಪ್ಪು ಮಾಡದ ಅನೇಕರು ಸತ್ತರೆಂದು ಕೊರಗಿದ. ಆ ಆಜ್ಞೆಯನ್ನು ಎಲ್ಲ ದಳವಾಯಿ ಗಳೂ ಕೂಡಲೆ ಪಾಲಿಸಿ ತಮ್ಮ ಎಲ್ಲ ಪಡೆಗಳನ್ನು ಹಿಂದೆ ಸರಿಸಿದರು.

ಆ ಮೇಲೆ ರಾಜ ಇಡಲ್‌ಕಾವ್‌ನ ಶಿಬಿರಕ್ಕೆ ನಡೆದು ಅವನ ಡೇರೆಯಲ್ಲಿ ವಿಶ್ರಾಂತಿ ಪಡೆದ. ಆದರೆ ಅವನ ದಳವಾಯಿಗಳಲ್ಲನೇಕರು ಅವನು ಹೀಗೆ ವಿಶ್ರಾಂತಿ ಪಡೆಯುವುದರ ವಿರುದ್ಧ ಮಾತಾಡುತ್ತ, ಅವನು ತನ್ನೆಲ್ಲ ವೈರಿಗಳ ವಿನಾಶವನ್ನು ಪೂರ್ತಿಗೊಳಿಸುವುದೆ ಲೇಸೆಂದು ಮತ್ತು ಅವನಿಗಾಗಿ ತಾವು ಅದನ್ನು ಈಡೇರಿಸುವು ದಾಗಿಯೂ ನುಡಿದರು. ಮತ್ತು ತಾನು ಸ್ವತಃ ಇದನ್ನು ಮಾಡಲಿಚ್ಛಿಸದಿದ್ದರೆ ತಮ್ಮಲ್ಲಿ ಕೆಲವರಿಗೆ ಅದನ್ನು ಮಾಡಲಾದರೂ ಆಜ್ಞಾಪಿಸಬೇಕೆಂದರು ಮತ್ತು ಬೆಳಕು ಇರುವವರೆಗೆ ಬೆನ್ನಟ್ಟುವುದನ್ನು ನಿಲ್ಲಿಸುವುದು ಬುದ್ಧಿವಂತಿಕೆಯಲ್ಲವೆಂದರು. ಅದಕ್ಕೆ ರಾಜ, ತಪ್ಪಿಲ್ಲದ ಅನೇಕರು ಸತ್ತಿದ್ದಾರೆ, ಇಡಲ್‌ಕಾವ್ ತನಗೆ ಅನ್ಯಾಯ ಮಾಡಿದ್ದರೆ ಅವನು ಅಗಲೆ ದುಃಖ ಅನುಭವಿಸಿದ್ದಾನೆ, ಮತ್ತು ಮೇಲಾಗಿ ವಶಪಡಿಸಿ ಕೊಳ್ಳಬೇಕಿದ್ದ ರಾಚೊಲ್ ಹಿಂದೆ ಉಳಿದಿರುವುದರಿಂದ ತಾವು ಮುಂದೆ ಹೋಗುವುದು ಉಚಿತವಲ್ಲವೆಂದು, ಅದಕ್ಕೆ ಬದಲು ತಾವು ಅದರ ಸ್ವಾಧೀನಕ್ಕೆ ಸಿದ್ಧತೆ ಮಾಡಿ ಕೊಳ್ಳಬೇಕೆಂದು ತನಗೆನಿಸುತ್ತದೆಂದ. ಮತ್ತು ಅದಕ್ಕಾಗಿ ಇನ್ನು ಮುಂದೆ ಮುತ್ತಿಗೆ ಯನ್ನು ಹೊಸ ಮತ್ತು ಉತ್ತಮ ರೀತಿಯಲ್ಲಿ ಮಾಡಬೇಕೆಂದನು. ಇಡಲ್‌ಕಾವ್ ಅಷ್ಟೊಂದು ಜನರನ್ನು ಮತ್ತು ಮರ್ಯಾದೆಯನ್ನು ಮತ್ತು ಹಾಗೆ ನೋಡಿದರೆ ತನ್ನ ಎಲ್ಲ ಬಲವನ್ನೂ ಕಳೆದುಕೊಂಡಿದ್ದರಿಂದ ಅವನು ಇನ್ನು ಬದುಕಬಯಸಲಾರನೆಂದೂ ಮತ್ತು ರಣರಂಗದಲ್ಲಿಯೆ ಅವನು ಸತ್ತಿರಬೇಕೆಂದೂ ರಾಜ ಉದ್ದಕ್ಕೂ ನಂಬಿದ. ಇದು ನಿಜವಲ್ಲವೆಂದು ಇಡಲ್‌ಕಾವ್ ಯುದ್ಧವನ್ನೆ ಪ್ರವೇಶಿಸಿರಲಿಲ್ಲವೆಂಬುದನ್ನು ನೋಡಿದಾಗ ಗೊತ್ತಾಗುತ್ತದೆ. ಅವನು ಆ ಸಮಯದಲ್ಲೆಲ್ಲ ಈಗ ತನ್ನನ್ನು ಅಸದಕಾವ್ ಮತ್ತು ಬೆಳಗಾಂವಿಯ ದೊರೆ ಎಂದು ಕರೆದುಕೊಳ್ಳುತ್ತಿದ್ದ ಸೆಫಾಲರಿಮ್‌ನ ರಕ್ಷಣೆಯಲ್ಲಿದ್ದ. ಅವನು ಅಗಲಿರುವುದಕ್ಕೆ ಭಯಗೊಂಡು ಇಡಲ್‌ಕಾವ್ ತನ್ನನ್ನು ತನ್ನೆಲ್ಲ ಸೈನ್ಯದೊಂದಿಗೆ ಮೈಗಾವಲಿಗೆ ಆಯ್ಕೆ ಮಾಡುವಂತೆ ಯುಕ್ತಿ ಮಾಡಿದ. ಅವರಲ್ಲಿ ನಾನೂರು ಅಶ್ವಾಳುಗಳಿದ್ದರು. ಸೈನಿಕರು ಹೇಗೆ ಓಡಿ ಹೋಗುತ್ತಿರುವರೆಂಬುದನ್ನು ಮತ್ತು ಅವರು ಹೇಗೆ ಸಂಪೂರ್ಣವಾಗಿ ಸೋಲಿಸಲ್ಪಟ್ಟಿರುವರೆಂಬುದನ್ನು ನೋಡಿದಾಗ ಅವನು ಇಡಲ್‌ಕಾವ್‌ನಿಗೆ "ಖಾವಂದರೆ, ನೀವು ಜೀವಂತವಿರಬಯಸಿದರೆ ನನ್ನ ಹಿಂದೆ ಬನ್ನಿ" ಎಂದ. ಮತ್ತು ಇಡಲ್‌ಕಾವ್ ಒಂದು ಆನೆಯ ಮೇಲೆ ಆಶ್ರಯ ಪಡೆದು ತನ್ನ ಶಿಬಿರವನ್ನು ಮತ್ತು ತನ್ನಲ್ಲಿದ್ದ ಎಲ್ಲವನ್ನೂ ತೊರೆದು ಅವನನ್ನು ಹಿಂಬಾಲಿಸಿದ. ಅಸದಕಾವ್ ಅವನು ಭೂಮಾರ್ಗದಿಂದ ಪಯಣ ಬೆಳೆಸಬೇಕೆಂದು ಇಚ್ಛಿಸಿದ್ದರಿಂದ ಗಡುವು ಹುಡುಕಲು

ಅವನು ಕಾಳಜಿ ವಹಿಸಲಿಲ್ಲ, ಆದರೆ ದಕ್ಷಿಣಕ್ಕಿರುವ ಬೆಟ್ಟದ ಸಾಲುಗಳನ್ನು ಬಳಸಿ ಆ ಮಾರ್ಗವಾಗಿ ಹೋದ.[7]

ಇನ್ನೂರು ಅಶ್ವಾಳು, ಆನೆಗಳು ಮತ್ತು ಕಾಲಾಳುಗಳೊಂದಿಗೆ ರಾಚೋಲಿನಿಂದ ಹೊರಕ್ಕೆ ದಾಳಿ ಮಾಡಿದ ದಳವಾಯಿಗೆ ಏನಾಯಿತೆಂದು ಕೇಳಿದರೆ ನಾನು ಹೇಳುವುದೇನೆಂದರೆ ಅವನು ರಣರಂಗದಲ್ಲಾಗುತ್ತಿದ್ದುದರ ಬಗೆಗೆ ಸಂಪರ್ಕವಿಟ್ಟುಕೊಂಡಿದ್ದ ; ಇಡಲ್‌ಕಾವ್ ಸೋತಿರುವನೆಂದು ಕೇಳಿದಾಕ್ಷಣ ಅವನು ದುರ್ಗದಲ್ಲಿ ಆಶ್ರಯ ಪಡೆಯಲೋಸುಗ ಹಿಂದೆ ತಿರುಗಿದನು. ಅವನು ಮತ್ತು ದುರ್ಗದಲ್ಲಿನ ಇನ್ನೊಬ್ಬ ದಳವಾಯಿಯ ನಡುವೆ ವೈಮನಸ್ಸು ಇದ್ದುದರಿಂದ ಒಳಗಿದ್ದವನಿಗೆ ಅವನನ್ನು ಬರಮಾಡಿಕೊಳ್ಳುವ ಮನಸ್ಸಿರಲಿಲ್ಲ. ತನಗೆ ಪ್ರವೇಶ ನೀಡುತ್ತಿಲ್ಲವೆಂದು ಕಂಡುಕೊಂಡ ಅವನು ತನ್ನನ್ನು ಉಳಿಸಿಕೊಳ್ಳುವುದು ಹೇಗೆಂದು ವಿಚಾರ ಮಾಡಲೇಬೇಕಾಯಿತು. ಮತ್ತು ಅವನು ದೂರ ಕೆಳಗಡೆಯಿದ್ದ ಇನ್ನೊಂದು ಗಡುವಿನ ಮೂಲಕ ನದಿ ದಾಟ ಹಾಗೆ ಮಾಡಿದ ಮತ್ತು ತನ್ನನ್ನು ಉಳಿಸಿಕೊಂಡ. ಒಳಗಿದ್ದವನು ನಗರವನ್ನು ಈಗ ತಾನೆ ಪಡೆಯಬಹುದು ಮತ್ತು ತನ್ಮೂಲಕ ಅವನು ಶ್ರೀಮಂತನಾಗುವೆನು ಎಂದು ಬಗೆದನು ಮತ್ತು ಆ ಕಾರಣಕ್ಕಾಗಿ ಆ ದಳವಾಯಿಯನ್ನ ಒಳಗೆ ಬರಗೊಡಲಿಲ್ಲ ಎಂದು ಅನೇಕರು ನಂಬಿದರು.

## ಅಡಿಟಿಪ್ಪಣಿಗಳು

1 ಬ್ಯಾರೊಸ್ ಅಂಕೊಸ್ವಾವ್ ಎಂದು ಹೇಳಿದರೆ ಕೊರಿಯಾ ಅಂಕೆಸ್ಕಾವ್ ಎಂದಿದ್ದಾನೆ. ಎರಡನೆಯ ಪ್ರತ್ಯಯ ಅತ್ಯಂತ ಸಹಜವಾದುದೆಂದು ತೋರುತ್ತದೆ ಖಾನ್‌ಗೆ ಬದಲಾಗಿ ಕಾವ್. ಆ ಹೆಸರು ಅಂಕುಶ್ ಖಾನ ಎಂದು ಇದ್ದಂತೆ ತೋರುತ್ತದೆ. ಪೊಂಡಾ ಗೋವಾದ ಹತ್ತಿರವಿದೆ.

2 ಡಾವಡ್ ಗುಟೆರ್‌ದ ಮಾನ್‌ರಾಯ್ ಪೋರ್ತುಗಾಲದಿಂದ ಭಾರತಕ್ಕೆ ೧೫೧೫ರಲ್ಲಿ ಒಂದು ನೌಕಾಪಡೆಯ ಅಧಿಪತಿಯಾಗಿ ಯಾನ ಬೆಳೆಸಿದ (ಅಲ್ಬುಕರ್ಕ್, ಹ್ಯಾಕ್ಲುಟ್ ಆವೃತ್ತಿ iv. ೧೯೪). ೧೫೧೭ರಲ್ಲಿ ಫೆಬ್ರುವರಿ ಮತ್ತು ಸೆಪ್ಟೆಂಬರ ತಿಂಗಳ ಮಧ್ಯೆ ಕೆಂಪು ಸಮುದ್ರದಲ್ಲಿದ್ದ ಮಂಡಲಾಧಿಪತಿ ಲೊಪೊ ಸೊಆರಿಸ್‌ನ ಅನುಪಸ್ಥಿತಿಯಲ್ಲಿ ಅವನು ಗೋವಾದ ಅಧಿಪತಿಯಾಗಿದ್ದ ಮತ್ತು ಆ ಅವಧಿಯಲ್ಲಿ ಪೊಂಡಾದಲ್ಲಿ ಅಂಕುಶ್ ಖಾನನ ನೇತೃತ್ವದಲ್ಲಿನ ಬಿಜಾಪುರದ ಪಡೆಗಳ ಮೇಲೆ ಸ್ವಲ್ಪ ಮಟ್ಟಿನ ಯಶಸ್ಸಿನೊಂದಿಗೆ ಆಕ್ರಮಣ ಮಾಡಿದ (ಬ್ಯಾರೊಸ್, ಡೆಕಡಾ iii. l.i.c. ೮) ಒಸಾರಿಯೊ (ಗಿಬ್ಸ್ ಅನುವಾದ ii ೨೬೫)ದ ಮಾನ್‌ರಾಯ್‌ನನ್ನು ಬಹಳ ಕ್ರೂರ ಹಾಗೂ ಸ್ವೇಚ್ಛೆಯ ಸ್ವಭಾವದವನೆಂದು ಚಿತ್ರಿಸಿದ್ದಾನೆ. ಮಂಡಲಾಧಿಪತಿಯ ಸೋದರಮಗಳೊಂದಿಗೆ ಅವನ ವಿವಾಹವಾಗಿತ್ತು.

೩ ಅರ್ಥಾತ್, ತಮ್ಮ ಪ್ರತಿಷ್ಠೆ ಹಿಂದೂಗಳಿಗಿಂತತಮಗೆ ದೊಡ್ಡ ನೈತಿಕ ಹಿರಿಮೆಯನ್ನು ಒದಗಿಸುವುದೆಂದು ಅವರು ನಂಬಿದ್ದರು.

೪ ಈ ಉದ್ಧೃತ ಭಾಗ ಅಸ್ಪಷ್ಟವಿದೆ.

೫ ಮೇಲೆ ಪು. ೩೨೭ ಮತ್ತು ಟಿಪ್ಪಣಿ ನೋಡಿರಿ.

೬ "ಸುಫೊ ಲಾರ್ಜೆ", ಬ್ಯಾರೊಸ್, ಡೆಕಡಾ iii.l.iv. ಅಧ್ಯಾಯ ೫ ಅಸದಖಾನನ ಯುಕ್ತಿಪ್ರೇಮ ಅಂದಿನ ಪೋರ್ತುಗೀಜರಲ್ಲಿ ಜನಜನಿತವಾಗಿತ್ತು.

೭ ಯಾವ ಬೆಟ್ಟಸಾಲುಗಳು ಸೂಚಿತವಾಗಿವೆಯೆಂಬುದನ್ನು ತಿಳಿಯುವುದು ಸ್ವಾರಸ್ಯಕರ ವಾಗಬಹುದು.

## ಅಧ್ಯಾಯ ೧೦

### ಮೂರರಿಂದ ಪಡೆದ ಲೂಟಿ, ಸತ್ತವರನ್ನೆಲ್ಲ ರಾಜ ಹೇಗೆ ಸುಟ್ಟ, ಮತ್ತು ಕ್ರಿಸ್ಟೊವಾಒದ ಫಿಗ್ಯೆರೆಡೊ ಏನು ಮಾಡಿದ ಎಂಬುದನ್ನು ಕುರಿತು

ರಾಜ ಹೀಗೆ ಶಿಬಿರದಲ್ಲಿದ್ದು ಮೂರರ ಅಳಿದುಳಿದ ಕೊಳ್ಳೆಯನ್ನು ಸಂಗ್ರಹಿಸಲು ಆಜ್ಞಾಪಿಸಿದನು, ಮತ್ತು ಸೆರೆ ಸಿಕ್ಕ ಐವರು ದಳವಾಯಿಗಳು (ಅತ್ಯುನ್ನತ ಹುದ್ದೆಯವರು ಮೃತರಲ್ಲಿದ್ದರು) ದೊರೆತರು. ಅವರಲ್ಲಿ ಇಡಲ್‌ಕಾವ್‌ನ ಎಲ್ಲ ಸೇನೆಗಳ ಮಹಾದಂಡನಾಯಕನಾಗಿದ್ದ ಸಲಾಬತ್‌ಕಾವ್[1] ಅತಿ ಪ್ರಮುಖನು. ಯುದ್ಧದಲ್ಲಿ ತನ್ನ ವೈಗಾವಲಿಗಾಗಿ ಅವನು ಮೂರರೊಂದಿಗಿದ್ದ ಸ್ವಪಕ್ಷದ್ರೋಹಿಗಳಾಗಿದ್ದ ಪೋರ್ತುಗೀಜರಲ್ಲಿ ಐನೂರು ಜನರನ್ನು ಇರಿಸಿಕೊಂಡಿದ್ದ. ಈ ಸಲಾಬತ್‌ಕಾವ್ ತನ್ನ ಸೈನ್ಯ ಸೋತುದನ್ನು ಕಂಡಾಕ್ಷಣ ಯೋಧರ ತಂಡವನ್ನು ಕೂಡಿಸಿ ವ್ಯೂಹ ರಚಿಸಲೆತ್ನಿಸಿದ, ಆದರೆ ಅದು ಕೈಗೂಡಲಿಲ್ಲ. ಏಕೆಂದರೆ, ತನ್ನನ್ನು ಉಳಿಸಿಕೊಳ್ಳುವುದನ್ನು ಬಿಟ್ಟು ಬೇರೆ ಯಾವುದನ್ನೂ ಯೋಚಿಸುವ ಒಬ್ಬನೂ ಅವರಲ್ಲಿರಲಿಲ್ಲ. ಮತ್ತು ಸೋಲುವುದಕ್ಕಿಂತ ಸಾಯುವುದೆ ಮೇಲೆಂದು ಬಗೆದು ಅವನು ರಾಜನ ಸೇನೆಯ ಮೇಲೆ ಬಿದ್ದು ಅವರನ್ನು ಕೊಚ್ಚಿ ಹಾಕುತ್ತ ಎಂಥ ಅದ್ಭುತ ಕಾರ್ಯಗಳನ್ನು ಮಾಡಿದನೆಂದರೆ ಮುಂದೆ ಎಂದಿಗೂ ಅವನು ಮತ್ತು ಅವನ ಪೋರ್ತುಗೀಜರು ನೆನಪಿನಲ್ಲಿ ಉಳಿದರು. ಅವರ ಭಯಂಕರ ಹೊಡೆತಗಳು ಮತ್ತು ಅವರ ಕಾರ್ಯಗಳು ಎಷ್ಟು ಭೀತಿ ಹುಟ್ಟಿಸಿದನೆಂದರೆ ಅವರನ್ನು ಮುಂದೆ ಹೋಗಗೊಡಲಾಯಿತು ಮತ್ತು ಸೈನ್ಯದೊಳಗೆ ಅವರು ಎಷ್ಟು ದೂರ ನುಗ್ಗಿದರೆಂದರೆ ರಾಜನ ಅಂಗರಕ್ಷಕ ಪಡೆಯ ಸಮೀಪಕ್ಕೆ ತಲುಪಿದರು. ಅಲ್ಲಿ ಸಲಾಬತ್‌ಕಾವ್‌ನ ಕುದುರೆಯನ್ನು ಕೊಲ್ಲಲಾಯಿತು. ಅವನಿಗೆ ರಕ್ಷಣೆ ಒದಗಿಸಲು ಪೋರ್ತುಗೀಜರು ಸಾಹಸಕಾರ್ಯ ಮಾಡುತ್ತ ಎಷ್ಟೊಂದು ಜನರನ್ನು ಕೊಂದರೆಂದರೆ ಅವರು ತಮ್ಮ ಹಿಂದೆ ವಿಶಾಲ ರಸ್ತೆಯನ್ನು ಬಿಟ್ಟರು. ಅದನ್ನು ಪ್ರವೇಶಿಸಲು ಯಾರೂ ಧೈರ್ಯ ಮಾಡಲಿಲ್ಲ ಮತ್ತು ಅವರು ಚನ್ನಾಗಿ ಕಾದಿದರೆಂದರೆ ಅವರು ಸಲಾಬತ್‌ಕಾವ್‌ನಿಗಾಗಿ ಇನ್ನೊಂದು ಕುದುರೆ ಒದಗಿಸಿದರು. ಅವನು ಅದನ್ನೇರಿದ ತಕ್ಷಣ ಅವನು ಕುರಿಗಳ ಮಧ್ಯೆ ರೋಷತಪ್ತ ತೋಳನೇ ಆದನು; ಆದರೆ, ಆಗಲೆ ಅವರು ಎಷ್ಟೊಂದು ದಣಿದಿದ್ದರು ಮತ್ತು ಎಲ್ಲೆಡೆ ಗಾಯಗೊಂಡಿದ್ದರು ಮತ್ತು ವೈರಿಗಳಿಂದ ಸುತ್ತುವರಿಯಲ್ಪಟ್ಟಿದ್ದರೆಂದರೆ (ಅವರ ಮೇಲೆ ಎಲ್ಲ ಕಡೆಗಳಿಂದಲೂ ಆಕ್ರಮಣ ಮಾಡಲಾಯಿತು) ಕೊನೆಗೆ ಸಲಾಬತ್‌ಕಾವ್ ಮತ್ತು ಅವನೊಂದಿಗೆ ಅವನ ಕುದುರೆ ನೆಲಕ್ಕುರುಳಿತು. ಮತ್ತು ಅವನನ್ನು ರಕ್ಷಿಸಲೆತ್ನಿಸಿದ ಎಲ್ಲ ಪೋರ್ತುಗೀಜರು ಒಬ್ಬನೂ ಪಾರಾಗದಂತೆ ಕೊಲ್ಲಲ್ಪ

ಟ್ಟಿದ್ದರಿಂದ ಮತ್ತು ಅವನೂ ಅನೇಕ ಕಡೆ ಗಾಯಗೊಂಡಿದ್ದರಿಂದ ಅವನನ್ನು ಸೆರೆ ಹಿಡಿಯಲಾಯಿತು.

ಲೂಟಿಯ ಮೊತ್ತ ಒಮರ್ಖಜ್‌ದ ನಾನೂರು ಕುದುರೆಗಳು, ಮತ್ತು ಒಂದು ನೂರು ಆನೆಗಳು, ಚಿಕ್ಕವುಗಳಲ್ಲದೆ ನಾನೂರು ಭಾರಿ ತೋಪುಗಳು ಆಗಿತ್ತು. ಅವುಗಳ ನ್ನೊಯ್ಯುವ ಫಿರಂಗಿಗಾಡಿಗಳ ಸಂಖ್ಯೆ ಒಂಬೈನೂರಾಗಿತ್ತು, ಮತ್ತು ಅನೇಕ ಡೇರೆಗಳು ಮತ್ತು ಮಂಡಪಗಳೂ ಸೇರಿದ್ದವು. ಹೇಸರಗತ್ತೇ ಮತ್ತು ಎತ್ತು ಮತ್ತು ಇತರಪ್ರಾಣಿ ಗಳ ಲೆಕ್ಕವನ್ನು ನಾನು ಮಾಡುವುದಿಲ್ಲ. ಏಕೆಂದರೆ, ಅವುಗಳು ಲೆಕ್ಕವಿಲ್ಲದಷ್ಟಿದ್ದವು. ಹಾಗೆಯೆ, ಪುರುಷರು ಮತ್ತು ಬಾಲಕರದಾಗಲಿ ರಾಜ ಬಿಡುಗಡೆ ಮಾಡಲು ಆಜ್ಞಾಪಿಸಿದ ಕೆಲವು ಸ್ತ್ರೀಯರದಾಗಲಿ ಸಂಖ್ಯೆಗಳು ಎಣಿಕೆಯಿಲ್ಲದವುಗಳು.

ಎಲ್ಲ ಮೃತರನ್ನೂ ಅಗ್ನಿಗರ್ಪಿಸುವವರೆಗೆ ಮತ್ತು ಅವರಿಗೆ ಸಾಂಪ್ರದಾಯಿಕ ಗೌರವ ನೀಡುವವರೆಗೆ ರಾಜ ಇಲ್ಲಿ ಇದ್ದ. ಮತ್ತು ಇಲ್ಲಿ ತನ್ನ ಕಡೆ ಸತ್ತವರ ಆತ್ಮ ಗಳಿಗೋಸ್ಕರ ಬಹಳ ದಾನವಿತ್ತ. ಇವರ ಸಂಖ್ಯೆ ಹದಿನಾರು ಸಾವಿರಕ್ಕೂ ಹೆಚ್ಚಿತ್ತು. ಈ ಕೆಲಸಗಳನ್ನು ಮಾಡಿ ಅವನು ಪುನಃ ರಾಚೊಲ್ ಕಡೆಗೆ ತಿರುಗಿದ ಮತ್ತು ಮೊದಲು ಮಾಡಿದಂತೆಯೆ ತನ್ನ ಶಿಬಿರ ನೆಲೆಸಿದ.

ರಾಜನ ಈ ಮರಳುವಿಕೆಯ ಕಾಲದಲ್ಲಿ ಕ್ರಿಸ್ಟೊವಾಒದ-ಫಿಗ್ಯೆರೆಡೊ ಅವನನ್ನು ಕಾಣಲು ಅಲ್ಲಿಗೆ ಬಂದ. ಅವನು ಆ ಸಮಯದಲ್ಲಿ ಕುದುರೆಗಳೊಂದಿಗೆ ಬಿಸ್ನಗ ನಗರದಲ್ಲಿದ್ದ ಮತ್ತು ಅವನು ತನ್ನೊಂದಿಗೆ ಇಪ್ಪತ್ತು ಪೋರ್ತುಗೀಜ ತುಬಾಕಿ ದಾರರನ್ನು ಕರೆತಂದ ಮತ್ತು ತಾನೂ ಸಹ ಒಂದು ತುಬಾಕಿ ಹಿಡಿದುಕೊಂಡಿದ್ದ. ಅವನ ಸಹವಾಸದಲ್ಲಿ ಬಹಳ ಸಂತೋಷಗೊಂಡ ರಾಜ ಅವನು ಯುದ್ಧವನ್ನೂ ತನ್ನ ಮಹಾ ಬಲವನ್ನೂ ನೋಡುತ್ತಾನೆಂದು ಹರ್ಷಪಟ್ಟ. ಇಡಲ್‌ಕಾವ್‌ನಿಂದ ಪಡೆದ ಕೆಲವು ಡೇರೆಗಳನ್ನು ಅವನಿಗೆ ಕೊಡಬೇಕೆಂದೂ ಮತ್ತು ಅವನಿಗೆ ಇರಲು ತನ್ನ ವಸತಿ ಗಳಿಗೆ ಹತ್ತಿರವೆ ಏರ್ಪಡಿಸಬೇಕೆಂದೂ ಅವನು ಆಜ್ಞಾಪಿಸಿದ. ಒಂದು ದಿನ ಕ್ರಿಸ್ಟೊವಾ ಒದ ಫಿಗ್ಯೆರೆಡೊ ತಾನು ಹೊರಟು ನಗರವನ್ನು ವೀಕ್ಷಿಸಬಯಸಿರುವುದಾಗಿ ರಾಜನಿಗೆ ತಿಳಿಸಿದ. ಆದರೆ, ಅವನಿಗೆ ಯಾವ ಅಪಾಯವೂ ಆಗಬಾರದೆಂದು ಬಯಸಿದ ರಾಜ ಅವನು ಅದನ್ನು ಬಯಸಬಾರದೆಂದು ಹೇಳಿದ. ಆದರೆ, ಯುದ್ಧವೆ ಪೋರ್ತುಗೀಜರ ಕೆಲಸವಾದುದರಿಂದ ಇದು ಅವನು ತನಗೆ ನೀಡಬಹುದಾದ, ಅರ್ಥಾತ್ ಮಹಾರಾಜ ತಾನು ಹೋಗಿ ಮೂರರನ್ನು ನೋಡಲು ಅನುಮತಿ ನೀಡುವುದು, ಅತಿ ದೊಡ್ಡ ಅನುಗ್ರಹವೆಂದು ಕ್ರಿಸ್ಟೊವಾಒದ ಫಿಗ್ಯೆರೆಡೊ ಉತ್ತರವಿತ್ತ. ಆದುದರಿಂದ, ರಾಜ ಅವನಿಗೆ ಅನುಮತಿ ನೀಡಿ ಅವನೊಂದಿಗೆ ಕೆಲವು ಯೋಧರನ್ನು ಕಳಿಸಿದ. ಕ್ರಿಸ್ಟೊ ವಾಒದ ಫಿಗ್ಯೆರೆಡೊ ಗೋಡೆಗಳ ಮುಂದಣ ಕಂದಕಕ್ಕೆ ತೀರ ಸಮೀಪ ಹೋದ. ತನ್ನನ್ನು ಸಾಧ್ಯವಾದಷ್ಟು ಮರೆಯಾಗಿರಿಸಿಕೊಂಡು ಮೂರರು ಗೋಡೆಯ ಮೇಲೆ

ಎಷ್ಟೊಂದು ಭಯವಿಲ್ಲದೆ ತಮ್ಮನ್ನು ತೆರೆದಿಟ್ಟುಕೊಂಡಿದ್ದನ್ನು ಕಂಡು ತನ್ನೊಂದಿಗೆ ತಂದಿದ್ದ ತುಬಾಕಿದಾರರೊಂದಿಗೆ ಅವರ ಮೇಲೆ ಯಾವ ರೀತಿ ಗುಂಡು ಹಾರಿಸ ಲಾರಂಭಿಸಿದನೆಂದರೆ ಅವನು ಅನೇಕರನ್ನು ಕೊಂದನು. ಮೂರರು ಅಜಾಗರೂಕರೂ ಭಯದಿಂದ ದೂರವಿರುವವರೂ ಅಲ್ಲಿಯವರೆಗೆ ಬಂದೂಕು ಅಥವಾ ಅಂಥ ಇತರ ಆಯುಧಗಳಿಂದ ಜನರನ್ನು ಕೊಂದುದನ್ನು ನೋಡಿರದವರೂ ಆಗಿದ್ದರು.ಆದುದರಿಂದ ಅವರು (ಈಗ) ಗೋಡೆಯನ್ನು ಬಿಡತೊಡಗಿದರು ಮತ್ತು ರಾಜನ ಸೈನಿಕರು ಅದನ್ನು ಸುರಕ್ಷಿತವಾಗಿ ತಲುಪಲು ಅವಕಾಶ ಕಂಡುಕೊಂಡರು, ಮತ್ತು ಅವರು ಕಟ್ಟಡದ ಬಹುಭಾಗವನ್ನು ಕೆಡವತೊಡಗಿದರು. ಮತ್ತು ಈ ಬದಿಗೆ ಎಷ್ಟೊಂದು ಜನರು ಸೇರಿದ್ದರೆಂದರೆ ಕ್ರಿಸ್ಟೊವಾಒ ದ ಫಿಗ್ಯೆರೆಡೊ ತನ್ನ ಪೋರ್ತುಗೀಜರೊಂದಿಗೆ ನಗರದೊಳಗೆ ಪ್ರವೇಶಿಸಿರುವನೆಂದು ಅನ್ನುತ್ತ ಇಡಿ ಶಿಬಿರದಲ್ಲಿ ಕೋಲಾಹಲ ಉಂಟಾಗಿತ್ತು. ಇದನ್ನು ರಾಜನಿಗೆ ಹೇಳಲಾಯಿತು. ಆ ಇನ್ನೊಂದು ಯುದ್ಧದ ದಿನ ಹೇಗೆ ಪೋರ್ತುಗೀಜರು ಬಂದಿದ್ದರೆಂಬುದು ನೆನಪಿಗೆ ಬರುವವರೆಗೆ ನಗರದೊಳಗಿದ್ದವರಿಗೆ ಏನು ನಡೆದಿದೆಯೆಂಬುದಾಗಲಿ ಈ ಜನರು ರಾಜನ ಸೇವೆಯಲ್ಲಿ ಹೇಗೆ ನಿರತರಾದರೆಂಬುದಾಗಲಿ ಗೊತ್ತಾಗಲಿಲ್ಲ. ಆಗ ಅವರು ತಮ್ಮ ಸೋಲು ಕಟ್ಟಿಟ್ಟದ್ದೆಂದು ಪರಿಗಣಿಸಿದರು. ಏಕೆಂದರೆ, ಆ ಜನರ ಸಹಾಯದಿಂದ ರಾಜನ ಜನ ಭಯವಿಲ್ಲದೆ ಗೋಡೆಗೆ ಬಂದರು. ಅದು ಆಗಲೆ ಅನೇಕ ಕಡೆ ಹಾನಿಗೊಳಗಾಗಿತ್ತು. ಏಕೆಂದರೆ, ನಗರದ ಫಿರಂಗಿಗಳು ಎಷ್ಟು ಎತ್ತರದಲ್ಲಿದ್ದವೆಂದರೆ ಅವು ಗೋಡೆಯಡಿ ಇರುವ ಜನರಿಗೆ ಯಾವ ಹಾನಿಯನ್ನೂ ಉಂಟುಮಾಡಲು ಶಕ್ಯವಿರಲಿಲ್ಲ. ಗೋಡೆ ಕೂಡ ಒಳಗೆ ಮಣ್ಣಿನಿಂದ ತುಂಬಲ್ಪಟ್ಟಿತ್ತು ಮತ್ತು ಬಿರುಕುಗಳಲ್ಲಿ ಫಿರಂಗಿಗಳಿರಲಿಲ್ಲ. ಅಲ್ಲಿಯವರೆಗೆ ಅವರು ಕೊಂದ ನಗರವಾಸಿಗಳಿಗೆ ಕಲ್ಲುಗಳನ್ನು ಪೂರೈಸಲಾಗಿದ್ದು ಅವುಗಳನ್ನು ಅವರು ಗೋಡೆಯ ಮೇಲಿಂದ ತುಬಾಕಿಗಳು ಮತ್ತು ಬಾಣಗಳೊಂದಿಗೆ ದಾಳಿಗಾರರ ಮೇಲೆ ಎಸೆದರು. ಆದುದರಿಂದ, ರಾಜನ ಜನ ಗೋಡೆ ತಲುಪಲು ಶಕ್ಯವಾದರೂ ಕೂಡ ಅನರು ಗಾಯಗೊಂಡಿದ್ದದಂತೂ ನಿಜ. ಆದರೆ, ಪೋರ್ತುಗೀಜರೊಂದಿಗೆ ಕ್ರಿಸ್ಟೊವಾಒ ದ ಫಿಗ್ಯೆರೆಡೊ ವೈರಿಗಳು ಗೋಡೆಯ ಮೇಲೆ ಬಾರದಂತೆ ತಡೆದುದರಿಂದ ಹಿಂದೂಗಳು ಅದನ್ನು ಅನಾಯಾಸವಾಗಿ ತಲುಪಲು ಶಕ್ಯರಾದರು.

ಇಲ್ಲಿ ರಾಜನ ದಳವಾಯಿಗಳು ಅವನ ಜೊತೆಗೆ ಒಂದು ದಿನವಾದರೂ ಮೂರರ ಮೇಲೆ ಆಕ್ರಮಣ ಮಾಡಲು ಅನುಮತಿ ನೀಡಬೇಕೆಂದು ಕ್ರಿಸ್ಟೊವಾಒದ ಫಿಗ್ಯೆರೆಡೊನನ್ನು ವಿನಂತಿಸಿಕೊಂಡರು, ಮತ್ತು ಅವನು ಅವರಲ್ಲಿ ಅಧಿಕ ಗೌರವಾನ್ವಿತರಾದವರನ್ನು ಸಂತುಷ್ಟಗೊಳಿಸಲೋಸುಗ ಆ ದಿನಗಳೆಂದು ಅವರೊಂದಿಗೆ ನಡೆದ. ಒಂದು ದಿನ ಅವನು ತನ್ನ ತುಬಾಕಿದಾರರನ್ನು ಮೂರು ತಂಡಗಳಾಗಿ ವಿಭಜಿಸಿ, ಕಾಣಿಸಿಕೊಂಡ ಮೂರರಲ್ಲಿ ಅನೇಕರನ್ನು ಕೊಲ್ಲತೊಡಗಿದುದನ್ನು ನೋಡಿ ಯಾರೂ ಕಾಣಿಸಿಕೊಳ್ಳಲು

ಧೈರ್ಯ ಮಾಡಲಿಲ್ಲ. ಮತ್ತು ಆಗ ಈ ಮೂರು ತಂಡಗಳಲ್ಲಿದ್ದ ರಾಜನ ಸೈನಿಕರು ಅನೇಕ ಗುದ್ದಲಿ ಹಾರೆಗಳೊಂದಿಗೆ ಗೋಡೆಯ ಮೇಲೆ ಪ್ರಹಾರ ಮಾಡತೊಡಗಿದರು. ಮತ್ತು ಉಳಿದವರು ತಮ್ಮ ಮಟ್ಟಿಗೆ ತಾವೆ ಆಕ್ರಮಣ ಮಾಡಬೇಕೆಂದು ಅವನು ಹೇಳಿಕಳಿಸಿದ. ಮತ್ತು ಇದರ ಪರಿಣಾಮವೇನಾಯಿತೆಂದರೆ ನಗರದ ರಕ್ಷಕರು ಕೋಟೆಯ ಪ್ರಥಮ ಪಂಕ್ತಿಯನ್ನು ತ್ಯಜಿಸಲಾರಂಭಿಸಿದರು ಮತ್ತು ಸ್ತ್ರೀಯರು ಮತ್ತು ಮಕ್ಕಳು ದುರ್ಗದಲ್ಲಿ ಆಶ್ರಯ ಪಡೆದರು. ತನ್ನ ಜನರಲ್ಲಿ ಹರಡಿದ ಹತಾಶೆಯನ್ನು ಕಂಡ ನಗರದ ದಳವಾಯಿ ಹುರಿದುಂಬಿಸುವ ಮಾತುಗಳಿಂದ ಅವರನ್ನು ಮರಳಿಸಲು ಯತ್ನಿಸಿದ ಮತ್ತು ಅವರಲ್ಲಿ ಕೆಲವರೊಂದಿಗೆ ತಾನು ಕಂಡ ಬಹಳ ಒತ್ತಡ ಹೇರಲ್ಪಟ್ಟಿದ್ದ ಗೋಡೆಭಾಗಕ್ಕೆ ಬಂದು ಅವರು ಗೋಡೆಗೆ ವಾಪಸು ಬರಬೇಕೆಂದೂ ಭಯಪಡಬಾರದೆಂದೂ ಮೊರೆಯಿಟ್ಟ. ಸಹಾಯ ಮಾಡುತ್ತಿದ್ದ ಫ್ರ್ಯಾಂಕರು[2] ಆ ಸ್ಥಳದಲ್ಲಿ ಇರುವರೆಂದೂ ಯಾರಾದರೂ ಕಂಡಾಕ್ಷಣ ಅವನು ಮೃತನಾಗುವನೆಂದೂ ಅವನಿಗೆ ಕೆಲವರು ಉತ್ತರಿಸಿದರು. ಮತ್ತು ಅವನು ಪೋರ್ತುಗೀಜರು ಎಲ್ಲಿರುವರೆಂಬುದನ್ನು ಸ್ವತಃ ನೋಡಬಯಸಿ ಒಂದು ಜೇರುಗಂಡಿಯಿಂದ ತನ್ನ ದೇಹವನ್ನು ಮುಂದೆ ಬಾಗಿಸಿದಾಗ ಅವನ ಹಣೆಯ ಮಧ್ಯದಲ್ಲಿ ನೆಟ್ಟ ತುಬಾಕಿ ಗುಂಡಿನಿಂದ ಸತ್ತ. ಅವನನ್ನು ಕ್ರಿಸ್ಟೊವಾಓ ದ ಫಿಗ್ವೆರೆಡೊ ಕೊಂದನೆಂದು ಮೂರರೆಂದರು ಮತ್ತು ಅವರು ಅವನನ್ನು ಗಮನಿಸಿದರು. ದಳವಾಯಿ ಹೀಗೆ ಸತ್ತ ಕೂಡಲೆ ನಗರದಲ್ಲಿ ಬಹಳ ರೋದನವಾಯಿತು ಮತ್ತು ಗೋಡೆಯನ್ನು ತ್ಯಜಿಸಲಾದುದರಿಂದ ರಾಜನ ಶಿಬಿರದ ಜನರಿಗೆ ತಮಗೆ ಇಷ್ಟಬಂದಂತೆ ಅದನ್ನೊಡೆಯಲು ಬಿಡಲಾಯಿತು. ಮತ್ತು ಅವರು ಒಳಗೆ ಎದ್ದ ರೋದನವನ್ನು ಗಮನಿಸಿದರು ಮತ್ತು ಗೋಡೆಯನ್ನು ರಕ್ಷಿಸಲು ಯಾರೂ ಇಲ್ಲದುದನ್ನು ನೋಡಿದರು. ಆದುದರಿಂದ ಅವರು ಏನು ಆಗುತ್ತದೆಂದು ನೋಡಲು ಹಿಂದೆ ಸರಿದರು ಮತ್ತು ಆ ದಿನ ಯುದ್ಧ ನಿಲ್ಲಿಸಿದರು.

## ಅಡಿಟಿಪ್ಪಣಿಗಳು

1 ಸಲಾಬತ್ ಖಾನ.

2 ಫಿರಂಗಿಯರು, ಫ್ರ್ಯಾಂಕರು ಅಥವಾ ಯುರೋಪಿಯನ್ನರು.

## ಅಧ್ಯಾಯ ೧೧

**ನಗರದೊಳಗಿದ್ದವರು ಷರತ್ತುಗಳಿಗಾಗಿ ಬೇಡಿದ ಹಾಗೂ ರಾಜ ಅವರಿಗೆ ಇಂಬುಕೊಟ್ಟ ಬಗೆ.**

ಮರುದಿನ, ಅಂದರೆ ಇಡಲ್‌ಕಾವ್ ಸೋಲಿಸಲ್ಪಟ್ಟ ಯುದ್ಧ ನಡೆದು ಇಪ್ಪತ್ತು ದಿನಗಳಾದ ಬಳಿಕ ನಗರದ ಜನ ದ್ವಾರವೊಂದನ್ನು ತೆರೆದು ತಮ್ಮ ಮುಂದೆ ಶ್ವೇತ ಧ್ವಜವೊಂದನ್ನು ಹಿಡಿದು ತಮ್ಮ ಕೈಗಳನ್ನು ಮೇಲೆತ್ತಿಕೊಂಡು ರಾಜನ ದಯೆಗಾಗಿ ಬೇಡಿಕೊಳ್ಳುತ್ತ ರಾಜನ ಶಿಬಿರದತ್ತ ನಡೆದರು.

ರಾಜನಿಗೆ ಅವರ ಆಗಮನವನ್ನು ತಿಳಿಸಲಾಗಿ ಅವರನ್ನು ಬರಮಾಡಿಕೊಳ್ಳಲು ಅವನು ತನ್ನ ಮಂತ್ರಿ ಸೊಲೆಸ್ಸೆಮಾ[1]ನಿಗೆ ಆಜ್ಞೆ ಮಾಡಿದ; ಮತ್ತು ಅವನು ಅವರನ್ನು ಬರಮಾಡಿಕೊಳ್ಳಲು ಹೊರಬಂದಾಗ ಅವರು ರಾಜನ ಕೈಯಿಂದ ದಯೆ ಅನುಭವಿಸುವೆವೆಂದು ಆಶಿಸತೊಡಗಿದರು.

ಹೀಗೆ ಅವರು ಅವನಿದ್ದೆಡೆ ಬಂದರು ಮತ್ತು ಅಲ್ಲಿ ಅವರು ಅವನ ಮುಂದೆ ಬಹಳ ನರಳುವಿಕೆ ಹಾಗೂ ಕಣ್ಣೀರುಗಳೊಂದಿಗೆ ಸಾಷ್ಟಾಂಗ ಹಾಕಿ ಅವನ ಕರುಣೆ ಮತ್ತು ಔದಾರ್ಯಕ್ಕಾಗಿ ಬೇಡಿಕೊಂಡರು.

ರಾಜ ಅವರಿಗೆ ಎದ್ದೇಳಲು ಹೇಳಿ ಅವರೆಲ್ಲರ ಪ್ರಾಣ ಹಾಗೂ ಆಸ್ತಿಗಳನ್ನು ಉಳಿಸುವುದಾಗಿಯೂ ಅವರು ಯಾವುದೆ ಭಯವಿಲ್ಲದೆ ನಗರಕ್ಕೆ ಹಿಂತಿರುಗಬೇಕೆಂದೂ ಮತ್ತು ಮರುದಿನ ತಾನು ನಗರ ಪ್ರವೇಶಿಸುವುದಾಗಿಯೂ ಹೇಳಿದ ಮತ್ತು ತನ್ನ ದಳವಾಯಿಯೊಬ್ಬನಿಗೆ ನಗರವನ್ನು ವಶಕ್ಕೆ ತೆಗೆದುಕೊಳ್ಳಲು ಆಜ್ಞಾಪಿಸಿದ.

ಮೂರರು ಈ ರೀತಿ ರಾಜನ ಹತ್ತಿರವಿದ್ದಾಗ (ಸೈನಿಕರು ನೋಡುತ್ತ ನಿಂತಿರಲು) ಕ್ರಿಸ್ಟೊವಾಒ ದ ಫಿಗ್ಯೆರೆಡೊನನ್ನು ಕಂಡರು ಮತ್ತು ನಗರದ ವಿಜಯ ಮತ್ತು ಸ್ವಾಧೀನಕ್ಕೆ ಆ ವಿದೇಶೀಯ ಕಾರಣನೆಂದೂ ಅವನು ತಮ್ಮ ದಳವಾಯಿಯನ್ನು ಕೊಂದನೆಂದೂ ಮತ್ತು ಅವನು ತನ್ನ ಜನರೊಂದಿಗೆ ಅನೇಕ ಮೂರರನ್ನು ಕೊಂದುದರಿಂದ ನಗರದ ಪತನವಾಯಿತೆಂದೂ ರಾಜನಿಗೆ ಹೇಳಿದರು. ರಾಜ ಕ್ರಿಸ್ಟೊವಾಒ ದ ಫಿಗ್ಯೆರೆಡೊನತ್ತ ದೃಷ್ಟಿ ಬೀರಿ, ತಲೆದೂಗಿ ಜನರತ್ತ ತಿರುಗಿ ಒಬ್ಬ ಒಳ್ಳೆಯ ಮನುಷ್ಯನಿಂದ ಎಂಥ ದೊಡ್ಡ ಕಾರ್ಯಗಳು ಜರುಗಬಹುದೆಂಬುದನ್ನು ಗಮನಿಸಬೇಕೆಂದು ಹೇಳಿದ. ಆ ಮೇಲೆ ಅವನು ತನ್ನ ಡೇರೆಗೆ ಮತ್ತು ನಗರದ ಜನರು ನಗರಕ್ಕೆ ಮರಳಿದರು ಮತ್ತು ರಾಜನ ಸೈನಿಕರು ಸಂತೋಷೋತ್ಸವ ಆಚರಿಸಿದರು.

### ಅಡಿಟಿಪ್ಪಣಿಗಳು

1 ಸಾಳುವ ತಿಮ್ಮ.

## ಅಧ್ಯಾಯ ೧೨

**ರಾಜ ನಗರ ಪ್ರವೇಶಿಸಿದ, ಮತ್ತು ಅವನಿಗಾಗಿ ಉತ್ಸವ ಏರ್ಪಡಿಸಿದ, ಮತ್ತು ಅವನು ಅಲ್ಲಿ ಕಟ್ಟಳೆಗಳು ಮತ್ತು ಏರ್ಪಾಡುಗಳನ್ನು ಮಾಡಿದ, ಬಗೆ.**

ಮರುದಿನ ಬೆಳಗಾದ ಕೂಡಲೆ ತನ್ನ ದಿನನಿತ್ಯದ ಮತ್ತು ವಿಜಯದ ನಂತರ ಅವರ ಪದ್ಧತಿಯಾಗಿರುವಂತೆ ದೇವರಿಗೆ ಕೃತಜ್ಞತೆ ಅರ್ಪಿಸುವ ಇತರ ಪ್ರಾರ್ಥನೆಗಳನ್ನು (ನಿಜಕ್ಕೂ ಅವರು ಪ್ರಾರ್ಥಿಸುವ ಮುಖ್ಯ ವಿಷಯವೆಂದರೆ ಇಂಥ ವಿಷಯಗಳೇ) ಸಲ್ಲಿಸಿದ ನಂತರ ಇತರ ಮಹಾ ಪ್ರಭುಗಳು ಮತ್ತು ತನ್ನ ದಳವಾಯಿಗಳೊಂದಿಗೆ ಅಶ್ವಾರೂಢನಾಗಿ ಮತ್ತು ತನ್ನ ವೈಗಾವಲಿನವರೊಂದಿಗೆ ನಗರದ ಹಾದಿ ಹಿಡಿದ. ಅಲ್ಲಿ ನಾಗರಿಕರು ಅವನ ಆಗಮನಕ್ಕಾಗಿ ಕಾದು ನಿಂತಿದ್ದರು. ಅವರು ತಮ್ಮ ನಿಜವಾದ ಭಾವನೆಗಳು ಪ್ರಮಾಣೀಕರಿಸುವುದಕ್ಕಿಂತ ಅಧಿಕ ಸಂತಸದ ಮುಖಚರ್ಯೆ ಹೊಂದಿ ಧೈರ್ಯಗೊಳ್ಳುತ್ತಲೂ ಜಯಕಾರ ಹಾಕುತ್ತ ಅವನನ್ನು ಹಿಂಬಾಲಿಸಿದರು. “ಇಷ್ಟು ವರ್ಷಗಳ ತರುವಾಯ ನಮ್ಮನ್ನು ಉಳಿಸಲು ನಿಮ್ಮನ್ನು ಕಳಿಸಿದ ದೇವರು ದೊಡ್ಡವನು” ಎಂದು ಅವರು ಜಯಕಾರ ಮಾಡುತ್ತ ಇವು ಮತ್ತು ಇತರ ಅಂಥ ಮಾತುಗಳಿಂದ ತಮ್ಮನ್ನು ಉಳಿಸಬೇಕೆಂದು ಮತ್ತು ತಮ್ಮ ಮೇಲೆ ದಯೆ ತೋರಬೇಕೆಂದು ಬೇಡಿಕೊಂಡರು. ಹೀಗೆ ದುರ್ಗಕ್ಕೆ ತೀರ ಸಮೀಪವಾಗಿ ಅವನು ನಗರದ ಅತ್ಯಂತ ಗೌರವಾನ್ವಿತ ಜನರನ್ನು ಕರೆಕಳಿಸಿದನು, ಮತ್ತು ತಾನು ಅವರ ಎಲ್ಲ ಆಸ್ತಿಯನ್ನು ಉಳಿಸುವುದಾಗಿಯೂ ಅವರು ಅದರ ಮತ್ತು ತಮ್ಮ ಸುರಕ್ಷಿತೆ ಎರಡರ ಬಗೆಗೂ ತಮಗಿಷ್ಟಬಂದಂತೆ ಸ್ವತಂತ್ರವಾಗಿ ನಡೆದುಕೊಳ್ಳಬಹುದೆಂದೂ ನಗರದಲ್ಲಿರ ಬಯಸುವವರು ಮೊದಲಿನಂತೆಯೆ ತಮ್ಮ ಹಳೆಯ ರಾಜ್ಯದಲ್ಲಿ ಉಳಿಯಬಹುದೆಂದೂ ಮತ್ತು ಬಿಟ್ಟುಹೋಗಬಯಸುವವರು ಕೂಡಲೆ ತಮ್ಮ ಎಲ್ಲ ವಸ್ತುಗಳೊಂದಿಗೆ ಹಾಗೆ ಮಾಡಬಹುದೆಂದೂ ರಾಜ ಅವರನ್ನುದ್ದೇಶಿಸಿ ಹೇಳಿದ. ಅವರೆಲ್ಲ ಆಕಾಶದತ್ತ ಕೈಯೆತ್ತಿ ತಮ್ಮೊಂದಿಗೆ ಇಂಥ ಮೃದು ವರ್ತನೆಗಾಗಿ ಕೃತಜ್ಞತೆಯಿಂದ ಸಾಷ್ಟಾಂಗ ಹಾಕಿದರು. ರಾಜ ಈ ರೀತಿ ನಿರತನಾದಾಗ ಅವನ ಸೈನಿಕರು ನಗರವನ್ನು ಲೂಟಿ ಮಾಡುತ್ತಿದ್ದಾರೆಂದು ಹೇಳಲು ಅಲ್ಲಿಗೆ ಕೆಲವರು ಬಂದರು. ಅವನು ಅದನ್ನು ತಡೆಯಲು ಕೂಡಲೆ ಕ್ರಮ ಕೈಕೊಂಡ ಮತ್ತು ಪ್ರತಿಯೊಂದನ್ನೂ ಅದರ ಒಡೆಯನಿಗೆ ಮರಳಿಸಲಾಯಿತು. ಆದರೆ ಇಂಥ ಪ್ರಸಂಗಗಳಲ್ಲಿ ಸೋತವರು ತಮಗೆ ಸ್ವಾತಂತ್ರ್ಯ ಸಿಕ್ಕರೆ ಸಾಕೆಂದು ಸಂತುಷ್ಟಗೊಂಡು ತಮಗೆ ಏನಾದರೂ ಮರಳಿ ಬರಬಹುದೆಂದು ಆಶೆ ಇಟ್ಟಿರಕೊಂಡಿರದಿದ್ದುದರಿಂದ ವಿಪುಲ ಲೂಟಿ ನಡೆದವು ; ಮತ್ತು ಇವುಗಳಲ್ಲಿ

ಕೆಲವು ನಂತರ ರಾಜನ ಕಿವಿ ತಲುಪಿದಾಗ ಅವನು ಹಾಗೆ ಮಾಡಿದವರನ್ನು ಚೆನ್ನಾಗಿ ದಂಡಿಸಿದ.

ಅಲ್ಪ ಕಾಲದಲ್ಲಿಯೆ ಇಡಲ್‌ಕಾವ್‌ನ ಸೋಲು ಭಾರತಾದ್ಯಂತ ಮತ್ತು ಅವನು ಈ ಪ್ರದೇಶಗಳ ಮಹಾ ಪ್ರಭುವಾಗಿದ್ದುದರಿಂದ ಒಳಪ್ರದೇಶದ ಇತರ ಭಾಗಗಳಲ್ಲೂ ಜಾಹೀರಾಯಿತು. ಝುಮೆಲುಕೊ ಮತ್ತು ಮಾದ್ರೆಮಲುಕೊ ಮತ್ತು ಡೆಸ್ತುಯ್ ಮತ್ತು ವಿರಿದೊರಿಗೆ ಮತ್ತು ದಖಿವ್[1] ರಾಜನ ಗುಲಾಮರಂತಿದ್ದ ಇತರ ದೊರೆಗಳಿಗೂ ತಲುಪಿದ ಕೂಡಲೆ ಅವರು ಅವನನ್ನು ದ್ವೇಷಿಸುತ್ತಿದ್ದುದರಿಂದ ಸ್ವಲ್ಪ ಮಟ್ಟಿಗೆ ಅವರು ಸಂತೋಷಪಟ್ಟರಾದರೂ ಮತ್ತೊಂದು ಕಡೆ ತಮ್ಮ ಸುರಕ್ಷಿತತೆಗಾಗಿ ಅವರು ಭಯಪಡತೊಡಗಿದರು. ಆದುದರಿಂದ ಅವರೆಲ್ಲ ದೂತರನ್ನು ಕಳಿಸಲು ಏರ್ಪಾಡು ಮಾಡಿದರು ಮತ್ತು ಆ ದೂತರು ಬಂದಾಗ ರಾಜ ಇನ್ನೂ ರಾಚೊಲ್ ನಗರದೊಳಗೆ ಇದ್ದ. ರಾಜ ಇಷ್ಟು ಭದ್ರ ನಗರವನ್ನು ವಶಪಡಿಸಿಕೊಂಡುದಕ್ಕೆ ಅವರು ಅಚ್ಚರಿಪಟ್ಟರಾದರೂ ಅವನ ಶಕ್ತಿ ಎಷ್ಟು ದೊಡ್ಡದು ಮತ್ತು ಸೈನಿಕರು ಎಷ್ಟು ಅಸಂಖ್ಯ ಎಂಬುದನ್ನು ನೋಡಿ ಇನ್ನೂ ಹೆಚ್ಚು ಅಚ್ಚರಿಪಟ್ಟರು. ಅವನಿದ್ದಲ್ಲಿಗೆ ಬಂದು ತಾವು ತಂದಿದ್ದ ಪತ್ರಗಳನ್ನು ಕೊಟ್ಟರು ಮತ್ತು ಅವುಗಳನ್ನು ಕೂಡಲೆ ಓದಲಾಯಿತು. ಇವುಗಳಲ್ಲಿ ರಾಜ ತಾನು ಮಾಡಿರುವಂತೆ ಇಡಲ್‌ಕಾವ್‌ನನ್ನು ಸೋಲಿಸಿರುವುದರಿಂದ ತೃಪ್ತನಾಗಿ ಹೆಚ್ಚಿನ ಯುದ್ಧ ಮಾಡಬಾರದೆಂದು ಆ ದೊರೆಗಳು ಹೇಳಿದ್ದರು. ಇಡಲ್‌ಕಾವ್‌ನಿಂದ ತಾನು ತೆಗೆದುಕೊಂಡುದನ್ನು ಅವನಿಗೆ ಹಿಂತಿರುಗಿಸಬೇಕೆಂದೂ ಮತ್ತು ಹಾಗೆ ಮಾಡಿದರೆ ಅವನು ಏನೆ ಆಜ್ಞೆಯಿತ್ತರೂ ತಾವು ಅದನ್ನು ಯಾವಾಗಲೂ ಪಾಲಿಸುವುದಾಗಿಯೂ ಅವರು ರಾಜನ ಔದಾರ್ಯಕ್ಕೆ ಅರಿಕೆ ಮಾಡಿಕೊಂಡರು. ಆದರೆ, ಅವನಿಗೆ ಹಾಗೆ ಮಾಡಲು ಮನಸ್ಸಿಲ್ಲದುದಾದರೆ ತಾವು ಅವನಿಗೆ ಎದುರುಬೀಳದೆ ಗತ್ಯಂತರವಿಲ್ಲ ಮತ್ತು ಕೂಡಲೆ ಇಡಲ್‌ಕಾವ್‌ನನ್ನು ಸೇರಿ ಅವನು ಕಳೆದುಕೊಂಡುದನ್ನು ಅವನಿಗಾಗಿ ಕ್ಷಿಪ್ರವಾಗಿ ಮರಳಿ ಪಡೆಯುವೆವೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂದು ಹೇಳಿದ್ದರು. ಪತ್ರಗಳಲ್ಲಿದ್ದುದೇನೆಂಬುದನ್ನು ನೋಡಿದ ರಾಜ ಕೆಳಕಂಡ ರೀತಿಯಲ್ಲಿ ಅವರೆಲ್ಲರಿಗೂ ಒಂದೇ ಪತ್ರದ ಮೂಲಕ ಉತ್ತರಿಸಿದ : "ಮಾನ್ಯರಾದ ಮಾದ್ರೆಮಲುಕೊ, ಝುಮೆಲುಕೊ, ದೇಸ್ಕರ ಮತ್ತು ದಖಿವ್ ರಾಜ್ಯದ ಉಳಿದೆಲ್ಲರಿಗೆ, ನಾನು ನಿಮ್ಮ ಪತ್ರಗಳನ್ನು ನೋಡಿರುವೆ ಮತ್ತು ನೀವು ಹೇಳಿಕಳಿಸುದುದಕ್ಕೆ ತುಂಬ ಖುಷಿಯಾಗಿರುವೆ. ಇಡಲ್‌ಕಾವ್‌ನ ಬಗೆಗಾದರೊ ನಾನು ಅವನಿಗೆ ಮಾಡಿದುದಕ್ಕೆ ಮತ್ತು ಅವನಿಂದ ಪಡೆದುದಕ್ಕೆ ಅವನು ತೀರ ತಕ್ಕವನಾಗಿದ್ದಾನೆ ; ಅದನ್ನು ಅವನಿಗೆ ಹಿಂತಿರುಗಿಸುವ ಬಗೆಗಾದರೊ ಅದು ಯೋಗ್ಯವಾದುದಲ್ಲವೆಂದು ತೋರುತ್ತದೆ ಮತ್ತು ನಾನು ಹಾಗೆ ಮಾಡುವುದೂ ಇಲ್ಲ. ಮತ್ತು ನಾನು ನೀವು ಕೇಳಿದಂತೆ ಮಾಡದಿದ್ದರೆ ನೀವೆಲ್ಲ ಅವನ ಸಹಾಯಾರ್ಥವಾಗಿ ನನಗೆ

ಎದುರುಬೀಳುವಿರೆಂಬ ಹೇಳಿಕೆಯ ಬಗೆಗಾದರೂ ನೀವು ಇಲ್ಲಿಗೆ ಬರುವ ಶ್ರಮ ವಹಿಸುವುದು ಬೇಡ. ಏಕೆಂದರೆ, ನೀವು ನಿಮ್ಮ ನೆಲಗಳಲ್ಲಿಯೆ ಕಾಯುವ ಧೈರ್ಯ ಮಾಡುವಿರಾದರೆ ನಾನೇ ನಿಮ್ಮನ್ನು ಹುಡುಕಿಕೊಂಡು ಬರುವೆ: ಮತ್ತು ಇದೇ ನಾನು ನಿಮಗೆ ಕಳಿಸುವ ಉತ್ತರ." ಮತ್ತು ಅವನು ದೂತರಿಗೆ ಅನೇಕ ಕಾಣಿಕೆಗಳನ್ನು ಕೊಡುವಂತೆ ಆಜ್ಞಾಪಿಸಿ ಅವರಿಗೆ ತನ್ನ ಪತ್ರವಿತ್ತು ಕಳಿಸಿಕೊಟ್ಟ.

## ಅಡಿ ಟಿಪ್ಪಣಿಗಳು

1 ರೇ ದಖಿವ್ ಅಂದರೆ ದಕ್ಖನದ ರಾಜ. ಇದು ಸ್ಪಷ್ಟವಾಗಿಯೆ ಬಹಮನಿ ರಾಜನನ್ನು ಸೂಚಿಸುತ್ತದೆ. ಇಡಿ ನಾಡು ದಂಗೆಯೆದ್ದು ಐದು ಸ್ವತಂತ್ರ ರಾಜ್ಯಗಳಲ್ಲಿ ಒಡೆದುಹೋಗಿದ್ದರೂ ಅವನನ್ನು ಇನ್ನೂ ನಾಮಮಾತ್ರದ ಸಾರ್ವಭೌಮನೆಂದು ಪರಿಗಣಿಸಲಾಗಿತ್ತು. ಇವರ ಹಿಂದೆ ಬರುವ ಹೆಸರುಗಳಿಗಾಗಿ ಮೇಲೆ ಪು. ೩೨೫ರ ಟಿಪ್ಪಣಿ ನೋಡಿರಿ.

## ಅಧ್ಯಾಯ ೧೩

**ಬಹಳ ಜನ ನಗರವನ್ನು ಬಿಟ್ಟು ನಡೆದ, ಹಾಗೂ ರಾಜ ಅವರಿಗೆ ತುಂಬಾ ದಯೆ ತೋರಿದ, ಬಗೆ.**

ಅನೇಕ ಜನರು ನಗರವನ್ನು ಬಿಟ್ಟು ನಡೆದರು, ಮತ್ತು ತೆರಳಲು ಏನೂ ಇಲ್ಲದವರಿಗೆ ರಾಜ ಅವರ ಪಯಣಕ್ಕೆ ಬೇಕಾದುದೆಲ್ಲವನ್ನು ಕೊಡುವಂತೆ ಆಜ್ಞಾಪಿಸಿದ. ರಾಜ ಇಲ್ಲಿ ನಗರದ ಆಡಳಿತಕ್ಕೋಸ್ಕರ ಅಗತ್ಯವಿದ್ದ ಎಲ್ಲ ಏರ್ಪಾಟುಗಳನ್ನು ಮಾಡಿದ ನಂತರ ಕೆಲವು ದಿನ ನಿಂತ. ಮತ್ತು ಗೋಡೆಗಳನ್ನು ದುರಸ್ತಿ ಮಾಡಿದ ನಂತರ ಆ ಊರನ್ನು ರಕ್ಷಿಸಲು ಸಾಕಷ್ಟು ಸೈನಿಕರನ್ನು ಇಟ್ಟು ಬಿಸ್ನಗದ ದಾರಿ ಹಿಡಿದ. ಅಲ್ಲಿ ಅವನನ್ನು ಅತ್ಯಂತ ವೈಭವದಿಂದ ಸ್ವಾಗತಿಸಲಾಯಿತು ಮತ್ತು ದೊಡ್ಡ ಉತ್ಸವಗಳನ್ನು ಏರ್ಪಡಿಸಲಾಯಿತು ಮತ್ತು ಅವನು ತನ್ನ ಸೈನಿಕರಿಗೆ ಉದಾರ ಕಾಣಿಕೆಗಳನ್ನು ನೀಡಿದ.

ಉತ್ಸವಗಳು ಮುಗಿದ ಕೂಡಲೆ ಅವನು ಹೊಸ ನಗರಕ್ಕೆ ನಡೆದ. ಮತ್ತು ಅಲ್ಲಿರುವಾಗ ಇಡಲ್‌ಕಾವ್‌ನ ರಾಯಭಾರಿಯೊಬ್ಬ ಹೇಗೆ ಬಂದನೆಂದು ಅವನಿಗೆ ತಿಳಿಸಲಾಯಿತು. ಅವನಿಗಾಗಲೆ ಒಬ್ಬ ರಾಯಭಾರಿ ಬಂದುದು ತಿಳಿದಿತ್ತು ಆದರೆ ತನಗೆ ಗೊತ್ತಿಲ್ಲದಂತೆ ನಟಿಸಿದ. ಏಕೆಂದರೆ, ಯಾವುದೆ ರಾಯಭಾರಿಯನ್ನು ಬರಮಾಡಿಕೊಳ್ಳಲು ಯಾರನ್ನಾದರೂ ಕಳಿಸಿಕೊಡುವುದು ರಾಜನ ವಾಡಿಕೆಯಾಗಿರಲಿಲ್ಲ. ಈ ರಾಯಭಾರಿ ಬಿಸ್ನಗ ನಗರದಲ್ಲಿದ್ದುದರಿಂದ ರಾಜ ಬಿಸ್ನಗದಿಂದ ಎರಡು ಹರದಾರಿ ದೂರವಿರುವ ಹೊಸ ನಗರದಲ್ಲಿರುವುದನ್ನು ತಿಳಿದು ಅಲ್ಲಿಗೆ ನಡೆದ. ನಗರದ ಹತ್ತಿರ ತನ್ನ ಡೇರೆ ನಿಲ್ಲಿಸಲು ತನ್ನ ಜನರಿಗೆ ಹೇಳಿದ ಆ ಡೇರೆ ಅದುವರೆಗೆ ಆ ಪ್ರದೇಶದಲ್ಲಿ ಕಂಡರಿಯದಷ್ಟು ಅತ್ಯುತ್ತಮವಾದುದು ಮತ್ತು ಅತಿ ಸುಂದರವಾದುದು ಮತ್ತು ಬೆಲೆ ಬಾಳುವಂಥದು ಆಗಿತ್ತು. ಈ ರಾಯಭಾರಿಯ ಹೆಸರು ಮಾಟುಕೊಟವ್ ಎಂದಿತ್ತು. ಅವನು ತನ್ನೊಂದಿಗೆ ತನ್ನ ಸೇವೆಗಾಗಿ ನೂರೈವತ್ತು ಕುದುರೆ ಮತ್ತು ಬಹಳ ಜನರಲ್ಲದೆ ಅನೇಕ ಹೇರುಪ್ರಾಣಿಗಳನ್ನು ತಂದಿದ್ದ. ಅವುಗಳಲ್ಲಿ ಕೆಲವು ಒಂಟೆಗಳೂ ಇದ್ದವು. ಇಡಲ್‌ಕಾವ್‌ನ ಮಂತ್ರಾಲೋಚನೆ ಸಭೆಯ ಇಬ್ಬರು ಲಿಪಿಕಾರರನ್ನೂ ಅವನು ಕರೆತಂದುದರಿಂದ ನಿಜಕ್ಕೂ ಅವನು ಇಡಲ್‌ಕಾವ್‌ನ ಎಲ್ಲ ಅಧಿಕಾರದೊಂದಿಗೆ ಬಂದಿದ್ದನೆಂದು ನಂಬಬಹುದಿತ್ತು.

ತಾನು ಹೀಗೆ ತಳವೂರಿದ ಕೂಡಲೆ ರಾಯಭಾರಿ ತನ್ನ ಆಗಮನವನ್ನು ತಿಳಿಸಲು ರಾಜನಲ್ಲಿಗೆ ಕಳಿಸಿ ಮಹಾಪ್ರಭು ತನಗೆ ಸಂದರ್ಶನ ನೀಡುವಂತೆ ಮತ್ತು ವಿಳಂಬ ಮಾಡದೆ ತನ್ನನ್ನು ಅಲ್ಲಿಂದ ಕಳಿಸಿಕೊಡುವಂತೆ ಅರಿಕೆ ಮಾಡಿಕೊಂಡ. ಅವನನ್ನು

ನೋಡುವುದಾಗಿ ರಾಜ ಉತ್ತರಿಸಿದ ಮತ್ತು ತಾನೂ ಈಗ ತಾನೆ ಬಂದುದರಿಂದ ಅವನು ಆತುರಪಡಬಾರದೆಂದೂ ಸಮಯ ಬಂದಾಗ ತಾನು ಅವನಿಗೆ ಹೋಗಲು ಅನುಮತಿ ನೀಡುವುದಾಗಿಯೂ ಹೇಳಿಕಳಿಸಿದ. ಹೀಗಾಗಿ, ರಾಜ ಅವನನ್ನು ನೋಡಲು ಕರೆಕಳಿಸದೆ ಮತ್ತು ಅವನು ಏಕೆ ಬಂದಿರುವನೆಂದು ಕೇಳಿ ತಿಳಿದುಕೊಳ್ಳ ಬಯಸದೆ ರಾಯಭಾರಿ ಅಲ್ಲಿ ಒಂದು ತಿಂಗಳು ಇದ್ದ. ಅವನು ದಿನವೂ ಅರಮನೆಗೆ ಹೋಗುತ್ತಿದ್ದ ಮತ್ತು ತನ್ನೊಂದಿಗೆ ರಾಜ ಹೇಗೆ ನಡೆದುಕೊಳ್ಳುತ್ತಿದ್ದನೆಂಬುದನ್ನು ನೋಡಿ ಅವನು ಹೆಚ್ಚಿಗೆ ಮಾತನಾಡದಿರಲು, ಆದರೆ ರಾಜ ಕರೆಕಳಿಸುವ ತನಕ ಕಾಯ್ದಿರಲು ನಿರ್ಧರಿಸಿದ. ಆದರೂ ಅವನು ದಿನಾಲು ಅರಮನೆಗೆ ಹೋಗಿ ಮನ್ನೆಯ ರೊಂದಿಗೆ ಮಾತನಾಡುವುದನ್ನು ನಿಲ್ಲಿಸಲಿಲ್ಲ. ಒಂದು ದಿನ ರಾಜ ರಾಯಭಾರಿಗೆ ಮರುದಿನ ಶುಭದಿನವೆಂದೂ ಮತ್ತು ಅವನನ್ನು ಕೇಳಿ ಅವನು ಬಂದುದೇಕೆಂದು ತಿಳಿಯಬಯಸಿರುವುದಾಗಿಯೂ ಹೇಳಿ ಕಳಿಸಿದ. ಮತ್ತು ರಾಯಭಾರಿ ಅಂಥ ಮಹಾ ಪ್ರಭುವಿನ ಮುಂದೆ ಹಾಜರಾಗಲು ಉಚಿತವಾದಂತೆ ಸಿದ್ಧತೆ ಮಾಡಿಕೊಂಡ. ತನ್ನ ಉದ್ದಿಷ್ಟ ಕಾರ್ಯ ಹಾಗೂ ತಾನು ಮಾಡಬೇಕಿದ್ದ ಅರಿಕೆಗನುಗುಣವಾಗಿ ನಗರದಲ್ಲಿದ್ದ ಅನೇಕ ಮೂರರನ್ನು ಜೊತೆಗಿರಿಸಿಕೊಂಡಿದ್ದ ಮತ್ತು ಪದ್ಧತಿಗನುಸಾರವಾಗಿ ತನ್ನೊಂದಿಗೆ ತಮ್ಮ ಕಹಳೆ ನಗಾರಿಗಳೊಂದಿಗೆ ತನ್ನೆಲ್ಲ ಜನರನ್ನೂ ಇರಿಸಿಕೊಂಡಿದ್ದ. ಮತ್ತು ಈ ರೀತಿ ಅವನು ಅರಮನೆಗೆ ಹೋದ. ಅಲ್ಲಿ ಮನ್ನೆಯರು ಮತ್ತು ರಾಜಪರಿ ವಾರದ ಅಧಿಕಾರಿಗಳು ಅವನನ್ನು ಗೌರವದಿಂದ ಬರಮಾಡಿಕೊಂಡರು. ರಾಜನಿದ್ದಲ್ಲಿಗೆ ಪ್ರವೇಶಿಸಲು ರಾಜನ ಅನುಮತಿಯ ಸಂದೇಶಕ್ಕಾಗಿ ಕಾಯುತ್ತ ಅವರು ಪ್ರಥಮ ದ್ವಾರದೊಳಗೆ ಕುಳಿತುಕೊಂಡರು ಮತ್ತು ಅವನನ್ನು ಪ್ರವೇಶ ಮಾಡಗೊಡಲು ಆಜ್ಞೆ ಬರಲು ಬಹಳ ವಿಳಂಬವೇನಾಗಲಿಲ್ಲ. ತನ್ನ ರೀತಿರಿವಾಜಿಗನು ಗುಣವಾಗಿ ರಾಜನಿಗೆ ಪ್ರಣಾಮ ಸಲ್ಲಿಸಲಾಗಿ, ರಾಜನ ಮಂತ್ರಾಲೋಚನೆ ಮಂಡಲಿಯ ಸದಸ್ಯರು ರಾಜನ ಬದಿ ನಿಂತಿರಲು, ರಾಜ ಕೃಪೆದೋರಿ ಆಲಿಸಲು ಸಿದ್ಧನಾಗಿರಲು ತನ್ನ ರಾಯಭಾರದ ವಿವರಗಳನ್ನು ಹೇಳಲು ಕೇಳಲಾಯಿತು. ರಾಜ ಹೀಗೆ ಆಜ್ಞೆಯಿತ್ತುದನ್ನು ನೋಡಿ ರಾಯಭಾರಿ ಇಂಥ ದೊಡ್ಡ ರಾಜನ ಸನ್ನಿಧಿ ಯಲ್ಲಿರುವಾಗ ಇಂಥ ರಾಯಭಾರಿಗಳು ತಾಳುವ ಭಯಭಕ್ತಿಯ ಚರ್ಯೆಯೊಂದಿಗೆ ಕೆಳಕಂಡ ರೀತಿಯಲ್ಲಿ ತನ್ನ ಸಂದೇಶವನ್ನು ಅರುಹಿದ.

## ಅಧ್ಯಾಯ ೧೪

### ದಳವಾಯಿ ರಾಜನ ಮುಂದೆ ತನ್ನ ರಾಯಭಾರವನ್ನು ನಿಭಾಯಿಸಿದ ಬಗೆ

"ಪ್ರಭುವೆ, ನನ್ನ ಒಡೆಯ ಇಡಲ್‌ಕಾವ್ ನನ್ನನ್ನು ನಿಮ್ಮಲ್ಲಿಗೆ ಕಳಿಸಿರುವನು: ಮತ್ತು ನೀವು ನ್ಯಾಯ ಒದಗಿಸಲು ಸಂತೋಷಿಸುವಿರಾಗಿ ನನ್ನ ಮುಖದಿಂದ ಅರಿಕೆ ಮಾಡುತ್ತಾನೆ. ಪ್ರಪಂಚದಲ್ಲಿಯೆ ಅತ್ಯಂತ ಬಲಶಾಲಿ ರಾಜ ಮತ್ತು ಅತ್ಯಧಿಕ ನ್ಯಾಯ ಮತ್ತು ಸತ್ಯನಿಷ್ಠನೊಬ್ಬನ ವಿಷಯದಲ್ಲಿಯಂತೆ ನಿಮ್ಮ ವಿಷಯದಲ್ಲಿ ಅವನು ಅತಿ ಸದ್ಭಾವನೆ ಹೊಂದಿರುವನೆಂದು, ನೀವು ಅವನೊಂದಿಗಿದ್ದ ಮೈತ್ರಿ ಮತ್ತು ಶಾಂತಿ ಒಪ್ಪಂದವನ್ನು ಅಷ್ಟೆ ಅಲ್ಲ, ಅನೇಕ ವರ್ಷಗಳ ಹಿಂದೆ ಮಾಡಿಕೊಳ್ಳಲಾಗಿದ್ದ ಮತ್ತು ಎಲ್ಲ ರಾಜರಿಂದ ನಿಷ್ಠೆಯಿಂದ ಪಾಲಿಸಿಕೊಂಡು ಬಂದಿದ್ದ ಶಾಂತಿ ಒಪ್ಪಂದವನ್ನು ಕಾರಣವಿಲ್ಲದೆ ಭಂಗಮಾಡಿರುವಿರಿ, ನೀವು ನಿಮ್ಮ ರಾಜ್ಯ ಬಿಟ್ಟುಬಂದು ಅವನ ಮೇಲೆ ಇಂಥ ಯುದ್ಧವನ್ನೇಕೆ ಮಾಡಿದಿರೆಂಬುದು ಅವನಿಗೆ ತಿಳಿಯದು, ನೀವು ರಾಚೊಲ್ ನಗರಕ್ಕೆ ಮುತ್ತಿಗೆ ಹಾಕಿದ ಹಾಗೂ ಸುತ್ತಲಿನ ಪ್ರದೇಶವನ್ನು ಲೂಟಿ ಹಾಗೂ ನಾಶ ಮಾಡಿದ ಸುದ್ದಿ ತಂದು ಹೇಳಿದಾಗ ಅವನು ಸಂಶಯವಿರದೆ ಇದ್ದ, ಆ ಸುದ್ದಿ ಅವನನ್ನು ಹೊರಬಂದು ಅದರ ರಕ್ಷಣೆ ಮಾಡಲು ಹಚ್ಚಿತು, ಆಗ ನಿಮ್ಮಿಂದ ಅವನ ದರಬಾರದ ಎಲ್ಲ ಜನರು ಕೊಲ್ಲಲ್ಪಟ್ಟರು. ಅವನ ಶಿಬಿರವನ್ನು ಲೂಟಿ ಹಾಗೂ ನಾಶ ಮಾಡಲಾಯಿತು. ನೀವೆ ಸ್ವತಃ ಅದಕ್ಕೆ ಒಳ್ಳೆಯ ಸಾಕ್ಷಿಯಾಗಿರುವಿರಾದುದರಿಂದ ಅದಕ್ಕೆ ಪರಿಹಾರ ಒದಗಿಸಬೇಕೆಂದು ಮತ್ತು ಅವನಿಂದ ಕಿತ್ತುಕೊಂಡ ಫಿರಂಗಿ ಮತ್ತು ಡೇರೆಗಳು, ಕುದುರೆಗಳು ಮತ್ತು ಆನೆಗಳನ್ನು ಇತರ ವಸ್ತುಗಳೊಂದಿಗೆ ಅವನಿಗೆ ಮರಳಿಸಬೇಕೆಂದು ಅರಿಕೆ ಮಾಡಿಕೊಳ್ಳುತ್ತಾನೆ. ಈ ಆಸ್ತಿ ಮತ್ತು ಇತರ ವಸ್ತುಗಳ ಬಗೆಗೆ ಅವನು ಅರಿಕೆ ಮಾಡಿಕೊಳ್ಳುತ್ತಿರುವ ಸಮಾಧಾನವನ್ನು ನೀವು ನೀಡಿದಿರಾದರೆ ಅವನು ನಿಮಗೆ ಸದಾ ನಿಷ್ಠ ಮಿತ್ರನಾಗುವನು. ಇಲ್ಲದಿದ್ದರೆ, ನಿಮಗೆ ಸಂತೋಷ ನೀಡಿರಬಹುದಾಗಿದ್ದರೂ ನಿಮ್ಮ ಕ್ರಮ ಕೆಟ್ಟದ್ದು ಎಂದು ತಿಳಿಸಲು ಅಪ್ಪಣೆಯಿತ್ತಿರುವನು." ಹೀಗೆ ಹೇಳಿ ಅವನು ಹೆಚ್ಚಿಗೆ ಹೇಳದೆ ಮುಕ್ತಾಯಗೊಳಿಸಿದನು. ಅವನು ಹಿಂತಿರುಗಿ ಹೋಗಿ ವಿಶ್ರಮಿಸಬಹುದೆಂದೂ ಮರುದಿನ ಅವನು ಹೊರಡಲು ಅನುಮತಿ ನೀಡಲಾಗುವುದೆಂದೂ ರಾಜ ಹೇಳಿದ. ಮತ್ತು ಅವನಿಗೆ ರೇಷ್ಮೆಯ ನೀಳುಡುಪು ಹಾಗೂ ಬಟ್ಟೆಗಳನ್ನು ಕೊಡಮಾಡಿದ.

## ಅಧ್ಯಾಯ ೧೫

### ರಾಜ ರಾಯಭಾರಿಯನ್ನು ಕರೆಕಳಿಸಿ ಅವನಿಗೆ ನೀಡಿದ ಉತ್ತರ ಕುರಿತು

ಮರುದಿನ ರಾಜ ರಾಯಭಾರಿಯನ್ನು ಕರೆಕಳಿಸಿ ಅವರ ಮಧ್ಯೆ ಇತರ ವಿಷಯುಗಳ ಬಗೆಗೆ ಮಾತುಗಳಾದ ಮೇಲೆ, ಇಡಲ್‌ಕಾವ್ ಬಂದು ತನ್ನ ಪಾದವನ್ನು ಚುಂಬಿಸುವುದಾದರೆ ಅವನ ಇಚ್ಛೆಯಂತೆ ಇಡಲ್‌ಕಾವ್‌ನಿಗೆ ಎಲ್ಲವನ್ನೂ ಹಿಂತಿರುಗಿಸಲು ಮತ್ತು ತಕ್ಷಣ ಸಲಬಟಕಾವ್‌ನನ್ನು ಸಂತೋಷದಿಂದ ಬಿಡುಗಡೆ ಗೊಳಿಸುವುದಾಗಿ ರಾಜ ನುಡಿದ. ರಾಜನ ಉತ್ತರ ಕೇಳಿದ ಮೇಲೆ ರಾಯಭಾರಿ ಅವನ ಅಪ್ಪಣೆ ಪಡೆದು ತನ್ನ ಡೇರೆಗೆ ತೆರಳಿದ ; ಮತ್ತು ಅವನು ಆದುದನ್ನು ವಿವರಿಸಿ ಇಡಲ್‌ಕಾವ್‌ನಿಗೆ ಬರೆದು ತನ್ನೊಂದಿಗೆ ಬಂದಿದ್ದ ಲಿಪಿಕಾರರಲ್ಲೊಬ್ಬನನ್ನು ಅವನಲ್ಲಿಗೆ ಕಳಿಸಿದನು. ಬಹಳ ಕಾಲವಾಗುವ ಮುಂಚೆಯೆ ಇಡಲ್‌ಕಾವ್ ಅವನಿಗೆ ಹೀಗೆ ಉತ್ತರ ಕಳುಹಿಸಿದ : ಅವನು ಬಿಸ್ನಗಕ್ಕೆ ಹೋಗಲಾರನಾದುದರಿಂದ ತನಗೆ ರಾಜ ನನ್ನು ಭೆಟ್ಟಿಯಾಗುವುದು ಹೇಗೆ ಸಾಧ್ಯ ? ಆದರೂ ಸಹ ರಾಜ ಇಷ್ಟಪಟ್ಟುದನ್ನು ಹರುಷಪಟ್ಟು ಮಾಡಲು ಪೂರ್ಣ ಮನಸ್ಸಿದೆ. ಈ ಉತ್ತರದೊಂದಿಗೆ ರಾಯಭಾರಿ ರಾಜನಲ್ಲಿಗೆ ಹೋದ, ಮತ್ತು ರಾಜ ತಾನು ಇಡಲ್‌ಕಾವ್‌ನಿಂದ ಪಡೆದುದೆಲ್ಲಕ್ಕಿಂತ ಇಡಲ್‌ಕಾವ್ ಬಂದು ತನ್ನ ಪಾದ ಚುಂಬಿಸುವುದಕ್ಕೆ ಹೆಚ್ಚಿನ ಮಹತ್ವ ನೀಡಿದ್ದುದ ರಿಂದ ಅವನು ರಾಯಭಾರಿಗೆ ಹೀಗೆಂದ : "ನೀನು ಇಡಲ್‌ಕಾವ್‌ನನ್ನ ರಾಜ್ಯದ ಗಡಿಗೆ ಬರುವಂತೆ ಮಾಡು, ಏಕೆಂದರೆ ನಾನು ಕ್ಷಿಪ್ರದಲ್ಲಿಯೆ ಅಲ್ಲಿರುವೆ". ಇದಕ್ಕೆ ಒಪ್ಪಿಕೊಂಡು ರಾಯಭಾರಿ ಗಡಿಗೆ ಬರುವಂತೆ ಇಡಲ್‌ಕಾವ್‌ನನ್ನು ಮನವೊಲಿಸಲು ತೆರಳಿದ. ರಾಜನಂತೂ ಗಡಿಗೆ ಹತ್ತಿರವಿರುವ ಮುದುಗಲ್[1] ಎಂಬ ನಗರಕ್ಕೆ ಕೂಡಲೆ ಹೊರಟ ಮತ್ತು ಇಡಲ್‌ಕಾವ್ ಬರುತ್ತಿರುವನು ಮತ್ತು ಆಗಲೆ ಹತ್ತಿರದಲ್ಲಿದ್ದಾನೆ ಎಂದು ಹೇಳುವವರೆಗೆ ಅವನು ಅಲ್ಲಿ ಕಾಯ್ದ. ತಕ್ಷಣ ರಾಜ ಅವನನ್ನು ಭೆಟ್ಟಿ ಯಾಗಲು ನಡೆದ ಮತ್ತು ದಖಿಮ್ ರಾಜ್ಯವನ್ನು ಪ್ರವೇಶಿಸಿದ. ಇಡಲ್‌ಕಾವ್‌ನನ್ನು ಭೆಟ್ಟಿಯಾಗಲು ಅವನು ಅಷ್ಟೊಂದು ಉತ್ಸುಕನಾಗಿದ್ದ. ಆದರೆ, ಎಷ್ಟು ಹೇಳಿದರೂ ಇಡಲ್‌ಕಾವ್ ರಾಜನನ್ನು ಭೆಟ್ಟಿಯಾಗುವ ಧೈರ್ಯ ಮಾಡಲಿಲ್ಲ. "ಅದೋ, ಅವನು ತೀರ ಹತ್ತಿರದಲ್ಲಿಯೇ ಇದ್ದಾನೆ" ಎಂದು ಅವರು ಹೇಳುತ್ತಿದ್ದಂತೆಯೆ ರಾಜ ಎಷ್ಟು ದೂರ ಪಯಣಿಸಿದನೆಂದರೆ ದಖಿಮ್‌ದ ರಾಜ್ಯದಲ್ಲೆಲ್ಲ ಅತ್ಯುತ್ತಮ ನಗರವಾಗಿದ್ದ ಬಿಜಪೂರ್‌ವರೆಗೂ[2] ಬಂದುಬಿಟ್ಟ ನಮ್ಮ ಶೈಲಿಯಂತೆಯೆ ಕಟ್ಟಲಾದ ಅಸಂಖ್ಯ ಮನೆಗಳಿದ್ದ ಅದು ಅನೇಕ ತೋಟಗಳನ್ನು ಮತ್ತು ದ್ರಾಕ್ಷಿ ಬಳ್ಳಿಯಿಂದ ಮಾಡಿದ ಮಂಟಪಗಳನ್ನು, ಮತ್ತು ದಾಳಿಂಬ ಮತ್ತು ಕಿತ್ತಳೆ ಮತ್ತು ಲಿಂಬೂ ಮತ್ತು ಇತರ ಎಲ್ಲ ತರಹದ ತೋಟೋತ್ಪನ್ನಗಳನ್ನು ಹೊಂದಿದೆ.

ರಾಜ ಅಲ್ಲಿಗೆ ನಡೆದ. ಏಕೆಂದರೆ, ಇಂಥ ಒಳ್ಳೆಯ ನಗರದಲ್ಲಿ ಇಡಲ್‌ಕಾವ್‌ನ ಬರುವಿಕೆಗಾಗಿ ಕಾಯುವುದು ಅವನಿಗೆ ಒಳ್ಳೆಯದೆನಿಸಿತು. ಅವನು ಇಲ್ಲಿ ಸಿಕ್ಕರೆ, ತನಗೆ ತೋರಿದ ಅವಮರ್ಯಾದೆಗಾಗಿ, ಅವನನ್ನು ಸೆರೆಹಿಡಿಯುವುದಾಗಿ ಇಲ್ಲವೆ ಕೊಲ್ಲಲು ಆಜ್ಞೆಯೀಯುವುದಾಗಿ ನಿರ್ಧಾರ ಕೈಗೊಂಡ; ಮತ್ತು ತನ್ನ ವೈರಿ ಬರುವ ಧೈರ್ಯಮಾಡದಿದ್ದುದನ್ನು ಕಂಡು ಅವನು ನಗರದಲ್ಲಿ ಹಲವಾರು ದಿನ ಉಳಿದ. ಆ ಮೇಲೆ ನೀರು ಸಾಲದ್ದರಿಂದ ಅವನು ಅಲ್ಲಿಂದ ಹೊರಟ. ಏಕೆಂದರೆ ಈ ನಗರ. ಬಯಲುಸೀಮೆಯಲ್ಲಿದ್ದು ಮಳೆಯ ನೀರು ಬಂದು ಸೇರುವ ಎರಡು ಕೆರೆಗಳನ್ನು ಬಿಟ್ಟರೆ ಬೇರೆ ನೀರು ಇಲ್ಲದುದ್ದರಿಂದ ರಾಜ ತಮ್ಮ ನಾಡಿನಲ್ಲಿ ನಿಲ್ಲಲು ಶಕ್ಯವಾಗದಂತೆ ಮಾಡಲೋಸುಗ ಮೂರರು ಇವುಗಳನ್ನು ಒಡೆದು ನೀರು ಸೋರಿಹೋಗುವಂತೆ ಮಾಡಿದ್ದರು. ಈ ಕಾರಣಕ್ಕಾಗಿ ಅಲ್ಲಿಂದ ತೆರಳುವುದು ಉಚಿತವೆಂದು ರಾಜನಿಗೆ ತೋರಿತು. ಆದರೆ ನಗರವನ್ನು ಬಿಡುವಾಗ ಅದನ್ನು ಹೆಚ್ಚುಕಡಿಮೆ ಭಗ್ನಾವಶೇಷಗಳ ಸ್ಥಿತಿಗೆ ತರಲಾಗಿತ್ತು. ರಾಜನೇನೆ ಅದನ್ನು ನಾಶಪಡಿಸಲು ಆಜ್ಞೆಯಿತ್ತಿರಲಿಲ್ಲ. ಆದರೆ, ಅವನ ಸೈನಿಕರು ಅಡಿಗೆಗೆ ಬೆಂಕಿ ತಯಾರಿಸಲು ಎಷ್ಟೋಂದು ಮನೆಗಳನ್ನು ಕೆಡವಿದ್ದರೆಂದರೆ ಅದನ್ನು ನೋಡಲು ಬಹಳ ಖೇದವಾಗುತ್ತಿತ್ತು. ಇದಕ್ಕೆ ಕಾರಣವೆಂದರೆ ಅವರಿಗೆ ಬಹಳ ದೂರದಿಂದ ಬರುತ್ತಿದ್ದ ಸೌದೆಯ ಕೊರತೆ ಆ ನಾಡಿನಲ್ಲಿದ್ದುದು. ಅವುಗಳನ್ನು ನಾಶಪಡಿಸಲು ಆಜ್ಞೆಯೀಯುವಂತೆ ತನ್ನ ದಳವಾಯಿಗಳ ಮನೆಗಳು ಏನು ತಪ್ಪು ಮಾಡಿದ್ದವೆಂದು ಕೇಳಲು ಇಡಲ್‌ಕಾವ್ ರಾಜನಲ್ಲಿಗೆ ಕಳಿಸಿದ. ಏಕೆಂದರೆ, ರಾಜ ತಾನೇ ಅಲ್ಲಿದ್ದುದರಿಂದ ಇಡಲ್‌ಕಾವ್‌ನ ಅರಮನೆಗಳನ್ನು ಬಿಟ್ಟರೆ ಬೇರಾವ ಮನೆಗಳೂ ಉಳಿದಿರಲಿಲ್ಲ. ಅದನ್ನು ಮಾಡಿದವನು ತಾನಲ್ಲ ಆದರೆ ತನ್ನ ಜನರನ್ನು ನಿಯಂತ್ರಿಸಲು ತನಗೆ ಆಗಲಿಲ್ಲ ಎಂದು ರಾಜ ಉತ್ತರ ಕಳಿಸಿದ.

ರಾಜ ಮೊದಗಲ್ಲಿಗೆ ಹೋದಾಗ ಇಡಲ್‌ಕಾವ್ ಬಿಗಾಪೊರಿಗೆ ಮರಳಿದ. ಅದರಲ್ಲಿ ಮಾಡಲಾಗಿದ್ದ ಧ್ವಂಸವನ್ನು ಕಂಡು ತಾನು ರಾಜನಲ್ಲಿಗೆ ಹೋಗಿದ್ದರೆ ಇಂಥ ಹಾನಿ ಉಂಟಾಗುತ್ತಿರಲಿಲ್ಲ ಮತ್ತು ಇನ್ನು ಮುಂದಾದರೂ ತಾನು ಹಾಗೆ ಮಾಡಬೇಕೆಂದು ಅನ್ನುತ್ತ ಇಂಥ ಹಾನಿ ಮಾಡಲಾಗಿದ್ದುದಕ್ಕೆ ತನ್ನನ್ನು ತಾನೆ ದೂಷಿಸಿಕೊಂಡ. ತನ್ನ ಮಟ್ಟಿಗೆ ಹಾಗೆ ಮಾಡಲು ಸಿದ್ಧವಾಗಿದ್ದರೂ ತನಗೆ ತಪ್ಪು ಸಲಹೆ ನೀಡಲಾಗಿತ್ತೆಂದು ಅವನೆಂದ. ತಾನು ರಾಜನ ಮೈತ್ರಿಗಳಿಸಿದ್ದರೆ ತನ್ನ ಸ್ಥಿತಿ ಎಷ್ಟು ಸುರಕ್ಷಿತವಾಗಿರುತ್ತಿತ್ತು, ಅವನೊಂದಿಗೆ ಸ್ನೇಹ ಬೆಳೆಸಿದ್ದರೆ ತನ್ನ ರಾಜ್ಯದ (ದೊಡ್ಡಸ್ತಿಕೆಯನ್ನು) ಇನ್ನೂ ಹೆಚ್ಚಿಸಬಹುದಿತ್ತು, ಮತ್ತು ರಾಜನ ಅನುಗ್ರಹದಿಂದ ತನ್ನ ಇಚ್ಛೆಗಳನ್ನೆಲ್ಲ ಈಡೇರಿಸಬಹುದಿತ್ತು ಎಂಬುದನ್ನು ಅವರ ಮುಂದಿಟ್ಟು ತನ್ನ ಸಲಹೆಗಾರರೊಂದಿಗೆ ಸಮಾಲೋಚಿಸಿದ. ಈ ವಿಷಯಗಳು ಮತ್ತು ಇದೇ ತೆರನ ಇತರ ವಿಷಯಗಳ ಬಗೆಗೆ ತನ್ನ ಸಲಹೆಗಾರರೊಡನೆ ನಿರಂತರ

ವಾಗಿ ಸಮಾಲೋಚಿಸತೊಡಗಿದ. ಆಗ, ಅವನೊಂದಿಗೆ ಯುದ್ಧದಿಂದ ಓಡಿದ್ದ ಮತ್ತು ಇಂಥ ವಿಷಯಗಳಲ್ಲಿ ಸೂಕ್ಷ್ಮಮತಿಯೂ ಠಕ್ಕನೂ ಆಗಿದ್ದ ಬೆಳಗಾವ್‌ದ ದೊರೆ ಅಸದಕಾವ್ ರಾಜನಲ್ಲಿಗೆ ಹೋಗಲು ತನಗೇ ಅನುಮತಿ ನೀಡಬೇಕೆಂದು ಕೋರುತ್ತ ತಾನು ಎಲ್ಲವನ್ನೂ ಸರಿಪಡಿಸುವುದಾಗಿಯೂ ಎಲ್ಲವೂ ತನ್ನ ಪ್ರಭು ಇಚ್ಛಿಸಿದಂತೆಯೆ ಆಗುವಂತೆ ಮಾಡುವುದಾಗಿಯೂ ಭರವಸೆ ನೀಡಿದನು. ಮತ್ತು ಇಡಲ್‌ಕಾವ್ ಮನಃಪೂರ್ವಕವಾಗಿ ಅವನನ್ನು ಆಲಿಸಿದ.

ಅಸದಕಾವ್ ಇಡಲ್‌ಕಾವ್‌ನ ಸೇವೆ ಮಾಡುವ ಇಚ್ಛೆಯಿಂದ ಈ ಪ್ರಯಾಣ ಮಾಡುವ ತೊಂದರೆ ತೆಗೆದುಕೊಂಡಿರಲಿಲ್ಲ. ಅದನ್ನು ಬೇರೆ ಯಾರಾದರೂ ಅಷ್ಟೆ ಚನ್ನಾಗಿ ಮಾಡಬಹುದಿತ್ತು. ಆದರೆ, ಒಂದು ದುಷ್ಟ ಉದ್ದೇಶದಿಂದ ಮತ್ತು ಬಿಸ್ನಗದಲ್ಲಿ ರಾಜ ಸೆರೆ ಹಿಡಿದಿಟ್ಟಿದ್ದ ಸಲಬತ್‌ಕಾವ್‌ನೊಂದಿಗೆ ತಾನು ಹೊಂದಿದ್ದ ದುರ್ಭಾವನೆಯಿಂದ ಅವನು ಹಾಗೆ ಮಾಡಿದ. ಅವನು ಈ ದುಷ್ಟ ಹೇತು ತಾಳಲು ಕಾರಣವೆಂದರೆ ಇಡಲ್‌ಕಾವ್ ಓಡಿ ಹೋಗುವಂತೆ ಮಾಡಿದವನು ಅಸದಕಾವ್ ಎಂದು ಮತ್ತು ಇಂಥ ಹೇಡಿಗೆಲಸ ಸೈನ್ಯವನ್ನು ನಾಶಮಾಡಲು ಸಾಕಾಯಿತೆಂದು ಸಲಬಟಕಾವ್‌ನಿಗೆ ಗೊತ್ತಿತ್ತು. ಇದರ ಬಗೆಗೆ ಸಲಬಟಕಾವ್ ತನ್ನ ಭೆಟ್ಟಿಗೆ ಬಂದವರು ಅಥವಾ ಕಳಿಸಿದವರೆದುರು ರೋಷದಿಂದಲೆ ಮಾತಾಡಿದ್ದ, ಮತ್ತು ಒಂದೇ ಒಂದು ಕಾರಣಕ್ಕಾಗಿ ಅಲ್ಲದಿದ್ದರೆ ತಾನು ಬಂಧನದಿಂದ ಬಿಡುಗಡೆ ಹೊಂದಬಯಸಿರಲಿಲ್ಲ ಎಂದು ಅವನು ಯಾವಾಗಲೂ ಅನ್ನುತ್ತಿದ್ದ. ಅದೆಂದರೆ, ಅಸದಕಾವ್‌ನನ್ನು ನಾಶಪಡಿಸುವುದು ಮತ್ತು ಒಬ್ಬ ಬದ್ಧ ವೈರಿಯೊಂದಿಗೆಂಬಂತೆ ಅವನ ವಿರುದ್ಧ ಯುದ್ಧ ಮಾಡುವುದು. ಈ ಸಂಗತಿಗಳು ಅಸದಕಾವ್‌ನಿಗೆ ಚನ್ನಾಗಿ ತಿಳಿದಿದ್ದವು ಮತ್ತು ಅವನನ್ನು ಅವರು ಬಿಡುಗಡೆ ಮಾಡಿದರೆ ಆವನು ಅಂದಂತೆಯೆ ಆಗುವುದು, ಮತ್ತು ಆದುದರಿಂದ ಯೋಗ್ಯ ಸ್ಥಳದಲ್ಲಿ ಹೇಳಲಿರುವಂತೆ, ಅವನ ಮರಣಕ್ಕೆ ಹಂಚಿಕೆ ಹಾಕಿ ಅದನ್ನು ತಪ್ಪಿಸಿಕೊಳ್ಳಬೇಕೆಂದು ಅವನು ನಿರ್ಧರಿಸಿದ. ಅಸದಕಾವ್ ರಾಜನಲ್ಲಿಗೆ ರಾಯಭಾರಿಯಾಗಿ ತನ್ನನ್ನು ಕಳಿಸಿಕೊಡಲು ಕೇಳಿಕೊಂಡುದು ಈ ಕಾರಣಕ್ಕಾಗಿ ಮತ್ತು ಅದನ್ನು ಈಡೇರಿಸಲಾಯಿತು.

## ಅಡಿಟಿಪ್ಪಣಿಗಳು

1 ಮುದಕಲ್

2 ಬಿಜಾಪುರ

## ಅಧ್ಯಾಯ ೧೬

**ಅಸದಖಾನ್ ತನ್ನ ರಾಜನ ರಾಯಭಾರಿಯಾಗಿ ಹೋಗಿ ಸಲಬಟಖಾನ್‌ನ ಮರಣವನ್ನು ಸಾಧಿಸಿದ ಬಗೆ.**

ಇಡಲ್‌ಕಾನ್ ಕಳಿಸಿಕೊಟ್ಟ ಅಸದಖಾನ್ ಕೆಲವು ಅಶ್ವಾಳು ಹಾಗೂ ಸೇವಕರಿಂದೊಡಗೂಡಿ ರಾಜನಿದ್ದ ಮುದೊಗಲ್ ನಗರದ ದಾರಿ ಹಿಡಿದ, ಮತ್ತು ಇಡಲ್‌ಕಾನ್ ನದಿಯವರೆಗೆ ಅವನೊಂದಿಗೆ ಹೋದ. ಅಸದಖಾನ್ ಆಗಮಿಸಿದಾಗ ರಾಜನ ಆಜ್ಞೆಯಿಂದ ನಗರದೊಳಕ್ಕೆ ಬರಲು ಬಿಡಲಾಗಿ ಅವನ ಆಜ್ಞೆಯಿಂದ ಕರೆಕಳಿಸಲ್ಪಡುವವರೆಗೆ ಅವನು ರಾಜನನ್ನು ಭೆಟ್ಟಿಯಾಗದೆ ಹಲವು ದಿನ ಉಳಿದ; ಆ ಮೇಲೆ ಪ್ರವೇಶ ನೀಡಲಾಗಿ ರಾಜನೊಂದಿಗೆ ಮಾತನಾಡುತ್ತ ಇಂಥ ಮಾತುಕತೆಗಳಲ್ಲಿ ಜಾಣನೂ ದಿಟ್ಟನೂ ಎರಡೂ ಆಗಿರುವವನ ಶೈಲಿಯಲ್ಲಿ ಇಡಲ್‌ಕಾನ್ ಮಾಡಿದ್ದ ತಪ್ಪಿಗೆ ಕಾರಣವನ್ನು ನೀಡಿದ. ರಾಜನೊಂದಿಗೆ ಹೇಗೆ ಮಾತಾಡಬೇಕೆಂಬುದು ಅವನಿಗೆ ಎಷ್ಟು ಚನ್ನಾಗಿ ಗೊತ್ತಿತ್ತೆಂದರೆ ಅವನು ಇಡಲ್‌ಕಾನ್ ಅವನನ್ನು ಭೆಟ್ಟಿಯಾಗದಿದ್ದುದಕ್ಕೆ ಮುಖ್ಯ ಕಾರಣವೆಂದರೆ ಅವನು ಬಂಧಿಸಿದ್ದ ಸಲಬಟಖಾನ್‌ನ ವರ್ತನೆಯೆಂದೂ, ಈ ಮನುಷ್ಯ ಇಡಲ್‌ಕಾನ್‌ನಿಗೆ ಹಾಗೆ ಮಾಡಬಾರದೆಂದು ಬರೆದಿದ್ದನೆಂದೂ ಮತ್ತು ರಾಜ ಅವನನ್ನು ಕೊಲ್ಲಬಯಸಿರುವನೆಂಬ ಕಾರಣ ಕೊಟ್ಟಿದ್ದನೆಂದೂ ಅವನು ರಾಜನಿಗೆ ಹೇಳಿದ. ಮತ್ತು ಇಂಥ ಇತರ ಮಾತುಗಳಿಂದ ಅವನು ರಾಜನ ಮನಸ್ಸನ್ನು ಸಲಬಟಖಾನ್‌ನ ವಿರುದ್ಧ ಮರಣದ ಮಟ್ಟಿಗೂ ತಿರುಗಿಸಲೆತ್ನಿಸಿದನು. ಅಸದಖಾನ್ ಇಷ್ಟಪಡುವುದೇನೆಂದು ಕಂಡು ಮತ್ತು ಇಷ್ಟು ದೊಡ್ಡ ಖ್ಯಾತಿಯ ಮನುಷ್ಯ ಸಂಪೂರ್ಣವಾಗಿ ಸತ್ಯವಿರದಿದ್ದುದನ್ನು ಹೇಳುವ ಅಪರಾಧ ಮಾಡಲಾರನೆಂಬ ನಂಬಿಕೆಯಿಂದ ರಾಜ ಸಿಟ್ಟಿಗೆದ್ದು ಆಗ ಬಿಸ್ನಗದಲ್ಲಿದ್ದ ಸಲಬಟಖಾನ್‌ನ ತಲೆ ಕಡಿಯಬೇಕೆಂದು ಆಜ್ಞೆಯಿತ್ತ; ಮತ್ತು ಸಂದೇಶ ಬಂದ ತಕ್ಷಣ ಇದನ್ನು ಪೂರೈಸಲಾಯಿತು.

ಈ ಕಾರ್ಯ ಸಾಧಿಸಿದ ಕೂಡಲೆ ಅಸದಖಾನ್ ತಾನು ಅಸುರಕ್ಷಿತನೆಂದು ಬಗೆದ ಮತ್ತು ಮಹಾರಾಜ ಅಲ್ಲಿಗೆ ಬಂದಾಗ ಅವನನ್ನು ಭೆಟ್ಟಿಯಾಗಲೋಸುಗ ನದಿಗೆ ಬರುವಂತೆ ಇಡಲ್‌ಕಾನ್‌ನನ್ನು ತಾನು ಕರೆತರಬಯಸಿರುವುದಾಗಿ ಹೇಳಿ ಕೂಡಲೆ ಹೊರಡಲು ರಾಜನ ಅನುಮತಿ ಕೋರಿದ. ಅವಸರಪಡಬಾರದೆಂದೂ ಅಲ್ಲಿ ಕೆಲವು ದಿನ ವಿನೋದಪಡಬೇಕೆಂತಲೂ ಹೇಳಿದ ರಾಜ ತಾನು ಅವನಿಗೆ ಕೆಲವು ವಸ್ತುಗಳನ್ನು ತೋರಿಸಬಯಸಿರುವುದಾಗಿಯೂ ಮತ್ತು ಅವನೊಂದಿಗೆ ಮಾತನಾಡುವುದು ಇನ್ನೂ ಸ್ವಲ್ಪ ಇದೆಯೆಂದೂ ಮುಂದುವರೆದು ಹೇಳಿದ. ಆದರೆ, ಅಸದಖಾನ್ ತನ್ನ ದ್ರೋಹ

ಬಯಲಾಗುವುದೆಂದು ಭಯಪಟ್ಟು, ತಾನು ಸುರಕ್ಷಿತನಲ್ಲ ಎಂದು ಭಾವಿಸಿದ ಮತ್ತು ಯಾವ ರೀತಿ ವರ್ತಿಸಿದನೆಂದರೆ ಸಲಬಟಕಾವ್‌ನ ವಿಷಯದಲ್ಲಿ ಅವನು ಮಾಡಿದ್ದು ಗೊತ್ತಾಯಿತು. ಆದುದರಿಂದ, ರಾಜ ಅವನನ್ನು ಸೆರೆ ಹಿಡಿಯಲು ಕಳಿಸಿದ, ಆದರೆ ಅವನನ್ನು ನೋಡಲು ಅವರು ಹೋದಾಗ ಅವನಾಗಲೆ ಹೋಗಿಬಿಟ್ಟಿದ್ದ. ಏಕೆಂದರೆ, ಒಂದು ರಾತ್ರಿ ಅವನು ಇಡಲ್‌ಕಾವ್‌ನಲ್ಲಿಗೆ ಓಡಿಬಂದು ರಾಜ ಸಲಬಟಕಾವ್‌ನನ್ನು ಕೊಲ್ಲಲು ಆಜ್ಞೆ ಮಾಡಿದ್ದನೆಂದೂ ಮತ್ತು ತನಗೂ ಹಾಗೆಯೆ ಮಾಡಬೇಕೆಂದಿದ್ದನೆಂದೂ, ಅದಕ್ಕಾಗಿ ತಾನು ಪಾರಾಗಿ ಬಂದುದಾಗಿಯೂ ಹೇಳಿದ. ಏನೆಂದರೂ ಕರಿಯನೆ ಆಗಿದ್ದ ರಾಜನನ್ನು ಅವನು (ಇಡಲ್‌ಕಾವ್) ನಂಬಕೂಡದೆಂದು ತನಗೆ ಅನಿಸುತ್ತದೆಂದ. ಹೀಗೆ ಮಾತಾಡಿದ ನಂತರ ಅವನು ಬೆಳಗಾವ್‌ಗೆ ಹೋಗಿ ತನ್ನ ಸ್ಥಾನ ಬಲಪಡಿಸಿಕೊಂಡ ಮತ್ತು ಇಡಲ್‌ಕಾವ್ ನಂತರ ಅವನನ್ನು ಕರೆಕಳಿಸಿದರೆ ಅವನು ಪಾಲಿಸಲಿಲ್ಲ. ಏಕೆಂದರೆ, ತಾನು ಮಾಡಿದ ದುಷ್ಟತನ ಗೊತ್ತಾಗಿರುವುದೆಂದು ಅವನಿಗೆ ತಿಳಿದಿತ್ತು.

## ಅಧ್ಯಾಯ ೧೭

**ರಾಜ ಇಡಲ್‌ಕಾವ್‌ನನ್ನು ಭೆಟ್ಟಿಯಾಗಲು ಹೇಗೆ ತನ್ನ ಪ್ರದೇಶದ ಅಂಚಿನವರೆಗೂ ಹೋದ ಮತ್ತು ಅವನು ಅಲ್ಲಿಲ್ಲದುದನ್ನು ಕಂಡು ಏನು ಮಾಡಿದ ಎಂಬ ಬಗೆಗೆ**

ರಾಜ ತನ್ನ ಪ್ರದೇಶದ ಅಂಚಿಗೆ ಹೋಗದೆ ಬಿಡಲಿಲ್ಲ ಮತ್ತು ಅಸದಕಾವ್ ಹೇಳಿದ್ದಂತೆ ಅಲ್ಲಿ ಇಡಲ್‌ಕಾವ್‌ನನ್ನಾಗಲಿ ಅವನ ತಾಯಿಯನ್ನಾಗಲಿ ಕಾಣದಿದ್ದುದರಿಂದ ಇದೆಲ್ಲ ಅಸದಕಾವ್‌ನ ಕಪಟತನವೆಂದು ಮತ್ತು ಸಲಬಟಕಾವ್‌ನ ಮರಣ ಸಾಧಿಸಲೋಸುಗ ಅವನು ಇವನ್ನೆಲ್ಲ ಮಾಡಿದ್ದನೆಂದು ತಕ್ಷಣ ಗ್ರಹಿಸಿದ. ಇದರಿಂದ ತುಂಬ ರೊಚ್ಚಿಗೆದ್ದು ಅವನು ದಖಿನ್‌ದ ರಾಜ್ಯವನ್ನು ಪ್ರವೇಶಿಸಿ ಕಲ್ಬರ್ಗುರಾ[1] ನಗರದ ಮೇಲೆ ದಂಡೆಯಾತ್ರೆ ಮಾಡಿದ ಮತ್ತು ಅದನ್ನು ನಾಶಪಡಿಸಿದ ಮತ್ತು ದುರ್ಗವನ್ನು ನೆಲಸಮಗೊಳಿಸಿದ ಮತ್ತು ಇತರ ಅನೇಕ ಊರುಗಳಿಗೂ ಹಾಗೆಯೆ ಮಾಡಿದ.

ಅಲ್ಲಿಂದ ಅವನು ಮುಂದಕ್ಕೆ ನುಗ್ಗಬೇಕೆಂದಿದ್ದ. ಆದರೆ, ಅವನ ಸಲಹೆಗಾರರು ಅದಕ್ಕೊಪ್ಪಲಿಲ್ಲ. ಆ ರಸ್ತೆಯಿಂದ ಹೋದರೆ ನೀರು ಕಡಿಮೆ ಬೀಳುವುದೆಂದೂ, ತಾವು ಗೆಳೆಯರೆಂದು ಎಣಿಸಿದ್ದ ಮೂರ ದೊರೆಗಳು, ಅವರೆಲ್ಲ ಒಬ್ಬನೇ ಸಾರ್ವಭೌಮನ ಸೇವೆಗೈಯ್ಯುತ್ತಿದ್ದುದರಿಂದ, ರಾಜ ಇತರರ ನಾಡುಗಳನ್ನು ವಶಪಡಿಸಿಕೊಂಡಂತೆಯೆ ತಮ್ಮ ನಾಡುಗಳನ್ನೂ ವಶಪಡಿಸಿಕೊಳ್ಳಬಹುದೆಂದು ಭಯಪಡುವುದಕ್ಕಿಂತ ಭಿನ್ನ ತೆರನಾಗುವರೆಂದೂ ಮತ್ತು ಆ ಕಾರಣಕ್ಕಾಗಿ ಬಹುಶಃ ಇಡಲ್‌ಕಾವ್‌ನೊಂದಿಗೆ ಮೈತ್ರಿ ಮಾಡಿಕೊಳ್ಳಬಹುದು ಮತ್ತು ಒಟ್ಟಾಗಿ ರಾಜನ ವಿರುದ್ಧ ಬರಬಹುದೆಂದೂ, ಮತ್ತು ಅವರ ಬಗೆಗೆ ಭಯಪಡುವ ಕಾರಣವಿರದಿದ್ದಾಗ್ಯೂ ಎಷ್ಟೂ ಇಲ್ಲದಂತಾಗಿದ್ದ ನೀರಿನ ಅಭಾವದ ಬಗೆಗೆ ರಾಜ ಭಯಪಡಬೇಕಾಗಿದೆಯೆಂದೂ ಅವರು ಹೇಳಿದರು. ಈ ಸಲಹೆ ಉತ್ತಮವಾದುದೆಂದು ರಾಜ ಒಪ್ಪಿಕೊಂಡ.

ಈ ಕಲ್ಬರ್ಗುರಾ ನಗರದಲ್ಲಿ, ಅದಕ್ಕೆ ಸೇರಿದ ದುರ್ಗದಲ್ಲಿ, ರಾಜ ದಖಿನ್‌ದ ರಾಜನ ಮೂವರು ಪುತ್ರರನ್ನು ಸೆರೆಹಿಡಿದ. ಅವನ ತಂದೆ ತೀರಿಕೊಂಡಿದ್ದುದರಿಂದ ಎಲ್ಲರ್ಕಿಂತ ಹಿರಿಯನನ್ನು ದಖಿನ್‌ದ ರಾಜನನ್ನಾಗಿ ಮಾಡಿದ. ಆದರೆ, ಇಡಲ್‌ಕಾವ್ ದಖಿನ್‌ದ ರಾಜನ ಜಾರಜಪುತ್ರನೂ ತನ್ನ ಸೋದರಿಯರಲ್ಲೊಬ್ಬಳನ್ನು ಮದುವೆಯಾಗಿದ್ದ ಒಬ್ಬ ಮೈದುನನ್ನು ರಾಜನನ್ನಾಗಿ ಮಾಡಬಯಸಿದ್ದ. ಈ ಕಾರಣದಿಂದ ಈ ಮೂವರು ಸಹೋದರರನ್ನು ಆ ದುರ್ಗದಲ್ಲಿ ಸೆರೆಹಿಡಿದಿಟ್ಟಿದ್ದ. ಅವನು ರಾಜನನ್ನಾಗಿ ಮಾಡಿದವನನ್ನು ಇಡಿ ರಾಜ್ಯ ಹಾಗೆಂದೇ ಸ್ವೀಕರಿಸಿತು ಮತ್ತು ಎಲ್ಲ ಮಹಾಪ್ರಭುಗಳು ರಾಜನ ಭಯಕ್ಕಾಗಿ, ಇಡಲ್‌ಕಾವ್ ಕೂಡ, ಅವನಿಗೆ ವಿಧೇಯರಾಗಿ ನಡೆದು

ಕೊಂಡರು.[2] ಉಳಿದಿಬ್ಬರು ಸಹೋದರರನ್ನು ತನ್ನೊಂದಿಗೆ ಕರೆದೊಯ್ದು ಮತ್ತು ಪ್ರತಿಯೊಬ್ಬನಿಗೆ ಪ್ರತಿ ವರ್ಷ ಐವತ್ತು ಸಾವಿರ ಸುವರ್ಣ ಪದಾರ್ಥಗಳಂತೆ ವರ್ಷಾಶನ ನೀಡಿದ; ಮತ್ತು ಅವರು ನಿಜಕ್ಕೂ ಆಗಿರುವಂತೆಯೆ ರಾಜಕುಮಾರರು ಮತ್ತು ಮಹಾಪ್ರಭುಗಳೆಂದು ಭಾವಿಸಿ ಅವರೊಂದಿಗೆ ಹಾಗೆಯೆ ನಡೆದುಕೊಳ್ಳುತ್ತಾನೆ. ಅವನು ತೆರಳಿದ್ದ ವರ್ಷವೇ ಸಂಭವಿಸಿದ ರಾಜನ ಬಿಸ್ನಗ ನಗರಕ್ಕೆ ಮರಳುವಿಕೆಯ ತರುವಾಯ ಶಾಂತಿ ಇಲ್ಲವೆ ಯುದ್ಧಕ್ಕೆ ಸಂಬಂಧಿಸಿದಂತೆ ಉಲ್ಲೇಖಾರ್ಹವಾದ ಇನ್ನೇನೂ ಅವನ ಮತ್ತು ಇಡಲ್‌ಕಾವ್ ಮಧ್ಯೆ ಜರುಗಲಿಲ್ಲ.

## ಅಡಿಟಿಪ್ಪಣಿಗಳು

1 ಪುರಾತನ ಬಹಮನಿ ರಾಜಧಾನಿಯಾಗಿದ್ದ ಕಲಬರ್ಗಾ

2 ಈ ಉದ್ಧೃತ ಭಾಗ ಐತಿಹಾಸಿಕ ದೃಷ್ಟಿಕೋನದಿಂದ ಅತಿ ಖಚಿತವೆಂದೆನಿಸುವುದಿಲ್ಲ.

## ಅಧ್ಯಾಯ ೧೮

### ರಾಜ ತನ್ನ ಜೀವಿತದಲ್ಲಿಯೆ ಆರು ವರ್ಷ ವಯದ ತನ್ನ ಮಗನನ್ನು ರಾಜನನ್ನಾಗಿ ಮಾಡಿದ ಬಗೆ

ರಾಜ ಇದನ್ನು ಮುಕ್ತಾಯಗೊಳಿಸಿದ ಮತ್ತು ತನ್ನ ವೈರಿಗಳ ಮೇಲೆ ಇಷ್ಟು ದೊಡ್ಡ ವಿಜಯ ಸಾಧಿಸಿದ ತರುವಾಯ, ತಾನು ಆಗಲೆ ವಯಸ್ಸಾಗುತ್ತಿದ್ದುದನ್ನು ಕಂಡು ಮುಪ್ಪಿನಲ್ಲಿ ವಿಶ್ರಮಿಸಬಯಸಿ ಮತ್ತು ತಾನು ಸತ್ತ ಮೇಲೆ ತನ್ನ ಮಗ ರಾಜನಾಗಬೇಕೆಂದು ಬಯಸಿ, ತನ್ನ ಮರಣಾನಂತರ ಏನಾಗುವುದೆಂದು ತಿಳಿಯದಿದ್ದುದರಿಂದ ಆ ಹುಡುಗ ಆರು ವರ್ಷದವನಿದ್ದರೂ ಸಹ ತನ್ನ ಜೀವಿತದಲ್ಲಿಯೇ ಅವನನ್ನು ರಾಜನನ್ನಾಗಿ ಮಾಡಲು ನಿರ್ಧರಿಸಿದ. ಆದುದರಿಂದ, ಅವನು ತನ್ನ ಸಿಂಹಾಸನ ಮತ್ತು ಎಲ್ಲ ಅಧಿಕಾರ ಹಾಗೂ ಅಭಿದಾನ ತ್ಯಜಿಸಿ ಅವನ್ನೆಲ್ಲ ತನ್ನ ಮಗನಿಗೆ ಕೊಟ್ಟು ಸ್ವತಃ ತಾನೆ ಅವನ ಮಂತ್ರಿಯಾದ ಮತ್ತು ಆ ಹುದ್ದೆಯಲ್ಲಿದ್ದ ಸಾಲ್ವಟನಿಕ' ಅವನ ಸಲಹೆಗಾರನಾದ ಮತ್ತು ಅವನ ಮಕ್ಕಳಲ್ಲೊಬ್ಬನನ್ನು ಅವರಲ್ಲಿ ದೊಡ್ಡ ದೊರೆಯನ್ನಾಗಿ ಮಾಡಿದ. ರಾಜಾ ಕ್ರಿಸ್ನರಾವ್ ಎಲ್ಲಿಯವರೆಗೆ ಹೋದನೆಂದರೆ ತನ್ನ ಮಗನಿಗೆ ರಾಜ್ಯ ಕೊಟ್ಟ ಮೇಲೆ ಸ್ವತಃ ತಾನೆ ಅವನಿಗೆ ಪ್ರಣಾಮ ಸಲ್ಲಿಸುತ್ತಿದ್ದ. ಈ ಬದಲಾವಣೆಗಳೊಂದಿಗೆ ರಾಜ ಎಂಟು ತಿಂಗಳವರೆಗೆ ನಡೆದ ಉತ್ಸವಗಳನ್ನು ಏರ್ಪಡಿಸಿದ. ಆ ಸಮಯದಲ್ಲಿ ರಾಜನ ಮಗ ರೋಗಕ್ಕೆ ತುತ್ತಾಗಿ ತೀರಿಕೊಂಡ.

ಅವನ ಮರಣದ ತರುವಾಯ ಕ್ರಿಸ್ನರಾವ್ ತನ್ನ ಮಗ ಸಾಲ್ವಟನಿಕನ ಮಗ ವಿಷದಿಂದ ತೀರಿಕೊಂಡನೆಂದು ತಿಳಿದು ಮತ್ತು ಕೋಪದಲ್ಲಿ ಅದು ಹಾಗೆಯೆ ಆದುದು ಖಚಿತವೆಂದು ಬಗೆದು ಅವನು ಸಾಲ್ವಟನಿಕನನ್ನು, ಮತ್ತು ಅವನ ಮಗನನ್ನು ಮತ್ತು ಸಾಲ್ವಟನಿಕನ ಸಹೋದರ ಗೌಂಡಜನನ್ನು ಮತ್ತು ಇನ್ನುಳಿದ ಅನೇಕ ದಳವಾಯಿಗಳನ್ನು ಮತ್ತು ಸಾಲ್ವಟನಿಕನ ಸಂಬಂಧಿಕರನ್ನು ಕರೆಕಳಿಸಿ ಸಲಾಮಿನ ಸಮಯಕ್ಕೆ ಅವರಿಗೊಂದು ಭಾಷಣ ಮಾಡಿದ. ಅನೇಕ ದೊರೆಗಳು ಮತ್ತು ರಾಜ್ಯದ ಪ್ರಮುಖ ವ್ಯಕ್ತಿಗಳು ಮತ್ತು ಸಾಲ್ವಟನಿಕನ ಸಂಬಂಧಿಗಳು ಹಾಜರಿದ್ದರು. ಅವನು ಅವನನ್ನುದ್ದೇಶಿಸಿ ಹೀಗೆಂದ; "ನಾನು ನಿನ್ನನ್ನು ನನ್ನ ನೆಚ್ಚಿನ ಗೆಳೆಯನೆಂದು ಪರಿಗಣಿಸಿದ್ದೆ. ಮತ್ತು ಕಳೆದ ನಲವತ್ತು ವರ್ಷಗಳಿಂದಲೂ ನೀನು ನನಗಿತ್ತ ರಾಜ್ಯದಲ್ಲಿ ನೀನು ಮಂಡಲಾಧಿಪತಿಯಾಗಿದ್ದಿ. ಆದಾಗ್ಯೂ ನಾನು ನಿನಗೆ ಅದಕ್ಕಾಗಿ ಋಣದಲ್ಲಿರಬೇಕಾಗಿಲ್ಲ. ಏಕೆಂದರೆ, ಹಾಗೆ ಮಾಡುವಲ್ಲಿ ನೀನು ನಿನ್ನ ಕರ್ತವ್ಯಕ್ಕೆ ವ್ಯತಿರಿಕ್ತವಾದ ರೀತಿಯಲ್ಲಿ ನಡೆದುಕೊಂಡೆ, ನನ್ನ ಸಹೋದರನಾಗಿದ್ದ

ರಾಜ, ನಿನ್ನ ಸ್ವಾಮಿ ನಿನಗೆ ಹಾಗೆ ಆಜ್ಞೆಯಿತ್ತಿದ್ದರಿಂದ ನೀನು ನನ್ನ ಕಣ್ಣುಗಳನ್ನು ಕೀಳಿಸಲು ಬದ್ಧನಾಗಿದ್ದಿ. ಆದರೂ ಸಹ ನೀನೂ ಅವನ ಇಷ್ಟವನ್ನು ಪೂರೈಸಲೂ ಇಲ್ಲ. ಅವನಿಗೆ ವಿಧೇಯನಾಗಿಯೂ ನಡೆದುಕೊಳ್ಳಲಿಲ್ಲ. ಅದಕ್ಕೆ ಬದಲಾಗಿ ನೀನು ಅವನಿಗೆ ಮೋಸ ಮಾಡಿದಿ ಮತ್ತು ಆಡಿನ ಕಣ್ಣುಗಳನ್ನು ಕೀಳಿಸಿದಿ. ಆದುದರಿಂದ, ನೀನೂ ಮತ್ತು ನಾನು ಎಷ್ಟೊಂದು ಅನುಗ್ರಹ ತೋರಿದ ನಿನ್ನ ಮಕ್ಕಳೂ ದ್ರೋಹಿಗಳಾಗುವಿರಿ. ಈಗೆ ನೀನು ಮತ್ತು ನಿನ್ನ ಮಕ್ಕಳು ಕೊಟ್ಟ ವಿಷದಿಂದ ನನ್ನ ಮಗ ಮೃತಪಟ್ಟನೆಂದು ನನಗೆ ತಿಳಿದಿದೆ ಮತ್ತು ಅದಕ್ಕಾಗಿ ನಿಮ್ಮನ್ನೆಲ್ಲ ಬಂದಿಗಳನ್ನಾಗಿ ಮಾಡಲಾಗಿದೆ.” ಈ ಮಾತುಗಳೊಂದಿಗೆ ಅವನು ಎದ್ದುಬಂದು ಅವರನ್ನು ಹಿಡಿದು ಬಂಧಿಸಿದನು ಮತ್ತು ಹಾಗೆ ಮಾಡುವಲ್ಲಿ ತನ್ನ ನೆರವಿಗೆ ಬರುವಂತೆ ಕೋರಿ ಕುದುರೆಗಳೊಂದಿಗೆ ಆಗ ಆ ಪ್ರದೇಶದಲ್ಲಿದ್ದ ಅನೇಕ ಪೋರ್ತುಗೀಜರನ್ನು ತನ್ನ ನೆರವಿಗೆ ಕರೆದ. ಮತ್ತು ಆ ತಂದೆ ಮಕ್ಕಳನ್ನು ಬಂಧಿಸಿದ ನಂತರ ಅವರು ಮೂರು ವರ್ಷ ಸೆರೆಮನೆಯಲ್ಲಿದ್ದರು. ಮತ್ತು ಅವನು ಕೋದಮರದೆಯ[2] ಮಗನನ್ನು ಮಂತ್ರಿಯನ್ನಾಗಿ ಮಾಡಿದ, ಅವನ ತಂದೆಯಾದ ರಾಜನ ಆಜ್ಞೆಯಂತೆ ರಾಜಾ ನರಸಿಂಗನ ಮಗನನ್ನು ಪೆನಗುಂಡಿಯ ಉದ್ಯಾನದಲ್ಲಿ ಮೋಸದಿಂದ ಕೊಂದಿದ್ದವನು ಇವನೇ. ಈ ಚರಿತ್ರೆಯಲ್ಲಿ ಇದನ್ನು ಈಗಾಗಲೆ ಹೇಳಲಾಗಿದೆ.

ಮತ್ತು ಅದಾದ ಕ್ಷಿಪ್ರದಲ್ಲಿಯೆ ಸಾಲ್ವಟನಿಕನ ಮಗ ದಣಾಯಿಕ ಸೆರೆಮನೆಯಿಂದ ಪಾರಾದನು ಮತ್ತು ದರೋಡೆಗಾರರು ಮತ್ತು ದಾರಿಗಳ್ಳರನ್ನು ಬಿಟ್ಟು ಬೇರಾರೂ ವಾಸಿಸದ ಬೆಟ್ಟಸಾಲಿಗೆ ಹೋದನು. ಮತ್ತು ಇದರಲ್ಲಿದ್ದ ಒಂದು ದುರ್ಗದಲ್ಲಿ ಅವನ ಸಂಬಂಧಿಯಾಗಿದ್ದ ದಳವಾಯಿಯೊಬ್ಬನಿದ್ದ. ಅವನು ಇವನನ್ನು ಬರಮಾಡಿಕೊಂಡು ತನಗೆ ಸಾಧ್ಯವಿದ್ದ ಎಲ್ಲ ನೆರವು ನೀಡಿದ. ಮತ್ತು ಅಲ್ಲಿಂದ ಅವನು ಕ್ರಿಸ್ನರಾವ್‌ನ ವಿರುದ್ಧ ಎಂಥ ಯುದ್ಧ ಮಾಡಿದನೆಂದರೆ ಅವನ ವಿರುದ್ಧ ಬಹಳ ಜನ ಕಳಿಸಬೇಕಾಯಿತು ಮತ್ತು ಸೈನ್ಯದ ದಂಡನಾಯಕನಾಗಿ ಅವನು ತನ್ನ ಮಂತ್ರಿ ಅಜಬೊಯಿಸನನ್ನು ಕಳಿಸಿದ. ಅವನು ಆ ಸ್ಥಳವನ್ನು ಸುತ್ತು ಕಡೆಯಿಂದ ಮುತ್ತಿಗೆಹಾಕಿ ಅವನನ್ನು ಅದರೊಳಗೆ ಸೆರೆಹಿಡಿದು ಬಂದಿಯನ್ನಾಗಿ ರಾಜನಲ್ಲಿಗೆ ತಂದ. ಅವನು ಹೀಗೆ ಬಂದನಂತರ ರಾಜ ಅವನನ್ನು ತನ್ನೆದುರು ಅವನ ತಂದೆ ಸಾಲ್ವಟನಿಕ ಮತ್ತು ಸೆರೆಮನೆಯಲ್ಲಿಟ್ಟಿದ್ದ ಅವನ ಇನ್ನೊಬ್ಬ ಸಹೋದರನೊಂದಿಗೆ ತರುವಂತೆ ಆಜ್ಞೆ ಮಾಡಿದ. ಮತ್ತು ಅವರನ್ನು ಗಲ್ಲುಸ್ಥಳಕ್ಕೆ ಕಳಿಸದ ಮತ್ತು ಅಲ್ಲಿ ಅವರ ಕಣ್ಣು ಕೀಳಿಸಿದ. ಏಕೆಂದರೆ, ಈ ದೇಶದಲ್ಲಿ ಬ್ರಾಹ್ಮಣರನ್ನು ಕೊಲ್ಲದೆ ಶಿಕ್ಷೆ ಮಾತ್ರ ವಿಧಿಸಿ ಜೀವಿಸಗೊಡುತ್ತಾರೆ. ಆದುದರಿಂದ, ಅವನು ಅವರನ್ನು ಪುನಃ ಸೆರೆಮನೆಯಲ್ಲಿಟ್ಟ. ಮತ್ತು ಅಲ್ಲಿಯೆ ತಿಮ್ಮನಾಯಿಕ ತೀರಿಕೊಂಡ ಮತ್ತು ಅವನ ತಂದೆ ಇನ್ನೊಬ್ಬ ಮಗ ಗಂಡರಾಖ[3]ನೊಂದಿಗೆ ಸೆರೆಮನೆಯಲ್ಲುಳಿದ.

## ಅಡಿಟಿಪ್ಪಣಿಗಳು

1 ಸಾಳುವ ತಿಮ್ಮ

2 ಈ ಹೆಸರನ್ನು ಯಾವುದೆ ಸಾಮಾನ್ಯ ಹಿಂದೂ ಹೆಸರು ಅಥವಾ ಬಿರುದು ಎಂದು ಗುರುತಿಸುವುದು ನನಗೆ ಸಾಧ್ಯವಾಗಿಲ್ಲ. ನನ್ನ ಗ್ರಹಿಕೆಯಂತೆ "ಕೋದಮೆರದೆಯ ಮಗ" ಎಂದು ಉದ್ದೇಶಿಸಿರಬಹುದು. ಕಾಗುಣಿತದಲ್ಲಿ ಗೊಂದಲವುಂಟಾಗಿದ್ದ ಪಕ್ಷದಲ್ಲಿ ರಾಚೋಲಿನ ಮಹಾ ದಂಡಯಾತ್ರೆಯಲ್ಲಿ ರಾಜನ ಪಡೆಗಳ ನೇತೃತ್ವ ವಹಿಸಿದ್ದ ಬಲಿಷ್ಠ ಮನ್ನೆಯರ ಕಡೆ ಗಮನ ಸೆಳೆಯುತ್ತೇನೆ. ಅವರಲ್ಲೊಬ್ಬ "ಕೊಂಡಮಾರ" ಎಂಬವನಿದ್ದ. ಈ ಅಧ್ಯಾಯದ ಕೊನೆಯ ವಾಕ್ಯವೃಂದದಲ್ಲಿ ಈ ನೂತನ ಮಂತ್ರಿಯ ಹೆಸರನ್ನು "ಅಜಬೊಯಿಸ" ಎಂದು ಮತ್ತು ಪ್ರಾಂತೀಯ ಪ್ರಭುಗಳ ಪಟ್ಟಿಯಲ್ಲಿ (ಪು. ೪೮೫, ಮುಂದೆ) 'ಅಜಪರ್ಕಟಿಮಪ' ಎಂದು ಕೊಡಲಾಗಿದೆ. ಎರಡನೆಯದು ಮೊದಲನೆಯದಕ್ಕಿಂತ ಹೆಚ್ಚು ಸಮಂಜಸ ವೆನಿಸುತ್ತದೆ. ಮೊದಲರ್ಧ ಮನೆತನದ ಹೆಸರು ಮತ್ತು ಕೊನೆಯದು ಅವನ ಸ್ವಂತ ಹೆಸರು "ತಿಮ್ಮಪ್ಪ" ಎಂದಿದ್ದಿರಬಹುದು.

3 ಈ ಅಧ್ಯಾಯದ ಮುಂಚಿನ ಉದ್ಧೃತಭಾಗದಲ್ಲಿ ಸಾಳುವ ತಿಮ್ಮನಿಗೆ ಗೌಂಡಜ ಎಂಬ ತಮ್ಮನಿದ್ದನೆಂದು ಹೇಳಲಾಗಿದೆ. ಎರಡನ್ನೂ ಹೋಲಿಸಿ ನೋಡಿದರೆ ಅವನ ತಮ್ಮ ಮತ್ತು ಮಗ ಇಬ್ಬರಿಗೂ ಬಹುಶಃ ಗಂಡರಾಜ ಎಂಬ ಒಂದೇ ಹೆಸರಿತ್ತೆಂದು ತೋರುತ್ತದೆ. ಪ್ಯಾಸ್ ತನ್ನ ಕಾಲದಲ್ಲಿ ತಮ್ಮ ರಾಜಧಾನಿಯ ಮಂಡಲಾಧಿಪತಿಯಾಗಿದ್ದನೆಂದು ಉಲ್ಲೇಖಿಸುತ್ತಾನೆ (ಮೇಲೆ, ಪು. ೨೮೪). ಅವನನ್ನು "ಗರೋದರಾಜೊ" ಎಂದು ಕರೆಯುತ್ತಾನೆ. ಪು. ೩೨೭, ಟಿಪ್ಪಣಿ ೨ನ್ನೂ ನೋಡಿರಿ.

## ಅಧ್ಯಾಯ ೧೯

**ಇಡಲ್‌ಕಾವ್ ರಾಚೋಲಿನ ಮೇಲೆ ಏರಿಬಂದು ರಾಜನಿಗಾಗಿ ಕಾಯುವ ಧೈರ್ಯ ಮಾಡದೆ ಓಡಿಹೋದ ಬಗೆ.**

ಈ ಸಮಯಕ್ಕೆ ಇಡಲ್‌ಕಾವ್ ತನ್ನ ಸೈನ್ಯ ಸಂಗ್ರಹಿಸಿ ತನ್ನ ಅಶ್ವ ಹಾಗೂ ಗಜ ಪಡೆಗಳನ್ನು ಹೊಸದಾಗಿ ರಚಿಸಿ ಬಿಸ್ನಗ ರಾಜನ ಅಧೀನದಲ್ಲುಳಿದ ರಾಚೋಲ್‌ನ ಮೇಲೆ ದಂಡಯಾತ್ರೆ ಹೊರಟ. ಈ ಸುದ್ದಿ ಕೇಳಿ ಕ್ರಿಸ್ನರಾವ್ ಯಾರಿಗೂ ಹೇಳದೆ ಕುದುರೆಗೆ ಜೀನು ತೊಡಿಸಲು ಆಜ್ಞೆಯಿತ್ತ ಮತ್ತು ಇಡಲ್‌ಕಾವ್ ಆಗಲೆ ಅಲ್ಲಿದ್ದ ರಾಚೋಲ್‌ನತ್ತ ತುಂಬ ವೇಗವಾಗಿ ಕುದುರೆ ಏರಿ ನಡೆದ. ಆದರೆ, ರಾಜನ ಆಗಮನ ತಿಳಿದ ಕೂಡಲೆ ವೈರಿ ಓಡಿದ. ದಾರಿಯಲ್ಲಿ ಕ್ರಿಸ್ನರಾವ್ ೧೦೦೦ ಪರ್ದಾಒಗಳಿಗೆ 4¾ ರಂತೆ ಆರುನೂರು ಕುದುರೆಗಳನ್ನು ಪೋರ್ತುಗೀಜರಿಂದ ಕೊಂಡ.[1] ಅವನು ಈಗಾಗಲೆ ಎರಡು ಬಾರಿ ತನ್ನ ವಚನವನ್ನು ಮತ್ತು ಮಾತನ್ನು ಮುರಿದಿದ್ದುದಾಗಿಯೂ ಮತ್ತು ನೀಡಿದ್ದ ಆಶ್ವಾಸನೆಯನ್ನು ಪೂರೈಸದಿದ್ದುದರಿಂದ ತಾನು ಅವನ ಮೇಲೆ ಎಂಥ ಯುದ್ಧ ಮಾಡುವೆನೆಂದರೆ ಅವನು ಬಲವಂತವಾಗಿ ತನ್ನ ಸಾಮಂತನಾಗಬೇಕಾಗುವುದೆಂದೂ ಮತ್ತು ಅವನಿಂದ ತಾನು ಬಿಳ್ಗಾವ್[2] ಪಡೆದುಕೊಳ್ಳುವವರೆಗೆ ಅವನನ್ನು ಬಿಡುವುದಿಲ್ಲವೆಂದೂ ಹೇಳಿ ಅವನು ರಾಚೋಲ್‌ನಿಂದ ಇಡಲ್‌ಕಾವ್‌ನಿಗೆ ಸಂದೇಶ ಕಳಿಸಿದ.

ಈಗ ಚಳಿಗಾಲ ಆರಂಭಿಸಿದ್ದರಿಂದ ರಾಜ ಮುಂದುವರಿಯಲಾಗಲಿಲ್ಲ ಮತ್ತು ಆದುದರಿಂದ ಈ ಯುದ್ಧಕ್ಕೆ ಸಿದ್ಧವಾಗಲು ಅವನು ಬಿಸ್ನಗಕ್ಕೆ ನಡೆದ ಮತ್ತು ಅವನು ದೊಡ್ಡ ಫಿರಂಗಿದಳವನ್ನು ಸಜ್ಜುಗೊಳಿಸಲು ಆಜ್ಞೆಯಿತ್ತ ಮತ್ತು ಗೋವಾಕ್ಕೆ ರಾಯಭಾರಿಯನ್ನು ಕಳಿಸಿ ಮಂಡಲಾಧಿಪತಿಯ ನೆರವು ಕೋರಿದ. ಬಿಳಿಗಾವ್ ವಶಪಡಿಸಿಕೊಂಡ ಮೇಲೆ ಭೂಭಾಗವನ್ನು ಅವನಿಗೆ ಕೊಡುವುದಾಗಿ ವಚನವಿತ್ತ. ಏಕೆಂದರೆ, ಈ ಬಿಳ್ಗಾವ್ ನಗರ ಗೋವಾದಿಂದ ಹದಿನೈದು ಹರದಾರಿ ಇದೆ ಮತ್ತು ಅದರ ದಳವಾಯಿ ಗೋವಾದ ಭೂಭಾಗದ ಅಧಿಪತಿಯೂ ಆಗಿರುವನು. ಗೋವಾ ಅವನ ಬಿಳ್ಗಾವ್ ನಗರದ ಗಡಿಯಾಗಿದೆ ಮತ್ತು ಗೋವಾದ ಭೂಭಾಗದಿಂದ ಮೂರು ಹರದಾರಿ ದೂರವಿರುವ ಪೊಂಡಾದಲ್ಲಿನ ದುರ್ಗದಲ್ಲಿ ಅವನ ದಳವಾಯಿಗಳಲ್ಲೊಬ್ಬ ನಿದ್ದಾನೆ. ಅವನು ಕಂದಾಯ ಸ್ವೀಕರಿಸುತ್ತಾನೆ ಮತ್ತು ಹಲವಾರು ಹಳ್ಳಿಗಳ ಮೇಲೆ ಅಧಿಪತ್ಯ ಹೊಂದಿರುವನು. ಮತ್ತು ಇದೇ ರೀತಿ ಇವುಗಳಿಗೆ ಮತ್ತು ಉಳಿದವುಗಳಿಗೆ, ಇಡಿ ನಾಡಿನ ಪ್ರಭುವಾದ ಇಡಲ್‌ಕಾವ್ ನಿಯಮಿಸಿದ ಬೇರೆ ದಳವಾಯಿಗಳು ಇರುವರು.[3]

ಕ್ರಿಸ್ನರಾವ್ ಹೀಗೆ ಸಿದ್ಧತೆ ಮಾಡಿಕೊಳ್ಳುತ್ತಿರುವಾಗ ಅವನು ಒಮ್ಮೆಲೆ ಅವನ ಪೂರ್ವಜರೆಲ್ಲ ಅದರಿಂದಲೇ ಸತ್ತಿದ್ದ ತೊಡೆಸಂದಿನ ಬೇನೆಗೆ ತುತ್ತಾದ. ಬಿಸ್ನಗದ ಎಲ್ಲ ರಾಜರು ಸಾಯುವುದು ಇದೇ ಬೇನೆಯಿಂದ.

ಈ ರಾಜಾ ಕ್ರಿಸ್ನರಾವ್ ತರುಣನಿದ್ದು ಈ ಬಿಸ್ನಗ ನಗರದಲ್ಲಿ ಬೆಳೆಯುತ್ತಿದ್ದಾಗ ಒಬ್ಬ ವಾರಾಂಗನೆಯೊಂದಿಗೆ ಗುಪ್ತ ಪ್ರಣಯ ಹೊಂದಿದ್ದ. ಅವನಿಗೆ ಅವಳಲ್ಲಿ ಬಹಳ ಅನುರಕ್ತಿಯಿತ್ತು ಮತ್ತು ಅವಳ ಹೆಸರು ಚಿಣದೇವಿದಿ ಎಂದಿತ್ತು. ಮತ್ತು ಅವಳಲ್ಲಿ ತಾನು ಇಟ್ಟಿದ್ದ ವಿಪುಲ ಪ್ರೇಮಕ್ಕಾಗಿ ತಾನು ರಾಜನಾದರೆ ಅವಳನ್ನು ಮದುವೆಯಾಗುವುದಾಗಿ ಅನೇಕ ಬಾರಿ ಅವನು ವಚನ ಕೊಟ್ಟಿದ್ದ. ಮತ್ತು ಇದನ್ನು ವಿನೋದಕ್ಕಾಗಿ ಅವನು ಹೇಳಿದ್ದರೂ ಅದು ಅನಂತರ ನಿಜವಾಯಿತೆಂದು ಚರಿತ್ರೆ ದಾಖಲಿಸಿದೆ. ಏಕೆಂದರೆ, ಸಿಂಹಾಸನಕ್ಕೇರಿಸಿದ ಮೇಲೂ ತಾನು ತರುಣನಿದ್ದಾಗ ಮಾಡುತ್ತಿದ್ದ ವಿಷಯಗಳಿಂದ ದೂರ ಮಾಡಲ್ಪಟ್ಟಿದ್ದರೂ ಅವನು ಈ ಸ್ತ್ರೀಯೊಂದಿಗಿನ ಪ್ರೇಮವನ್ನು ಮರೆಯದೆ ಗುಪ್ತವಾಗಿ ತನ್ನ ಅರಮನೆಯಿಂದ ಅವಳ ಮನೆಗೆ ಹೋಗುತ್ತಿದ್ದ ಮತ್ತು ಇದನ್ನು ಒಂದು ರಾತ್ರಿ ಕಂಡುಹಿಡಿದು ಅವನು ಆ ಸ್ತ್ರೀಯ ಮನೆಯೊಳಗೆ ಪ್ರವೇಶಿಸುವುದನ್ನು ನೋಡುತ್ತ ನಿಂತಿದ್ದ ಅವನ ಮಂತ್ರಿ ಸಾಲ್ವಟನಿಕ ಅದಕ್ಕಾಗಿ ಅವನನ್ನು ಬಹಳ ಬೈದು ಮರಳಿ ಅರಮನೆಗೆ ಕರೆದೊಯ್ದ. ಆಗ ರಾಜ ತಾನು ಅವಳನ್ನು ಎಷ್ಟೊಂದು ಪ್ರೀತಿಸುತ್ತಿರುವೆನೆಂದೂ ಅವಳನ್ನು ಮದುವೆಯಾಗುವುದಾಗಿ ಮಾತು ಕೊಟ್ಟಿರುವುದಾಗಿಯೂ ಮತ್ತು ಯಾವುದೆ ಪರಿಸ್ಥಿತಿಯಲ್ಲಿಯೂ ಹಾಗೆ ಮಾಡಲು ನಿರ್ಧರಿಸಿರುವುದಾಗಿಯೂ ಅವನಿಗೆ ಹೇಳಿದ. ಅದರ ಬಗೆಗೆ ಅವನು ಎಷ್ಟು ಅಚಲನಾಗಿರುವನೆಂಬುದನ್ನು ನೋಡಿದ ಮಂತ್ರಿ ಅವನ ಇಚ್ಛೆಗೆ ಮಣಿದು ಮಹಾಸ್ವಾಮಿಗಳಿಗೆ ಅದಕ್ಕಾಗಿ ದೂಷಣೆ ಒದಗದ ರೀತಿಯಲ್ಲಿ ಅದನ್ನು ಸಾಧಿಸುವುದಾಗಿ ಹೇಳಿದ. ಇದನ್ನು ಮಾಡಲೋಸುಗ ಅವನು ನರಸಿಂಗದ ರಾಜರ ಮನೆತನದ ಒಬ್ಬ ಅತಿ ಸುಂದರ ಹೆಂಗಸನ್ನು ಆಯ್ದುತಂದ ಮತ್ತು ಅವಳನ್ನು ಅವನೊಂದಿಗೆ ವಿವಾಹ ಮಾಡಿದ ನಂತರ ವಿವಾಹ ಸಮಾರಂಭದ ಕೊನೆಗೆ ಅವನು ಈ ಹೆಂಗಸು ಮತ್ತು ಆ ಹೆಂಗಸನ್ನು ಒಂದು ಮನೆಯಲ್ಲಿಟ್ಟು ಅದಕ್ಕೆ ಒಂದು ದೊಡ್ಡ ಮತ್ತು ಎತ್ತರವಾದ ಗೋಪುರ ಕಟ್ಟಿಸಿ ಅವಳನ್ನು ಅದರಲ್ಲಿಸಿದ. ತರುವಾಯದಲ್ಲಿ ರಾಜ ಇತರ ಅನೇಕ ಹೆಂಡಂದಿರನ್ನು ಲಗ್ನವಾದ. ಏಕೆಂದರೆ, ಈ ರಾಜರು ಬಹಳ ಹೆಂಡಂದಿರನ್ನು ಹೊಂದಿರುವುದು ಬಹಳ ಘನವಾದುದೆಂದು ಬಗೆಯುತ್ತಾರೆ. ಈ ರಾಜಾ ಕ್ರಿಸ್ನರಾವ್ ನಾಲ್ವರನ್ನು ಮದುವೆಯಾದನಾದರೂ ಇವಳನ್ನು ಇತರ ಎಲ್ಲರಿಗಿಂತ ಹೆಚ್ಚು ಪ್ರೀತಿಸಿದ. ಈ ರಾಜ ಇವಳ ಗೌರವಾರ್ಥ, ಅವಳಲ್ಲಿ ತಾನಿಟ್ಟಿದ್ದ ಪ್ರೀತ್ಯರ್ಥವಾಗಿ, ಒಂದು ನಗರವನ್ನು ಕಟ್ಟಿ ಅದಕ್ಕೆ ನಾಗಲಾಪುರವೆಂದು ಹೆಸರಿಟ್ಟು ತನ್ನ ರಾಜ್ಯದಲ್ಲಿಯೆ ಅತ್ಯುತ್ತಮ ಕಾರ್ಯವಾದ ಒಂದು ಹೊಸ ಗೋಡೆಯನ್ನು ಅದರ

ಸುತ್ತ ಕಟ್ಟಿಸಿದ ಮತ್ತು ಗಚ್ಚುಗಾರೆಗಳಿಂದಲೆ ಕಟ್ಟಿದ ಮನೆಗಳುಳ್ಳ ಒಂದು ಉದ್ದ ಹಾಗೂ ವಿಶಾಲವಾದ ರಸ್ತೆಯನ್ನು ಅದರಲ್ಲಿ ನಿರ್ಮಿಸಿದ. ಈ ನಗರದಲ್ಲಿ ಜನರನ್ನು ವಸತಿಗೊಳಿಸಲೋಸುಗ ಅಲ್ಲಿ ತಮ್ಮ ಅರಮನೆಗಳನ್ನು ಕಟ್ಟಿಸಿಕೊಳ್ಳುವಂತೆ ತನ್ನ ರಾಜ್ಯದ ದೊರೆಗಳೆಲ್ಲರಿಗೆ ಆಜ್ಞೆಯಿತ್ತ ಮತ್ತು ಅವರು ಹಾಗೆಯೆ ಮಾಡಿದರು. ಈ ನಗರದಲ್ಲಿ ಒಂದು ಪ್ರಮುಖ ಬೀದಿಯಿದೆ. ಅದರ ಉದ್ದ ನಾಲ್ಕುಸಾವಿರ ಏಳುನೂರು ಹೆಜ್ಜೆ[4] ಮತ್ತು ನಲವತ್ತು ಹೆಜ್ಜೆ ಅಗಲ ಇದ್ದು ಅದು ಖಂಡಿತವಾಗಿಯೂ ನೋಡಲು ಸಾಧ್ಯವಿರುವ ಅತ್ಯಂತ ಸುಂದರ ಬೀದಿಯಾಗಿದೆ. ಮತ್ತು ಖರ್ಚು ಲೆಕ್ಕಿಸದೆ ಅವನು ಈ ನಗರವನ್ನು ನಿರ್ಮಿಸಿದ ಮತ್ತು ಪೂರ್ಣಗೊಳಿಸಿದ. ಈ ನಾಡಿನಲ್ಲಿ ಸುಂಕ ಬಹಳ ವಿದ್ದು ಅದು ಈಗ ಒಳಗೆ ಬರುವ ವಸ್ತುಗಳಿಂದ ಬರುವ ಸುಂಕದಿಂದ ನಲವತ್ತೆರಡು ಸಾವಿರ ಪರ್ದಾಒಗಳನ್ನು ನೀಡುತ್ತಿದೆ. ಏಕೆಂದರೆ, ಪುರುಷ ಸ್ತ್ರೀಯರು ಅಲ್ಲದೆ ತಲೆ ಹೊರೆ ಮತ್ತು ಎಲ್ಲ ಸರಕೂ ಬಿಡದಂತೆ ಯಾವುದೂ ಸುಂಕ ಕೊಡದಂತೆ ದ್ವಾರ ದೊಳಕ್ಕೆ ಪ್ರವೇಶಿಸುವಂತಿಲ್ಲ.

ರಾಜ ತನ್ನ ಕಾಲದಲ್ಲಿ ನೀರಿಗಾಗಿ ಎರಡು ಬಲು ಎತ್ತರವಿರುವ ದಡಗಳ ಮಧ್ಯೆ ಇರುವ ಕೆರೆಯನ್ನು ನಿರ್ಮಿಸಿದ. ಆದರೆ ಈ ನಾಡಿನಲ್ಲಿ ಅದನ್ನು ಮಾಡುವ ಸಾಧನವಾಗಲಿ ಮಾಡುವವನಾಗಲಿ ಇರದ್ದರಿಂದ ಕೆಲವು ಪೋರ್ತುಗೀಜ ಉಪ್ಪಾರ ರನ್ನು ಕಳಿಸುವಂತೆ ಮಂಡಲಾಧಿಪತಿಯನ್ನು ಕೋರಿ ಗೋವಾಕ್ಕೆ ಹೇಳಿಕಳಿಸಿದ. ಮತ್ತು ಮಂಡಲಾಧಿಪತಿ ಕಲ್ಲಿನ ಬಹುಕುಶಲ ಕೆಲಸಗಾರನಾದ ಜೊಆಒ ಡೆಲಾ ಪೊಂಟೆ[5]ಯನ್ನು ಕಳಿಸಿದ. ರಾಜ ಅವನಿಗೆ ಕೆರೆಯನ್ನು ಹೇಗೆ ಕಟ್ಟಬೇಕೆಂದು ತಾನು ಬಯುಸಿರುವುದನ್ನು ಹೇಳಿದ. ಈ ಮನುಷ್ಯನಿಗೆ ಅದು ಮಾಡಲಸಾಧ್ಯವಾಗಿ ಕಂಡರೂ ತಾನು ಕಟ್ಟುವುದಾಗಿ ರಾಜನಿಗೆ ಹೇಳಿದ ಮತ್ತು ಸುಣ್ಣ ತಯಾರಿಸಿಕೊಡಲು ರಾಜನಿಗೆ ಹೇಳಲಾಗಿ ಅವನು ನಕ್ಕ. ಏಕೆಂದರೆ, ಅವನ ನಾಡಿನಲ್ಲಿ ಮನೆ ಕಟ್ಟಲು ಸುಣ್ಣವನ್ನು ಹೇಗೆ ಬಳಸಬೇಕೆಂಬುದು ಗೊತ್ತಿಲ್ಲ. ದೊಡ್ಡ ದೊಡ್ಡ ಕಲ್ಲುಗಳನ್ನು ಮತ್ತು ಬಂಡೆಗಳನ್ನು ಕೊಳ್ಳದಲ್ಲಿ ಒಗೆಯಲು ರಾಜ ಆಜ್ಞೆಯಿತ್ತ. ಆದರೆ ಎಲ್ಲ ಪುಡಿ ಪುಡಿಯಾದುದರಿಂದ ದಿನವಿಡಿ ಮಾಡಿದ ಕೆಲಸ ರಾತ್ರಿಯಲ್ಲಿ ಹಾಳಾಗುತ್ತಿತ್ತು. ಇದರಿಂದ ಅಚ್ಚರಿಗೊಂಡ ರಾಜ ತನ್ನ ಪಂಡಿತರನ್ನು ಮತ್ತು ಮಾಂತ್ರಿಕರನ್ನು ಕರೆ ಕಳಿಸಿ ಇದರ ಬಗೆಗೆ ಅವರ ವಿಚಾರ ಕೇಳಿದ. ಆ ಕೆಲಸ ಅಷ್ಟೊಂದು ದೊಡ್ಡದಿದ್ದು ಅವನು ದೇವತಾವಿಗ್ರಹಗಳಿಗೆ ಏನನ್ನೂ ನೀಡದಿದ್ದುದರಿಂದ ಅವುಗಳು ಅವನ ಕೆಲಸದ ಬಗೆಗೆ ಸಿಟ್ಟಾಗಿವೆಯೆಂದೂ ಅಲ್ಲಿ ಅವನು ಪುರುಷರ ಇಲ್ಲವೆ ಸ್ತ್ರೀಯರ ಇಲ್ಲವೆ ಕೋಣ ಗಳ ರಕ್ತ ಸುರಿಸದಿದ್ದರೆ ಆ ಕೆಲಸ ಎಂದೂ ಪೂರ್ತಿಗೊಳ್ಳದೆಂದೂ ಅವರು ಅವನಿಗೆ ಹೇಳಿದರು. ಆದುದರಿಂದ, ರಾಜ ತನ್ನ ಬಂದಿಗಳಾಗಿದ್ದ ಮತ್ತು ಮರಣಕ್ಕೆ ಅರ್ಹ ರಾಗಿದ್ದ ಎಲ್ಲ ಪುರುಷರನ್ನೂ ತರಲು ಕಳಿಸಿ ಅಲ್ಲಿ ಅವರ ತಲೆ ಕತ್ತರಿಸಲು ಆಜ್ಞಾಪಿಸಿದ.

ಇದರೊಂದಿಗೆ ಕೆಲಸ ಮುಂದುವರಿಯಿತು. ಕೊಳ್ಳದ ಮಧ್ಯದಲ್ಲಿ ಅಡ್ಡಲಾಗಿ ಅವನು ಎಂಥ ಎತ್ತರವಾದ ಮತ್ತು ಅಗಲವಾದ ಒಡ್ಡು ಕಟ್ಟಿದನೆಂದರೆ ಅದು ಉದ್ದಕ್ಕಾಗಲಿ ಅಗಲಕ್ಕಾಗಲಿ ಬಾಣ ಹೋಗುವಷ್ಟು ದೂರವಿತ್ತು ಮತ್ತು ದೊಡ್ಡ ಕಂಡಿಗಳನ್ನು ಹೊಂದಿತ್ತು. ಮತ್ತು ಅದರ ಕಳಗೆ ನೀರು ಹರಿದುಹೋಗಲು ಕೊಳವೆ ಗಳನ್ನು ಜೋಡಿಸಿದ ಮತ್ತು ಮುಚ್ಚಬೇಕೆಂದಾಗ ಅವರು ಅವುಗಳನ್ನು ಮುಚ್ಚು ತ್ತಿದ್ದರು. ಈ ನೀರಿನ ಸಹಾಯದಿಂದ ಅವರು ನಗರದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದರು ಮತ್ತು ಭತ್ತದ ಹೊಲಗಳಿಗೆ ಮತ್ತು ತೋಟಗಳಿಗೆ ನೀರುಣಿಸಲು ಅನೇಕ ಕಾಲುವೆಗಳನ್ನು ಕಟ್ಟಿದರು ಮತ್ತು ಹೊಲಗಳನ್ನು ಸುಧಾರಿಸಲೋಸುಗ ಈ ನೀರಿನಿಂದ ನೀರುಣ್ಣುವ ಹೊಲಗಳನ್ನು ಜನರಿಗೆ ಒಂಬತ್ತು ವರ್ಷ ಅವರು ಸುಧಾರಣೆ ಮಾಡಿ ಕೊಳ್ಳುವವರೆಗೆ ಉಚಿತವಾಗಿ ಕೊಟ್ಟ. ತತ್ಫಲವಾಗಿ ಈಗಾಗಲೆ ಕಂದಾಯ ೨೦,೦೦೦ ಪರ್ದಾಒಗಳಿಗೆ ಏರಿದೆ.

ಈ ಕೆರೆಯ ಮೇಲೆ ಸುತ್ತಲೂ ಆವರಣವಿರುವ ಒಂದು ದೊಡ್ಡ ದಿಂಡು ಇದೆ ಮತ್ತು ಅದರ ಮಧ್ಯಕ್ಕೆ ಈಚೆಗೊಂದು ಆಚೆಗೊಂದು ಎರಡು ಗೋಪುರಗಳುಳ್ಳ ಕೆಲವು ಬಲು ಗಟ್ಟಿಯಾದ ದ್ವಾರಗಳಿವೆ. ಮತ್ತು ಒಳಗೆ ಯಾವಾಗಲೂ ಕಾವಲಿರುವ ೧೦೦೦ ಜನ ಇರುತ್ತಾರೆ. ಎಲ್ಲ ರಸ್ತೆಗಳು ಅಲ್ಲಿ ಕೂಡಿದ್ದು ಬಿಸ್ನಗ ನಗರವನ್ನು ಪ್ರವೇಶಿಸಲು ಇದನ್ನು ಬಿಟ್ಟರೆ ಅನ್ಯ ಮಾರ್ಗವಿರದ್ದರಿಂದ ಎರಡೂ ನಗರಗಳಲ್ಲಿ ಬರುವ ವಸ್ತುಗಳೆಲ್ಲ ಇದೇ ದ್ವಾರದ ಮೂಲಕ ಪ್ರವೇಶಿಸಬೇಕು. ಈ ದ್ವಾರವನ್ನು ಪ್ರತಿ ವರ್ಷ ೧೨,೦೦೦ ಪರ್ದಾಒಗಳಿಗೆ ಬಾಡಿಗೆಗೆ ಕೊಡಲಾಗುತ್ತದೆ ಮತ್ತು ಯಾರೂ, ಅವನು ಸ್ವದೇಶೀಯನಿರಲಿ, ವಿದೇಶೀಯನಿರಲಿ, ಬಾಡಿಗೆದಾರರು ಕೇಳಿ ದಷ್ಟು ಹಣ ಕೊಡದೆ ಪ್ರವೇಶಿಸುವಂತಿಲ್ಲ. ಇವೆರಡೂ ನಗರಗಳಲ್ಲಿ ಆಹಾರಸಾಮಗ್ರಿ ಯಾಗಲಿ ವ್ಯಾಪಾರಿ ಸರಕಾಗಲಿ ಯಾವುದೂ ಇಲ್ಲದ್ದರಿಂದ ಎಲ್ಲವೂ ಹೊರಗಿನಿಂದ ಹೇರುಎತ್ತುಗಳ ಮೇಲೆ ಬರುತ್ತದೆ. ಏಕೆಂದರೆ, ಈ ನಾಡಿನಲ್ಲಿ ಭಾರ ಹೊರಲು ಅವರು ಯಾವಾಗಲೂ ಪ್ರಾಣಿಗಳನ್ನು ಬಳಸುತ್ತಾರೆ. ಮತ್ತು ಪ್ರತಿ ದಿನ ಈ ದ್ವಾರ ಗಳ ಮೂಲಕ ೨೦೦೦ ಎತ್ತುಗಳು ಪ್ರವೇಶಿಸುತ್ತವೆ ಮತ್ತು ರಾಜ್ಯದ ಯಾವುದೆ ಭಾಗದಲ್ಲಿ ಎಂದೂ ಏನನ್ನೂ ಕೊಡಬೇಕಿರದ ಕೆಲವು ಕೋಡು ಇಲ್ಲದ ಎತ್ತುಗಳನ್ನು ಬಿಟ್ಟರೆ ಇವುಗಳಲ್ಲಿ ಪ್ರತಿಯೊಂದೂ ಮೂರು ವಿಂಟೆಮ್‌ಗಳನ್ನು[6] ತೆರಬೇಕಾಗುತ್ತದೆ.

ಇವೆರಡು ನಗರಗಳ ಹೊರಗಡೆ ಗೋಧಿ ಮತ್ತು ಕಡಲೆ ಮತ್ತು ರಾಗಿಗಳಿಂದ ಫಲವತ್ತಾಗಿ ಸಾಗುವಳಿಗೈದ ಹೊಲಗಳೂ ಸ್ಥಳಗಳೂ ಇವೆ. ಕೊನೆಯದನ್ನು ಈ ಪ್ರದೇಶದಲ್ಲಿ ಅತಿ ಹೆಚ್ಚಾಗಿ ತಿನ್ನುತ್ತಾರೆ ; ಅದರ ನಂತರ, ಈ ದೇಶದ ಬಹುಭಾಗ ದಲ್ಲಿ ಯಾವಾಗಲೂ ತಿನ್ನುವ ಮತ್ತು ಬಾಯಿಯಲ್ಲಿ ಇಟ್ಟುಕೊಂಡಿರುವ ವಸ್ತುವಾದ ಅಡಿಕೆ.

## ಅಡಿಟಿಪ್ಪಣಿಗಳು

1 ೪೦೦೦ ಪರ್ದಾವ್‌ಗಳಿಗೆ ಹತ್ತೊಂಬತ್ತು. ಚರಿತ್ರಕಾರ ವಿಜಯನಗರದಲ್ಲಿ ಕುದುರೆ ವ್ಯಾಪಾರಿಯಾಗಿದ್ದ, ಮುಂದೆ ಅವನು ಒಂದು ಸಾವಿರ ಪರ್ದಾವ್‌ಗಳಿಗೆ ಹನ್ನೆರಡು ಅಥವಾ ಹದಿನೈದು ಕುದುರೆಗಳು ಸಾಮಾನ್ಯ ಬೆಲೆಯಾಗಿತ್ತೆಂದು ಉಲ್ಲೇಖಿಸುತ್ತಾನೆ.

2 ಬೆಳಗಾಂವಿ.

3 ಪೊಂಡಾದ ದಳವಾಯಿ ಅಂಕುಶ್ ಖಾನ ಇದ್ದ (ಮೇಲೆ ಪುಟ ೩೩೫. ಟಿಪ್ಪಣಿಗಳು ೧, ೨).

4 ಸುಮಾರು ಒಂದೂಕಾಲು ಮೈಲು, ನಾಗಲಾಪುರ ಎಂದರೆ ಆಧುನಿಕ ಹೊಸಪೇಟೆ. ಅಳತೆ ನಿಕರವಾಗಿದ್ದರೆ. ನಿಸ್ಸಂಶಯವಾಗಿಯೂ ರಾಜಧಾನಿಗೆ ಹೋಗುವ ಈ ಬೀದಿ ಈಗ ಇಲ್ಲ.

5 ಹದಿನಾರನೆಯ ಶತಮಾನದ ಇತಿಹಾಸದಲ್ಲಿ ಡೆಲಾ ಪೊಂಟೆಗಳನ್ನು ಒಂದಕ್ಕಿಂತ ಹೆಚ್ಚು ಬಾರಿ ಉಲ್ಲೇಖಿಸಲಾಗಿದೆ. ವೆನಿಸ್‌ದಲ್ಲಿನ ರಿಯಾಲ್ಟೊ ೧೫೮೮ರಲ್ಲಿ ಆ್ಯಂಟೊನಿಯೊ ಡೆಲಾ ಪೊಂಟೆಯಿಂದ ನಿರ್ಮಿತವಾದುದರಿಂದ ಅವರು ಬಹುಶಃ ಇಟ್ಯಾಲಿಯನ್ ಅಥವಾ ಇಟ್ಯಾಲಿಯನ್ ಮೂಲದ ಕುಟುಂಬವಾಗಿದ್ದುದು ಮತ್ತು ವೃತ್ತಿಯಿಂದ ಅಭಿಯಂತರರಾಗಿದ್ದರು. ಇದಾದರೊ ಕಾಲ್ಪನಿಕ ಸಂಬಂಧವಾಗಿರಬಹುದು. ಪೋರ್ತುಗಾಲ ಮತ್ತು ಇಟಲಿ ಎರಡರಲ್ಲೂ ಸೇತುವೆ ನಿರ್ಮಾಣದಲ್ಲಿ ಕೌಶಲ್ಯ ಪಡೆದಿದ್ದ ಅಥವಾ ಹಿಂದಿನ ಕಾಲದಲ್ಲಿ ಆ ಮನೆತನದವನೊಬ್ಬ ಯಾವುದೊ ಒಂದು ಸೇತುವೆಯ ನಿರ್ಮಾಣದಲ್ಲಿ ವಿಶೇಷತೆ ಪಡೆದ ಪರಿಣಾಮವಾಗಿ ಆ ಅಡ್ಡ ಹೆಸರನ್ನು ಪಡೆದಿರುವ ಸಾಧ್ಯತೆಯಿದೆ. ಗ್ರಂಥಪಾಠದಲ್ಲಿ ಅಭಿಯಂತ, ಬಹುಶಃ ಪೋರ್ತುಗಾಲ ರಾಜ ೧೫೨೦ರ ಎಪ್ರಿಲ್ ಕೊನೆಗೆ ಮೊರೊಕೊದಲ್ಲಿನ ಟೆಟುಆನ್‌ನಲ್ಲಿ ದುರ್ಗವೊಂದನ್ನು ಕಟ್ಟುವ ಸಾಧ್ಯತೆಯನ್ನು ಪರಿಶೀಲಿಸಲು ಕಳಿಸಿದ ವ್ಯಕ್ತಿಯಾಗಿರಬಹುದು. ಡಾಮ್ ಪೆದ್ರೊ ದ ಮ್ಯಾಸ್ಕರೆನ್ಹಸ್ (ನಂತರ, ೧೫೫೪ರಲ್ಲಿ, ಗೋವಾದ ಮಂಡಲಾಧಿಪತಿಯಾದ) ಈ ಉದ್ದಿಷ್ಟ ಕಾರ್ಯಕ್ಕಾಗಿ ಸ್ಯೂಟಾದಿಂದ ಯಾನ ಮಾಡಿದ ಮತ್ತು "ಜೊಆಒ ನ್ಯೂನೆಸ್ ದ ಪಾಂಟ್" ಅವನೊಂದಿಗೆ ತೆರಳಿದನೆಂದು ಉಲ್ಲೇಖಿಸಲಾಗಿದೆ. ಮೂರಿಷ್ ಕಡಲುಗಳ್ಳರು ಈ ಮೊದಲು ಮಾಡಿಕೊಂಡಿದ್ದಂತೆ ಸ್ಪೇನ್ ಮತ್ತು ಪೋರ್ತುಗಾಲ ಮೇಲೆ ಕಡಲುಗಳ್ಳ ದಾಳಿ ಮಾಡುವ ನೆಲೆಯಾಗಿ ಟೆಟುಆನ್ ಅನ್ನು ಮುಂದೆಯೂ ಬಳಸದಂತೆ ತಡೆಯಲು ರಾಜ ಮತ್ತು ಸಾಮ್ರಾಟ ಐದನೆಯ ಚಾರ್ಲ್ಸ್ ಇಬ್ಬರೂ ಕಾತರರಾಗಿದ್ದರು. (ಡ್ಯಾಮಿಆಒ ದ ಗೊಎಸ್, ಕ್ರಾನಿಕಾದ ಡಾಮ್ ಮ್ಯಾನುಎಲ್, ಕೊಯಿಂಬ್ರಾ ಆವೃತ್ತಿ, ೧೭೯೦, ಸಂ ೧: ಭಾಗ ೪, ಪು. ೫೩೨ ; ಆಲ್ಗನ್ಸ್ ಡಾಕ್ಯೂಮೆಂಟೊಜ್ ವೆದೊ ಆರ್ಕೈವೊ ನಾಶಿಒನಲ್ ದ ತೊರ್ ದೊ ಟುಂಬೊ, ಲಿಸ್ಬನ್, ೧೮೯೨, ಪು. ೪೪೫-೪೪೬).

೧೫೨೦ರಲ್ಲಿ ಮಾರ್ಚ್ ತಿಂಗಳು ಕಳೆದ ಮೇಲೆ ಗೋವಾದ ಮಂಡಲಾಧಿಪತಿಯಾಗಿದ್ದ ಡಾಮ್ ಡಿಯೊಗೊ ಲೊಪ್ಸ್ ದ ಸಿಕ್ವೈರಾ ಕೆಂಪು ಸಮುದ್ರದ ದಂಡಯಾತ್ರೆ

ಯಿಂದ ಹಿಂತಿರುಗಿದಾಗ ಒಂದು ಸಮಯದಲ್ಲಿ, ಆ ಸ್ಥಳ ಇಡಿ ಹಡಗುಪಡೆಗೆ ಸಾಕಾಗುವಷ್ಟು ಲಂಗರುನೆಲೆ ಹೊಂದಿದ್ದರಿಂದ ಗೋವಾದ ಹತ್ತಿರವಿದ್ದ ಮಾಪ್ರೆಘಾಬಾದಲ್ಲಿ ದುರ್ಗವನ್ನು ಕಟ್ಟಲು ಅವನ ಸಲಹೆಗಾರರು ಅವನಿಗೆ ಒತ್ತಿ ಹೇಳಿದರು. (ಕೊರಿಯೊ, ಲೆಂಡಸ್‌ದ ಇಂಡಿಯಾ, ೨, ಪು. ೬೨೨). ಕೊರಿಯಾ ಹೀಗೆ ಮುಂದುವರಿಯುತ್ತಾನೆ : "ಆದರೆ, ಮಂಡಲಾಧಿಪತಿ Cotiaದಲ್ಲಿ ಆ್ಯಂಟೊನಿಯೊ ಕೊರಿಯಾ ಮತ್ತು ತನ್ನ ಪ್ರಧಾನ ಹಡಗು ಚಾಲಕ ಪೆರೊ ದ ಕೊಯಿಂಬ್ರಾರನ್ನು ಮಾಪ್ರೆಘಾಬಾದಲ್ಲಿನ ನದಿಯನ್ನು ಪರಿವೀಕ್ಷಿಸಲು ಮತ್ತು ಅಡ್ಡಗಟ್ಟೆಯ ಮೇಲಿನ ನೀರನ್ನು ಅಳೆಯಲೋಸುಗ ಮತ್ತು ಅದನ್ನು ಚೆನ್ನಾಗಿ ಬಲ್ಲ ನಿರ್ಮಾಣಕಾರ್ಯಗಳ ಮೇಲ್ವಿಚಾರಕ ಮ್ಯಾನುಎಲ್ ದ ಫೊಂಟೆ ಮತ್ತು ಅವನ ಸಹೋದರ ಜೊಆಒ ದ ಲಾ ಫೊಂಟೆಯರನ್ನು ಭೂಮಿಯನ್ನು ಪರಿವೀಕ್ಷಿಸಿ ಕಲ್ಲು ದೊರೆಯುವುದೂ ಮತ್ತು ನಿರ್ಮಾಣಕಾರ್ಯಕ್ಕೆ ಸುಣ್ಣ ಮಾಡಬಹುದೊ ಹೇಗೆಂದು ಎಲ್ಲವರ ಬಗೆಗೆ ಖಚಿತ ಸಂಗತಿ ತಂದುಹೇಳಲೋಸುಗ ಕಳಿಸುವುದು ಉಚಿತವೆಂದು ಬಗೆದ."

ಈ ಮನುಷ್ಯ ಮ್ಯಾಸ್ಕರೆನ್ಹಸ್ ಜೊತೆಗೆ ಟೆಟುಆನ್‌ಗೆ ಹೋದವನೆ ಆಗಿದ್ದ ಪಕ್ಷದಲ್ಲಿ ಬಹಳ ಮಾಡಿ ಅವನು ಮಾಪ್ರೆಘಾಬಾಕ್ಕೆ ಹೋದಾಗ ಭಾರತದಲ್ಲಿ ಇದ್ದು ಬಹಳ ದಿನವಾಗಿರಲಿಕ್ಕಿಲ್ಲ. ಚರಿತ್ರೆಗಾರ ಪ್ಯಾಸ್ ಅದನ್ನು ಕಟ್ಟುತ್ತಿರುವಾಗ ನೋಡಿದ್ದ (ಪು. ೨೪೪) ಮತ್ತು ನೂನೆಜ್ ಗ್ರಂಥಪಾಠದಲ್ಲಿ ಉಲ್ಲೇಖಿಸಿದ ಕೃಷ್ಣದೇವರಾಯನ ದೊಡ್ಡ ಕೆರೆಯನ್ನು ೧೫೨೧ರ ಶರತ್ಕಾಲದವರೆಗಂತೂ ಆರಂಭಿಸಲಾಗಿರಲಿಲ್ಲವೆಂಬುದನ್ನು ಇದು ತೋರಿಸುತ್ತದೆ. ಹಾಗಿದ್ದರೆ, ಪ್ಯಾಸ್ ವಿಜಯನಗರದ ವರ್ಣನೆಯನ್ನು ಆ ತಾರೀಖು (೧೫೨೨ ಎನ್ನಿ) ಮುಗಿಯುವವರೆಗೆ ಬರೆಯಲಿಲ್ಲ. (ಮೇಲೆ ಪು. ೧೬೨ ನೋಡಿರಿ).

6 ಸುಮಾರು ೩೧/೨ ಡೆನಾರಿಯಸ್ (ಪೆನಿ). ಒಂದು ವಿಂಟೆಮ್‌ಗೆ ಸುಮಾರು ೧೭/೨೦ ಡೆ.

## ಅಧ್ಯಾಯ ೨೦

### ಕ್ರಿಸ್ನರಾವ್‌ನ ಮರಣಾನಂತರ ಅವನ ತಮ್ಮ ಅಚ್ಯುತರಾವ್ ರಾಜನಾದುದು

ಈ ಮೊದಲೆ ಹೇಳಿರುವಂತೆ ತನ್ನ ಬೇನೆಯಿಂದ ರಾಜಾ ಕ್ರಿಸ್ನರಾವ್ ಸಾಯುವ ಪೂರ್ವದಲ್ಲಿ ಅನಾರೋಗ್ಯಕ್ಕೆ ತುತ್ತಾಗಿ ಜೀವದಿಂದುಳಿಯುವ ಆಸೆಯಿಲ್ಲದೆ ಮೃತ್ಯು ಪತ್ರ ಮಾಡಿದ. ತನ್ನನ್ನು ರಾಜನನ್ನಾಗಿ ಮಾಡಿದ ಸಮಯಕ್ಕೆ ಬಸಬಲರಾವ್‌ನ ಮಗನಾಗಿದ್ದ ತನ್ನ ಸೋದರಳಿಯನೊಂದಿಗೆ ಚಾಂದೆಗರಿ[1] ದುರ್ಗದಲ್ಲಿ ಬಂಧಿಸಿಡಲು ಕಳಿಸಲಾಗಿದ್ದ ತನ್ನ ಮೂವರು ಸಹೋದರರಲ್ಲಿ ಈಗ ಆಳುತ್ತಿರುವ ಅಚೆತರಾವ್‌ನನ್ನು[2] ರಾಜನನ್ನಾಗಿ ಮಾಡಬೇಕೆಂದು ಮೃತ್ಯುಪತ್ರದಲ್ಲಿ ಹೇಳಿದ್ದ. ಏಕೆಂದರೆ, ಅವನಿಗೆ ಸಿಂಹಾಸನವೇರಲು ಯೋಗ್ಯ ವಯಸ್ಸಿನ ಮಗನಿಲ್ಲದೆ ಹದಿನೇಟು ತಿಂಗಳಿನವನೊಬ್ಬ ಮಾತ್ರವಿದ್ದು ಅಚೆತ್‌ರಾವನೆ ಉಳಿದವರಿಗಿಂತ ತಕ್ಕವನೆಂದು ಅವನಿಗೆ ತೋರಿತು. ಅವನ ಮರಣಾನಂತರ ಸಾಲ್ವಣೆ ಮಂತ್ರಿಯಾಗಿ, ಚಾಂದೆಗರಿ ದುರ್ಗದಲ್ಲಿ ಬಂದಿ ಯಾಗಿದ್ದ ರಾಜಾ ಅಚಿತರಾವ್ ಬರುವವರೆಗೆ ಆಡಳಿತ ನಿರ್ವಹಿಸಿದ. ಅದೂ ಅಲ್ಲದೆ, ಅಚಿತ್‌ರಾವ್ ಬಿಳಗಾವ್[3]ಅನ್ನು ವಶಪಡಿಸಿಕೊಳ್ಳಬೇಕೆಂದೂ ಇಡಲ್‌ಕಾವ್‌ನ ವಿರುದ್ಧ ಯುದ್ಧ ಮಾಡಬೇಕೆಂದೂ ಮೃತ್ಯುಪತ್ರದಲ್ಲಿ ಹೇಳಲಾಗಿತ್ತು.

ಆ ರಾಜಾ ಚೈತರಾವ್ ಸಿಂಹಾಸನವೇರಿದ ಮೇಲೆ ವ್ಯಸನ ಮತ್ತು ದಬ್ಬಾಳಿಕೆ ಯಲ್ಲಿ ಮುಳುಗಿದ. ಅವನು ಪ್ರಾಮಾಣಿಕನಲ್ಲ ಮತ್ತು ಅದರಿಂದಾಗಿ ಜನರು ಮತ್ತು ದಳವಾಯಿಗಳು ಅವನ ಕೆಟ್ಟ ಜೀವನ ಮತ್ತು ಹವ್ಯಾಸಗಳಿಂದ ಬಹಳ ಬೇಸತ್ತಿದ್ದಾರೆ. ಏಕೆಂದರೆ, ಬಹಳ ದುರಾಚಾರಿಗಳು ಮತ್ತು ಹಿಂಸಕರಾದ ತನ್ನ ಇಬ್ಬರು ಮೈದುನರು[4] ಬಯಸಿದುದನ್ನು ಮಾಡುವುದನ್ನು ಬಿಟ್ಟರೆ ಅವನು ಬೇರೇನನ್ನೂ ಮಾಡಿಲ್ಲ. ಈ ಕಾರಣಕ್ಕಾಗಿ ಅವನು ವಜನವಿಲ್ಲದವನೆಂದೂ ಅರಿತು ಮತ್ತು ರಾಜನು ಯುದ್ಧ ಪ್ರವೃತ್ತಿಯುವನಲ್ಲವಾದ್ದರಿಂದ ತಾನು ಸುಲಭವಾಗಿ ಯಶಸ್ವಿಯಾಗಬಹುದೆಂದು ನಂಬಿ ಇಡಲ್‌ಕಾವ್ ಅವನ ಮೇಲೆ ಯುದ್ಧ ಮಾಡಲು ನಿರ್ಧರಿಸಿದ. ಆದುದರಿಂದ, ಅವನು ತನ್ನ ಬಲಗಳನ್ನು ಸಜ್ಜುಗೊಳಿಸಿ ರಾಜನ ಪ್ರದೇಶದ ಮೇಲೆ ಆಕ್ರಮಣ ಮಾಡುತ್ತ ಬಿಸ್ನಗ ನಗರದ ಒಂದು ಹರದಾರಿ ಅಂತರದೊಳಗೆ ಬಂದ ಇಡಲ್‌ಕಾವ್ ನೊಂದಿಗೆ ಕೇವಲ ೧೨,೦೦೦ ಕಾಲಾಳು ಮತ್ತು ೩೦,೦೦೦ ಕುದುರೆಗಳಿದ್ದುದರಿಂದ ಅಷ್ಟೊಂದು ದೊಡ್ಡ ಪಡೆಗಳು ಮತ್ತು ಶಕ್ತಿಯೊಂದಿಗೆ ನಗರದಲ್ಲಿದ್ದ ಚೇತರಾವ್ ಯುದ್ಧ ಮಾಡುವ ಮನಸ್ಸು ಮಾಡಿದ್ದರೆ ಅವನನ್ನು ಸುಲಭವಾಗಿ ಸೆರೆಹಿಡಿಯು

ಬಹುದಿತ್ತು. ಆದರೂ ಸಹ ಈ ಚಿಕ್ಕ ಬಲದೊಂದಿಗೆ ಇಡಲ್‌ಕಾವ್ ಬಿಸ್ನಗದಿಂದ ಒಂದು ಹರದಾರಿಯ ಮೇಲೆ ನಾಗಲಾಪುರ ಪ್ರವೇಶಿಸಿ ಅದನ್ನು ನೆಲಸಮಗೊಳಿಸಿದ. ರಾಜ ಅವನ ವಿರುದ್ಧ ದಂಡೆತ್ತಿ ಹೋಗಲು ಪ್ರಯತ್ನಿಸಲಿಲ್ಲ. ಯುದ್ಧ ಮಾಡಲು ಅವನಲ್ಲಿ ಧೈರ್ಯವೂ ಇರಲಿಲ್ಲ. ಕೆಲವು ದಳವಾಯಿಗಳು, ಒಳ್ಳೆಯ ಅಶ್ವಾಳುಗಳು ಮಾತ್ರ ಸಣ್ಣ ಕಾದಾಟಗಳನ್ನು ಮಾಡಿದರು. ಇವರು ಅವನ ಉಪಸ್ಥಿತಿ ಇಷ್ಟು ಅಲ್ಪ ಕಾರ್ಯಕ್ಕೆ ಅನವಶ್ಯಕವೆಂದು ಹೇಳಿ ಮತ್ತು ಆಕ್ರಮಣ ಮಾಡಲು ಮಹಾ ಪ್ರಭು ಅಪ್ಪಣೆ ನೀಡಬೇಕೆಂದು ಕೋರಿ ರಾಜನೊಂದಿಗೆ ಮಾತಾಡಿದರು. ಆದರೆ, ರಾಜ ಗಾಬರಿಯಾಗಿದ್ದ ಮತ್ತು ತನ್ನ ಮೈದುನರ ಸಲಹೆಯಂತೆ (ಅದನ್ನವರು ಧಾರಳವಾಗಿ ಕೊಡುತ್ತಿದ್ದರು) ಇಡಲ್‌ಕಾವ್‌ನಲ್ಲಿಗೆ ಕಳಿಸಿ ಶಾಂತಿ ಒಪ್ಪಂದ ಮಾಡಿ ಕೊಳ್ಳಲು ನಿರ್ಧರಿಸಿದ. ಇಡಲ್‌ಕಾವ್‌ನಿಗೆ ಖುಷಿಯಾಯಿತು ಮತ್ತು ರಾಜ ಪ್ರತಿಯೊಂದು ಲಕ್ಷವೂ ೧೦೦೦೦೦ ಪರ್ದಾಓ ಬೆಲೆಯುಳ್ಳ ಹತ್ತು ಲಕ್ಷ ಸುವರ್ಣ ಪರ್ದಾಓಗಳನ್ನು ಕೊಡಬೇಕು ಮತ್ತು ಕ್ರಿಸ್ನರಾವ್ ತನ್ನಿಂದ ಕಿತ್ತುಕೊಂಡಿದ್ದ ಮತ್ತು ೧೫೦,೦೦೦ ಪರ್ದಾಓಗಳ ಭೂಕಂದಾಯವುಳ್ಳ ರಾಚೊಲ್ ನಗರವನ್ನೂ ಬಿಟ್ಟುಕೊಡಬೇಕು ಹಾಗೂ ಏನಿಲ್ಲೆಂದರೂ ಒಂದು ಲಕ್ಷ ಬೆಲೆ ಬಾಳುವ ರತ್ನಾಭರಣ ಗಳನ್ನು ಕೊಡಬೇಕೆಂಬ ಷರತ್ತಿನ ಮೇಲೆ ಒಂದು ನೂರು ವರ್ಷ ಬಾಳಲಿದ್ದ ಶಾಂತಿ ಒಪ್ಪಂದವನ್ನು ಅವನೊಂದಿಗೆ ಮಾಡಿಕೊಂಡ. ರಾಜ ಈ ಕರಾರುಗಳನ್ನು ಒಪ್ಪಿ ಕೊಂಡ ಮತ್ತು ಇಡಲ್‌ಕಾವ್ ಇಷ್ಟು ಹಣದಿಂದ ಸಂತುಷ್ಟನಾಗಿ ಮರಳಿದ. ಮತ್ತು ಇದೆಲ್ಲವನ್ನು ಮಾಡಿದ ಮೇಲೆ ರಾಜ ಅವರಿಗೆ ೧೩೦ ಮ್ಯಾಂಗೆಲಿನಿಸ್[5] ತೂಕದ ವಜ್ರದ ಹರಳನ್ನು, ಪೂರ್ಣ ಒಂದು ಲಪ್ರ ಬೆಲೆಯುಳ್ಳ ಅಂತಹವೆ ಇತರ ಹದಿನೈದ ರೊಂದಿಗೆ ಕಳಿಸಿದ. ಈ ಹಣವನ್ನು ಅವನು ಕ್ಷಿಪ್ರ ತರುವಾಯದಲ್ಲಿಯೆ ವಸೂಲು ಮಾಡಿ ತನ್ನ ಬೊಕ್ಕಸಕ್ಕೆ ಸೇರಿಸಿಕೊಂಡ. ಅದನ್ನು ತನ್ನ ದಳವಾಯಿಗಳು ಮತ್ತು ಜನರಿಂದ ಎಷ್ಟು ನಿರ್ದಯವಾಗಿ ಕಿತ್ತುಕೊಂಡನೆಂದರೆ ಆರು ತಿಂಗಳಲ್ಲಿ ವಸೂಲು ಮಾಡಿ ಎಲ್ಲವನ್ನು ತನ್ನ ಬೊಕ್ಕಸಕ್ಕೆ ಸೇರಿಸಿಕೊಂಡನೆಂದು ಹೇಳಲಾಗುತ್ತದೆ.

ಆದುದರಿಂದ, ದಳವಾಯಿಗಳು ಮತ್ತು ಸೈನಿಕರು, ಅವನು ಶಾಂತಿ ಒಪ್ಪಂದ ಮಾಡಿಕೊಂಡುದಕ್ಕಾಗಿಯೂ ಮತ್ತು ಅವರೆಲ್ಲರ ಇಚ್ಛೆಗೆ ವಿರುದ್ಧವಾಗಿ ಈ ಧನ ಮೊತ್ತವನ್ನು ಕಿತ್ತುಕೊಂಡುದಕ್ಕಾಗಿಯೂ, ಬಹಳ ಅಸಂತುಷ್ಟರಾಗಿ ಬಾಳಿದ್ದಾರೆ ಮತ್ತು ಈ ರಾಜ್ಯ ಎಂದಾದರೂ ವಿನಾಶಕ್ಕೆ ತಳ್ಳಲ್ಪಟ್ಟರೆ ಅದು ರಾಜಾ ಚಿತರಾವ್‌ನ ಜೀವಮಾನದಲ್ಲಿಯೆ ಸಂಭವಿಸುವುದೆಂದು ಭಾವಿಸಿದ್ದರು, ಏಕೆಂದರೆ, ಅವನು ತನ್ನ ರಾಜ್ಯದ ಪ್ರಮುಖ ಜನರನ್ನು ನಾಶಪಡಿಸಿದ್ದ ಮತ್ತು ಅವರ ಮಕ್ಕಳನ್ನು ಕೊಂದಿದ್ದ ಮತ್ತು ಅವರ ವಸ್ತುಗಳನ್ನು ವಶಪಡಿಸಿಕೊಂಡಿದ್ದ. ತಾನು ಪ್ರಭಾವಕ್ಕೊಳಗಾಗಿದ್ದ ಮೈದುನರ ಕೆಟ್ಟ ಸಲಹೆಯೆ ಇದಕ್ಕೆಲ್ಲ ಕಾರಣ.

ಅವನು ಒಂದು ರಾತ್ರಿ ಸೆರೆಹಿಡಿದ ಕ್ರಿಸ್ನರಾನಾರ್ಕ್ ಎಂಬವನ ಬಗೆಗೆ ಹೇಳುವೆ. ಅವನು ರಾಜನಿಗೆ ಶರಣಾಗತನಾಗುವ ಮೊದಲು ಎರಡುನೂರರಷ್ಟಿದ್ದ ತನ್ನೆಲ್ಲ ಹೆಂಡಂದಿರನ್ನು ಕೊಂದ ಮತ್ತು ಆ ಮೇಲೆ ರಾಜನೆದುರಿನಲ್ಲಿಯೆ ವಿಷದಿಂದ ತನ್ನನ್ನು ಕೊಂದುಕೊಂಡ. ಇದೇಕೆಂದರೆ ರಾಜ ಅವನೆದುರಿಗೇ ಅವನ ಮಗನನ್ನು ಕೊಲ್ಲ ಬಯಸಿದ್ದ. ಎಲ್ಲವೂ ಬಂಗಾರ ಮತ್ತು ಬೆಳ್ಳಿಯಿಂದ ಅಲಂಕೃತವಾದ ದಳವಾಯಿಗಳ ಶಸ್ತ್ರಾಸ್ತ್ರಗಳ, ಅಂದರೆ ಕಠಾರಿಗಳು, ಕತ್ತಿಗಳು, ಭಲ್ಲೆಗಳು, ಸಮರಕೊಡಲಿಗಳು ಮತ್ತು ಇತರ ವಸ್ತುಗಳ, ಮಾರಾಟದಿಂದ ರಾಜ ೩೦೦೦ ಪರ್ದಾಒಗಳಿಗಿಂತ ಹೆಚ್ಚು ಸಂಪಾದಿಸಿದ. ಈ ರೀತಿ ರಾಜ್ಯ ತನ್ನ ಪ್ರಮುಖರು ಮತ್ತು ತನ್ನನ್ನು ಪೋಷಿಸುವವರನ್ನು ಕಳೆದುಕೊಂಡಿತು. ಆದುದರಿಂದಲೆ, ಇಡಲ್‌ಕಾವ್ ಅದನ್ನು ಅಷ್ಟು ನಿಕೃಷ್ಟವಾಗಿ ಕಾಣುತ್ತ ಅದರ ಮೇಲೆ ಪ್ರತಿ ದಿನ ಸಾವಿರ ಅಪಮಾನಗಳನ್ನು ಮತ್ತು ಬೇಡಿಕೆಗಳನ್ನು ಹೇರುತ್ತಿದ್ದಾನೆ. ಅವನು ತೀರ ಕಡಿಮೆ ಚಾರಿತ್ರ್ಯ ಬಲವುಳ್ಳವನು ಮತ್ತು ತನ್ನ ರಾಜ್ಯದ ಮತ್ತು ದೇಶದ ಹಿತಕ್ಕೆ ಅತ್ಯಂತ ಸಂಬಂಧಿಸಿದ ಸಂಗತಿಗಳನ್ನು ಅತಿ ನಿರ್ಲಕ್ಷ್ಯ ಮಾಡುವ ವ್ಯಕ್ತಿ ಎಂದು ಅವರು, ಭಾವಿಸಿದ್ದನ್ನು ಬಿಟ್ಟರೆ ಈ ರಾಜನ ಬಗೆಗೆ ಹೆಚ್ಚಿನ ಹೇಳುವುದು ಏನೂ ಇಲ್ಲ.

## ಅಡಿಟಿಪ್ಪಣಿಗಳು

1 ಚಂದ್ರಗಿರಿ

2 ಅಚ್ಯುತರಾವ್

3 ಬೆಳಗಾಂವಿ

4 ಇವರಿಬ್ಬರು ಬಹುಶಃ ಮೂವರು ಬಲಿಷ್ಠ ಸಹೋದರರಾದ ರಾಮ, ತಿರುಮಲ ಮತ್ತು ವೆಂಕಟಾದ್ರಿಯರಲ್ಲಿ ಇಬ್ಬರಾಗಿರಬಹುದು. ಇವರಲ್ಲಿ ಮೊದಲಿಬ್ಬರು ಕೃಷ್ಣದೇವನ ಇಬ್ಬರು ಪುತ್ರಿಯರನ್ನು ಲಗ್ನವಾದರು. ಹಾಗಿದ್ದ ಪಕ್ಷದಲ್ಲಿ ಅವರು ರಾಜಾ ಅಚ್ಯುತನ ಪ್ರತ್ಯಕ್ಷ ಮೈದುನರಾಗಿರದೆ ತನ್ನ ಸಹೋದರನಾಗಿದ್ದ ಮೃತ ರಾಜನ ಮೈದುನರಾಗಿದ್ದರು.

೫ ಒಂದು ಮ್ಯಾಂಗೆಲಿನ್ ಎಂದರೆ ಹೆಚ್ಚುಕಡಿಮೆ ಒಂದು ಕ್ಯಾರಟ್‌ಗೆ ಸಮ. ಆದರೆ ಪ್ರತ್ಯಕ್ಷ ವ್ಯತ್ಯಾಸ ಒಂದು ಐದಾಂಶ, ೪ ಮ್ಯಾಂಗೆಲಿನ್ = ೫ ಕ್ಯಾರಟ್, ಆದುದರಿಂದ, ೧೩೦ ಮ್ಯಾಂಗೆಲಿನ್ = ೧೬೨ ಕ್ಯಾರಟ್, ಕೊಹಿನೂರು, ಇಂಗ್ಲೆಂಡಿಗೆ ತರಲಾದಾಗ, ೧೮೬ ಕ್ಯಾರಟ್ ತೂಕವುಳ್ಳದ್ದಿತ್ತು.

## ಅಧ್ಯಾಯ ೨೧

### ಈ ರಾಜರ ಉಪಚಾರದ ರೀತಿ ಕೆಳಗಿನಂತಿದೆ

(ಕೆಳಗಿನದು ಅಚ್ಯುತರಾಯನ ಆಳಿಕೆಗೆ ಸಂಬಂಧಿಸಿದ್ದು)

ಅವರು ಬಳಸುವ ವಸ್ತುಗಳೂ ಸೇರಿದಂತೆ ಈ ಮನೆಯು ಎಲ್ಲಾ ಸೇವಾ ಉಪಕರಣಗಳು, ಅಂದರೆ ಬಾನೆಗಳು ಮತ್ತು ಬೋಗುಣಿಗಳು, ಸ್ಟೂಲುಗಳು, ಹೂಜಿಗಳು ಮತ್ತು ಅಂಥ ಇನ್ನಿತರ ಪಾತ್ರೆಗಳು, ಬೆಳ್ಳಿ ಬಂಗಾರದವುಗಳು. ಅವನ ಹೆಂಡಂದಿರು ಮಲಗುವ ಮಂಚಗಳು[1] ಬೆಳ್ಳಿಯ ತಗಡುಗಳಿಂದ ಆಚ್ಛಾದಿಸಲಾಗಿರುತ್ತವೆ ಮತ್ತು ಅಲಂಕೃತವಾಗಿರುತ್ತವೆ. ಪ್ರತಿ ಹೆಂಡತಿಗೂ ಮಲಗಲು ತನ್ನದೇ ಹಾಸಿಗೆಯುಂಟು ಮತ್ತು ರಾಜನದು ತಗಡಿನಿಂದ ಆಚ್ಛಾದಿಸಲ್ಪಟ್ಟು ಅಸ್ತರಿ ಹಾಕಲ್ಪಟ್ಟಿರುತ್ತದೆ. ಮತ್ತು ಅದರ ಎಲ್ಲ ಕಾಲುಗಳೂ ಬಂಗಾರದವಿವೆ. ಅದರ ಗಾದಿ ರೇಷ್ಮೆಯದಿದ್ದು ಅದರ ತಲೆದಿಂಬಿನ ಅಂಚುಗಳಲ್ಲಿ ದೊಡ್ಡ ಸಣ್ಣ ಮುತ್ತುಗಳನ್ನು ಹೆಣೆಯಲಾಗಿರುತ್ತದೆ. ಅದಕ್ಕೆ ಕಾಲಿಗೆ ಅದೇ ಮಾದರಿಯ ನಾಲ್ಕು ದಿಂಬುಗಳಿದ್ದು ಮೇಲೆ ರೇಷ್ಮೆ ಅರಿವೆ ಬಿಟ್ಟರೆ ಬೇರೆ ಮಗ್ಗಲು ಹಾಸಿಗೆ ಇಲ್ಲ. ಅವನು ಯಾವಾಗಲೂ ತನ್ನೊಂದಿಗೆ ಬೆಳ್ಳಿಯ ಚೌಕಟ್ಟಿನೊಂದಿಗೆ[2] ಸೊಳ್ಳೆ ಪರದೆಗಳನ್ನು ಒಯ್ಯುತ್ತಾನೆ. ಮತ್ತು ಅವನಿಗೆ ಕಬ್ಬಿಣದ ತುಂಡುಗಳಿಂದ ಮಾಡಿದ ಮನೆಯಿದ್ದು ಅದರಲ್ಲಿ ಅವನು ರಣರಂಗಕ್ಕೆ ಹೋದಂತಹ ಸಮಯಕ್ಕಾಗಿ ಒಂದು ದೊಡ್ಡ ಮಂಚವಿದೆ.

ಅವನಿಗೆ ಐನೂರು ಹೆಂಡಂದಿರು ಮತ್ತು ಅವನಿಗೆ ಬೇಕಾದಷ್ಟು ಕಡಿಮೆ ಇಲ್ಲವೆ ಹೆಚ್ಚು ಇದ್ದು ಅವರೊಂದಿಗೆ ಅವನು ಮಲಗುತ್ತಾನೆ. ಮತ್ತು ಇವರೆಲ್ಲ ಅವನ ಮರಣಕಾಲಕ್ಕೆ ಅಗ್ನಿ ಪ್ರವೇಶಿಸುತ್ತಾರೆ. ಅವನು ಯಾವುದೆ ಊರಿಗೆ ಪಯಣಿಸುವಾಗ ತನಗೆ ಅತಿ ಪ್ರೀತಿಯುವರಾದ ಇಪ್ಪತ್ತೈದು ಅಥವಾ ಮೂವತ್ತು ಹೆಂಡಂದಿರನ್ನು ತನ್ನೊಂದಿಗೆ ಕರೆದೊಯ್ಯುವನು. ಪ್ರತಿಯೊಬ್ಬಳೂ ಕೋಲುಗಳುಳ್ಳ ತನ್ನ ಮೇಣೆಯಲ್ಲಿ ಕುಳಿತು ಅವರು ಅವನೊಂದಿಗೆ ಹೋಗುವರು. ಪ್ರಧಾನ ಹೆಂಡತಿಯ ಮೇಣೆ ಸಣ್ಣ ಮುತ್ತು ಮತ್ತು ಮುತ್ತುಗಳಿಂದ, ದೊಡ್ಡ ಮತ್ತು ಭಾರಿ ಗೊಂಡೆಗಳನ್ನು ಹೆಣೆದ ಅರುಣವರ್ಣದ ಬಟ್ಟೆಯಿಂದ ಆಚ್ಛಾದಿತವಾಗಿರುತ್ತದೆ ಮತ್ತು ಕೋಲು ಬಂಗಾರದಿಂದ ಅಲಂಕೃತವಾಗಿರುತ್ತದೆ. ಇತರ ಹೆಂಡಂದಿರ ಮೇಣೆಗಳು ಬೆಳ್ಳಿಯಿಂದ ಮಾತ್ರ ಅಲಂಕೃತವಾಗಿರುತ್ತವೆ. ಆದರೆ, ತನಗಾಗಿಯೆ ಇರುವ ಇನ್ನೊಂದು ಮೇಣೆ ಯಾವಾಗಲೂ ಬಲಬದಿಗೆ ಹೋಗುತ್ತದೆ ಮತ್ತು ಅದೇ ರೀತಿ ಬಂಗಾರದಿಂದ ಅಲಂಕೃತವಾಗಿರುತ್ತದೆ. ಮಗನೊ ಮಗಳೊ ಅವನೊಂದಿಗೆ ಹೋಗುವುದಿದ್ದಾಗ

ಅವನಿ/ಳಿಗಾಗಿ ಅವನು ಬಂಗಾರದ ಕುಂದಣವಿಟ್ಟ ಇನ್ನೊಂದು ದಂತದಿಂದ ಮಾಡಿದ ಮಂಚ ಒಯ್ಯುವನು. ಅವನು ರಣರಂಗದಲ್ಲಿರುವಾಗ ಅವನು ಎಲ್ಲಿಯೆ ಬೀಡು ಬಿಟ್ಟರಲಿ ಅಲ್ಲಿ ಅವನಿಗಾಗಿ ಕಲ್ಲು ಅರಲಿನ ಮನೆ ಕಟ್ಟಲಾಗುತ್ತದೆ. ಏಕೆಂದರೆ, ಅವನು ಡೇರೆಯಲ್ಲಿ ವಾಸಿಸುವುದಿಲ್ಲ ಮತ್ತು ಅವನು ಇವುಗಳನ್ನು ಯಾವಾಗಲೂ ಆರಿವೆಗಳಿಂದ ಅಲಂಕೃತಗೊಳಿಸಿರುತ್ತಾನೆ.

ದ್ವಾರದೊಳಗೆ ಅವನ ಅರಮನೆಯಲ್ಲಿ ಪೂರ್ಣ ಐದು ಅಥವಾ ಆರುನೂರು ಸಂಖ್ಯೆಯುಷ್ಟಿರುವ ಸ್ತ್ರೀಯರೂ, ಬೀಜವೊಡೆದ ಗಂಡಸರು ಮತ್ತು ಸೇವಕರು ಅವನ ಸೇವೆಗೈಯುತ್ತಾರೆ. ದ್ವಾರದೊಳಗೆ ರಾಜನಿಗಿದ್ದಂತೆಯೆ ರಾಜನ ಈ ಹೆಂಡಂದಿರಿಗೂ, ತಮ್ಮ ಸೇವೆಗೆ, ಪ್ರತಿಯೊಬ್ಬಳಿಗೂ ತನ್ನದೇ, ತಮ್ಮವೇ ಅಧಿಕಾರಿಗಳಿರುತ್ತಾರೆ. ಆದರೆ ಇವರೆಲ್ಲ ಸ್ತ್ರೀಯುರು, ರಾಜನ ಅರಮನೆಗಳು ದೊಡ್ಡವಿದ್ದು ವಿಶಾಲ ಕೋಣೆಗಳುಳ್ಳವುಗಳಾಗಿವೆ. ಅವುಗಳಿಗೆ ಮಠಗಳಲ್ಲಿರುವಂತಹ ಏಕಾಂತ ಕೋಣೆ ಗಳಿದ್ದು ಅವುಗಳೊಂದಿಗೆ ಚಿಕ್ಕ ಕೋಣೆಗಳಿವೆ. ಮತ್ತು ಪ್ರತಿಯೊಂದರಲ್ಲಿ ಅವನ ಹೆಂಡಂದಿರಲ್ಲೊಬ್ಬಳು ಮತ್ತು ಅವಳೊಂದಿಗೆ ಅವಳ ಪರಿಚಾರಿಕೆ ಇರುವಳು ಮತ್ತು ರಾಜ ವಿಶ್ರಾಂತಿಗಾಗಿ ಹೋಗುವಾಗ ಅವನು ಈ ಏಕಾಂತ ಕೋಣೆಗಳ ಮೂಲಕ ಹೋಗುತ್ತಾನೆ ಮತ್ತು ಅವನ ಹೆಂಡಂದಿರು ಬಾಗಿಲಲ್ಲಿ ನಿಂತು ಅವನನ್ನು ಒಳಗೆ ಕರೆಯುತ್ತಾರೆ. ಆದರೆ, ಇವರು ಪ್ರಧಾನ ಹೆಂಡಂದಿರಾಗಿರದೆ ನಾಡಿನ ದಳವಾಯಿ ಗಳ ಮತ್ತು ಮನ್ನೆಯರ ಮಕ್ಕಳು. ಅರಮನೆಯ ದ್ವಾರದೊಳಗೆ ಇನ್ನೂರು ಹಿಂಡುವ ಆಕಳುಗಳಿದ್ದು ಅವುಗಳ ಹಾಲಿನಿಂದ ಈ ಸ್ತ್ರೀಯರಿಗೆ ತಿನ್ನಲು ಬೆಣ್ಣೆಯನ್ನು ಮಾಡುತ್ತಾರೆಂದು ಹೇಳಲಾಗುತ್ತದೆ.

ತನ್ನ ಆಹಾರಕ್ಕಾಗಿ ರಾಜ ಏನನ್ನೂ ಖರ್ಚು ಮಾಡಬೇಕಿಲ್ಲ. ಏಕೆಂದರೆ, ಮನ್ನೆಯರು ಪ್ರತಿದಿನ ಅದನ್ನು ಅವನ ಮನೆಗೆ ಕಳಿಸುತ್ತಾರೆ; ಅಕ್ಕಿ ಮತ್ತು ಗೋಧಿ ಮತ್ತು ಮಾಂಸ ಮತ್ತು ಕೋಳಿಗಳು ಮತ್ತು ಅವುಗಳೊಂದಿಗೆ ಇತರ ಎಲ್ಲ ಆವಶ್ಯಕ ಸಾಮಾನುಗಳು. ಅಡಿಗೆ ಮನೆಯಲ್ಲಿ ಸುಮಾರು ಇನ್ನೂರು ಕೆಳದರ್ಜೆಯ ರಕ್ಷಕರು ಮತ್ತು ಅವರ ಮೇಲೆ ನಾಲ್ವರು ಮತ್ತು ರಕ್ಷಣಾ ಪಡೆಯ ಇಬ್ಬರು ಪ್ರಧಾನ ಅಧಿಕಾರಿಗಳು ಇರುತ್ತಾರೆ. ಈಗ ಈ ರಾಜನ ರಕ್ಷಣಾ ಪಡೆಯ ದಳವಾಯಿಗಳಾಗಿರು ವವರಲ್ಲಿ ಒಬ್ಬ ಪೆಡನಾಯಿಕ್ ಮತ್ತು ಇನ್ನೊಬ್ಬ ಅಜನಾಯಿಕ್ ಎಂದು ಕರೆಯಲ್ಪಡು ತ್ತಾರೆ. ಅವರು ಸೈನಿಕರ ದಳವಾಯಿಗಳೂ ಆಗಿರುವರು, ಈ ದ್ವಾರಪಾಲಕರು ನಾಲ್ಕು ಅಥವಾ ಐದು ದ್ವಾರಗಳಿಗಿಂತ ಒಳಕ್ಕೆ ಹೋಗುವುದಿಲ್ಲ. ಏಕೆಂದರೆ, ಅವು ಗಳಿಗಿಂತ ಒಳಕ್ಕೆ ಬೀಜವೊಡೆದ ಗಂಡಸರು ಮತ್ತು ಹೆಂಗಸರನ್ನು ಬಿಟ್ಟರೆ ಬೇರೆ ಯಾರೂ ಇರುವುದಿಲ್ಲ.

ರಾಜ ಕುದುರೆಯೇರಿ ಹೊರ ನಡೆದಾಗ ಅವನೊಂದಿಗೆ ಸಾಮಾನ್ಯವಾಗಿ ಅವನ ರಕ್ಷಣಾದಳದ ಇನ್ನೂರು ಅಶ್ವಾಳುಗಳು ಹೋಗುತ್ತಾರೆ. ಅವರಿಗೆ ಅವನು ಸಂಬಳ ಕೊಡುತ್ತಾನೆ. ಮತ್ತು ಒಂದು ನೂರು ಆನೆಗಳು. ಇದೂ ಅಲ್ಲದೆ, ಯಾವಾಗಲೂ ತಮ್ಮ ಸೈನಿಕರೊಂದಿಗೆ ಹಾಜರಿರುವ ನಲವತ್ತು ಅಥವಾ ಐವತ್ತು ಮಂದಿ ದಳವಾಯಿಗಳು, ಅವನು ತನ್ನೊಂದಿಗೆ ಗುರಾಣಿಯುಳ್ಳ ಎರಡು ಸಾವಿರ ಜನರನ್ನು ಕರೆದೊಯ್ಯುತ್ತಾನೆ. ಅವರೆಲ್ಲ ಒಳ್ಳೆಯ ಸ್ಥಾನದಲ್ಲಿದ್ದವರಾಗಿದ್ದು ಇಕ್ಕೆಲಗಳಲ್ಲಿ ಕ್ರಮವಾಗಿ ಅಣಿಗೊಳಿಸಲ್ಪಟ್ಟಿರುವರು. ಮತ್ತು ಮುಂದೆ, ದ್ವಾರಪಾಲಕರಂತೆ ಕೈಯಲ್ಲಿ ಬೆತ್ತ ಹಿಡಿದ ಸುಮಾರು ಮೂವತ್ತು ಅಶ್ವಾಳುಗಳೊಂದಿಗೆ ಪ್ರಧಾನ ದಂಡನಾಯಕ ಹೋಗುತ್ತಾನೆ. ಪ್ರಧಾನ ದಂಡನಾಯಕ ಭಿನ್ನ ದಂಡವನ್ನು ಹಿಡಿದಿರುತ್ತಾನೆ. ಈಗ ರಾಜನ ಪ್ರಧಾನ ದಂಡನಾಯಕನಾಗಿರುವವನು ಚಿನಪನಾಯಿಕ್ ಎಂಬುವನು. ಹಿಂಚೂಣಿಯಲ್ಲಿ ಎರಡುನೂರು ಅಶ್ವಾಳುಗಳೊಂದಿಗೆ ಕುದುರೆಗಳ ಮುಖ್ಯಸ್ಥ ಹೋಗುತ್ತಾನೆ. ಮತ್ತು ಅಶ್ವಪಡೆಯ ಹಿಂದೆ ಒಂದು ನೂರು ಆನೆಗಳು ಹೋಗುತ್ತವೆ. ಮತ್ತು ಅವುಗಳ ಬೆನ್ನ ಮೇಲೆ ಉಚ್ಚ ದರ್ಜೆಯ ವ್ಯಕ್ತಿಗಳು ಕುಳಿತುಕೊಂಡಿರುತ್ತಾರೆ. ಅವನ ಮುಂದೆ ಜೀನು ತೊಡಿಸಿದ ಹನ್ನೆರಡು ಯುದ್ಧಾಶ್ವಗಳಿರುತ್ತವೆ ಮತ್ತು ಈ ಕುದುರೆಗಳ ಮುಂದೆ ರಾಜನ ವೈಗಾವಲಗಾಗಿಯೆ ಐದು ಆನೆಗಳು ನಡೆಯುತ್ತವೆ ಮತ್ತು ಈ ಆನೆಗಳ ಮುಂದೆ ಧ್ವಜಪಟ ಕೈಯಲ್ಲಿ ಹಿಡಿದ ಇಪ್ಪತ್ತೈದು ಅಶ್ವಾಳುಗಳು ನಗಾರಿ ಮತ್ತು ಕಹಳೆ ಮತ್ತು ಇತರ ಸಂಗೀತದೊಂದಿಗೆ ಎಷ್ಟೊಂದು ಗಟ್ಟಿಯಾಗಿ ಬಾರಿಸುತ್ತ ನಡೆದಿರುತ್ತಾರೆಂದರೆ ಸಿಮಗೆ ಬೇರೆ ಏನೂ ಕೇಳಿಸುವುದಿಲ್ಲ. ಇವುಗಳ ಮುಂದೆ ಬದಿಗಳಲ್ಲಿ ಮನುಷ್ಯರು ಹೊತ್ತ ದೊಡ್ಡನಗಾರಿ ಹೊರಟಿರುತ್ತದೆ ಮತ್ತು ಅದನ್ನು ಅವರು ಆಗಾಗ ಬಡಿಯುತ್ತ ಹೋಗುವರು. ಅದರ ಸಪ್ಪಳ ಬಹಳ ದೂರದವರೆಗೆ ಕೇಳಿಸುತ್ತದೆ. ಈ ನಗಾರಿಗೆ ಅವರು 'ಪಿಚ' ಎಂದು ಕರೆಯುತ್ತಾರೆ. ಮತ್ತು ರಾಜನು ಕುದುರೆ ಹತ್ತಿದ ನಂತರ ಅವನು ಇನ್ನೂರು ಅಶ್ವಾಳುಗಳನ್ನು ಮತ್ತು ನೂರು ಆನೆಗಳನ್ನು ಮತ್ತು ರಕ್ಷಣಾ ಪಡೆಯ ಗುರಾಣಿಧಾರಕರನ್ನು ಎಣಿಸುತ್ತಾನೆ ಮತ್ತು ಯಾವನೆ ತಪ್ಪಿಸಿರಲಿ ಉಗ್ರವಾಗಿ ಶಿಕ್ಷಿಸಿ ಅವನ ಆಸ್ತಿ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.

## ಅಡಿಟಿಪ್ಪಣಿಗಳು

1 ಇಲ್ಲಿ ಬಳಸಲಾದ ಶಬ್ದ catre ಆಗಿದೆ. ಹಗುರವಾದ ಮಂಚ. ಬಿಡಾರ ಮಂಚ ಎಂಬರ್ಥ ನೀಡುವ ಆಧುನಿಕ ದಕ್ಷಿಣ ಭಾರತೀಯ 'cot' ಶಬ್ದದ ಮೂಲ ಇದಾಗಿರಬಹುದು.

2 **Arquelha de prata. Arqueltha** ಎಂದರೆ ಸೊಳ್ಳೆಪರದೆ. ಸ್ಪಷ್ಟವಾಗಿಯೆ, ಸೊಳ್ಳೆಪರದೆಯನ್ನು ಬೆಳ್ಳಿಯಿಂದ ಮಾಡಲು ಶಕ್ಯವಿಲ್ಲದ್ದರಿಂದ, ಇಲ್ಲಿ ಬಹುಶಃ ಅದರ ಆಸರೆಗಳನ್ನು ಸೂಚಿಸಲಾಗಿದೆ. ನನಗೆ ಬರೆದ ಒಂದು ಪತ್ರದಲ್ಲಿ

ಸೆನ್ಯೊರ್ ಲೋಪ್ಸ್ ಅದರರ್ಥ ವಿತಾನದ ಮೇಲ್ಭಾಗ 'le ciel du lit', ಅಥವಾ ಪರದೆಗಳನ್ನು ಎತ್ತಿ ಹಿಡಿಯುವ ಚೌಕಟ್ಟು ಎಂದು ಸೂಚಿಸುತ್ತಾನೆ. Arquelha, arco ('ಬಿಲ್ಲು' ಇಲ್ಲವೆ 'ಕಮಾನು')ದ ಪುಟ್ಟಶಬ್ದ. ಈ ಪ್ರಕರಣದಲ್ಲಿ, ಅದು ಮುಹಮ್ಮದೀಯ ಶೈಲಿಯಲ್ಲಿ ಮಾಡಲ್ಪಟ್ಟ ವಿತಾನದ ಗುಮ್ಮಟ್ಟದ ಒಳಮೈ ಎಂಬರ್ಥ ನೀಡಬಹುದು. ಮತ್ತು ಪರದೆಗಳು ಸೊಳ್ಳೆ ಪರದೆ ಬಟ್ಟೆಯವಾಗಿರದೆ ರೇಷ್ಮೆ ಅಥವಾ ಜರತಾರಿ ಬಟ್ಟೆಯವಾಗಿದ್ದಿರಬಹುದು.

3 ಬಳಸಲಾದ ಶಬ್ದ armadas. ಅದರರ್ಥ 'ಸಜ್ಜುಗೊಳಿಸಿದ' ಅಥವಾ 'ಬಟ್ಟೆ ಇಳಿಬಿಟ್ಟ' ಅಥವಾ ಸಂಭವನೀಯವಾಗಿ 'ಬೇಲಿ ಕಟ್ಟಿದ' ಅಥವಾ 'ಸುಭದ್ರವಾಗಿರಿಸಿದ' ಎಂದಿರಬಹುದು.

## ಅಧ್ಯಾಯ ೨೨

### ರಾಜನಿಗೆ ವಂದನೆ ಸಲ್ಲಿಸುವ ಬಗೆ ಇತ್ಯಾದಿ

ಮನ್ನೆಯರು ಪ್ರತಿದಿನ ರಾಜನಿಗೆ ಸಲ್ಲಿಸುವ ಸಲಾಮ್ 'ಇಂತಿದೆ : ಬೆಳಿಗ್ಗೆ ಹತ್ತು ಅಥವಾ ಹನ್ನೊಂದು ಘಂಟೆಗೆ ಮನ್ನೆಯರು ಅರಮನೆಗೆ ಹೋಗುತ್ತಾರೆ. ಆ ವೇಳೆ ಅವನು ತನ್ನ ಹೆಂಡಂದಿರ ನಿವಾಸಗಳೊಳಗಿಂದ ಬರುತ್ತಾನೆ ಮತ್ತು ಅವನು ತನ್ನ ಆಸನದಲ್ಲಿ ಕುಳಿತ ಮೇಲೆ ಮನ್ನೆಯರಿಗೆ ಬಾಗಿಲು ತೆರೆಯಲಾಗುತ್ತದೆ, ಮತ್ತು ಪ್ರತಿಯೊಬ್ಬ ಮನ್ನೆಯು ತಾನೆ ಬಂದು ಶಿರ ಬಾಗುತ್ತಾನೆ ಮತ್ತು ತನ್ನ ಕೈಗಳನ್ನು ಮೇಲೆತ್ತುತ್ತಾನೆ. ಅವರು "ಸಲಾಮ್" ಎನ್ನುವದು ಇದನ್ನೇ. ರಾಜನೊಂದಿಗೆ ಸುಮಾರು ಹತ್ತು ಹನ್ನೆರಡು ಮಂದಿ ಇರುತ್ತಾರೆ. ಅವರ ಕರ್ತವ್ಯವೆಂದರೆ ಪ್ರತಿಯೊಬ್ಬ ದಳವಾಯಿ ಪ್ರವೇಶಿಸುತ್ತಲೆ "ಮಹಾಪ್ರಭು, ನೋಡಿರಿ, ನಿಮ್ಮ ಇಂಥಿಂಥ ದಳವಾಯಿ: ನಿಮಗೆ ಸಲಾಮ್ ಮಾಡುತ್ತಿದ್ದಾನೆ" ಎಂದು ಹೇಳುವುದು.

ಬಿಸ್ನಗದ ರಾಜರು ಯಾವಾಗಲೂ ಪ್ರದರ್ಶನಕ್ಕಾಗಿ ತಮ್ಮ ಲಾಯಗಳಲ್ಲಿ ಅನೇಕ ಕುದುರೆಗಳನ್ನು, ಮತ್ತು ಅವರು ಯಾವಾಗಲೂ ಎಂಟು ಅಥವಾ ಒಂಭೈನೂರು ಕುದುರೆಗಳನ್ನು ಮತ್ತು ನಾಲ್ಕೈದು ನೂರು ಆನೆಗಳನ್ನು ಹೊಂದಿರುತ್ತಿದ್ದರು. ಅವುಗಳಿಂದಾಗಿ ಮತ್ತು ಅವುಗಳನ್ನು ನೋಡಿಕೊಳ್ಳಲು ಬೇಕಾಗುವ ಮಂದಿಯಿಂದಾಗಿ ಬಹಳ ಖರ್ಚು ತಗಲುತ್ತಿತ್ತು ; ಮತ್ತು ಈಗ ಇರುವ ರಾಜ (ಅಚ್ಯುತರಾಯ) ತನ್ನ ಲಾಯಗಳಲ್ಲಿ ಏಳುನೂರಕ್ಕೂ ಮಿಕ್ಕಿ ಕುದುರೆಗಳು ಮತ್ತು ನಾನೂರು ಆನೆಗಳನ್ನು ಹೊಂದಿದ್ದಾನೆ. ಅವುಗಳಿಗಾಗಿ ಮತ್ತು ಅವುಗಳ ಚಾಕರರಿಗೆ ಊಟ ಹಾಕಲಿಕ್ಕೋಸ್ಕರ ಪ್ರತಿ ದಿನ ಎರಡು ಸಾವಿರ ಸುವರ್ಣ ಪರ್ದಾಒಗಳನ್ನು ಖರ್ಚು ಮಾಡುತ್ತಾನೆ. ರಾಜ ವೇತನ ನೀಡುವ ಅಶ್ವಾಳುಗಳು ಆರು ಸಾವಿರ ಇರುವರು ಮತ್ತು ಅವರೆಲ್ಲ ಲಾಯಗಳ ಸಿಬ್ಬಂದಿಯೆಂದು ಪರಿಗಣಿತವಾಗುವರು ; ಮತ್ತು ಅವರ ಸೇವೆ ಮಾಡುವವರಿಗೆ ಪ್ರತಿ ವರ್ಷ, ಕೆಲವರಿಗೆ ಒಂದು ಸಾವಿರ, ಕೆಲವರಿಗೆ ಐದೂನೂರು ಕೆಲವರಿಗೆ ಮುನ್ನೂರು ಪರ್ದಾಒಗಳನ್ನು ಕೊಡಲಾಗುತ್ತದೆ, ಮತ್ತು ಕಡಿಮೆ ವೇತನವಿದ್ದವರು ಯಾರೂ ಒಂದುನೂರಕ್ಕಿಂತ ಕಡಿಮೆ ಪಡೆಯುವುದಿಲ್ಲ. ಈ ಆರು ಸಾವಿರದಲ್ಲಿ ಇನ್ನೂರು ಜನ ರಾಜನೊಂದಿಗೆ ಕುದುರೆಯೇರಿ ಹೋಗಲೇಬೇಕು.

ಅವರನ್ನು ತಮ್ಮ ರಾಜ್ಯದಲ್ಲಿ ಹೊಂದಿದ್ದರಿಂದ ಮತ್ತು ಅವರಿಗೆ ಸಂಬಳ ನೀಡಲು ವಿಪುಲ ಸಂಪತ್ತು ಇರುವುದರಿಂದ ಈ ನಾಡಿನ ರಾಜರು ಬೇಕಾದಷ್ಟು ಸೈನಿಕರನ್ನು ಜಮಾಯಿಸಬಲ್ಲರು. ಈ ರಾಜಾ ಚಿತರಾವ್‌ನಲ್ಲಿ ಮನ್ನೆಯರು ಸಂಬಳ

ನೀಡುವ ಕಾಲಾಳುಗಳಿದ್ದಾರೆ ಮತ್ತು ಅವರು ಕಡ್ಡಾಯವಾಗಿ ಆರು ಲಕ್ಷ, ಅಂದರೆ ಆರುನೂರು ಸಾವಿರ, ಸೈನಿಕರನ್ನು ಮತ್ತು ಇಪ್ಪತ್ನಾಲ್ಕು ಸಾವಿರ ಕುದುರೆಗಳನ್ನು ಸಲಹಬೇಕಾಗುತ್ತದೆ. ಅವರನ್ನು ಅದೇ ಮನ್ನೆಯರು ತಮ್ಮಲ್ಲಿಟ್ಟುಕೊಳ್ಳ ಬೇಕಾಗುತ್ತದೆ. ಈ ಮನ್ನೆಯರು ರಾಜನಿಂದ ಎಲ್ಲ ಜಮೀನನ್ನು ಹಿಡಿದಿರುವ ಗೇಣಿದಾರರಂತೆ ಇದ್ದಾರೆ, ಮತ್ತು ಇವರೆಲ್ಲ ಜನರನ್ನು ಇಟ್ಟುಕೊಂಡುದಷ್ಟೆ ಅಲ್ಲದೆ ಅವರ ಖರ್ಚನ್ನೂ ಕೊಡಬೇಕಾಗುತ್ತದೆ : ಮತ್ತು ಅವರು ಅವನಿಗೆ ಪ್ರತಿ ವರ್ಷ ರಾಜತೆರಿಗೆಯಾಗಿ ಆರು ಲಕ್ಷಗಳ ಗೇಣಿ ಕೊಡಬೇಕು. ಹೊಲಗಳು ನೂರಾ ಇಪ್ಪತ್ತು ಲಕ್ಷ ನೀಡುವುದಾಗಿ ಹೇಳಲಾಗುತ್ತಿದ್ದು ಅದರಲ್ಲಿ ಅರವತ್ತನ್ನು ಅವರು ರಾಜನಿಗೆ ಕೊಡಬೇಕು ಮತ್ತು ಮಿಕ್ಕಿದ್ದನ್ನು ಅವರು ತಾವು ಸಲಹಲೇಬೇಕಾದರೆ ಸೈನಿಕರ ಮತ್ತು ಆನೆಗಳ ಖರ್ಚಿಗಾಗಿ ಇಟ್ಟುಕೊಳ್ಳುವರು. ಈ ಕಾರಣದಿಂದಾಗಿ, ಜಮೀನು ಗಳನ್ನು ಹಿಡಿದುಕೊಂಡವರು ಪೀಡಕರಾಗಿದ್ದುದರಿಂದ ಸಾಮಾನ್ಯ ಜನ ಬಹಳ ಕಷ್ಟ ಅನುಭವಿಸುತ್ತಾರೆ. ರಾಜ ಪ್ರತಿ ವರ್ಷ ಹೊಂದಿರುವ ಈ ಅರವತ್ತು ಲಕ್ಷಗಳ ದಾಯದಲ್ಲಿ ಅವನು ಇಪ್ಪತ್ತೈದು ಲಕ್ಷಕ್ಕಿಂತ ಹೆಚ್ಚಿನ ಮೊತ್ತವನ್ನು ಉಪಭೋಗಿಸುವುದಿಲ್ಲ. ಏಕೆಂದರೆ, ಮಿಕ್ಕಿದ್ದು ಅವನ ಕುದುರೆಗಳು, ಮತ್ತು ಆನೆಗಳು, ಮತ್ತು ಕಾಲಾಳುಗಳ ಮೇಲೆ ಮತ್ತು ಅಶ್ವಾಳುಗಳ ಮೇಲೆ ಖರ್ಚಾಗು ತ್ತದೆ. ಅದೆಲ್ಲದರ ಖರ್ಚನ್ನು ಅವನು ನೋಡಿಕೊಳ್ಳಬೇಕಾಗುತ್ತದೆ.

ಹೀಗೆ ಅವನ ಗೇಣಿದಾರರಂತಿರುವ ಎಲ್ಲ ದಳವಾಯಿಗಳು ಅವನ ಉತ್ಸವಗಳ ಹಾಗೂ ದೇವಾಲಯಗಳಿಗೆ ದಾನ ಕಾಲಕ್ಕೆ ಯಾವಾಗಲೂ ಆಸ್ಥಾನಕ್ಕೆ ಬರಲೇಬೇಕು. ಮತ್ತು ಇವರಲ್ಲಿ ರಾಜ ತನ್ನ ಸುತ್ತ ಯಾವಾಗಲೂ ಇಟ್ಟುಕೊಂಡಿರುವ ಮತ್ತು ತನ್ನ ಆಸ್ಥಾನದಲ್ಲಿ ಅವನ ಜತೆಗಿರುವವರೆ ಇನ್ನೂರಕ್ಕಿಂತ ಹೆಚ್ಚಿಗಿರುವರು. ಇವರು ರಾಜನೊಂದಿಗೆ ಉಪಸ್ಥಿತರಿರಲೇಬೇಕು ಮತ್ತು ತಮ್ಮ ಅವಶ್ಯ ಕರ್ತವ್ಯವಾಗಿರುವಂತೆ ಸಂಪೂರ್ಣ ಸಂಖ್ಯೆಯ ಸೈನಿಕರನ್ನು ಸಲಹಲೇಬೇಕು. ಏಕೆಂದರೆ, ಅವರಲ್ಲಿ ಸಂಖ್ಯೆ ಕಡಿಮೆಯಿದ್ದುದು ಅವನಿಗೆ ಗೊತ್ತಾದರೆ ಅವರನ್ನು ಉಗ್ರವಾಗಿ ಶಿಕ್ಷಿಸಲಾಗುತ್ತದೆ ಮತ್ತು ಅವರ ಜಾಯದಾದನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ. ಈ ಮನ್ನೆಯರು ನಗರಗಳಲ್ಲಿ ಇಲ್ಲವೆ ಪಟ್ಟಣಗಳಲ್ಲಿ ನೆಲೆಸುವುದನ್ನು ಸಹಿಸಿಕೊಳ್ಳ ಲಾಗುವುದಿಲ್ಲ. ಏಕೆಂದರೆ, ಅಲ್ಲಿದ್ದರೆ ಅವರು ತನ್ನ ಕೈನಿಲುಕಿಗೆ ಎಟುಕರು. ಅವರು ಅಲ್ಲಿಗೆ ಕೆಲವೊಮ್ಮೆ ಮಾತ್ರ ಹೋಗುತ್ತಾರೆ. ಆದರೆ, ಅವನ ಅಧೀನದಲ್ಲಿದ್ದ ರಾಜರಿಗೆ ಒಂದು ರಿಯಾಯಿತಿ ನೀಡಲಾಗುತ್ತದೆ. ಅದೆಂದರೆ, ಅವರನ್ನು ಕರೆಯಿಸಲಾದಾಗಲ್ಲದೆ ಅವರು ಆಸ್ಥಾನಕ್ಕೆ ಹೋಗರು, ಮತ್ತು ತಮ್ಮವೆ ನಗರಗಳಿಂದ ಅವರು ತಮ್ಮ ಗೇಣಿ ಮತ್ತು ಕಪ್ಪ ಕಾಣಿಕೆಗಳನ್ನು ಅವನಿಗೆ ಕಳಿಸಿಕೊಡಬಹುದು ; ಆದರೂ ಸಹ ಬೆಂಗಾಪೂರದ ರಾಜ ಯಾವಾಗಲೂ ರಾಜ್ಯದಲ್ಲಿ ಇರಲೇಬೇಕು. ಮತ್ತು ಅವನು ವರ್ಷದಲ್ಲಿ ಎರಡು ಸಲ ಆಸ್ಥಾನಕ್ಕೆ ಹೋಗುತ್ತಾನೆ.

ಈ ಬಿಂಗಾಪೂರದ ರಾಜನಲ್ಲದೆ ಅಧೀನರಾಗಿದ್ದ ಇತರ ರಾಜರೆಂದರೆ ಇವರು: ಗ್ಯಾಸೊಪದ ರಾಜ, ಮತ್ತು ಬಕಾನೊರದ ರಾಜ, ಕಾಲೆಕುದರಾಜ ಮತ್ತು ಬಟೆಕಲ[1]ದ ರಾಜ. ಮತ್ತು ಇವರು ಬಿಸ್ನಗದ ಆಸ್ಥಾನಕ್ಕೆ ಬಂದಾಗ ರಾಜನಿಂದಾಗಲಿ ಅಥವಾ ಇತರ ಮನ್ನೆಯರಿಂದಾಗಲಿ ಉಳಿದ ದಳವಾಯಿಗಳಿಗಿಂತ ಹೆಚ್ಚಿನ ಮರ್ಯಾದೆ ನೀಡಲಾಗುವುದಿಲ್ಲ.

ಈ ಬಿಸ್ನಗ ರಾಜ್ಯದ ದಳವಾಯಿಗಳು ಮತ್ತು ದೊರೆಗಳು, ಆಸ್ಥಾನದಲ್ಲಿದ್ದವರೂ, ಪ್ರತಿಯೊಬ್ಬನೂ ತನ್ನ ಕಾರ್ಯದರ್ಶಿಯನ್ನೂ ಹೊಂದಿರುತ್ತಾನೆ; ಅವನು ಅವನಿಗೆ ಬರೆಯಲೋಸುಗ ಮತ್ತು ರಾಜ ಏನು ಮಾಡುತ್ತಿರುವನೆಂದು ತಿಳಿಸಲೋಸುಗ ಅರಮನೆಗೆ ಹೋಗುತ್ತಾನೆ. ಏನೆ ನಡೆದರೂ ಕ್ಷಿಪ್ರದಲ್ಲಿಯೆ ತಮಗೆ ಗೊತ್ತಾಗುವಂತೆ ಅವರು ವ್ಯವಸ್ಥೆ ಮಾಡಿಕೊಂಡಿರುತ್ತಾರೆ, ಮತ್ತು ದಿನ ರಾತ್ರಿ ಅವರು ಯಾವಾಗಲೂ ಅರಮನೆಯಲ್ಲಿ ಇರುತ್ತಾರೆ. ಮತ್ತು ರಾಜನೂ ತನ್ನ ಅರಮನೆ ಬಿಟ್ಟು ಹೋಗುವಾಗ ತನಗಾಗಿಯೆ ಕಾರ್ಯದರ್ಶಿಗಳನ್ನು ಕರೆದೊಯ್ಯುತ್ತಾನೆ. ಅವರು ರಾಜ ಹೇಳಿದುದನ್ನೆಲ್ಲ, ಮತ್ತು ಅವನು ನೀಡುವ ಅನುಗ್ರಹಗಳನ್ನು, ಮತ್ತು ಅವನ ನಿರ್ಧಾರವೇನಿತ್ತು ಎಂಬುದನ್ನು ಬರೆದಿಡುತ್ತಾರೆ; ಮತ್ತು ಈ ಜನರಿಗೆ ಸುವಾರ್ತಾ ಲೇಖಕರಿಗೆ ಸಮನಾದ ಮಾನ್ಯತೆಯನ್ನು ನೀಡಲಾಗುತ್ತದೆ. ಏಕೆಂದರೆ, ರಾಜ ಯಾವಾಗಲೆ ಮಾತನಾಡಲಿ ಅದರಲ್ಲಿ ದಾಖಲೆ ಯೋಗ್ಯವಾದುದು ಇರಲೇಬೇಕೆಂದು ಮತ್ತು ಅವುಗಳ ಸ್ಮರಣೆಗಾಗಿ ಇಂಥ ದಾಖಲೆ ಆವಶ್ಯವೆಂದೂ ಅವರೆನ್ನುತ್ತಾರೆ. ಹೀಗಾಗಿ, ಅವನು ನೀಡುವ ಅನುಗ್ರಹ ಅಥವಾ ಅಪ್ಪಣೆಗಳಿಗೆ ಯಾವುದೆ ಲಿಖಿತ ಆಜ್ಞೆಗಳನ್ನು ಹೊರಲಾಡಿಸಲಾಗುವದಿಲ್ಲ ಅಥವಾ ಸನ್ನದುಗಳನ್ನು ನೀಡಲಾಗುವುದಿಲ್ಲ. ಆದರೆ, ಅವನು ಯಾರ ಮೇಲಾದರೂ ಅನುಗ್ರಹ ನೀಡಿದಾಗ ಈ ಕಾರ್ಯದರ್ಶಿಗಳ ದಾಖಲೆ ಪುಸ್ತಕಗಳಲ್ಲಿ ಬರೆದಿಡಲ್ಪಡುತ್ತದೆ. ಆದರೆ, ಅನುಗ್ರಹ ಪಡೆಯುವವನಿಗೆ ರಾಜ ತನ್ನ ಮಂತ್ರಿ ಇಟ್ಟುಕೊಂಡಿರುವ ತನ್ನ ಉಂಗುರಗಳಲ್ಲೊಂದರ ಮುದ್ರೆಯನ್ನೂ ಮೇಣದ ಮೇಲೆ ಮೂಡಿಸಿ ಕೊಡುತ್ತಾನೆ ಮತ್ತು ಈ ಮುದ್ರೆಗಳು ಸ್ವಾಮ್ಯಪತ್ರಗಳಿದ್ದಂತೆಯೆ.

ಈ ಬಿಸ್ನಗದ ರಾಜರು ಎಲ್ಲ ತರಹದ ಭಕ್ಷ್ಯ ತಿನ್ನುತ್ತಾರೆ. ಆದರೆ, ಎತ್ತು ಅಥವಾ ಆಕಳಿನ ಮಾಂಸ ತಿನ್ನುವುದಿಲ್ಲ. ಅವುಗಳನ್ನು ಅವರು ಪೂಜಿಸುವುದರಿಂದ ಈ ವಿಧರ್ಮಿಯರ ದೇಶದಲ್ಲಿ ಎಲ್ಲೂ ಅವುಗಳನ್ನೆಂದೂ ಕೊಲ್ಲುವುದಿಲ್ಲ ಅವರು, ಕುರಿಯ ಮಾಂಸ, ಹಂದಿಯ ಮಾಂಸ, ಜಿಗರಿಯ ಮಾಂಸ, ಕವುಜಗ ಹಕ್ಕಿಗಳು, ಮೊಲಗಳು, ಪಾರಿವಾಳಗಳು ಲಾವಕ್ಕಿಗಳು ಮತ್ತು ಎಲ್ಲ ತರಹದ ಹಕ್ಕಿಗಳನ್ನು ತಿನ್ನುತ್ತಾರೆ; ಗುಬ್ಬಿಗಳು, ಮತ್ತು ಇಲಿಗಳು, ಮತ್ತು ಬೆಕ್ಕುಗಳು, ಮತ್ತು ಉಡ

ಗಳನ್ನೂ ಸಹ ತಿನ್ನುತ್ತಾರೆ. ಅವೆಲ್ಲ ಬಿಸ್ನಗ ನಗರದ ಮಾರುಕಟ್ಟೆಯಲ್ಲಿ ಮಾರಲಾಗುತ್ತವೆ.

ಪ್ರತಿಯೊಬ್ಬನೂ ತಾನು ಏನು ಕೊಳ್ಳುತ್ತಿರುವನೆಂಬುದನ್ನು ಅರಿಯಲೋಸುಗ ಪ್ರತಿಯೊಂದೂ ಸಜೀವವಾಗಿ ಮಾರಲ್ಪಡಬೇಕು. ಇದು ಬೇಟೆಯ ಪ್ರಾಣಿಯ ವಿಷಯದಲ್ಲಂತೂ ನಿಜ[2], ಮತ್ತು ಅಧಿಕ ಪ್ರಮಾಣದಲ್ಲಿ ನದಿಯ ಮೀನುಗಳೂ ಇರುತ್ತವೆ. ಮಾರುಕಟ್ಟೆಗಳು ದ್ರಾಕ್ಷಿ. ಕಿತ್ತಳೆ, ಲಿಂಬಿ, ದಾಳಿಂಬ, ಹಲಸು, ಮತ್ತು ಎಲ್ಲವೂ ಬಹಳ ಅಗ್ಗವಾಗಿರುತ್ತವೆ. ಮಾರುಕಟ್ಟೆಗಳಲ್ಲಿ ಒಂದು ಪರ್ದಾವ್‌ಗೆ ಹನ್ನೆರಡು ಸಜೀವ ಕುರಿಗಳನ್ನು ಮತ್ತು ಗುಡ್ಡಗಾಡಿನಲ್ಲಿ ಹದಿನಾಲ್ಕು ಅಥವಾ ಹದಿನೈದನ್ನು ಕೊಡುತ್ತಾರೆಂದು ಹೇಳಲಾಗುತ್ತದೆ. ರಾಜನಿಗೆ ಬಹಳ ವಿಶ್ವಾಸವುಳ್ಳ ಮನುಷ್ಯನೊಬ್ಬನ ಕೈಯಲ್ಲಿ ಆವರಣ ಹಾಕಲ್ಪಟ್ಟದ್ದ ಚಿಲುಮೆಯಿಂದ ತರಲಾದ ನೀರನ್ನು ರಾಜ ಕುಡಿಯುತ್ತಾನೆ; ಮತ್ತು ನೀರನ್ನು ಎತ್ತುವ ಪಾತ್ರೆಗಳು ಮುಚ್ಚಿಕೊಂಡು ಮತ್ತು ಮುದ್ರೆಯೊತ್ತಿಕೊಂಡು ಬರುತ್ತವೆ. ಹೀಗೆ ಅವರು ಅದನ್ನು ರಾಜನ ಸೇವೆಯಲ್ಲಿರುವ ಸ್ತ್ರೀಯರಿಗೆ ಕೊಡುತ್ತಾರೆ, ಮತ್ತು ಅವರು ಅದನ್ನು ಒಳಗಡೆಗೆ ಇತರ ಸ್ತ್ರೀಯರಾದ ರಾಜನ ಹೆಂಡಂದಿರಿಗೆ ಒಯ್ದುಕೊಡುತ್ತಾರೆ.

ಈ ಬಿಸ್ನಗದ ರಾಜ ಮನ್ನೆಯೊಬ್ಬನಿಗೆ ನೀಡುವ ಅತಿ ದೊಡ್ಡ ಗೌರವದ ಕುರುಹು ಎಂದರೆ ಕೆಲವೊಂದು ಆಕಳುಗಳ ಬಿಳಿ ಬಾಲಗಳಿಂದ[3] ಮಾಡಿದ, ಬಂಗಾರ ಮತ್ತು ಬೆಲೆಯುಳ್ಳ ಹರಳುಗಳಿಂದ ಅಲಂಕೃತವಾದ ಎರಡು ಚೌರಿಗಳು ; ಅವನು ಅವರಿಗೆ ಕಡಗಗಳನ್ನೂ ಕೊಡುತ್ತಾನೆ. ಮನ್ನೆಯ ಪಡೆಯುವ ಪ್ರತಿಯೊಂದನ್ನೂ ನೆಲದ ಮೇಲಿಡಲಾಗುತ್ತದೆ. ಆವನು ಯಾರಿಗಾದರೂ ತನ್ನ ಪಾದ ಚುಂಬಿಸಲು ಅನುಮತಿ ನೀಡಿದರೆ ಅದು ಕೂಡ ರಾಜ ನೀಡುವ ದೊಡ್ಡ ಗೌರವವೆ. ಏಕೆಂದರೆ, ಅವನುತನ್ನ ಕೈಗಳನ್ನು ಚುಂಬಿಸಲು ಯಾರಿಗೂ ಕೊಡುವುದಿಲ್ಲ. ತನ್ನ ದಳವಾಯಿಗಳನ್ನು ಅಥವಾ ತಾನು ಒಳ್ಳೆಯ ಸೇವೆ ಸ್ವೀಕರಿಸಿದ ಇಲ್ಲವೆ ಸ್ವೀಕರಿಸಬಯಸುವ ವ್ಯಕ್ತಿಗಳನ್ನು ಸಂತುಷ್ಟಗೊಳಿಸಲಿಚ್ಛಿಸಿದಾಗ ಅವರ ಸ್ವಂತ ಉಪಯೋಗಕ್ಕಾಗಿ ಗೌರವಾರ್ಥ ಉತ್ತರೀಯಗಳನ್ನು ಕೊಡುತ್ತಾನೆ. ಅದೊಂದು ದೊಡ್ಡ ಗೌರವ; ಮತ್ತು ಪ್ರತಿವರ್ಷ ದಳವಾಯಿಗಳು ಅವನಿಗೆ ಭೂಕಂದಾಯಗಳನ್ನು ಕೊಡಲು ಬಂದಾಗ ಇದನ್ನು ಅವರಿಗೆ ಮಾಡುತ್ತಾನೆ. ಇದು ಸೆಪ್ಟಂಬರ ತಿಂಗಳಲ್ಲಿ ನಡೆಯುತ್ತದೆ. ಆಗ ಒಂಬತ್ತು ದಿನ ಅವರು ದೊಡ್ಡ ಉತ್ಸವಗಳನ್ನು ಏರ್ಪಡಿಸುತ್ತಾರೆ. ಮೇರಿ ಕನ್ನಿಕೆ ತನ್ನ ಪುತ್ರನನ್ನು ಗರ್ಭದಲ್ಲಿ ಧರಿಸಿದ ಒಂಬತ್ತು ತಿಂಗಳ ಗೌರವಾರ್ಥ ಅವರು ಇದನ್ನು ಮಾಡುತ್ತಾರೆಂದು ಕೆಲವರೆನ್ನುತ್ತಾರೆ ; ದಳವಾಯಿಗಳು ರಾಜನಿಗೆ ಭೂಕಂದಾಯ

ಗಳನ್ನು ಕೊಡಲು ಈ ಸಮಯಕ್ಕೆ ಬರುವುದರಿಂದಲೆ ಇದನ್ನು ಮಾಡಲಾಗುತ್ತದೆಂದು ಇನ್ನು ಕೆಲವರು ಅನ್ನುತ್ತಾರೆ. ಆ ಉತ್ಸವಗಳು ಕೆಳಗಿನಂತೆ ಜರುಗುತ್ತವೆ.

ಮೊದಲ ದಿನ ಅರಮನೆಯ ಮುಂದಿನ ಜಾಗದಲ್ಲಿ ಅವರು ಒಂಬತ್ತು ಮಂಡಪ ನಿರ್ಮಿಸುತ್ತಾರೆ. ಈ ಒಂಬತ್ತು ಮಂಡಪಗಳನ್ನು ರಾಜ್ಯದ ಒಂಬತ್ತು ಪ್ರಧಾನ ದಳವಾಯಿಗಳು ಮಾಡುತ್ತಾರೆ. ಅವುಗಳು ಬಹಳ ಎತ್ತರವಾಗಿರುತ್ತವೆ ಮತ್ತು ಅವುಗಳಲ್ಲಿ ಬೆಲೆಯುಳ್ಳ ಬಟ್ಟೆ ಇಳಿಬಿಡಲಾಗಿರುತ್ತದೆ ಮತ್ತು ಅನೇಕ ನೃತ್ಯಗಾರ್ತಿಯರೂ ಅನೇಕ ವಿಧದ ಸಾಧನಗಳೂ ಇರುತ್ತವೆ. ಈ ಒಂಬತ್ತಲ್ಲದೆ ಪ್ರತಿಯೊಬ್ಬ ದಳವಾಯಿಯೂ ತನ್ನೊಂದು ಮಂಡಪ ನಿರ್ಮಿಸಲೇಬೇಕು, ಮತ್ತು ಅವರು ಇವುಗಳನ್ನು ರಾಜನಿಗೆ ತೋರಿಸಲು ಬರುತ್ತಾರೆ. ಪ್ರತಿಯೊಬ್ಬನೂ ತನ್ನದೆ ಸಾಧನ ಹೊಂದಿರುತ್ತಾನೆ ಮತ್ತು ಅವರೆಲ್ಲ ಹೀಗೆ ಉತ್ಸವದ ಒಂಬತ್ತು ದಿನಗಳ ಕಾಲಕ್ಕೆ ಬರುತ್ತಾರೆ. ನಗರದ ಅಧಿಕಾರಿಗಳು ನಮ್ಮ ಉತ್ಸವಗಳಲ್ಲಿಯಂತೆಯೆ ಪ್ರತಿ ರಾತ್ರಿ ತಮ್ಮ ಸಾಧನಗಳೊಂದಿಗೆ ಬರಲೇಬೇಕು, ಮತ್ತು ಈ ಒಂಬತ್ತು ದಿನಗಳಲ್ಲಿ ಅವರು ಪ್ರಾಣಿಗಳನ್ನು ಕೊಂದು ಬಲಿ ಕೊಡುತ್ತಾರೆ. ಮೊದಲ ದಿನ ಅವರು ಒಂಬತ್ತು ಕೋಣಗಳು ಮತ್ತು ಒಂಬತ್ತು ಕುರಿಗಳೂ ಮತ್ತು ಒಂಬತ್ತು ಆಡುಗಳನ್ನು ಕೊಲ್ಲುತ್ತಾರೆ,ಮತ್ತು ಅಂದಿನಿಂದ ಮುಂದೆ ಅವರು ಯಾವಾಗಲೂ ಸಂಖ್ಯೆ ದ್ವಿಗುಣಗೊಳಿಸುತ್ತ ಪ್ರತಿ ದಿನ ಹೆಚ್ಚೆಚ್ಚು ಕೊಲ್ಲುತ್ತಾರೆ ಮತ್ತು ಈ ಪ್ರಾಣಿಗಳ ವಧೆ ಮುಕ್ತಾಯಗೊಂಡಾಗ ರಾಜನ ಒಂಬತ್ತು ಕುದುರೆಗಳು ಮತ್ತು ಒಂಬತ್ತು ಆನೆಗಳು ಬರುತ್ತವೆ ಮತ್ತು ಇವು ಹೂಗಳಿಂದ—ಗುಲಾಬಿಗಳಿಂದ—ಆಚ್ಛಾದಿತವಾಗಿ ಮತ್ತು ಬೆಲೆಯುಳ್ಳ ಸಜ್ಜುಗಳಿಂದೊಡಗೂಡಿ ರಾಜನ ಮುಂದೆ ಬರುತ್ತವೆ. ಅವುಗಳ ಮುಂದೆ ಅನೇಕ ಪರಿಚಾರಕರಿಂದೊಡಗೂಡಿ ಪ್ರಧಾನ ಅಶ್ವಪತಿ ಹೋಗುತ್ತಾನೆ, ಮತ್ತು ಅವರು ರಾಜನಿಗೆ ಸಲಾಮ್ ಮಾಡುತ್ತಾರೆ. ಮತ್ತು ಅವರು ಸಲಾಮ್ ಮಾಡುವುದು ಮುಗಿದಾಗ ಒಳಗಿನಿಂದ ಪುರೋಹಿತರು ಬರುತ್ತಾರೆ, ಮತ್ತು ಅವರು ಅನ್ನ ಮತ್ತು ಇತರ ಬೇಯಿಸಿದ ಭಕ್ಷ್ಯಗಳು, ಮತ್ತು ನೀರು, ಮತ್ತು ಬೆಂಕಿ, ಮತ್ತು ಅನೇಕ ವಿಧದ ಪರಿಮಳಗಳನ್ನು ತರುತ್ತಾರೆ, ಮತ್ತು ಅವರು ಪ್ರಾರ್ಥನೆ ಸಲ್ಲಿಸುತ್ತಾರೆ ಮತ್ತು (ನಮ್ಮ ಪಾದ್ರಿಗಳು ಪವಿತ್ರ ಜಲ ಸಿಂಪಡಿಸುವಂತೆಯೆ) ಕುದುರೆಗಳು ಮತ್ತು ಆನೆಗಳ ಮೇಲೆ ನೀರು ಸಿಂಪಡಿಸುತ್ತಾರೆ ; ಮತ್ತು ಅವುಗಳಿಗೆ ಗುಲಾಬಿ ದಂಡೆಗಳನ್ನು ತೊಡಿಸುತ್ತಾರೆ. ಬಂಗಾರ ಮತ್ತು ಬೆಲೆಯುಳ್ಳ ಹರಳುಗಳ ಸಿಂಹಾಸನದ ಮೇಲೆ ಆಸೀನನಾದ ರಾಜನ ಸಮ್ಮುಖದಲ್ಲಿ ಇದನ್ನು ಮಾಡಲಾಗುತ್ತದೆ; ಅವನು ಈಗೊಮ್ಮೆ ಬಿಟ್ಟರೆ ಎಂದೂ ಇದರ ಮೇಲೆ ಕುಳ್ಳಿರುವುದಿಲ್ಲ. ಮತ್ತು ಈಗ ಆಳುತ್ತಿರುವ ರಾಜ ಅದರ ಮೇಲೆ ಕುಳಿತುಕೊಳ್ಳುವುದಿಲ್ಲ. ಏಕೆಂದರೆ, ಅದರ ಮೇಲೆ ಯಾರೆ ಕುಳಿತುಕೊಳ್ಳಲಿ ಅವನು ಸತ್ಯನಿಷ್ಠನಾದ, ಸಂಪೂರ್ಣ ಸತ್ಯ ನುಡಿಯುವ ವ್ಯಕ್ತಿಯಾಗಿರಬೇಕು, ಮತ್ತು ಈ ರಾಜ ಎಂದೂ ಹಾಗೆ ಮಾಡುವುದಿಲ್ಲ.

ಇದೆಲ್ಲ ನಡೆಯುತ್ತಿರುವಾಗ ಪೂರ್ಣ ಒಂದು ಸಾವಿರ ಸ್ತ್ರೀಯರು ಅವನ ಮುಂದೆ ನೃತ್ಯಗೈಯುತ್ತ ಭಂಗಿಯಲ್ಲಿ ನಡೆಯುತ್ತ ರಾಜನ ಬದಿಗೆ ಹಾಯ್ದು ಹೋಗುತ್ತಾರೆ. ಮಾಡಲಾದ ಎಲ್ಲ ಸಾಧನಗಳನ್ನು ನೋಡಿದ ಮೇಲೆ ತಮ್ಮ ರೇಷ್ಮೆ ಸಜ್ಜುಗಳಿಂದ ಆಚ್ಛಾದಿತವಾದ ಮತ್ತು ತಮ್ಮ ತಲೆಯ ಮೇಲೆ ಬಂಗಾರದ ಮತ್ತು ಬೆಲೆಯುಳ್ಳ ಹರಳುಗಳ ಬಹಳ ಅಲಂಕಾರಗಳಿಂದೊಡಗೂಡಿದ ರಾಜನ ಎಲ್ಲ ಕುದುರೆಗಳು ಮತ್ತು ಆ ಮೇಲೆ ಎಲ್ಲ ಆನೆಗಳು ಮತ್ತು ಎತ್ತುಗಳ ನೊಗಗಳು[4], ದಾಟಿಹೋಗಿ ಅರಮನೆಯ ಮುಂದಿನ ಕಣದಲ್ಲಿ ಬಂದು ನಿಲ್ಲುತ್ತವೆ. ಇವುಗಳನ್ನು ನೋಡಿಯಾದ ನಂತರ ರಾಜನ ಹೆಂಡಂದಿರಲ್ಲಿ ಅತ್ಯಂತ ಸುಂದರವಾದ ಮುವತ್ತಾರು ಮಂದಿ ಬಂಗಾರ ಮತ್ತು ಮುತ್ತುಗಳು ಕುಶಲಕಾರ್ಯಗಳಿಂದ ಅಲಂಕೃತರಾಗಿ ಬರುತ್ತಾರೆ, ಮತ್ತು ಪ್ರತಿಯೊಬ್ಬಳ ಕೈಗಳಲ್ಲಿ ಅದರೊಳಗೆ ಎಣ್ಣೆದೀಪ ಉರಿಯುವ ಪಾತ್ರೆ ಇರುತ್ತದೆ. ಮತ್ತು ಈ ಸ್ತ್ರಿಯರೊಂದಿಗೆ ಬಂಗಾರದ ತುದಿಗಳ ಬೆತ್ತ ಮತ್ತು ಉರಿಯುವ ಪಂಜು ಹಿಡಿದ ಎಲ್ಲ ಪರಿಚಾರಿಕೆಯರು ಮತ್ತು ರಾಜನ ಇತರ ಹೆಂಡಂದಿರು ಬರುತ್ತಾರೆ. ಮತ್ತು ಆಮೇಲೆ ಇವರು ರಾಜನೊಂದಿಗೆ ಒಳಗೆ ಹೋಗುತ್ತಾರೆ ಈ ಸ್ತ್ರೀಯರು ಬಂಗಾರ ಮತ್ತು ಬೆಲೆಯುಳ್ಳ ಹರಳುಗಳಿಂದ ಎಷ್ಟೊಂದು ಸಿಂಗರಿಸಿಕೊಂಡಿರುತ್ತಾರೆಂದರೆ ಅವರಿಗೆ ನಡೆಯುವುದು ಕಷ್ಟಕರವಾಗಿರುತ್ತದೆ.

ಈ ರೀತಿಯಲ್ಲಿ ಈ ಒಂಬತ್ತು ದಿನಗಳ ಕಾಲದಲ್ಲಿ ರಾಜನಿಗೆ ಸಂತೋಷ ನೀಡುವ ಎಲ್ಲ ವಸ್ತುಗಳಿಗಾಗಿ ಅವರು ಹುಡುಕುತ್ತಿರಬೇಕಾಗುತ್ತದೆ.

ಈ ಉತ್ಸವಗಳಿಗಾಗಿ ರಾಜ ಒಂದು ಸಾವಿರ ಕುಸ್ತಿಯಾಳುಗಳನ್ನು ಹೊಂದಿರುವನು. ಅವರು ರಾಜನ ಮುಂದೆ ಕುಸ್ತಿ ಆಡುತ್ತಾರೆ. ಆದರೆ ನಮ್ಮ ಶೈಲಿಯಲ್ಲಲ್ಲ. ಏಕೆಂದರೆ, ಅವರು ಹೊಡೆಯಲೋಸುಗ ತಮ್ಮ ಕೈಯಲ್ಲಿ ಧರಿಸಿರುವ ಚೂಪು ತುದಿಯುಳ್ಳ ಚಿಕ್ಕ ಚಕ್ರಗಳಿಂದ[5] ಒಬ್ಬರಿನ್ನೊಬ್ಬರನ್ನು ಹೊಡೆಯುತ್ತಾರೆ ಮತ್ತು ಘಾಸಿಗೊಳಿಸುತ್ತಾರೆ. ಮತ್ತು ಎಲ್ಲಕ್ಕೂ ಹೆಚ್ಚು ಘಾಸಿಗೊಂಡವನು ಹೋಗಿ ರಾಜನು ಈ ಕುಸ್ತಿಯಾಳುಗಳಿಗೆ ಕೊಡುವಂತಹ ರೇಷ್ಮೆ ಬಟ್ಟೆಯ ರೂಪದಲ್ಲಿನ ಬಹುಮಾನವನ್ನು ಪಡೆಯುತ್ತಾನೆ.[6] ಅವರ ಮೇಲೊಬ್ಬ ದಳವಾಯಿ ಇರುವನು, ಮತ್ತು ಅವರು ರಾಜ್ಯದಲ್ಲಿ ಬೇರೆ ಯಾವ ಸೇವೆಯನ್ನೂ ಮಾಡುವುದಿಲ್ಲ.

ಮತ್ತು ಈ ಒಂಬತ್ತು ದಿನ ಮುಗಿದ ನಂತರ ರಾಯ[7] ಕುದುರೆಯೇರಿ ಹೊರ ನಡೆಯುತ್ತಾನೆ ಮತ್ತು ತನ್ನ ದಳವಾಯಿಗಳ ಸೈನ್ಯಗಳ ನಿರೀಕ್ಷಣೆ ಮಾಡಲು ಹೋಗುತ್ತಾನೆ, ಸಶಸ್ತ್ರ ಸೈನಿಕರ ನಡುವೆ ಎರಡು ಹರದಾರಿ ದೂರ ಹೋಗುತ್ತಾನೆ. ಕೊನೆಗೆ ಅವನು ಕುದುರೆಯಿಂದ ಇಳಿಯುತ್ತಾನೆ ಮತ್ತು ಕೈಯಲ್ಲಿ ಬಿಲ್ಲು ತೆಗೆದುಕೊಂಡು ಮೂರು ಬಾಣ ಹೊಡೆಯುತ್ತಾನೆ. ಅಂದರೆ, ಒಂದು ಇಡಲ್‌ಕಾವ್‌ನಿಗಾಗಿ ಮತ್ತು

ಮತ್ತೊಂದು ಕೊಟವುಲುಕೊಂಡ ರಾಜನಿಗಾಗಿ,[8] ಇನ್ನೂ ಒಂದು ಪೋರ್ತುಗೀಜರಿಗಾಗಿ. ಎಲ್ಲಕ್ಕಿಂತ ದೂರ ತಲುಪಿದ ಬಾಣದ ದಿಕ್ಕಿನಲ್ಲಿರುವ ರಾಜ್ಯದ ಮೇಲೆ ಯುದ್ಧ ಮಾಡುವುದು ಅವನ ಪದ್ಧತಿಯಾಗಿತ್ತು. ಇದನ್ನು ಮಾಡಿಯಾದ ಮೇಲೆ ರಾಜ ಮನೆಗೆ ಮರಳುತ್ತಾನೆ, ಮತ್ತು ಆ ದಿನ ಉಪವಾಸ ಆಚರಿಸುತ್ತಾನೆ ಮತ್ತು ಅವನೊಂದಿಗೆ ನಾಡಿನ ಎಲ್ಲ ಜನರೂ ಆಚರಿಸುತ್ತಾರೆ. ಮತ್ತು ಮರುದಿನ ತನ್ನೆಲ್ಲ ಜನರೊಂದಿಗೆ ಸ್ನಾನ ಮಾಡಲು ನದಿಗೆ ತೆರಳುತ್ತಾನೆ. ಈ ಒಂಬತ್ತು ದಿನಗಳಲ್ಲಿಯೆ ರಾಜ ತನ್ನ ರಾಜ್ಯದಿಂದ ಪಡೆಯುವ ಎಲ್ಲ ಕಂದಾಯಗಳನ್ನು ಸಲ್ಲಿಸಲಾಗುತ್ತದೆ. ಏಕೆಂದರೆ, ಈ ಮೊದಲೆ ಹೇಳಿರುವಂತೆ, ಎಲ್ಲ ಭೂಮಿ ರಾಜನಿಗೆ ಸೇರಿದ್ದು, ಮತ್ತು ಅವನ ಪರವಾಗಿ ದಳವಾಯಿಗಳು ಅದನ್ನು ಹಿಡಿದುಕೊಂಡಿರುತ್ತಾರೆ. ಅವರು ಅದನ್ನು ತಮ್ಮ ಒಡೆಯರಿಗೆ ಒಂಬತ್ತು ಹತ್ತಾಂಶ ಕೊಡುವ ರೈತರಿಗೆ ಕೊಡ ಮಾಡುತ್ತಾರೆ. ಮತ್ತು ಅವರಿಗೆ ತಮ್ಮದೇ ಭೂಮಿ ಇಲ್ಲ. ಏಕೆಂದರೆ, ರಾಜ್ಯ ಸಂಪೂರ್ಣವಾಗಿ ರಾಜನ ಸ್ವತ್ತು.[9] ದಳವಾಯಿಗಳು ಮಾತ್ರ ರಾಜ ಅವರನ್ನು ಹೊಣೆಗಾರರನ್ನಾಗಿಸುವ ಸೈನಿಕರ ದೆಸೆಯಿಂದ ಖರ್ಚಿಗೊಳಪಡುತ್ತಾರೆ. ಅವರು ಸೇವೆಯೆಂದು ಸೈನಿಕರನ್ನು ಒದಗಿಸಬೇಕಾಗುತ್ತದೆ. ಪ್ರತಿ ಶನಿವಾರ ನೃತ್ಯಗಾರ್ತಿಯರು ಅರಮನೆಗೆ ಹೋಗಿ ಅರಮನೆಯ ಒಳಗಡೆಯಿರುವ ರಾಜನ ವಿಗ್ರಹದ ಮುಂದೆ ನೃತ್ಯಗೈಯಬೇಕು ಮತ್ತು ಭಂಗಿ ತೋರಬೇಕು. ಈ ದೇಶದ ಜನರು ಯಾವಾಗಲೂ ಶನಿವಾರದಂದು ಉಪವಾಸ ಆಚರಿಸುತ್ತಾರೆ ಮತ್ತು ಇಡಿ ದಿನವಾಗಲಿ ರಾತ್ರಿಯಾಗಲಿ ಏನನ್ನೂ ತಿನ್ನುವುದಿಲ್ಲ, ನೀರನ್ನೂ ಕುಡಿಯುವದಿಲ್ಲ. ಉಸಿರು ಮಧುರವಾಗಿರಿಸಲು ಕೆಲವು ಲವಂಗಗಳನ್ನು ಮಾತ್ರ ಜಗಿಯುತ್ತಾರೆ. ರಾಜ ಯಾವಾಗಲೂ ದೊಡ್ಡ ಮೊತ್ತಗಳನ್ನು ನೀಡುತ್ತಾನೆ. ಅರಮನೆಯಲ್ಲಿ ಅವನ ಪುರೋಹಿತರಾಗಿರುವ ದಾನವಾಗಿ ಎರಡು ಅಥವಾ ಮೂರು ಸಾವಿರ ಬ್ರಾಹ್ಮಣರು ಯಾವಾಗಲೂ ಇರುತ್ತಾರೆ. ಮತ್ತು ಅವರಿಗೆ ದಕ್ಷಿಣೆ ನೀಡಲು ರಾಜ ಆಜ್ಞಾಪಿಸುತ್ತಾನೆ. ಈ ಬ್ರಾಹ್ಮಣರು ಬಲು ಕುತ್ಸಿತ ಜನ. ಅವರಲ್ಲಿ ಯಾವಾಗಲೂ ಬಹಳ ಹಣವಿರುತ್ತದೆ, ಮತ್ತು ಅವರು ಎಷ್ಟು ಸೊಕ್ಕಿನವರೆಂದರೆ ಗುದ್ದು ಕೊಟ್ಟರೂ ದ್ವಾರಪಾಲಕರು ಅವರನ್ನು ತಡೆಯಲಾಗುವುದಿಲ್ಲ.

ದಳವಾಯಿಗಳು ಮತ್ತು ಪ್ರಮುಖ ಜನ ರಾತ್ರಿಯಲ್ಲಿ, ನಾಲ್ಕರಿಂದ ಹನ್ನೆರಡರವರೆಗೆ (ಅಂತಸ್ತಿಗನುಗುಣವಾಗಿ), ಅತ್ಯುನ್ನತ ಅಂತಸ್ತಿನವರು ಹೆಚ್ಚೆಂದರೆ ಹನ್ನೆರಡರಂತೆ, ಎಣ್ಣೆ ಪಂಜುಗಳನ್ನು ಬಳಸುತ್ತಾರೆ.[10] ರಾಜನಾದರೊ ನೂರು ಇಲ್ಲವೆ ನೂರೈವತ್ತು ಪಂಜು ಹೊಂದಿರಬೇಕು. ದೇಶದಲ್ಲಿ ಬಹಳ ಮೇಣವಿದೆ, ಆದರೆ ಅದನ್ನು ಹೇಗೆ ಬಳಸಬೇಕೆಂದು ಅವರಿಗೆ ಗೊತ್ತಿಲ್ಲ. ಅದನ್ನು ರಾಜನಿಗೆ ಮಾರಲು ತಂದಿರಬಹುದಾದ ಕುದುರೆಗಳ ಹಾಗೂ ಇತರ ವಸ್ತುಗಳ ರೂಪದಲ್ಲಿ ಸರಕನುತರುವ ಪ್ರತಿ ವರ್ತಕನೂ ರಾಜನೊಂದಿಗೆ ಭೆಟ್ಟಿ ಪಡೆದು ಬೇಕಿದ್ದರೆ ಭೆಟ್ಟಿ ವ್ಯವಹಾರ ಮಾಡಲೋಸುಗ

ತನ್ನ ಸರಕಿನ ಒಂದು ನಮೂನೆಯನ್ನು ಅಥವಾ ತಾನು ತಂದ ಅತ್ಯುತ್ತಮ ಕುದುರೆಯೊಂದನ್ನು ಅವನಿಗೆ ಕಾಣಿಕೆ ನೀಡಬೇಕು. ಇದನ್ನು ಕೇವಲ ರಾಜನಿಗೆ ಮಾಡಿದರೆ ಸಾಲದು. ನೀವು ವ್ಯವಹರಿಸಬೇಕಿರುವ ಎಲ್ಲ ಹಲವಾರು ಅಧಿಕಾರಿಗಳಿಗೂ ಕಡ್ಡಾಯವಾಗಿ ಲಂಚ ಕೊಡಬೇಕು. ತಮಗೆ ಯಾವ ಲಾಭವಿಲ್ಲದೆ ಅವರು ಏನನ್ನೂ ಮಾಡರು.

ಯಾವನಾದರೂ ಅನ್ಯಾಯವನ್ನು ಅನುಭವಿಸಿದಾಗ ಮತ್ತು ತನ್ನ ಪ್ರಕರಣವನ್ನು ರಾಜನಲ್ಲಿ ನಿವೇದಿಸ ಬಯಸಿದಾಗ ಅವನು ಅವನಿಗೆ ಏನು ಬೇಕೆಂದು ಕೇಳುವವರೆಗೆ ನೆಲಕ್ಕೆ ಮುಖ ಮಾಡಿ ಮಲಗುವ ಮೂಲಕ ತನ್ನ ಕಷ್ಟ ಎಷ್ಟು ದೊಡ್ಡದೆಂಬುದನ್ನು ತೋರಿಸುತ್ತಾನೆ. ಒಂದು ವೇಳೆ ರಾಜ ಕುದುರೆಯ ಮೇಲೆ ಹೋಗುವಾಗ ಅವನು ರಾಜನೊಂದಿಗೆ ಮಾತಾಡಬಯಸಿದರೆ ಈಟಿಯ ಕೋಲು ತೆಗೆದುಕೊಂಡು ಅದಕ್ಕೆ ಒಂದು ಟೊಂಗೆ ಕಟ್ಟುತ್ತಾನೆ ಮತ್ತು ಕೂಗುತ್ತ ರಾಜನ ಬದಿಯಲ್ಲಿ ಹೋಗುತ್ತಾನೆ. ಆಗ ಅವರು ಅವನಿಗೆ ಜಾಗ ಬಿಡುತ್ತಾರೆ, ಮತ್ತು ಅವನು ರಾಜನಿಗೆ ತನ್ನ ದೂರು ಹೇಳಿಕೊಳ್ಳುತ್ತಾನೆ. ಮತ್ತು ಅದನ್ನು ಕೂಡಲೆ ಸ್ಥಳದಲ್ಲಿಯೆ ಬಹಳ ಗದ್ದಲವಿಲ್ಲದೆ ಬಗೆಹರಿಸಲಾಗುತ್ತದೆ. ಮತ್ತು ರಾಜ ತನ್ನೊಂದಿಗೆ ಬರುತ್ತಿರುವ ದಳವಾಯಿಗಳಲ್ಲೊಬ್ಬನಿಗೆ ಫಿರ್ಯಾದುದಾರ ಕೇಳುವುದನ್ನು ಮಾಡಿಕೊಡಲು ಆಜ್ಞಾಪಿಸುತ್ತಾನೆ. ತಾನು ಇಂಥಿಂಥ ಪ್ರಾಂತದಲ್ಲಿ, ಇಂಥಿಂಥ ರಸ್ತೆಯಲ್ಲಿ ದೋಚಲ್ಪಟ್ಟಿರುವನೆಂದು ಅವನು ದೂರು ಇತ್ತರೆ ರಾಜ ಕೂಡಲೆ ಆ ಪ್ರಾಂತದ ದಳವಾಯಿಗೆ, ಅವನು ಆಸ್ಥಾನದಲ್ಲಿ ಇದ್ದರೂ ಸಹ, ಬರಲು ಹೇಳಿಕಳಿಸುತ್ತಾನೆ. ಮತ್ತು ಅವನು ಕಳ್ಳನನ್ನು ಹಿಡಿಯದಿದ್ದರೆ ಆ ದಳವಾಯಿಯನ್ನು ಬಂಧಿಸಿ ಅವನ ಆಸ್ತಿಯನ್ನು ವಶಪಡಿಸಿಕೊಳ್ಳಬಹುದು. ಅದೇ ರೀತಿಯಲ್ಲಿ, ನಗರದಲ್ಲಾಗುವ ಕಳ್ಳತನಗಳ ಲೆಕ್ಕವನ್ನು ಕೊಡಲು ಪ್ರಧಾನ ದಂಡಾಧಿಕಾರಿ ಬಾಧ್ಯಸ್ಥನು. ಹೀಗಾಗಿ, ಅತಿ ಕಡಿಮೆ ಕಳವುಗಳು ಜರುಗುತ್ತವೆ. ಮತ್ತು ಕೆಲವೊಂದು ಸಂಭವಿಸಿದರೂ ಸಹ ನೀವು ಯಾವುದಾದರೊಂದು ಚಿಕ್ಕ ಕಾಣಿಕೆ ಮತ್ತು ನಿಮ್ಮಿಂದ ಕಳವು ಮಾಡಿದ ಮನುಷ್ಯನ ವರ್ಣನೆ ನೀಡಿದರೆ ಕಳ್ಳ ನಗರದಲ್ಲಿರುವನೊ ಇಲ್ಲವೊ ಎಂಬುದನ್ನು ಮಂತ್ರವಾದಿಗಳ ಮೂಲಕ ಅವರು ಕ್ಷಿಪ್ರದಲ್ಲಿಯೆ ತಿಳಿಯುವರು. ಹೀಗಾಗಿ, ಈ ನಾಡಿನಲ್ಲಿ ಅತಿ ಕಡಿಮೆ ಕಳ್ಳರಿರುವರು.

ಈ ರಾಜನಲ್ಲಿ ಯಾವಾಗಲೂ ಐವತ್ತುಸಾವಿರ ಸಂಬಳದ ಸೈನಿಕರಿರುವರು. ಅವರಲ್ಲಿ ಅರಮನೆಯ ರಕ್ಷಣಾಪಡೆಗೆ ಸೇರಿದ ಆರು ಸಾವಿರ ಅಶ್ವಾಳುಗಳಿದ್ದಾರೆ. ಆ ಆರು ಸಾವಿರದಲ್ಲಿ ಅವನೊಂದಿಗೆ ಕುದುರೆಯೇರಿ ಹೋಗಲೇಬೇಕಾದ ಇನ್ನೂರು ಜನ ಸೇರಿದ್ದಾರೆ. ಅವನಲ್ಲಿ ಇಪ್ಪತ್ತು ಸಾವಿರ ಈಟಿಗಾರರು ಮತ್ತು ಗುರಾಣಿಧಾರಕರು ಮತ್ತು ಲಾಯದಲ್ಲಿನ ಆನೆಗಳನ್ನು ನೋಡಿಕೊಳ್ಳಲು ಮೂರು ಸಾವಿರ ಜನರೂ ಇದ್ದಾರೆ. ಅವನಲ್ಲಿ ಕುದುರೆಗಳನ್ನು ನೋಡಿಕೊಳ್ಳುವ ಹದಿನಾರು ನೂರು ಆಳುಗಳು

ಮತ್ತು ಮುನ್ನೂರು ಕುದುರೆ ಶಿಕ್ಷಕರು ಮತ್ತು ಎರಡುಸಾವಿರ ಕಸಬುದಾರರು. ಅಂದರೆ ಕಮ್ಮಾರರು, ಉಪ್ಪಾರರು, ಮತ್ತು ಬಡಿಗರು, ಮತ್ತು ಅರಿವೆ ಒಗೆಯುವ ಅಗಸರು ಇದ್ದಾರೆ. ಅವನಲ್ಲಿರುವ ಮತ್ತು ಪ್ರತಿ ದಿನ ಕೂಲಿ ಪಡೆಯುವ ಜನರೆಂದರೆ ಇವರೇ. ಅವನು ಅವರಿಗೆ ಅರಮನೆಯ ದ್ವಾರದಲ್ಲಿ ಅವರ ಕೂಲಿ ಕೊಡುತ್ತಾನೆ. ಆರು ಸಾವಿರ ಅಶ್ವಾಳುಗಳಿಗೆ ರಾಜ ಕುದುರೆಗಳನ್ನು ಉಚಿತವಾಗಿ ಕೊಡುತ್ತಾನೆ ಮತ್ತು ಅವುಗಳಿಗಾಗಿ ಪ್ರತಿ ತಿಂಗಳು ಕಾಳುಕಡಿ ಕೊಡುತ್ತಾನೆ, ಮತ್ತು ಇವೆಲ್ಲ ಕುದುರೆಗಳಿಗೆ ರಾಜನ ಚಿಹ್ನೆಯಿಂದ ಮುದ್ರೆಯೊತ್ತಲಾಗಿರುತ್ತದೆ. ಅವು ಸತ್ತಾಗ ಮುದ್ರೆಯಿರುವ ಚರ್ಮದ ತುಂಡನ್ನು ಅವರು ಪ್ರಧಾನ ಅಶ್ವಪತಿಯಾದ ಮದನಾರ್ಕ್‌ನೆಡೆಗೆ ಒಯ್ಯಲೇಬೇಕು. ಅಂದರೆ ಮಾತ್ರ ಅವನು ಅವರಿಗೆ ಬೇರೆ ಕುದುರೆ ಕೊಡುವನು. ಮತ್ತು ಅವನು ಕೊಡುವ ಈ ಕುದುರೆಗಳು ಬಹುತೇಕವಾಗಿ ರಾಜ ಸಾವಿರ ಪರ್ದಾಒಗಳಿಗೆ ಹನ್ನೆರಡು ಅಥವಾ ಹದಿನೈದರಂತೆ ಕೊಳ್ಳುವ ದೇಶೀಯ ಕುದುರೆಗಳು. ರಾಜ ಪ್ರತಿ ವರ್ಷ ಹದಿಮೂರು ಸಾವಿರ ಒರ್ಮುಜ್ ಮತ್ತು ದೇಶೀಯ ಕುದುರೆಗಳನ್ನು ಕೊಳ್ಳುತ್ತಾನೆ. ಅವುಗಳಲ್ಲಿ ತನ್ನ ಲಾಯಗಳಿಗೆ ಅತ್ಯುತ್ತಮವಾದವುಗಳನ್ನು ಆರಿಸಿಕೊಳ್ಳುತ್ತಾನೆ, ಮತ್ತು ಮಿಕ್ಕವುಗಳನ್ನು ತನ್ನ ದಳವಾಯಿಗಳಿಗೆ ಕೊಡುತ್ತಾನೆ, ಮತ್ತು ಅವುಗಳಿಂದ ಬಹಳ ಹಣ ಗಳಿಸುತ್ತಾನೆ. ಏಕೆಂದರೆ, ಒಳ್ಳೆಯ ಪರ್ಶಿಯನ್ ಕುದುರೆಗಳನ್ನು ತೆಗೆದಿಟ್ಟುಕೊಂಡು ದೇಶೀಯ ಕುದುರೆಗಳನ್ನು ಸಾವಿರ ಪರ್ದಾಒಗಳಿಗೆ ಐದರಂತೆ ಮಾರುತ್ತಾನೆ ಮತ್ತು ಅವರು ಸೆಪ್ಟಂಬರ್ ತಿಂಗಳೊಳಗೆ ಅವುಗಳ ದುಡ್ಡು ಕೊಡಲೇಬೇಕು. ಹೀಗೆ ಪಡೆದ ಹಣವನ್ನು ಅವನು ಪೋರ್ತುಗೀಜರಿಂದ ಕೊಳ್ಳುವ ಅರಬೀ ಕುದುರೆಗಳಿಗಾಗಿ ಕೊಡುತ್ತಾನೆ. ಹೀಗಾಗಿ, ಬೊಕ್ಕಸದಿಂದ ಏನೂ ಖರ್ಚಾಗದೆ ಅವನ ದಳವಾಯಿಗಳೆ ಎಲ್ಲದರ ಖರ್ಚನ್ನು ಕೊಡುತ್ತಾರೆ.

ಈ ರಾಜ ತನ್ನ ದ್ವಾರಗಳೊಳಗೆ ನಾಲ್ಕು ಸಾವಿರಕ್ಕೂ ಹೆಚ್ಚು ಸ್ತ್ರೀಯರನ್ನು ಹೊಂದಿದ್ದಾನೆ. ಅವರೆಲ್ಲ ಅರಮನೆಯಲ್ಲಿ ಇರುತ್ತಾರೆ. ಕೆಲವರು ನೃತ್ಯಗಾರ್ತಿಯ ರಾಗಿರುತ್ತಾರೆ ಮತ್ತು ಇನ್ನು ಕೆಲವರು ರಾಜನ ಹೆಂಡಂದಿರನ್ನು ಮತ್ತು ಅರಮನೆ ಯೊಳಗಡೆ ರಾಜನನ್ನೂ ತಮ್ಮ ಹೆಗಲ ಮೇಲೆ ಹೊರುವ ಬೋಯಿಗಳು ಆಗಿರುತ್ತಾರೆ. ಏಕೆಂದರೆ, ರಾಜನ ಮನೆಗಳು ದೊಡ್ಡವಿವೆ ಮತ್ತು ಒಂದು ಮತ್ತೊಂದರ ನಡುವೆ ಬಹಳ ಅಂತರವಿರುತ್ತವೆ. ಅವನಲ್ಲಿ ಕುಸ್ತಿ ಆಡುವ ಸ್ತ್ರೀಯರೂ ಮತ್ತು ಭವಿಷ್ಯ ಹಾಗೂ ಕಣಿ ಹೇಳುವ ಇತರರೂ ಇದ್ದಾರೆ. ಮತ್ತು ಅವನಲ್ಲಿ ದ್ವಾರಗಳೊಳಗೆ ಮಾಡಲಾದ ಖರ್ಚುಗಳ ಲೆಕ್ಕ ಬರೆಯುವ ಸ್ತ್ರೀಯರೂ ಮತ್ತು ರಾಜ್ಯದ ಎಲ್ಲ ಆಗು ಹೋಗುಗಳನ್ನು ಬರೆದು ಹೊರಗಿನ ಲೇಖಕರೊಂದಿಗೆ ತಮ್ಮ ಪುಸ್ತಕಗಳನ್ನು ಹೋಲಿಸಿ ನೋಡುವ ಕರ್ತವ್ಯವುಳ್ಳ ಇತರರೂ ಇದ್ದಾರೆ. ಅವನಲ್ಲಿ ಸಂಗೀತಕ್ಕೂ ಸ್ತ್ರೀಯರಿದ್ದಾರೆ.

ಅವರು ವಾದ್ಯಗಳನ್ನು ನುಡಿಸುತ್ತಾರೆ ಮತ್ತು ಹಾಡುತ್ತಾರೆ. ರಾಜನ ಹೆಂಡಂದಿರೂ ಸಂಗಿತದಲ್ಲಿ ಪರಿಣಿತರಿರುವರು.

ಅಲ್ಲದೆ, ರಾಜನಲ್ಲಿ ಬೇರೆ ಸ್ತ್ರೀಯರಿದ್ದಾರೆ. ತನ್ನ ಸ್ವಂತ ಸೇವೆಗಾಗಿ ಅವನು ಹತ್ತು ಜನ ಅಡಿಗೆಯ ಸ್ತ್ರೀಯರನ್ನು ಮತ್ತು ತಾನು ಔತಣ ಕೊಟ್ಟ ಸಂದರ್ಭ ಗಳಿಗಾಗಿ ಕಾಯ್ದಿಟ್ಟ ಇತರರನ್ನು ಹೊಂದಿದ್ದಾನೆ. ಈ ಹತ್ತು ಜನ ರಾಜನನ್ನು ಬಿಟ್ಟು ಬೇರಾರಿಗೂ ಅಡಿಗೆ ಮಾಡುವುದಿಲ್ಲ. ಅಡಿಗೆಮನೆಯ ಬಾಗಿಲಿಗೆ ಅವನು ಒಬ್ಬ ಬೀಜವೊಡೆದ ಪುರುಷನನ್ನು ರಕ್ಷಕನನ್ನಾಗಿ ಇರಿಸುತ್ತಾನೆ. ಅವನು ವಿಷದ ಭಯದಿಂದಾಗಿ ಯಾರಿಗೂ ಒಳಗೆ ಪ್ರವೇಶಿಸಲು ಕೊಡುವುದಿಲ್ಲ. ರಾಜ ಉಣ್ಣ ಬಯಸಿದಾಗ ಪ್ರತಿ ವ್ಯಕ್ತಿ ಹೊರಟುಹೋಗುತ್ತಾನೆ. ಮತ್ತು ತಮ್ಮ ಕರ್ತವ್ಯ ವಾಗಿದ್ದ ಕೆಲವು ಸ್ತ್ರೀಯರು ಬರುತ್ತಾರೆ ಮತ್ತು ಅವನ ಊಟಕ್ಕೆ ಸಿದ್ಧಗೊಳಿಸುತ್ತಾರೆ. ಅವರು ಅವನಿಗಾಗಿ ಬಂಗಾರದಿಂದ ಮಾಡಿದ, ದುಂಡಗಿನ, ಮೂರು ಕಾಲಿನ ಸ್ಟೂಲನ್ನು ಇಟ್ಟು ಅದರ ಮೇಲೆ ಭಕ್ಷ್ಯಗಳನ್ನು ಇಡುತ್ತಾರೆ. ಇವುಗಳನ್ನು ದೊಡ್ಡ ಬಂಗಾರದ ಪಾತ್ರೆಗಳಲ್ಲಿ ತರಲಾಗುತ್ತದೆ ಮತ್ತು ಚಿಕ್ಕ ಭಕ್ಷ್ಯಗಳನ್ನು ಬಂಗಾರದ ಬೋಗುಣಿಗಳಲ್ಲಿ ತರಲಾಗುತ್ತದೆ. ಅವುಗಳಲ್ಲಿ ಕೆಲವೊಂದನ್ನು ಬೆಲೆಯುಳ್ಳ ಹರಳು ಗಳಿಂದ ಅಲಂಕರಿಸಲಾಗಿರುತ್ತದೆ. ಮೇಜಿನ ಮೇಲೆ ಅರಿವೆ ಇರುವುದಿಲ್ಲ. ಆದರೆ, ರಾಜ ಊಟ ಮುಗಿಸಿದಾಗ ಒಂದನ್ನು ತರಲಾಗುತ್ತದೆ ಮತ್ತು ಅವನು ತನ್ನ ಕೈಗಳನ್ನು ಮತ್ತು ಬಾಯಿಯನ್ನು ತೊಳೆದುಕೊಳ್ಳುತ್ತಾನೆ. ಸ್ತ್ರೀಯರು ಮತ್ತು ಬೀಜವೊಡೆದ ಪುರುಷರು ಅವನಿಗೆ ಊಟ ಬಡಿಸುತ್ತಾರೆ. ರಾಜನ ಹೆಂಡಂದಿರು ಪ್ರತಿ ಯೊಬ್ಬಳೂ ತನ್ನ ಭವನದಲ್ಲಿಯೆ ಇರುತ್ತಾಳೆ ಮತ್ತು ಪರಿಚಾರಿಕೆಯರು ಅವರ ಸೇವೆಗೈಯುತ್ತಾರೆ. ಅವನು ನ್ಯಾಯಾಧೀಶರನ್ನು ಮತ್ತು ದಂಡಾಧಿಕಾರಿಗಳನ್ನು ಪ್ರತಿ ರಾತ್ರಿ ಕಾಯುವ ಕಾವಲುಗಾರರನ್ನು ಹೊಂದಿರುವನೆಂದು ಹೇಳಲಾಗುತ್ತದೆ, ಮತ್ತು ಇವರೆಲ್ಲ ಸ್ತ್ರೀಯರು.

ರಾಜ ಯಾವುದೆ ವಸ್ತ್ರವನ್ನು ಒಮ್ಮೆಗಿಂತ ಹೆಚ್ಚು ಧರಿಸುವುದಿಲ್ಲ, ಮತ್ತು ಅದನ್ನು ತೆಗೆದಾಗ ಆ ಕರ್ತವ್ಯ ಹೊಂದಿದ ಕೆಲವು ಅಧಿಕಾರಿಗಳಿಗೆ ಅದನ್ನು ಕೊಡುತ್ತಾನೆ. ಮತ್ತು ಅವರು ಲೆಕ್ಕ ಕೊಡುತ್ತಾರೆ; ಮತ್ತು ಈ ವಸ್ತ್ರಗಳನ್ನು ಎಂದೂ ಯಾರಿಗೂ ಕೊಡಲಾಗುವುದಿಲ್ಲ. ಇದನ್ನು ದೊಡ್ಡ ಘನತೆಯ ಕುರುಹೆಂದು ಪರಿಗಣಿಸಲಾಗುತ್ತದೆ. ಅವನ ಬಟ್ಟೆಗಳು ಬಹಳ ಉತ್ತಮ ವಸ್ತುವಿನಿಂದ ಮಾಡಿದ ಮತ್ತು ಬಂಗಾರದ ಕೆಲಸ ಮಾಡಿದ ರೇಷ್ಮೆ ಅರಿವೆಗಳಾಗಿರುತ್ತವೆ. ಪ್ರತಿಯೊಂದು ಹತ್ತು ಪರ್ದಾಒ ಬೆಲೆಯುಳ್ಳದ್ದಾಗಿರುತ್ತದೆ. ಅವರು ಕೆಲವೊಮ್ಮೆ ಅದೇ ತರಹದ ಬಾಜುರಿಗಳನ್ನು ಧರಿಸುತ್ತಾರೆ. ಅವು ಅಂಚುಗಳಿದ್ದ ಅಂಗಿಗಳಂತಿರುತ್ತವೆ; ಮತ್ತು ತಲೆಯ ಮೇಲೆ ಕುಲ್ಯಾಸ್[11] ಎಂದು ಕರೆಯುವ ಮಖಮಲ್ಲಿನ ಟೊಪ್ಪಿಗೆಗಳನ್ನು ಧರಿಸುತ್ತಾರೆ, ಮತ್ತು ಇವುಗಳಲ್ಲೊಂದು ಸುಮಾರು ಇಪ್ಪತ್ತು ಕ್ರುಜೆಡೊಗಳಷ್ಟು

ಬೆಲೆಯುಳ್ಳದ್ದಿದೆ. ಅವನು ಅದನ್ನು ತಲೆಯ ಮೇಲಿಂದ ಎತ್ತಿದ ಮೇಲೆ ಅವನು ಅದನ್ನು ಪುನಃ ಎಂದೂ ಧರಿಸುವುದಿಲ್ಲ.

ಈ ರಾಜ್ಯದಲ್ಲಿ ನೀಡಲಾಗುವ ಶಿಕ್ಷೆಗಳೆಂದರೆ ಇವು : ಕಳ್ಳನಿಗೆ, ಅವನು ಯಾವುದೆ ಕಳವು ಮಾಡಿರಲಿ, ಅದು ಎಷ್ಟೆ ಅಲ್ಪವಿರಲಿ, ಕೂಡಲೆ ಅವನ ಒಂದು ಕಾಲನ್ನು ಮತ್ತು ಒಂದು ಕೈಯನ್ನು ಕತ್ತರಿಸಲಾಗುತ್ತದೆ, ಮತ್ತು ಕಳವು ದೊಡ್ಡದಿದ್ದರೆ ಅವನನ್ನು ಗದ್ದದ ಕೆಳಗೆ ಕೊಕ್ಕೆಸಿಕ್ಕಿಸಿ ಗಲ್ಲಿಗೇರಿಸಲಾಗುತ್ತದೆ. ಯಾವನೊಬ್ಬ ಮನುಷ್ಯ ಗೌರವಾರ್ಹ ಸ್ತ್ರೀ ಅಥವಾ ಕನ್ಯೆಯ ಮೇಲೆ ಅತ್ಯಾಚಾರ ಮಾಡಿದರೆ ಅದೇ ಶಿಕ್ಷೆ ವಿಧಿಸಲಾಗುತ್ತದೆ. ಮತ್ತು ಅವನು ಇಂಥ ಯಾವುದೆ ಹಿಂಸೆ ಮಾಡಿದರೆ ಅವನ ಶಿಕ್ಷೆ ಅದೇ ತರಹದ್ದಾಗಿರುತ್ತದೆ. ದ್ರೋಹಿಗಳಾದ ಮನ್ನೆಯರನ್ನು ಹೊಟ್ಟೆಯೊಳಗೆ ತಳ್ಳಿದ ಕಟ್ಟಿಗೆಯ ಕಂಬದ ಮೇಲೆ ಸಜೀವವಾಗಿ ಶೂಲಕ್ಕೇರಿಸಲು ಕಳಿಸಲಾಗುತ್ತದೆ. ಕೆಳವರ್ಗದ ಜನರಿಗಾದರೊ, ಅವರು ಯಾವುದೆ ಅಪರಾಧ ಮಾಡಿರಲಿ ಅವನು ತಕ್ಷಣ ಪೇಟೆಯಲ್ಲಿ ಅವರ ತಲೆ ಕಡಿಯಲು ಆಜ್ಞಾಪಿಸುತ್ತಾನೆ, ಮತ್ತು ಮರಣ ದ್ವಂದ್ವಯುದ್ಧದ ಪರಿಣಾಮವಾಗಿರದಿದ್ದರೆ ಕೊಲೆಗೂ ಅದೇ ಶಿಕ್ಷೆ. ಏಕೆಂದರೆ, ದ್ವಂದ್ವ ಯುದ್ಧದಲ್ಲಿ ಕಾದುವವರಿಗೆ ಬಹಳ ಗೌರವ ನೀಡಲಾಗುತ್ತದೆ, ಮತ್ತು ಸತ್ತವನ ಆಸ್ತಿಯನ್ನು ಬದುಕುಳಿದವನಿಗೆ ಕೊಡಲಾಗುತ್ತದೆ ; ಆದರೆ, ಮಂತ್ರಿಯ ಅನುಮತಿಯಿಲ್ಲದೆ ಯಾರೂ ದ್ವಂದ್ವಯುದ್ಧ ಮಾಡುವಂತಿಲ್ಲ. ಅವನು ಅದನ್ನು ತಕ್ಷಣ ನೀಡುತ್ತಾನೆ. ಇವು ಸಾಮಾನ್ಯ ತರಹದ ಶಿಕ್ಷೆಗಳು. ಆದರೆ ಹೆಚ್ಚು ವಿಚಿತ್ರವಾದ ಬೇರೆಯವೂ ಉಂಟು. ಏಕೆಂದರೆ, ರಾಜನಿಗೆ ಹಾಗೆ ಮನಸ್ಸಾದರೆ ಮನುಷ್ಯನನ್ನು ಆನೆಗಳ ಮುಂದೆ ಎಸೆಯುವಂತೆ ಆಜ್ಞಾಪಿಸುತ್ತಾನೆ ಮತ್ತು ಅವು ಅವನನ್ನು ತುಂಡುತುಂಡಾಗಿ ಸಿಗಿದುಹಾಕುತ್ತವೆ. ಜನರು ಅವನಿಗೆ ಎಷ್ಟೊಂದು ವಿಧೇಯರಾಗಿರುವರೆಂದರೆ ತನ್ನ ಬೆನ್ನ ಮೇಲೆ ಕಲ್ಲು ಹೊತ್ತು ಇಡಿ ದಿನ ರಸ್ತೆಯಲ್ಲಿ ನೀವು ಮುಕ್ತಗೊಳಿಸುವವರೆಗೆ ನಿಲ್ಲಲು ಯಾರಿಗಾದರೂ ನೀವು ರಾಜನ ಪರವಾಗಿ ಹೇಳಿದರೆ, ಅವನು ಹಾಗೆಯೆ ಮಾಡುವನು.

ರಾಜ್ಯದಲ್ಲಿ ಉದ್ಯುಕ್ತರಾದ ರಾಜನ ಅಧಿಕಾರಿಗಳು ಇವರು : ಮೊದಲು ರಾಜ್ಯದ ಮಂತ್ರಿ. ಅವನು ಅದರಲ್ಲಿ ಎರಡನೆಯ ವ್ಯಕ್ತಿ, ನಂತರ ರಾಜನ ಸ್ವಂತ ಭೂಮಿಯ[12] ಗುಮಾಸ್ತರೊಂದಿಗೆ ಭಂಡಾರಿ, ಪ್ರಧಾನ ಭಂಡಾರಿ, ಮತ್ತು ಅರಮನೆ ರಕ್ಷಕದಳಪತಿ, ರತ್ನಭಂಡಾರಿ, ಪ್ರಧಾನ ಅಶ್ವಪತಿ. ರಾಜನಲ್ಲಿ ಕಂದಾಯಗಳ ನಿಯಂತ್ರಕನಾಗಲಿ ಬೇರೆ ಅಧಿಕಾರಿಗಳಾಗಲಿ ಅಥವಾ ಅವನ ಮನೆಯ ಅಧಿಕಾರಿಗಳಾಗಲಿ ಇಲ್ಲ, ಆದರೆ ಅವನ ರಾಜ್ಯದ ದಳವಾಯಿಗಳು ಮಾತ್ರ ಇರುವರು. ಅವರಲ್ಲಿ ನಾನಿಲ್ಲಿ ಕೆಲವರನ್ನು, ಅವರು ಹೊಂದಿರುವ ಆದಾಯಗಳನ್ನು ಮತ್ತು ಅವರು ಪ್ರಭುಗಳಾಗಿದ್ದ ಪ್ರದೇಶವನ್ನು ಉಲ್ಲೇಖಿಸುವೆ.

ಮೊದಲಿಗೆ ಪ್ರಸ್ತುತ ಮಂತ್ರಿ ಸಾಳ್ವನಾಯಕ್. ಅವನಿಗೆ ಹನ್ನೊಂದು ಲಕ್ಷ ಸುವರ್ಣ ಪರ್ದಾಒಗಳ ಆದಾಯವಿದೆ. ಅವನು ಚಾರಮಾಒಡೆಲ್ ಮತ್ತು ನಾಗ ಪಟಾವ್, ಮತ್ತು ತಂಗೋರ್, ಮತ್ತು ಬೊಂಗಾರಿನ್, ಮತ್ತು ದಪಟಾವ್, ಮತ್ತು ತ್ರುಗುಎಲ್, ಮತ್ತು ಕಾಲಿಮ್‌ಗಳ್ಳದೊರೆ ಮತ್ತು ಇವೆಲ್ಲ ನಗರಗಳು. ಅವುಗಳ ಪ್ರದೇಶವೆಲ್ಲ ವಿಶಾಲವಾದುದು, ಮತ್ತು ಅವುಗಳು ಸಿಲೋನಿನ ಗಡಿ ಯಲ್ಲಿವೆ.[13] ಈ ಹಣದಲ್ಲಿ ಒಂದು ಮೂರಾಂಶವನ್ನು ಅವನು ರಾಜನಿಗೆ ಕೊಡಬೇಕು. ಎರಡು ಮೂರಾಂಶ ಅವನು ರಾಜನಿಗಾಗಿ ಸಲಹಲೇಬೇಕಾದ ಲಷ್ಕರಿಗಳು ಮತ್ತು ಕುದುರೆಗಳ—ಮೂವತ್ತು ಸಾವಿರ ಕಾಲಾಳು ಮತ್ತು ಮೂರುಸಾವಿರ ಕುದುರೆಗಳು ಮತ್ತು ಮೂವತ್ತು ಆನೆಗಳು—ಖರ್ಚಿಗಾಗಿ ಅವನಲ್ಲಿ ಉಳಿಯುತ್ತದೆ. ಅಂದರೆ, ಈ ಪಡೆಯ ಖರ್ಚು ಕಳೆದ ನಂತರ ಉಳಿಯುವ ಶೇಷವನ್ನು ಅವನು ಪಡೆಯುತ್ತಾನೆ. ಆದರೆ, ಈ ರೀತಿಯಲ್ಲಿ ಅವನು ಬಹಳ ಸಂಪತ್ತು ಗಳಿಸುತ್ತಾನೆ. ಏಕೆಂದರೆ, ಅವನು ಎಂದೂ ಪೂರ್ಣಪಡೆಯನ್ನು ಸಲಹುವುದಿಲ್ಲ. ಮತ್ತು ರಾಜ, ತನಗೆ ಇಷ್ಟಬಂದಾಗ, ಈ ಮನ್ನೆಯರ ಆಸ್ತಿಗಳನ್ನು ವಶಪಡಿಸಿಕೊಳ್ಳುತ್ತಾನೆ.

ಕ್ರಿಸ್ನರಾವ್‌ನ ಮಂತ್ರಿಯಾಗಿದ್ದ ಇನ್ನೊಬ್ಬ ದಳವಾಯಿ, ಅಜಪರ್ಕಟೆಯಪ ನಿಗೆ ಎಂಟುನೂರು ಸಾವಿರ ಸುವರ್ಣ ಪರ್ದಾಒಗಳ ಆದಾಯವಿದೆ, ಮತ್ತು ಅವನು ಹುಡೊಗರಿ[14] ನಗರದ, ಮತ್ತು ಕೊಂಡೊವಿಮ್[15] ನಗರದ, ಮತ್ತು ಪೆನ ಗುಂಡಿಮ್[16] ನಗರದ, ಮತ್ತು ಸಿದೌಟದ[17] ಕೊದೆಗರಲ್‌ದ[18] ದೊರೆ. ಇವೆಲ್ಲ ದೊಡ್ಡ ನಗರಗಳು ಒರಿಯಾ ರಾಜ್ಯದ ಗಡಿಯಲ್ಲಿವೆ, ಮತ್ತು ಕೆಲವು ಕೇಪ್ ಕೊಮೊರಿನ್ ಗಡಿಯಲ್ಲಿವೆ. ಈ ಪ್ರದೇಶಗಳನ್ನು ಕ್ರಿಸ್ನರಾವ್ ಅವನಿಗೆ ಅವನನ್ನು ಮಂತ್ರಿಯನ್ನಾಗಿ ನೇಮಿಸಿದಾಗ ಮತ್ತು ಅವುಗಳ ಒಡೆಯನಾಗಿದ್ದ ತನ್ನ ಮಂತ್ರಿ ಯಾಗಿದ್ದ ಸಾಲ್ವಟನಿಕನ ಕಣ್ಣು ಕೀಳಿಸಿದಾಗ ಕೊಟ್ಟನು. ಅವನು ಇಪ್ಪತ್ತೈದು ಸಾವಿರ ಕಾಲಾಳು, ಹದಿನೈದು ಸಾವಿರ ಕುದುರೆ, ಮತ್ತು ನಲವತ್ತು ಆನೆಗಳೊಂದಿಗೆ ಸೇವೆ ಮಾಡಬೇಕು, ಮತ್ತು ಪ್ರತಿವರ್ಷ ರಾಜನಿಗೆ ಮುನ್ನೂರು ಸಾವಿರ ಪರ್ದಾಒ ಗಳನ್ನು ಕೊಡುತ್ತಾನೆ.

ಗಪನಾಯಿಕ್ ಎಂದು ಕರೆಯಲಾಗುವ ಇನ್ನೊಬ್ಬ ದಳವಾಯಿ ಈ ಪ್ರದೇಶಗಳ ಅರ್ಥಾತ್ ರೊಸಿಲ್,[19] ಮತ್ತು ತಿಪಾರ್ ಮತ್ತು ತಿಕಾಲೊ, ಮತ್ತು ಬಿಗೊಲೊಮ್[20]ಗಳ ದೊರೆಯಾಗಿರುವನು. ಈ ಪ್ರದೇಶಗಳು ಇಡಲ್‌ಕಾವ್‌ನ ಪ್ರದೇಶಕ್ಕೆ ಹೊಂದಿಕೊಂಡು ಸಾಗುತ್ತವೆ. ಮತ್ತು ಇವೆಲ್ಲವುಗಳಲ್ಲಿ ವಿಪುಲ ಗೋದಿ ಮತ್ತು ಕಾಳುಕಡಿ, ಮತ್ತು ದನಕರು, ಮತ್ತು ಆಡುಗಳು ಮತ್ತು ಎಳ್ಳು ಮತ್ತು ಹತ್ತಿ ಇದೆ. ಮತ್ತು ಕೊನೆಯದರಿಂದ ಅತ್ಯುತ್ತಮ ಬಟ್ಟೆ ಮಾಡಲಾಗುತ್ತದೆ. ಏಕೆಂದರೆ, ಎಲ್ಲ ಉತ್ಪಾದಿತ ಬಟ್ಟೆಯೂ ಅದರಿಂದಲೆ ಮಾಡಲಾಗಿರುತ್ತದೆ. ಈ

ಪ್ರದೇಶಗಳಿಂದ ಅವನಿಗೆ ಆರುನೂರು ಸಾವಿರ ಪರ್ದಾಓಗಳ ಆದಾಯವಿದೆ, ಮತ್ತು ಅವನು ಎರಡು ಸಾವಿರ ಐನೂರು ಕುದುರೆ, ಮತ್ತು ಇಪ್ಪತ್ತು ಸಾವಿರ ಕಾಲಾಳು, ಮತ್ತು ಇಪ್ಪತ್ತು ಆನೆಗಳನ್ನು ಪೂರೈಸಬೇಕು, ಮತ್ತು ಪ್ರತಿವರ್ಷ ರಾಜನಿಗೆ ನೂರೈವತ್ತು ಸಾವಿರ ಪರ್ದಾಓಗಳನ್ನು ಕೊಡುತ್ತಾನೆ. ಬೀಜಮಡಿಗಳು ಮತ್ತು ದನಸಂತಾನಾಭಿವೃದ್ಧಿ ಹೊಲಗಳಿಂದ ಬಲು ಶ್ರೀಮಂತವಾದ ಪ್ರದೇಶವಾಗಿರುವ ವಿಂಗಾಪೊರದ[21] ದೊರೆಯಾಗಿರುವ ಇನ್ನೊಬ್ಬ ದಳವಾಯಿಯೆಂದರೆ ಲೆಪಪಾಯಿಕ್ ಎಂಬವನಿಗೆ ಮುನ್ನೂರು ಸಾವಿರ ಪರ್ದಾವ್‌ಗಳ ಆದಾಯವಿದೆ. ಅವನು ಹನ್ನೆರಡು ನೂರು ಕುದುರೆ ಮತ್ತು ಇಪ್ಪತ್ತು ಸಾವಿರ ಕಾಲಾಳು ಮತ್ತು ಇಪ್ಪತ್ತೆಂಟು ಆನೆಗಳನ್ನು ಪೂರೈಸಬೇಕು, ಮತ್ತು ಅವನು ಪ್ರತಿ ವರ್ಷ ರಾಜನಿಗೆ ಎಂಬತ್ತು ಸಾವಿರ ಪರ್ದಾಓಗಳನ್ನು ಕೊಡುತ್ತಾನೆ.

ನರ್ವರ ಎಂದು ಕರೆಯಲ್ಪಡುವ ರತ್ನಗಳ ಬಂಢಾರಿ ಒಂದೆಗೆಯು[22] ಎಂದು ಕರೆಯಲಾಗುವ ಹೊಸ ನಗರದ ದಳವಾಯಿ ಆಗಿರುವನು, ಮತ್ತು ದಿಗುಒಟೆ ಮತ್ತು ದಾಗುರ್ಎಮ್ ಮತ್ತು ಎಂಟರೆಮ್[23] ನಗರಗಳ ಮತ್ತು ಬಿಸ್ನಗದ ಭೂಮಿಗಳ ಗಡಿಯಲ್ಲಿರುವ ಇತರ ಭೂಮಿಗಳ ದೊರೆ ಆಗಿರುವನು ; ಅವು ಎಲ್ಲ ಹೊಲಗಳು. ಅವು ಅವನಿಗೆ ಪ್ರತಿ ವರ್ಷ ನಾನೂರು ಸಾವಿರ ಪರ್ದಾಓಗಳನ್ನು ನೀಡುತ್ತದೆ. ಅದರಲ್ಲಿ ಎರಡುನೂರು ಸಾವಿರವನ್ನು ರಾಜನಿಗೆ ಕೊಡುತ್ತಾನೆ ಮತ್ತು ಮಿಕ್ಕಿದ್ದನ್ನು ಹನ್ನೆರಡು ಸಾವಿರ ಕಾಲಾಳುಗಳು ಮತ್ತು ಆರುನೂರು ಕುದುರೆ ಮತ್ತು ಇಪ್ಪತ್ತು ಆನೆಗಳ ಮೇಲೆ ಖರ್ಚು ಮಾಡುತ್ತಾನೆ.

ರಾಜನ ದಂಡನಾಯಕನಾದ ಚಿನಪನಾಯಿಕ್ ಎನ್ನುವ ಇನ್ನೊಬ್ಬ ದಳವಾಯಿ ಮುನ್ನೂರು ಸಾವಿರ ಪರ್ದಾಓಗಳನ್ನು ನೀಡುವ ಒಳನಾಡಿನಲ್ಲಿ ಕೊಚಿಮ್‌ದ ದಿಕ್ಕಿನಲ್ಲಿರುವ ಕಳಲಿಯ[24] ಪ್ರದೇಶ ಹಾಗೂ ಇನ್ನೂ ಅನೇಕ ಪ್ರದೇಶಗಳ ದೊರೆ ಆಗಿರುವನು ; ಅವನು ರಾಜನಿಗೆ ಪ್ರತಿ ವರ್ಷ ಒಂದುನೂರು ಸಾವಿರ ಪರ್ದಾಓಗಳನ್ನು ಕೊಡಲು ಬಾಧ್ಯಸ್ಥನು ಮತ್ತು ಎಂಟುನೂರು ಕುದುರೆ ಮತ್ತು ಹತ್ತು ಸಾವಿರ ಕಾಲಾಳುಗಳೊಂದಿಗೆ ಸೇವೆ ಸಲ್ಲಿಸುತ್ತಾನೆ.

ಕ್ರಿಸ್ನಪಸಾಯಿಕ್ ದೊಡ್ಡ ನಗರವಾದ ಆಒಸೆಲ್[25] ಮತ್ತು ಅವುಗಳ ಹೆಸರುಗಳು ಕಠಿಣವಾದುದರಿಂದ ನಾನಿಲ್ಲಿ ಹೇಳಿರದ ಇತರ ಗ್ರಾಮಗಳ ದೊರೆ ಆಗಿರುವನು. ಈ ಪ್ರದೇಶಗಳು ಅವನಿಗೆ ಪ್ರತಿವರ್ಷ ಇಪ್ಪತ್ತು ಸಾವಿರ ಸುವರ್ಣ ಪರ್ದಾಓಗಳನ್ನು ನೀಡುತ್ತವೆ, ಮತ್ತು ಅವನು ರಾಜನಿಗೆ ಏಳು ಸಾವಿರ ಪರ್ದಾಓಗಳ ವಾರ್ಷಿಕ ಕಂದಾಯ ಸಲ್ಲಿಸುತ್ತಾನೆ, ಮತ್ತು ಐನೂರು ಕುದುರೆ ಮತ್ತು ಏಳುನೂರು ಕಾಲಾಳುಗಳೊಂದಿಗೆ ಸೇವೆ ಸಲ್ಲಿಸುತ್ತಾನೆ.

ಸಮುದ್ರ ಕರಾವಳಿಯಲ್ಲಿರುವ ಮಂಗಳೂರಿನ ಗಡಿಯಲ್ಲಿರುವ ಬೋದಿಯಾಲ್[26] ಪ್ರದೇಶದ ದಳವಾಯಿಯಾದ ಬಜಪನಾರ್ಕನೂ ಕೂಡ ಅವನು ಗಿಯಾನ[27]ದ ದೊರೆಯೂ ಅಹುದು. ಈ ಪ್ರದೇಶದಲ್ಲಿ ಮೆಣಸು ಮತ್ತು ಕಬ್ಬು ಮತ್ತು (ನಾರಿನ[28]) ಬಟ್ಟೆ ಮತ್ತು ಭತ್ತ ವಿಪುಲವಾಗಿವೆ ; ಆದರೆ, ಗೋದಿ, ಇತರ ಬಟ್ಟೆ ಇಲ್ಲ, ಮತ್ತು ಅದು ಮೇಣದ ನಾಡು. ಅದು ಅವನಿಗೆ ಪ್ರತಿ ವರ್ಷ ಮುನ್ನೂರು ಸಾವಿರ ಪರ್ದಾಒಗಳನ್ನು ಕೊಡುತ್ತದೆ, ಮತ್ತು ಅವನು ಎಂಟುನೂರು ಅಶ್ವಗಳು ಮತ್ತು ಹತ್ತು ಸಾವಿರ ಕಾಲಾಳು ಮತ್ತು ಹದಿನೈದು ಆನೆಗಳೊಂದಿಗೆ ಸೇವೆ ಮಾಡುತ್ತಾನೆ. ಅವನು ರಾಜನಿಗೆ ಹತ್ತು ಸಾವಿರ ಪರ್ದಾಒಗಳನ್ನು ಕೊಡುತ್ತಾನೆ.

ರಾಜಾ ಕ್ರಿಸ್ನರಾವ್‌ನ ಪ್ರಧಾನ ಅಶ್ವಪತಿಯಾಗಿದ್ದ ಮಲಪನಾರ್ಕ್ ಕಾಲಿಕು[29]ದ ಒಳನಾಡಿನಲ್ಲಿರುವ ಅವಳ[30] ಪ್ರದೇಶದ ದೊರೆಯಾಗಿರುವನು. ಈ ನಾಡಿನಲ್ಲಿ ಕಬ್ಬಿಣ ಮತ್ತು ಹತ್ತಿ, ಭತ್ತ, ಆಡುಗಳು, ಕುರಿಗಳು, ಆಕಳುಗಳು ಮತ್ತು ಎಮ್ಮೆಗಳು ವಿಪುಲವಾಗಿವೆ. ಅವನಿಗೆ ಹದಿನೈದು ಸಾವಿರ ಪರ್ದಾಒಗಳ ಆದಾಯವಿದೆ, ಮತ್ತು ನಾನೂರು ಕುದುರೆ ಮತ್ತು ಆರುಸಾವಿರ ಕಾಲಾಳುಗಳೊಂದಿಗೆ ಸೇವೆ ಮಾಡಲು ಅವನು ಬಾಧ್ಯಸ್ಥನು, ಮತ್ತು ರಾಜನಿಗೆ ಪ್ರತಿ ವರ್ಷ ಐದು ಸಾವಿರ ಪರ್ದಾಒಗಳನ್ನು ಕೊಡುತ್ತಾನೆ.

ರಾಜನ ಪ್ರಧಾನ ಸಲಹೆಗಾರನಾದ ಅದಪನಾಯಿಕ್ ಎಂಬ ಇನ್ನೊಬ್ಬ ದಳವಾಯಿ ವಜ್ರಗಳು ಬರುವ ಗಾಟೆ[31] ನಾಡಿನ ಮತ್ತು ಇನ್ನೂ ಅನೇಕ ಪ್ರದೇಶಗಳ ದೊರೆಯಾಗಿರುವನು. ಅವು ಅವನಿಗೆ ಮುನ್ನೂರು ಸಾವಿರ ಬಂಗಾರದ ಪರ್ದಾಒಗಳನ್ನು ನೀಡುತ್ತವೆ. ಇದರಲ್ಲಿ ತಾವೇ ಪ್ರತ್ಯೇಕ ಆದಾಯವಾಗಿರುವ ಬೆಲೆಯುಳ್ಳ ಹರಳುಗಳು ಸೇರಿಲ್ಲ. ಇಪ್ಪತ್ತು ಮ್ಯಾಂಗೆಲಿನ್[32]ಗಿಂತ ಹೆಚ್ಚು ತೂಕವುಳ್ಳ ಎಲ್ಲ ವಜ್ರಗಳನ್ನು ರಾಜನಿಗೆ ಅವನ ಭಂಡಾರಕ್ಕಾಗಿ ಕೊಡುವ ಕರಾರಿಗೊಳಪಟ್ಟು ಅವನು ಪ್ರತಿ ವರ್ಷ ರಾಜನಿಗೆ ನಲವತ್ತು ಸಾವಿರ ಪರ್ದಾಒಗಳನ್ನು ಕೊಡುತ್ತಾನೆ. ಅವನು ಎಂಟು ಸಾವಿರ ಕಾಲಾಳು ಮತ್ತು ಎಂಟುನೂರು ಕುದುರೆಗಳು ಮತ್ತು ಮೂವತ್ತು ಆನೆಗಳೊಂದಿಗೆ ಸೇವೆ ಮಾಡುತ್ತಾನೆ, ಮತ್ತು ಪ್ರತಿ ವರ್ಷ ರಾಜನಿಗೆ ಒಂದುನೂರು ಸಾವಿರ ಪರ್ದಾಒಗಳನ್ನು ಕೊಡುತ್ತಾನೆ.

ಇನ್ನೊಬ್ಬ ಬಜಪನಾಯಿಕ್ ಮುಮ್‌ದೊಗುಎಲ್‌ನ[33] ದಳವಾಯಿಯಾಗಿರುವನು, ಅದು ಇಡಲ್‌ಕಾವ್‌ನ ದುರ್ಗವಾಗಿತ್ತು ಮತ್ತು ಅದರ ಗಡಿಯಾಗಿದ್ದ ರಾಚೊಲ್[34] ಅನ್ನು ಕ್ರಿಸ್ನರಾವ್ ವಶಪಡಿಸಿಕೊಂಡಾಗ ಅವನಿಂದ ಕಿತ್ತುಕೊಳ್ಳಲಾಗಿತ್ತು. ಈ ಮುಮ್‌ದೊಗುಎಲ್ ದುರ್ಗ ಇತರ ಪ್ರದೇಶಗಳೊಂದಿಗೆ ಅವನಿಗೆ ನಾನೂರು ಸಾವಿರ ಪರ್ದಾಒಗಳನ್ನು ಕೊಡುತ್ತದೆ, ಮತ್ತು ಅವನು ಒಂದು ಸಾವಿರ

ಕುದುರೆ ಮತ್ತು ಹತ್ತು ಸಾವಿರ ಕಾಲಾಳು ಮತ್ತು ಐವತ್ತು ಆನೆಗಳೊಂದಿಗೆ ಸೇವೆ ಸಲ್ಲಿಸುತ್ತಾನೆ, ಮತ್ತು ರಾಜನಿಗೆ ಪ್ರತಿ ವರ್ಷ ನೂರೈವತ್ತು ಸಾವಿರ ಪರ್ದಾಓಗಳನ್ನು ಕೊಡುತ್ತಾನೆ.

ಈ ರೀತಿಯಲ್ಲಿ ಬಿಸ್ನಗ ರಾಜ್ಯವನ್ನು ಎಲ್ಲರೂ ವಿಧರ್ಮಿಯರಾಗಿರುವ[35] ಇನ್ನೂರಕ್ಕೂ ಹೆಚ್ಚು ದಳವಾಯಿಗಳಲ್ಲಿ ವಿಭಜಿಸಲಾಗಿದೆ. ಮತ್ತು ಅವರು ಹೊಂದಿರುವ ಪ್ರದೇಶ ಮತ್ತು ಆದಾಯವನ್ನನುಸರಿಸಿ ರಾಜ ಅವರು ಇಟ್ಟುಕೊಳ್ಳಬೇಕಾದ ಪಡೆಗಳನ್ನು ಮತ್ತು ಪ್ರತಿ ವರ್ಷ ಸೆಪ್ಟಂಬರ್ ತಿಂಗಳಿನ ಮೊದಲ ಒಂಬತ್ತು ದಿನಗಳಲ್ಲಿ ಅವರು ಅವನಿಗೆ ಎಷ್ಟು ಧನ ಕೊಡಬೇಕು ಎಂಬುದನ್ನು ನಿರ್ಧರಿಸುತ್ತಾನೆ. ಅವನು ಅವರಿಗೆ ಎಂದೂ ರಸೀದಿ ಕೊಡುವುದಿಲ್ಲ. ಆದರೆ, ಅವರು ಕೊಡದಿದ್ದರೆ ಮಾತ್ರ ಅವರನ್ನು ಚನ್ನಾಗಿ ಶಿಕ್ಷಿಸಲಾಗುತ್ತದೆ ಮತ್ತು ನಾಶಮಾಡಲಾಗುತ್ತದೆ ಮತ್ತು ಅವರ ಆಸ್ತಿಯನ್ನು ಕಿತ್ತುಕೊಳ್ಳಲಾಗುತ್ತದೆ. ಈ ರಾಜ್ಯದ ಎಲ್ಲ ದಳವಾಯಿಗಳು ಮೇಣೆಗಳು ಮತ್ತು ಪಲ್ಲಕ್ಕಿಗಳನ್ನು ಉಪಯೋಗಿಸುತ್ತಾರೆ. ಅವು ಚಟ್ಟಗಳಂತಿರುತ್ತವೆ ಮತ್ತು ಜನರು ಅವುಗಳನ್ನು ತಮ್ಮ ಹೆಗಲ ಮೇಲೆ ಹೊತ್ತೊಯ್ಯುತ್ತಾರೆ. ಆದರೆ, ಜನರಿಗೆ, ಅವರು ಅತ್ಯುನ್ನತ ದರ್ಜೆಯ ಅಶ್ವಾಳುಗಳಾಗಿರದ ಹೊರತು, ಮೇಣೆಗಳನ್ನು ಬಳಸಲು ಅನುಮತಿ ಕೊಡಲಾಗುವುದಿಲ್ಲ, ಮತ್ತು ದಳವಾಯಿಗಳು ಮತ್ತು ಪ್ರಮುಖ ವ್ಯಕ್ತಿಗಳು ಪಲ್ಲಕ್ಕಿಗಳನ್ನು ಬಳಸುತ್ತಾರೆ. ರಾಜನಿರುವ ಆಸ್ಥಾನದಲ್ಲಿ ಯಾವಾಗಲೂ ಇಪ್ಪತ್ತು ಸಾವಿರ ಮೇಣೆಗಳು ಮತ್ತು ಪಲ್ಲಕ್ಕಿಗಳು ಇರುತ್ತವೆ.

ಬಿಸ್ನಗ ರಾಜ್ಯದ ಈ ಸಂಗತಿಗಳ (ಅಂದರೆ, ಅದರ ಶಕ್ತಿ ಮತ್ತು ವ್ಯಾಪ್ತಿಯ) ಬಗೆಗೆ ನಾನು ಅತಿಶಯೋಕ್ತಿ ಮಾಡಿರುವೆನೆಂದು ನಿಮಗನಿಸಿದರೂ ಸಹ ಹಿಂದಿನ ಕಾಲದಲ್ಲಿ ಅವು ಹೆಚ್ಚು ಗಮನಾರ್ಹವಾಗಿದ್ದವು ಮತ್ತು ಈಗಿನಕಿಂತ ದೊಡ್ಡವಾಗಿದ್ದವು ಎಂದು ಈ ನಾಡಿನ ಜನ ಒತ್ತಿ ಹೇಳುತ್ತಾರೆ.

ಈ ಬಿಸ್ನಗ ರಾಜ್ಯದಲ್ಲಿ ನಾಡಿಗರೆ ಆದ ಬ್ರಾಹ್ಮಣರು ಎಂಬ ಒಂದು ವರ್ಗದ ಜನ ಇದ್ದಾರೆ. ಅವರಲ್ಲಿ ಬಹುತೇಕರು ಜೀವಂತಗಿರುವುದಾವುದನ್ನು ಎಂದೂ ಕೊಲ್ಲುವುದಿಲ್ಲ ಮತ್ತು ತಿನ್ನುವುದಿಲ್ಲ, ಮತ್ತು ಇವರು ಅವರಲ್ಲಿಯೆ ಅತ್ಯುತ್ತಮರಾದವರು. ಅವರು ಪ್ರಾಮಾಣಿಕ ಜನ, ವ್ಯಾಪಾರ ಮಾಡುವವರು, ಬಹಳ ತೀಕ್ಷ್ಣರು ಹಾಗೂ ಬಹು ಪ್ರತಿಭೆಯುಳ್ಳವರು, ಲೆಕ್ಕಪತ್ರದಲ್ಲಿ ನಿಷ್ಣಾತರು, ತೆಳು ದೇಹದವರು ಮತ್ತು ಒಳ್ಳೆಯ ರೂಪವುಳ್ಳವರು, ಆದರೆ ಶ್ರಮದ ಕೆಲಸಕ್ಕೆ ಯೋಗ್ಯರಲ್ಲದವರು. ಇವರಿಂದ ಮತ್ತು ಅವರು ಕೈಗೊಳ್ಳುವ ಕರ್ತವ್ಯಗಳಿಂದ ರಾಜ್ಯ ನಡೆಯುತ್ತದೆ. ಮೂವರು ಮೂರ್ತಿಗಳು ಮತ್ತು ಒಬ್ಬನೇ ಒಬ್ಬ ದೇವರು ಇದ್ದಾರೆಂದು ಅವರು ನಂಬುತ್ತಾರೆ ಮತ್ತು ಪವಿತ್ರತಮ ತ್ರಿಮೂರ್ತಿಯ ಮೂರ್ತಿಗಳನ್ನು ಅವರು "ತ್ರಿಸೆಬೆಂಕ" ಎಂದು ಕರೆಯುತ್ತಾರೆ. ಕನ್ನಡದವರಾದ ಇನ್ನೊಂದು ವರ್ಗವಿದೆ.

ಅವರ ದೇವಾಲಯಗಳಲ್ಲಿ ಮಂಗಗಳು, ಮತ್ತು ಆಕಳುಗಳು, ಮತ್ತು ಎಮ್ಮೆಗಳು, ಮತ್ತು ರಾಕ್ಷಸರು (ವಿಗ್ರಹಗಳು) ಇರುತ್ತವೆ. ಅವುಗಳಿಗೆ ಅವರು ಬಹಳ ಭಕ್ತಿ ತೋರುತ್ತಾರೆ. ಮತ್ತು ಅವರು ಪೂಜಿಸುವ ಈ ಮೂರ್ತಿಗಳು ಮತ್ತು ಮಂಗಗಳಿಗೆ ಹಿಂದಿನ ಕಾಲದಲ್ಲಿ ಈ ನಾಡೆಲ್ಲ ಸೇರಿತ್ತು ಮತ್ತು ಅಂದಿನ ಕಾಲದಲ್ಲಿ ಅವು ಮಾತನಾಡ ಬಲ್ಲವಾಗಿದ್ದವು ಎಂದು ಅವರು ಹೇಳುತ್ತಾರೆ. ಶೌರ್ಯದ ಒಳ್ಳೆಯ ಕತೆಗಳಿಂದ ತಮ್ಮ ದೇವರ ಬಗೆಗಿನ ನಂಬಲು ಕಷ್ಟವಾಗುವಂತಹ ಮೂರ್ಖ ಕತೆಗಳಿಂದ ತುಂಬಿದ ಗ್ರಂಥಗಳು ಅವರಲ್ಲಿವೆ. ಆದರೆ, ಈ ಕಾರಣದಿಂದಾಗಿ ಬಿಸ್ನಗ ರಾಜ್ಯದಲ್ಲಾಗಲಿ ವಿಧರ್ಮಿಗಳ ನಾಡಿನಲ್ಲಿ ಎಲ್ಲಿಯೆ ಆಗಲಿ ಮಂಗಗಳನ್ನು ಕೊಲ್ಲುವುದಿಲ್ಲ, ಮತ್ತು ಈ ನಾಡಿನಲ್ಲಿ ಅವು ಎಷ್ಟಿವೆಯೆಂದರೆ ಅವುಗಳಿಂದ ಬೆಟ್ಟಗಳು ಮುಚ್ಚಿವೆ. ತೆಲುಂಗಲ್ಲೆ[36] ಎಂಬ ಇನ್ನೊಂದು ವರ್ಗದ ಜನರಿದ್ದಾರೆ. ಇವರು ಸತ್ತಾಗ ಅವರ ಹೆಂಡಂದಿರನ್ನು ಅವರೊಂದಿಗೆ ಸಜೀವವಾಗಿ ದಫನ ಮಾಡಲಾಗುತ್ತದೆ.

ಬಿಸ್ನಗದ ರಾಜ ಬ್ರಾಹ್ಮಣನಾಗದ್ದಾನೆ.[37] ಮದುವೆಯಾಗದ ಮತ್ತು ಎಂದೂ ಸ್ತ್ರೀಯನ್ನು ಸ್ಪರ್ಶಿಸಿರದ ಬ್ರಾಹ್ಮಣ ಪಂಡಿತನಿಂದ ಅವನು ದಿನಾಲು ಮತೋಪದೇಶ ವನ್ನು ಆಲಿಸುತ್ತಾನೆ. ಅವನು ತನ್ನ ಮತೋಪದೇಶದಲ್ಲಿ ದೇವನ ಕಟ್ಟಳೆಗಳನ್ನು, ಅಂದರೆ ಯಾವುದೆ ಜೀವವನ್ನು ಕೊಲ್ಲಬಾರದು. ಇನ್ನೊಬ್ಬನಿಗೆ ಸೇರಿದ್ದನ್ನು ಕಸಿದು ಕೊಳ್ಳಬಾರದು, ಮತ್ತು ಇವುಗಳಂತೆಯೆ ಇತರ ಕಟ್ಟಳೆಗಳನ್ನೂ (ಪಾಲಿಸಲು) ಪ್ರೇರೇಪಿಸುತ್ತಾನೆ. ಈ ಜನ ಆಕಳುಗಳಿಗೆ ಎಷ್ಟೊಂದು ಭಕ್ತಿ ಹೊಂದಿರುವರೆಂದರೆ ಅವರು ದಿನಾಲು ಅವುಗಳನ್ನು, ಕೆಲವರು ಪೃಷ್ಠದ ಮೇಲೆಂದು ಹೇಳಲಾಗುತ್ತದೆ,– ಅವರ ಮರ್ಯಾದೆಗಾಗಿ ಆ ಸಂಗತಿಯನ್ನು ಒತ್ತಿಹೇಳುವುದಿಲ್ಲ–ಚುಂಬಿಸುತ್ತಾರೆ. ಈ ಆಕಳುಗಳ ಸಗಣಿಯಿಂದ, ಪವಿತ್ರ ಜಲದಿಂದಲೆಂಬಂತೆ, ಅವರು ತಮ್ಮ ಪಾಪ ಗಳನ್ನು ಮಾರ್ಜನ ಮಾಡಿಕೊಳ್ಳುತ್ತಾರೆ. ಬ್ರಾಹ್ಮಣ ಪುರೋಹಿತರಿಗೆ ತಮ್ಮ ಪಾಪಗಳನ್ನು ನಿವೇದಿಸಬೇಕೆಂಬ ಕಟ್ಟಳೆಯೊಂದಿದೆ. ಆದರೆ, ಅತಿ ಧಾರ್ಮಿಕ ರಾದವರನ್ನುಳಿದು ಅವರು ಹಾಗೆ ಮಾಡುವುದಿಲ್ಲ. ಇನ್ನೊಬ್ಬನ ಮುಂದೆ ಪಾಪ ನಿವೇದನೆ ಮಾಡಲು ನಾಚಿಕೆಯಾಗುತ್ತದೆಂದು ಅವರು ನೆಪ ಹೇಳುತ್ತಾರೆ ಮತ್ತು ದೇವರ ಸಮ್ಮುಖದಲ್ಲಿ ತಮಗೆ ತಾವೇ ನಿವೇದಿಸಿಕೊಂಡರೆ ಸಾಕೆಂದು ಅವರು ಹೇಳುತ್ತಾರೆ, ಏಕೆಂದರೆ, ಹಾಗೆ ಮಾಡದವನಿಗೆ ಪುಣ್ಯ ಸಿಗದು. ಹೀಗೆ, ಅವರು ಕಟ್ಟಳೆಯನ್ನು ಒಂದಿಲ್ಲೊಂದು ರೀತಿಯಲ್ಲಿ ಪಾಲಿಸುತ್ತಾರೆ. ಆದರೆ (ವಾಸ್ತವವಾಗಿ) ಅವರು ಅದನ್ನು ಎಷ್ಟು ಕ್ವಚಿತ್ತಾಗಿ ಮಾಡುತ್ತಾರೆಂದರೆ ಈ ಪಾಪನಿವೇದನೆಯ ಕಟ್ಟಳೆಯನ್ನು ನಿರ್ಲಕ್ಷಿಸುತ್ತಾರೆ (ಎಂದು ಹೇಳಬಹುದು).

ಈ ಬಿಸ್ನಗ ರಾಜ್ಯವೆಲ್ಲ ವಿಧರ್ಮಿಯಾದುದು. ಗಂಡರು ಸತ್ತಾಗ ಹೆಂಡಿರು ಅಗ್ನಿಪ್ರವೇಶಿಸಿ ಸಹಗಮನ ಮಾಡುವ ಪದ್ಧತಿಯಿದೆ ಮತ್ತು ಹಾಗೆ ಮಾಡುವುದೆಂದರೆ

ಗೌರವವೆಂದು ಭಾವಿಸುತ್ತಾರೆ. ಆದುದರಿಂದ ತಮ್ಮ ಗಂಡಂದಿರು ಸತ್ತಾಗ ಅವರು ತಮ್ಮ ಹಾಗೂ ತಮ್ಮ ಗಂಡಂದಿರ ಸಂಬಂಧಿಗಳೊಂದಿಗೆ ಶೋಕಿಸುತ್ತಾರೆ, ಆದರೆ ಅಳತೆ ಮೀರಿ ಶೋಕಿಸುವ ಹೆಂಡತಿಗೆ ತನ್ನ ಗಂಡನನ್ನು ಅರಸಿ ಹೋಗುವ ಇಚ್ಛೆಯಿಲ್ಲ ವೆಂದು ಅವರು ಭಾವಿಸುತ್ತಾರೆ ; ಮತ್ತು ಶೋಕ ಮುಗಿದ ಮೇಲೆ ಅಗ್ನಿಪ್ರವೇಶಿಸಲು ಮತ್ತು ತಮ್ಮ ಸಂತತಿಗೆ ಅವಮರ್ಯಾದೆ ಮಾಡದಿರಲು ಅವರ ಸಂಬಂಧಿಗಳು ಅವರಿಗೆ ಉಪದೇಶಿಸುತ್ತಾರೆ. ಅದಾದ ನಂತರ, ಅವರು ಸತ್ತವನನ್ನು ಟೊಂಗೆಗಳ ಮತ್ತು ಹೂಗಳಿಂದ ಆಚ್ಛಾದಿತವಾದ ಮಂಡಪವುಳ್ಳ ಹಾಸಿಗೆಯ ಮೇಲೆ ಇಡುತ್ತಾರೆ ಮತ್ತು ಹೆಂಡತಿಯನ್ನು ಒಂದು ಕೆಲಸಕ್ಕೆ ಬಾರದ ಕುದುರೆ ಹತ್ತಿಸುತ್ತಾರೆ, ಮತ್ತು ಅವಳು ಅನೇಕ ಆಭರಣ ತೊಟ್ಟು ಮತ್ತು ಗುಲಾಬಿಗಳಿಂದ ಆಚ್ಛಾದಿತವಾಗಿ ಅವರ ಹಿಂದೆ ಹೋಗುತ್ತಾಳೆ. ಅವಳು ಒಂದು ಕೈಯಲ್ಲಿ ಕನ್ನಡಿಯನ್ನೂ ಇನ್ನೊಂದರಲ್ಲಿ ಹೂಗೊಂಚಲನ್ನೂ ಹಿಡಿದಿರುತ್ತಾಳೆ, ಮತ್ತು ಅನೇಕ ವಿಧದ ಸಂಗೀತದಿಂದೊಡ ಗೂಡಿ (ಅವಳು ಹೋಗುತ್ತಾಳೆ). ಮತ್ತು ಅವನ ಸಂಬಂಧಿಗಳು ಅತಿ ಸಂತೋಷ ದಿಂದ (ಅವಳೊಂದಿಗೆ ಹೋಗುತ್ತಾರೆ). ಒಬ್ಬ ಮನುಷ್ಯನೂ ಚಿಕ್ಕ ನಗಾರಿ ಬಾರಿಸುತ್ತ ನಡೆಯುತ್ತಾನೆ ಮತ್ತು ಅವಳು ತನ್ನ ಗಂಡನನ್ನು ಸೇರಲು ಹೊರಟಿರುವಳೆಂದು ಸಾರುವ ಹಾಡನ್ನು ಹಾಡುತ್ತಾನೆ ಮತ್ತು ಅವಳೂ ಹಾಗೆ ಮಾಡುವುದಾಗಿ ಹಾಡುತ್ತಲೆ ಹೇಳುತ್ತಾಳೆ. ಅವರನ್ನು ಯಾವಾಗಲೂ ಸುಡುವ ಸ್ಥಳಕ್ಕೆ ಅವಳು ಬರುತ್ತಲೆ ತನ್ನ ಗಂಡನನ್ನು ಸುಡುವವರೆಗೆ ಸಂಗೀತಗಾರರೊಂದಿಗೆ ಅವಳು ಕಾಯುತ್ತಾಳೆ. ಅವನ ದೇಹವನ್ನು ಅದಕ್ಕಾಗಿಯೆ ಮಾಡಿದ ಬಹಳ ಕಬ್ಬಿಗೆ ಯಿಂದ ಮುಚ್ಚಲಾದ ದೊಡ್ಡ ಕುಣಿಯಲ್ಲಿ ಇಡುತ್ತಾರೆ. ಉರಿ ಹಚ್ಚುವ ಮುನ್ನ ಅವನ ತಾಯಿ ಅಥವಾ ತೀರ ಹತ್ತಿರದ ಸಂಬಂಧಿ ತಲೆಯ ಮೇಲೆ ನೀರಿನ ಕುಡಿಕೆ ಯನ್ನು ಹೊತ್ತು ಮತ್ತು ಕೈಯಲ್ಲಿ ಕೊಳ್ಳಿ ಹಿಡಿದು ಕುಣಿಯ ಸುತ್ತ ಮೂರು ಸಲ ಹೋಗುತ್ತಾಳೆ ಮತ್ತು ಸುತ್ತಿಗೊಂದರಂತೆ ಪಾತ್ರೆಯಲ್ಲಿ ತೂತು ಮಾಡುತ್ತಾಳೆ, ಮತ್ತು ಈ ಮೂರು ಸುತ್ತು ಮುಗಿದ ಮೇಲೆ ಸಣ್ಣದಿದ್ದ ಕುಡಿಕೆಯನ್ನು ಒಡೆಯುತ್ತಾಳೆ, ಮತ್ತು ಕೊಳ್ಳಿಯನ್ನು ಕುಣಿಯಲ್ಲಿ ಎಸೆಯುತ್ತಾಳೆ. ಆ ಮೇಲೆ ಅವರು ಉರಿ ಹಚ್ಚುತ್ತಾರೆ ಮತ್ತು ದೇಹ ಸುಟ್ಟಾಗ ಉತ್ಸವಕ್ಕೆ ಬಂದ ಎಲ್ಲರೊಂದಿಗೆ ಹೆಂಡತಿ ಬಂದು ಕಾಲು ತೊಳೆದುಕೊಳ್ಳುತ್ತಾಳೆ ಮತ್ತು ಆ ಮೇಲೆ ಒಬ್ಬ ಬ್ರಾಹ್ಮಣ ಅವರ ಧರ್ಮದಂತೆ ಅವಳ ಮೇಲೆ ಕೆಲವು ಕರ್ಮಗಳನ್ನು ಮಾಡುತ್ತಾನೆ. ಮತ್ತು ಅವನು ಇದನ್ನು ಮಾಡಿ ಮುಗಿಸಿದ ಮೇಲೆ ಅವಳು ತಾನು ತೊಟ್ಟಿದ ಎಲ್ಲ ಆಭರಣ ಗಳನ್ನು ತನ್ನ ಕೈಯಿಂದಲೆ ತೆಗೆಯುತ್ತಾಳೆ ಮತ್ತು ತನ್ನ ಸ್ತ್ರೀಸಂಬಂಧಿಗಳಲ್ಲಿ ಹಂಚುತ್ತಾಳೆ, ಮತ್ತು ಅವಳಿಗೆ ಮಕ್ಕಳಿದ್ದರೆ ಅವರನ್ನು ತನ್ನ ಅತ್ಯಂತ ಗೌರವಾನ್ವಿತ ಸಂಬಂಧಿಗಳಿಗೆ ಒಪ್ಪಿಸುತ್ತಾಳೆ. ಅವಳು ತೊಟ್ಟಿದ್ದ ಎಲ್ಲವನ್ನೂ ಅವಳ ಒಳ್ಳೆಯ ಬಟ್ಟೆಗಳನ್ನೂ ಸಹ, ಅವರು ಕಳಚಿದ ಮೇಲೆ ಅವರು ಅವಳಿಗೆ ಒಂದಿಷ್ಟು ಸಾದಾ

ಹಳದಿ ಬಟ್ಟೆಗಳನ್ನು ತೊಡಿಸುತ್ತಾರೆ, ಮತ್ತು ಅವಳ ಸಂಬಂಧಿಗಳು ಅವಳ ಕೈ ಹಿಡಿದುಕೊಳ್ಳುತ್ತಾರೆ. ಮತ್ತು ಅವಳು ಇನ್ನೊಂದರಲ್ಲಿ ಒಂದು ಟೊಂಗೆ ಹಿಡಿದುಕೊಂಡು ಉರಿಯಿದ್ದ ಕುಣಿಯಿದ್ದಲ್ಲಿಗೆ ಹಾಡುತ್ತ, ಓಡುತ್ತ ಹೋಗುತ್ತಾಳೆ. ಮತ್ತು ಕುಣಿಯ ಬಳಿ ಕೆಲವು ಎತ್ತರವಾಗಿ ಮಾಡಲಾದ ಪಾವಟಿಗೆಗಳನ್ನು ಏರುತ್ತಾಳೆ. ಇದನ್ನು ಮಾಡುವ ಮುಂಚೆ ಅವರು ಬೆಂಕಿಯ ಸುತ್ತ ಮೂರು ಸಲ ಸುತ್ತುತ್ತಾರೆ, ಮತ್ತು ಆಗ ಅವಳು ಪಾವಟಿಗೆ ಹತ್ತುತ್ತಾಳೆ ಮತ್ತು ಬೆಂಕಿ ಕಾಣದಂತೆ ತನ್ನ ಮುಂದೆ ಒಂದು ಚಾಪೆಯನ್ನು ಹಿಡಿಯುತ್ತಾಳೆ. ಅವರು ಅಕ್ಕಿ ಕಟ್ಟಿದ ಅರಿವೆಯನ್ನು ಮತ್ತು ವೀಳ್ಯದೆಲೆ ಇರುವ ಇನ್ನೊಂದನ್ನು, ಮತ್ತು ಅವಳು ತನ್ನನ್ನು ಸಿಂಗರಿಸಿಕೊಂಡ ಹಣಿಗೆ ಕನ್ನಡಿಗಳನ್ನು, ತನ್ನ ಗಂಡನ ಬದಿಯಲ್ಲಿ ಸಿಂಗರಿಸಿಕೊಳ್ಳಲು ಇವೆಲ್ಲ ಬೇಕೆನ್ನುತ್ತ, ಬೆಂಕಿಯಲ್ಲಿ ಎಸೆಯುತ್ತಾರೆ. ಅಂತಿಮವಾಗಿ ಅವಳು ಎಲ್ಲರಿಂದ ಬೀಳ್ಕೊಳ್ಳುತ್ತಾಳೆ, ಮತ್ತು ತನ್ನ ತಲೆಯ ಮೇಲೆ ಎಣ್ಣೆಯ ಪಾತ್ರೆ ಇಟ್ಟುಕೊಳ್ಳುತ್ತಾಳೆ ಮತ್ತು ಬೆಂಕಿಯಲ್ಲಿ ಎಷ್ಟೊಂದು ಧೈರ್ಯದಿಂದ ಬೀಳುತ್ತಾಳೆಂದರೆ ಅದೊಂದು ಅದ್ಭುತ ಸಂಗತಿಯಾಗಿದೆ; ಮತ್ತು ಅವಳು ಒಳಗೆ ಬಿದ್ದ ತಕ್ಷಣ ಸಂಬಂದಿಗಳು ಉರುವಲು ಕಟ್ಟಿಗೆ ಹಿಡಿದು ಸಿದ್ಧರಾಗಿರುತ್ತಾರೆ ಮತ್ತು ಶೀಘ್ರವಾಗಿ ಅದರಿಂದ ಅವಳನ್ನು ಮುಚ್ಚುತ್ತಾರೆ. ಮತ್ತು ಹೀಗೆ ಮಾಡಿದ ಮೇಲೆ ಅವರೆಲ್ಲ ಗಟ್ಟಿಯಾಗಿ ರೋದನಗೈಯುತ್ತಾರೆ. ಒಬ್ಬ ದಳವಾಯಿ ಸತ್ತಾಗ ಅವನಿಗೆ ಎಷ್ಟೇ ಹೆಂಡಿರಿರಲಿ ಅವರೆಲ್ಲ ಸುಟ್ಟುಕೊಳ್ಳುತ್ತಾರೆ, ಮತ್ತು ರಾಜ ಸತ್ತಾಗಲೂ ಅಷ್ಟೆ ತೆಲುಗರೆಂದು ಕರೆಯಲ್ಪಡುವ ಜಾತಿಯ ಜನರನ್ನು ಬಿಟ್ಟು ವಿಧರ್ಮಿ ನಾಡಿನಲ್ಲೆಲ್ಲ ಇದೇ ಪದ್ಧತಿಯಿದೆ. ತೆಲುಗರಲ್ಲಿ ಅವರು ಸತ್ತಾಗ ಅವರ ಹೆಂಡಿರನ್ನು ಅವರೊಂದಿಗೆ ಸಜೀವವಾಗಿ ದಫನ ಮಾಡಲಾಗುತ್ತದೆ. ಇವರು ಕುಣಿಗೆ ಬಹಳ ಸಂತೋಷದಿಂದ ಹೋಗುತ್ತಾರೆ. ಅದರೊಳಗೆ, ಒಂದು ಅವನಿಗೆ ಇನ್ನೊಂದು ಅವಳಿಗೆ, ಎರಡು ಮಣ್ಣಿನ ಕುಳ್ಳಿಡೆಗಳನ್ನು ಮಾಡುತ್ತಾರೆ ಮತ್ತು ಇಬ್ಬರನ್ನೂ ಅವನವಳ ಕುಳ್ಳಿಡೆಯ ಮೇಲಿರಿಸಿ ಅವರು ಮುಚ್ಚುವವರೆಗೆ ಸ್ವಲ್ಪ ಸ್ವಲ್ಪವಾಗಿ ಮುಚ್ಚುತ್ತಾರೆ; ಮತ್ತು ಹೀಗೆ ಹೆಂಡತಿ ಗಂಡನೊಂದಿಗೆ ಸಾಯುತ್ತಾಳೆ.

## ಅಡಿಟಿಪ್ಪಣಿಗಳು

1 ಮೇಲೆ ಪು. ೧೨೧, ೨೮೧ ಮತ್ತು ಟಿಪ್ಪಣಿಗಳನ್ನು ನೋಡಿರಿ.

2 **E ysto ho coanto a cuca**. ಪ್ರಸ್ತುತದಲ್ಲಿ ದಕ್ಷಿಣ ಭಾರತದಲ್ಲಿ ಕಾಡು ಪಕ್ಷಿಗಳನ್ನು, ಸಾಮಾನ್ಯವಾಗಿ ಕಣ್ಣುಗಳನ್ನು ಹೊಲಿದು, ಸಜೀವವಾಗಿ ಮಾರಲಾಗುತ್ತದೆ.

3 ಗುಡಿಗಳಲ್ಲಿ ಮೂರ್ತಿಗಳ ಸೇವೆಯಲ್ಲಿ ಇಲ್ಲವೆ ಮನ್ನೆಯರ ಅರಮನೆಗಳಲ್ಲಿ ಬಳಸಲಾಗುವ ಯಾಕ್-ಬಾಲ ಚವರಿಗಳನ್ನು ಇದು ಸ್ಪಷ್ಟವಾಗಿಯೆ ಸೂಚಿಸುತ್ತದೆ.

ಇಂದು ಸಮಾರಂಭ ಸಂದರ್ಭಗಳಲ್ಲಿ ಪಾರಸ್ಯಕ್ಕೆ ಹಕ್ಕುಳ್ಳ ಅಥವಾ ಸ್ವತಂತ್ರ ಪ್ರಭುಗಳ ಮಂಡಳಿಗೆ ಸೇರಿದವನೆಂದು ಸಾಧಿಸುವ ಯಾವನೆ ಪಾಳೆಯಗಾರ ಅಥವಾ ಬೇರೆ ತನ್ನ ಘನತೆಯನ್ನು ಕೆಲವು ಲಾಂಛನಗಳ ಬಳಕೆಯ ಮೂಲಕ ಸಾರುತ್ತಾನೆ. ಇವುಗಳಲ್ಲಿ ಯಾರ್-ಬಾಲ ಚೌರಿ ಒಂದು ಅದೊಂದು ಅತ್ಯಂತ ಲಾವಣ್ಯಮಯ ಆ ಭೂಷಣಗಳಲ್ಲೊಂದು. ಮೃದು ಬಿಳಿ ಕೂದಲುಗಳನ್ನು ಹಿತ್ತಾಳೆ ಇಲ್ಲವೆ ಬೆಳ್ಳಿಯ ಹಿಡಿಕೆಯಲ್ಲಿ ಕೂಡಿಸಲಾಗಿರುತ್ತದೆ ಮತ್ತು ಪರಿಚಾರಕ ಅದನ್ನು ನಿಧಾನವಾಗಿ ಬೀಸುತ್ತಾನೆ. ಅದರ ವಾಸ್ತವಿಕ ಉದ್ದೇಶ ನೊಣಗಳನ್ನು ದೂರವಿರಿಸುವುದಾಗಿತ್ತು.

4 **Juntas.** ಇದರರ್ಥ ಸಂದೇಹಾಸ್ಪದವಾಗಿದೆ, ಆದರೆ ಸಂಭವನೀಯವಾಗಿ ಎತ್ತುಗಳ ನೊಗಗಳಿಗೆ ಇಲ್ಲಿ ಪ್ರಸ್ತಾಪವಿದೆ. ಪ್ರವಾಸವಾಹನಗಳಿಗೆ ಕಟ್ಟಿದಾಗ, ಕನ್ನಡನಾಡಿನಲ್ಲಿ ಇವುಗಳನ್ನು ಸುಂದರವಾಗಿ ಅಲಂಕರಿಸಲಾಗುತ್ತದೆ ಮತ್ತು ಬಟ್ಟೆ ಹೊಂದಿಸಲಾಗುತ್ತದೆ.

5 **Rodas de bicos.** ಇವುಗಳನ್ನು ಬಹುಶಃ ಇಂಗ್ಲಂಡಿನಲ್ಲಿ ಪರಿಚಿತವಿರುವಂತಹ ಗೆಣ್ಣುಕಾಪುಗಳಾಗಿರಬಹುದು.

6 ಮುಕ್ತ ಅನುವಾದ. ಮೂಲ ಹೀಗಿದೆ : **de maneira que o que fica de baixo d outor mais ferido vay, leva a fogoca, que he huu pacharim,"** ಇತ್ಯಾದಿ, ಸೋತವರಿಗೆ ಬಹುಮಾನ ಕೊಡುವುದು ವಿಲಕ್ಷಣವಾಗಿ ತೋರುತ್ತದೆ. **Leva a fogaca** ಇದರ ಅಕ್ಷರಶ; ಅರ್ಥ "ಬೆಣ್ಣೆ ತಿನ್ನುತ್ತಾನೆ."

7 ಚರಿತ್ರಕಾರ ರಾಜನಿಗೆ ಅವನ ಆನುವಂಶಿಕ "ರಾಯ" ಉಪಾಧಿಯನ್ನು ನೀಡುತ್ತಿರುವ ಸಂದರ್ಭ ಇದೊಂದೆ. ಪೋರ್ತುಗೀಜರು ಅದನ್ನು ಸಾಮಾನ್ಯವಾಗಿ Rao ಎಂದು ಬರೆಯುವರು. ರಾಯ, ರಾಜ, ಎರಡೂ ಒಂದೇ.

8 ಗೋಲಕೊಂಡದ ಖುತುಬ್ ಶಾಹ.

9 ನಿಜವಿರಲಿ ಇಲ್ಲದಿರಲಿ, ಬಾಹ್ಯ ಮೂಲದಿಂದ ಬರುವ ಈ ಹೇಳಿಕೆ, ದಕ್ಷಿಣ ಭಾರತದ ರೈತರು ಹಿಂದೂ ಸರಕಾರದ ಪ್ರಜೆಗಳಿದ್ದಾಗ ಮುನ್ನೆಯಿಂದ ಘೋರ ದಬ್ಬಾಳಿಕೆಗೊಳಪಟ್ಟಿದ್ದರೆಂಬ ಅನೇಕ ವೇಳೆ ತಾಳಿದ ಗ್ರಹಿಕೆಗೆ ಆಧಾರ ಒದಗಿಸುತ್ತದೆ. ಒಂದಕ್ಕೊಂದರಿಂದ ಸ್ವತಂತ್ರವಾಗಿ ಬರೆಯಲಾಗಿರುವ ಇವೆರಡೂ ವೃತ್ತಾಂತಗಳಲ್ಲಿನ ಇತರ ಅವತರಿಕೆಗಳು, ಜನಸಮೂಹವನ್ನು ಹತ್ತಿಕ್ಕುವ ಮತ್ತು ಅವರು ಅತೀವ ಬಡತನ ಮತ್ತು ಸಂಕಟಗಳಲ್ಲಿ ಜೀವಿಸುತ್ತಿರುವ, ಇಲ್ಲಿ ಮಾಡಲಾಗಿರುವ ಹೇಳಿಕೆಯನ್ನು ದೃಢಪಡಿಸುತ್ತವೆ.

10 ಬಹುಶಃ, ನಗರದ ಮೂಲಕ ಹಾಯ್ದು ಹೋಗುವಾಗ.

11 ತೆಲುಗು "ಕುಲ್ಲಾಯಿ", ಪು. ೨೧೦, ೨೫೨, ೨೬೪ ನೋಡಿರಿ.

12 **De fazemda.** ಇಲ್ಲಿ ಕೊಡಲಾಗಿರುವಂತೆಯೆ ಅದರರ್ಥ ಎಂದು ನನ್ನ ಎಣಿಕೆ, ರಾಜ್ಯವನ್ನು ಪ್ರಾಂತಗಳಲ್ಲಿ ಅಥವಾ ಆಸ್ತಿಗಳಲ್ಲಿ ವಿಭಜಿಸಲಾಗಿತ್ತೆಂಬುದನ್ನು ಮುಂದೆ

ಗಮನಿಸುವಿರಿ. ಪ್ರತಿಯೊಂದನ್ನೂ ಒಬ್ಬ ಮನ್ನೆಯನಿಗೆ ಒಪ್ಪಿಸಲಾಗಿತ್ತು. ಅವನು ರಾಜನಿಗೆ ವರ್ಷಕ್ಕೆ ನಿಶ್ಚಿತ ಮೊತ್ತ ಕೊಡುತ್ತ ತನಗೆ ಲಾಭವಾಗುವಂತೆ ಉತ್ಪನ್ನ ಪಡೆಯುತ್ತಿದ್ದ. ರತ್ನಗಳ ಕೋಶಾಧಿಕಾರಿಯಾಗಿದ್ದ ನರ್ವರನ ವಿಷಯದಲ್ಲಾದರೊ, ಅವನ ಆಸ್ತಿ "ಬಿಸ್ನಗ ರಾಜ್ಯದ ಗಡಿಗೆ ಹತ್ತಿದೆ" ಎಂದು ವರ್ಣಿಸಲಾಗಿದೆ ಮತ್ತು ಈ ಮಾತು ರಾಜನಾಳುತ್ತಿದ್ದ ಇಡಿ ರಾಜ್ಯವನ್ನು ಸೂಚಿಸುವುದಿಲ್ಲವಾದುದರಿಂದ ರಾಜನ ಸ್ವಂತದ ಹೊಲಗಳು ಅಂದರೆ ಅವನ ಮನೆಯ ಜಮೀನಿಗೆ ಸೀಮಿತ ಅರ್ಥದಲ್ಲಿ ಅನ್ವಯಿಸುತ್ತದೆಂದು ತೆಗೆದುಕೊಳ್ಳಬೇಕು. "ಖಾಸ್" ಎಂದು ಕರೆಯಲಾಗುವ ಭೂಮಿಗಳನ್ನು ರಾಜ ಹೊಂದಿರುವ ಪದ್ಧತಿ ಭಾರತದಲ್ಲಿ ಚಿರಪರಿಚಿತ ವಿದೆ. ಈ ಭೂಮಿಗಳನ್ನು ಅವನ ಸ್ವಂತದ ಬಳಕೆ ಮತ್ತು ಪ್ರಯೋಜನಕ್ಕಾಗಿ ಹೊಂದಿರಲಾಗುತ್ತದೆ. ಇದರಿಂದ ಭಿನ್ನವಾಗಿ ಅವನ ಅಧೀನದಲ್ಲಿ ಬೇರೆಯವರು ಹಿಡಿದಿದ್ದ ಭೂಮಿಗಳ ಆದಾಯ ಸಾರ್ವಜನಿಕ ಭಂಡಾರಕ್ಕೆ ಹೋಗಬೇಕು.

13 ಈ ಪಟ್ಟಿಯಲ್ಲಿ ಮದುರಾವನ್ನು ಹೆಸರಿಸಲಾಗಿಲ್ಲವೆಂಬುದನ್ನು ಗಮನಿಸಬೇಕು. ಆದಾಗ್ಯೂ ೧೪೯೯ ರಿಂದ ಒಬ್ಬ ನಾಯಕ ಅಥವಾ ವಿಜಯನಗರದ ಮಾಂಡಲಿಕ ಪಾಳೆಯಗಾರ ಆ ಊರನ್ನು ಆಳುತ್ತಿದ್ದನೆಂದು ತೋರುತ್ತದೆ. ಶ್ರೀ ನೆಲ್ಸನ್ ತನ್ನ ಕೃತಿ "ದ ಮದುರಾ ಕಂಟ್ರಿ"ಯಲ್ಲಿ ಕೆಳಕಂಡ ನಾಯಕರ ಪಟ್ಟಿ ನೀಡುತ್ತಾನೆ :—

| | ಕ್ರಿ.ಶ. |
|---|---|
| ನರಸನಾಯಕ.......................... | ೧೪೯೯-೧೫೦೦ |
| ತೆನ್ನ ನಾಯಕ.......................... | ೧೫೦೦-೧೫೧೫ |
| ನರಸಪಿಳ್ಳೈ (ತಮಿಳ)................. | ೧೫೧೫-೧೫೧೯ |
| ಕುರು ಕುರು ತಿಮ್ಮಪ್ಪನಾಯಕ...... | ೧೫೧೯-೧೫೨೪ |
| ಕಟ್ಟಿಯಾಮ ಕಾಮಯ್ಯ ನಾಯಕ... | ೧೫೨೪-೧೫೨೬ |
| ಚಿನ್ನಪ್ಪನಾಯಕ.......................... | ೧೫೨೬-೧೫೩೦ |
| ಅಯ್ಯಕರೈ ವೆಯ್ಯಪ್ಪ ನಾಯಕ...... | ೧೫೩೦-೧೫೩೫ |
| ವಿಶ್ವನಾಥ ನಾಯಕ ಅಯ್ಯರ್...... | ೧೫೩೫-೧೫೪೫ |

ತಾನು ಸ್ವತಃ ರಾಜನ ನಿಯೋಗಿಯಾದ್ದರೂ ಒಂದು ಆನುವಂಶಿಕ ರಾಜವಂಶವನ್ನು ಸ್ಥಾಪಿಸಿದ ಮಹಾನ್ ವಿಶ್ವನಾಥನಾಯಕನಿಗಿಂತ ಮುಂಚೆ ಇತರ ನಾಲ್ವರು ಉಲ್ಲೇಖಿಸಲ್ಪಟ್ಟಿರುವರು. ಅವನು ೧೫೫೯ ರಿಂದ ೧೫೬೩ರ ವರೆಗೆ ಮದುರೆಯನ್ನು ಆಳಿದ. ಮತ್ತು ಕೃಷ್ಣಪ್ಪ (೧೬೦೨-೧೬೦೯) ಮದುರೆಯ ರಾಜೋಪಾದಿಗಳನ್ನು ಧರಿಸಿದ ಪ್ರಥಮನಾಗಿದ್ದಂತೆ ತೋರುತ್ತದೆ. ಅವನ ಮಗ ಮುತ್ತು ವೀರಪ್ಪ (೧೬೦೯-೧೬೨೩) ಕ್ರಿ.ಶ. ೧೬೧೬ರಲ್ಲಿ ಚಂದ್ರಗಿರಿಯಲ್ಲಿ ೬;೦೦,೦೦೦ ಪಗೋಡಾಗಳ ಕಪ್ಪವನ್ನು ವಿಜಯನಗರದ ರಾಜನಿಗೆ ಕೊಟ್ಟನೆಂದು ಪೋರ್ತುಗೀಜ ಲೇಖಕ ಬ್ಯಾರಡಸ್ (ಮೇಲೆ ಪು. ೨೩೦)ನ ಕಥಾನಕದಲ್ಲಿ ಹೇಳಲಾಗಿದೆ. ಅವನು ತನ್ನ ಕೆಳಗೆ ಹಲವಾರು ಮಾಂಡಲಿಕ ರಾಜರನ್ನು ಹೊಂದಿದ್ದ ಮತ್ತು ಆಗಲೆ ಬಹಳ

ಅಧಿಕಾರ ಪಡೆದಿದ್ದಿರಬೇಕು. ನ್ಯೂನಿಜ್‌ನ ಕಾಲಕ್ಕೆ ಮದುರಾ ದೊಡ್ಡ ಪ್ರಾಂತಗಳಲ್ಲೊಂದಾಗಿರಲಿಲ್ಲ, ಆದರೆ ನಂತರ ಹಾಗೆ ಆಗಿರುವ, ಸಾಧ್ಯತೆಯಿದೆ. ಚೊರೊಮ್ಯಾಂಡೆಲ್, ನೆಗಪಟಮ್ ಮತ್ತು ತಂಜೋರ್ ಹೆಸರುಗಳು ಪಟ್ಟಿಯಲ್ಲಿ ಸುಲಭವಾಗಿ ಗುರುತಿಸುವಂತಹಗಳಾಗಿವೆ. "ಬೊಂಗಾರಿನ್"ಅನ್ನು ನಾನು ಗುರುತಿಸಲಾರೆನಾದರೂ "ಗಿರಿಮ್" ಪ್ರತ್ಯಯ "ಗಿರಿ" ಅಂದರೆ "ಪರ್ವತ"ವನ್ನು ಸೂಚಿಸುವಂತಿದೆ. "ದಪಟಾಂ" ದೇವಿಪಟ್ನಮ್ ಆಗಿರಬಹುದು. "ತ್ರುಗುಎಲ್" ತಿರುಕೊವಿಲ್‌ನೊಂದಿಗೆ ಅಲ್ಪ ಸಾಮ್ಯ ಹೊಂದಿದಂತಿದೆ. ವಿಜಯನಗರದ ರಾಜ ಅಸದಖಾನನಿಗೆ ಕೊಟ್ಟ ಕೋಟೆಗಳಲ್ಲೊಂದು ಎಂದು ಬ್ಯಾರೊಸ್ ಮತ್ತು ಇತರರು ಉಲ್ಲೇಖಿಸಿರುವ "ತೃಗುಎಲ್" ಮತ್ತು ಇದು ಒಂದೇ ಅಲ್ಲ. ಏಕೆಂದರೆ, ಅವುಗಳು ಬೆಳಗಾಂವಿಗೆ ಹತ್ತಿರವಿದ್ದರೆ ಈ "ತೃಗುಎಲ್" ತೀರ ದಕ್ಷಿಣದಲ್ಲಿದೆ. "ಕಾಲಿಮ್" ಕಾಯಲ್ ಆಗಿರಬಹುದು.

14 ಉದಯಗಿರಿ

15 ಕೊಂಡವೀಡು

16 ಪೆನ್ನಕೊಂಡ

17 ಸಿದ್ಪ್ಹಾಟ್ ಅಥವಾ ಸಿದ್ಧಪಟ್ಟಮ್, ಕಡಪಾ ಜಿಲ್ಲೆ. ಕೊದೆಗರಲ್ ಗಂದಿಕೋಟೆವನ್ನು ಪ್ರತಿನಿಧಿಸುತ್ತಿರಬಹುದು. "ಗಿರಿ" ಎಂಬ ಪದಾಂತ್ಯದ ಬದಲು "ಕೋಟ" (ಕೋಟೆ) ಬಳಸಲಾಗಿದೆ. ಉದಾ : ಗಂದಿಗಿರಿ.

18 (?) ಕನಿಗಿರಿ. ನೆಲ್ಲೂರ ಜಿಲ್ಲೆ

19 ಬಹುಶಃ ಗೋವಾ ಸಮೀಪದ ರಾಚೋಲ್

20 ಬಿಚೊಲಿಮ್ (?)

21 ಬೇರೆಡೆ ಬರೆಯಲ್ಪಟ್ಟಿರುವಂತೆ "ಬೆಂಗಾಪೂರ" ಅಂದರೆ ಧಾರವಾಡದ ದಕ್ಷಿಣಕ್ಕಿರುವ ಬಂಕಾಪುರ.

22 ಪ್ಯಾಸ್‌ನ ವೃತ್ತಾಂತದ ಕೊನೆಯ ವಾಕ್ಯವನ್ನು (ಮೇಲೆ ಪು. ೨೯೦) ನೋಡಿ. ಅಲ್ಲಿ "ಪೂರ್ವಕ್ಕಿರುವ" ಒಂದು ಪಟ್ಟಣವನ್ನು ಕೃಷ್ಣದೇವರಾಯ ತನ್ನ ಪ್ರೀತಿಯ ಮಡದಿಯ ಗೌರವಾರ್ಥ ಕಟ್ಟಿಸಿದ ಹೊಸ ನಗರ ಎಂದು ಕರೆಯಲಾಗಿದೆ. ಲೇಖಕ ಖಂಡಿತವಾಗಿ ಆ ಹೇಳಿಕೆಯಲ್ಲಿ ಗೊಂದಲಕ್ಕೀಡಾಗಿದ್ದಾನೆ. ಏಕೆಂದರೆ, ಹಾಗೆ ಸ್ಥಾಪಿಸಿದ ನಗರ ಹೊಸಪೇಟೆದ ಹಳೆಯ ಹೆಸರಾಗಿದ್ದ ನಾಗಲಾಪುರವೆಂಬುದು ಸ್ಪಷ್ಟವಿದೆ. ಬೇರೆಡೆಗಳಲ್ಲಿ ಅದು ಹೊಸಪೇಟವೆಂದು ಸ್ಪಷ್ಟವಾಗಿ ಗುರುತಿಸಲಾಗಿದೆ. ಮೇಲೆ ಉಲ್ಲಿಖಿತ ವಾಕ್ಯದಲ್ಲಿ "ಪೂರ್ವಕ್ಕಿರುವ" ಈ ಪಟ್ಟಣ "ಅರ್ದೆಗೆಮಾ" ಎಂಬ ಹೆಸರು ಹೊಂದಿತ್ತೆಂದು ಹೇಳಲಾಗಿದೆ, ಮತ್ತು ಅದರ ಸ್ಥಳ ನಿರ್ಧರಿಸಲು ಕಷ್ಟಕರವಾಗಿದೆ. ಯಾವುದರ "ಪೂರ್ವಕ್ಕೆ"? ನಾಗಲಾಪುರ ಉದ್ದೇಶಿತವೆಂದಾದರೆ ಅರ್ದೆಗೆಮಾ ಅಥವಾ ಪುಂದೆಗೆಮಾ (ಗೆಮಾ ಎಂದರೆ ಬಹುಶಃ ಗ್ರಾಮ) ಆ ಪಟ್ಟಣದ ಹೊರಗೇರಿ ಆಗಿರಬಹುದು. ರಾಜಧಾನಿಯ ಪೂರ್ವಕ್ಕೆಂದು ಹೇಳುವುದಾದರೆ ನಾನು

ಆ ಸ್ಥಳವನ್ನು ಗುರುತಿಸಲಾರೆ. ಆದರೆ, ಈ ಸ್ಥಳಗಳು ರಾಯಮೂಲಗಳ ಗಡಿಗುಂಟ ರಾಜಧಾನಿಗೆ ಸಮೀಪವಿದ್ದದು ಸ್ಪಷ್ಟವಿದೆ. "ಬಿಸ್ನಗದ ಭೂಮಿಗಳ ಗಡಿಗುಂಟ" ಎಂಬುದರ ಅರ್ಥ ಹೀಗೆ ಎಂದು ನಾನು ಗ್ರಹಿಸುತ್ತೇನೆ.

23 ಈ ಮೂರು ಊರುಗಳಲ್ಲಿ ನಾನು ಗುರುತಿಸಲಾರೆ. "ದಿಗೌಟ" ಬಹುಶಃ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ವಿಭಾಗದ ದುಗ್ಗವತ್ತಿ ಇರಬಹುದು. "ದಾರ್ಗುಎವುರ್" "ದ್ರೂಗ್" ಅಥವಾ "ದುರ್ಗವುರ್"ಅನ್ನು ಸೂಚಿಸುತ್ತದೆ. ಆ ಶಬ್ದವನ್ನು ಬೆಟ್ಟಕೋಟೆಗೆ ಅನ್ವಯಿಸಲಾಗಿದೆ. ಅಂಥವು ನೆರೆಹೊರೆಯಲ್ಲಿ ಬೇಕಾದಷ್ಟು ಇವೆ. ಬಳ್ಳಾರಿಯ ದಕ್ಷಿಣಕ್ಕಿರುವ ರಾಯದುರ್ಗ ಮಹತ್ವದವುಗಳಲ್ಲೊಂದು. ಗೋವಾ ದಿಂದ ಪೂರ್ವದತ್ತ ಹೋಗುವ ಘಾಟ್ ರಸ್ತೆಗಳಲ್ಲೊಂದನ್ನು ಹಳೆಯ ನಕಾಶಗಳಲ್ಲಿ "ದಿಗುಇಯ ದ್ವಾರ" ಎಂದು ಕರೆಯಲಾಗಿದೆ.

24 ಬಹುಶಃ ಆ ರಾಜಧಾನಿಯ ದಕ್ಷಿಣಕ್ಕೆ ಹದಿನೈದು ಮೈಲು ದೂರವಿರುವ ಮೈಸೂರಿನಲ್ಲಿನ ಕಳಲೆ. ವಿಜಯನಗರ ರಾಜವಂಶಕ್ಕೆ ಸಂಬಂಧಿಕನಾಗಿದ್ದ ಮನ್ನೆಯ ನೊಬ್ಬನು ೧೫೦೪ರಲ್ಲಿ ಅದನ್ನು ಸ್ಥಾಪಿಸಿದನೆಂದು ಹೇಳಲಾಗುತ್ತಿದೆ (ರೈಸನ ಗ್ಯಾಜೆಟಿಯರ್, ii, ೨೫೫).

25 ಗುರುತಿಸಲಾಗದ್ದು.

26 ಬಹುಶಃ ಮೈಸೂರಿನಲ್ಲಿರುವ ಬೂದಿಹಾಳ. ಅದನ್ನು ಕಳಲೆಯಂತೆಯೆ ವಿಜಯನಗರದ ಅಧಿಕಾರಿಯೊಬ್ಬ ಸ್ಥಾಪಿಸಿದ್ದ ಮತ್ತು ಅದರಲ್ಲಿ ಹದಿನಾರನೆಯ ಶತಮಾನದ ಹಲವಾರು ಶಾಸನಗಳಿವೆ. ಅದು ಆ ಊರಿನ ದಕ್ಷಿಣಕ್ಕೆ ನಲವತ್ತು ಮೈಲು ದೂರ ವಿದ್ದು ಚಿಟಲ್‌ದ್ರುಗ್ ವಿಭಾಗದಲ್ಲಿದೆ.

27 ಗುರುತಿಸಲಾಗದುದು.

28 **Roupa**. ನಾರುಬಟ್ಟೆ. ಈ ಶಬ್ದವನ್ನು ಹತ್ತಿಗಾಗಿ ಬಳಸಲಾಗಿಲ್ಲ, ಮತ್ತು ಮುಂದಿನ ವಾಕ್ಯ ಹತ್ತಿ ಆ ಪ್ರದೇಶದಲ್ಲಿ ಬೆಳೆಯುತ್ತಿರಲಿಲ್ಲವೆಂದು ತೋರಿಸುತ್ತದೆ.

29 ಕ್ಯಾಲಿಕಟ್.

30 ಲಿಪಿಕಾರನು "ಅವಾತಿ" ಬದಲು ಇದನ್ನು ಬರೆಯುವ ತಪ್ಪು ಮಾಡಿದ್ದಾನೆಂಬ ಸೂಚನೆಯನ್ನು ಊಹಿಸುತ್ತೇನೆ. ಮೈಸೂರಿನ ಕೋಲಾರ ಜಿಲ್ಲೆಯಲ್ಲಿನ ಈ ಹಳ್ಳಿ ಹದಿನೈದನೆಯ ಶತಮಾನದಲ್ಲಿ ಮಹತ್ವದ ಊರಾಗಿತ್ತು. "ಮೊರಸು ವೊಕ್ಕಲು" ಅಥವಾ "ಏಳು ರೈತ"ರಿಂದ ಇಲ್ಲಿ ಒಂದು ಆಳುವ ಮನೆತನ ಸ್ಥಾಪಿಸಲ್ಪಟ್ಟಿತ್ತು (ರೈಸ್, "ಮೈಸೂರ್ ಅಂಡ್ ಕೂರ್ಗ್", ii, ೨೦). ಈ ವರ್ಣನೆ ಅದಕ್ಕೆ ಸರಿಯಾಗಿ ಅನ್ವಯಿಸುತ್ತದೆ.

31 "ಘಟ್ಟಗಳು" ಅಥವಾ ಬಹುಶಃ ಗುತ್ತಿ (ಗೂಟಿ) ಎಲ್ಲಿ ಒಂದು ಉತ್ಕೃಷ್ಟ ಗಿರಿದುರ್ಗದ ಅವಶೇಷಗಳಿವೆಯೊ ಆ ಗೂಟಿಯ ನೈರುತ್ಯಕ್ಕೆ ಸುಮಾರು ಇಪ್ಪತ್ತು ಮೈಲು ದೂರದಲ್ಲಿ ಸಮೃದ್ಧ ವಜ್ರ ಕರೂರ ವಜ್ರಗಳಿವೆ.

32 ಮೇಲೆ ಟಿಪ್ಪಣಿ ನೋಡಿರಿ, ಪು. ೩೬೮

33 ಮುದಕಲ್

34 ರಾಯಚೂರ

35 ಅರ್ಥಾತ್ ಹಿಂದೂ ಧರ್ಮ, ಮಹಮ್ಮದೀಯವಲ್ಲ.

36 ತೆಲುಗರು

37 ಖಂಡಿತವಾಗಿಯೂ ಹೀಗಿರಲಿಲ್ಲ.

## ಅಧ್ಯಾಯ ೨೩

## ಬ್ರಾಹ್ಮಣರ ಮರಣ ಕಾಲಕ್ಕೆ ಆಚರಿಸಲಾಗುವ ಪದ್ಧತಿಗಳು

ಬ್ರಾಹ್ಮಣ ಬೇನೆ ಬಿದ್ದಾಗ, ಅವನು ಸಾಯುವ ಮೊದಲು, ಅವರು ಬಂದು ಪ್ರಾರ್ಥಿಸಲೋಸುಗ ಮತ್ತು ಬೇನೆ ಬಿದ್ದವನನ್ನು ಸಮಾಧಾನಗೊಳಿಸಲೋಸುಗ ಅವನ ಪುರೋಹಿತರಾಗಿರುವ ಬ್ರಾಹ್ಮಣ ಪಂಡಿತರನ್ನು ಕರೆಕಳಿಸುತ್ತಾರೆ ; ಅವರು ಅವನ ಆತ್ಮದ ವಿಷಯವಾಗಿ ಮತ್ತು ಅದನ್ನು ಉಳಿಸಲು ಅವನು ಏನು ಮಾಡಬೇಕೆಂದು ಮಾತಾಡುತ್ತ ದಾನದಲ್ಲಿ ಧನ ವ್ಯಯಿಸುವಂತೆ ಹೇಳುತ್ತಾರೆ. ಈ ಕರ್ಮ ಮುಗಿದ ಮೇಲೆ ಅವರು ಬ್ರಾಹ್ಮಣ ಪುರೋಹಿತರನ್ನು ಬೇನೆ ಬಿದ್ದವನ ತಲೆ ಬೋಳಿಸಲು ಹಚ್ಚುತ್ತಾರೆ, ಬೋಳಿಸಿದ ಮೇಲೆ ಅದನ್ನು ತೊಳೆಯಲು ಹಚ್ಚುತ್ತಾರೆ ಮತ್ತು ತೊಳೆದ ಮೇಲೆ ತಮ್ಮ ಮನೆಯೊಳಕ್ಕೆ ಕರು ಉಳ್ಳ ಆಕಳೊಂದನ್ನು ತರುವುದು ಅವರ ಪದ್ಧತಿ. , ಎಷ್ಟೇ ಬಡವರಿದ್ದರೂ ತಮ್ಮ ಮನೆಯಲ್ಲಿ ಬದುಕುತ್ತಿರುವ ಒಂದು ಆಕಳೂ ಇಲ್ಲದ ಬ್ರಾಹ್ಮಣರಿಲ್ಲ. ಆ ಮನುಷ್ಯನ ತಲೆ ತೊಳೆದ ಮೇಲೆ ಅವರು ಒಂದು ರುಮಾಲು ತೆಗೆದುಕೊಂಡು ಆ ಆಕಳ ಕುತ್ತಿಗೆಗೆ ಕಟ್ಟುತ್ತಾರೆ. ಮತ್ತು ರುಮಾಲಿನ ತುದಿಯನ್ನು ಬೇನೆ ಬಿದ್ದಿರುವವನ ಕೈಯಲ್ಲಿ ಇಡುತ್ತಾರೆ ಮತ್ತು ಅವನು ಅದನ್ನು ಮತ್ತು ಕರುವನ್ನು ತನ್ನ ಆತ್ಮಕ್ಕೋಸ್ಕರ ಈ ವಿಧಿಗಳನ್ನು ಆಚರಿಸುವ ಪುರೋಹಿತರಿಗೆ ದಾನವಾಗಿ ಕೊಡುತ್ತಾನೆ. ಆ ದಿನ ಅವನು ತನ್ನ ಅಂತಸ್ತಿಗೆ ತಕ್ಕಂತೆ ದಾನ ನೀಡುತ್ತಾನೆ, ಮತ್ತು ಆಮಂತ್ರಿತರಾದ ಮತ್ತು ಆ ಉದ್ದೇಶಕ್ಕಾಗಿ ಅಲ್ಲಿಗೆ ಬರುವ ಕೆಲವು ಬ್ರಾಹ್ಮಣರಿಗೆ ಊಟ ಹಾಕುತ್ತಾನೆ. ಬೇನೆ ಬಿದ್ದವನಿಗಾಗಿ ಈ ಕರ್ಮಗಳನ್ನು ಆಚರಿಸಿದಾಗ ಅವನು ಜೀವಿಸಬೇಕೆಂದಿದ್ದರೆ ಅವನು ತನ್ನ ಬೇನೆಯಿಂದ ಶೀಘ್ರ ಗುಣ ಹೊಂದುತ್ತಾನೆ ಮತ್ತು ಹಾಗೆ ಇಲ್ಲದಿದ್ದರೆ ಅವನು ಬೇಗ ಸಾಯುತ್ತಾನೆ ಎಂದು ಅವರು ನಂಬುತ್ತಾರೆ.

ಬೇನೆ ಬಿದ್ದವನ ಮರಣಾನಂತರ ಅವನು ಮಲಗಿದ್ದ ನೆಲವನ್ನು ಅವರು ತೊಳೆಸುತ್ತಾರೆ, ಮತ್ತು ತೊಳೆದ ನಂತರ ಸಗಣಿ ತಗೆದುಕೊಂಡು ನೆಲ ಸಾರಿಸುತ್ತಾರೆ, ಮತ್ತು ದೇಹವನ್ನು ಈ ಸಗಣಿಯ ಮೇಲೆ ಇಡುತ್ತಾರೆ. ನೆಲದ ಮೇಲಲ್ಲದೆ ಮಂಚದ ಮೇಲಾಗಲಿ ಬೇರೆ ಇನ್ನಾವುದರ ಮೇಲಾಗಲಿ ಸಾಯುವ ಬೇನೆಯ ಮನುಷ್ಯ ಘೋರ ಪಾಪ ಮಾಡುತ್ತಾನೆಂದು ಅವರ ಗ್ರಹಿಕೆ. ದೇಹವನ್ನು ನೆಲದ ಮೇಲೆ ಇಟ್ಟಕೂಡಲೆ ಅದಕ್ಕಾಗಿ ಅತ್ತಿಮರದ ಟೊಂಗೆಗಳಿಂದ ಮುಚ್ಚಿದ ಚಟ್ಟ ಮಾಡುತ್ತಾರೆ, ಮತ್ತು ದೇಹವನ್ನು ಚಟ್ಟದ ಮೇಲೆ ಶುದ್ಧ ನೀರಿನಿಂದ ಅದನ್ನು ಚನ್ನಾಗಿ ತೊಳೆಯುತ್ತಾರೆ, ಮತ್ತು ಗಂಧದ ಕಟ್ಟಿಗೆ (ಎಣ್ಣೆ)ಯಿಂದ ಅಭ್ಯಂಜನ ಮಾಡುತ್ತಾರೆ ; ಮತ್ತು ದೇಹದ

ಪಕ್ಕದಲ್ಲಿ ಸಿಹಿ ತುಳಸಿ ಟೊಂಗೆಗಳನ್ನು ಇಡುತ್ತಾರೆ ಮತ್ತು ಅದನ್ನು ಹೊಸ ಬಟ್ಟೆಯಿಂದ ಮುಚ್ಚುತ್ತಾರೆ, ಮತ್ತು ಹೀಗೆ ಚಟ್ಟದ ಮೇಲೆ ಇಡುತ್ತಾರೆ. ಆಮೇಲೆ ಅವನ ಸಂಬಂಧಿಗಳಲ್ಲೊಬ್ಬ ಒಂದು ಕಡೆ ಚಟ್ಟ ಹೊರುತ್ತಾನೆ ಮತ್ತು ಅವರು ಯಾರೆ ಇರಲಿ ಮೂವರು ಬ್ರಾಹ್ಮಣರನ್ನು ಅದನ್ನು ಎತ್ತಲು ನೆರವಾಗಲು ಕರೆಯುತ್ತಾರೆ. ಹೀಗೆ, ಹೆಣದ ಮುಂದೆ ಹಾಡುತ್ತ ಹೋಗುವ ಅನೇಕ ಬ್ರಾಹ್ಮಣರಿಂದೊಡಗೂಡಿ ಅವರು ಅದನ್ನು ಸುಡುವ ಸ್ಥಳಕ್ಕೆ ಒಯ್ಯುತ್ತಾರೆ. ಅವನಿಗೆ ಮಗನಿದ್ದರೆ ಅವನು ಇಲ್ಲವೆ ಬೆನ್ನ ಮೇಲಿನ ತಮ್ಮ ಇಲ್ಲವೆ ಹತ್ತಿರದ ಸಂಬಂಧಿ ಸುಡಲು ಬೆಂಕಿ ಕೈಯಲ್ಲಿ ಹಿಡಿದುಕೊಂಡು ಎಲ್ಲಕ್ಕೂ ಮುಂದೆ ಹೋಗುತ್ತಾನೆ. ದೇಹ ಸುಡುವ ಸ್ಥಳಕ್ಕೆ ಬಂದಾಕ್ಷಣ ಅವರು ತಮ್ಮ ಯೋಗ್ಯತೆಗನುಸಾರವಾಗಿ ಹಣ ಹರಡುತ್ತಾರೆ, ಮತ್ತು ಆಮೇಲೆ ಅದಕ್ಕೆ ಬೆಂಕಿ ಹಚ್ಚುತ್ತಾರೆ ; ಮತ್ತು ಅವರು ಇಡಿ ದೇಹ ಸುಡುವವರೆಗೆ ಕಾಯುತ್ತಾರೆ, ಮತ್ತು ನಂತರ ಎಲ್ಲರೂ ಮೈತೊಳೆದುಕೊಳ್ಳಲು ಕೆರೆಗೆ ಹೋಗುತ್ತಾರೆ ಮತ್ತು ತದನಂತರ ಪ್ರತಿಯೊಬ್ಬನೂ ತನ್ನ ಮನೆಗೆ ಮರಳುತ್ತಾನೆ. ಬೆಂಕಿಯಿಟ್ಟ ಮಗ ಅಥವಾ ಸಹೋದರ ಅಥವಾ ಸಂಬಂಧಿಯನ್ನು ಒಂಭತ್ತು ದಿನ ಆ ಮನುಷ್ಯ ಸತ್ತ ನೆಲದ ಮೇಲೆ ಮಲಗಿಸುತ್ತಾರೆ, ಮತ್ತು ಮರಣಾನಂತರ ಒಂಭತ್ತು ದಿನ ಕಳೆದ ಮೇಲೆ ಪುರೋಹಿತರು ಮತ್ತು ಪಂಡಿತರು ಬರುತ್ತಾರೆ ಮತ್ತು ಈ ಮನುಷ್ಯನ ತಲೆ ಬೋಳಿಸಲು ಆಜ್ಞಾಪಿಸುತ್ತಾರೆ. ಈ ಒಂಬತ್ತು ದಿನಗಳ ಕಾಲ ಅವರು ಬಡವರಿಗೆ ಊಟ ಹಾಕುತ್ತಾರೆ ಮತ್ತು ಅವರಿಗೆ ಮೃತನ ಬಟ್ಟೆಗಳನ್ನು ಕೊಡುತ್ತಾರೆ, ಮತ್ತು ಅದರ ಹಾಸಿಗೆಯೊಂದಿಗೆ ಮಂಚವನ್ನಲ್ಲದೆ ಸ್ವಲ್ಪ ಹಣವನ್ನೂ ದಾನವಾಗಿ ಪುರೋಹಿತರಿಗೆ ಕೊಡುತ್ತಾರೆ ; ಅವನು ಶ್ರೀಮಂತನಾಗಿದ್ದರೆ ಅನೇಕ ಬ್ರಾಹ್ಮಣರಿಗೆ ತೋಟಗಳನ್ನು ಮತ್ತು ಇತರ ವಸ್ತುಗಳನ್ನು ದಾನವಾಗಿ ನೀಡುತ್ತಾರೆ. ಹತ್ತು ದಿನ ಕಳೆದ, ಮತ್ತು ಮಗನನ್ನು ಬೋಳಿಸಿದ ಮೇಲೆ, ಅವನು ತನ್ನ ತಂದೆ ಅಥವಾ ಅವನ ಸಹೋದರನನ್ನು ಸುಟ್ಟ ಸ್ಥಳಕ್ಕೆ ಹೋಗುತ್ತಾನೆ ಮತ್ತು ಬೂದಿಯು ಮತ್ತು ಸುಡದೆ ಉಳಿದ ಎಲುಬುಗಳ ಮೇಲೆ ಅವರು ಅನೇಕ ಕರ್ಮಗಳನ್ನು ಮಾಡುತ್ತಾರೆ ; ಆಮೇಲೆ ಅವರು ಅವುಗಳನ್ನು ಒಂದು ಚಿಕ್ಕ ಪಾತ್ರೆಯಲ್ಲಿ ಇಡುತ್ತಾರೆ ಮತ್ತು ಭೂಮಿಯಲ್ಲಿ ಒಂದು ತಗ್ಗು ತೋಡಿ ಅದರಲ್ಲಿ ಅದನ್ನು ಹುಗಿಯುತ್ತಾರೆ, ಮತ್ತು (ನಂತರ) ಗೋವಾದಿಂದ ಒಂದು ಸಾವಿರ ಹರದಾರಿಗಿಂತಲೂ ದೂರವಿರುವ ಪವಿತ್ರ ನದಿಯೊಂದರಲ್ಲಿ[1] ಅವುಗಳನ್ನು ಎಸೆಯಲೋಸುಗ ಅವುಗಳನ್ನು ಹೀಗೆ ಸುರಕ್ಷಿತವಾಗಿ ಹುಗಿದಿಡುತ್ತಾರೆ. ಅಲ್ಲಿ ಅನೇಕ ತೀರ್ಥಯಾತ್ರಿಗಳ ಗುರಿಯಾಗಿರುವ ದೊಡ್ಡ ದೇವಾಲಯವಿದೆ, ಮತ್ತು ಅಲ್ಲಿ ಮಡಿದ ಪ್ರತಿಯೊಬ್ಬ ಯಾತ್ರಿಯನ್ನು ಮತ್ತು ಆ ನದಿಯೊಳಗೆ ಎಲವುಗಳನ್ನು ಎಸೆಯಲಾದ ಪ್ರತಿಯೊಬ್ಬ ಮೃತನನ್ನು ರಕ್ಷಿಸಲಾಗುತ್ತದೆ ಮತ್ತು ಅವನು ಸ್ವರ್ಗಕ್ಕೆ ಹೋಗುತ್ತಾನೆ ಎಂದು ಅವರು ನಂಬುತ್ತಾರೆ. ಆದಾಗ್ಯೂ ವಾಸ್ತವವಾಗಿ ಅಲ್ಲಿಗೆ ಅವರು ಬಹಳ ಕಡಿಮೆ ಜನರನ್ನು ಕರೆದೊಯ್ಯುತ್ತಾರೆ. ಮೃತನ

ಉತ್ತರಾಧಿಕಾರಿ ಅಥವಾ ತಂದೆ ಅಥವಾ ಮಗ ಮರಣದ ದಿನದಿಂದ ಹನ್ನೊಂದು ದಿನಗಳವರೆಗೆ ಇತರ ಮೂವರಿಗೆ ಊಟ ಹಾಕಬೇಕು ; ಇನ್ನೂ ಹನ್ನೆರಡು ದಿನಗಳವರೆಗೆ ಏಳು ಬ್ರಾಹ್ಮಣರಿಗೆ, ಮತ್ತು ಇಪ್ಪತ್ತೇಳು ದಿನಗಳವರೆಗೆ ಮೂವರಿಗೆ ಉಣ್ಣಲು ನೀಡುತ್ತಾನೆ ; ತಿಂಗಳ ಕೊನೆಯ ದಿನ ಅವನು ಬೇರೆ ಮೂವರಿಗೆ ಊಟ ಹಾಕುತ್ತಾನೆ, ಮತ್ತು ಅಂದಿನಿಂದ ಒಂದು ವರ್ಷ ಮುಗಿಯುವವರೆಗೆ ತಿಂಗಳಿಗೊಮ್ಮೆ ಮೂರು ಬ್ರಾಹ್ಮಣರಿಗೆ ಊಟ ಹಾಕುತ್ತಾನೆ. ಅವರು ಮೃತನ ಆತ್ಮಕ್ಕಾಗಿ ತ್ರಿಮೂರ್ತಿಯ ಗೌರವಾರ್ಥ ಇದನ್ನು ಮಾಡುತ್ತಾರೆ. ಈ ವರ್ಷ ಮುಗಿದನಂತರ ಪ್ರತಿವರ್ಷ ಮರಣದ ದಿನಾಂಕದಂದು ಆರು ಬ್ರಾಹ್ಮಣರಿಗೆ....ಅಂದರೆ, ಮೂವರು ತ್ರಿಮೂರ್ತಿಗಳ ಗೌರವಾರ್ಥ, ಮತ್ತು ಮೂವರು ಅವನ ತಂದೆ, ಅಜ್ಜ ಮುತ್ತಜ್ಜರಿಗಾಗಿ, ಅವರು ಭಾಸವಾಗುವಂತೆ ಹೀಗೆ ಒಟ್ಟಿಗೆ ಊಟ ಮಾಡುತ್ತಾರೆ....ಊಟ ಹಾಕುವುದನ್ನು ಬಿಟ್ಟರೆ ಹೆಚ್ಚಿನ ದಾನ ಮಾಡುವುದಿಲ್ಲ. ಹೀಗೆ, ಅವನು ದೇವರ ಕೃಪೆ ಪಡೆಯುತ್ತಾನೆ, ಮತ್ತು ಅವರು ಬಡವರಾಗಿದ್ದರೆ, ಈ ಖರ್ಚುಗಳಿಗಾಗಿ ಬ್ರಾಹ್ಮಣರಿಂದ ದಾನ ಬೇಡುತ್ತಾರೆ. ಇವರು ಅದಕ್ಕೆ ಎಲ್ಲ ನೆರವು ನೀಡುತ್ತಾರೆ. ಊಟಕ್ಕೆ ಮೊದಲು ಅವರು ಎಲ್ಲ ಜನರ ಪಾದ ತೊಳೆಯುತ್ತಾರೆ, ಮತ್ತು ಆ ಉದ್ದೇಶಕ್ಕಾಗಿಯೆ ಅಲ್ಲಿಗೆ ಬಂದ ಬ್ರಾಹ್ಮಣ ಪುರೋಹಿತರು ಊಟ ನಡೆದಾಗ ಕೆಲವು ಕರ್ಮಗಳನ್ನು ಮಾಡುತ್ತಾರೆ.

# ಅನುಬಂಧ ಅ

## ವಜ್ರಗಳು

ನಮ್ಮ ಚರಿತ್ರಕಾರರು ಹಿಂದೂ ಸಾರ್ವಭೌಮನ ಹಾಗೂ ಅವನ ಮನ್ನೆಯರ ಸಂಪತ್ತಿನ ಮತ್ತು ಅವರ ಕುಟುಂಬದ ಸ್ತ್ರೀಯರು ಉನ್ನತ ಉತ್ಸವದ ದಿನಗಳಂದು ಮಾಡುತ್ತಿದ್ದ ಆಭರಣಗಳ ಅದ್ಭುತ ಪ್ರದರ್ಶನದ—ಇದರ ವರ್ಣನೆಯನ್ನು ಪ್ಯಾಸ್ ನಮಗೆ ನೀಡಿದ್ದಾನೆ—ವರ್ಣನೆಯಲ್ಲಿ ಎಷ್ಟೊಂದು ಉತ್ಪ್ರೇಕ್ಷೆ ಮಾಡಿರುವರೆಂದು ಪ್ರಥಮ ನೋಟಕ್ಕೆ ಅನಿಸಿದರೂ ನನಗಂತೂ ಸಂದೇಹಕ್ಕೆ ಕಾರಣ ತೋರುವುದಿಲ್ಲ. ಅಂದಿನ ದಿನಗಳಲ್ಲಿ ಪ್ರಪಂಚದಲ್ಲಿಯೆ ಅತ್ಯಂತ ಶ್ರೀಮಂತವಾಗಿದ್ದ ವಜ್ರಗಣಿಗಳನ್ನು, ತೂಕದಲ್ಲಿ ಇಪ್ಪತ್ತು ಮ್ಯಾಂಗೆಲಿನ್—ಸುಮಾರು ಇಪ್ಪತ್ತೈದು ಕ್ಯಾರಟ್‌ಗಿಂತ ಮೇಲಿನವನ್ನು, ಮತ್ತು ಇಂತಹವು ಅನೇಕವಿದ್ದಿರಬೇಕು, ರಾಯನಿಗೆ ಅವನ ಸ್ವಂತ ಉಪಯೋಗಕ್ಕಾಗಿ ಕಳಿಸಿಕೊಡಬೇಕೆಂಬ ಕರಾರಿನ ಮೇಲೆ ಗುತ್ತಿಗೆ ಕೊಡಲಾಗಿತ್ತು ಎಂದು ನೂನಿಜ್ ಸ್ಪಷ್ಟವಾಗಿ ಹೇಳುತ್ತಾನೆ (ಪು. ೩೮೯). ವದಂತಿಯನ್ವಯ, ಸಾಮ್ರಾಜ್ಯದ ಪತನಾನಂತರವೂ ಕ್ರಿ.ಶ. ೧೬ಂ೦ಗಳಲ್ಲಿ ಚಂದ್ರಗಿರಿಯ ರಾಜನ ವಶದಲ್ಲಿ ವಜ್ರಗಳಿಂದ ತುಂಬಿದ ಮೂರು ದೊಡ್ಡ ಪೆಟಾರಿಗಳಿದ್ದವೆಂದು ಬ್ಯಾರಡಸ್ (ಮೇಲೆ ಪು. ೨೨೬) ಹೇಳಿದ್ದಾನೆ; ಪ್ರತಿಯೊಬ್ಬ ಪ್ರವಾಸಿ ಮತ್ತು ಚರಿತ್ರಕಾರ ಈ ವಿಷಯದ ಬಗೆಗೆ ಏನಾದರೂ ಹೇಳಿಯೆ ಇದ್ದಾನೆ.

ಪ್ರಮುಖ ಗಣಿಗಳು ಕೃಷ್ಣಾ ನದಿಯ ಉತ್ತರ ದಡದ ಮೇಲೆ ಮತ್ತು ಕರ್ನೂಲು ಮತ್ತು ಅನಂತಪುರ ಪ್ರದೇಶಗಳಲ್ಲಿ, ವಿಶೇಷತಃ ವಜ್ರಕರೂರಿನಲ್ಲಿ ಇದ್ದವು. ಸಾಮಾನ್ಯವಾಗಿ ಇವುಗಳು "ಗೋಲ್ಕೊಂಡದ ಗಣಿಗಳು" ಎಂದು ಪ್ರಖ್ಯಾತವಾಗಿವೆ, ಮತ್ತು ಈ ಮಾತು ಗಾದೆಯಾಗಿದೆ.

ಲಿನ್‌ಸ್ಕೊಟೆನ್ (ii ೧೩೬) ಹೀಗೆ ಬರೆಯುತ್ತಾನೆ: "ಅವು (ವಜ್ರಗಳು) ಬಿಸ್ನಗದ ನಗರದ ಬಳಿ ಬಲಾಗಾಟ್ ಹಿಂದೆ ಇರುವ ಡೆಕುಮ್ ನಾಡಿನಲ್ಲಿ ಬೆಳೆಯುತ್ತವೆ. ಅಲ್ಲಿ ಎರಡು ಗುಡ್ಡಗಳಿವೆ. ಅಲ್ಲಿಂದ ಅವುಗಳನ್ನು ಅಗೆಯಲಾಗುತ್ತದೆ. ಅದರಿಂದ ಬಿಸ್ನಗರದ ರಾಜ ವಿಪುಲ ಲಾಭ ಪಡೆಯುತ್ತಾನೆ; ಏಕೆಂದರೆ, ಅವನು ಅವುಗಳ ಮೇಲೆ ನೇರವಾಗಿ ಕಾವಲು ಇರಿಸುತ್ತಾನೆ ಮತ್ತು ತೂಕದಲ್ಲಿ ಇಪ್ಪತ್ತೈದು ಮ್ಯಾಂಗೆಲಿನ್‌ಗಿಂತ ಮೇಲಿನ ಎಲ್ಲ ವಜ್ರಗಳು ಸ್ವತಃ ರಾಜನಿಗೋಸ್ಕರ (ಪ್ರತಿಯೊಂದು ಮ್ಯಾಂಗೆಲಿನ್ ತೂಕದಲ್ಲಿ ನಾಲ್ಕು ಗ್ರೇನ್ ಇರುತ್ತದೆ) ಎಂಬ ಕರಾರಿನ ಮೇಲೆ ಅವುಗಳನ್ನು ಗುತ್ತಿಗೆ ಕೊಟ್ಟಿರುವನು.

ಡೆಕನ್ ನಾಡಿನಲ್ಲಿ ಇನ್ನೊಂದು ಗುಡ್ಡವಿದೆ. ಅದನ್ನು ವೆಲ್ಹಾ ಅಂದರೆ ಹಳೆಯ ಬಂಡೆ ಎಂದು ಕರೆಯಲಾಗುತ್ತದೆ. ಅಲ್ಲಿಂದ ಅತ್ಯುತ್ತಮ ವಜ್ರಗಳು ಬರುತ್ತವೆ ಮತ್ತು ಅತ್ಯಂತ ಹೆಚ್ಚು ಬೆಲೆಗೆ ಮಾರಲ್ಪಡುತ್ತವೆ....ಕೆಲವೊಮ್ಮೆ ಒಂದು ನೂರು ಮತ್ತು ಇನ್ನೂರು ಮ್ಯಾಂಗೆಲಿನ್ ಮತ್ತು ಇನ್ನೂ ಹೆಚ್ಚಿನ ವಜ್ರಗಳು ದೊರೆಯುತ್ತವೆ. ಆದರೆ ಅಂಥವು ಬಹಳ ಕಡಿಮೆ.”

ವಿಜಯನಗರದ ಕೊಳ್ಳೆ ಕಾಲಕ್ಕೆ ದೊರೆತುದು ಮತ್ತು ಆದಿಲ್‌ಶಾಹನಿಗೆ (ಮೇಲೆ, ಪು. ೨೦೮) ಕಾಣಿಕೆ ನೀಡಲಾಯಿತೆಂದು ಹೇಳಲಾಗುವ ಕೋಳಿಯ ಮೊಟ್ಟೆಯಷ್ಟು ದೊಡ್ಡ ವಜ್ರದ ಬಗೆಗೆ ಕೌಟೊ (ಡೆಕಡಾ viii ಅಧ್ಯಾಯ ೧೫) ಅದು ರಾಯ ತನ್ನ ಕುದುರೆಯ ಶಿರಾಲಂಕಾರದ ಗರಿಯ ಕೆಳಗೆ ಜೋಡಿಸಿದ ರತ್ನ ಎಂದು ಹೇಳುತ್ತಾನೆ. ೧೫೩೪ರಲ್ಲಿ ಭಾರತದಲ್ಲಿದ್ದ ಗಾರ್ಸಿಯಾದ ಒರ್ಟಾ ವಿಜಯನಗರದಲ್ಲಿ ಒಂದು ಚಿಕ್ಕ ಕೋಳಿಮೊಟ್ಟೆಯಷ್ಟು ದೊಡ್ಡ ವಜ್ರ ಕಂಡಿತ್ತೆಂದು ಹೇಳುತ್ತಾನೆ, ಮತ್ತು ಇನ್ನು ಮೂರರ ತೂಕ ಅನುಕ್ರಮವಾಗಿ ೧೨೦, ೧೪೦, ಮತ್ತು ೨೫೦ ಮ್ಯಾಂಗೆಲಿಯಗಳು, ಅಂದರೆ ೧೫೦, ೧೭೫, ಮತ್ತು ೩೧೨ ೧/೨ ಕ್ಯಾರಟ್‌ಗಳಿಗೆ ಸಮ, ಆಗಿತ್ತೆಂದು ಸಾರುತ್ತಾನೆ (ಟ್ಯಾವರ್ನಿಯರ್ V. ಬಾಲ್, ii ೪೩೩).

ಡಾ. ಬಾಲ್ ಬಾಬರನ, ಮೊಗಲನ, ಪಿಟ್‌ನ, ಕೊಹಿನೂರ ಮತ್ತು ಇತರ ವಜ್ರಗಳ ವಿಷಯವನ್ನು ಕೂಲಂಕಷವಾಗಿ ಪರೀಕ್ಷಿಸಿರುವನು, ಮತ್ತು ಈ ವಿಷಯದಲ್ಲಿ ಆಸಕ್ತರಿಗೆ ಅವನ ಅನುಬಂಧ i ನೋಡಬೇಕೆಂದು ಕೇಳಿಕೊಳ್ಳುತ್ತೇನೆ.

ಈ ಕೋಳಿಮೊಟ್ಟೆ ವಜ್ರ ಸುಲ್ತಾನ ಬಾಬರನದೇ ಆಗಿರಲು ಸಾಧ್ಯವಿಲ್ಲ. ಏಕೆಂದರೆ, ಮೊದಲಿನದನ್ನು ಕ್ರಿ.ಶ. ೧೫೬೫ರಲ್ಲಿ ವಿಜಯನಗರದಲ್ಲಿ ಪಡೆಯಲಾಗಿದ್ದರೆ ಸುಲ್ತಾನ ಬಾಬರನದನ್ನು ಅವನ ಮಗ ಹುಮಾಯೂನ ೧೫೨೬ರಲ್ಲಿ ಆಗ್ರಾದಲ್ಲಿ ಪಡೆದ ಮತ್ತು ಅದು ನಲವತ್ತು ವರ್ಷಗಳ ತರುವಾಯ ದಕ್ಷಿಣದ ಹಿಂದೂ ರಾಜನ ವಶದಲ್ಲಿ ಇದ್ದಿರಲು ಸಾಧ್ಯವಿಲ್ಲ.[1]

ಬಹುಶಃ ಕೊಹಿನೂರ ಮತ್ತು ಮೊಗಲನ ವಜ್ರವೂ ಒಂದೇ ಎಂದು ಡಾ. ಬಾಲ್ ತೋರಿಸಿದ್ದಾನೆ. ಅಂತಾದರೆ, ಈ ಕೋಳಿಮೊಟ್ಟೆ ವಜ್ರವೂ ಅದೇ ಹೌದೇ ? ಬಹುಶಃ ಅಲ್ಲ. “ಕೋಳಿಮೊಟ್ಟೆ”ಯನ್ನು ವಿಜಯನಗರದ ಕೊಳ್ಳೆ ಕಾಲಕ್ಕೆ ಪಡೆದಾಗ ಅದನ್ನು ಕತ್ತರಿಸಲಾಗಿತ್ತೆಂದು ಹೇಳಲಾಗಿದ್ದಿದ್ದರೆ ಅದರ ಸಾಧಕ ಬಾಧಕ ಋಜುವಾತುಗಳು ಇತ್ಯರ್ಥಕವಾಗಿರುತ್ತಿದ್ದವು. ಏಕೆಂದರೆ, ಕ್ರಿ.ಶ. ೧೬೫೬ ಅಥವಾ ೧೬೫೭ರಲ್ಲಿ ಕೊಹಿನೂರ ಖಂಡಿತವಾಗಿ ಕತ್ತರಿಸಲ್ಪಟ್ಟಿರಲಿಲ್ಲ. ಆದರೆ ಈ ಬಗೆಗೆ ಯಾವುದೇ ಮಾಹಿತಿ ಲಭ್ಯವಿಲ್ಲ.

ಕಂಡುಬರುತ್ತಿರುವಂತೆ ಆದಿಲ್‌ಶಾಹ ೧೫೬೫ರಲ್ಲಿ "ಕೋಳಿಮೊಟ್ಟೆ"ಯನ್ನು ಬಿಜಾಪುರಕ್ಕೆ ಒಯ್ದ ಮತ್ತು ಇನ್ನೂ ಕತ್ತರಿಸದಿದ್ದ ಸ್ಥಿತಿಯಲ್ಲಿ ಅದು ೧೬೫೬ರಲ್ಲಿ ಮೀರ ಜುಮ್ಲಾನ ವಶಕ್ಕೆ ಬಂದಿರುವ ಸಂಭವವಿಲ್ಲ.

ಕೊಹಿನೂರ ಬಹುಶಃ ಕ್ರಿ.ಶ. ೧೬೫೬ರಲ್ಲಿ ಕೃಷ್ಣಾ ನದಿಯ ಮೇಲಿನ ಕೊಲ್ಲೂರಿನಲ್ಲಿ ದೊರೆಯಿತು. ಮೀರ ಜುಮ್ಲಾ ಆ ಕಾಲದಲ್ಲಿ ಗಣಿಗಳ ಗುತ್ತಿಗೆ ಮಾಡುತ್ತಿದ್ದ ಮತ್ತು ಕತ್ತರಿಸದೆ ಅದನ್ನು ಸಾಮ್ರಾಟ ಶಹಾಜಹಾನನಿಗೆ ಕಾಣಿಕೆ ಸಲ್ಲಿಸಿದ. ಅದು ೭೫೬ ಇಂಗ್ಲಿಷ್ ಕ್ಯಾರಟ್ ತೂಕದ್ದಿತ್ತೆಂದು ಹೇಳಲಾಗುತ್ತದೆ. (ಬಾಲ್ ii, ೪೪೪). ಅದನ್ನು ಹೊರ್ಟೆನಿಯೊ ಬೋರ್ಗಿಯೊ ಎಂಬ ವೆನೀಷಿಯನ್ನನಿಗೆ ಒಪ್ಪಿಸಲಾಗಿತ್ತು, ಮತ್ತು ಅವನ ಕೈಯಲ್ಲಿ ಎಷ್ಟು ಕೆಡಿಸಲ್ಪಟ್ಟಿತ್ತು ಮತ್ತು ಹಾನಿಗೊಳಗಾಗಿತ್ತೆಂದರೆ ಔರಂಗಜೇಬನ ಬೊಕ್ಕಸದಲ್ಲಿ ಟ್ಯಾವರ್ನಿಯರ್ ಅದನ್ನು ೧೬೬೫ರಲ್ಲಿ ನೋಡಿದಾಗ ಅದು ೨೬೮ ೨/೧ ಇಂಗ್ಲಿಷ್ ಕ್ಯಾರಟ್‌ಗಳಿಗಿಂತ ಹೆಚ್ಚು ತೂಗಲಿಲ್ಲ. ೧೭೩೯ರಲ್ಲಿ ನಾದಿರಶಾಹ ದಿಲ್ಲಿಯನ್ನು ಕೊಳ್ಳೆ ಹೊಡೆದ ಮತ್ತು ತನ್ನೊಂದಿಗೆ ಪರ್ಷಿಯಾಕ್ಕೆ ಆ ಹರಳನ್ನು ಒಯ್ದು ಅದಕ್ಕೆ "ಬೆಳಕಿನ ಬೆಟ್ಟ" ಎಂಬ ಪ್ರಸಕ್ತ ಅಮರ ಹೆಸರನ್ನು ನೀಡಿದ. ೧೭೪೭ರಲ್ಲಿ ಅವನ ಕೊಲೆಯಾದ ಮೇಲೆ ಅದು ಅವನ ಮೊಮ್ಮಗ ಶಾಹ ರೂಖನ ಕೈಸೇರಿತು. ನಾಲ್ಕು ವರ್ಷ ನಂತರ ಶಾಹ ರೂಖ ಅದನ್ನು ಕಾಬೂಲದ ಅಹಮ್ಮದ ಶಾಹ ದುರಾನಿಗೆ ಕೊಟ್ಟ, ಮತ್ತು ಅವನು ಅದನ್ನು ತನ್ನ ಮಗ ತೈಮೂರನಿಗೆ ಬಿಟ್ಟುಹೋದ. ೧೭೯೩ರಲ್ಲಿ ಅದು ವಂಶಾನುಪ್ರಾಪ್ತಿಯಾಗಿ ಅವನ ಮಗ ಶಾಹ ಝಮನ್‌ನ ಕೈಸೇರಿತು. ಅವನನ್ನು ಅವನ ಸಹೋದರ ಮುಹಮ್ಮದ ಕಣ್ಣು ಕೀಳಿಸಿ ಪದಚ್ಯುತಗೊಳಿಸಿದ. ಆದರೆ, ಅವನು ಸೆರೆಮನೆಯಲ್ಲಿ ಅದನ್ನು ಸ್ವಾಧೀನದಲ್ಲಿರಿಸಿಕೊಂಡಿದ್ದ, ಮತ್ತು ೧೭೯೫ರಲ್ಲಿ ಅದು ಅವನ ಸಹೋದರ ಸುಲ್ತಾನ ಶೂಜಾನ ಆಸ್ತಿಯಾಯಿತು. ೧೮೦೯ರಲ್ಲಿ ಶೂಜಾ ಕಾಬೂಲದ ರಾಜನಾದ ಮೇಲೆ ಎಲ್‌ಫಿನ್‌ಸ್ಟನ್ ಪೇಶಾವರದಲ್ಲಿ ಅವನ ಕಡಗದಲ್ಲಿ ಅದನ್ನು ನೋಡಿದ. ೧೮೧೨ರಲ್ಲಿ ಪದಚ್ಯುತನಾದ ಶೂಜಾ ಲಾಹೋರಿಗೆ ಓಡಿಹೋದ. ಅಲ್ಲಿ ಅವನನ್ನು ಪಂಜಾಬದ ದೊರೆ ರಂಜಿತ್‌ಸಿಂಗ್ ಅರೆ-ಬಂದಿಯಾಗಿ ಹಿಡಿದಿಟ್ಟಿದ್ದ. ೧೮೧೩ರಲ್ಲಿ ಒಂದು ಒಪ್ಪಂದ ಮಾಡಿಕೊಳ್ಳಲಾಗಿ ಶೂಜಾ ಅದನ್ನು ರಂಜಿತ್‌ಸಿಂಗ್‌ನಿಗೆ ಒಪ್ಪಿಸಿದ.ರಂಜಿತ್ ಆಗಿಂದಾಗ್ಗೆ ಆ ಹರಳನ್ನು ಧರಿಸುತ್ತಿದ್ದ, ಮತ್ತು ಲಾಹೋರಿಗೆ ಹೋದ ಯುರೋಪಿಯನ್ ಸಂದರ್ಶಕರು ಅದನ್ನು ಯಾವಾಗಲೂ ಕಂಡಿದ್ದರು. ೧೮೩೯ರಲ್ಲಿ ರಂಜಿತ್ ಸಿಂಹ್ ಮೃತಪಟ್ಟಾಗ ದುಲೀಪ್‌ಸಿಂಗ್ ರಂಜಿತನ ಉತ್ತರಾಧಿಕಾರಿಯೆಂದು ಅಂಗೀಕೃತವಾಗುವ ಕ್ಷಣದವರೆಗೆ ಕೊಹಿನೂರನ್ನು ರತ್ನಕೋಶದಲ್ಲಿ ಇಡಲಾಗಿತ್ತು.೧೮೪೯ರಲ್ಲಿ ಪಂಜಾಬದ ಸ್ವಾಧೀನ ಕಾಲಕ್ಕೆ ಅದನ್ನು ಸರ್ ಜಾನ್ ಲಾರೆನ್ಸ್‌ನಿಗೆ ಒಪ್ಪಿಸಲಾಯಿತು, ಮತ್ತು ಅವನಿಂದ ಇಂಗ್ಲಂಡಿಗೆ ಮಹಾಪ್ರಭು ರಾಣಿಯೆಡೆಗೆ ಕಳಿಸ

ಲಾಯಿತು. ೧೮೫೧ರಲ್ಲಿ ಅದನ್ನು ಪ್ರಥಮ ಮಹಾ ಪ್ರದರ್ಶನದಲ್ಲಿ ಪ್ರದರ್ಶಿಸಲಾಯಿತು, ಮತ್ತು ೧೮೫೨ರಲ್ಲಿ ಮೆಸರ್ಸ್ ಗ್ಯಾರಡ್ಸ್‌ರ ಸೇವೆಯಲ್ಲಿದ್ದ ಅಮ್‌ಸ್ಟರ್‌ಡಮ್‌ನ ಕುಟಿಗ ವೂಸ್ಯಾರ್ಂಗರ್ ಅದನ್ನು ಪುನಃ ಕತ್ತರಿಸಿದ. ಈಗ ತೂಕ ೧೦೬ ೧/೧೬ ಕ್ಯಾರೆಟ್ ಇದೆ.

ಅದನ್ನು ಬಿಜಾಪುರದ ಸುಲ್ತಾನ ಅಲಿ ಆದಿಲ್ ಸ್ವಾಧೀನಪಡಿಸಿಕೊಂಡ ನಂತರ "ಕೋಳಿಮೊಟ್ಟೆ" ವಜ್ರದ ಕತೆಯನ್ನು ಪತ್ತೆ ಹಚ್ಚುವುದು ಸ್ವಾರಸ್ಯಕರವಾಗುವುದು.

೧೬೦೮ರಲ್ಲಿ ಭಾರತದಲ್ಲಿ ಸಂಚರಿಸಿದ ಎಚ್. ದ ಮಾಂಟ್‌ಫಾರ್ಟ್ ಮೊಗಲ ಸಾಮ್ರಾಟ ಜಹಾಂಗೀರನ ವಶದಲ್ಲಿ ಒಂದು ಬಲು ದೊಡ್ಡ ವಜ್ರ ನೋಡಿದ,[2] ಆದರೆ ಅದಕ್ಕೆ ರಂಧ್ರ ಮಾಡಲಾಗಿತ್ತು. "ಮಹಾ ಮಾಗೊರ್‌ನಲ್ಲಿ ಒಂದು ಕೋಳಿಮೊಟ್ಟೆಯಷ್ಟು ದೊಡ್ಡದನ್ನು ಮತ್ತು ಅದೇ ಆಕಾರದ್ದನ್ನು ನೋಡಿರುವೆ. ಅವನು ಅದನ್ನು ತನ್ನ ತೋಳಿನ ಮೇಲೆ ಧರಿಸಲು ಮುತ್ತಿನಂತೆ ರಂಧ್ರ ಕೊರೆಯಿಸಿದ್ದಾನೆ.... ಆದರ ತೂಕ ೧೯೮ ಮ್ಯಾಂಗೆಲಿನ್"

## ಅಡಿಟಿಪ್ಪಣಿಗಳು

1 ಅದರ ಇತಿಹಾಸ ಕ್ರಿ.ಶ. ೧೩೦೪ರಿಂದ ಗೊತ್ತಿದೆ. ಆಗ ಅದನ್ನು ಮಾಳವಾದ ರಾಜನಿಂದ ಅಲಾಉದ್ದೀನ ಖಿಲ್ಜಿ ಪಡೆದುಕೊಂಡಿದ್ದ.

2 ದ ಮಾಂಟಫಾರ್ಟ್‌ನ "ಸರ್ವೆ ಆಫ್ ಆಲ್ ದಿ ಈಸ್ಟ್ ಇಂಡೀಜ್". ಭಾಷಾಂತರ, ೧೯೧೨ರ ಆವೃತ್ತಿ, ಪು. ೩೪.

# ಅನುಬಂಧ ಬ

## ಕ್ರಿ.ಶ. ಹದಿನಾಲ್ಕನೆಯ ಶತಮಾನದಲ್ಲಿ ದಕ್ಖನದ ಸಂಪತ್ತು

ದಿಲ್ಲಿಯ ಅಲಾಉದ್ದೀನ ಖಿಲ್ಜಿಯ ಆಳಿಕೆಯಲ್ಲಿ ಕ್ರಿ.ಶ. ೧೩೧೦ರಲ್ಲಿ ಮಲಿಕ್ ಕಾಫರ ದಕ್ಖನ ಮತ್ತು ಮಲಬಾರ ಕರಾವಳಿಯೊಳಕ್ಕೆ ಯಶಸ್ವಿ ದಾಳಿಗಳನ್ನು ನಡೆಸುತ್ತ ಎಲ್ಲ ಹಿಂದೂ ದೇವಾಲಯಗಳನ್ನು ಕೊಳ್ಳೆ ಹೊಡೆದು ಮೈಸೂರು ಪ್ರಾಂತವನ್ನು ಲೂಟಿ ಮಾಡಿ ಮತ್ತು ನಾಡನ್ನು ಧ್ವಂಸ ಮಾಡಿದಾಗ ಅವನು ದಿಲ್ಲಿಗೆ ಸುಮಾರಾಗಿ ಆಶ್ಚರ್ಯಕರವಾಗಿ ತೋರುವಂಥ ಸಂಪತ್ತಿನೊಂದಿಗೆ ಮರಳಿದನೆಂದು ಹೇಳಲಾಗುತ್ತದೆ. ಫಿರಿಸ್ತಾ ಹೀಗೆ ಬರೆಯುತ್ತಾನೆ : "ಬೆಲೆಯುಳ್ಳ ಹರಳುಗಳಿಂದ ಅಲಂಕೃತವಾದ ಬಂಗಾರದ ವಿಗ್ರಹಗಳು ಮತ್ತು ಹಿಂದೂ ಪೂಜೆಗೆ ಅರ್ಪಿತವಾದ ಇನ್ನಿತರ ಶ್ರೀಮಂತ ಆಸ್ತಿಗಳಂತಹ ವಿಪುಲ ಲೂಟಿ ಅವರಿಗೆ ದೇವಾಲಯಗಳಲ್ಲಿ ಲಭಿಸಿತು." ಮತ್ತು ಮಲಿಕ್ ಕಾಫರ ತನ್ನ ಸಾರ್ವಭೌಮನಿಗೆ "೩೧೨ ಆನೆಗಳು, ೨೦,೦೦೦ ಕುದುರೆಗಳು, ೯೬,೦೦೦ ಮಣ ಬಂಗಾರ, ರತ್ನಗಳು ಮತ್ತು ಮುತ್ತುಗಳು ಮತ್ತು ಇನ್ನಿತರ ಬೆಲೆಯುಳ್ಳ ಆಸ್ತಿಗಳ ಹಲವಾರು ಪೆಟ್ಟಿಗೆಗಳನ್ನು" ಕಾಣಿಕೆಯಾಗಿ ಸಲ್ಲಿಸಿದ.

ಬಂಗಾರದ ಮೊತ್ತವನ್ನು ಅಂದಾಜು ಮಾಡತೊಡಗಲು ನಮಗೆ ಒಂದು ಅಡಚಣೆ ಎದುರಾಗುತ್ತದೆ. ಏಕೆಂದರೆ, ಭಾರತದಲ್ಲಿ ಅನೇಕ ವಿಧದ ಮಣಗಳಿವೆ. ವ್ಯತ್ಯಾಸ ತ್ರಾವಣಕೋರದಲ್ಲಿನ ೧೯ ಪೌಂಡುಗಳಿಂದ ಅಹಮದನಗರದಲ್ಲಿನ ೧೬೩ ೧/೪ ಪೌಂಡುಗಳವರೆಗೆ ಇದೆ. ಮದ್ರಾಸ ಮಣ ೨೫ ಪೌಂಡು ತೂಕವುಳ್ಳದ್ದು, ಮುಂಬಯಿ ಮಣ ೨೮ ಮಣ ತೂಕವುಳ್ಳದ್ದು ಇದೆ. ೧೬೧೦ರಲ್ಲಿ ಬರೆದ ಹಾಕಿನ್ಸ್ ಮಣಕ್ಕೆ ೫೫ ಪೌಂಡುಗಳೆಂದು[1] ಹೇಳಿದರೆ, ೧೬೧೧ರಲ್ಲಿ ಮಿಡ್ಲಟನ್ ೩೩ ಪೌಂಡಗಳೆಂದು[2] ಹೇಳುತ್ತಾನೆ. ಫಿರಿಸ್ತಾನಾದರೊ ಭಾರತದ ಇತರ ಯಾವುದೆ ಭಾಗಕ್ಕಿಂತ ಅಹಮುದ ನಗರಕ್ಕೆ ಹೆಚ್ಚು ಸಂಬಂಧವುಳ್ಳವನಾಗಿದ್ದ. ಮತ್ತು ಅವನ ಅಂದಾಜು ಆ ಪ್ರದೇಶದ ಮಣವನ್ನಾಧರಿಸಿದ್ದ ಪಕ್ಷದಲ್ಲಿ, ಮಲಿಕ್ ಕಾಫರನ ೯೬,೦೦೦ ಮಣ ಬಂಗಾರ ೧೫,೬೭೨,೦೦೦ ಪೌಂಡು ತೂಕದ್ದಾಗಿರಬಹುದು. ಫಿರಿಸ್ತಾ ತ್ರಾವಣಕೋರದ ಮಣವನ್ನು ಲಕ್ಷ್ಯದಲ್ಲಿಟ್ಟುಕೊಂಡಿರುವುದು ಅಸಂಭವ. ಅವನು ಮದ್ರಾಸ ಮಣವನ್ನು—ಅದು ಸಂಭವವಿಲ್ಲ—ಅನುಲಕ್ಷಿಸಿದ್ದರೂ ಹೊತ್ತೊಯ್ದ ಬಂಗಾರದ ತೂಕದ ಅವನ ಅಂದಾಜು ೨,೪೦೦,೦೦೦ ಪೌಂಡುಗಳಾಗುತ್ತದೆ.

ನಾವು ಈ ಮೊತ್ತಗಳನ್ನು ಒಪ್ಪಲಿ ಬಿಡಲಿ, ದೇವಾಲಯಗಳ ಶ್ರೀಮಂತಿಕೆ ಬಲು ವಿಪುಲವಾಗಿತ್ತೆಂಬುದರ ಬಗೆಗೆ ಯಾವ ಬಗೆಯು ಸಂದೇಹವೂ ಬಾರದು. ಮತ್ತು ಅದಕ್ಕೆ ಕಾರಣ ಸುಲಭವಾಗಿ ಗೋಚರಿಸುತ್ತದೆ. ಆ ನಾಡು ಯಾವಾಗಲೂ ಹಿಂದೂ ರಾಜರಿಗೆ ಅಧೀನವಾಗಿತ್ತು ಮತ್ತು ಸಂಪತ್ತು ವರ್ಷವರ್ಷವೂ ಕೂಡಿ ಬಿದ್ದಿತ್ತು. ಬ್ರಾಹ್ಮಣರು ಎಲ್ಲ ಸಂದರ್ಭಗಳಲ್ಲೂ ಜನರಿಂದ ಕಾಣಿಕೆಗಳನ್ನು ಮತ್ತು ಹಣವನ್ನು ಸೆಳೆಯುತ್ತಿದ್ದರು. ರಾಜರು ಮತ್ತು ದೊರೆಗಳು, ವರ್ತಕರು ಮತ್ತು ಭೂಮಾಲಿಕರು ತಮಗಿಷ್ಟವಾದ ಪೂಜಾಸ್ಥಳಗಳಿಗೆ ಸಮೃದ್ಧ ಕಾಣಿಕೆಗಳನ್ನು ಅರ್ಪಿಸುವಲ್ಲಿ ಒಬ್ಬರೊಬ್ಬರೊಂದಿಗೆ ಸ್ಪರ್ಧಿಸುತ್ತಿದ್ದರು. ಈ ಪದ್ಧತಿ ಅನಾದಿ ಕಾಲದಿಂದ ನಡೆದುಬಂದುದೆಂಬುದನ್ನು ನೆನೆದಾಗ, ಈ ಪವಿತ್ರ ಮಂದಿರಗಳನ್ನು ಪ್ರಥಮವಾಗಿ ಕೊಳ್ಳೆ ಹೊಡೆದ ಮನುಷ್ಯ ಹೆಚ್ಚು ಕಡಿಮೆ ನಂಬಲಾರದಂಥ ಕೊಳ್ಳೆಯನ್ನು ಆ ನಾಡಿನಿಂದ ಹೇರಿಕೊಂಡು ಹೋದನೆಂಬುದು ಆಶ್ಚರ್ಯದ ಮಾತಾಗಬೇಕಿಲ್ಲ. ಕರ್ನಲ್ ಡೌ ಫಿರಿಸ್ತಾನ ಕೃತಿಗಳ ಅನುವಾದದಲ್ಲಿ (i. ೩೦೭), ಮಲಿಕ್ ಕಾಫರ್ ಕೊಂಡೊಯ್ದ ಬಂಗಾರದ ಬೆಲೆಯನ್ನು ನಮ್ಮ ಹಣದ ನೂರು ಸಾವಿರ ಪೌಂಡುಗಳೆಂದು ಲೆಕ್ಕ ಹಾಕಿದ್ದಾನೆ.

## ಅಡಿಟಿಪ್ಪಣಿಗಳು

1 ಪರ್ಚಸ್, i, ೨೧೮.

2 ಯೂಲ್ ಮತ್ತು ಬರ್ನೆಲ್‌ರ ನಿಘಂಟು, Mound ನೋಡಿರಿ.

# ಅನುಬಂಧ ಕ

## ಸಂದರ್ಭಕ್ಕಾಗಿ ಪಟ್ಟಿ

## ವಿಜಯನಗರ ರಾಜರ ಆಳ್ವಿಕೆಯ ಸರಿಸುಮಾರು ದಿನಾಂಕಗಳು

**ಮೊದಲ ರಾಜವಂಶ** **ಕ್ರಿ.ಶ.**

ಒಂದನೆಯ ಹರಿಹರ.......೧೩೩೬ ರಿಂದ ೧೩೫೩

ಒಂದನೆಯ ಬುಕ್ಕ.......೧೩೫೩ ರಿಂದ ೧೩೭೯

(ಕಂಪ ೧೩೫೩ ರಿಂದ ೧೩೫೫ರವರೆಗೆ ಮತ್ತು ಅವನ ಮಗ ಸಂಗಮ ಮೇ ೧೩೫೬ರಲ್ಲಿ ಆಳುತ್ತಿದ್ದರೆಂದು ಕೆಲವು ಶಾಸನಗಳು ಸೂಚಿಸುತ್ತವೆ)

ಎರಡನೆಯ ಹರಿಹರ........೧೩೭೯ ರಿಂದ ೧೪೦೪ರ ಕೊನೆ

ಎರಡನೆಯ ಬುಕ್ಕ........೧೪೦೪ರ ಕೊನೆಯಿಂದ ನವಂಬರ್ ೧೪೦೬

ಒಂದನೆಯ ದೇವರಾಯ........ನವಂಬರ್ ೧೪೦೬ ರಿಂದ ೧೪೧೨-೧೩

ವೀರ ವಿಜಯ........೧೪೧೨-೧೩ ರಿಂದ ೧೪೪೪ (?)

ಎರಡನೆಯ ದೇವರಾಯ........(?) ೧೪೪೪ ರಿಂದ ೧೪೪೯

— (?)........೧೪೫೨-೫೩, ೧೪೬೪-೬೫

ಮಲ್ಲಿಕಾರ್ಜುನ........೧೪೫೨-೫೩, ೧೪೬೪-೬೫

ರಾಜಶೇಖರ........೧೪-೭೧೬೮-೬೦

ಒಂದನೆಯ ವಿರೂಪಾಕ್ಷ........೧೪೭೦-೭೧

(?) ಪ್ರೌಢ ದೇವರಾಯ........೧೪೭೬-೭೭ (?)

ರಾಜಶೇಖರ........೧೪೭೯-೮೦

ಎರಡನೆಯ ವಿರೂಪಾಕ್ಷ........೧೪೮೩-೮೪

ರಾಜಶೇಖರ........೧೪೨೬-೮೭

ಗೋಜಲಿನ ಕಾಲಾವಧಿ ನೀಡಲಾಗಿರುವ ದಿನಾಂಕಗಳು ಶಾಸನಗಳವು

## ಎರಡನೆಯ ರಾಜವಂಶ

ನರಸಿಂಹ........(?) ೧೪೯೦ ರಿಂದ (?)

ನರಸ ಅಥವಾ ವೀರ ನರಸಿಂಹ .......(?) ರಿಂದ ೧೫೦೯

ಕೃಷ್ಣ ದೇವರಾಯ........೧೫೦೯ ರಿಂದ ೧೫೩೦

ಅಚ್ಯುತ........೧೫೩೦ ರಿಂದ ೧೫೪೨

ಸದಾಶಿವ (ಜೀವಮಾನವಿಡಿ ಬಂಧಿತ....೧೫೪೨ ರಿಂದ ೧೫೬೭

## ಮೂರನೆಯ ರಾಜವಂಶ

ರಾಮ (ಕಾರ್ಯತಃ ಸಾರ್ವಭೌಮ)........೧೫೪೨ ರಿಂದ ೧೫೬೫

ತಿರುಮಲ (ಕಾರ್ಯತಃ ಸಾರ್ವಭೌಮ)...... .೧೫೬೫ ರಿಂದ ೧೫೬೭

ತಿರುಮಲ (ಪ್ರತ್ಯಕ್ಷವಾಗಿ ರಾಜ)........೧೫೬೭ ರಿಂದ ೧೫೭೫ (?)

ಎರಡನೆಯ ರಂಗ........೧೫೭೫ ರಿಂದ ೧೫೮೬

ಒಂದನೆಯ ವೆಂಕಟ........೧೫೮೬ ರಿಂದ ೧೬೧೪

(ವಿ:ಕ್ಕವುಗಳಿಗೆ ಪಠ್ಯವನ್ನು ನೋಡಿರಿ, ಪು. ೨೧೪, ೨೧೬)

## ಬಾಹುಮನಿ ರಾಜಮನೆತನದ ವಂಶಾವಳಿ[1] (“ಬರಹಾನ್-ಇ-ಮಾಸಿರ್” ಪ್ರಕಾರ)




೧ ಈ ಪಟ್ಟಿಯನ್ನು ಮೇಜರ್ ಕಿಂಗ್‌ನ ಇತಿಹಾಸ (ಇಂಡಿಯನ್ ಆ್ಯಂಟಿಕ್ವಿಟಿಜ್ **xxviii**, ೧೨೧) ದಿಂದ ತೆಗೆದುಕೊಳ್ಳಲಾಗಿದೆ.

**ಬಾಹಮನಿ ರಾಜಮನೆತನದ ವಂಶಾವಳಿ** (ಫಿರಿಸ್ತಾನ ಪ್ರಕಾರ)



# ಕಲಬರ್ಗಾದಲ್ಲಿನ ದಕ್ಖನದ ಬಾಹಮನಿ ಸುಲ್ತಾನರ ಪಟ್ಟಿ

(ಫಿರಿಸ್ತಾನ ಪ್ರಕಾರ) ಕ್ರಿ.ಶ.

೧. ಒಂದನೆಯ ಅಲಾ-ಉದ್-ದಿನ್ ಬಾಹಮನಿ....ಆಗಸ್ಟ್ ೩, ೧೩೪೭ ರಿಂದ ಫೆಬ್ರುವರಿ ೨. ೧೩೫೮

೨. ಒಂದನೆಯ ಮುಹಮ್ಮದ್....ಫೆಬ್ರವರಿ ೨. ೧೩೫೮ ರಿಂದ ಏಪ್ರಿಲ್ ೨೧, ೧೩೭೫

೩. ಮುಜಾಹಿದ್....ಏಪ್ರಿಲ್ ೨೧, ೧೩೭೫ ರಿಂದ ಏಪ್ರಿಲ್ ೧೬, ೧೩೭೮

೪. ದಾಊದ್....ಏಪ್ರಿಲ್ ೧೬ ರಿಂದ ಮೇ ೨೧, ೧೩೭೮

೫. ಮಹಮೂದ್....ಮೇ ೨೧, ೧೩೭೮ ರಿಂದ ಏಪ್ರಿಲ್ ೨೦ ೧೩೯೭

೬. ಘಿಯಾಸುದ್ದೀನ್....ಏಪ್ರಿಲ್ ೨೦ ರಿಂದ ಜೂನ್ ೧೪, ೧೩೯೭

೭. ಶಿಮುಸುದ್ದೀನ್....ಜೂನ ೧೪ ರಿಂದ ನವಂಬರ್ ೧೫, ೧೩೯೭

೮. ಫಿರೂಜ್....ನವಂಬರ ೧೫, ೧೩೯೭ರಿಂದ ಸಪ್ಟಂಬರ ೨೯', ೧೪೨೨

೯. ಒಂದನೆಯ ಅಹಮ್ಮದ್....ಸಪ್ಟಂಬರ ೨೪, ೧೪೨೨ ರಿಂದ ಫೆಬ್ರುವರಿ ೨೭, ೧೪೩೫

೧೦. ಎರಡನೆಯ ಅಲಾ-ಉದ್-ದಿನ್....ಫೆಬ್ರುವರಿ ೨೭, ೧೪೩೫ ರಿಂದ ಫೆಬ್ರುವರಿ ೧೩, ೧೪೫೮

೧೧. ಹುಮಾಯೂನ್....ಫೆಬ್ರುವರಿ ೧೩, ೧೪೫೮ ರಿಂದ ಸಪ್ಟಂಬರ ೫, ೧೪೬೧

೧೨. ನಿಜಾಮ್....ಸಪ್ಟಂಬರ ೫, ೧೪೬೧ ರಿಂದ ಜುಲೈ ೩೦, ೧೪೬೩

೧೩. ಮುಹಮ್ಮದ್....ಜುಲೈ ೩೦, ೧೪೬೩ ರಿಂದ ಮಾರ್ಚ ೨೧, ೧೪೮೨

೧೪. ಎರಡನೆಯ ಮಹಮೂದ್....ಮಾರ್ಚ ೨೧, ೧೪೮೨ ರಿಂದ ಡಿಸೆಂಬರ ೧೮, ೧೪೧೭

೧೫. ಎರಡನೆಯ ಅಹಮದ್....ಡಿಸೆಂಬರ್ ೧೮, ೧೫೧೭ರಿಂದ (?) ೧೫೨೧ (?)

೧೬. ಮೂರನೆಯ ಅಲಾ-ಉದ್-ದಿನ್....೧೫೨೧ (?)

೧೭. ವಾಲಿ-ಉಲ್ಲಾ....(?) ೧೫೨೧ ರಿಂದ(?) ೧೫೨೩

೧೮. ಕಲೀಮ್-ಉಲ್ಲಾ....(?) ೧೫೨೩ ರಿಂದ ಸು. ೧೫೨೮

(೧೫–೧೮: ಹೆಸರಿಗೆ ಮಾತ್ರ ರಾಜರು)

## ಬಿಜಾಪುರದ ಆದಿಲ್‌ಶಾಹರ ವಂಶಾವಳಿ

- ೧. ಅಬ್ದುಲ್ ಮುಜಫ್ಫರ್ ಯೂಸುಫ್ ಆದಿಲ್
  - ೨. ಇಸ್ಮಾಯಿಲ್
    - ೩. ಮಾಲು
    - ೪. ಇಬ್ರಾಹಿಮ್
      - ೫. ಅಲಿ
      - ತಹಮಾಸ್ಪ
        - ೬. ಇಬ್ರಾಹಿಮ್
          - ೭. ಮುಹಮ್ಮದ್
            - ೮. ಅಲಿ
              - ೯. ಸಿಕಂದರ್
        - ಇಸ್ಮಾಯಿಲ್
    - ಮಗಳು (ವಿ. ಬೀದರ್‌ನ ಅಲಾ-ಉದ್-ದಿನ್ ಇಮಾದ್ ಶಾಹನೊಂದಿಗೆ)
  - ಮಗಳು (ವಿ. ಅಹಮದ್ ಶಾಹ್ ಬಹಮನಿಯೊಂದಿಗೆ)
  - ಮಾರಿಯಮ್ (ವಿ. ಅಹಮದ್‌ನಗರದ ಬರಹಾನ್ ಶಾಹ್ ನೊಂದಿಗೆ)



| | |
|---|---|
| ೧. ಯೂಸುಫ್ | ಕ್ರಿ.ಶ. ೧೪೮೯ ರಿಂದ ೧೫೧೦ |
| ೨. ಇಸ್ಮಾಯಿಲ್ | ಕ್ರಿ.ಶ. ೧೫೧೦ ರಿಂದ ಆಗಸ್ಟ್ ೨೭, ೧೫೩೪ |
| ೩. ಮಾಲು | ಆಗಸ್ಟ್ ೨೭, ೧೫೩೪ ರಿಂದ ಫೆಬ್ರವರಿ ೧೫೩೫ |
| ೪. ಒಂದನೆಯ ಇಬ್ರಾಹಿಮ್ | ಫೆಬ್ರವರಿ ೧೫೩೫ ರಿಂದ ೧೫೫೭ |
| ೫. ಒಂದನೆಯ ಅಲಿ | ೧೫೫೭ ರಿಂದ ಏಪ್ರಿಲ್ ೧೧, ೧೫೮೦ |
| ೬. ಎರಡನೆಯ ಇಬ್ರಾಹಿಮ್ | ಏಪ್ರಿಲ್ ೧೧, ೧೫೮೦ ರಿಂದ ೧೬೨೬ |
| ೭. ಮುಹಮ್ಮದ | ಕ್ರಿ.ಶ. ೧೬೨೬ ರಿಂದ ೧೬೫೬ |
| ೮. ಎರಡನೆಯ ಅಲಿ | ಕ್ರಿ.ಶ. ೧೬೫೬ ರಿಂದ ೧೬೭೨ |
| ೯. ಸಿಕಂದರ್ | ಕ್ರಿ.ಶ. ೧೬೭೨ ರಿಂದ ೧೬೮೬ |

## ಅಹಮದ್‌ನಗರದ ನಿಜಾಂ ಶಾಹರ ವಂಶಾವಳಿ




{೯. ಅಹಮದ್ ಇಬ್ನ್ ಶಾಹ್ ತಾಹಿರ್
(೧೫೯೪-೯೫ರಲ್ಲಿ ಕೆಲವು ತಿಂಗಳು
ಸಿಂಹಾಸನವನ್ನು ಆಕ್ರಮಿಸಿಕೊಂಡಿದ್ದ)}

| | |
|---|---|
| ೧. ಅಹಮದ್ | ಕ್ರಿ.ಶ. ೧೪೯೦ ರಿಂದ ೧೫೦೮ |
| ೨. ಒಂದನೆಯ ಬರಹಾನ್ | ಕ್ರಿ.ಶ. ೧೫೦೮ ರಿಂದ ೧೫೫೩ |
| ೩. ಹುಸೇನ್ | ಕ್ರಿ.ಶ. ೧೫೫೩ ರಿಂದ ೧೫೬೫ |
| ೪. ಮುರ್ತಜಾ | ಕ್ರಿ.ಶ. ೧೫೬೫ ರಿಂದ ೧೫೮೭ |
| ೫. ಮಿರಾನ್ | ಕ್ರಿ.ಶ. ೧೫೮೭ ರಿಂದ ೧೫೮೮ |
| ೬. ಇಸ್ಮಾಯಿಲ್ | ಕ್ರಿ.ಶ. ೧೫೮೮ ರಿಂದ ೧೫೯೦ |
| ೭. ಎರಡನೆಯ ಬರಹಾನ್ | ೧೫೯೦ ರಿಂದ ಏಪ್ರಿಲ್ ೧೮, ೧೫೯೫ |
| ೮. ಇಬ್ರಾಹಿಮ್ | ಏಪ್ರಿಲ್ ೧೮ ರಿಂದ ಆಗಸ್ಟ್ ೬, ೧೫೯೫ |
| ೯. ಅಹಮದ್ ಇಬ್ನ್ ಶಾಹ್ ತಾಹಿರ್ | ಆಗಸ್ಟ್ ೬, ೧೫೯೫ ರಿಂದ ೧೫೯೬ |
| ೧೦. ಬಹಾದುರ್ | ಕ್ರಿ.ಶ. ೧೫೯೬ ರಿಂದ ೧೬೯೯ |

## ಗೊಲ್ಕೊಂಡದ ಕುತುಬ್ ಶಾಹ್‌ರ ವಂಶಾವಳಿ




| | |
|---|---|
| ೧. ಖುಲಿ | ಕ್ರಿ.ಶ. ೧೫೧೨ ರಿಂದ ೧೫೪೩ |
| ೨. ಜಮಶಿದ್ | ಕ್ರಿ.ಶ. ೧೫೪೩ ರಿಂದ ೧೫೫೦ |
| ೩. ಇಬ್ರಾಹಿಮ್ | ಕ್ರಿ.ಶ. ೧೫೫೦ ರಿಂದ ೧೫೮೧ |
| ೪. ಮುಹಮ್ಮದ | ಕ್ರಿ.ಶ. ೧೫೮೧ ರಿಂದ ೧೬೧೧ |
| ೫. ಅಬ್ದುಲ್ಲಾ | ಕ್ರಿ.ಶ. ೧೬೧೧ ರಿಂದ ೧೬೭೨ |
| ೬. ಅಬು ಹಸನ್ | ಕ್ರಿ.ಶ. ೧೬೭೨ ರಿಂದ ೧೬೮೮ |

# ಗೋವಾದ ಪೋರ್ತುಗೀಜ ರಾಜಪ್ರತಿನಿಧಿಗಳು ಮತ್ತು ಮಂಡಲಾಧಿಪತಿಗಳು

**(ಕ್ರಿ.ಶ. ೧೫೦೫ ರಿಂದ ೧೫೬೮)** **ಕ್ರಿ.ಶ.**

ಡಾಮ್ ಫ್ರಾನ್ಸಿಸ್ಕೊ ದ ಅಲ್ಮೈಡಾ (ರಾಜ ಪ್ರತಿನಿಧಿ)....೧೫೦೫-೧೫೦೯
ಅಫೊನ್ಸೊ ದ ಅಲ್ಬುಕರ್ಕ್ (ಮಂಡಲಾಧಿಪತಿ)....೧೫೦೯-೧೫೧೫
ಲೊಪೊ ಸೋಆರಿಸ್ ದ ಅಲ್ಬರ್ಗೇರಿಯಾ (ಮಂಡಲಾಧಿಪತಿ)....೧೫೧೫-೧೫೧೮
ಡಿಯೊಗೊ ಲೊಪ್ಸ್ ದ ಸಿಕ್ವೈರಾ (ಮಂಡಲಾಧಿಪತಿ)೧೫೧೮-೧೫೨೧
ಡಾಮ್‌ಡು ಆರ್ಟ್ ಮೆನೆಜಿಸ್(ಮಂಡಲಾಧಿಪತಿ)....೧೫೨೧-೧೫೨೪
ಡಾಮ್ ವಾಸ್ಕೊ ದ ಗಾಮಾ, ಕಾಂಡ್ ದ ವಿಡಿಗ್ವೆರಿಯಾ (ರಾಜಪ್ರತಿನಿಧಿ)....೧೫೨೪
ಡಾಮ್ ಹೆನ್ರೀಕ್ ದ ಮೆನೆಜಿಸ್ (ಮಂಡಲಾಧಿಪತಿ)....೧೫೨೫-೧೫೨೯
ಲೊಪೊ ವಾಜ್ ದ ಸಂಪೈಒ (ಮಂಡಲಾಧಿಪತಿ)....೧೫೨೬-೧೫೨೯
ನುನೊ ದ ಕುನ್ಹಾ (ಮಂಡಲಾಧಿಪತಿ)....೧೫೨೯-೧೫೩೮
ಡಾಮ್ ಗಾರ್ಸಿಯಾ ದ ನರೊನ್ಹಾ (ರಾಜ ಪ್ರತಿನಿಧಿ)....೧೫೩೮-೧೫೪೦
ಡಾಮ್ ಎಸ್ಟೆವಾಒ ದ ಗಾಮಾ (ಮಂಡಲಾಧಿಪತಿ)....೧೫೪೦-೧೫೪೨
ಮಾರ್ಟಿಮ್ ಅಫೊನ್ಸೊ ದ ಸೌಸಾ (ಮಂಡಲಾಧಿಪತಿ)....೧೫೪೨-೧೫೪೫
ಡಾಮ್ ಜೊಆಒ ದ ಕಾಸ್ಟ್ರೊ (ಮಂಡಲಾಧಿ ಮತ್ತು ಪ್ರಧಾನ ದಂಡನಾಯಕ)....
೧೫೪೫-೧೫೪೭
ಡಾಮ್ ಜೊಆಒ ದ ಕಾಸ್ಟ್ರೊ (ರಾಜಪ್ರತಿನಿಧಿ)....೧೫೪೭–೧೫೪೮
ಗಾರ್ಸಿಯಾ ದ ಸಾ (ಮಂಡಲಾಧಿಪತಿ)....೧೫೪೮–೧೫೪೯
ಜಾರ್ಜ್ ಕಬ್ರಾಲ್ (ಮಂಡಲಾಧಿಪತಿ)....೧೫೪೯-೧೫೫೦
ಡಾಮ್ ಅಫೊನ್ಸೊ ದ ನರೊನ್ಹಾ (ರಾಜಪ್ರತಿನಿಧಿ)....೧೫೫೦-೧೫೫೪
ಡಾಮ್ ಪೆದ್ರೊ ಮಸ್ಕರೆನ್ಹಸ್ (ರಾಜಪ್ರತಿನಿನಿಧಿ)....೧೫೫೪-೧೫೫೫
ಫ್ರಾನ್ಸಿಸ್ಕೊ ಬ್ಯಾರೆಟೊ (ಮಂಡಲಾಧಿಪತಿ)....೧೫೫೫-೧೫೫೮
ಡಾಮ್ ಕಾನ್‌ಸ್ಟಂಟಿನೊ ದ ಬ್ರ್ಯಾಗಂಜಾ (ರಾಜ ಪ್ರತಿನಿಧಿ)....೧೫೫೮-೧೫೬೧
ಡಾಮ್ ಫ್ರಾನ್ಸಿಸ್ಕೊ ಕೊಟನ್ಹೊ, ಕಾಂಡ್ ದ ರೆಡೊಂಡೊ (ರಾಜಪ್ರತಿನಿಧಿ)....
೧೫೬೧-೧೫೬೪

ಜೊಆಒ ದ ಮೆಡೊಂಕಾ (ಮಂಡಲಾಧಿಪತಿ)....೧೫೬೪
ಡಾಮ್ ಅಂಟೊನಿಯೊ ದ ನರೊನ್ಹಾ (ರಾಜ ಪ್ರತಿನಿಧಿ)....೧೫೬೪-೧೫೬೮

[ಮೇಲಿನ ಪಟ್ಟಿಯನ್ನು ಮಿಸ್ಟರ್ ಡ್ಯಾನ್ವರ್ಸ್‌ನ ಕೃತಿ "ದ ಪೋರ್ತುಗೀಜ್ ಇನ್ ಇಂಡಿಯಾ (ಸಂ. ii ಪು. ೪೭೮)ದಿಂದ ತೆಗೆದುಕೊಳ್ಳಲಾಗಿದೆ. ಲೇಖಕ, ಪಟ್ಟಿಯನ್ನು ಇಂದಿನವರೆಗೆ ಮುಂದುವರಿಸಿದ್ದಾನೆ]

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನು ತಂದಿವೆ. ಈ ತಿಳುವಳಿಕೆಗಳ ವಿವೇಕ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೊಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನು ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ಪ್ರಸಾರಾಂಗದ ಪ್ರಕಟಣೆಗಳಿಗೆ ಇಂಥ ಒಂದು ಸಾರ್ಥಕವಾಗಬಲ್ಲ ಉದ್ದೇಶವಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಒಂದು ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಈ ಪ್ರಸಾರಾಂಗದ್ದಾಗಿದೆ.




ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧